**VOL II.**

**2ನೇ ಸಂಚಿಕೆ ]**



॥ ಶ್ರೀ ಮಧ್ವನಾಥೋ ವಿಜಯತೇ ॥

## ಶ್ರೀಮನ್ಮಧ್ವಾಚಾರ್ಯರ

ಮೂಲಗ್ರಂಥಗಳ ಮಾಲಿಕೆಯ ದ್ವಿತೀಯ ಗುಚ್ಛದಲ್ಲಿ

**ಪ್ರಕರಣಗಳಲ್ಲಿ ಎರಡನೆಯದಾದ**

# ಶ್ರೀಮದ್ವಿಷ್ಣುತತ್ವವಿನಿರ್ಣಯವು

ದ್ವೈತವೇದಾಂತವಿದ್ವಾನ್ ಮತ್ತು ಶಿರೋಮಣಿ ಪಂಡಿತ
ಅಗ್ರಹಾರ ನಾರಾಯಣತಂತ್ರಿಗಳಿಂದ ವಿರಚಿತವಾದ

**ಕನ್ನಡಟೀಕಾ ಭಾಷಾಂತರ ಸಹಿತ.**




**1860ನೇ ಇಸವಿಯ 21ನೇ ಆಕ್ಟಿನ ಮೇರೆಗೆ ರಿಜಿಸ್ಟ್ರಿಯಾಗಿರುವ**

**ಶ್ರೀ ಮಧ್ವಮುನಿ ಸೇವಾಸಂಘ, ಉಡುಪಿ.**

ಇವರಿಂದ ಪ್ರಕಾಶಿಸಲ್ಪಟ್ಟಿತು.

ಉಡುಪಿ ಪ್ರಭಾಕರ ಮುದ್ರಾಯಂತ್ರದಲ್ಲಿ ಮುದ್ರಿಸಲ್ಪಟ್ಟಿತು.

---



1932

## PREFACE.

IN sending out the first part of the II Volume a word of apology is due to our patrons and members for the delay that has occurred in its publication. The problem of enrolling more members to take up the large number of remaining copies of the I Volume before venturing out on the II Volume was indeed a difficult one and, in spite of sustained efforts, has not yet been fully solved. Latterly some time was necessarily taken in the preparation and revision of the works whose manuscripts and proofs have had to pass through hands divided by long distances. The delay was under the circumstances unavoidable. Now that the publication has been resumed, we hope that the entire volume will go through in quick succession and will be in the hands of our patrons and members before long. It is to be hoped that this volume will command greater patronage and encouragement at the hands of the vast Madhwa community than was accorded to its predecessor, thereby enabling us to push on with the future work with greater rapidity.

IN conclusion we have to thank our patrons and members for the great indulgence with which they have put up with the delay.

*Prajapathi,*
*Shravana Bahula 7.*
*4-9-1931,*
*UDIPI.*

**Council of the Sri Madhwa Muni Seva Sangha.**



॥ ಶ್ರೀಃ ॥

# ತತ್ವೋದ್ಯೋತವು.

ಜಗಜ್ಜನ್ಮಸ್ಥೇಮಲಯನಿಯಮಾ ಯದಪಾಂಗತಃ ।
ತಂ ವಂದೇ ಪರಮಾನಂದಮಿಂದಿರಾಮಂದಿರೋರಸಂ ॥
ವ್ಯಾಸಂ ಮಧ್ವಂ ಜಯಾರ್ಯಾದೀನ್ನತ್ವಾ ಕರ್ನಾಟಭಾಷಯಾ ।
ವ್ಯಾಖ್ಯಾಸ್ಯೇಽಹಂ ಯಥಾಬೋಧಂ ತಂತ್ರನಾರಾಯಣಾಭಿಧಃ ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಮೂ ॥ ಸರ್ವತ್ರಾಖಿಲಸಚ್ಛಕ್ತಿಃ ಸ್ವತಂತ್ರೋಽಶೇಷದರ್ಶನಃ ।
ನಿತ್ಯಾತಾದೃಶಚಿಚ್ಚೇತ್ಯಯಂತೇಷ್ಟೋ ನೋ ರಮಾಪತಿಃ ॥ ೧ ॥

ಅ ॥ ರಮಾಪತಿಃ=ಲಕ್ಷ್ಮೀಪತಿಯಾದ ಶ್ರೀ ಹರಿಯು, ಸರ್ವತ್ರ=ಎಲ್ಲಾ ವಿಷಯಗಳಲ್ಲಿ, ಅಖಿಲಸಚ್ಛಕ್ತಿಃ, ಅಖಿಲ=ಪೂರ್ಣವಾದ, ಸತ್=ಪ್ರತಿಬಂಧಾದಿ ದೋಷರಹಿತವಾದ, ಶಕ್ತಿಃ=ಸಾಮರ್ಥ್ಯವುಳ್ಳವನು, ಸ್ವತಂತ್ರಃ=ಸ್ವತಂತ್ರನು, (ಇತರಾನಧೀನವಾದ ಪ್ರವೃತ್ತಿಯುಳ್ಳವನು) ಅಶೇಷದರ್ಶನಃ=ಸರ್ವವನ್ನೂ ಪ್ರತ್ಯಕ್ಷೀಕರಿಸಿದವನು, ನಿತ್ಯಾತಾದೃಶಚಿಚ್ಚೇತ್ಯಯಂತಾ, ನಿತ್ಯ=ಯಾವಾಗಲೂ, ಅತಾದೃಶ=ಹಾಗಲ್ಲದ, (ಪೂರ್ಣಶಕ್ತಿಯೂ, ಸ್ವಾತಂತ್ರ್ಯವೂ ಸಾರ್ವಜ್ಞ್ಯವೂ ಇಲ್ಲದಿರುವ) ಚಿತ್=ರಮಾಬ್ರಹ್ಮಾದಿ ಚೇತನವರ್ಗವೂ, ಚೇತ್ಯ=ದೃಶ್ಯವಾದ ಜಡಪ್ರಕೃತಿ ಮೊದಲಾದುದೂ ಇವುಗಳನ್ನು, ಯಂತಾ=ಪ್ರೇರಿಸುವವನು. ನಃ=ನಮಗೆ, ಇಷ್ಟಃ=ಪ್ರಿಯನು.

ತಾ ॥ (1) ಶ್ರೀಮದಾಚಾರ್ಯರು ವಿದ್ಯೆಯನ್ನುಪದೇಶಿಸುವ ಕಾಲದಲ್ಲಿ ಸಕಲ ವಾಙ್ಮನಸ್ಸುಗಳಿಗೆ ನಿಯಾಮಕಳಾದ ಲಕ್ಷ್ಮೀದೇವಿಯಿಂದೊಡಗೂಡಿದ ಶ್ರೀ ಹರಿಯು ಸ್ತೋತ್ರವು ಯೋಗ್ಯವೆಂದು ತಿಳಿಸುವುದಕ್ಕಾಗಿ 'ರಮಾಪತಿಃ' ಎಂಬ ವಿಶೇಷ್ಯವನ್ನು ನಿರ್ದೇಶಮಾಡಿರುವರು. (2) ಸುಖ ಅಥವಾ ದುಃಖನಿವೃತ್ತಿ ಇವುಗಳನ್ನೇ ಇಷ್ಟವೆಂದು ಜನರು ವ್ಯವಹರಿಸುವರು. ಆದುದರಿಂದ ರಮಾಪತಿಯು ಹೇಗೆ ಇಷ್ಟನಾದಾನು? ಎಂದರೆ ಶ್ರೀಹರಿಯೇ ನಮಗೆ (ಗ್ರಂಥಕರ್ತೃಗಳಾದ ಶ್ರೀಮದಾಚಾರ್ಯರಿಗೆ) ಇಷ್ಟನು. ಅಥವಾ, ಮಧ್ಯಮಾಧಿಕಾರಿಗಳಿಗೆ ಶ್ರೀ ಹರಿಯು ಪರಮೇಷ್ಟನಾಗದೆ ಇದ್ದಾಗ್ಯೂ ಉತ್ತಮಾಧಿಕಾರಿಗಳಿಗೆ ಪರಮೇಷ್ಟನೇ ಆಗಿರುತ್ತಾನೆ. 'ಏಕಾಂತಿನಾಂ ನ ಕಸ್ಯಚಿತ್ । ಅರ್ಥೋ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಂ' ॥ ಅಂದರೆ ಏಕಾಂತಭಕ್ತರಿಗೆ ಯಾವುದರಲ್ಲಿಯೂ ಅಪೇಕ್ಷೆಯಿಲ್ಲ. ನಾರಾಯಣನನ್ನೇ ಅಪೇಕ್ಷಿಸುವರು. ಇತರವೆಲ್ಲವೂ ನಾರಾಯಣೋದ್ದೇಶ್ಯಕವು. ಉತ್ತಮಾಧಿಕಾರಿಗಳು ಮುಕ್ತಿಯನ್ನಾದರೂ ನಾರಾಯಣನ ಜ್ಞಾನಕ್ಕಾಗಿಯೇ ಅಪೇಕ್ಷಿಸುವರು. ಮಧ್ಯಮಾಧಿಕಾರಿಗಳು ಮುಕ್ತಿಯನ್ನು ಹೊಂದುವುದಕ್ಕಾಗಿ ನಾರಾಯಣನ ಜ್ಞಾನವನ್ನು ಸಂಪಾದಿಸುವರು. 'ನಾರಾಯಣಸ್ತು ಮೋಕ್ಷಾರ್ಥೋ ಮೋಕ್ಷೋ ನಾನ್ಯಾರ್ಥ ಇಷ್ಯತೇ । ಇತಿ ಮಧ್ಯಮಭಕ್ತಾನಾಂ' । ಅಂದರೆ 'ಮಧ್ಯಮಾಧಿಕಾರಿಗಳಿಗೆ ಶ್ರೀ ನಾರಾಯಣನು ಮೋಕ್ಷಕ್ಕಾಗಿ, ಮೋಕ್ಷವು ಬೇರೆ ಪ್ರಯೋಜನ

ಕ್ಕಾಗಿ ಅಲ್ಲ,' ಎಂದಿರುವುದರಿಂದ ಶ್ರೀ ಹರಿಯು ಇಷ್ಟವಾದ ಮುಕ್ತಿಗೆ ಸಾಧನನು. ಇಷ್ಟದಂತೆಯೇ ಇಷ್ಟಸಾಧನವನ್ನೂ ತಿಳಿಯಬೇಕು. 'ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ' ಪ್ರಯೋಜನವನ್ನುದ್ದೇಶಿಸದೆ ಅಜ್ಞನೂ ಪ್ರವರ್ತಿಸಲಾರನು, ಕಾರಣ ಪ್ರೇರಕನೆಂದಭಿಮತನಾದ ಶ್ರೀ ಹರಿಯು ಪ್ರಯೋಜನಾನುಸಂಧಾನವಿಲ್ಲದವನಾದರೆ ವ್ಯಾಪಾರಗಳಲ್ಲಿ ಪ್ರೇರಿಸಲಾರನು. ಪ್ರಯೋಜನಾನುಸಂಧಾನವಿರುವವನಾದರೆ ಅಪೂರ್ಣನಾಗುವನು. ತಮಗೆ ನಿಯಾಮಕನಾದವನೊಬ್ಬನು ಇಲ್ಲದಿದ್ದರೆ ಪರಸ್ಪರ ಸಂಬಂಧವೇ ಕೂಡಲಾರದು, ಎಂಬ ತರ್ಕಪರಾಹತಿಯನ್ನು ಪರಿಹರಿಸುವುದಕ್ಕೋಸ್ಕರ ಪ್ರಯೋಜನಾನುಸಂಧಾನವಿಲ್ಲದಿದ್ದರೂ ಸರ್ವರನ್ನೂ ಪ್ರೇರಿಸುವುದು ಅವನ ಸ್ವಭಾವವೇ ಎಂದು ತಿಳಿಸಲಿಕ್ಕೆ 'ಯಂತಾ' ಎಂದು ತಾಚ್ಛೀಲಿಕತೃನ್ನಂತ ಶಬ್ದವನ್ನು ಪ್ರಯೋಗಿಸಿರುವರು. 'ದೇವಸ್ಯೈಷ ಸ್ವಭಾವೋಽಯಂ' ಇತ್ಯಾದಿ ಶ್ರುತಿಯಿಂದ ಶ್ರೀ ಹರಿಗೆ ಸರ್ವಪ್ರೇರಣೆ ಮೊದಲಾದ ವ್ಯಾಪಾರವು ಸ್ವಭಾವವೇ ಎಂದು ನಿರೂಪಿಸಲ್ಪಟ್ಟಿದೆ. ಶ್ರೀ ಹರಿಯನ್ನು ಸ್ತುತಿಸಲಿಕ್ಕೇನೇ ಹೊರಟಿರುವುದರಿಂದ ಈ ಶ್ಲೋಕದಲ್ಲಿ ಕ್ರಿಯಾಪದವಿಲ್ಲದಿರುವುದು ("ವಿಶ್ವಂ ವಿಷ್ಣುರ್ವಷಟ್ಕಾರಃ" ಇತ್ಯಾದಿಯಂತೆಯೇ) ದೋಷಾಧಾಯಕವಲ್ಲ. ಅಂತೂ ಶ್ರೀಮದಾಚಾರ್ಯರು ಅಧಿಕಾರಿಗಳಿಗೆ ಮುಕ್ತಿಕಾರಣವಾದ ಪರಮಪುರುಷಾಖ್ಯವಾದ ತತ್ತ್ವವನ್ನು ವಿಷಯೀಕರಿಸುವ ಯಥಾರ್ಥಜ್ಞಾನವು ಸಿದ್ಧಿಯಾಗುವುದಕ್ಕೋಸ್ಕರ ಪ್ರವೃತ್ತರಾಗಿ * 'ತತ್ತ್ವೋದ್ಯೋತ'ವೆಂಬ ಪ್ರಕರಣದ ಆದಿಯಲ್ಲಿಯೂ ಇಷ್ಟದೇವತಾಸ್ತುತಿರೂಪವಾದ ಮಂಗಲವನ್ನು ನಿಬಂಧಿಸಿದರು. ಇದರಿಂದ (1) ಪರಮಪುರುಷಾಖ್ಯತತ್ತ್ವವೇ ವಿಷಯವು (2) ತಜ್ಜ್ಞಾನವು ಅವಾಂತರಪ್ರಯೋಜನವು. ಮುಕ್ತಿಯೇ ಮಹಾಪ್ರಯೋಜನವು. (3) ವಿರಕ್ತನು (ತತ್ತ್ವಜ್ಞಾನವನ್ನಪೇಕ್ಷಿಸುವವನು) ಅಧಿಕಾರಿಯು. (4) ಯಥಾಯೋಗ್ಯವಾಗಿ ಸಂಬಂಧವೂ ಸೂಚಿತವಾಯಿತು. ॥ ೧ ॥

ಅಚೇತನಗಳಿಗೂ ಸಂಸಾರಿ ಚೇತನರಿಗೂ ಶ್ರೀಹರಿಯೇ ಪ್ರೇರಕನಾಗಿರಲಿ, ಮುಕ್ತ ಚೇತನರಿಗೆ ಶ್ರೀಹರಿಯು ಪ್ರೇರಕನಲ್ಲ. ಭೇದವಿದ್ದರೆ ನಿಯಮ್ಯ ನಿಯಾಮಕ ಭಾವವು ಸಂಗತವಾಗುವುದು. ಮುಕ್ತರಿಗೆ ಶ್ರೀಹರಿಯಿಂದ ಭೇದವೇ ಇಲ್ಲ. ಏಕಂದರೆ ಭೇದವನ್ನು ಬೋಧಿಸತಕ್ಕ ಪ್ರಮಾಣವೇ ಇಲ್ಲವಷ್ಟೇ? ಆ ಕಾರಣ ಶ್ರೀಹರಿಯು ಸರ್ವಪ್ರೇರಕನೆಂಬುವುದು ಸರ್ವಥಾ ಅನುಪಪನ್ನವೆಂಬ ಪರರ (ಅದ್ವೈತಿಗಳ) ಆಶಂಕೆಯನ್ನು ಪರಿಹರಿಸುತ್ತಾರೆ.

**ಮೂ ॥ ವಿಮುಕ್ತೋ ಭಿನ್ನೋ ಮುಕ್ತತ್ವಾದ್ಯದಿತ್ಥಂ**
**ತತ್ತಥಾ ಯಥಾ ಸಂಪ್ರತಿಪನ್ನಃ ॥ ೨ ॥**

ಅ ॥ ವಿಮುಕ್ತಃ=ಭಿನ್ನನೋ ಅಭಿನ್ನನೋ ಎಂಬ ಸಂಶಯ ವಿಷಯನಾದವನು (ಸಂಸಾರದಿಂದ ಮುಕ್ತನಾದವನು) (ಪಕ್ಷವು), ಭಿನ್ನಃ=ಭೇದವುಳ್ಳವನು (ಭೇದವು ಸಾಧ್ಯವು), ಮುಕ್ತತ್ವಾತ್=ಮುಕ್ತನಾದುದರಿಂದ (ಹೇತುವು), ಯತ್ ಇತ್ಥಂ=ಯಾವುದು ಹೇತುವುಳ್ಳದ್ದೋ, ತತ್ತಥಾ=ಅದು ಹಾಗೆಯೇ ಸಾಧ್ಯವುಳ್ಳದ್ದು, ಯಥಾ ಸಂಪ್ರತಿಪನ್ನಃ=ನಿಶ್ಚಿತನಾದವನಂತೆ, (ಜೈಲಿನಿಂದ ಬಿಡಲ್ಪಟ್ಟವನಂತೆ) (ಇದು ಉದಾಹರಣವು).

* ತತ್ತ್ವಸ್ಯ ಉದ್ಯೋತಃ ಅಸ್ಮಾದ್ಭವತಿ= ಪರಮಪುರುಷಾಖ್ಯತತ್ತ್ವದ ಯಥಾರ್ಥಜ್ಞಾನವು ಈ ಪ್ರಕರಣದಿಂದಾಗುವುದು. ಅಥವಾ ತತ್ತ್ವಂ ಉದ್ಯೋತ್ಯತೇ ಅನೇನೇತಿ ತತ್ತ್ವೋದ್ಯೋತಃ, ಶ್ರೀ ಹರಿಯು ಈ ಪ್ರಕರಣದಿಂದ ಚೆನ್ನಾಗಿ ತಿಳಿಸಲ್ಪಡುತ್ತಾನೆ. ಎಂಬ ವ್ಯುತ್ಪತ್ತಿಯಿಂದ ಅನ್ವರ್ಥಕವು.

ಟೀ॥ (1) ಶಿಷ್ಯರಿಗೆ ಅನುಗ್ರಹಮಾಡಬೇಕೆಂಬಿಚ್ಛೆಯಿಂದ ಗ್ರಂಥನಿರ್ಮಾಣವಾದುದರಿಂದ ಗ್ರಂಥವು ವಾದಪ್ರಕ್ರಿಯೆಯಿಂದ ಹೊರಟದೆ. * ವಾದದಲ್ಲಿ 'ಪೃಷ್ಟೇನಾಗಮ ಏವಾದೌ ವಕ್ತವ್ಯಃ ಸಾಧ್ಯಸಿದ್ಧಯೇ' (ಕಥಾಲಕ್ಷಣ ಪು. ೮೪.) ಪ್ರಶ್ನಿಸಿಕೊಂಡವನು ಆದಿಯಲ್ಲಿ ಸಾಧ್ಯಸಿದ್ಧಿಗಾಗಿ ಆಗಮವನ್ನೇ ಉದಾಹರಿಸಬೇಕು, ಎಂದಿರುವುದರಿಂದ ಅನುಮಾನಪ್ರಯೋಗವು ಹೇಗೆ ಸಂಗತವಾಗಬಹುದೆಂದರೆ ಈ ವಿಷಯದಲ್ಲಿಯೇ 'ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ' ಇತ್ಯಾದ್ಯಾಗಮವನ್ನು ಮೇಲೆ ಉದಾಹರಿಸುವೆವು. ಆ ಆಗಮಾರ್ಥವನ್ನು ನಿಶ್ಚಯಿಸುವುದಕ್ಕಾಗಿ † ಅನುಮಾನವನ್ನು § ಉಪೋದ್ಘಾತಪ್ರಕ್ರಿಯೆಯಿಂದ ಆದಿಯಲ್ಲಿ ಪ್ರತಿಪಾದಿಸಿದರು. ಕಾರಣ ಅನುಮಾನೋಪನ್ಯಾಸವು ಯುಕ್ತವೇ ಆಗುವುದು. (2) 'ವಿಮತಃ' ಎನ್ನುವುದರಿಂದ, ಸಂಸಾರದಿಂದ ಮುಕ್ತನಾದವನು ವಿವಕ್ಷಿತನಾಗಿರುತ್ತಾನೆ. ಇಲ್ಲಿ ಆತ್ಮಾ ಭಿನ್ನಃ=ಆತ್ಮನು ಭಿನ್ನನು, ಎಂದಿಷ್ಟೇ ಪ್ರತಿಜ್ಞಾಮಾಡಿದರೆ ಐಕ್ಯವಾದಿಗಳೂ ಸಂಸಾರಿಗಳಿಗೆ ಭೇದವನ್ನೇ ಅಂಗೀಕರಿಸಿರುವುದರಿಂದ ಸಿದ್ಧಸಾಧನಾಖ್ಯದೋಷಬರುವುದು. (3) 'ಮುಕ್ತನು ಭಿನ್ನನು' ಎಂದಿಟ್ಟುಕೊಂಡರೂ ನಿಗಡಮುಕ್ತನಲ್ಲಿ ಭೇದವು ಪೂರ್ವದಲ್ಲಿಯೇ ಸಿದ್ಧವಾದುದರಿಂದ ಸಿದ್ಧಸಾಧನವೇ. (4) 'ಸಂಸಾರದಿಂದ ಮುಕ್ತನಾದವನು ಭಿನ್ನನು'ಎಂದು ಹೇಳಿದರೆ ಶಬ್ದಗೌರವವು. ಹಾಗಾದರೆ, ವಿಮತಿಯೂ ಸತ್ಯವೋ ಸುಳ್ಳೋ, ಚಿಕ್ಕದೋ ದೊಡ್ಡದೋ, ಭೇದವೋ ಅಭೇದವೋ, ಇತ್ಯಾದ್ಯನೇಕ ಪ್ರಕಾರವಾದುದರಿಂದ, ವಿಮತಃ ಎಂದರೆ ಅರ್ಥಜ್ಞಾನವು ಗುರುಭೂತವಾಯಿತು. ಅರ್ಥಗೌರವಕ್ಕಿಂತ × ಶಬ್ದಗೌರವವೇ ಶ್ರೇಷ್ಠವಾದುದರಿಂದ 'ಸಂಸಾರಾನ್ಮುಕ್ತಃ' ಎಂದೇ ಹೇಳಬೇಕಿತ್ತು, 'ವಿಮತಃ' ಎಂದು ಹೇಳಿರುವುದು ಅಯುಕ್ತವೆಂದರೆ ಅಪ್ರಸಿದ್ಧವಿಶೇಷ್ಯತ್ವ, ಅಪ್ರಸಿದ್ಧವಿಶೇಷಣತ್ವ, ಪ್ರಸಿದ್ಧಾರ್ಥತ್ವ, ಪ್ರಮಾಣಬಾಧ ಮೊದಲಾದ ದೋಷಗಳು ಬರಬಾರದೆಂಬಭಿಪ್ರಾಯದಿಂದ 'ವಿಮತಃ' ಎಂದು ಹೇಳಿರುವರು. ವಿಶೇಷ್ಯನಾದ ಮುಕ್ತಾತ್ಮನೇ ಅಪ್ರಸಿದ್ಧನಾದರೆ 'ಮುಕ್ತಾತ್ಮನು ಭಿನ್ನನೋ ಅಭಿನ್ನನೋ' ಎಂಬ ಸಂಶಯವೇ ಕೂಡಲಾರದು. ವಿಶೇಷಣವಾದ ಭೇದವು ಅಪ್ರಸಿದ್ಧವಾದರೂ ವಿಮತಿಯು ಕೂಡಲಾರದು. ಮುಕ್ತಾತ್ಮನಲ್ಲಿ ಭೇದವು ಪ್ರಸಿದ್ಧವಾಗಿದ್ದರೂ ಪ್ರಮಾಣಬಾಧಿತವಾಗಿದ್ದರೂ ಎರಡರಲ್ಲೊಂದು ನಿಶ್ಚಿತವಾಗಿರುವುದರಿಂದ ವಿಮತಿಯು ಕೂಡಲಾರದೆ ಹೋಗಬೇಕಿದ್ದೀತು. ಅಂತೂ ಪ್ರತಿಜ್ಞಾದೋಷಗಳನ್ನು ನಿವಾರಣಮಾಡಲಿಕ್ಕಾಗಿ 'ಸಂಸಾರಾನ್ಮುಕ್ತಃ' ಎಂದು ಹೇಳದೆ 'ವಿಮತಃ' ಎಂದೇ ಹೇಳಿರುವರು. ಯಾವುದು ನಮ್ಮೊಳಗೆ ವಿವಾದಕ್ಕೆ ವಿಷಯವೋ ಅದೇ ವಿಮತವು. (5) ಇದೇ ರೀತಿಯಾಗಿ ಉದಾಹರಣದಲ್ಲಿಯೂ ಸಾಧ್ಯವೈಕಲ್ಯ (ಸಾಧ್ಯವಿಲ್ಲದಿರುವಿಕೆ) ಸಾಧನವೈಕಲ್ಯ (ಹೇತುವಿಲ್ಲದಿರುವಿಕೆ)

---

* 'ತತ್ವನಿರ್ಣಯಮುದ್ದಿಶ್ಯ ಕೇವಲಂ ಗುರುಶಿಷ್ಯಯೋಃ । ಕಥಾಽನ್ಯೇಷಾಮಪಿ ಸತಾಂ ವಾದಃ' ॥ ತತ್ವನಿಶ್ಚಯಕ್ಕಾಗಿ ಗುರುಶಿಷ್ಯರಿಗಾಗಲೀ ಬೇರೆ ಸಜ್ಜನರಿಗಾಗಲೀ ನಡೆಯತಕ್ಕ ಕಥೆಯು ವಾದಕಥೆಯೆನ್ನಿಸುತ್ತದೆ.

† 'ಉಪಪತ್ತ್ಯವಕಾಶೋಽತ್ರ ಹ್ಯಾಗಮಾರ್ಥವಿನಿರ್ಣಯೇ' । ಶ್ರುತ್ಯರ್ಥಗಳನ್ನು ನಿಶ್ಚಯಿಸಲಿಕ್ಕೆ ಯುಕ್ತಿಗಳಾವಶ್ಯಕಗಳು.

§ 'ಚಿಂತಾಂ ಪ್ರಕೃತ ಸಿದ್ಧ್ಯರ್ಥಾಂ ಉಪೋದ್ಘಾತಂ ವಿದುರ್ಬುಧಾಃ' । ಪ್ರಕೃತಾರ್ಥಸಿದ್ಧಿಗೆ ಉಪಯುಕ್ತವಾದ ವಿಚಾರವನ್ನು ಉಪೋದ್ಘಾತವೆಂದು ಜ್ಞಾನಿಗಳು ಹೇಳುವರು.

× 'ಸಂಸಾರಾನ್ಮುಕ್ತಃ ಭಿನ್ನಃ' ಎಂದು ಹೇಳಿದರೆ ಸುಲಭದಿಂದ ಅರ್ಥಜ್ಞಾನವಾಗುವುದು. 'ವಿಮತಃ' ಎಂದು ಹೇಳಿದರೆ ಅರ್ಥಜ್ಞಾನವು ಸುಕರವಲ್ಲ. ಕಾರಣ 'ವಿಮತಃ' ಎಂದು ಹೇಳದೆ 'ಸಂಸಾರಾನ್ಮುಕ್ತಃ' ಎಂದೇ ಹೇಳಬೇಕಿತ್ತು.

ಇತ್ಯಾದಿ ದೋಷಗಳನ್ನು ಶಂಕಿಸಬಾರದೆಂಬ ಅಭಿಪ್ರಾಯದಿಂದ 'ನಿಗಡಮುಕ್ತಃ' ಎಂದು ಹೇಳದೆ, 'ಸಂಪ್ರತಿಪನ್ನಃ' (ಸಾಧ್ಯಸಾಧನಗಳುಳ್ಳವನೆಂದು ನಿಶ್ಚಿತನಾದವನು) ಎಂದು ಹೇಳಿರುವರು. (6) 'ವಿಮತೋ ಭಿನ್ನಃ' ಎಂಬೀ ಅನುಮಾನದಲ್ಲಿ ೧. ಈಶ್ವರನಿಂದ ಭೇದವು ಸಾಧಿಸಲ್ಪಡುತ್ತದೋ? ೨. ಸರ್ವಜೀವರಿಂದಲೋ? ೩. ತಾನು ಬಿಟ್ಟು ಇತರ ಜೀವರಿಂದಲೋ? ೪. ಜಡಗಳಿಂದಲೋ? ೫. ಸರ್ವಪದಾರ್ಥಗಳಿಂದಲೋ? ೧ನೇದು (ಈಶ್ವರನಿಂದ ಭೇದವು ಸಾಧಿಸಲ್ಪಡುತ್ತದೆ ಎನ್ನುವುದು.) ಅಯುಕ್ತವು. ಏಕೆಂದರೆ ಈಶ್ವರನಲ್ಲಿ * ವ್ಯಭಿಚಾರ ಬರುವುದು. ೨ನೇದ್ದು ಅಯುಕ್ತವು. 'ಮುಕ್ತನು ಎಲ್ಲಾ ಜೀವರಿಂದಲೂ ಭಿನ್ನನು' ಎನ್ನುವಲ್ಲಿ ಮುಕ್ತನೂ ಸರ್ವಜೀವರಲ್ಲಿ ಸೇರಿರುವುದರಿಂದ ಆತನಲ್ಲಿ ಅಮುಕ್ತಜೀವಭೇದವು ಸಂಗತವಾಗುವುದಾದರೂ, ತನ್ನ ಭೇದವು ತನ್ನಲ್ಲಿಲ್ಲದಿರುವುದರಿಂದ ಅಂಶೇಬಾಧವು. † ೩ನೇದ್ದು ಅಯುಕ್ತವು. ಮುಕ್ತನಿಗೆ ಅಮುಕ್ತರಿಂದ ಭೇದವು ಸಿದ್ಧವಾಗದೆ, ಅಮುಕ್ತರಿಗೆ ಮುಕ್ತನಿಂದ ಭೇದವು ಸಿದ್ಧವಾಗದಿರುವುದರಿಂದ ವಿಶೇಷಣವೇ ಅಪ್ರಸಿದ್ಧವಾಯಿತು. ಮುಕ್ತನಿಗೆ ಸ್ವೇತರ ಸರ್ವಜೀವರಿಂದಲೂ ಭೇದವು ಸಿದ್ಧವಾಗಿದೆ ಎಂದರೆ ಸಿದ್ಧಸಾಧನವು. ಮುಕ್ತರಿಗೂ ಈಶ್ವರನಿಗೂ ಭೇದವು ಪ್ರಸ್ತುತವಾದುದರಿಂದ ಜೀವರಿಂದ ಭೇದವನ್ನು ಸಾಧಿಸಿದರೆ § ಅರ್ಥಾಂತರವು. ೪ನೇದ್ದು ಅಯುಕ್ತವು. ೪. ಜಡಗಳಿಂದ ಭೇದವನ್ನು ಸಾಧಿಸುವುದೂ, ಪ್ರಕೃತಾನುಪಯುಕ್ತವಾದುದರಿಂದ ಕೂಡಲಾರದು. ೫ನೇದ್ದೂ ಅಯುಕ್ತವು. ಮುಕ್ತನೂ ಸರ್ವರಲ್ಲಿ ಸೇರಿರುವುದರಿಂದ ಭೇದವನ್ನು ಸಾಧಿಸಿದರೆ ಹಿಂದಿನಂತೆಯೇ ಅಂಶೇಬಾಧ ಮೊದಲಾದ ದೋಷವು ಬರುವುದು. ಕಾರಣ 'ವಿಮತೋ ಭಿನ್ನಃ' ಎಂಬುವುದರಿಂದ ಭೇದಸಾಧನವು ಹೇಗೆ ಸಂಗತವಾಗಬಹುದೆಂದು ಪರರು ಆಶಂಕಿಸಿದರೆ, 'ಇವನಿಂದ ಭಿನ್ನನು, ಅವನಿಂದ ಭಿನ್ನನು' ಇತ್ಯಾದಿ ವಿಶೇಷವನ್ನು ವಿವಕ್ಷಿಸದೆ ಸಾಮಾನ್ಯಾಕಾರವಾಗಿಯೇ ಭೇದವನ್ನು ಸಾಧಿಸಿದ್ದಾಗಿರುತ್ತದೆ. ಹೀಗೆ ಹೇಳಿದರೆ ಅರ್ಥಾಂತರವೆಂದು ಹೇಳಕೂಡದು. ಮುಕ್ತನಿಗೆ ಭೇದವನ್ನೇ ಅಂಗೀಕರಿಸದೆ ಆಕ್ಷೇಪಿಸತಕ್ಕ ಪುರುಷನನ್ನು ಕುರಿತು ಹೀಗೆ ಸಾಧಿಸುವುದು ಸಂಗತವೇ ಆಗುವುದು. ಆಗಮಾದಿಗಳಿಂದಲೂ ಮುಕ್ತನಿಗೆ ಈಶ್ವರನಿಂದ ಭೇದವನ್ನು ಸಾಧಿಸುವೆವು. (7) ಅಥವಾ ಮುಕ್ತನಿಗೆ ಪೂರ್ವದಲ್ಲಿ ಅಂದರೆ ಸಂಸಾರಾವಸ್ಥೆಯಲ್ಲಿ ಯಾವ ಭೇದವಿರುತ್ತಿತ್ತೋ ಮುಕ್ತಿಯಲ್ಲಿಯೂ ಅಂತಹ ಭೇದವನ್ನೇ ಸಾಧಿಸುವೆವು. ಆದಕಾರಣ ಹಿಂದಿನ ವಿಕಲ್ಪದೋಷಗಳು ಯಾವುದೂ ಬರುವುದಿಲ್ಲ. (8) ಈ ಅನುಮಾನದಲ್ಲಿ ಈಶ್ವರನು × (1) ಪಕ್ಷನೋ, (2) ಸಪಕ್ಷನೋ, (3) ವಿಪಕ್ಷನೋ

* ಸಾಧ್ಯವಿಲ್ಲದಿರುವುದರಲ್ಲಿ ಹೇತುವು ಬಂದರೆ ವ್ಯಭಿಚಾರವು. ಪರ್ವತದಲ್ಲಿ ಹೊಗೆಯಿದೆ, ಬೆಂಕಿಯಿದ್ದುದರಿಂದ ಎಂಬುವಲ್ಲಿ ಹೊಗೆಯಿಲ್ಲದ ಕಬ್ಬಿಣ ಗೋಲದಲ್ಲಿ ಬೆಂಕಿಯಿದೆ, ಕಾರಣ ವ್ಯಭಿಚಾರವು. ಹಾಗೆಯೇ ಮುಕ್ತತ್ವರೂಪ ಹೇತುವು ಈಶ್ವರನಲ್ಲಿದೆ. ಸಾಧ್ಯವಾದ ಈಶ್ವರಭೇದವು ಈಶ್ವರನಲ್ಲಿಲ್ಲ. ಆದುದರಿಂದ ವ್ಯಭಿಚಾರವು.

† ಪಕ್ಷದಲ್ಲಿ ಸಾಧ್ಯವಿಲ್ಲವೆಂಬುವುದು ಇತರ ಪ್ರಮಾಣದಿಂದ ನಿಶ್ಚಿತವಾದರೆ ಬಾಧವೆನ್ನಿಸಿಕೊಳ್ಳುತ್ತದೆ. ಉದಾ:- 'ಬೆಂಕಿಯು ಬಿಸಿಯಲ್ಲ' ಎಂದು ಸಾಧಿಸಿದರೆ ಪಕ್ಷವಾದ ಬೆಂಕಿಯಲ್ಲಿ ಸಾಧ್ಯಾಭಾವವು ಪ್ರತ್ಯಕ್ಷ ಪ್ರಮಾಣದಿಂದ ನಿಶ್ಚಿತವಾದುದರಿಂದ ಬಾಧಿತವೆನ್ನಿಸಿಕೊಳ್ಳುತ್ತದೆ.

§ ಪ್ರಕೃತಕ್ಕೆ ಅನುಪಯುಕ್ತವಾದ ಅನ್ವಿತವಚನವು ಅರ್ಥಾಂತರವು.

× ಸಾಧ್ಯವು ಸಂದಿಗ್ಧವಾಗಿದ್ದರೆ ಪಕ್ಷವು. ಸಾಧ್ಯವು ನಿಶ್ಚಿತವಾಗಿದ್ದರೆ ಸಪಕ್ಷವು. ಸಾಧ್ಯವಿಲ್ಲವೆಂದು ನಿಶ್ಚಿತವಾಗಿದ್ದರೆ ವಿಪಕ್ಷವು. ಉದಾ:- ಪರ್ವತದಲ್ಲಿ ಬೆಂಕಿಯಿದೆ. ಹೊಗೆಯಿದ್ದುದರಿಂದ ಅಡಿಗೆಮನೆಯಂತೆ- ಇಲ್ಲಿ ಪರ್ವತವು ಪಕ್ಷವು. ಅಡಿಗೆಮನೆಯು ಸಪಕ್ಷವು. ಕೊಳವು ವಿಪಕ್ಷವು.

(1) ನೇದ್ದು ಅಯುಕ್ತವು. ಅದ್ವೈತಿಗಳು ಮುಕ್ತಪರಮಾತ್ಮರಿಗೆ ಭೇದವನ್ನೇ ಅಂಗೀಕರಿಸದಿರುವುದರಿಂದ "ಮುಕ್ತಪರಮಾತ್ಮಾನೌ" ಮುಕ್ತಪರಮಾತ್ಮರು ಇಬ್ಬರು ಎಂದು ಪಕ್ಷಮಾಡುವುದು ಸಂಗತವಾಗುವುದಿಲ್ಲ. ಭೇದವನ್ನು ಅಂಗೀಕರಿಸಿರುವುದಾದರೆ ಸಿದ್ಧಸಾಧನವು. ೨ನೇದ್ದು (ಸಪಕ್ಷನೆಂದು ಹೇಳುವುದು) ಅಯುಕ್ತವು. ಅದ್ವೈತಿಗಳು ಐಕ್ಯವನ್ನು ಹೇಳುವುದರಿಂದ ಸಾಧ್ಯವನ್ನೇ ಒಪ್ಪಲಾರರು. ೩ನೇದ್ದು (ವಿಪಕ್ಷನೆನ್ನುವುದು) ಅಯುಕ್ತವು. ದ್ವೈತಿಗಳು ಎಲ್ಲಿಯೂ ಭೇದಾಭಾವವನ್ನು ಅಂಗೀಕರಿಸಲಿಲ್ಲ. ಕಾರಣ ಅನುಮಾನವು ಅಸಂಗತವೆಂದು ಆಶಂಕಿಸಿದರೆ ಈಶ್ವರನು ಪಕ್ಷನಾದರೂ 'ಮುಕ್ತ ಪರಮಾತ್ಮಾನೌ' ಎಂದು ಪಕ್ಷವಾಗಿಟ್ಟುಕೊಳ್ಳುವುದಿಲ್ಲ. ವಿಮತಿವಿಷಯವಾದುದೆಲ್ಲವನ್ನೂ ಸ್ವೀಕರಿಸಬೇಕೆಂದಭಿಪ್ರಾಯದಿಂದಲೇ 'ವಿಮತೌ' ಎಂದು ಸಾಮಾನ್ಯಾಕಾರವಾಗಿ ಹೇಳಿರುವರು. (9) ಹೇತುವಾದಮುಕ್ತತ್ವವು ಎಂತಹುದು? ೧. ಸಂಸಾರಪ್ರಧ್ವಂಸವೋ? ೨. ಸಂಸಾರಸಂಸರ್ಗಾಭಾವವೋ? ೧ನೇದ್ದು ಅಯುಕ್ತವು. ಈಶ್ವರನಿಗೆ ಸಂಸಾರವೇ ಇಲ್ಲದಿರುವುದರಿಂದ ಸಂಸಾರಪ್ರಧ್ವಂಸವು (ಹೋಗುವಿಕೆಯು) ಸುತರಾಂ ಕೂಡಲಾರದು. ಆದುದರಿಂದ ಪಕ್ಷದಲ್ಲಿ ಹೇತುವಿಲ್ಲದಿರುವುದರಿಂದ ಸ್ವರೂಪಾಸಿದ್ಧಿಯು. ದೃಷ್ಟಾಂತದಲ್ಲಿಯೂ ಇಂತಹ ಹೇತುವು ಇಲ್ಲದಿರುವುದರಿಂದ ಸಾಧನವೈಕಲ್ಯವು. ೨ನೇದ್ದು 'ಸಾಧನವೈಕಲ್ಯ' (ದೃಷ್ಟಾಂತದಲ್ಲಿ ಹೇತುವಿಲ್ಲದಿರುವುದು) ದಿಂದಲೇ ಅಯುಕ್ತವೆಂದು ಪರರು ಆಶಂಕಿಸಿದರೆ ನಿಗಡ, ಸಂಸಾರವೆಂಬುವ ವಿಶೇಷವನ್ನು ವಿವಕ್ಷಿಸದೆ ಬಂಧಸಂಸರ್ಗಾಭಾವವೇ ಇಲ್ಲಿ ಹೇತುವಾದ ಮುಕ್ತತ್ವವು. ಈಶ್ವರನಲ್ಲಿ ಬಂಧಸಂಸರ್ಗವೇ ಇಲ್ಲ. ಮುಕ್ತನಲ್ಲಿ ಸಂಸಾರಸಂಸರ್ಗಧ್ವಂಸವು. ದೃಷ್ಟಾಂತದಲ್ಲಿ ನಿಗಡಬಂಧಧ್ವಂಸವು. ಅಂತೂ ಸರ್ವತ್ರ ಹೇತುವು ಸಿದ್ಧವಾಗುವುದು. (10) ಅಥವಾ ಮುಕ್ತತ್ವವೆಂದರೆ ಸಂಸಾರ ಸಂಸರ್ಗಾಭಾವವು. ಈ ಕಲ್ಪದಲ್ಲಿ ದೃಷ್ಟಾಂತವು ಕುರ್ಚಿಮೊದಲಾದುದು. (11)ಅಥವಾ ಮುಕ್ತನನ್ನು ಮಾತ್ರ ಪಕ್ಷನನ್ನಾಗಿಟ್ಟುಕೊಂಡು ಈಶ್ವರನಿಂದಲೇ ಭೇದವನ್ನು ಸಾಧಿಸುವೆವು. ಹಾಗಾದರೆ ಈಶ್ವರನಲ್ಲಿ ಸಾಧ್ಯವಿಲ್ಲ, ಹೇತುವಿರುವುದರಿಂದ ವ್ಯಭಿಚಾರವೆಂದೆನ್ನಕೂಡದು. ಈ ಕಲ್ಪದಲ್ಲಿ ಮುಕ್ತತ್ವವೆಂದರೆ ಬಂಧಪ್ರಧ್ವಂಸಾಧಿಕರಣತ್ವವು. ಈಶ್ವರನಲ್ಲಾದರೂ ಸಾಧ್ಯಹೇತುಗಳು ಎರಡೂ ಇಲ್ಲದಿರುವುದರಿಂದ ವ್ಯಭಿಚಾರವಿಲ್ಲವು. ಈ ಕಲ್ಪದಲ್ಲಿ ಈಶ್ವರನು ವಿಪಕ್ಷನು ॥ ೨ ॥

ಈ ಅನುಮಾನದಲ್ಲಿ (1) ಅನಿರ್ವಚನೀಯ ಭೇದವನ್ನು ಸಾಧಿಸುತ್ತೀರೋ, (2) ಪಾರಮಾರ್ಥಿಕ ಭೇದವನ್ನೋ? (1) ದ್ವೈತಿಗಳಾದ ನಿಮಗೆ * ಅಪಸಿದ್ಧಾಂತ ಬರುವುದರಿಂದ ಅನಿರ್ವಚನೀಯ ಭೇದವು ಸಾಧ್ಯವೆಂದು ಹೇಳಕೂಡದು. (೨) ಪಾರಮಾರ್ಥಿಕ ಭೇದವನ್ನು ದೃಷ್ಟಾಂತದಲ್ಲಿ (ನಿಗಡಮುಕ್ತನಲ್ಲಿ) ನಾವು (ಅದ್ವೈತಿಗಳು) ಅಂಗೀಕರಿಸದಿರುವುದರಿಂದ ಸಾಧ್ಯವೈಕಲ್ಯವು. (ಸಾಧ್ಯವಿಲ್ಲದಿರುವುದು.) ಆದಪ್ರಯುಕ್ತ ಎರಡು ರೀತಿಯಿಂದಲೂ ನಿಮಗೆ (ದ್ವೈತಿಗಳಿಗೆ) ಸಾಧಿಸಲಿಕ್ಕೆ ಆಗುವುದಿಲ್ಲ ಎಂಬ ಅದ್ವೈತಿಗಳ ಆಶಂಕೆಯನ್ನು ಪರಿಹರಿಸುತ್ತಾರೆ.

**ಮೂ ॥ ನ ಚ ಭೇದೇ ವಿಕಲ್ಪೋ ಯುಜ್ಯತೇ ॥ ೩ ॥**

**ಅರ್ಥ ॥** ಭೇದೇ = ಭೇದವಿಷಯದಲ್ಲಿ, ವಿಕಲ್ಪಶ್ಚ = ಅನಿರ್ವಚನೀಯವೋ ಪಾರಮಾರ್ಥಿಕವೋ ಎಂಬ ಸಂಶಯ ಮೂಲಕವಾದ ಪ್ರಶ್ನೆಯು, ನ ಯುಜ್ಯತೇ = ಕೂಡುವುದಿಲ್ಲ, (ಮಾಡಲಿಕ್ಕಾಗುವುದಿಲ್ಲ).

---

* ಮುಂಚಿನವರು ಯಾವುದನ್ನು ಪ್ರಾಮಾಣಿಕವೆಂದಂಗೀಕರಿಸಿರುವರೋ, ತದ್ವಿರುದ್ಧವಾದುದನ್ನು ಒಡಂಬಡುವುದು ಅಪಸಿದ್ಧಾಂತವು.

ತಾ || (1) ಒಂದು ವಸ್ತುವಿನಲ್ಲಿ ತೋರುವ ವಿರೋಧವುಳ್ಳ ಅನೇಕಾಕಾರಗಳನ್ನು ವಿಷಯೀಕರಿಸುವ ಜ್ಞಾನವು ವಿಕಲ್ಪವು,(ಸಂಶಯವು)ಅಂತಹ ಸಂಶಯಾಕಾರವನ್ನು ತೋರಿಸುವ ವಾಕ್ಯವಿಶೇಷವು ಪ್ರಶ್ನೆಯು, ಆ ಪ್ರಶ್ನೆಯೇ ಇಲ್ಲಿ ವಿಕಲ್ಪಪದದಿಂದ * ಲಕ್ಷಿತವಾಗಿದೆ. (೨) 'ಭೇದೇ ಪ್ರಶ್ನೋ ನ ಯುಜ್ಯತೇ' ಎಂದು ಹೇಳದೆ ಲಾಕ್ಷಣಿಕವಾದ ವಿಕಲ್ಪಪದವನ್ನು 'ಹೇತುವನ್ನು ಸೂಚಿಸುವುದಕ್ಕಾಗಿ' ಪ್ರಯೋಗಿಸಿರುವರು. ಅಂದರೆ 'ಪ್ರಶ್ನೋ ನ ಯುಜ್ಯತೇ' ಎಂದು ಹೇಳಿದ್ದರೆ 'ಏತಕ್ಕೆ ಪ್ರಶ್ನೆಯು ಕೂಡುವುದಿಲ್ಲ' ಎಂದು ಪುನಃ ಪ್ರಶ್ನೆಮಾಡಲು 'ಸಂಶಯವು ಕೂಡದಿರುವುದರಿಂದ ಪ್ರಶ್ನೆಯು ಕೂಡುವುದಿಲ್ಲ' ಎಂದು ಪ್ರತ್ಯೇಕ ಉತ್ತರವನ್ನು ಕೊಡಬೇಕಾಗುತ್ತಿತ್ತು. ಲಾಕ್ಷಣಿಕವಾದ 'ವಿಕಲ್ಪ' ಪದವನ್ನು ಹೇಳಿದ್ದರಿಂದ ಪ್ರಶ್ನೆಯು ಕೂಡದಿರಲಿಕ್ಕೆ ಸಂಶಯ ಮೂಲಕತ್ವರೂಪವಾದ ಹೇತುವನ್ನು ಸೂಚಿಸಿದಂತೆ ಆಯಿತು. ಪ್ರಶ್ನೆಗೆ ಸಂಶಯವು ಕಾರಣವಾದುದರಿಂದ ಸಂಶಯವಿಲ್ಲದಿದ್ದಮೇಲೆ ಪ್ರಶ್ನೆಯೂ ಕೂಡಲಾರದು. (3) ಅನಿರ್ವಚನೀಯವೋ ಪಾರಮಾರ್ಥಿಕವೋ ಎಂಬ ಭೇದವಿಷಯಕವಾದ ವಿಕಲ್ಪವನ್ನು ನಿರಾಕರಣ ಮಾಡುವ ಪರ್ಯಂತ 'ವಿಮತೋ ಭಿನ್ನಃ ಮುಕ್ತತ್ವಾತ್' ಎಂಬ ಅನುಮಾನಕ್ಕೆ 'ಅನಿರ್ವಚನೀಯ ಭೇದವು ಸಾಧ್ಯವೋ ಪಾರಮಾರ್ಥಿಕವೋ ಇವೆರಡೂ ಅಯುಕ್ತವು' ಎಂದು ಮೊದಲಾದ ದೋಷಗಳನ್ನು ಪರರು ಆರೋಪಿಸಿರುವುದರಿಂದ ಆ ಅನುಮಾನವು 'ವಿಮತನು ಭಿನ್ನನು' ಎಂಬೀ ಅನುಮಿತಿಯನ್ನು ಹುಟ್ಟಿಸಲಾರದು. ಆ ವಿಕಲ್ಪನಿರಾಸದಿಂದೊಡಗೂಡಿದ ಅನುಮಾನವೇ ಅನುಮಿತಿಯನ್ನು ಹುಟ್ಟಿಸುತ್ತದೆ. ಆದಪ್ರಯುಕ್ತ '(1) ಮುಕ್ತತ್ವಾತ್, (2) ಭೇದೇ ವಿಕಲ್ಪಾಯೋಗಾಚ್ಚ ವಿಮತೋ ಭಿನ್ನಃ=ಮುಕ್ತನಾದುದರಿಂದಲೂ, ಭೇದವಿಷಯದಲ್ಲಿ ವಿಕಲ್ಪವು ಕೂಡದಿರುವುದರಿಂದಲೂ ಕೂಡ ವಿಮತನು ಭಿನ್ನನು' ಹೀಗೆ 'ನ ಚ ಭೇದೇ' ಎಂಬುವಲ್ಲಿದ್ದ 'ಚ' ಶಬ್ದವು ಸಮುಚ್ಚಯಾರ್ಥವನ್ನೂ ತೋರಿಸುತ್ತದೆ. (4) 'ನ ಚ ಭೇದೇ' ಎಂಬುವಲ್ಲಿದ್ದ 'ಚ' ಶಬ್ದವು ಅವಧಾರಣಾರ್ಥದಲ್ಲಿಯೂ ಇರುತ್ತದೆ. ಹೇಗೆಂದರೆ ವಿಕಲ್ಪವೇ ಕೂಡುವುದಿಲ್ಲ. ಪರರು ಹೇಳಿದ ಅಪಸಿದ್ಧಾಂತಾದಿದೋಷಗಳು ಸುತರಾಂ ಕೂಡುವುದಿಲ್ಲ. 'ಅನಿರ್ವಾಚ್ಯವೋ ಪಾರಮಾರ್ಥಿಕವೋ' ಎಂಬ ಪ್ರಶ್ನೆಯು ಸಂಗತವಾಗಿದ್ದರೆ ಈ ದೂಷಣವು ಯುಕ್ತವಾಗುವುದು. ಏಕೆಂದರೆ ಸಂಶಯವೇ ಇಲ್ಲದಿರುವುದರಿಂದ ತನ್ಮೂಲಕವಾದ ಪ್ರಶ್ನೆಯೂ ಯುಕ್ತವಲ್ಲ. ಯಾರಾದರೂ ತಮಗೆ ನಿಶ್ಚಿತವಾದುದನ್ನೂ ತಿಳಿಯದೇನೇ ಇದ್ದುದನ್ನೂ ಕೇಳಲಾರರು. 'ವಿಮತೋ ಭಿನ್ನಃ' ಎಂದು ಪ್ರಯೋಗಿಸಿದರೆ ಸಾಧ್ಯವನ್ನು ವಿಕಲ್ಪಿಸದೆ ಅಪಸಿದ್ಧಾಂತಾದಿ ದೋಷಗಳನ್ನು ಆರೋಪಿಸಕೂಡದು. ವಿಕಲ್ಪವೇ ಕೂಡಲಾರದೆಂದು ನಾವು ಹೇಳುವಾಗ ಆ ವಿಕಲ್ಪವನ್ನು ಹಿಡಿದು ಪರರು ಹೇಳತಕ್ಕ ದೋಷಗಳು ಪ್ರಕೃತಾನುಮಾನಕ್ಕೆ ತಟ್ಟಲಾರದೆಂದು ತಾತ್ಪರ್ಯವು. (5) 'ಗೋವಿಂದ ನಿನಗೆ ಎಷ್ಟುಮಂದಿ ಹುಡುಗರಿದ್ದಾರೆ'? ಇಂತಹ ವಾಕ್ಯದಲ್ಲಿ ಸಂಶಯವಿಲ್ಲದಿದ್ದರೂ ಪ್ರಶ್ನೆಯು ಕೂಡುವುದರಿಂದ 'ಪ್ರಶ್ನೆಯು ಸಂಶಯಮೂಲಕವೇ' ಎಂದನ್ನಕೂಡದು ಎಂದು ಪರರು ಆಶಂಕಿಸಿದರೆ ಈ ವಾಕ್ಯದಲ್ಲಿಯೂ 'ಗೋವಿಂದನಿಗೆ ಮಕ್ಕಳಿವೆ' ಎಂದು ಪೂರ್ವದಲ್ಲಿಯೇ ತಿಳಿದಿರುವುದರಿಂದ, ಇಷ್ಟು ಮಂದಿ ಎಂದು ಮಾತ್ರ ತಿಳಿಯದೆ ಇದ್ದುದರಿಂದ ಇವನನ್ನು ನೋಡಿದೊಡನೆ ಸಂಸ್ಕಾರದಿಂದ ಸ್ಮೃತಿಯುಂಟಾಗಿ ಇಬ್ಬರೋ ಮೂವರೋ ಎಂದು ವಿಚಾರಬರಲು ಇಷ್ಟೇ ಮಂದಿ ಎಂದು ನಿಶ್ಚಯವನ್ನು

* ಶಕ್ಯವಾದ ಅರ್ಥದ ಸಂಬಂಧವು ಲಕ್ಷಣಾ ಎನ್ನಿಸುತ್ತದೆ. ಉದಾ=ಗಂಗಾಯಾಂ ಘೋಷಃ= ಗಂಗೆಯ ತೀರದಲ್ಲಿ ಗೊಲ್ಲರ ಮನೆಯು, ಗಂಗೆಯಲ್ಲಿ ಮನೆಯು ಇರಲಾರದು. ಶಕ್ಯವಾದ ಅರ್ಥವು ಪ್ರವಾಹವು, ಅದರ ಸಂಬಂಧವು ತೀರದಲ್ಲಿದೆ. ಕಾರಣ ಇದು ಲಾಕ್ಷಣಿಕಪ್ರಯೋಗವು.

ಹುಟ್ಟಿಸುವ ಪ್ರಮಾಣವು ಸಿಗದಿರುವುದರಿಂದ ಸಂಶಯವು ಹುಟ್ಟಿಯೇ ಪ್ರಶ್ನೆಯು ಹುಟ್ಟಿಯದೆ. 'ಇಬ್ಬರೋ ಮೂವರೋ ನಾಲ್ಕು ಮಂದಿಯೋ' ಎಂದು ಪ್ರಶ್ನೆಮಾಡಿದರೆ ಗೌರವಬರುವುದರಿಂದ ವಿಶೇಷಾಕಾರವಾಗಿ ಪ್ರಶ್ನೆಮಾಡದೆ ಇಷ್ಟು ಅರ್ಥವನ್ನು ಕೊಡುವ 'ಕಿಯಂತಃ' ಎಷ್ಟುಮಂದಿ ಎಂದು ಸಾಮಾನ್ಯಾಕಾರವಾಗಿ ಪ್ರಶ್ನೆಮಾಡಿದ್ದಾಗಿರುತ್ತದೆ. (6) 'ಬೆಟ್ಟದಲ್ಲಿ ಯಾವುದೋ ಒಂದು ವಸ್ತುವನ್ನು ನಾನು ನೋಡಿದೆನು' ಎಂದು ಕೃಷ್ಣನು ಹೇಳಲು, ರಾಮನು 'ಆ ವಸ್ತುವು ಎಂತಹುದು' ಎಂದು ಪ್ರಶ್ನೆಮಾಡುವನು. ಈ ವಾಕ್ಯದಲ್ಲಿ ಆ ವಸ್ತುವು ಅತಿದೂರದಲ್ಲಿದ್ದುದರಿಂದ ಸಾಧಾರಣ ಧರ್ಮವು ತೋರದಿರುವುದರಿಂದ ಸ್ಮೃತಿಗೆ ಉಪಾಯವಿರುವುದಿಲ್ಲ. ಕಾರಣ ಸಂಶಯವೇ ಹುಟ್ಟದಿರುವುದರಿಂದ ಪ್ರಶ್ನೆಯು ಸಂಶಯಮೂಲಕವೆಂದು ಹೇಳಕೂಡದು, ಎಂದು ಪರರು ಪುನಃ ಶಂಕಿಸಿದರೆ ಈ ವಾಕ್ಯದಲ್ಲಿಯೂ ಪ್ರತ್ಯಕ್ಷ ಕೂಡದಿದ್ದರೂ ನೋಡಿದ್ದು ವಸ್ತುವಾದುದರಿಂದ ಯಾವುದಾದರೊಂದು ಲಕ್ಷಣ ವಿರಬೇಕೆಂದನುಮೇಯಿಸಿ ವಿಶೇಷ ಸ್ಮೃತಿಯಾಗಲು 'ಆ ಲಕ್ಷಣವು ನಾನು ತಿಳಿದಿರುವುದರಲ್ಲಿ ಯಾವುದಾದರೊಂದು ಇರಬಹುದೋ, ಬೇರೆಯೇ ಇರಬಹುದೋ' ಎಂಬ ಸಂಶಯದಿಂದಲೇ ಪ್ರಶ್ನೆಯು ಯುಕ್ತವಾಗುವುದು. ಅಂತೂ ಪ್ರಶ್ನೆಯು ಸಂಶಯಮೂಲಕವೇ. (7) 'ಜಾನಂತೋಽಪಿ ವಿಶೇಷಾರ್ಥ ಜ್ಞಾನಾಯ ಸ್ಥಾಪನಾಯ ವಾ । ಪೃಚ್ಛಂತಿ ಸಾಧವೋ ಲೋಕೇ' ಸಜ್ಜನರು ಸ್ವತಏವ ತಿಳಿದವರಾದಾಗ್ಯೂ ವಿಶೇಷಾರ್ಥ ಜ್ಞಾನವಾಗುವುದಕ್ಕೋಸ್ಕರ ಅಥವಾ ಲೋಕದಲ್ಲಿ ಪ್ರಖ್ಯಾತಿಪಡಿಸಲಿಕ್ಕೆ ಪ್ರಶ್ನೆಮಾಡುತ್ತಾರೆ, ಎಂದಿರುವುದರಿಂದ ಸರ್ವಜ್ಞಕಲ್ಪರು ಸಂದೇಹವಿಲ್ಲದೇನೇ ಪ್ರಶ್ನೆಮಾಡುವುದರಿಂದ ಪ್ರಶ್ನೆಗಳಿಗೆಲ್ಲಾ ಸಂಶಯವು ಕಾರಣವೆಂದನ್ನಕೂಡದು, ಎಂದು ಪರರು ಆಶಂಕಿಸಿದರೆ ಸರ್ವಜ್ಞರು ಮಾಡತಕ್ಕ ಪ್ರಶ್ನೆಯು ಹೇಗೂ ಇರಲಿ. ಶಿಷ್ಯಾದಿಗಳ ಪ್ರಶ್ನೆಗೆ ಸಂಶಯಕಾರಣವೆಂದು ಅವಶ್ಯವಾಗಿ ಒಡಂಬಡಬೇಕು. ಹೀಗೆಯೇ ಅನಿರ್ವಚನೀಯತ್ವಾದಿ ಕೋಟಿಯನ್ನಾಶ್ರಯಿಸಿರುವ ಪ್ರಕೃತ ಪ್ರಶ್ನೆಗೂ ಸಂಶಯವು ಕಾರಣವೆಂದಂಗೀಕರಿಸಲೇ ಬೇಕು. (೮) ಹಿಂದಿನ ರೀತಿಯಿಂದ ಪ್ರಶ್ನೆಗೆ ಸಂಶಯವು ಕಾರಣವಾಗಲಿ, ಆದರೂ ಏಕೆ ಪ್ರಶ್ನೆಯು ಕೂಡುವುದಿಲ್ಲ, ಎಂದು ಶಂಕಿಸಿದರೆ ಇದೇ ಉತ್ತರವು. ಭೇದೇ=ಭೇದವಿಷಯದಲ್ಲಿ, ವಿಕಲ್ಪಶ್ಚ='ಅನಿರ್ವಚನೀಯವೋ ಪಾರಮಾರ್ಥಿಕವೋ' ಎಂಬ ಸಂಶಯವು, ನ ಯುಜ್ಯತೇ=ಕೂಡುವುದಿಲ್ಲ. ಸಂಶಯರೂಪವಾದ ಕಾರಣವಿಲ್ಲವಾದರೆ ಪ್ರಶ್ನೆರೂಪವಾದ ಕಾರ್ಯವೂ ಹುಟ್ಟಲಾರದು. ಕಾರಣವಿಲ್ಲದಿದ್ದರೂ ಕಾರ್ಯವು ಹುಟ್ಟುವುದಾದರೆ ಮರ ಅಕ್ಕಿಲಿ ಇತ್ಯಾದಿಗಳು ಇಲ್ಲದಿದ್ದರೂ ಕುರ್ಚಿ ಬೆಂಚು ಇತ್ಯಾದಿಗಳು ಆಗಬೇಕಾಗುವವು. (9) 'ಅನಿರ್ವಚನೀಯವೋ ಪಾರಮಾರ್ಥಿಕವೋ' ಎಂಬ ಸಂಶಯವು ಏತಕ್ಕೆ ಕೂಡುವುದಿಲ್ಲವೆಂದು ಪುನಃ ಶಂಕಿಸಿದರೂ ಇದೇ ಮೂಲದಿಂದ ಸಮಾಧಾನವು. ಭೇದೇ=ಭೇದವಿಷಯದಲ್ಲಿ, ವಿಕಲ್ಪಃ=ಅನಿರ್ವಚನೀಯ ಪಾರಮಾರ್ಥಿಕ ವೆಂಬ ಪ್ರಭೇದವು, ನ ಯುಜ್ಯತೇ=ಕೂಡುವುದಿಲ್ಲ. ಸ್ಥಾಣುಪುರುಷ ಸಾಧಾರಣವಾದ ಊರ್ಧ್ವತ್ವರೂಪಧರ್ಮವನ್ನು ಮುಂಭಾಗದಲ್ಲಿರುವ ವಸ್ತುವಿನಲ್ಲಿ ನೋಡಿ ಸಂಸ್ಕಾರವು ಉದ್ಬುದ್ಧವಾಗಿ ಸ್ಥಾಣುಪುರುಷರನ್ನು ಸ್ಮರಿಸಿ, ಇವೆರಡರಲ್ಲಿ ಇಂತಹುದೇ ಎಂದು ವಿಶೇಷ ನಿರ್ಧಾರಣೆಮಾಡಬೇಕೆಂದಿಚ್ಛಿಸಿದರೂ ಸ್ಥಾಣುವೇ ಎಂದು ನಿಶ್ಚಯಿಸಲಿಕ್ಕೆ ಕೊಂಬೆ ಮೊದಲಾದವು ಪುರುಷನೇ ಎಂದು ನಿಶ್ಚಯಿಸಲಿಕ್ಕೆ ಹಸ್ತಪಾದಾದಿಗಳೂ ಎರಡೂ ಕಾಣದಿರುವುದರಿಂದ ಸ್ಥಾಣುವೋ ಪುರುಷನೋ ಎಂದು ಸಂಶಯವು ಹುಟ್ಟುತ್ತದೆ. ಭೇದವಿಷಯದಲ್ಲಾದರೂ ಅನಿರ್ವಚನೀಯ, ಪಾರಮಾರ್ಥಿಕ, ವೆಂಬ ಪ್ರಭೇದವೇ ಕೂಡುವುದಿಲ್ಲ. ಆ ಕಾರಣ 'ಏಮತೋ ಭಿನ್ನಃ' ಎಂಬುವುದರಿಂದ ಭೇದ ಪ್ರತೀತಿಯಾಗುವಾಗ ಅನಿರ್ವಚನೀಯಾದಿಸ್ಮೃತಿಯು ಹೇಗೆ ಆಗುವುದು? ಅಂತೂ ಭೇದದಲ್ಲಿ ಅನಿರ್ವಚನೀಯತ್ವಾದಿ ಪ್ರಭೇದವೇ ಇಲ್ಲದಿರುವುದರಿಂದ ಸಂಶಯವು ಕೂಡಲಾರದು. ಆದುದರಿಂದಲೇ ಪ್ರಶ್ನೆಯು ಕೂಡಲಾರದು ॥ ೩ ॥

ಭೇದದಲ್ಲಿ ಅನಿರ್ವಚನೀಯತ್ವ ಪಾರಮಾರ್ಥಿಕತ್ವ ಪ್ರಭೇದವು ಏಕೆ ಕೂಡುವುದಿಲ್ಲ, ಎಂಬಾ ಶಂಕೆಯನ್ನು ಪರಿಹರಿಸುತ್ತಾರೆ.

**ಮೂ ॥ ಅನಿರ್ವಚನೀಯಸ್ಯ ಸರ್ವತ್ರಾಪ್ರಸಿದ್ಧತ್ವಾದೇವ ॥ ೪ ॥**

ಅ ॥ ಅನಿರ್ವಚನೀಯಸ್ಯೈವ=ಅನಿರ್ವಚನೀಯ ಭೇದಕ್ಕೇನೆ, ಸರ್ವತ್ರ=ಎಲ್ಲಾ ಕಡೆ ಯಲ್ಲಿಯೂ, ಅಪ್ರಸಿದ್ಧತ್ವಾತ್=ಪ್ರಸಿದ್ಧಿಯಿಲ್ಲದಿರುವುದರಿಂದ, (ಭೇದದಲ್ಲಿ ವಿಕಲ್ಪಕೂಡದು. ಪಾರಮಾರ್ಥಿಕ ಭೇದವಾದರೆ ಅದ್ವೈತಿಗಳಿಗೆ ಅಸಿದ್ಧವೇ ಆಗಿಯದೆ.)

ತಾ ॥ (1) ಅನಿರ್ವಚನೀಯ ಪಾರಮಾರ್ಥಿಕ ಭೇದಗಳೇ ಪ್ರಸಿದ್ಧಗಳಾಗಬೇಕೆಂಬ ನಿಯಮವಿಲ್ಲ. ಅನಿರ್ವಚನೀಯತ್ವ ಪಾರಮಾರ್ಥಿಕತ್ವರೂಪಕೋಟಿಗಳ ಪ್ರಸಿದ್ಧಿಯಿಂದಲೂ ಸಂಶಯವು ಕೂಡಬಹುದು. ಅನಿರ್ವಚನೀಯತ್ವಕೋಟಿಯು ಶುಕ್ತಿರಜತದಲ್ಲಿಯೂ, ಪಾರ ಮಾರ್ಥಿಕತ್ವಕೋಟಿಯು ಬ್ರಹ್ಮನಲ್ಲಿಯೂ ಪ್ರಸಿದ್ಧವು. ಆದುದರಿಂದ ಸಂಶಯವು ಕೂಡಬಹು ದೆಂದರೆ ಪಾರಮಾರ್ಥಿಕತ್ವಕೋಟಿಯು ಬ್ರಹ್ಮನಲ್ಲಿ ಪ್ರಸಿದ್ಧವಾದರೂ ಆರೋಪ್ಯಮಾಣವಾದ ಅನಿರ್ವಚನೀಯತ್ವಕೋಟಿಯು ಎಲ್ಲಿಯೂ ಪ್ರಸಿದ್ಧವಲ್ಲ. ಕಾರಣ ಸಂಶಯಕೂಡಲಾರದು ॥ ೪ ॥

'ಪ್ರಶ್ನೋ ನ ಯುಜ್ಯತೇ' ಎಂಬ ವಿಷಯದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ.

**ಮೂ ॥ ಶಶವಿಷಾಣಂ ಗೋವಿಷಾಣಂ ವೋಚ್ಯತ ಇತಿವತ್ ॥ ೫ ॥**

ಅ ॥ ಮೊಲದಕೋಡು ಹೇಳಲ್ಪಡುತ್ತದೋ, ಗೋವಿನಕೋಡು ಹೇಳಲ್ಪಡುತ್ತದೋ ಎಂಬುವುದರಂತೆ.

ತಾ॥ (1) ಚೈತ್ರನು 'ವಿಷಾಣಮಸ್ತಿ' ಕೋಡು ಅದೆ, ಎಂದು ಹೇಳಲು 'ನೀನು ವಿಷಾಣಪದದಿಂದ ಮೊಲದ ಕೋಡನ್ನು ಹೇಳುತ್ತೀಯೋ' ಗೋವಿನ ಕೋಡನ್ನು ಹೇಳುತ್ತೀಯೋ? ಎಂಬ ಮೈತ್ರನ ಪ್ರಶ್ನೆಯು ಕೂಡಲಾರದು. ಶಶವಿಷಾಣವೇ ಅಪ್ರಸಿದ್ಧವಾದುದರಿಂದ (ವಿಷಾಣ ಪದದಿಂದ ವಿಷಾಣತ್ವವು ಪ್ರತೀತವಾದರೂ) ಸ್ಮೃತಿಯನ್ನು ಹುಟ್ಟಿಸತಕ್ಕ ಸಂಸ್ಕಾರವಿಲ್ಲದಿರುವುದ ರಿಂದ ತಿಳಿಯಬೇಕೆಂಬ ಇಚ್ಛೆಯು ಹುಟ್ಟಲಾರದು. ಕಾರಣ ಸಂಶಯವೂ ಕೂಡಲಾರದು. ಹೀಗೆಯೇ ಪ್ರಕೃತದಲ್ಲಿ ಅನಿರ್ವಚನೀಯತ್ವವೇ ಅಪ್ರಸಿದ್ಧವಾದುದರಿಂದ ಅನಿರ್ವಚನೀಯವೋ ಪಾರಮಾರ್ಥಿಕವೋ ಎಂಬ ಸಂಶಯವು ಹುಟ್ಟಲಾರದು. (2) '೧ ನ ಚ ಭೇದೇ ವಿಕಲ್ಪೋ ಯುಜ್ಯತೇ, ೨ ಅನಿರ್ವಚನೀಯಸ್ಯ ಸರ್ವತ್ರಾಪ್ರಸಿದ್ಧತ್ವಾದೇವ, ೩ ಶಶವಿಷಾಣಂ ಗೋವಿಷಾಣಂ ವೋಚ್ಯತ ಇತಿವತ್ ಈ ವಾಕ್ಯಗಳಿಂದ ಈ ಅನುಮಾನಗಳು ಸೂಚಿತಗಳಾದುವು. ೧ ವಿಮತಃ ಪ್ರಶ್ನಃ=ವಿವಾದಕ್ಕೆ ವಿಷಯವಾದ ಪ್ರಶ್ನೆಯು, ನ ಯುಜ್ಯತೇ=ಕೂಡುವುದಿಲ್ಲ. ಅಸಂದಿಗ ವಿಷಯತ್ವಾತ್=ಸಂಶಯಗ್ರಸ್ತವಾದ ವಿಷಯತ್ವವಿಲ್ಲದಿರುವುದರಿಂದ, ಶಶವಿಷಾಣಂ ಗೋವಿ ಷಾಣಂ ವೋಚ್ಯತೇ ಇತಿ ಪ್ರಶ್ನವತ್=ಶಶಶೃಂಗ ಹೇಳಲ್ಪಡುತ್ತದೋ ಗೋಶೃಂಗವೋ ಎಂಬ ಪ್ರಶ್ನೆಯಂತೆ. (ತಾ॥ ಶಶಶೃಂಗವು ಲೋಕದಲ್ಲೆಲ್ಲಿಯೂ ಇಲ್ಲ. ಎರಡೂ ಪದಾರ್ಥಗಳು ಎಲ್ಲಾ ದರೂ ಪ್ರಸಿದ್ಧಗಳಾಗಿದ್ದರೆ ಸಂಶಯವು ಕೂಡಬಹುದು. ಗೋಶೃಂಗವಿದ್ದರೂ ಶಶಶೃಂಗವೆಂಬ ವಸ್ತುವೇ ಇಲ್ಲದಿದ್ದ ಮೇಲೆ ಶಶಶೃಂಗವೋ ಗೋಶೃಂಗವೋ ಎಂಬ ಪ್ರಶ್ನೆಯು ಹೇಗೆ ಅಸಂಗತವೋ, ಹಾಗೆಯೇ, ಪಾರಮಾರ್ಥಿಕತ್ವಕ್ಕೆ ಪ್ರಸಿದ್ಧಿಯಿದ್ದಾಗ್ಯೂ ಅನಿರ್ವಚನೀಯತ್ವಕ್ಕೆ ಎಲ್ಲಿಯೂ ಪ್ರಸಿದ್ಧಿ ಯಿಲ್ಲದಿರುವುದರಿಂದ ಆಪ್ರಶ್ನೆಯೂ ಕೂಡಲಾರದು.) ಹಾಗಾದರೆ ಅನಿರ್ವಚನೀಯತ್ವವು ಶುಕ್ತಿ

ರಜತದಲ್ಲಿ ಪ್ರಸಿದ್ಧವು. ಕಾರಣ ಪಕ್ಷವಾದ ಪ್ರಶ್ನದಲ್ಲಿ ಅಸಂದಿಗ್ಧವಿಷಯತ್ವವೆಂಬ ಹೇತುವು ಇಲ್ಲದಿರುವುದರಿಂದ ಸ್ವರೂಪಾಸಿದ್ಧಿಯು, ಎಂಬ ಪರರ ಆಶಂಕಾವಾರಣಕ್ಕಾಗಿ ೨ನೇ ಅನುಮಾನವು.

೨. ವಿಮತಃ ಸಂಶಯಃ=ವಿವಾದವಿಷಯವಾದ ಸಂಶಯವು, ನ ಯುಜ್ಯತೇ=ಕೂಡುವುದಿಲ್ಲ. ಅನುಪಲಬ್ಧಾರೋಪ್ಯಮಾಣಕೋಟಿತ್ವಾತ್=ಎಲ್ಲಿಯೂ ಅಪ್ರಸಿದ್ಧವಾದ ಆರೋಪಿಸಲ್ಪಡತಕ್ಕ ಕೋಟಿಯಿದ್ದುದರಿಂದ, ಉಕ್ತಸಂಶಯವತ್=ಹಿಂದಿನ ಸಂಶಯದಂತೆ. (ತಾ ॥ ಶಶಶೃಂಗತ್ವ ಕೋಟಿಗೆ ಪ್ರಸಿದ್ಧಿ ಹೇಗೆ ಇಲ್ಲವೋ, ಹಾಗೆಯೇ ಅನಿರ್ವಚನೀಯತ್ವ ಕೋಟಿಗೂ ಪ್ರಸಿದ್ಧಿಯಿಲ್ಲದಿರುವುದರಿಂದ ಸಂಶಯ ಕೂಡಲಾರದು. ಅಂತೂ ಅಸಂದಿಗ್ಧವಿಷಯತ್ವರೂಪಹೇತುವು ಪಕ್ಷದಲ್ಲಿದ್ದುದರಿಂದ ಸ್ವರೂಪಾಸಿದ್ಧಿಯಿಲ್ಲ. (3) ಪ್ರಶ್ನೆಯಾಗಲೀ ಸಂಶಯವಾಗಲೀ ಕೂಡುವುದಿಲ್ಲ ಎಂದರೆ ಏನು ಅರ್ಥವು? ಹುಟ್ಟುವುದಿಲ್ಲವೆಂದರ್ಥವಾದರೆ, ಹುಟ್ಟುತ್ತಿದ್ದರೂ ಇಲ್ಲವೆಂದರೆ ಪ್ರತ್ಯಕ್ಷ ಪ್ರಮಾಣಬಾಧವು. (4) ಹುಟ್ಟಿದರೂ ಕಾರಣವಿಲ್ಲವೆಂದರೆ ಕಾರ್ಯತ್ವವಿರುವುದರಿಂದಲೇ ಕರ್ತ (ಕಾರಣ)ನಿದ್ದಾನೆಂದು ಸಿದ್ಧವಾಗುವುದರಿಂದ ಅನುಮಾನಬಾಧವು. (5) ಸಂಶಯಕ್ಕೆ ಯಾವುದು ಕಾರಣವೋ ತದಿತರದಿಂದ ಹುಟ್ಟಿದ್ದೆಂದರ ಹುಟ್ಟಿಸಿದ್ದೇ ಕಾರಣವಾದುದರಿಂದ ಅದನ್ನು ಒಪ್ಪದಿದ್ದರೆ ವ್ಯಾಹತಿಯು. (ಸ್ವವಚನವಿರೋಧವು.) ಅಂತೂ ಸಂಶಯ ಪ್ರಶ್ನೆಗಳು ಕೂಡುವುದಿಲ್ಲವೆಂದು ದ್ವೈತಿಗಳಿಗೆ ಹೇಳಲಸಾಧ್ಯವು, ಎಂದು ಪರರು (ಅದ್ವೈತಿಗಳು) ಆಶಂಕಿಸಕೂಡದು, ಏಕೆಂದರೆ 'ಶಶಶೃಂಗವೋ ಗೋಶೃಂಗವೋ ಎಂದು ಪ್ರಶ್ನೆ ಕೂಡುವುದಿಲ್ಲ' ಎಂಬುವುದಕ್ಕೂ ಇದೇ ರೀತಿಯಾಗಿ (ಹುಟ್ಟಲಿಲ್ಲವಾದರೆ ಪ್ರತ್ಯಕ್ಷಬಾಧ ಇತ್ಯಾದಿ ಕ್ರಮದಿಂದಲೇ) ತಿರಸ್ಕಾರ ಬರಬೇಕಾಗುವುದು. (6) ಹಾಗಾದರೆ ಮೊಲಕ್ಕೆ ಕೋಡು ಅಪ್ರಸಿದ್ಧವಾಗಿರುವುದರಿಂದ ಕಾರಣಾದಿಗಳನ್ನು ವಿಚಾರಮಾಡದವರಿಗೆ 'ಶಶಶೃಂಗವೋ ಗೋಶೃಂಗವೋ ಎಂಬೀ ಪ್ರಶ್ನೆಯು ಹುಟ್ಟಲಾರದೆಂದು ಅಲ್ಲಿ ಅರ್ಥ' ಎಂದು ಅದ್ವೈತಿಗಳು ಸಮಾಧಾನ ಹೇಳುವುದಾದರೆ ಇಲ್ಲಿಯೂ ಭ್ರಾಂತಿರೂಪ ಕಾರಣದಿಂದ ಹುಟ್ಟಲಿ, ಅಂದರೆ ಶಶವಿಷಾಣವುಂಟೆಂದು ಭ್ರಮೆಯುಳ್ಳವನಿಗೆ 'ಒಬ್ಬನು ಕೋಡು ಅದೆ' ಎಂದು ಹೇಳಲು 'ಶಶಶೃಂಗವೋ ಗೋಶೃಂಗವೋ' ಎಂಬ ಸಂಶಯವು ಹೇಗೆ ಹುಟ್ಟುತ್ತದೋ, ಹಾಗೆಯೇ 'ಅನಿರ್ವಚನೀಯವು ಉಂಟೆಂದು ಭ್ರಮೆಯುಳ್ಳವನಿಗೆ 'ವಿಮತೋಽಭಿನ್ನಃ' ಎನ್ನುವಲ್ಲಿದ್ದ ಭೇದವೂ ಅನಿರ್ವಚನೀಯವೋ ಪಾರಮಾರ್ಥಿಕವೋ ಎಂಬುವ ಸಂಶಯಹುಟ್ಟಲಿ, ವಿಚಾರ ಧುರೀಣರಿಗೆ ಮಾತ್ರ ಹುಟ್ಟುವುದಿಲ್ಲ, ಹೀಗೆ ಪ್ರತಿಜ್ಞಾರ್ಥವು ಉಪಪನ್ನವಾಗುವುದು, ಏವಂಚ ಈ ಪ್ರಶ್ನೆಯು ಯಥಾರ್ಥಜ್ಞಾನಮೂಲಕವಲ್ಲ. ಭ್ರಾಂತಿಮೂಲಕವೇ ಆಗಿರುತ್ತದೆ. ಭ್ರಾಂತಿಮೂಲಕಗಳಾದ ವಿಕಲ್ಪದೋಷಗಳು ನಮ್ಮ ಅನುಮಾನವನ್ನು ಕೆಡಿಸಲಾರವು ॥ ೫ ॥

ಅನಿರ್ವಚನೀಯಕ್ಕೆ ಸರ್ವತ್ರ ಅಪ್ರಸಿದ್ಧಿಯೆಂದು ಹೇಳಿದ್ದು ಹೇಗೆ ಉಪಪನ್ನವಾಗುವುದು, ಎಂದಾಶಂಕಿಸಿದರೆ ಸಮಾಧಾನ ಹೇಳುತ್ತಾರೆ.

**ಮೂ ॥ ನ ಚಾನಿರ್ವಚನೀಯೇ ಕಿಂಚಿನ್ಮಾನಂ ॥ ೬ ॥**

ಅ ॥ ಚ=ಯಾವ ಕಾರಣದಿಂದ, ಅನಿರ್ವಚನೀಯೇ=ಅನಿರ್ವಚನೀಯ ವಿಷಯದಲ್ಲಿ, ಕಿಂಚಿನ್ಮಾನಂ=ಯಾವುದೊಂದು ಪ್ರಮಾಣವು, ನ=ಇಲ್ಲವೋ, (ಆದುದರಿಂದ ಅನಿರ್ವಚನೀಯವು ಪ್ರಸಿದ್ಧವಲ್ಲ.)

ತಾ ॥ (1) ಅನಿರ್ವಚನೀಯಂ=ಅನಿರ್ವಚನೀಯವು, ಪ್ರತೀತ್ಯಭಾವವತ್=ಅಪ್ರಸಿದ್ಧವು, (ಇತ್ಥಪ್ರಕಾರವಾದ ಯಥಾರ್ಥಜ್ಞಾನಕ್ಕೆ ವಿಷಯವಾಗುವುದಿಲ್ಲ) ಪ್ರಮಾಣಾಭಾವಾತ್=ಪ್ರಮಾಣವಿಲ್ಲದಿರುವುದರಿಂದ, ಎಂದುಕ್ತವಾಯಿತು. (2) ಆಗ ಅದ್ವೈತಿಗಳು– ಯಥಾರ್ಥ

ಜ್ಞಾನಕ್ಕೇನೇ ಪ್ರಮಾಣಾಪೇಕ್ಷೆಯು. ಪ್ರಸಿದ್ಧಿಮಾತ್ರಕ್ಕೆ ಪ್ರಮಾಣಾಪೇಕ್ಷೆಯಿಲ್ಲ. ಕಾರಣ ಪ್ರಮಾಣವಿಲ್ಲದಿರುವುದರಿಂದ ಪ್ರತೀತಿಯಿಲ್ಲವೆಂದು ಸಾಧಿಸಕೂಡದು. ಪ್ರಮಾಣವಿಲ್ಲದಿದ್ದರೂ ಪ್ರತೀತಿಯು ಕೂಡಬಹುದು. ಅಂತೂ ಹೇತುವು ಸಾಧ್ಯವಿಲ್ಲದಿರುವುದರಲ್ಲಿ ಇರುವುದರಿಂದ ವ್ಯಭಿಚಾರವೆಂದು ಶಂಕಿಸಲು, ದ್ವೈತಿಗಳು ಪ್ರಮಾಣವಿಲ್ಲದಿರುವುದರಿಂದ ಅನಿರ್ವಚನೀಯ ಪ್ರಮಿತಿಯಿಲ್ಲವೆಂದೇ ಸಾಧಿಸುವೆವು. ಕಾರಣ ವ್ಯಭಿಚಾರವಿಲ್ಲವೆಂದು ಪರಿಹರಿಸಿದರು. (3) ಪುನಃ ಪರರು, ಸಂಶಯವು ಪ್ರಮಿತಿಯನ್ನು ಅಪೇಕ್ಷಿಸುವುದಿಲ್ಲ. (ಅಂದರೆ ಸಂಶಯವಿಲ್ಲವೆಂದು ಉಪಪಾದಿಸಲಿಕ್ಕೆ ಅನಿರ್ವಚನೀಯ ಪ್ರಮಿತಿಯಿಲ್ಲವೆಂದು ಸಾಧಿಸತಕ್ಕದು. ಅದು ಅಯುಕ್ತವು, ಏಕೆಂದರೆ ಸಂಶಯವು ಕೋಟಿಪ್ರತೀತಿಯನ್ನು (ಸಾಮಾನ್ಯಜ್ಞಾನವನ್ನು) ಮಾತ್ರ ಅಪೇಕ್ಷಿಸುತ್ತದೆ. ಕೋಟಿಪ್ರಮಿತಿಯನ್ನು (ಯಥಾರ್ಥಜ್ಞಾನವನ್ನು) ಅಪೇಕ್ಷಿಸಲಾರದು. ಕೋಟಿಪ್ರತೀತಿಯಿಂದಲೇ ಕೋಟಿಸ್ಮರಣೆಯುಂಟಾಗಿ ಸಂಶಯವು ಕೂಡಬಹುದು. ಹೇಗೆಂದರೆ ವಂಚಕನ ಮಾತಿನಿಂದ ಶಶಶೃಂಗವುಂಟೆಂದು ತಿಳಿದವನಿಗೆ 'ವಿಷಾಣಮಸ್ತಿ' ಕೋಡು ಅದೆ ಎಂದು ಹೇಳಲು ಶಶಶೃಂಗವೋ ಗೋಶೃಂಗವೋ ಎಂಬ ಸಂಶಯವು ಹುಟ್ಟುತ್ತದೆ. ಕಾರಣ ಅನಿರ್ವಚನೀಯವು ಪ್ರಸಿದ್ಧವಲ್ಲವೆಂದು ಉಪಪಾದಿಸಲಿಕ್ಕೆ ಪ್ರಸಿದ್ಧಿಗೆ ಕಾರಣವಿಲ್ಲವೆಂದು ಹೇಳಬೇಕಿದ್ದಿತು. ಅದನ್ನು ಬಿಟ್ಟು ಪ್ರಮಿತಿಗೆ ಕಾರಣವಿಲ್ಲವೆಂದು ಹೇಗೆ ಹೇಳಿರುವುದು ಅಸಂಗತವು ಎಂದಾಶಂಕಿಸಿದರೆ ಸಂಶಯಕ್ಕೆ ಉಪಯುಕ್ತವಾದದ್ದು ಪ್ರತೀತಿಯೇ, ಎಂಬುವುದೇನೋ ನಿಜವೇ. ಆದರೂ 'ವಿಮತೋ ಭಿನ್ನಃ' ಎಂಬುವಲ್ಲಿ ಭೇದವನ್ನು ಪ್ರಮಾಣವಿಷಯವಾಗಿ ಪ್ರತಿಜ್ಞೆಮಾಡಿರುವುದರಿಂದ ಪ್ರತಿವಾದಿಗಳಾದ ಅದ್ವೈತಿಗಳಿಗೆ ಸಂಶಯಕಾರಣವಾದುದು ಅನಿರ್ವಚನೀಯಾದಿವಿಷಯಕಪ್ರಮಿತಿಯೆಂದೇ ಹೇಳಬೇಕು. (4) ಅನಿರ್ವಚನೀಯಾದಿವಿಷಯಕ ಪ್ರತೀತಿಯು ಅಯಥಾರ್ಥವೆಂದಗೀಕರಿಸಿದರೆ ಅನಿರ್ವಚನೀಯವೆಂಬರ್ಥವೇ ಇಲ್ಲದಿರುವುದರಿಂದ ಸಂಶಯವೇ ಕೂಡಲಾರದು. ಕಾರಣ ಪ್ರಮಾಣವಿಲ್ಲದಿರುವುದರಿಂದ ಅನಿರ್ವಚನೀಯಕ್ಕೆ ಪ್ರಮಿತಿಯಿಲ್ಲವೆಂದು ಸಾಧಿಸಿದರೆ ಭ್ರಮೆಯನ್ನಂಗೀಕರಿಸದಿರುವುದರಿಂದ ಪ್ರತೀತಿಯಿಲ್ಲವೆಂದೇ ಸಾಧಿಸಿದಂತೆ ಆಗುವುದು. ॥ ೬ ॥

(1) ಪುನಃ ಪರರು ಶಂಕಿಸುತ್ತಾರೆ. ಅನಿರ್ವಚನೀಯಾರ್ಥದಲ್ಲಿ ಪ್ರಮಾಣವಿಲ್ಲವೆಂಬುವುದು ಹೇಗೆ ಸಂಗತವಾಗುತ್ತದೆ. ಏಕೆಂದರೆ 'ಶುಕ್ತಿರಜತ, ರಜ್ಜುಸರ್ಪ ಇತ್ಯಾದಿಗಳು ಅನಿರ್ವಚನೀಯಗಳೆಂದು' ಪ್ರತ್ಯಕ್ಷ ಪ್ರಮಾಣವೇ ತಿಳಿಸಿಕೊಡುತ್ತದೆ. * ಬಾಧಕಜ್ಞಾನ ಹುಟ್ಟಿದ ಮೇಲೆ 'ಮಿಥ್ಯೈವ ರಜತಂ ಪ್ರತ್ಯಭಾತ್' 'ಮಿಥ್ಯಾಭೂತವಾದ ರಜತವೇ ನನಗೆ ಪೂರ್ವದಲ್ಲಿ ತೋರಿತು' ಎಂದನುವಾದ ಮಾಡುವುದರಿಂದ ಪ್ರತ್ಯಕ್ಷವಿದೆಯೆಂದು ಸಿದ್ಧವಾಯಿತು. ಮಿಥ್ಯಾ ಅನಿರ್ವಚನೀಯ ಎರಡಕ್ಕೂ ಒಂದೇ ಅರ್ಥವು. (2) ಆಗ ದ್ವೈತಿಗಳು— 'ಜ್ಞಾನವಿಲ್ಲದಿದ್ದರೂ ಗಿಳಿ ಮೊದಲಾದುವು ಅನುವಾದ ಮಾಡುವುದರಿಂದ ರಜತದಲ್ಲಿ ಮಿಥ್ಯಾತ್ವ ತೋರದಿದ್ದರೂ ಅನುವಾದ ಕೂಡಬಹುದು. ಕಾರಣ ಅನುವಾದ ಬಲದಿಂದ ಪ್ರತ್ಯಕ್ಷ ಪ್ರಮಾಣ ಕಲ್ಪನೆಯು ಹೇಗೆ ಸಂಗತವೆಂದಾಕ್ಷೇಪಿಸಿದರೆ, ಪರರು 'ಅಪ್ರಸಿದ್ಧವಾದುದನ್ನು ಆಪ್ತನು ಅನುವಾದ ಮಾಡಲಾರನು' ಎಂದರು. (3) ಪುನಃ ದ್ವೈತಿಗಳು— 'ಬಾಧಕ ಪ್ರತ್ಯಯವು ಭ್ರಮವಾದರೂ ಅನುವಾದವು ಯುಕ್ತವಾಗುವುದರಿಂದ ತನ್ನಿಮಿತ್ತವಾಗಿ ಪ್ರತ್ಯಕ್ಷವನ್ನು ಕಲ್ಪಿಸ

* ಮುತ್ತಿನ ಚಿಪ್ಪನ್ನು ನೋಡಿ ಕೆಲವೊಮ್ಮೆ 'ಇದು ಬೆಳ್ಳಿ' ಎಂಬ ಜ್ಞಾನವು ಹುಟ್ಟುವುದು. ಅದರ ಪರೀಕ್ಷಿಸಲು 'ಇದು ಬೆಳ್ಳಿಯಲ್ಲ, ಚಿಪ್ಪು' ಎಂಬ ಜ್ಞಾನವು ಅಮೇಲೆ ಹುಟ್ಟುವುದು. ಇದಕ್ಕೆ ಬಾಧಕಜ್ಞಾನವೆಂದು ಹೆಸರು. ಹಗ್ಗವನ್ನು ಹಾವೆಂದು ಭ್ರಮಿಸಿ ಆಮೇಲೆ 'ಹಾವಲ್ಲ ಹಗ್ಗವೇ' ಎಂಬ ಹುಟ್ಟುವ ಜ್ಞಾನವೂ ಬಾಧಕಜ್ಞಾನವು. ಹೀಗೆ ಎಲ್ಲೆಡೆಯಲ್ಲೂ ತಿಳುಕೊಳ್ಳ ತಕ್ಕದು.

ಕೂಡದು' ಎಂದಾಕ್ಷೇಪಿಸಿದರೆ, ಪರರು- 'ರೀತ್ಯಂತರದಿಂದ ತಿಳಿದುಕೊಂಡದ್ದನ್ನು ಚೆನ್ನಾಗಿ ತಿಳಿದುಕೊಳ್ಳುವುದೇ ಬಾಧಕ ಪ್ರತ್ಯಯವಾದುದರಿಂದ ಅದನ್ನು ಭ್ರಾಂತಿಯೆಂದು ಹೇಳಕೂಡದು,' ಎಂದರು. (4) ಪುನಃ ದ್ವೈತಿಗಳು— ಬಾಧಕಪ್ರತ್ಯಯವನ್ನು ಯಥಾರ್ಥವೆಂದಂಗೀಕರಿಸಿ ಲಿಂಗಾದಿಗಳಿಂದ ಹುಟ್ಟಿಯದೆ ಎಂದರೂ ಅನುವಾದವು ಯುಕ್ತವಾಗುವುದರಿಂದ ಆದರಿಂದ ಪ್ರತ್ಯಕ್ಷ ಕಲ್ಪನೆಯು ಹೇಗೆ ಸಂಗತವೆಂದಾಕ್ಷೇಪಿಸಿದರೆ, ಪರರು- 'ಹೇತ್ವಾದಿಗಳ ಅನುಸಂಧಾನ ವಿಲ್ಲದಿದ್ದರೂ ಬಾಧಕಪ್ರತ್ಯಯವು ಹುಟ್ಟುವುದರಿಂದ ಲಿಂಗಾದಿಗಳಿಂದ ಹುಟ್ಟಿದ್ದಲ್ಲ. ಕಾರಣ ಅನಿರ್ವಚನೀಯ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವು ಸಂಗತವೇ ಆಗುವುದು' ಎಂದು ಆಶಂಕಿಸಿ ದರೆ, ಹೀಗೆ ಸಮಾಧಾನವನ್ನು ತಿಳಿಯತಕ್ಕದು. (೧) 'ಮಿಥ್ಯಾ'ಶಬ್ದವು ಅನಿರ್ವಚನೀಯ ರೂಪಾರ್ಥವನ್ನು ಮುಖ್ಯವೃತ್ತಿಯಿಂದ ಹೇಳುತ್ತದೆ ಎಂದು ಇಟ್ಟುಕೊಂಡು ಶುಕ್ತಿರಜತ ಜ್ಞಾನವು ಭ್ರಮೆಯೆಂದು ನಿಶ್ಚಯವಿದ್ದವನು 'ಮಿಥ್ಯೈವ ರಜತಂ ಪ್ರತ್ಯಭಾತ್' ಎಂದು ಪ್ರಯೋಗವನ್ನು ಮಾಡುವುದರಿಂದ ಅನಿರ್ವಚನೀಯವಿಷಯಕಪ್ರತ್ಯಕ್ಷವನ್ನು * ಅನು ಮೇಯಿಸುತ್ತೀರೋ? (೨) ಅಥವಾ ಮಿಥ್ಯಾಶಬ್ದವು ಅನಿರ್ವಚನೀಯಾರ್ಥವನ್ನು ಮುಖ್ಯ ವೃತ್ತಿಯಿಂದ ಹೇಳದಿದ್ದರೂ ಭ್ರಮೆಯೆಂದು ನಿಶ್ಚಯವುಳ್ಳವನು ಅನಿರ್ವಚನೀಯವನ್ನು ವ್ಯವಹರಿಸುತ್ತಾನೆ ಎಂದು ಇಟ್ಟುಕೊಂಡು ಅನಿರ್ವಚನೀಯ ಪ್ರತ್ಯಕ್ಷವನ್ನು * ಅನುಮೇಯಿಸು ತ್ತೀರೋ? ಹೀಗೆ ವಿಕಲ್ಪಿಸಿ ಎರಡರಲ್ಲಿ ೧ನೇ ವಿಕಲ್ಪವನ್ನು ನಿರಾಕರಿಸುತ್ತಾರೆ.

**ಮೂ || ಮಿಥ್ಯಾಶಬ್ದೋಽನಿರ್ವಚನೀಯಂ ವದತೀತ್ಯತ್ರ ಚ || ೬ ||**

ಅ || ಮಿಥ್ಯಾಶಬ್ದಃ=ಮಿಥ್ಯೆಯೆಂಬ ಶಬ್ದವು, ಅನಿರ್ವಚನೀಯಂ=ಅನಿರ್ವಚನೀಯ ವೆಂಬ ಅರ್ಥವನ್ನು, ವದತಿ=ಹೇಳುತ್ತದೆ, ಇತ್ಯತ್ರ ಚ=ಈ ವಿಷಯದಲ್ಲಿಯೂ, ನ ಕಿಂಚಿ ನ್ಮಾನಂ= ಯಾವುದೊಂದು ಪ್ರಮಾಣವೂ ಇಲ್ಲ.

ತಾ || (1) 'ಶಕ್ತಿಗ್ರಹಂ ವ್ಯಾಕರಣೋಪಮಾನ ಕೋಶಾಪ್ತವಾಕ್ಯಾದ್ವ್ಯವಹಾರತಶ್ಚ । ವಾಕ್ಯಸ್ಯ ಶೇಷಾದ್ವಿವೃತೇರ್ವದಂತಿ ಸಾನ್ನಿಧ್ಯತಃ ಸಿದ್ಧಪದಸ್ಯ ವೃದ್ಧಾಃ' ॥ (1) ವ್ಯಾಕರಣ (2) ಉಪಮಾನ (3) ಕೋಶ (4) ಆಪ್ತವಾಕ್ಯ (5) ವ್ಯವಹಾರ (6) ಶಿಷ್ಟವಾಕ್ಯ (7) ವಿವರಣ (8) ಸಿದ್ಧಪದ ಸಾನ್ನಿಧ್ಯ, ಇವುಗಳಿಂದ ಶಕ್ತಿಜ್ಞಾನವಾಗುವುದೆಂದು ಜ್ಞಾನಿಗಳು ಹೇಳುತ್ತಾರೆ. ಪ್ರಕೃತ ಇವುಗಳಲ್ಲಿ ಯಾವ ಪ್ರಮಾಣವೂ ಇರುವುದಿಲ್ಲ. ವಾದಿಗಳು ಸಂಕೇತಮಾಡಿಕೊಂಡಿದ್ದಾರೆ, ಎಂಬುವುದರಿಂದ ಮಾತ್ರ ಅರ್ಥ ನಿಶ್ಚಯವಾಗಲಾರದು. ಕಾರಣ ಮಿಥ್ಯಾಶಬ್ದವು ಅನಿರ್ವಚ ನೀಯರೂಪವಾದ ಅರ್ಥವನ್ನು ಪ್ರತಿಪಾದಿಸುವುದಿಲ್ಲವೆಂದು ದ್ವೈತಿಗಳು ಹೇಳುವುದಾದರೆ ಬೇರೆ ಯಾವ ಅರ್ಥವನ್ನು ಪ್ರತಿಪಾದಿಸುತ್ತದೆ, ಎಂದು ಪರರು (ಅದ್ವೈತಿಗಳು) ಆಕ್ಷೇಪಿಸಿದರೆ 'ದ್ವೈತಿ ಗಳು ಅಸದ್ರೂಪವಾದ ಅರ್ಥವನ್ನು ಪ್ರತಿಪಾದಿಸುತ್ತದೆ ಎನ್ನುತ್ತೇವೆ' ಎಂದು ಉತ್ತರ ಕೊಟ್ಟರು. (2) ಆಗ ಪರರು- 'ಮಿಥ್ಯಾ'ಶಬ್ದಕ್ಕೆ ಅಸತ್ ಎಂದು ದ್ವೈತಿಗಳು ಅರ್ಥ ಹೇಳಿದರೆ ನಿರರ್ಥಕ ವೆಂದೇ ಹೇಳಿದಂತೆ ಆಯಿತು. ಅಸತ್=ಇಲ್ಲದಿರುವುದೆಂದು ಅಂಗೀಕರಿಸಿ ಪುನಃ, ಅಸ್ತಿ=ಇದೆ ಎಂದು ಹೇಳಿದರೆ ತನ್ನ ಮಾತುಗಳೇ ಪರಸ್ಪರ ವಿರುದ್ಧಗಳಾಗುವುದರಿಂದ 'ಅಸತ್ ಅಸ್ತಿ' ಎಂಬ ಪ್ರತೀತಿಯು ಕೂಡಲಾರದು. ನಿರರ್ಥಕವಾದರೆ ಪದವೇ ಆಗದೆ ಹೋಗಬೇಕಾಗುವುದು.

---

* ಭ್ರಾಂತ್ಯಾಕೃತಃ=ಭ್ರಮೆಯೆಂದು ನಿಶ್ಚಯವಿದ್ದವನು, ಅನಿರ್ವಚನೀಯ ಪ್ರತ್ಯಕ್ಷವಾನ್=ರಜತವು ಅನಿರ್ವಚನೀಯವೆಂದು ಪ್ರತ್ಯಕ್ಷವುಳ್ಳವನು, ತದಾ ತದ್ವಾಚಕ ಶಬ್ದಪ್ರಯೋಕ್ತೃತ್ವಾತ್=ಆಗ ಅದನ್ನು ಪ್ರತಿ ಪಾದಿಸುವ ಶಬ್ದವನ್ನು ಪ್ರಯೋಗಿಸುವುದರಿಂದ, ಸಂಪ್ರತಿಪನ್ನವತ್=ನಿಶ್ಚಿತನಾದವನಂತೆ, ಹೀಗೆ ಅನುಮಾನವು.

ಏಕೆಂದರೆ ಅರ್ಥವಿರುವ ಶಬ್ದ ಸ್ವರೂಪಕ್ಕೇನೆ. ಪ್ರಾತಿಪದಿಕಸಂಜ್ಞೆಯನ್ನು ಹೇಳಿ ಆ ಪ್ರಾತಿಪದಿಕದ ಮೇಲೆ 'ಸು' ಮೊದಲಾದ ಪ್ರತ್ಯಯವು ಬರುತ್ತದೆ. ಆ ಪ್ರತ್ಯಯಾಂತವಾದುದಕ್ಕೇನೆ ಪದ ಸಂಜ್ಞೆಯನ್ನು ವಿಧಿಸಿರುವರು, ಎಂದು ಪೂರ್ವಪಕ್ಷಿಸಿದರೆ, ಆಗ ದ್ವೈತಿಗಳು— ಅತ್ಯಂತಾಭಾವ ಪ್ರತಿಯೋಗಿತ್ವರೂಪವಾದ ಅಸತ್ವವಿದೆ. 'ಮಿಥ್ಯಾ' ಎಂಬ ಶಬ್ದಕ್ಕೆ ಶಶವಿಷಾಣವೆಂದರ್ಥ ಎಂದು ಹೇಳಲು ಅಸಾಧ್ಯವು. ಹಾಗೆ ಹೇಳಿದರೆ 'ಶಶವಿಷಾಣಂ ಮಿಥ್ಯಾ' ಎಂಬ ಪ್ರಯೋಗವೇ ಕೂಡದೆ ಹೋಗಬೇಕಾಗುವುದು. ಪ್ರಯೋಗವಾದರೂ ಸರ್ವಸಮ್ಮತವು. 'ಶಶವಿಷಾಣಂ ಮಿಥ್ಯಾ' ಅಂದರೆ ಶಶಶೃಂಗವು ಇಲ್ಲವೆಂದರ್ಥವು. 'ಮಿಥ್ಯೈವ ರಜತಂ' ಎಂಬುವುದಕ್ಕೆ ರಜತವಿಲ್ಲವೇ ಇಲ್ಲ ಎಂದರ್ಥ. ಅಂದರೆ ಶಶಶೃಂಗದ ಅತ್ಯಂತಾಭಾವವದೆ. ರಜತದ ಅತ್ಯಂತಾಭಾವವದೆ ಎಂದು ಹೇಳಿದಂತೆ ಆಯಿತು. ಯಾವುದರ ಅತ್ಯಂತಾಭಾವವನ್ನು ಹೇಳುತ್ತೇವೋ ಅದು ಪ್ರತಿಯೋಗಿಯು, ಎಂದು ಉತ್ತರಕೊಟ್ಟರು. (೩) 'ಸ್ವಯಂ ಅಸತ್ತಾದುದರಲ್ಲಿ ಪ್ರತಿಯೋಗಿತ್ವರೂಪ ಧರ್ಮವು ಹೇಗೆ ಬರುವುದು' ಎಂದು ಪರರು ಪುನಃ ಶಂಕಿಸಿದರೆ ಸಿದ್ಧಾಂತಿಗಳು 'ರೂಪ ಮೊದಲಾದ ಗುಣಗಳು ಕುರ್ಚಿ ಮೊದಲಾದ ಧರ್ಮಿಗಳು ಇಲ್ಲದೆ ಇರಲಾರವು. ಪ್ರತಿಯೋಗಿತ್ವವು ಹಾಗಲ್ಲ. ಕುರ್ಚಿ ಮಾಡುವುದಕ್ಕಿಂತ ಮೊದಲು ಕುರ್ಚಿಗೆ ಪ್ರಾಗಭಾವಪ್ರತಿಯೋಗಿತ್ವವದೆ. ಅಭಾವಜ್ಞಾನಕ್ಕೆ ಕಾರಣವಾದ ಜ್ಞಾನವಿಷಯತ್ವ ವಿಶೇಷಕ್ಕೇನೇ ಪ್ರತಿಯೋಗಿತ್ವವೆಂದು ಹೇಳಬೇಕು. ಅಂತೂ ಪ್ರತಿಯೋಗಿತ್ವವು ಧರ್ಮಿಸತ್ವ (ಇರುವಿಕ) ವನ್ನು ಅಪೇಕ್ಷಿಸಲಾರದು, ಎಂದು ಉತ್ತರ ಕೊಟ್ಟರು. (4) 'ಅಸತ್ತಿಗೆ ಪ್ರತೀತಿಯೇ ಇಲ್ಲದಿರುವುದರಿಂದ ಇಂತಹ ಪ್ರತಿಯೋಗಿತ್ವವು ಹೇಗೆ ಕೂಡಬಹುದು ಎಂದು ಪುನಃ ಪರರು ಶಂಕಿಸಿದರೆ, ಅಸತ್ತಿಗೆ ಪ್ರತೀತಿಯಿಲ್ಲದಿದ್ದರೆ ಅಸದ್ವೈಲಕ್ಷಣ್ಯಜ್ಞಾನವು ಕೂಡಲಾರದು, ಇತ್ಯಾದಿ ರೀತಿಯಾಗಿ ಮೇಲೆ ಅಸತ್ತಿಗೂ ಪ್ರತೀತಿ ವಿಷಯತ್ವವನ್ನು ಉಪಪಾದಿಸುವೆವು' ಎಂದುತ್ತರವನ್ನು ದ್ವೈತಿಗಳು ಕೊಟ್ಟರು. (೫) ಈ ಮೂಲದಲ್ಲಿದ್ದ 'ವದತಿ' ಎನ್ನುವುದು (1) ವದನಕ್ರಿಯಾ (ಹೇಳುತ್ತಾನೆ) ವಾಚಕವು ಎಂದು ವಿವಕ್ಷಿತವಾಗಿದ್ದರೆ ಶಬ್ದವು ಕರ್ಮವಾಗಬೇಕಿತ್ತು. ಅಂದರೆ ಮಿಥ್ಯಾಶಬ್ದಂ ಅನಿರ್ವಚನೀಯಪರತ್ವೇನ ವದತಿ=ಮಿಥ್ಯೆಯೆಂಬ ಶಬ್ದವನ್ನು ಅನಿರ್ವಚನೀಯಪರವೆಂದುದನ್ನಾಗಿ ಹೇಳುತ್ತಾನೆ. ಹೀಗೆ ಪ್ರಯೋಗವಿರಬೇಕಿತ್ತು. (2) ಶಾಬ್ದಪ್ರತೀತಿವಾಚಿಯು (ತಿಳಿಸುತ್ತಾನೆ) ಎಂದು ಅರ್ಥವು ವಿವಕ್ಷಿತವಾಗಿದ್ದರೆ ಮಿಥ್ಯಾಶಬ್ದೇನ ವದತಿ= ಮಿಥ್ಯೆಯೆಂಬ ಶಬ್ದದಿಂದ ತಿಳಿಸುತ್ತಾನೆ.' ಎಂದು ಕರಣತ್ವ ಬೇಕಿದ್ದಿತು. ಈ ಎರಡು ರೀತಿಗಳನ್ನೂ ಬಿಟ್ಟು 'ಶಬ್ದೋ ವದತಿ=ಶಬ್ದವು ಹೇಳುತ್ತದೆ ಎಂದು ಕರ್ತೃಪ್ರಯೋಗವು ಹೇಗೆ ಸಂಗತವು ಎಂದು ಪರರು ಆಶಂಕಿಸಿದರ ದ್ವೈತಿಗಳು ಎರಡನೇ ಕಲ್ಪವನ್ನು ಅಂಗೀಕರಿಸಿ ಶ್ರೀಮದಾಚಾರ್ಯರು ಕರ್ತೃತ್ವೇನ ವ್ಯಪದೇಶ ಮಾಡಿರುವರು, ಎಂದರು. ಅಂದರೆ ಅವಾಂತರವ್ಯಾಪಾರವುಳ್ಳ ಕಾರಣವು ಕರಣವೆನ್ನಿಸುತ್ತದೆ. ಕೊಡಲಿಯಿಂದ ಛೇದಿಸುತ್ತಾನೆ. ಈ ಛೇದನಕ್ರಿಯೆಯಲ್ಲಿ ಕುಠಾರವು ಕರಣವು. ಕುಠಾರವು ದಾರುವಿನಿಂದ ಸಂಯುಕ್ತವಾಗಿದೆ ಎಂದಿರುವುದರಿಂದ ದಾರುಸಂಯೋಗವೆಂಬ ಅವಾಂತರ ವ್ಯಾಪಾರಕ್ಕೆ ಕರ್ತೃ ಆಗಿದೆ. ಕುಠಾರಕ್ಕೆ ದಾರುಸಂಯೋಗವಾಗದೆ ಛೇದನವಾಗಲಾರದು. ಹಾಗಯೇ ವದತಿ=ತಿಳಿಸುತ್ತಾನೆ, ಎಂಬ ಮುಖ್ಯ ಕ್ರಿಯೆಯಲ್ಲಿ ಮಿಥ್ಯಾಶಬ್ದವು ಕರಣವು. 'ಮಿಥ್ಯಾಶಬ್ದವು ಅನಿರ್ವಚನೀಯಾರ್ಥವನ್ನು ಪ್ರತಿಪಾದಿಸುತ್ತದೆ' ಎಂಬ ಅರ್ಥ ಪ್ರತಿಪಾದನರೂಪ ಅವಾಂತರಕ್ರಿಯೆಯಲ್ಲಿ ಕರ್ತೃ ಆಗಿದೆ. ಅನಿರ್ವಚನೀಯಾರ್ಥವನ್ನು ಪ್ರತಿಪಾದಿಸುವ ಮಿಥ್ಯಾ ಶಬ್ದದಿಂದ ಅನಿರ್ವಚನೀಯಾರ್ಥವನ್ನು ತಿಳಿಸುತ್ತಾರೆ ಎಂದರ್ಥವು. ಅಂತೂ ಮುಖ್ಯ ಕ್ರಿಯೆಯಲ್ಲಿ ಕರಣವಾದಾಗ್ಯೂ ಅವಾಂತರವ್ಯಾಪಾರಕ್ಕೆ ಕರ್ತೃ ಆದುದರಿಂದ ಅದನ್ನು ವಿವಕ್ಷಾ

ಮಾಡಿಕೊಂಡು, 'ಮಿಥ್ಯಾಶಬ್ದೋ ವದತಿ' ಎಂಬೀ ಪ್ರಯೋಗವು ಸಂಗತವಾಗುತ್ತದೆ. (6) ಹಾಗಾದರೆ ಮಿಥ್ಯಾಶಬ್ದವು ಪ್ರಧಾನ ಕ್ರಿಯೆಯಲ್ಲಿ ಕರಣವಾಗಿರುವುದರಿಂದ ಅದನು ಬಿಟ್ಟು ಅವಾಂತರವ್ಯಾಪಾರಕ್ಕೆ ಕರ್ತೃ ಆಗಿದೆಯೆಂದು ವಿವಕ್ಷಿಸಿಕೊಂಡು, 'ಮಿಥ್ಯಾಶಬ್ದೋ ವದತಿ' ಎಂದು ಏಕೆ ಪ್ರಯೋಗಿಸಿರುವರು ಎಂದು ಪುನಃ ಪರರು ಶಂಕಿಸಿದರೆ, ಕರ್ತೃತ್ವವನ್ನು ನಿರ್ದೇಶ ಮಾಡಿರುವುದರಿಂದ ಮಿಥ್ಯಾಶಬ್ದವು ಅನಿರ್ವಚನೀಯಾರ್ಥವನ್ನು ಪ್ರತಿಪಾದಿಸುತ್ತದೆ ಎಂದೇ ಅದ್ವೈತಿಗಳಿಗೆ ಅಭಿಪ್ರೇತವೆಂದು ಸೂಚಿಸಲಿಕ್ಕಾಗಿ ಹಾಗೆ ಪ್ರಯೋಗಿಸಿರುವರು. 'ಮಿಥ್ಯಾ ಶಬ್ದೇನಾನಿರ್ವಚನೀಯಂ ವದತಿ' ಎಂಬ ಪ್ರಯೋಗವು ಉಭಯ ಸಾಧಾರಣವು. ಅಂದರೆ ಮಿಥ್ಯಾಶಬ್ದವು ಅನಿರ್ವಚನೀಯಾರ್ಥವನು ಮುಖ್ಯ ವೃತ್ತಿಯಿಂದ ಪ್ರತಿಪಾದಿಸಿದರೂ, ಪ್ರತಿಪಾದಿಸದೇ ಇದ್ದರೂ ಕೂಡಬಹುದು. 'ಮಿಥ್ಯಾಶಬ್ದಃ' ಎಂದು ಪ್ರಯೋಗಿಸಿದರೆ ಅನಿರ್ವಚನೀಯವೆಂಬ ಅರ್ಥವನ್ನು ಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತದೆಂದೇ ತಿಳಿಯುತ್ತದೆ. (7) 'ಮಿಥ್ಯಾ ಶಬ್ದೇನಾನಿರ್ವಚನೀಯಂ ವದತಿ' ಎಂದರೂ ಮಿಥ್ಯಾ ಶಬ್ದಕ್ಕೆ ಅನಿರ್ವಚನೀಯ ವಾಚಕತ್ವ ಕೂಡಬಹುದೆಂದು ಪರರು ಶಂಕಿಸಿದರೆ ಅದು ಸತ್ಯವೇ, ಆದರೆ ನಿಯಮವಿಲ್ಲ. ಮಿಥ್ಯಾಶಬ್ದಕ್ಕೆ ಅನಿರ್ವಚನೀಯವಾಚಕತ್ವವಿಲ್ಲದಿದ್ದರೂ ಪ್ರಯೋಗವು ಕೂಡುವುದು. (8) 'ಅನಿರ್ವಚನೀಯಾರ್ಥವನ್ನು ಮುಖ್ಯವೃತ್ತಿಯಿಂದ ಹೇಳದಿದ್ದಾಗ್ಯೂ ಮಿಥ್ಯಾಶಬ್ದದಿಂದ ಅನಿರ್ವಚನೀಯವನ್ನು ವ್ಯವಹರಿಸುತ್ತಾನೆ' ಎಂಬ ಎರಡನೇ ಪಕ್ಷದಲ್ಲಿಯೂ ಇದೇ ಉತ್ತರವು. ಮಿಥ್ಯೆಯೆಂಬ ಶಬ್ದವು ಅಮುಖ್ಯವೃತ್ತಿಯಿಂದ ಅನಿರ್ವಚನೀಯಾರ್ಥವನ್ನು ಹೇಳುತ್ತದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ವಾಚ್ಯವಾದ ಅರ್ಥಕ್ಕೆ ಅನುಪಪತ್ತ್ಯಾದಿಗಳು ಬಂದರೆ ಕಲ್ಪಿಸಬಹುದು. (9) ಪ್ರಥಮಪಕ್ಷದಲ್ಲಿ ಮಿಥ್ಯಾಶಬ್ದವು ಶಬ್ದಪರವಾಗಿ ವ್ಯಾಖ್ಯಾತವಾಯಿತು. ಈಗ ಪುರುಷಪರವಾಗಿ ವ್ಯಾಖ್ಯಾನ ಮಾಡುತ್ತಾರೆ. ('ಮಿಥ್ಯೇತಿಶಬ್ದೋ ಯಸ್ಯಾಸೌ' ಎಂಬ ವ್ಯುತ್ಪತ್ತಿಯಿಂದ) ಮಿಥ್ಯೆಯೆಂಬ ಶಬ್ದವುಳ್ಳ ಭ್ರಮೆಯೆಂದು ನಿಶ್ಚಯವಿರುವವನು, ಮಿಥ್ಯಾಶಬ್ದದಿಂದ ಅನಿರ್ವಚನೀಯವನ್ನು ಹೇಳುತ್ತಾನೆ ಎಂಬುವ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. (10) ಶುಕ್ತಿರಜತಾದಿಗಳು ಅನಿರ್ವಚನೀಯಗಳಾದುದರಿಂದ ಅಸತ್ ಎಂಬುವ ಮುಖ್ಯಾರ್ಥವು ಕೂಡದೆ ಇರಲು ಅನಿರ್ವಚನೀಯರೂಪವಾದ ಲಾಕ್ಷಣಿಕಾರ್ಥವನು ಆಶ್ರಯಿಸುತ್ತೇನೆ ಎಂದೂ ಪರರಿಗೆ ಹೇಳಲಸಾಧ್ಯವು. ಏಕೆಂದರೆ ಅನ್ಯೋನ್ಯಾಶ್ರಯದೋಷಬರುವುದು. ಶುಕ್ತಿರಜತಾದಿಗಳು ಅನಿರ್ವಚನೀಯಗಳೆಂದು ಸಿದ್ಧವಾದರೆ ಮಿಥ್ಯಾಶಬ್ದವು ಅನಿರ್ವಚನೀಯಪರವೆಂದು ಹೇಳಬಹುದು. ಮಿಥ್ಯಾಶಬ್ದವು ಅನಿರ್ವಚನೀಯ ಪರವೆಂದು ಕಲ್ಪಿಸಿ ಆ ವ್ಯವಹಾರಮೂಲಕವಾದ ಪ್ರತ್ಯಕ್ಷವನ್ನು ಕಲ್ಪಿಸಿದರೆ ಅದರಿಂದ ಅನಿರ್ವಚನೀಯ ಸಿದ್ಧಿಯಾಗುವುದು. (11) ಅನುಮಾನದಿಂದ ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವವು ಸಿದ್ಧವಾಗುತ್ತದೆ. ಆದಕಾರಣ ಹಿಂದಿನ ಅನ್ಯೋನ್ಯಾಶ್ರಯದೋಷವು ಬರುವುದಿಲ್ಲವೆಂದರೆ ಈ ಮುಂಚೆ ಮಿಥ್ಯಾಶಬ್ದಕ್ಕೆ ಅನಿರ್ವಚನೀಯ ಪರತ್ವವನ್ನುಪಪಾದಿಸಿರುವುದು ಅಸಂಗತವು. ಮತ್ತು ಅನಿರ್ವಚನೀಯವನ್ನು ಸಾಧಿಸುವ ಅನುಮಾನವನ್ನು ನಿರಾಕರಿಸುವೆವು. ಅಂತೂ ಅನಿರ್ವಚನೀಯಾರ್ಥದಲ್ಲಿ ಪ್ರತ್ಯಕ್ಷಪ್ರಮಾಣವಿಲ್ಲವೆಂದು ಸಾಧಿಸಿದ ಹಾಗಾಯಿತು ॥ ೭ ॥

ಇದರ ಮೇಲೆ ಪರರು 'ಪ್ರತ್ಯಕ್ಷಪ್ರಮಾಣದಿಂದ ಅನಿರ್ವಚನೀಯಾರ್ಥವು, ಸಿದ್ಧಿಸದಿದ್ದರೂ, 'ವಿವಾದಪದಂ= ವಿವಾದವಿಷಯವಾದುದು, ಅನಿರ್ವಚನೀಯಂ= ಅನಿರ್ವಚನೀಯವು ಬಾಧ್ಯತ್ವಾತ್= ಬಾಧಿಸಲ್ಪಡುವುದರಿಂದ, ಯತ್ ನಾನಿರ್ವಚನೀಯಂ ನ ತತ್ ಬಾಧ್ಯಂ ಯಥಾತ್ಮಾ=ಯಾವುದು ಅನಿರ್ವಚನೀಯವಲ್ಲವೋ ಅದು ಬಾಧ್ಯವಾಗಲಾರದು, ಆತ್ಮನಂತೆ ಈ

ಅನುಮಾನದಿಂದ ಸಿದ್ಧಿಸುವುದು' ಎಂದಾಶಂಕಿಸಿದರೆ ಆಚಾರ್ಯರು ಈ ಅನುಮಾನವನ್ನು ನಿರಾಕರಿಸುತ್ತಾರೆ.

**ಮೂ ॥ ಅನುಮಾನಸ್ಯ ಚಾಪ್ರಸಿದ್ಧವಿಶೇಷಣಃ ಪಕ್ಷಃ ॥ ೮ ॥**

ಅ ॥ ಅನುಮಾನಸ್ಯ ಚ=ಅನುಮಾನದ, ಪಕ್ಷಃ=ಪಕ್ಷೈಕದೇಶವಾದ ಧರ್ಮಿಯು, ಅಪ್ರಸಿದ್ಧವಿಶೇಷಣಃ=ಎಲ್ಲಿಯೂ ಪ್ರಸಿದ್ಧವಲ್ಲದ ಅನಿರ್ವಚನೀಯತ್ವವೆಂಬ ವಿಶೇಷಣವುಳ್ಳದ್ದು, ಚ ಶಬ್ದವು ಸಮುಚ್ಚಯಾರ್ಥಕವು. ಪ್ರತ್ಯಕ್ಷಪ್ರಮಾಣವನ್ನು ನಿರಾಕರಿಸಿದಂತೆಯೇ ಅನುಮಾನವನ್ನೂ ನಿರಾಕರಿಸವೆವು ಎಂದು.

ತಾ ॥ (1) ಈ ಅನುಮಾನವು ಪ್ರವೃತ್ತಿಯಾಗುವುದಕ್ಕಿಂತ ಮೊದಲು ಅನಿರ್ವಚನೀಯವು ಎಲ್ಲಿಯೂ ಪ್ರಸಿದ್ಧವಾಗದೆ ಇರುವುದರಿಂದ ಪಕ್ಷವು ಅಪ್ರಸಿದ್ಧವಾದ ವಿಶೇಷಣವುಳ್ಳದ್ದಾಯಿತು. (2) ಸಾಧ್ಯದಿಂದೊಡಗೂಡಿದ ಧರ್ಮಿಯು ಪಕ್ಷವಾದುದರಿಂದ ಸಾಧ್ಯವಿಶಿಷ್ಟಕ್ಕೆ ಸಾಧ್ಯವು ವಿಶೇಷಣವಾಗಲಾರದು, ತನಗೆ ತಾನೇ ಆಶ್ರಯವಾಗಬೇಕಾಗುವುದು. ಕಾರಣ 'ಅಪ್ರಸಿದ್ಧವಿಶೇಷಣಃ ಪಕ್ಷಃ' ಎಂಬ ನಿರ್ದೇಶವು ಹೇಗೆ ಸಂಗತವೆಂದರೆ ಪಕ್ಷಪದದಿಂದ ಪಕ್ಷದ ಏಕದೇಶವಾದ ಧರ್ಮಿಯು ಲಕ್ಷಿತವಾಗಿದೆ. ಅಥವಾ ಯಾವ ವಿಶೇಷಣದಿಂದ ಇದು ಪಕ್ಷವೋ ಅಂತಹ ವಿಶೇಷಣವು ಅಪ್ರಸಿದ್ಧವಾಗಿದೆ. (3) (1) ಸವ್ಯಭಿಚಾರ (2) ವಿರುದ್ಧ (3) ಸತ್ಪ್ರತಿಪಕ್ಷ (4) ಅಸಿದ್ಧ (5) ಬಾಧಿತ ಈ ೫ ಹೇತ್ವಾಭಾಸಗಳಲ್ಲಿ ಅಪ್ರಸಿದ್ಧ ವಿಶೇಷಣತ್ವವು ಸೇರದೆ ಇರುವುದರಿಂದ ಅದು ಅಸಾಧಕತ್ವದಲ್ಲಿ ಹೇಗೆ ಹೇತುವಾಗುವುದು ಎಂದಾಶಂಕಿಸಿದರೆ ಅನುಮಾನಕ್ಕೆ ಮುಖ್ಯ ಅಂಗಗಳಾದ ವ್ಯಾಪ್ತಿಪಕ್ಷಧರ್ಮತೆಗಳನ್ನು ಕೆಡಿಸೋಣದರಿಂದ ಅಸಾಧಕತ್ವದಲ್ಲಿ ಹೇತುವಾಗುವುದು. ಅಂದರೆ ಯತ್ರ ಧೂಮಃ ತತ್ರಾಗ್ನಿಃ= ಹೊಗೆಯಿದ್ದಲ್ಲಿ ಬೆಂಕಿಯುದೆ, ಇದು ವ್ಯಾಪ್ತಿಯು. ಬೆಂಕಿಯು ಅಡಿಗೆಮನೆಯಲ್ಲಿ ಪ್ರಸಿದ್ಧವಾದುದರಿಂದ ವ್ಯಾಪ್ತಿಯು ಕೂಡುತ್ತದೆ. ಅನಿರ್ವಚನೀಯತ್ವಕ್ಕೆ ಎಲ್ಲಿಯೂ ಪ್ರಸಿದ್ಧಿಯಿಲ್ಲದಿರುವುದರಿಂದ ಈ ಅನುಮಾನದಲ್ಲಿ ವ್ಯಾಪ್ತಿಯು ಕೂಡಲಾರದು. ಹೇತುವು ಪಕ್ಷದಲ್ಲಿದ್ದರೆ 'ಪಕ್ಷಧರ್ಮತಾ' ಎನ್ನಿಸುತ್ತದೆ. ಪಕ್ಷವೇ ಇಲ್ಲದಿದ್ದಮೇಲೆ ಹೇತುವು ಎಲ್ಲಿರುವುದು. ಹೇತುವಿಗೆ ಪಕ್ಷಧರ್ಮತ್ವ ಕೂಡುವುದಿಲ್ಲ. ಅಂತೂ ಇವುಗಳು ಇಲ್ಲದಿರುವುದರಿಂದ ಅನುಮಾನವು ಸಾಧಕವಾಗಲಾರದು. ಸಂದಿಗ್ಧಸಾಧ್ಯವುಳ್ಳದ್ದು ಪಕ್ಷವು. ವಿಶೇಷಣವು ಅಪ್ರಸಿದ್ಧವಾದರೆ ಅದನ್ನು ವಿಷಯೀಕರಿಸುವ ಸಂದೇಹವೂ ಕೂಡಲಾರದು. (4) ಅಪ್ರಸಿದ್ಧವಿಶೇಷಣತ್ವವು ಕೇವಲವ್ಯತಿರೇಕಿಗೆ ದೂಷಣವಲ್ಲವೆಂದು ಹೇಳಕೂಡದು. * ಅನ್ವಯ ವ್ಯತಿರೇಕಿಯಲ್ಲಿಯೂ * ಕೇವಲಾನ್ವಯಿಯಲ್ಲಿಯೂ ಸಪಕ್ಷವಿದ್ದುದರಿಂದ ಸಾಧ್ಯಪ್ರಸಿದ್ಧಿಯುದೆ. ಕಾರಣ ವಿಶೇಷಣವು ಅಪ್ರಸಿದ್ಧವಲ್ಲ. ಅಂತೂ ಅವುಗಳಲ್ಲಿ ಅಪ್ರಸಿದ್ಧವಿಶೇಷಣತ್ವವು ಕೂಡಲಾರದು. *ಕೇವಲ ವ್ಯತಿರೇಕಿಯಲ್ಲಿಯೂ ದೂಷಣವಾಗದಿದ್ದರೆ ಅಪ್ರಸಿದ್ಧವಿಶೇಷಣತ್ವರೂಪದೋಷವೇ ಇಲ್ಲವೆಂದಾಗುವುದು. (5) ವಿಶೇಷಣವು ಅಪ್ರಸಿದ್ಧವಾದರೆ ವ್ಯಾಪ್ತಿ ಪಕ್ಷಧರ್ಮತೆಗಳು ಇರುವುದಿಲ್ಲವೆಂದುಕ್ತವಾಯಿತು. ಕೇವಲ ವ್ಯತಿರೇಕಿಯಲ್ಲಿ ಅಪ್ರಸಿದ್ಧವಿಶೇಷಣತ್ವವು ದೋಷವಲ್ಲವೆಂದು ಹೇಳುವವರು ವ್ಯಾಪ್ತ್ಯಾದಿಗಳನ್ನು ಉಪಪಾದನಮಾಡಬೇಕು. ಅದನ್ನು ಮಾಡದೆ ಕೇವಲ ವ್ಯತಿರೇಕಿತ್ವವನ್ನು ಮಾತ್ರ ಹೇಳುವುದು ಉಪಯುಕ್ತವಲ್ಲ. (6) ಯಾವುದು ಅನಿರ್ವಚನೀಯವಲ್ಲವೋ ಅದು ಬಾಧ್ಯವಲ್ಲ. ಆತ್ಮನಂತೆ ಎಂದು * ವ್ಯತಿರೇಕ

* ಸಾಧ್ಯಾಭಾವಕ್ಕೂ, ಹೇತ್ವಭಾವಕ್ಕೂ ವ್ಯಾಪ್ತಿಯಿದ್ದರೆ ವ್ಯತಿರೇಕವ್ಯಾಪ್ತಿಯು. ಉದಾ– ಎಲ್ಲಿ ವಹ್ನಿಯಿಲ್ಲವೋ ಅಲ್ಲಿ ಹೊಗೆಯಿಲ್ಲ. ಕೊಳದಂತೆ.

ವ್ಯಾಪ್ತಿಯು ಗೃಹೀತವಾಗುತ್ತದೆ ಎಂದರೆ ಪ್ರತಿಯೋಗಿ (ಅನಿರ್ವಚನೀಯ) ಜ್ಞಾನವಿಲ್ಲದಿದ್ದರೆ ವ್ಯತಿರೇಕ ವ್ಯಾಪ್ತಿಯನ್ನೂ ತಿಳಿಯಲಸಾಧ್ಯವು. (7) ಹೀಗಾದರೆ ಎಲ್ಲಿಯೂ ವ್ಯತಿರೇಕ ವ್ಯಾಪ್ತಿಯೇ ಇಲ್ಲವೆಂದಾಗುವುದೆಂದನ್ನಕೂಡದು. ಸಾಮಾನ್ಯಾಕಾರವಾಗಿ ಎಲ್ಲಿಯಾದರೂ ಪ್ರತಿಯೋಗಿಯು ಪ್ರಸಿದ್ಧವಾಗಿದ್ದರೆ ಅದರ ಅಭಾವವನ್ನು ತಿಳಿಯಲು ಸಾಧ್ಯವಾದುದರಿಂದ ವ್ಯತಿರೇಕವ್ಯಾಪ್ತಿಜ್ಞಾನ ಬರಬಹುದು. ಸಾಮಾನ್ಯಾಕಾರವಾಗಿಯೂ, ಪ್ರತಿಯೋಗಿಯು ಪ್ರಸಿದ್ಧವಾಗದಿದ್ದರೆ ಕೇವಲ ವ್ಯತಿರೇಕಿ ಅನುಮಾನಕ್ಕೆ ಭಂಗಬರುವುದು ಇಷ್ಟವೇ. (8) ಸತ್ವಾಸತ್ವೇ=ಸತ್ವಾಸತ್ವಗಳು, ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿನೀ=ಒಂದು ಧರ್ಮಿಯಲ್ಲಿರತಕ್ಕದು ಯಾವುಗಳ ಅತ್ಯಂತಾಭಾವವೋ ಅದರ ಪ್ರತಿಯೋಗಿಗಳು, ಧರ್ಮತ್ವಾತ್=ಧರ್ಮವಾದುದರಿಂದ, ರೂಪ ರಸವತ್=ರೂಪರಸಗಳಂತೆಯೇ, ಅಂದರೆ ರೂಪರಸಗಳಲ್ಲಿ ಧರ್ಮತ್ವವೆಂಬ ಹೇತುವದೆ. ವಾಯುವಿನಲ್ಲಿ ರೂಪರಸಗಳು ಇಲ್ಲ. ವಾಯುವಿನಲ್ಲಿರತಕ್ಕ ರೂಪರಸಾತ್ಯಂತಾಭಾವಕ್ಕೆ ಪ್ರತಿ ಯೋಗಿಗಳು ರೂಪರಸಗಳು, ಅಂತೂ ಸಾಧ್ಯವು ಸಿದ್ಧವಾಗಿಯದೆ. ಹಾಗೆಯೇ ಸತ್ವಾಸತ್ವ ಗಳಲ್ಲಿಯೂ ಧರ್ಮತ್ವವೆಂಬ ಹೇತುವದೆ. ಸಾಧ್ಯವನ್ನು ಸಾಧಿಸುವೆವು, ಒಂದು ಧರ್ಮಿಯಲ್ಲಿ ಸತ್ವಾಸತ್ವಗಳ ಅತ್ಯಂತಾಭಾವವದೆ, ಅದರ ಪ್ರತಿಯೋಗಿಗಳು ಸತ್ವಾಸತ್ವಗಳು. ಈ ಅನುಮಾನ ದಿಂದ ಸಾಮಾನ್ಯಾಕಾರವಾಗಿ ಅನಿರ್ವಚನೀಯತ್ವವು ಸತ್ವವೂ ಅಸತ್ವವೂ ಇಲ್ಲದಿರುವ ಒಂದು ವಸ್ತುವು (ಸದಸದ್ವೈಲಕ್ಷಣ್ಯವು) ಸಿದ್ಧವಾಗುವುದು. ಆ ಅನಿರ್ವಚನೀಯತ್ವವು ಶುಕ್ತಿರಜತ ಮೊದಲಾದ ಧರ್ಮಿವಿಶೇಷಗಳನ್ನು ಆಶ್ರಯಿಸಿಕೊಂಡು ಅದೆ ಎಂಬುವುದನ್ನು ಹಿಂದಿನ ಕೇವಲ ವ್ಯತಿರೇಕಿ ಅನುಮಾನದಿಂದ ಸಾಧಿಸುವೆವು. ಆ ಕಾರಣ ಅಪ್ರಸಿದ್ಧವಿಶೇಷಣತ್ವರೂಪವಾದ ದೋಷವು ಬರುವುದಿಲ್ಲ, ಎಂದೂ ಅದ್ವೈತಿಗಳಿಗೆ ಹೇಳಲಾಗುವುದಿಲ್ಲ ಏಕೆಂದರೆ ಈ ಅನುಮಾನಕ್ಕೆ ಅಭಿಧೇಯತ್ವಾದಿಗಳಲ್ಲಿ * ವ್ಯಭಿಚಾರಬರುವುದು. (9) ಅವುಗಳನ್ನು ಪಕ್ಷತುಲ್ಯಗಳೆಂದಟ್ಟು ಕೊಂಡರೆ ವ್ಯಾಹತಿಯು. ಅಂದರೆ 'ಅಭಿಧೇಯತ್ವಾದಿಕಂ=ಅಭಿಧೇಯತ್ವ ಮೊದಲಾದುದು, ಕಿಂಚಿನ್ನಿಷ್ಠಾತ್ಯಂತಾಭಾವಪ್ರತಿಯೋಗಿ=ಯಾವುದೋ ಒಂದು ವಸ್ತುವಿನಲ್ಲಿರತಕ್ಕ ಅಭಿಧೇಯ ತ್ವಾತ್ಯಂತಾಭಾವಕ್ಕೆ ಪ್ರತಿಯೋಗಿಯು, ಧರ್ಮತ್ವಾತ್=ಧರ್ಮವಾದುದರಿಂದ' ಎಂದು ಅನುಮೇಯಿಸಿದರೆ ಯಾವ ವಸ್ತುವಿನಲ್ಲಿರತಕ್ಕ ಅತ್ಯಂತಾಭಾವಪ್ರತಿಯೋಗಿತ್ವವು ಸಾಧ್ಯವೋ ಆ ವಸ್ತುವೂ ಕಿಂಚಿತ್ ಮೊದಲಾದ ಶಬ್ದಗಳಿಂದ ಅಭಿಧೇಯವಾಗಿದೆ. ಕಿಂಚಿದಾದಿಪದಾಭಿಧೇಯತ್ವ ವನ್ನು ಒಪ್ಪಿಕೊಂಡು ಅಲ್ಲಿ ಅಭಿಧೇಯತ್ವವಿಲ್ಲವೆಂದು ಸಾಧಿಸಿದರೆ ವ್ಯಾಹತಿಯು (ಸ್ವವಚನ ವಿರೋಧವು.) (10) ಸರ್ವೇ ಧರ್ಮಾಃ=ಎಲ್ಲಾ ಧರ್ಮಗಳೂ, ಕಿಂಚಿನ್ನಿಷ್ಠಾತ್ಯಂತಾಭಾವ ಪ್ರತಿಯೋಗಿನಃ=ಯಾವುದೋ ಒಂದು ಪದಾರ್ಥದಲ್ಲಿದ್ದ ಅತ್ಯಂತಾಭಾವ ಪ್ರತಿಯೋಗಿಗಳು, ಧರ್ಮತ್ವಾತ್=ಧರ್ಮವಾದುದರಿಂದ, ಹೀಗೆ ಸಾಧಿಸಿದರೆ, ಸರ್ವಧರ್ಮಾತ್ಯಂತಾಭಾವಾಧಿಕರಣ ತ್ವದಲ್ಲಿ ವ್ಯಭಿಚಾರವು, ಯಾವ ಪದಾರ್ಥದಲ್ಲಿರತಕ್ಕ ಅತ್ಯಂತಾಭಾವಪ್ರತಿಯೋಗಿತ್ವವೋ ಆ ಪದಾರ್ಥದಲ್ಲಿ ಸರ್ವಧರ್ಮಾಭಾವಾಧಿಕರಣತ್ವರೂಪವಾದ ಧರ್ಮವಿದ್ದುದರಿಂದ ವ್ಯಭಿಚಾರವು. ಅಂದರೆ ಸರ್ವಧರ್ಮಗಳು ಕಿಂಚಿನ್ನಿಷ್ಠಾತ್ಯಂತಾಭಾವಪ್ರತಿಯೋಗಿಗಳು ಆಗಲಿಲ್ಲ. (11) ಅದಕ್ಕೂ ಪಕ್ಷತ್ವವನ್ನಂಗೀಕರಿಸಿದರೆ ಅಂದರೆ ಸರ್ವಧರ್ಮಾತ್ಯಂತಾಭಾವಾಧಿಕರಣತ್ವರೂಪ ಧರ್ಮಕ್ಕೂ ಯತ್ಕಿಂಚಿನ್ನಿಷ್ಠಾತ್ಯಂತಾಭಾವಪ್ರತಿಯೋಗಿತ್ವವನ್ನು ಸಾಧಿಸಿದರೆ ಯಾವ ಪದಾರ್ಥ

---

* ಸಾಧ್ಯವಿಲ್ಲದಿರುವುದರಲ್ಲಿ ಹೇತುವಿದ್ದರೆ ವ್ಯಭಿಚಾರವು. ಅಭಿಧೇಯತ್ವಪ್ರಮೇಯತ್ವಾದಿಗಳು ಎಲ್ಲಾ ಕಡೆಗಳಲ್ಲಿಯೂ ಇರತಕ್ಕವುಗಳು. ಕಾರಣ ಯಾವ ಧರ್ಮಿಯಲ್ಲಿಯೂ ಅಭಿಧೇಯತ್ವಾತ್ಯಂತಾಭಾವವಿರುವು ದಿಲ್ಲ. ಆದುದರಿಂದ ಸಾಧ್ಯವಿಲ್ಲ. ಧರ್ಮತ್ವವಿದೆ.

ದಲ್ಲಿರತಕ್ಕ ಅತ್ಯಂತಾಭಾವಪ್ರತಿಯೋಗಿತ್ವವನ್ನು ಸಾಧಿಸುತ್ತೀರೋ ಆ ಪದಾರ್ಥಕ್ಕೆ ಭಾವತ್ವ, ಅಭಾವತ್ವ, ನಿತ್ಯತ್ವ, ಅನಿತ್ಯತ್ವ, ಚೇತನತ್ವ, ಅಚೇತನತ್ವ ಮೊದಲಾದ ವಿರುದ್ಧ ಸರ್ವಧರ್ಮಗಳನೂ ಅಂಗೀಕರಿಸಬೇಕಾಗುವುದು. (12)ಅಲ್ಲದೆ ಈ ಅನುಮಾನಕ್ಕೆ ಅವಿರುದ್ಧತ್ವವೆಂಬ ಉಪಾಧಿಯೂ ಬರುವುದು. ಸಾಧ್ಯವಿದ್ದಲ್ಲೆಲ್ಲಾ ಇದ್ದು ಸಾಧನವಿದ್ದಲ್ಲಿಲ್ಲದಿರುವಧರ್ಮವು ಉಪಾಧಿಯು. ಪ್ರಕೃತ ರೂಪರಸಗಳಲ್ಲಿ ಸಾಧ್ಯವಿದೆ, ಅವಿರುದ್ಧತ್ವವೂ ಅದೆ. ಕಾರಣ ಉಪಾಧಿಯು ಸಾಧ್ಯವ್ಯಾಪಕವಾಯಿತು. ಸತ್ವಾಸತ್ವಗಳಲ್ಲಿ ಧರ್ಮತ್ವರೂಪಹೇತುವಿದೆ. ಇವುಗಳಿಗೆ ವಿರೋಧವೇ ಇರುವುದರಿಂದ ಅವಿರುದ್ಧತ್ವವೆಂಬ ಉಪಾಧಿಯು ಇರುವುದಿಲ್ಲ. ಕಾರಣ ಸಾಧನಾವ್ಯಾಪಕವಾಯಿತು. (13) ಸತ್ವಾಸತ್ವಗಳಿಗೂ ವಿರೋಧವಿಲ್ಲ ಎಂದೆನ್ನಕೂಡದು. ಅನಿರ್ವಚನೀಯಾರ್ಥವು ಸಿದ್ಧವಾಗುವುದಕ್ಕಿಂತ ಮೊದಲು ವಿರೋಧವೇ ತೋರುತ್ತದೆ. (14) ಅದ್ವೈತಿಗಳು ಅಪ್ರಸಿದ್ಧವಿಶೇಷಣತ್ವವನ್ನು ದೋಷವೆಂದಂಗೀಕರಿಸಿರುವುದರಿಂದ ಅವರ ರೀತಿಯಿಂದಲೇ ದೂಷಿಸಿದ್ದೇಂದು ತಿಳಿಯತಕ್ಕದು. ಪ್ರಮಾಣಲಕ್ಷಣ (ಪು. ೫೬.) ಮೊದಲಾದ ಗ್ರಂಥಗಳಲ್ಲಿ ಆಶ್ರಯಾಸಿದ್ಧಿ, ಸಾಧ್ಯಾಸಿದ್ಧಿ ಮೊದಲಾದುವುಗಳು ದೋಷಗಳಲ್ಲವೆಂದು ಶ್ರೀಮದಾಚಾರ್ಯರು ಸಮರ್ಥಿಸಿರುವರು. ಸಿದ್ಧಾಂತಿಗಳ ಮತದ ಪ್ರಕಾರ ವ್ಯಾಹತಿ ಮೊದಲಾದ ದೋಷಗಳನ್ನು ಈ ಅನುಮಾನದಲ್ಲಿ ಹೇಳಬೇಕು. ॥ ೮ ॥

ಹಾಗಾದರೆ 'ವಿವಾದಪದಂ=ವಿವಾದವಿಷಯವಾದುದು, ಮಿಥ್ಯಾ=ಮಿಥ್ಯೆಯಾದುದು, ಬಾಧ್ಯತ್ವಾತ್=ಬಾಧ್ಯವಾದುದರಿಂದ, ಈ ಅನುಮಾನವು ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವ ವಿಷಯದಲ್ಲಿ ಪ್ರಮಾಣವು. ಮಿಥ್ಯಾತ್ವವು ಅಸತಿನಲ್ಲಿ ಪ್ರಸಿದ್ಧವಾದುದರಿಂದ ಅಪ್ರಸಿದ್ಧ ವಿಶೇಷಣತ್ವವೆಂಬ ದೋಷಕ್ಕೆ ಅವಕಾಶವಿಲ್ಲವು. ಸತ್ಯವಿವೇಕ (ಸತ್ಯಭೇದ) ರೂಪವಾದ ಮಿಥ್ಯಾತ್ವವು ಅಸತ್ತಿನಲ್ಲಿಯೂ ಅನಿರ್ವಚನೀಯದಲ್ಲಿಯೂ ಸಮವೆ. ಅಂತಹ ಮಿಥ್ಯಾತ್ವವು ಈ ಅನುಮಾನದಿಂದ ಸಿದ್ಧವಾಗುತ್ತಿರಲು 'ಇದಂ ಅಸತ್ ನ ಪ್ರತೀತತ್ವಾತ್=ತೋರುವುದರಿಂದ ಇದು ಅಸತ್ತಲ್ಲ' ಎಂಬ ಹೇತುವಿನಿಂದ ಅಸತ್ವವನ್ನು ನಿರಾಕರಿಸಲು ಅನಿರ್ವಚನೀಯತ್ವವೇ ಸಿದ್ಧವಾಗುವುದು ಎಂಬೀ ಅದ್ವೈತಿಗಳ ಆಶಂಕೆಯನ್ನು ನಿರಾಕರಿಸುತ್ತಾರೆ.

**ಮೂ ॥ ನ ಚ ಧೂಮತ್ವವನ್ಮಿಥ್ಯಾತ್ವಮಿತ್ಯುಭಯಸಂಪ್ರತಿಪನ್ನಂ ಸಾಮಾನ್ಯಮಸ್ತಿ ॥ ೯ ॥**

ಅ ॥ ಧೂಮತ್ವವತ್=ಧೂಮತ್ವದಂತೆ, ಅಂದರೆ ಬಾಷ್ಪಾರೋಪಿತವಾದ ಧೂಮ, ಸಹಜ ಧೂಮ ಈ ಎರಡರಲ್ಲಿ ಧೂಮತ್ವಸಾಮಾನ್ಯವು ಹೇಗೆ ಇಲ್ಲವೋ ಹಾಗೆಯೇ, ಮಿಥ್ಯಾತ್ವಮಿತಿ=ಮಿಥ್ಯಾತ್ವರೂಪವಾದ, ಸಾಮಾನ್ಯಂ=ಧರ್ಮವು, ಉಭಯಸಂಪ್ರತಿಪನ್ನಂ, ಉಭಯ=ಅಸತ್ ಅನಿರ್ವಚನೀಯಗಳೆಂಬ ಎರಡರಲ್ಲಿ. ಸಂಪ್ರತಿಪನ್ನಂ=ವಾದಿಪ್ರತಿವಾದಿಗಳಿಗೆ ಸಮ್ಮತವಾದುದು, ನ ಚ ಅಸ್ತಿ=ಇಲ್ಲವೇಇಲ್ಲ, ಚ ಶಬ್ದವು 'ಅನಿರ್ವಚನೀಯತ್ವ ಸಾಧಕವಾದ ಅನುಮಾನದಂತೆ ಮಿಥ್ಯಾತ್ವ ಸಾಧಕವಾದ ಅನುಮಾನಕ್ಕೂ ದೋಷವಿದೆಯೆಂದು' ಸಮುಚ್ಚಯಾರ್ಥಕವು.

ತಾ ॥ (1) ಮಿಥ್ಯಾತ್ವರೂಪವಾದ ಧರ್ಮವು ಅಸತ್, ಅನಿರ್ವಚನೀಯ ಇವೆರಡರಲ್ಲಿಯೂ ಇದೆಯೆಂದು ವಾದಿಪ್ರತಿವಾದಿಗಳಿಬ್ಬರಿಗೂ ಸಮ್ಮತವಾಗಿದ್ದರೆ ಅನಿರ್ವಚನೀಯತ್ವವು ಸಿದ್ಧವಾಗುವುದು. ಅನುಮಾನದಿಂದ ಸಾಧಿಸುವುದಕ್ಕಿಂತ ಮೊದಲು ಅನಿರ್ವಚನೀಯವು ಎಲ್ಲಿಯೂ ಪ್ರಸಿದ್ಧವಾಗದಿರುವುದರಿಂದ ಉಭಯವಾದಿಗಳಿಗೆ ಸಮ್ಮತಿಯೇ ಇಲ್ಲವು ಆಶ್ರಯವೇ

ಸಿದ್ಧವಾಗದಿರಲು ಧರ್ಮವು ಹೇಗೆ ಸಿದ್ಧವಾಗುವುದು. ಬಾಷ್ಪದಲ್ಲಿ ಆರೋಪಿತವಾದ ಧೂಮವೇ ಅಪ್ರಸಿದ್ಧವಾದುದರಿಂದ ಅಂತಹ ಧೂಮದಲ್ಲಿಯೂ ಸಹಜಧೂಮದಲ್ಲಿಯೂ ಎರಡರಲ್ಲಿಯೂ ಇರುವ ಧೂಮತ್ವರೂಪ ಧರ್ಮವು ಹೇಗೆ ಸಿದ್ಧವಾಗಲಾರದೋ ಹಾಗೆಯೇ ಪ್ರಕೃತದಲ್ಲಿಯೂ ಸಿದ್ಧವಾಗಲಾರದು. ಅಂತಹ ಧರ್ಮವಿರುವುದಾದರೆ ಬಾಷ್ಪಾರೋಪಿತವಾದ ಧೂಮದಲ್ಲಿಯೂ ಧೂಮತ್ವವಿರಬೇಕಾಗುವುದು. ಕಾರಣ ಮಿಥ್ಯಾತ್ವವನ್ನು ಸಾಧಿಸಿದಾಗ ಅಸತ್ವದ ಜ್ಞಾನವೇ ಬರುವುದು, ಅನಿರ್ವಚನೀಯತ್ವದ ಜ್ಞಾನ ಬರುವುದಿಲ್ಲ. ಪುನಃ 'ಇದಂ ಅಸತ್ ನ, ಪ್ರತೀತತ್ವಾತ್' ಎಂಬ ಅನುಮಾನದಿಂದ ಅಸತ್ವವನ್ನು ನಿಷೇಧಮಾಡಿದ ಪಕ್ಷದಲ್ಲಿ * ಸತ್ಪ್ರತಿಪಕ್ಷಿತವಾಗುವುದು. ಹಾಗಾದರೆ ಎರಡೂ ಅಪ್ರಮಾಣಗಳಾಗಬೇಕಾಗುವುವು. ಅಲ್ಲದೆ ಅಸತ್ತಿಗೂ ಪ್ರತೀತಿಯುಂಟೆಂದು ಸಮರ್ಥಿಸುವೆವು. ಆಕಾರಣ 'ಇದಂ ಅಸತ್ ನ' ಎಂದು ನಿಷೇಧಿಸುವುದೂ ಅಸಂಗತವು. (2) ಸತ್ಪ್ರತಿಪಕ್ಷಾನುಮಾನದಿಂದ ಎರಡು ಅನುಮಾನಗಳಿಗೂ ಅಪ್ರಾಮಾಣ್ಯ ಹೇಳುವುದಾದರೆ ದ್ವೈತಿಗಳಿಗೆ ಈಶ್ವರಸಿದ್ಧಿಯಾಗದೆ ಹೋಗಬೇಕಾಗುವುದು. ಏಕೆಂದರೆ '(1) ಕ್ಷಿತ್ಯಾದಿಕಂ = ಭೂಮಿ ಮೊದಲಾದ ಎಲ್ಲಾ ವಸ್ತುವು, ಸಕರ್ತೃಕಂ = ಕರ್ತೃಸಹಿತವಾದುದು, ಕಾರ್ಯತ್ವಾತ್ = ಹುಟ್ಟುವುದರಿಂದ, ಘಟವತ್ = ಮಡಿಕೆಯಂತೆ,' ಈ ಅನುಮಾನದಿಂದ ಕರ್ತನು ಮಾತ್ರ ಇದ್ದಾನೆಂದು ಸಿದ್ಧವಾಯಿತು. (2) 'ಅಯಂ ಕರ್ತಾ = ಇಂತಹ ಕರ್ತನು, ಅಸರ್ವಜ್ಞಃ ನ = ಅಸರ್ವಜ್ಞನು ಅಲ್ಲ (ಸರ್ವಜ್ಞನೇ) ಕ್ಷಿತ್ಯಾದಿ ಸರ್ವ ಕರ್ತೃತ್ವಾತ್ = ಭೂಮಿ ಮೊದಲಾದ ಸರ್ವ ವಸ್ತುಗಳನ್ನು ಮಾಡುವುದರಿಂದ, ವ್ಯತಿರೇಕೇಣ ದೇವದತ್ತವತ್ = ದೇವದತ್ತನು ಸರ್ವಜ್ಞನೂ ಅಲ್ಲ, ಸರ್ವಕರ್ತನೂ ಅಲ್ಲ.' ಈ ಪರಿಶೇಷಾನುಮಾನದಿಂದ ಈಶ್ವರನನ್ನು ಸಾಧಿಸಬೇಕು. ಅದಾದರೂ ಈಶ್ವರನು ಸಿದ್ಧನಾಗುವುದಕ್ಕಿಂತ ಮೊದಲು ಸರ್ವಜ್ಞಾಸರ್ವಜ್ಞ ಕರ್ತರಲ್ಲಿರುವ ಕರ್ತೃತ್ವರೂಪಧರ್ಮವೇ ಸಿದ್ಧಿಸದಿರುವುದರಿಂದ ಅಯುಕ್ತವು. ಅಂತೂ 'ಕ್ಷಿತ್ಯಾದಿಕಂ ಸಕರ್ತೃಕಂ' ಎಂದು ಹೇಳುವಾಗ ಅಸರ್ವಜ್ಞನಾದ ಕರ್ತನೇ ಪ್ರತೀತನಾಗುವುದರಿಂದ 'ಅಯಂ ಕರ್ತಾ ಅಸರ್ವಜ್ಞೋ ನ' ಎನ್ನುವಾಗ ಸರ್ವಜ್ಞನೇ ತೋರುವನು, ಕಾರಣ ಸತ್ಪ್ರತಿಪಕ್ಷಿತವಾಯಿತು. ಅಂತೂ ಈಶ್ವರನೇ ಸಿದ್ಧನಾಗದೆ ಹೋಗುವನು. ಎಂದು ಪರರು ಆಶಂಕಿಸಕೂಡದು. ಏಕೆಂದರೆ 'ಕ್ಷಿತ್ಯಾದಿಕಂ ಸಕರ್ತೃಕಂ' ಎಂಬ ಅನುಮಾನದಲ್ಲಿ ಕ್ಷಿತ್ಯಾದಿ ಕರ್ತೃತ್ವದಿಂದ ಭಿನ್ನವಾದ ಈಶ್ವರತ್ವವನ್ನು ಸಾಧಿಸತಕ್ಕುದಲ್ಲ. ಆದಪ್ರಯುಕ್ತ ಪರಿಶೇಷಾನುಮಾನಕ್ಕೆ ಪ್ರಸಕ್ತಿಯೇ ಇಲ್ಲ. ಸರ್ವಜ್ಞತ್ವ ಮೊದಲಾದ ಧರ್ಮಗಳು ಕ್ಷಿತ್ಯಾದಿ ಸರ್ವಕರ್ತೃತ್ವದಲ್ಲಿಯೇ ಅಂತರ್ಭೂತಗಳಾಗಿವೆ. (3) ಯಾರು ಕಾರ್ಯತ್ವಾನುಮಾನದಿಂದ ಕರ್ತನುಮಾತ್ರ ಸಿದ್ಧನಾಗುತ್ತಾನೆಂದು ಅಂಗೀಕರಿಸಿ ಸಾರ್ವಜ್ಞ್ಯಾದಿಗಳನ್ನು ಸಾಧಿಸಲಿಕ್ಕೆ

---

* ಯಾವುದಕ್ಕೆ ಸಾಧ್ಯಾಭಾವವನ್ನು ಸಾಧಿಸುವ ಬೇರೆ ಒಂದು ಹೇತುವಿದೆಯೋ ಅದು ಸತ್ಪ್ರತಿಪಕ್ಷಿತವು. (1) ಶಬ್ದಃ = ಶಬ್ದವು, ನಿತ್ಯಃ = ನಿತ್ಯವು, ಶ್ರಾವಣತ್ವಾತ್ = ಕಿವಿಗೆ ಪ್ರತ್ಯಕ್ಷವಾಗುವುದರಿಂದ, (2) ಶಬ್ದಃ = ಶಬ್ದವು, ಅನಿತ್ಯಃ = ಅನಿತ್ಯವು, ಕಾರ್ಯತ್ವಾತ್ = ಹುಟ್ಟುವುದರಿಂದ, ಘಟವತ್ = ಮಡಿಕೆಯಂತೆ, ಇಲ್ಲಿ ಶ್ರಾವಣತ್ವರೂಪವಾದ ಹೇತುವಿಗೆ ಸಾಧ್ಯವು, ನಿತ್ಯವು, ಅದರ ಅಭಾವ (ಅನಿತ್ಯತ್ವ)ವನ್ನು ಸಾಧಿಸತಕ್ಕ ಕಾರ್ಯತ್ವರೂಪವಾದ ಹೇತುವಿದೆ. ಆ ಶ್ರಾವಣತ್ವ ಹೇತುವು ಸತ್ಪ್ರತಿಪಕ್ಷಿತವು. ಹಾಗೆಯೇ (1) ವಿವಾದಪದಂ ಮಿಥ್ಯಾ ಬಾಧ್ಯತ್ವಾತ್, (2) ಇಂದ ಅಸತ್ ನ ಪ್ರತೀತತ್ವಾತ್, ಇಲ್ಲಿ ಬಾಧ್ಯತ್ವರೂಪ ಹೇತುವಿಗೆ ಸಾಧ್ಯವು ಮಿಥ್ಯಾತ್ವವು (ಅಸತ್ವವು). ಇದರ ಅಭಾವವನ್ನು (ಅಸತ್ವಾಭಾವವನ್ನು) ಸಾಧಿಸುವ ಪ್ರತೀತತ್ವರೂಪವಾದ ಹೇತುವಿದೆ. ಆ ಬಾಧ್ಯತ್ವರೂಪವಾದ ಹೇತುವು ಸತ್ಪ್ರತಿಪಕ್ಷಿತವು.

ಪರಿಶೇಷಾನುಮಾನದಿಂದ ಪ್ರಯತ್ನಿಸುವರೋ, ಅವರಿಗೆ ಈಶ್ವರಸಿದ್ಧಿಯು ಹೇಗೆ ಆಗುವುದು, ಎಂದು ಪರರು ಆಶಂಕಿಸಕೂಡದು. ಏಕೆಂದರೆ ಮಿಥ್ಯಾತ್ವವನ್ನು ಸಾಧಿಸುವಾಗ ಹೇಗೆ ಅಸತ್ವವೇ ಪ್ರತೀತವಾಗುವುದೋ, ಹಾಗೆ 'ಕ್ಷಿತ್ಯಾದಿಕಂ ಸಕರ್ತೃಕಂ' ಎಂಬುವುದರಿಂದ ಕರ್ತೃತ್ವವನ್ನು ಸಾಧಿಸುವಾಗ ಅಸರ್ವಜ್ಞಕರ್ತೃತ್ವಾದಿಗಳೇ ಪ್ರತೀತಗಳಾಗುವುದಿಲ್ಲ. ಆದ ಪ್ರಯುಕ್ತ ಸತ್ಪ್ರತಿಪಕ್ಷತ್ವವೇ ಇಲ್ಲ. (4) ಕಾರ್ಯತ್ವಾನುಮಾನದಿಂದ ಸಕರ್ತೃತ್ವವನು ಸಾಧಿಸುವಾಗ ಅಸರ್ವಜ್ಞನು ಪ್ರತೀತನಾಗದಿರಲಿ, ಕರ್ತನುಮಾತ್ರ ಸಿದ್ಧನಾಗಲಿ. ಆದರೂ 'ವಿಮತಃ ಕರ್ತಾ=ವಿವಾದವಿಷಯೀಭೂತನಾದ ಕರ್ತನು, ನ ಸರ್ವಜ್ಞಃ=ಸರ್ವಜ್ಞನಲ್ಲ, ಕರ್ತೃತ್ವಾತ್=ಕರ್ತನಾದ್ದುದರಿಂದ, ಯಃ ಕರ್ತಾ=ಯಾರು ಕರ್ತನೋ, ಅಸೌ ಸರ್ವಜ್ಞಃ ನ=ಇವನು ಸರ್ವಜ್ಞನಲ್ಲ, ಯಥಾ ಕುಲಾಲಃ = ಕುಂಬಾರನಂತೆ' ಈ ಅನುಮಾನದಿಂದ ಅಸರ್ವಜ್ಞನು ಪ್ರತೀತನಾಗುವನು. ಆಮೇಲೆ 'ವಿಮತಃ ನ ಅಸರ್ವಜ್ಞಃ' ಎಂಬೀ ಪರಿಶೇಷಾನು ಮಾನದಿಂದ ಸತ್ಪ್ರತಿಪಕ್ಷಿತವೇ ಆಯಿತು. ಅಂತೂ ಈಶ್ವರಸಿದ್ಧಿಯಾಗಲಾರದು. ಎಂದು ಪುನಃ ಪರರು ಆಶಂಕಿಸಿದರೆ ದ್ವೈತಿಗಳು ಹೀಗೆ ಸಮಾಧಾನಗೊಳಿಸಿದರು. ಪರರು 'ಸಾಮಾನ್ಯ ವಾಗಿ ಕರ್ತನು ಸಿದ್ಧನಾಗಲು ಕರ್ತೃತ್ವದಿಂದ ಅಸರ್ವಜ್ಞನನ್ನು ಹೇಗೆ ಸಾಧಿಸುವರೋ, ಹಾಗೆಯೇ ನಾವು ಮಿಥ್ಯಾತ್ವವನ್ನು ಸಾಧಿಸಿ ಆ ಮಿಥ್ಯಾತ್ವದಿಂದ ಅಸತ್ವವನ್ನು ಸಾಧಿಸುವುದಲ್ಲ. ಮಿಥ್ಯಾತ್ವ ಅಸತ್ವಗಳು ಏಕಾರ್ಥಗಳಾದುದರಿಂದ (ವಿಮತಂ, ಅಸತ್, ಮಿಥ್ಯಾತ್ವಾತ್,) ಮಿಥ್ಯಾ ತ್ವವೆಂಬ ಹೇತುವಿನಿಂದ ಅಸತ್ವವನ್ನು ಸಾಧಿಸುವುದಲ್ಲ. ಅಂತೂ ಸಕರ್ತೃಕತ್ವಾನುಮಾನಕ್ಕೂ ಮಿಥ್ಯಾತ್ವಾನುಮಾನಕ್ಕೂ ವೈಷಮ್ಯವಿದೆ. ಈಶ್ವರನು ಸಿದ್ಧನೇ ಆಗುವನು. (5) ಅಲ್ಲದೆ 'ವಿಮತಃ ನ ಸರ್ವಜ್ಞಃ ಕರ್ತೃತ್ವಾತ್' ಎಂಬ ಅನುಮಾನಕ್ಕೆ ಆಶ್ರಯಾಸಿದ್ಧಿ ಮೊದಲಾದ ದೋಷಗಳು ಸಂಭವಿಸುವುದರಿಂದಲೂ ಅಯುಕ್ತವು. ಹೇಗೆಂದರೆ ವಿಮತನಾದ ಈಶ್ವರನು (1) ಸಿದ್ಧನೋ, (2) ಅಸಿದ್ಧನೋ, ಅಸಿದ್ಧನಾದರೆ ಆಶ್ರಯಾಸಿದ್ಧಿಯು, ಸಿದ್ಧನಾದರೆ ಯಾವ ಪ್ರಮಾಣದಿಂದ ಸಿದ್ಧನೋ, ಅದೇ ಪ್ರಮಾಣದಿಂದ ಸರ್ವಜ್ಞತ್ವಾದಿಗಳಿಂದೊಡಗೂಡಿದವನೇ ಸಿದ್ಧನಾಗುವನು. ಆತನಿಗೆ ಅಸರ್ವಜ್ಞತ್ವವನ್ನು ಸಾಧಿಸಿದರೆ ಬಾಧವು. ಅಂತೂ ಈ ಅನುಮಾ ನವು ದುಷ್ಟವು. ಆದಕಾರಣ ಕಾರ್ಯತ್ವಾನುಮಾನದಿಂದ ಈಶ್ವರನು ಸಿದ್ಧನಾಗುವನು. (೬) ಪುನಃ ಪರರು ಶಂಕಿಸುತ್ತಾರೆ ಅಸತ್ ಅನಿರ್ವಚನೀಯಗಳೆಂಬ ಎರಡು ಪದಾರ್ಥಗಳೂ ಅಪ್ರಸಿದ್ಧಗಳಾದುದರಿಂದ, ಮನುಷ್ಯನ ಕೋಡು, ಕತ್ತೆಯಕೋಡು ಇವುಗಳಲ್ಲಿದ್ದ 'ವಿಷಾಣತ್ವ ರೂಪವಾದ ಧರ್ಮದಂತೆ' ಎಂದು ಶ್ರೀಮದಾಚಾರ್ಯರು ದೃಷ್ಟಾಂತಕೊಡಬೇಕಿದ್ದಿತು. ಪ್ರಕೃತ ಬಾಷ್ಪದಲ್ಲಿ ಆರೋಪಿತ ಧೂಮವಿಲ್ಲವು. ಸತ್ಯಧೂಮವದೆ. ಆದಪ್ರಯುಕ್ತ ಧೂಮತ್ವವತ್ ಎಂದು ಹೇಗೆ ಉದಾಹರಿಸಿರುವರು ಎಂದು ಹೇಳಕೂಡದು. ಏಕೆಂದರೆ– ರಜತಂ ಅಸತ್=ಬೆಳ್ಳಿಯು ಅಸತ್ತು ಎಂಬುವ ನಿರ್ದೇಶಕ್ಕೆ 'ರಜತಾತ್ಯಂತಾಭಾವಃ ಅಸ್ತಿ=ಬೆಳ್ಳಿಯ ಅತ್ಯಂತಾಭಾವವದೆ' ಎಂದು ನಿಷೇಧಪ್ರಾಧಾನ್ಯವನ್ನು ಇಟ್ಟುಕೊಂಡರೆ ನಿಷೇಧವೂ ಒಂದು ತತ್ವವಾದುದರಿಂದ ದೃಷ್ಟಾಂತವು ಸಂಗತವೇ ಆಗುವುದು. 'ರಜತಂ ಅತ್ಯಂತಾಭಾವಪ್ರತಿಯೋಗಿ' = ರಜತವು ಅತ್ಯಂತಾಭಾವಕ್ಕೆ ಪ್ರತಿಯೋಗಿಯು ಎಂದು ಪ್ರತಿಯೋಗಿಗೆ ಪ್ರಾಧಾನ್ಯವನ್ನು ಇಟ್ಟುಕೊಂಡರೆ 'ಬಾಷ್ಪದಲ್ಲಿ ಆರೋಪಿತವಾದ ಧೂಮರೂಪವ್ಯಕ್ತಿಯಿಲ್ಲದಿರುವುದರಿಂದ ಆ ಧೂಮದಲ್ಲಿಯೂ ಸಹಜ ಧೂಮದಲ್ಲಿಯೂ ಎರಡರಲ್ಲಿಯೂ ಇರುವ ಧೂಮತ್ವರೂಪಧರ್ಮವು ಹೇಗೆ ಅಸಿದ್ಧವೋ, ಹಾಗೆಯೇ ಅನಿರ್ವಚನೀಯ ಅಸದ್ರೂಪ ವ್ಯಕ್ತಿಗಳಿಲ್ಲದಿರುವುದರಿಂದ ಮಿಥ್ಯಾತ್ವಸಾಮಾನ್ಯವೂ ಅಸಿದ್ಧವಾದುದರಿಂದ ವ್ಯಕ್ತಿಯೇ ಇಲ್ಲ ಎಂಬುವಲ್ಲಿ ದೃಷ್ಟಾಂತವು. ಅಥವಾ ಇದೇ ಕಲ್ಪದಲ್ಲಿ

ಬಾಷ್ಪಧೂಲಿ ಮಶಕಗಳ ಪಂಕ್ತಿ ಇತ್ಯಾದಿಗಳಲ್ಲಿ ಆರೋಪಿತಗಳಾದ ಧೂಮಗಳಲ್ಲಿರುವ ಧೂಮತ್ವ ದಂತೆ ಎಂದು ದೃಷ್ಟಾಂತಾರ್ಥವನ್ನು ಇಟ್ಟುಕೊಳ್ಳಬೇಕು. ॥ ೯ ॥

'ಬಾಷ್ಪಾರೋಪಿತಧೂಮದಲ್ಲಿಯೂ ಧೂಮತ್ವ ಸಾಮಾನ್ಯವನ್ನಂಗೀಕರಿಸಿದರೆ ದೋಷ ವೇನೆಂದು ಪುನಃ ಪರನು ಆಶಂಕಿಸಲು' 'ಪರ್ವತಃ=ಪರ್ವತವು, ಅಗ್ನಿಮಾನ್=ಬೆಂಕಿಯುಳ್ಳದ್ದು, ಧೂಮವತ್ವಾತ್=ಹೊಗೆ ಇದ್ದುದರಿಂದ ಎಂದು ಸಾಧಿಸುವಾಗ ಸದ್ಧೇತುವೂ, ವ್ಯಭಿಚಾರಿಯಾಗ ಬೇಕಾಗುವುದು. ಹೇಗೆಂದರೆ- ಕೊಳದಲ್ಲಿ ಬೆಂಕಿಇಲ್ಲ. ಬಾಷ್ಪಾರೋಪಿತವಾದ ಧೂಮವಡೆ. ವ್ಯಭಿಚಾರಿಯನ್ನುವುದಯುಕ್ತವು. ಧೂಮವತ್ವಾತ್ ಎಂದು ಹೇಳಿದೊಡನೆ ನಿಸ್ಸಂಶಯವಾಗಿ ಲೌಕಿಕವ್ಯವಹಾರಾದಿಗಳು ಹುಟ್ಟುವುದರಿಂದ ಆ ಧೂಮವತ್ವವು ಬಾಷ್ಪಾರೋಪಿತ ಧೂಮದಿಂದ ಅಗ್ನಿಯನ್ನು ವ್ಯಭಿಚರಿಸುವುದಿಲ್ಲವೆಂದು ಶ್ರೀಮದಾಚಾರ್ಯರು ಉಪಪಾದಿಸುತ್ತಾರೆ.

ಮೂ ॥ ನ ಚ ಬಾಷ್ಪಾರೋಪಿತ ಧೂಮೇನ ಧೂಮವತ್ವಂ ವ್ಯಭಿಚರತಿ ॥೧೦॥

ಅ ॥ ಧೂಮವತ್ವಂ=ಧೂಮರೂಪವಾದ ಹೇತುವು, ಬಾಷ್ಪಾರೋಪಿತಧೂಮೇನ= ಬಾಷ್ಪದಲ್ಲಿ ಆರೋಪಿತವಾದ ಹೊಗೆಯಿಂದ, (ಅಗ್ನಿಂ=ಅಗ್ನಿಯನ್ನು) ನ ಚ ವ್ಯಭಿಚರತಿ=ವ್ಯಭಿ ಚರಿಸುವುದೇ ಇಲ್ಲವು. (ಸಾಧ್ಯವಿಲ್ಲದಿರುವುದರಲ್ಲಿ ಹೇತುವಿರುವುದು ವ್ಯಭಿಚಾರವು).

ತಾ ॥ (1) ಕೇವಲಧೂಮವು ನೊಂದಿಹೋದ ಬೆಂಕಿಯಲ್ಲಿಯೂ, ಇದ್ದುದರಿಂದ ವ್ಯಭಿಚಾರ ಬರುವಪ್ರಯುಕ್ತ ಬಹುಲ ಊರ್ಧ್ವಗತನ ಇತ್ಯಾದಿಗಳಿಂದೊಡಗೂಡಿದ ಧೂಮವೇ ಹೇಗೆ ಪ್ರಯೋಜಕವೋ, ಹಾಗೆಯೇ ಕೇವಲ ಧೂಮಕ್ಕೆ ಬಾಷ್ಪಾರೋಪಿತ ಧೂಮದಲ್ಲಿ ವ್ಯಭಿಚಾರ ಬರುವುದರಿಂದ ಆಭಾಸವಲ್ಲದ ಸಹಜಧೂಮವೇ ಪ್ರಯೋಜಕವೆನ್ನುತ್ತೇವೆ, ಎಂದು ಪರರು ಹೇಳಿದರೆ ಆಗ ಸಿದ್ಧಾಂತಿಗಳು '(೧) ಈ ಮಾತನ್ನು ನೀವು (ಅದ್ವೈತಿಗಳು) ಲೌಕಿಕಜನರ ಅಭಿಪ್ರಾಯವನ್ನನುಸರಿಸಿಕೊಂಡು ಹೇಳುತ್ತೀರೋ' (೨) ಅಥವಾ ನೀವು ಅಂಗೀಕಾರಮಾಡಿದ ಸಹಜಧೂಮ. ಕಲ್ಪಿತಧೂಮ ಈ ಎರಡರಲ್ಲಿರುವ ಧೂಮತ್ವರೂಪಸಾಮಾನ್ಯವನ್ನು ನಿರ್ವಾಹ ಮಾಡುವುದಕ್ಕೋಸ್ಕರವೋ, ೧ನೇ ಕಲ್ಪವು ಕೂಡಲಾರದು. ಲೌಕಿಕರು ಧೂಮವತ್ವಕ್ಕೆ ವ್ಯಭಿಚಾರ ಹೇಳಲು, ಇದು ಧೂಮವೇ ಅಲ್ಲ ಎಂದೇ ಪ್ರತ್ಯುತ್ತರ ಕೊಡುವರು. ಆಭಾಸಧೂಮ ದಿಂದ ಇತರವಾದ ಧೂಮವು ವಿವಕ್ಷಿತವಾಗಿದೆ ಎಂದುತ್ತರ ಕೊಡುವುದಿಲ್ಲ. ೨ನೇ ಕಲ್ಪವೂ ಅಯುಕ್ತವು. ಏಕೆಂದರೆ ನೀವು ಅಂಗೀಕರಿಸಿರುವುದಕ್ಕೆ ಮೂಲವೇ ಇಲ್ಲವು. ಅನಿರ್ವಚನೀಯ ತ್ವವು ಇಷ್ಟರವರೆಗೂ ಸಿದ್ಧವಾಗದಿರುವುದರಿಂದ ಭ್ರಮೆಯಲ್ಲಿ ತೋರುವ ಧೂಮಾದಿಗಳಿಗೆ ಅನಿರ್ವಚನೀಯತ್ವವನ್ನು ಹೇಳುತ್ತೇವೆ ಎಂದು ಹೇಳಕೂಡದು. ॥ ೧೦ ॥

ಅನಿರ್ವಚನೀಯಾರ್ಥದಲ್ಲಿ ಪ್ರತ್ಯಕ್ಷಾನುಮಾನಗಳು ಪ್ರಮಾಣಗಳಾಗದಿದ್ದರೂ, ಆಗಮ ಪ್ರಮಾಣವು ಆದೆ ಎಂದು ಪರರು ಆಶಂಕಿಸಿದರೆ, (1) 'ಅನಿರ್ವಚನೀಯ ವಿಷಯದಲ್ಲಿ ಇದು ಸದಸದ್ವಿಲಕ್ಷಣವು' ಎಂದು ಸ್ಪಷ್ಟವಾಗಿ ವಿವಕ್ಷಿತವಾದ ಅರ್ಥವನ್ನು ಪ್ರತಿಪಾದಿಸುವ ಆಗಮ ವದೆಯೋ, (2) ಇದು ಅನಿರ್ವಚನೀಯವು ಇತ್ಯಾದಿ ಸಾಮಾನ್ಯಾಕಾರವಾದುದೋ. ೧ನೇ ಕಲ್ಪವು ಕೂಡಲಾರದು. ಹಾಗೆ ಬೋಧಿಸುವ ಆಗಮವು ಎಲ್ಲಿಯೂ ಇಲ್ಲ ಎಂದು ಆಚಾರ್ಯರು ಉಪಪಾದಿಸುತ್ತಾರೆ.

**ಮೂ || ನ ಚ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ || ೧೧ ||**

ಅ || ಆಗಮಃ=ಆಗಮಪ್ರಮಾಣವು, ಕ್ವಚಿತ್=ಯಾವ ಶಾಖೆಯಲ್ಲಿಯೂ, ಭಾವಾಭಾವವಿಲಕ್ಷಣಂ=ಸದಸದ್ವಿಲಕ್ಷಣವನ್ನು, ನ ಚ ವಕ್ತಿ=ಹೇಳುವುದೇ ಇಲ್ಲವು. ಚ ಶಬ್ದವು ಅನಿರ್ವಚನೀಯಾರ್ಥದಲ್ಲಿ ಪ್ರತ್ಯಕ್ಷಾನುಮಾನಗಳಿಂದಿತರವಾದ ಆಗಮಪ್ರಮಾಣವೂ ಇಲ್ಲ ಎಂದು ಸಮುಚ್ಚಯಾರ್ಥಕವು.

ತಾ || (1) 'ನ ಚಾನಿರ್ವಚನೀಯೋ ಕಿಂಚಿನ್ಮಾನಂ' ಎಂದು ಆದಿಯಲ್ಲಿ ಹೇಳಿರುವುದರಿಂದ ಇಲ್ಲಿಯೂ 'ನ ಚಾನಿರ್ವಚನೀಯಂ ಕ್ವಚಿದಾಗಮೋ ವಕ್ತಿ' ಅನಿರ್ವಚನೀಯವನ್ನು ಯಾವ ಶಾಖೆಯಲ್ಲಿಯೂ ಆಗಮವು ಹೇಳುವುದಿಲ್ಲ ಎಂದು ಹೇಳಬೇಕಿದ್ದಿತು. ಅದನ್ನು ಬಿಟ್ಟು 'ಭಾವಾಭಾವವಿಲಕ್ಷಣಂ' ಎಂದು ಲಕ್ಷಣವನ್ನನುವಾದಮಾಡಿದ್ದು 'ನಾಸದಾಸೀನ್ನೋಸದಾಸೀತ್' ಇದು ಮೊದಲಾದ ವೇದವಾಕ್ಯಗಳು ಅನಿರ್ವಚನೀಯತ್ವವನ್ನು ಪ್ರತಿಪಾದಿಸುತ್ತವೆ ಎಂದು ಪರರು ಹೇಳುತ್ತಾರೆ. ಇದು ಸಹ ನಿರವಕಾಶ ಆಗಮಪ್ರಮಾಣವಲ್ಲವೆಂತ ಸೂಚಿಸುವುದಕ್ಕಾಗಿ (2) ಹಾಗಾದರೆ 'ಸದಸದ್ವಿಲಕ್ಷಣವಾದುದು ಅನಿರ್ವಚನೀಯವು' ಎಂದು ಪರರು ಅಂಗೀಕರಿಸಿರುವುದರಿಂದ ಹಾಗೆಯೇ ಹೇಳಬೇಕಿದ್ದಿತು, ಎಂದು ಹೇಳಕೂಡದು. ಏಕೆಂದರೆ ಭಾವಾಭಾವ ಶಬ್ದಗಳು ರೂಢಿಯಿಂದ ವಿಧಿನಿಷೇಧರೂಪಗಳಾದ ಅರ್ಥಗಳನ್ನೇ ಹೇಳುವುದಿಲ್ಲ. ಆದರೆ ಭವತೀತಿ ಭಾವಃ, ನಭವತೀತ್ಯಭಾವಃ, ಎಂಬ ಯೋಗದಿಂದ ಸದಸತ್ಪರಗಳಾಗಿವೆ. ವಿಧಿನಿಷೇಧ ಪರತ್ವವಿದ್ದರೂ ಯಾವರೀತಿಯಿಂದಲೂ ನಿರ್ವಚನಮಾಡಲಿಕ್ಕೆ ಅಶಕ್ಯವಾದುದೇ ಅನಿರ್ವಚನೀಯವು. 'ಭಾವಾಭಾವ ವಿಲಕ್ಷಣಂ' ಎನ್ನುವುದೂ ಅನಿರ್ವಚನೀಯಕ್ಕೆ ಲಕ್ಷಣವು. ಭಿನ್ನಾಭಿನ್ನ ವಿಲಕ್ಷಣತ್ವವೂ ಅನಿರ್ವಚನೀಯಕ್ಕೆ ಲಕ್ಷಣವು. ಸದಸದ್ವಿಲಕ್ಷಣತ್ವವೂ ಲಕ್ಷಣವು. ('ಸದಸದ್ವಿಲಕ್ಷಣಂ' ಎನ್ನುವ ಪ್ರಸಿದ್ಧಪ್ರಯೋಗವನ್ನು ಬಿಟ್ಟು 'ಭಾವಾಭಾವ ವಿಲಕ್ಷಣಂ' ಎಂದು ಹೇಳಿರುವುದು ಮೇಲಿನ ಗ್ರಂಥ ಪ್ರಾರಂಭಿಸುವುದಕ್ಕೋಸ್ಕರವಾಗಿರುತ್ತದೆ.) || ೧೧ ||

ಹಾಗಾದರೆ 'ನಾಸದಾಸೀತ್' ಇತ್ಯಾದ್ಯಾಗಮವು ಅನಿರ್ವಚನೀಯ ರೂಪವಾದ ಅವಿದ್ಯೆಯನ್ನು ತಿಳಿಸಿಕೊಡುತ್ತದೆ. ಹೇಗೆಂದರೆ– 'ಸತ್ತನ್ನೂ ಅಸತ್ತನ್ನೂ ನಿಷೇಧಮಾಡಿ ತಮಸ್ಸು ಇರುತ್ತದೆ' ಎಂಬ ಶ್ರುತಿಯಿಂದ ಮಹಾಪ್ರಳಯದಲ್ಲಿ ಅವಿದ್ಯೆಯು (ಅನಿರ್ವಚನೀಯವು) ಇದೆ ಎಂದು ಹೇಳಿರುತ್ತದೆ. ಈ ಶ್ರುತಿಯಲ್ಲಿ ಅಸತ್ತಿಗೆ ಸತ್ವದ ಪ್ರಸಕ್ತಿಯೇ ಇಲ್ಲದಿರುವುದರಿಂದ ನಿಷೇಧವು ಕೂಡಲಾರದು. ಕೂಡದಿರತಕ್ಕ ಅರ್ಥವನ್ನು ಬೋಧಿಸುವ ವಾಕ್ಯವು ಅನಿರ್ವಚನೀಯರೂಪವಾದ ಅವಿದ್ಯೆಯನ್ನು ತಿಳಿಸಿಕೊಡಲಿಕ್ಕೆ ಸಮರ್ಥವಲ್ಲವೆಂದು ದ್ವೈತಿಗಳು ಹೇಳಕೂಡದು. ಏಕೆಂದರೆ– 'ನಾಸದಾಸೀತ್' ಎಂಬ ಶ್ರುತಿಯಲ್ಲಿರುವ ಸತ್ ಅಸತ್ ಶಬ್ದಗಳನ್ನು ನಾವು ಭಾವಾಭಾವಪರಗಳನ್ನಾಗಿ ಅಂಗೀಕರಿಸಿರುವೆವು. ಭಾವಾಭಾವವೈಲಕ್ಷಣ್ಯದಿಂದಲೂ ಅನಿರ್ವಚನೀಯತ್ವವು ಸಿದ್ಧವಾಗುವುದು. ಆದಕಾರಣ 'ನ ಚ ಭಾವಾಭಾವವಿಲಕ್ಷಣಂ ಕ್ವಚಿದಾಗಮೋವಕ್ತಿ' ಎಂದು ಶ್ರೀಮದಾಚಾರ್ಯರು ಹೇಳಿದ್ದು ಹೇಗೆ ಯುಕ್ತವಾಗುವುದು ಎಂಬೀ ಪರರ ಆಶಂಕೆಯನ್ನು ಪರಿಹರಿಸುತ್ತಾರೆ.

**ಮೂ || ನಾಸದಾಸೀನ್ನೋಸದಾಸೀತ್ತದಾನೀಂ ನಾಸೀದ್ರಜೋ ನೋ
ವ್ಯೋಮಾ ಪರೋ ಯದಿತ್ಯತ್ರ ಚ || ೧೨ ||**

ಅ || ತದಾನೀಂ = ಪ್ರಳಯಕಾಲದಲ್ಲಿ, ಅಸತ್ = ಅಮೂರ್ತಗಳಾದ ವಾಯು, ಅಂತರಿಕ್ಷಗಳು, ನಾಸೀತ್=ಇರಲಿಲ್ಲ. ಸತ್=ಮೂರ್ತಗಳಾದ ಪೃಥಿವೀ, ಜಲ, ತೇಜಸ್ಸುಗಳು,

ನೋ ಆಸೀತ್=ಇರಲಿಲ್ಲ. ರಜಃ=ಗುಣತ್ರಯವು, ನಾಸೀತ್=ಇರಲಿಲ್ಲ. ಯತ್ಪರಃ ವ್ಯೋಮಾ = ಯಾವುದೊಂದು ವ್ಯಾಪ್ತವಾದ ಅವ್ಯಾಕೃತಾಕಾಶವೋ, (ಅದೂ ಕೂಡ ಮೂರ್ತಸಂಬಂಧವಿಲ್ಲದಿರುವುದರಿಂದ,) ನೋ ಆಸೀತ್=ಇರಲಿಲ್ಲ. ಇತ್ಯತ್ರಚ = ಈ ಶ್ರುತಿಯಲ್ಲಿಯೂ, ಭಾವಾಭಾವವಿಲಕ್ಷಣಂ=ಸದಸದ್ವಿಲಕ್ಷಣವನ್ನು, ನ ವಕ್ತಿ=ಹೇಳುವುದಿಲ್ಲ.

ತಾ ॥ (1) ಈ ವಾಕ್ಯವು ಪ್ರಳಯಕಾಲದಲ್ಲಿ ಸದಸತ್ತುಗಳು ಇರಲಿಲ್ಲವೆಂದೂ ತಮಸ್ಸು ಇರುತ್ತದೆ ಎಂದೂ ಪ್ರತಿಪಾದಿಸತಕ್ಕದ್ದಾಗಿರುತ್ತದೆ. ತಮಸ್ಸು ಸದಸದ್ವಿಲಕ್ಷಣವೆಂದು ಹೇಳುವುದಿಲ್ಲವೆಂದುಪಪಾದಿಸಿದರು. (2) ಆಗ ಪರರು 'ಸತ್ತು ಅಸತ್ತು ಎರಡೂ ಇಲ್ಲದಿರುವಾಗ ತಮಸ್ಸು ಇದ್ದುದರಿಂದ ಅಂತಹ ತಮಸ್ಸಿಗೆ ಸದಸದ್ವೈಲಕ್ಷಣ್ಯವೇ ಸಿದ್ಧವಾಗುವುದು' ಎಂದು ಹೇಳಿದರೆ ಸಿದ್ಧಾಂತಿಗಳು ಅವಿದ್ಯಾರೂಪವಾದ ಅನಿರ್ವಚನೀಯ ವಸ್ತುವಿಷಯದಲ್ಲಿ 'ನಾಸದಾಸೀತ್' ಎಂಬೀ ಆಗಮಪ್ರಮಾಣವಿದೆ ಎಂದು ನೀವು (ಅದ್ವೈತಿಗಳು) ಹೇಳಬಾರದು. ಏಕೆಂದರೆ- ಅನ್ಯಥಾನುಪಪತ್ತಿಯಿಂದ ಲಬ್ಧವಾದ ಅರ್ಥವು ಆಗಮಾರ್ಥವಾಗಲಾರದು. 'ಯಚ್ಛಾರ್ಥಾದರ್ಥಃ ನ ಸ ಚೋದನಾರ್ಥಃ' ಯಾವುದು ಆರ್ಥಿಕಾರ್ಥವೋ, ಅದು ಶಬ್ದಾರ್ಥವಲ್ಲ. ಎಂದು ಮೀಮಾಂಸಕರುಪಪಾದಿಸಿರುವರು. ಆದಪ್ರಯುಕ್ತ ಅನಿರ್ವಚನೀಯ ವಿಷಯದಲ್ಲಿ ಆಗಮಪ್ರಮಾಣವಾಗಲಾರದು, ಎಂದರು ॥ ೧೨ ॥

ಹಾಗಾದರೆ ಈ ವಾಕ್ಯವು ಅನಿರ್ವಚನೀಯರೂಪವಾದ ಅವಿದ್ಯಾವಿಷಯದಲ್ಲಿ ಆಗಮವಾಗಿ ಪ್ರಮಾಣವಾಗುವುದು ಬೇಡ. ಪರಿಶೇಷ ಪ್ರಮಾಣಕ್ಕೆ ಜ್ಞಾಪಕವು ಆಗುವುದು. ಹೇಗೆಂದರೆ- 'ತಮ ಆಸೀತ್' ಎಂಬುವಲ್ಲಿ ಮಹಾಪ್ರಳಯದಲ್ಲಿ ಅವಿದ್ಯಾರೂಪವಾದ ತಮಸ್ಸು ಇತ್ತು ಎಂದು ಹೇಳಿಯದೆ. ಅಂತಹ ತಮಸ್ಸಿಗೆ ಪ್ರಸಕ್ತಗಳಾದ ಸತ್ವಾದಿ ಪ್ರಕಾರಗಳನ್ನು 'ನಾಸದಾಸೀತ್' ಇತ್ಯಾದಿ ವಾಕ್ಯದಿಂದ ಸತ್ತು ಅಲ್ಲ, ಅಸತ್ತೂ ಅಲ್ಲ, ಹೀಗೆ ನಿಷೇಧಿಸಲು ಸದಸದ್ರೂಪತ್ವವು ಕೂಡದಿರುವುದರಿಂದ ಉಳಿದ ಅನಿರ್ವಚನೀಯತ್ವದಲ್ಲಿಯೇ ಬುದ್ಧಿಯುಂಟಾಗುವುದು ಎಂದಾಶಂಕಿಸಿ ಈ ವಾಕ್ಯಕ್ಕೆ ಬೇರೆ ಅರ್ಥವನ್ನು ಮೇಲಿನ ವಾಕ್ಯದಲ್ಲಿ ಹೇಳಲಿಚ್ಛಿಸಿದವರಾಗಿ ಆ ಅರ್ಥಾಂತರದ ಸಿದ್ಧಿಗಾಗಿ ಪರರಿಗೆ ಅಭಿಪ್ರೇತವಾದ ಅರ್ಥದಲ್ಲಿ ಅನಿಷ್ಟವನ್ನು ಹೇಳುತ್ತಾರೆ.

**ಮೂ ॥ ಪಾರಿಶೇಷ್ಯೇಣಾನಿರ್ವಚನೀಯತ್ವಾಂಗೀಕಾರೇ ಆನೀದವಾತಂ ಸ್ವಧಯಾ ತದೇಕಮಿತಿ ತದಾನೀಂ ಪರಿಶಿಷ್ಟತ್ವಾದ್ಬ್ರಹ್ಮಣ ಏವಾನಿರ್ವಚನೀಯತ್ವಂ ಸ್ಯಾತ್ ॥ ೧೩ ॥**

ಅ ॥ ಪಾರಿಶೇಷ್ಯೇಣ = ಪರಿಶೇಷಪ್ರಮಾಣದಿಂದ, ಅನಿರ್ವಚನೀಯತ್ವಾಂಗೀಕಾರೇ= ಅನಿರ್ವಚನೀಯತ್ವವನ್ನಂಗೀಕರಿಸಿದರೆ, 'ತತ್ ಏಕಂ=ಸರ್ವೋತ್ತಮನಾದ ಪರಬ್ರಹ್ಮನು, ಅವಾತಂ=ವಾಯುಪ್ರೇರಣೆಯಿಲ್ಲದೇನೇ, ಸ್ವಧಯಾ=ಸ್ವರೂಪಸುಖದಿಂದಲೇ, ಆನೀತ್=ಚೇಷ್ಟೆಯನ್ನು ಮಾಡಿದನು, ಇತಿ=ಹೀಗೆ, ತದಾನೀಂ=ಪ್ರಳಯಕಾಲದಲ್ಲಿ, ಪರಿಶಿಷ್ಟತ್ವಾತ್=ಉಳಿದಿರುವುದರಿಂದ, ಬ್ರಹ್ಮಣ ಏವ=ಪರಬ್ರಹ್ಮನಿಗೂ, ಅನಿರ್ವಚನೀಯತ್ವಂ=ಅನಿರ್ವಚನೀಯತ್ವವು, ಸ್ಯಾತ್=ಬರಬೇಕಾಗುವುದು.

ತಾ ॥ (1) 'ನಾಸದಾಸೀತ್' ಎಂಬುವ ವಾಕ್ಯಕ್ಕೆ ಹಿಂದೆ ಹೇಳಿದಪ್ರಕಾರ ಪರಿಶೇಷ ಪ್ರಮಾಣಜ್ಞಾಪಕತ್ವದಿಂದ ತಮಸ್ಸಿಗೆ ಅನಿರ್ವಚನೀಯತ್ವವನ್ನಂಗೀಕರಿಸಿದರೆ ಪಾರಮಾರ್ಥಿಕ ಸತ್ಯಭೂತನಾದ ಪರಬ್ರಹ್ಮನಿಗೂ ಅನಿರ್ವಚನೀಯತ್ವವು ಬರಬೇಕಾಗುವುದು. ಏಕೆಂದರೆ

'ಆನೀದವಾತಂ' ಎಂಬುವ ವಾಕ್ಯವು ಪ್ರಲಯಕಾಲದಲ್ಲಿ ತಮಸ್ಸಿನಂತೆಯೇ ಪರಬ್ರಹ್ಮನೂ ಇದ್ದಾನೆಂದು ಪ್ರತಿಪಾದಿಸಿಯುದೆ. ತಮಸ್ಸು ಮತ್ತು ಪರಬ್ರಹ್ಮ ಇವರಿಬ್ಬರು ಉಳಿದ್ದಾರೆಂದು ತಿಳಿಯಲು ತಮಸ್ಸಿಗೆಮಾತ್ರ ಅನಿರ್ವಚನೀಯತ್ವವನ್ನು ಅಂಗೀಕರಿಸಲಿಕ್ಕೆ ನಿಯಾಮಕವಿಲ್ಲ. (2) ಬ್ರಹ್ಮನು ಪಾರಮಾರ್ಥಿಕ ಸತ್ಯನೆಂದು ಬೋಧಿಸತಕ್ಕ ಪ್ರಮಾಣವಿದೆಯೆಂದರೆ ತಮಸ್ಸಿಗೂ ಅದೆ. ಆದುದರಿಂದ 'ನಾಸದಾಸೀತ್' ಎಂಬುವ ವಾಕ್ಯವು ಪ್ರಸಿದ್ಧಗಳಾದ ಸದಸತ್ವಗಳನ್ನು ನಿಷೇಧಿಸತಕ್ಕದ್ದಲ್ಲ. (3) ಮಹಾಪ್ರಳಯದಲ್ಲಿ ಪರಬ್ರಹ್ಮನಿದ್ದಾನೆಂದು ಅದ್ವೈತಿಗಳಿಗೆ ಸಮ್ಮತವೇ ಆಗಿಯುದೆ. ಆದಪ್ರಯುಕ್ತ ಅದನ್ನು ಸಮರ್ಥಿಸುವುದಕ್ಕಾಗಿ 'ಆನೀದವಾತಂ' ಎಂಬುವ ವಾಕ್ಯವನ್ನು ಶ್ರೀಮದಾಚಾರ್ಯರು ಏತಕ್ಕೆ ಉದಹರಿಸಿದರು ಎಂದರೆ- ಈ ವಾಕ್ಯವನ್ನುದಹರಿಸದೆ ಪರಿಶೇಷಪ್ರಮಾಣದಿಂದ ಅನಿರ್ವಚನೀಯತ್ವವನ್ನಂಗೀಕರಿಸಿದರೆ ಆಗ ಬ್ರಹ್ಮನು ಉಳಿದಿರುವುದರಿಂದ ಬ್ರಹ್ಮನಿಗೂ ಅನಿರ್ವಚನೀಯತ್ವವು ಬರಲಿ ಎಂದು ನಾವು (ದ್ವೈತಿಗಳು) ಅತಿಪ್ರಸಂಗವನ್ನು ಹೇಳಿದರೆ 'ಪರರು ಈ ಅತಿಪ್ರಸಂಗವೇ ಇಲ್ಲವು' ಏಕೆಂದರೆ 'ನಾಸದಾಸೀತ್' ಎಂಬುವ ವಾಕ್ಯದಲ್ಲಿ ತಮಸ್ಸೇ ಪ್ರಸ್ತುತವಾಗಿ ಸನ್ನಿಹಿತವಾಗಿರೋಣದರಿಂದ ಅದಕ್ಕೇನೇ ಸದಸತ್ವಗಳನ್ನು ನಿಷೇಧಿಸುವುದು ಯುಕ್ತವು. ಬ್ರಹ್ಮನು ಈ ವಾಕ್ಯದಿಂದ ಪ್ರಸ್ತುತನೇ ಆಗದಿರೋಣದರಿಂದ ಅವನಿಗೆ ಸದಸತ್ವಗಳನ್ನು ನಿಷೇಧಿಸುವುದಯುಕ್ತವು. ಪ್ರಸ್ತುತನಿಗೇನೇ ಸತ್ವಾದಿಗಳ ನಿಷೇಧವು ಮಾಡಲ್ಪಡುತ್ತದೆ. ಹೀಗೆ ಅತಿಪ್ರಸಂಗವನ್ನು ಪರಿಹರಿಸಲಿಕ್ಕೆ ಉತ್ಸಾಹಪಡುವರು. ಆ ಉತ್ಸಾಹವನ್ನು ನಿರಾಕರಿಸಲಿಕ್ಕಾಗಿ ಈ ಪ್ರಕರಣದಲ್ಲಿದ್ದ ವಾಕ್ಯದಿಂದಲೇ ಬ್ರಹ್ಮನು ಪ್ರಸ್ತುತನೆಂದು ಅವಶ್ಯವಾಗಿ ಹೇಳಬೇಕಾಗಿಯುದೆ ॥ ೧೩ ॥

'ನಾಸದಾಸೀತ್' ಎಂಬುವ ಶ್ರುತಿಗೆ ಪ್ರತೀತವಾದ ಅರ್ಥವು ಕೂಡದಿದ್ದರೆ ಬ್ರಹ್ಮತಮಸ್ಸುಗಳಿಗೆ ಸದಸದ್ವೈಲಕ್ಷಣ್ಯವನ್ನು ಪ್ರತಿಪಾದಿಸುವ ಆಗಮಕ್ಕೆ ಏನು ಅರ್ಥವು? ಎಂದಾಶಂಕಿಸಿದರೆ ಬೇರೆ ಶ್ರುತಿಯಿಂದ ಅದರ ಅರ್ಥವನ್ನು ಪ್ರತಿಪಾದಿಸುತ್ತಾರೆ.

ಮೂ ॥ ಮೂರ್ತಂ ಸದಿತಿ ಸಂಪ್ರೋಕ್ತಮಮೂರ್ತಮಸದುಚ್ಯತೇ ।
ಮೂರ್ತಾಮೂರ್ತೇತರದ್ಬ್ರಹ್ಮ ನ ಸತ್ತನ್ನಾಸದುಚ್ಯತೇ ॥
ಇತಿ ಪೈಂಗಿಶ್ರುತಿಃ ॥ ೧೪ ॥

ಅ ॥ ಮೂರ್ತಂ=ಮೂರ್ತ ಎನ್ನುವುದು, ಸದಿತಿ=ಸತ್ ಎಂದು, ಸಂಪ್ರೋಕ್ತಂ= ಹೇಳಲ್ಪಟ್ಟದೆ. ಅಮೂರ್ತಂ=ಅಮೂರ್ತ ಎನ್ನುವುದು, ಅಸತ್=ಅಸತ್ ಎಂದು, ಉಚ್ಯತೇ= ಹೇಳಲ್ಪಡುತ್ತದೆ. ಮೂರ್ತಾಮೂರ್ತೇತರತ್=ಮೂರ್ತಾಮೂರ್ತಗಳಿಂದ ಭಿನ್ನನಾದ, ಬ್ರಹ್ಮ= ಪರಬ್ರಹ್ಮನು, ಸತ್ ನ=ಸತ್ ಭಿನ್ನನು ಎಂದು, ಉಚ್ಯತೇ=ಹೇಳಲ್ಪಡುತ್ತಾನೆ. ತತ್=ಆ ಬ್ರಹ್ಮನು, ಅಸತ್‌ನ=ಅಸತ್ತಿನಿಂದ ಭಿನ್ನನು ಎಂದೂ, ಉಚ್ಯತೇ=ಹೇಳಲ್ಪಡುತ್ತಾನೆ. ಇತಿ=ಹೀಗೆ, ಪೈಂಗಿಶ್ರುತಿಃ=ಪೈಂಗಿಶ್ರುತಿಯು. ಇಲ್ಲಿ ಬ್ರಹ್ಮಶಬ್ದದಿಂದ ಪರಬ್ರಹ್ಮನನ್ನೂ, ಪ್ರಕೃತ್ಯಾಖ್ಯ ತಮಸ್ಸನ್ನೂ ಇಟ್ಟುಕೊಳ್ಳಬೇಕು ॥ ೧೪ ॥

ಹಾಗಾದರೆ ಅಲ್ಪ ಪರಿಮಾಣವುಳ್ಳದ್ದು (ಪೃಥಿವಿ ಮೊದಲಾದುದು) ಮೂರ್ತವು. ಆದರಿಂದ ಬೇರೆಯಾದುದು (ಆಕಾಶ ಮೊದಲಾದುದು ಗುಣಾದಿಗಳುಅಭಾವವು ಇವೆಲ್ಲವೂ) ಅಮೂರ್ತವು. ತಥಾಚ ಭಾವಾಭಾವಾತ್ಮಕ ಎಲ್ಲಾ ವಸ್ತುಗಳೂ ಮೂರ್ತಾಮೂರ್ತಗಳಲ್ಲಿ ಸೇರಿರುವುದರಿಂದ ಅವುಗಳಿಂದ ವೈಲಕ್ಷಣ್ಯವನ್ನು ಬ್ರಹ್ಮಪ್ರಕೃತಿಗಳಿಗೆ ಹೇಳಿದರೆ ಅನಿರ್ವಚನೀಯತ್ವವನ್ನೇ ಹೇಳಿದ

ಹಾಗಾಯಿತು. ಎಂದು ಪರರು ಆಶಂಕಿಸಕೂಡದು. ಏಕೆಂದರೆ– 'ಮೂರ್ತ' ಎಂದರೆ ಪೃಥಿವೀ, ಜಲ, ತೇಜಸ್ಸುಗಳು, ಅಮೂರ್ತವೆಂದರೆ ವಾಯು ಆಕಾಶಗಳು, ಎಲ್ಲವೂ ಮೂರ್ತಾಮೂರ್ತಗಳಲ್ಲಿ ಸೇರಲಿಲ್ಲ. ಪೃಥಿವಿ ಮೊದಲಾದ ೫ ಭೂತಗಳಿಂದ ವೈಲಕ್ಷಣ್ಯವು ಬ್ರಹ್ಮಪ್ರಕೃತಿಗಳಿಗೆ ಯುಕ್ತವೇ ಎಂಬೀಅಭಿಪ್ರಾಯದಿಂದ ಸತ್ ಅಸತ್ ಶಬ್ದಗಳನ್ನು ಬೇರೆ ಶ್ರುತಿಯಿಂದ ವ್ಯಾಖ್ಯಾನಮಾಡುತ್ತಾರೆ.

**ಮೂ || ಯದನ್ಯದ್ವಾಯೋಶ್ಚಾಂತರಿಕ್ಷಾಚ್ಚೈತತ್ಸದಿತಿ ಮಾಧ್ಯಂದಿನಶ್ರುತಿಃ || ೧೫ ||**

ಅ || ವಾಯೋಶ್ಚ = ವಾಯುವಿನಿಂದಲೂ, ಅಂತರಿಕ್ಷಾಚ್ಚ = ಆಕಾಶದಿಂದಲೂ, ಅನ್ಯತ್=ಇತರವಾದುದು, ಯತ್=ಯಾವುದೋ, ಏತತ್=ಇದು, ಸತ್=ಸತ್ ಎನ್ನಿಸುತ್ತದೆ. (ವಾಯುಃ=ವಾಯುವು, ಅಂತರಿಕ್ಷಂ ಚ=ಆಕಾಶವೂಕೂಡ, ಅಸತ್=ಅಸತ್ ಎನ್ನಿಸುತ್ತದೆ.) ಇತಿ=ಹೀಗೆ, ಮಾಧ್ಯಂದಿನಶ್ರುತಿಃ=ಮಾಧ್ಯಂದಿನಶ್ರುತಿಯು.

ತಾ (1) 'ನಾಸದಾಸೀತ್' ಎಂಬುವ ಶ್ರುತಿಯಲ್ಲಿದ್ದ ಸದಸತ್ ಶಬ್ದಗಳಿಗೆ ಭಾವಾಭಾವ ಪರತ್ವವನ್ನಾಗಲೀ, ಮೂರ್ತಾಮೂರ್ತ ಪರತ್ವವನ್ನಾಗಲೀ ಇಟ್ಟುಕೊಂಡರೆ ಎಲ್ಲಾ ವಸ್ತುಗಳೂ ಅದರಲ್ಲಿಯೇ ಸೇರುವುದರಿಂದ ಪುನಃ ರಜೋಗುಣ ಮೊದಲಾದವುಗಳಿಗೆ ನಿಷೇಧಮಾಡಿದ್ದು ವ್ಯರ್ಥ (ಪುನರುಕ್ತಿಯು) ವಾಗಬೇಕಾದೀತು. ಈ ಅನಿಷ್ಟವನ್ನೂ ಸೂಚಿಸಲಿಕ್ಕೆ 'ನಾಸೀದ್ರಜೋ ನೋ ವ್ಯೋಮಾಪರೋ ಯತ್' ಎಂಬೀ ಅಧಿಕಾಂಶವನ್ನು ಉದಹರಿಸಿದ್ದಾರೆ. ಈ ಅನಿಷ್ಟವನ್ನು ತೋರಿಸಿ ಕೊಡಬೇಕೆಂಬ ಉದ್ದೇಶವಿಲ್ಲದೆ ಇದ್ದರೆ 'ನಾಸದಾಸೀನ್ನೋಸದಾಸೀತ್ತದಾನೀಂ' ಎಂದಿಷ್ಟೇ ಹೇಳುತ್ತಿದ್ದರು. (2) ಆಗಮಗಳಿಗೆ ಪ್ರತೀತವಾದ ಅರ್ಥಕ್ಕೆ ಬಾಧ ಬಂದರೆ ಅರ್ಥಾಂತರವನ್ನು ಅವಶ್ಯವಾಗಿ ಸ್ವೀಕರಿಸಲೇಬೇಕು. ಆದ ಪ್ರಯುಕ್ತ 'ಮೂರ್ತಂ ಸದಿತಿ ಸಂಪ್ರೋಕ್ತಂ' ಎಂಬುವ ಶ್ರುತಿಯನ್ನು ಶ್ರೀಮದಾಚಾರ್ಯರು ಏತಕ್ಕೆ ಉದಹರಿಸಿದರು ಎಂದಾಕ್ಷೇಪಿಸಕೂಡದು, ಏಕೆಂದರೆ– ಪ್ರತೀತವಾದ ಅರ್ಥಕ್ಕೆ ಬಾಧ ಬಂದರೆ ಆ ಬಾಧಕದಿಂದ ಅರ್ಥಾಂತರವೇ ಲಾಭವಾಗುವುದಲ್ಲದೆ ಅರ್ಥ ವಿಶೇಷವು ಲಾಭವಾಗಲಾರದು. ಆ ಅರ್ಥ ವಿಶೇಷವು ಸಿಗುವುದಕ್ಕೋಸ್ಕರ ಬೇರೆ ಶ್ರುತಿಯನ್ನು ಅವಶ್ಯವಾಗಿ ಪ್ರತಿಪಾದಿಸಬೇಕು || ೧೫ ||

ಶ್ರುತಿಪುರಾಣಾದಿಗಳಲ್ಲಿ ಜಗತ್ತು ಅನಿರ್ವಚನೀಯವೆಂದೂ, ಅಚಿಂತ್ಯವೆಂದೂ ಅತರ್ಕ್ಯವೆಂದೂ ಅಜ್ಞೇಯವೆಂದೂ ಹೇಳಲ್ಪಡುತ್ತದೆ. ಆ ವಾಕ್ಯಗಳಿಗೆ 'ವಿಚಾರಾದಿಗಳಿಗೆ ಅವಿಷಯವಾದುದು' ಎಂದೇ ಅರ್ಥವೆಂದು ಹೇಳಕೂಡದು. ಹಾಗೆ ಹೇಳಿದರೆ ಪ್ರಮಾಣಗಳು ನಿರ್ವಿಷಯಕಗಳಾಗಬೇಕಾಗುವುವು. ಆದುದರಿಂದ ಆ ವಾಕ್ಯಗಳಿಗೆ ಜಗತ್ತು, ಸತ್ವ, ಅಸತ್ವ ಮೊದಲಾದ ಪ್ರಕಾರಗಳಿಂದ ವಿಚಾರಾದಿಗಳಿಗೆ ಅವಿಷಯವಾಗಿದೆ ಎಂದೇ ಅರ್ಥವನ್ನು ಹೇಳಬೇಕು. ಮತ್ತು ಜಗತ್ತು ಅನೃತವು (ಯಥಾರ್ಥವಲ್ಲದಿರುವುದು) ಅಸತ್ತು (ಸತ್ ಅಲ್ಲದಿರುವುದು) ಅಸತ್ಯವು ಸತ್ಯವಲ್ಲದಿರುವುದು, ಹೀಗೂ ವಾಕ್ಯಗಳಿವೆ. ಅಸತ್ವವೇ ಆ ವಾಕ್ಯಗಳಿಗೆ ಅರ್ಥವೆಂದು ಹೇಳಕೂಡದು. ಏಕೆಂದರೆ– ಅಸತ್ತು (ಮೊಲದ ಕೋಡಿನಂತೆ ಸರ್ವಥಾ ಇಲ್ಲದಿದ್ದದ್ದು) ಆಗಿದ್ದರೆ ತೋರದೆ ಹೋಗಬೇಕಿದ್ದಿತು. ಆದುದರಿಂದ ಆ ವಾಕ್ಯಗಳು ಪ್ರಪಂಚವು ಅನಿರ್ವಚನೀಯವೆಂದೇ ಪ್ರತಿಪಾದಿಸುತ್ತವೆ. ಆದುದರಿಂದ ಶ್ರೀಮದಾಚಾರ್ಯರು 'ಅನಿರ್ವಚನೀಯಂನಾಗಮೋವಕ್ತಿ' ಎಂದು ಹೇಗೆ ಹೇಳಿದರು ಎಂಬೀ ಎರಡನೇ ಕಲ್ಪವನ್ನು ತಿರಸ್ಕಾರ ಮಾಡಲಿಕ್ಕೆ ಸಯುಕ್ತಿಕವಾದ ಸ್ಮೃತಿಯಿಂದಲೇ ಆ ವಾಕ್ಯಾರ್ಥವನ್ನು ಪ್ರತಿಪಾದಿಸುತ್ತಾರೆ.

**ಮೂ || ಅದ್ಭುತತ್ವಾದನಿರ್ವಾಚ್ಯಂ ಬ್ರಹ್ಮ ಚಿಚ್ಚೇತ್ಯಮೇವ ಚ । ಅಚಿಂತ್ಯಂ ತತ ಏವೈತದತರ್ಕ್ಯಾಜ್ಞೇಯಮೇವ ಚ || ೧೬ ||**

ಅ || ಬ್ರಹ್ಮ=ಪರಬ್ರಹ್ಮನು, ಚಿತ್=ಚೇತನ ಸಮೂಹವು, ಚೇತ್ಯಂ ಚ=ದೃಶ್ಯವಾದ ಜಡವೂ ಕೂಡ, ಅದ್ಭುತತ್ವಾದೇವ = ಅತ್ಯಾಶ್ಚರ್ಯವಾದುದರಿಂದಲೇ, ಅನಿರ್ವಾಚ್ಯಂ = ಅನಿರ್ವಾಚ್ಯವೆನ್ನಿಸಿಕೊಳ್ಳುತ್ತದೆ.

ತಾ || ಸತ್ವ, ಅಸತ್ವ ಮೊದಲಾದ ಪ್ರಕಾರಗಳಿಂದ ನಿರ್ವಚನಮಾಡಲಿಕ್ಕೆ ಅಶಕ್ಯವಾದುದರಿಂದ ಅನಿರ್ವಾಚ್ಯವೆಂದಲ್ಲ. ಅಪಸಿದ್ಧಾಂತ ಬರುವುದರಿಂದ ಬ್ರಹ್ಮಾದಿಗಳಿಗೆ ಅನಿರ್ವಾಚ್ಯತ್ವವನ್ನೊಡಂಬಡಕೂಡದು. ಆದಕಾರಣ, ಬ್ರಹ್ಮಾದಿಗಳಿಗೆ ಅನಿರ್ವಾಚ್ಯತ್ವಪ್ರತಿಪಾದಕವಾದ ಶ್ರುತಿಗೆ ಅತ್ಯಾಶ್ಚರ್ಯನಾದುದರಿಂದಲೇ ಅನಿರ್ವಾಚ್ಯನೆಂದು ಹೇಗೆ ಅರ್ಥಮಾಡಬೇಕೋ, ಹಾಗೆಯೇ ಚೇತ್ಯವೂ ಈ ಪ್ರಕರಣದಲ್ಲಿಯೇ ಇರುವುದರಿಂದ ಇದೇ ರೀತಿಯಾಗಿ (ಅಂದರೆ ಅತ್ಯಾಶ್ಚರ್ಯವಾದ ಪ್ರಯುಕ್ತವೇ ಅನಿರ್ವಾಚ್ಯವೆಂದು ಈ ಶ್ರುತಿಪುರಾಣಾದಿಗಳಲ್ಲಿ ಹೇಳಿಯದೆ ಎಂದೇ ಅರ್ಥವನ್ನು ಮಾಡಬೇಕು) || ೧೬ ||

**ಮೂ || ಅಚಿಂತ್ಯಂ ತತ ಏವೈತದತರ್ಕ್ಯಾಜ್ಞೇಯಮೇವ ಚ || ೧೭ ||**

ಅ || ಏತತ್=ಈ ಬ್ರಹ್ಮನು, ಚೇತನವು ಜಡವೂ ಕೂಡ, ತತ ಏವ=ಅತ್ಯಾಶ್ಚರ್ಯವಾದ ಪ್ರಯುಕ್ತವೇ, ಅಚಿಂತ್ಯಂ=ಅಚಿಂತ್ಯವೆನ್ನಿಸುತ್ತದೆ. ತತ ಏವ=ಅತ್ಯಾಶ್ಚರ್ಯವಾಗಿರುವುದರಿಂದಲೇ, ಅತರ್ಕ್ಯಾಜ್ಞೇಯಂ ಚ=ಅತರ್ಕ್ಯವೆಂದೂ, ಅಜ್ಞೇಯವೆಂದೂ, (ಹೇಳಿಸಿಕೊಳ್ಳಲ್ಪಡುತ್ತದೆ.)

ತಾ || (1) ಸತ್ವ ಅಸತ್ವ ಮೊದಲಾದ ಪ್ರಕಾರಗಳಿಂದ ಮನೋವೃತ್ತಿಗೆ ವಿಷಯವಾಗದಿರುವುದರಿಂದ ಅಚಿಂತ್ಯವೆಂದೂ, ಸತ್ವಾದಿ ಪ್ರಕಾರಗಳಿಂದ ಅನುಮೇಯಿಸಲಿಕ್ಕೆ ಅಶಕ್ಯವಾದುದರಿಂದ ಅತರ್ಕ್ಯವೆಂದೂ, ಸತ್ವಾದಿ ಪ್ರಕಾರಗಳಿಂದ ಪ್ರತ್ಯಕ್ಷದಿಂದ ತಿಳಿಯಲಶಕ್ಯವಾದುದರಿಂದ ಅಜ್ಞೇಯವೆಂದೂ, ಅದ್ವೈತಿಗಳು ಹೇಳುವರು. ಶ್ರುತಿ ಸ್ಮೃತಿವಿರುದ್ಧವಾಗಿರುವುದರಿಂದ ಹಾಗೆ ಹೇಳಕೂಡದು. 'ಅಜ್ಞೇಯಂ' ಎಂಬುವುದರಿಂದಲೇ 'ಅಚಿಂತ್ಯ' ಎನ್ನುವುದೂ, ಸಿಗುವುದರಿಂದ ಪ್ರತ್ಯೇಕವಾಗಿ ಏತಕ್ಕೆ ಪ್ರಯೋಗಿಸಿರುವರೆಂದರೆ, ಮನೋವೃತ್ತಿಯು ಪ್ರತ್ಯಕ್ಷವಾಗಿದ್ದಾಗ್ಯೂ ಅಂತರಿಂದ್ರಿಯದಿಂದ ಹುಟ್ಟಿದ್ದು ಎಂಬುವ ಭೇದವಿದ್ದುದರಿಂದ ಬೇರೆಬೇರೆಯಾಗಿಯೇ ಪ್ರಯೋಗಿಸಿರುವರು. || ೧೭ ||

ಬ್ರಹ್ಮನಿಗೂ ಪ್ರಪಂಚಕ್ಕೂ ಎರಡಕ್ಕೂ ಅನಿರ್ವಾಚ್ಯತ್ವಾದಿಗಳನ್ನು ಹೇಳುವ ವಾಕ್ಯಕ್ಕೆ ಹೀಗೆಯೇ ಅರ್ಥವಿರಲಿ. ಯಾವ ವಾಕ್ಯದಲ್ಲಿ ಬ್ರಹ್ಮನೇ ಸತ್ಯನು, ಬೇರೆಯಾದುದು ಅಸತ್ಯವೆಂದು ಹೇಳಿಯದೊ, ಅಂತಹ ವಾಕ್ಯಕ್ಕೆ ಏನು ಅರ್ಥವನ್ನು ಹೇಳುವಿರಿ, ಎಂಬುವ ಪರರ ಆಶಂಕೆಯನ್ನು ಪರಿಹರಿಸುತ್ತಾರೆ.

**ಮೂ || ಋಗತಾವಿತಿಧಾತೋಸ್ತು ಪೂರ್ವಾವಗತವತ್ಸದಾ । ಸ್ಥಿತೇರ್ಬ್ರಹ್ಮರ್ತಮಿತ್ಯುಕ್ತಮನೃತಂ ಪರಿಣಾಮತಃ । ಪ್ರಕೃತಿಪ್ರಾಕೃತಂ ಪ್ರೋಕ್ತಂ || ೧೮ ||**

ಅ|| 'ಋ=ಎಂಬುವ ಧಾತುವು. ಗತೌ=ಜ್ಞಾನವೆಂಬುವ ಅರ್ಥದಲ್ಲಿರುತ್ತದೆ. ಇತಿ=ಹೀಗೆ, ಧಾತೋಸ್ತು=ಧಾತುವನ್ನು ವ್ಯಾಖ್ಯಾನಮಾಡಿರುವುದರಿಂದ, ಪೂರ್ವಾವಗತವತ್=ಅನಾದಿಕಾಲವನ್ನಾರಂಭಿಸಿ ತಿಳಿಯಲ್ಪಟ್ಟವನಂತೆ, ಸದಾ=ಯಾವಾಗಲೂ, ಸ್ಥಿತೇಃ=ಇರೋಣದರಿಂದ,

ಬ್ರಹ್ಮ=ಪರಬ್ರಹ್ಮನು, ಋತಮಿತಿ=ಋತವೆಂದು, ಉಕ್ತಂ=ಹೇಳಲ್ಪಟ್ಟಿದ್ದಾನೆ. ಪ್ರಕೃತಿ ಪ್ರಾಕೃತಂ, ಪಕೃತಿ=ಜಡಪ್ರಕೃತಿಯು, ಪ್ರಾಕೃತಂ=ತತ್ಸಂಬಧಿಯಾದುದು, ತತ್ಪರಿಣಾಮವಾದ ಮಹದಾದಿತತ್ವವು, ಪರಿಣಾಮತಃ=ಬದಲಾವಣೆಯಾಗುವುದರಿಂದ, ಅನೃತಮಿತಿ=ಅನೃತವೆಂದು, ಉಕ್ತಂ=ಹೇಳಲ್ಪಟ್ಟಿದೆ.

ತಾ || (1) ಗತ್ಯರ್ಥಕವಾದ ಧಾತುವಿಗೆ ಜ್ಞಾನವೆಂಬುವ ಅರ್ಥವಿದೆ. ಕ್ತ ಪ್ರತ್ಯಯವು ಅತೀತಾರ್ಥಕವು. ದಾಟಿದಕಾಲಕ್ಕೆ ಅವಧಿಯನ್ನು ಹೇಳದಿರುವುದರಿಂದ ಅನಾದಿಯೆಂಬ ಅರ್ಥವು ಸಿಗುವುದು. ಅಂತೂ ಋತಂ ಎಂದರೆ ಅನಾದಿಕಾಲದಿಂದ ತಿಳಿಯಲ್ಪಟ್ಟದ್ದು. (2) ಇದು ಪ್ರಕೃತ್ಯಾದಿಗಳಿಗೂ ಇರುವುದರಿಂದ ಅನಾದಿ ಕಾಲವನ್ನಾರಂಭಿಸಿ ಯಾವಾಗಲೂ ತಿಳಿದು ಇರೋಣವು ಬ್ರಹ್ಮನಿಗೇನೇ ಎಂಬುವುದು ಹೇಗೆ ಯುಕ್ತವಾಗಬಹುದೆಂದರೆ- ಪ್ರಕೃತ್ಯಾದಿಗಳಿಗೆ ಪರಿಣಾಮ ವಿದೆ. ಬ್ರಹ್ಮನಿಗೆ ಪರಿಣಾಮವಿಲ್ಲ. ಅಂತೂ ಜಗತ್ತಿಗೆ ಪರಿಣಾಮವಿದ್ದುದರಿಂದ ಅನೃತವೆಂದು 'ಅನೃತೇನ ಹಿ ಪ್ರತ್ಯೂಢಾಃ' ಎಂಬುವ ಶ್ರುತಿಯಲ್ಲಿಯೂ ಬ್ರಹ್ಮನಿಗೆ ಪರಿಣಾಮವಿಲ್ಲದಿರುವುದರಿಂದ ಋತವೆಂದೂ 'ತದೇವರ್ತಂ' ಎಂಬುವ ಶ್ರುತಿಯಲ್ಲಿಯೂ ಉಕ್ತವಾಗಿದೆ. ಸತ್ತಾದುದರಿಂದ ಋತಂ, ಅಸತ್ತಾದುದರಿಂದ ಅನೃತವೆನ್ನಿಸಿಕೊಳ್ಳುತ್ತದೆ, ಎಂದು ಹೇಳಕೂಡದು || ೧೮ ||

**ಮೂ || ಅಸತ್ತದಶುಭತ್ವತಃ || ೧೯ ||**

ಅ || ತತ್=ಆ ಜಗತ್ತು, ಅಶುಭತ್ವತಃ=ಸಂಸಾರರೂಪವಾದುದರಿಂದ ಅಶುಭವಾದ ಪ್ರಯುಕ್ತವೇ, ಅಸತ್=ಅಸತ್ತು ಎನ್ನಿಸುತ್ತದೆ. (ಬ್ರಹ್ಮ=ಪರಬ್ರಹ್ಮನು ಪರಮಾನಂದಸ್ವರೂಪನಾದುದರಿಂದ ಶುಭನಾದ ಪ್ರಯುಕ್ತವೇ, ಸತ್ ಎಂದು ಹೇಳಲ್ಪಟ್ಟಿದ್ದಾನೆ.) || ೧೯ ||

**ಮೂ || ಅಸತಾಂ ಬುದ್ಧಿಗಮ್ಯತ್ವಾದಸತ್ಯಮಿತಿ ಚೋಚ್ಯತೇ || ೨೦ ||**

ಅ || ತತ್=ಆ ಜಗತ್ತು, ಅಸತಾಂ=ದುರ್ಜನರ, ಬುದ್ಧಿಗಮ್ಯತ್ವಾತ್=ಬುದ್ಧಿಗೆ ವಿಷಯವಾದುದರಿಂದ, ಅಸತ್ಯಮಿತಿ ಚ=ಅಸತ್ಯವೆಂದೂ, ಉಚ್ಯತೇ=ಹೇಳಲ್ಪಡುತ್ತದೆ. (ಬ್ರಹ್ಮನು ಸಜ್ಜನರ ಬುದ್ಧಿಗೆ ವಿಷಯನಾದುದರಿಂದ ಸತ್ಯನೆಂದೂ ಹೇಳಲ್ಪಡುತ್ತಾನೆ.) || ೨೦ ||

ಪ್ರಕೃತಿ ಮೊದಲಾದುದೂ ಕೂಡ ಸಜ್ಜನರ ಬುದ್ಧಿಗೆ ವಿಷಯವಾದುದರಿಂದ ಬ್ರಹ್ಮನೇ ಸಜ್ಜನರ ಬುದ್ಧಿಗೆ ವಿಷಯನಾದುದರಿಂದ ಸತ್ಯನು ಎನ್ನುವುದು, ಅಸಜ್ಜನರ ಬುದ್ಧಿಗೆ ವಿಷಯ ವಾದುದರಿಂದ ಪ್ರಕೃತಿ ಮೊದಲಾದುದೇ ಅಸತ್ಯವು. ಹೀಗೆ ವಿಶೇಷಾಕಾರವಾಗಿ ಹೇಳಲು ಕಾರಣ ವೇನೆಂದರೆ- ಪ್ರಕೃತ್ಯಾದಿಗಳು ಕೆಲವು ವೇಳೆ ಸಜ್ಜನರ ಬುದ್ಧಿಗೆ ವಿಷಯಗಳಾಗಿದ್ದರೂ ಸರ್ವದಾ ಸಜ್ಜನರ ಬುದ್ಧಿಗೆ ವಿಷಯಗಳಾದ ಸತ್ಯಗಳಲ್ಲವು. ಹಾಗೆಯೇ ಬ್ರಹ್ಮನು ಕೆಲವುವೇಳೆ ಅಸಜ್ಜನರ ಬುದ್ಧಿಗೆ ವಿಷಯನಾದಾಗ್ಯೂ, ಸರ್ವದಾ ದುರ್ಜನರ ಬುದ್ಧಿಗೆ ವಿಷಯನು, ಎಂಬುವ ಅಸತ್ಯನಲ್ಲ. ಈ ನಿಯಮವನ್ನು ಸೂಚಿಸಲಿಕ್ಕಾಗಿ ಸತ್ ಅಸತ್ ಶಬ್ದಾರ್ಥಗಳನ್ನು ಬಿಡಿಸಿ ಹೇಳುತ್ತಾರೆ.

**ಮೂ || ನಿಯಮೇನ ಬಹಿಶ್ಚಿತ್ತಾಸ್ತೇಽಸಂತೋ ಬ್ರಹ್ಮಣಿಸ್ಥಿತಾಃ || ೨೧ ||**

ಅ || ಯೇ=ಯಾರು, ನಿಯಮೇನ=ನಿರಂತರದಲ್ಲಿಯೂ, ಬಹಿಶ್ಚಿತ್ತಾಃ=ಬ್ರಹ್ಮನಲ್ಲಿ ಮನಸ್ಸನ್ನು ಇಡದ ಪ್ರಕೃತ್ಯಾದಿ ಸಂಸಾರದಲ್ಲಿಯೇ ಮನಸ್ಸುಳ್ಳವರೋ, ತೇ=ಅವರು, ಅಸಂತಃ=ದುರ್ಜನರು. ಯೇ=ಯಾರು, ಬ್ರಹ್ಮಣಿ ಸ್ಥಿತಾಃ=ಪರಬ್ರಹ್ಮನಲ್ಲಿಯೇ ಆಸಕ್ತವಾದ ಬುದ್ಧಿಯುಳ್ಳವರೋ, ತೇ=ಅವರು, ಸಂತಃ=ಸಜ್ಜನರು || ೨೧ ||

**ಮೂ || ವಿಶ್ವಂ ಸತ್ಯಂ ವಶೇ ವಿಷ್ಣೋರ್ನಿತ್ಯಮೇವ ಪ್ರವಾಹತಃ || ೨೨ ||**

ಅ || ವಿಶ್ವಂ=ಜಗತ್ತು, ಸತ್ಯಂ=ಯಥಾರ್ಥವಾದುದಾಗಿಯೇ, (ಪ್ರಾಜ್ಞಸಮ್ಮತವು.) ವಿಷ್ಣೋಃ=ಶ್ರೀ ಪರಮಾತ್ಮನ, ವಶೇ=ಅಧೀನದಲ್ಲಿರುವುದು ಪ್ರವಾಹತಃ=ಪ್ರವಾಹದಿಂದ, ನಿತ್ಯಮೇವ=ನಿತ್ಯವಾದುದೇ.

ತಾ || (1) ಪರಬ್ರಹ್ಮನಂತೆಯೇ ಜಗತ್ತು ಸತ್ಯವೆಂದೇ ನಿಶ್ಚಿತವಾಗಿರುವುದರಿಂದ 'ಪ್ರಪಂಚಃ ಅನೃತಃ' ಇತ್ಯಾದಿಗಳಿಗೆ ಬೇರೆ ಅರ್ಥವನ್ನು ಪ್ರತಿಪಾದಿಸಿದರು. (2) ಜಗತ್ತು ಸತ್ಯವಾದಾಗ್ಯೂ ಬ್ರಹ್ಮ ಮತ್ತು ಜಗತ್ತು ಇವುಗಳಿಗೆ ಐಕ್ಯವನ್ನು ಶಂಕಿಸಕೂಡದು. ಏಕೆಂದರೆ- ಜಗತ್ತಿನ ಸತ್ಯತೆಯೂ ಭಗವಂತನ ಅಧೀನವೇ. (3) ಜಗತ್ತು ಶ್ರೀ ಹರಿಯ ಅಧೀನದಲ್ಲಿದ್ದರೂ ಶ್ರೀ ಹರಿಯು ನಾಶಾದಿಗಳನ್ನು ಮಾಡುವುದಿಲ್ಲ, ನಿತ್ಯವೇ ಆಗಿದೆ. (4) ಜಗತ್ತೂ ನಿತ್ಯವಾಗಿದ್ದರೆ ಕುರ್ಚಿ ಮೊದಲಾದವುಗಳಿಗೆ ನಾಶವು ಪ್ರತ್ಯಕ್ಷ ಸಿದ್ಧವಾದುದರಿಂದ ಪ್ರತ್ಯಕ್ಷಾದಿ ವಿರೋಧವು ಬಂತೆಂದು ಶಂಕಿಸಕೂಡದು. ಏಕೆಂದರೆ- ಜಗತ್ತಿನ ಪ್ರವಾಹವು ನಿತ್ಯವೇ ಸರಿ || ೨೨ ||

**ಮೂ || ನಕ್ವಾಪ್ಯನೀದೃಶಂ ವಿಶ್ವಂ ತತ್ತತ್ಕಾಲಾನುಸಾರತಃ || ೨೩ ||**

ಅ || ಕ್ವಾಪಿ=ಯಾವ ಕಾಲದಲ್ಲಿಯೂ, ವಿಶ್ವಂ=ಜಗತ್ತು, ಅನೀದೃಶಂ=ಈ ರೀತಿಯಾಗಿಲ್ಲದಿರುವುದು, ನ = ಇಲ್ಲ, ತತ್ತತ್ಕಾಲಾನುಸಾರತಃ = ಆಯಾಯ ಕಾಲವನ್ನನುಸರಿಸಿ ಇರುತ್ತದೆ.

ತಾ || (1) ಜಗತ್ತು ಪ್ರವಾಹದಿಂದ ನಿತ್ಯವಾಗಿದ್ದಾಗ್ಯೂ, ಒಂದು ಕಲ್ಪದಲ್ಲಿ ಒಂದು ರೀತಿ, ಮತ್ತೊಂದು ಕಲ್ಪದಲ್ಲಿ ಬೇರೆ ರೀತಿ ಹೀಗೆ ಶ್ರೀ ಹರಿಯು ವ್ಯತ್ಯಾಸಮಾಡುವುದಿಲ್ಲ. ಅಂದರೆ ಈಗ ಇದ್ದಂತೆಯೇ ಬರುವ ಕಲ್ಪದಲ್ಲಿಯೂ ಸೃಷ್ಟಿಸುವನು. (2) ವೈಚಿತ್ರ್ಯವಿಲ್ಲದೆ ಒಂದೇ ರೀತಿಯಾಗಿ ಜಗತ್ತನ್ನು ಶ್ರೀ ಹರಿಯು ಸೃಷ್ಟಿಸುತ್ತಾನೆ, ಎಂದು ಹೇಳಿದರೆ ಪ್ರಲಯಾದಿಗಳನ್ನು ಪ್ರತಿಪಾದಿಸುವ ಆಗಮವಿರೋಧವು ಬಂತೆಂದು ಶಂಕಿಸಕೂಡದು. ಯಾವ ಕಾಲದಲ್ಲಿ ಯಾವ ರೀತಿಯಾಗಿ ಆಗಬೇಕೋ, ಆಗ ಆ ರೀತಿಯಾಗಿ ಆಗಲಿಕ್ಕೆ ವ್ಯತ್ಯಾಸವಿಲ್ಲವೆಂದು ತಾತ್ಪರ್ಯವು. || ೨೩ ||

ಇಂತಹ ಜಗತ್ತನ್ನು ಕೆಲವರು ವಿಪರೀತವಾಗಿ ಏತಕ್ಕೆ ಹೇಳುವರು? ಎಂದಾಶಂಕಿಸಿದರೆ—

**ಮೂ || ಅಸತ್ಯಮಪ್ರತಿಷ್ಠಂ ಯೇ ಜಗದಾಹುರನೀಶ್ವರಂ |**
**ತ ಅಸುರಾಃ ಸ್ವಯಂ ನಷ್ಟಾ ಜಗತಃ ಕ್ಷಯಕಾರಿಣಃ || ಇತ್ಯಾದಿ**
**ವ್ಯಾಸಸ್ಮೃತೌ || ೨೪ ||**

ಅ || ಯೇ=ಯಾರು, ಜಗತ್=ಪ್ರಪಂಚವನ್ನು, ಅಸತ್ಯಂ=ಮಿಥ್ಯಾಭೂತವಾದುದನ್ನಾಗಿಯೂ, ಅಪ್ರತಿಷ್ಠಂ=ಜ್ಞಾನದಿಂದ ಬಾಧಿಸಲ್ಪಡುವುದನ್ನಾಗಿಯೂ, ಅನೀಶ್ವರಂ=ನಿಯಾಮಕನಿಲ್ಲದಿರುವುದನ್ನಾಗಿಯೂ, ಆಹುಃ=ಹೇಳುವರೋ, ತೇ=ಅವರು, ಅಸುರಾಃ=ಅಸುರರು, ಸ್ವಯಂ ನಷ್ಟಾಃ=ತಾವೇ ನಾಶಹೊಂದುವವರು, (ದುರ್ಬುದ್ಧಿಯುಳ್ಳವರು,) ಜಗತಃ= ಲೋಕಕ್ಕೆ, ಕ್ಷಯಕಾರಿಣಃ=ನಾಶವನ್ನುಂಟುಮಾಡುವವರು, (ಜನರಿಗೆ ವಿಪರೀತಜ್ಞಾನವನ್ನು ಹುಟ್ಟಿಸುವವರು,) ಇತ್ಯಾದಿ=ಇವೇ ಮೊದಲಾದ ವಿಷಯಗಳು, ವ್ಯಾಸಸ್ಮೃತೌ=ವ್ಯಾಸಸ್ಮೃತಿಯಲ್ಲಿ ಇವೆ. || ೨೪ ||

ಜಗತ್ತು ಅನಿರ್ವಚನೀಯವೆಂದು ಪ್ರತಿಪಾದಿಸುವ ವಚನಗಳಿಗೆ 'ಅದ್ಭುತತ್ವಾದನಿರ್ವಾಚ್ಯಂ' ಇತ್ಯಾದಿ ವಾಕ್ಯಗಳಿಂದ ಬೇರೆ ಅರ್ಥವನ್ನು ಪ್ರತಿಪಾದಿಸಿದರು. ಅದನ್ನೇ ಸಮರ್ಥಿಸಲಿಕ್ಕೆ ಜಗತ್ತು ಸತ್ಯವೆಂದು ಭಗವದ್ಗೀತೆಯಿಂದಲೂ, ಶ್ರುತಿಗಳಿಂದಲೂ ಶ್ರೀಮದಾಚಾರ್ಯರು ದೃಢೀಕರಿಸುತ್ತಾರೆ.

ಮೂ ॥ ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ । ಅಪರಸ್ಪರ ಸಂಭೂತಂ ಕಿಮನ್ಯತ್ಕಾಮಹೈತುಕಂ । ಏತಾಂ ದೃಷ್ಟಿಮವ ಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ । ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ಇತ್ಯಾದಿ ಚ ಗೀತಾಸು ॥ ೨೫ ॥
[ಅಧ್ಯಾಯ ೧೬. ಶ್ಲೋಕ ೮. ೯.]

ಅ ॥ (ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ । ಆಸುರಾ ಜನಾಃ= ಅಸುರಜನರು, ಪ್ರವೃತ್ತಿಂ ಚ = ಪ್ರವೃತ್ತಿಯನ್ನೂ, ನಿವೃತ್ತಿಂಚ = ನಿವೃತ್ತಿಯನ್ನೂ ಕೂಡ, ನ ವಿದುಃ=ತಿಳಿಯಲಾರರು.) ತೇ=ಅಂತಹ ಅಸುರರು, ಜಗತ್=ಪ್ರಪಂಚವನ್ನು, ಅಸತ್ಯಂ= ಮಿಥ್ಯಾಭೂತವಾದುದನ್ನಾಗಿಯೂ ಅದರಿಂದಲೇ, ಅಪ್ರತಿಷ್ಠಂ=ಜ್ಞಾನಬಾಧ್ಯವಾದುದನ್ನಾ ಗಿಯೂ, ಜ್ಞಾನಬಾಧ್ಯವಾಗಿರುವುದರಿಂದಲೇ, ಅನೀಶ್ವರಂ=ನಿಯಾಮಕರಹಿತವಾದುದನ್ನಾ ಗಿಯೂ, ಆದುದರಿಂದಲೇ, ಅಪರಸ್ಪರಸಂಭೂತಂ=ಪರಸ್ಪರವಾಗಿ ಹುಟ್ಟದ್ದಲ್ಲವಾದುದನ್ನಾ ಗಿಯೂ, (ಅಂದರೆ ಆತ್ಮನಿಂದ ಆಕಾಶವು ಹುಟ್ಟಿತು, ವಾಯುವಿನಿಂದ ಬೆಂಕಿಯು ಹುಟ್ಟಿತು, ಹೀಗೆ ಶ್ರುತಿಯು ಘೋಷಿಸುತ್ತಿದೆ. ಒಂದು ವಸ್ತುವಿನಿಂದ ಇನ್ನೊಂದು ವಸ್ತುವು ಹುಟ್ಟದ್ದಲ್ಲ ವೆಂದು) ಆಹುಃ=ಹೇಳುತ್ತಾರೆ. ಕಿಂ=ಸತ್ಯವಲ್ಲದಿದ್ದರೆ ಅಸತ್ತೋ ಏನು, ಎಂದರೆ- ಅನ್ಯತ್= ಸತ್ ಅಸತ್‌ಗಳಿಂದ ಬೇರೆಯಾದುದು. ಕಿಂ=ಒಂದರಿಂದ ಒಂದು ಹುಟ್ಟದ್ದಲ್ಲವಾದರೆ ನಿತ್ಯವೋ, ಎಂದರೆ- ಕಾಮ ಹೈತುಕಂ=ಕಾಮಕ್ಕೆ ಕಾರಣವಾದ ಅವಿದ್ಯೆಯೇ ಉಪಾದಾನ ಕಾರಣವಾಗಿ ಉಳ್ಳದ್ದು. ಏತಾಂ ದೃಷ್ಟಿಂ=ಇಂತಹ ಜ್ಞಾನವನ್ನು, ಅವಷ್ಟಭ್ಯ=ಆಶ್ರಯಿಸಿ, ನಷ್ಟಾತ್ಮಾನಃ= ದುರ್ಬುದ್ಧಿಯುಳ್ಳವರಾಗಿ, ಅಲ್ಪಬುದ್ಧಯಃ=ಐಹಿಕವನ್ನೇ ಪರಮಪುರುಷಾರ್ಥವೆಂದು ತಿಳಿಯು ವವರಾಗಿ, ಉಗ್ರಕರ್ಮಾಣಃ=ಕ್ರೂರಕರ್ಮಗಳನ್ನೇ ಮಾಡುವವರಾಗಿ, ಜಗತಃ=ಜಗತ್ತಿಗೇನೇ, ಅಹಿತಾಃ=ಶತ್ರುಗಳಾಗಿ, ಕ್ಷಯಾಯ=ಜಗತ್ತನ್ನೇ ಹಾಳುಮಾಡುವುದಕ್ಕೋಸ್ಕರ, ಪ್ರಭವಂತಿ= ಕಲಿಯುಗಾದಿಗಳಲ್ಲಿ ಹುಟ್ಟುವರು. ಇತ್ಯಾದ ಚ=ಇದೇ ಮೊದಲಾದ ವಿಷಯವೂ, ಗೀತಾಸು= ಭಗವದ್ಗೀತೆಗಳಲ್ಲಿ ಉಕ್ತವಾಗಿದೆ.

ತಾ ॥ 'ಜಗತ್ತನ್ನು ಅಸತ್ಯವೆಂದು ಹೇಳುವವರು ಅಸುರರು' ಎಂದು ಹೇಳಿರುವುದರಿಂದ ಜಗತ್ತು ಸತ್ಯವೆಂದೇ ನಿಶ್ಚಿತವಾಯಿತು ॥ ೨೫ ॥

ಮೂ ॥ ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ । ಪ್ರಭಾನ್ನಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಂ । ಸತ್ಯಃ ಸೋ ಅಸ್ಯ ಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ । ಕವಿರ್ಮನೀಷೀ ಪರಿಭೂಃ ಸ್ವಯಂಭೂ ರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ । ಇತ್ಯಾದಿ ಶ್ರುತಿಭ್ಯಶ್ಚ ॥ ೨೬ ॥

ಅ ॥ ಮಘವಾನಾ=ಧನಾದಿಗಳುಳ್ಳ ಇಂದ್ರ ಬೃಹಸ್ಪತಿಗಳಿರಾ, ಯುವೋಃ=ನಿಮ್ಮ ಸಂಬಂಧಿಕವಾದ, (ನೀವು ಸೃಷ್ಟಿಸಿದ) ವಿಶ್ವಂ=ಜಗತ್ತು, ಸತ್ಯಮಿತ್=ಸತ್ಯವೇ ಸರಿ. (ನಾನು ಮಾತ್ರ ಹೀಗೆ ತಿಳಿಯುವುದಲ್ಲ.) ಆಪಶ್ಚನ=ಜಲಾಭಿಮಾನಿ ದೇವತೆಗಳೂ ಕೂಡ, ವಾಂ=ನಿಮ್ಮ, ವ್ರತಂ=ಸತ್ಯವಾದ ಜಗತ್ಸೃಷ್ಟಿ ಮೊದಲಾದ ಕರ್ಮವನ್ನು, ಪ್ರಮಿನಂತಿ=ಚೆನ್ನಾಗಿ ತಿಳಿಯುತ್ತಾರೆ. (ಈ ರೀತಿಯಾಗಿ ಎರಡು ರೂಪವುಳ್ಳ ಶ್ರೀ ಹರಿಯನ್ನು ಕುರಿತು ಹೇಳಿದ್ದಾಗಿರುತ್ತದೆ.) ನು= ಈಗ, ಅಸ್ಯ=ಈ, ಮಹತಃ=ಸರ್ವೋತ್ತಮನಾದ, ಸತ್ಯಸ್ಯ=ಸತ್ಯನಾಮಕನಾದ ಶ್ರೀ ಹರಿಯ, ಮಹಾನಿ = ಶ್ರೇಷ್ಠಗಳಾದ, ಸತ್ಯಾ = ಯಥಾರ್ಥಗಳೇ ಆದ, ಕರಣಾನಿ = ಕರ್ಮಗಳನ್ನು, ಪ್ರಾವೋಚಂ ಘ=ಹೇಳಿದೆನು. (ವಿಷಯವು ಸತ್ಯವಾಗದೆ ಜಗತ್ಸೃಷ್ಟ್ಯಾದಿ ಕರ್ಮಗಳು ಸತ್ಯಗಳಾಗಲಾರವು. ಆದುದರಿಂದ ಜಗತ್ತು ಸತ್ಯವೆಂದೇ ಸಿದ್ಧವಾಯಿತು.) ಸಃ=ಆ ಜಗತ್ಸೃಷ್ಟಿ ಮೊದಲಾದ, ಅಸ್ಯ=ಈ ಹರಿಯ, ಮಹಿಮಾ=ಮಾಹಾತ್ಮ್ಯೆಯು, ಸತ್ಯಃ=ಯಥಾರ್ಥವಾದುದೇ. ವಿಪ್ರರಾಜ್ಯೇ=ಬ್ರಾಹ್ಮಣರೇ ಪ್ರಧಾನರಾಗಿವುಳ್ಳ, ಯಜ್ಞೇಷು=ಯಾಗಗಳಲ್ಲಿ, ಶವಃ=ಸುಖವನ್ನು ದ್ದೇಶಿಸಿ, ಆ ಹರಿಯನ್ನು, ಗೃಣೇ=ಸ್ತುತಿಸುತ್ತೇನೆ. ಕವಿಃ=ಸರ್ವಜ್ಞನಾದ, ಮನೀಷೀ=ಸರ್ವರ ಮನಸ್ಸನ್ನೂ ಪ್ರೇರಿಸುವ, ಪರಿಭೂಃ=ಸರ್ವರನ್ನೂ ತಿರಸ್ಕರಿಸುವ, (ಸರ್ವೋತ್ತಮನು) ಸ್ವಯಂಭೂಃ=ಸ್ವತಂತ್ರನಾದ ಶ್ರೀ ಹರಿಯು, ಶಾಶ್ವತೀಭ್ಯಃ ಸಮಾಭ್ಯಃ=ಸರ್ವಕಾಲಗಳಲ್ಲಿಯೂ, ಅರ್ಥಾನ್=ಮಹತ್ತತ್ವ ಮೊದಲಾದುವುಗಳನ್ನು, ಯಾಥಾತಥ್ಯತಃ=ಸತ್ಯವಾದವುಗಳನ್ನಾಗಿಯೇ, ವ್ಯದಧಾತ್=ಸೃಷ್ಟಿಸಿದನು. (ಮಿಥ್ಯಾಭೂತಗಳಾದವುಗಳನ್ನಲ್ಲ.) ಇತ್ಯಾದಿ ಶ್ರುತಿಸ್ಮೃತಿಭ್ಯಶ್ಚ= ಇದು ಮೊದಲಾದ ಶ್ರುತಿಸ್ಮೃತಿಗಳಿಂದಲೂ ಕೂಡ.

ತಾ ॥ ಈ ಪ್ರಕಾರ ಶ್ರುತಿಸ್ಮೃತಿಗಳು ಪ್ರಪಂಚವನ್ನು ಸತ್ಯವೆಂದೇ ಹೇಳುತ್ತಿವೆ. ಪ್ರಪಂಚವು ಅನಿರ್ವಾಚ್ಯವೆಂದು ಪ್ರತಿಪಾದಿಸುವ ವಚನಗಳಿಗೆ ಬೇರೆ ಅರ್ಥವನ್ನೇ ಹೇಳಬೇಕು. ಅಂತೂ ಆಗಮವು ಅನಿರ್ವಚನೀಯವಿಷಯದಲ್ಲಿ ಪ್ರಮಾಣವಲ್ಲವೆಂದು ಸಿದ್ಧವಾಯಿತು ॥ ೨೬ ॥

ಅನಿರ್ವಚನೀಯ ವಿಷಯದಲ್ಲಿ ಆಗಮವು ಕೂಡದಿದ್ದರೂ ಅರ್ಥಾಪತ್ತಿರೂಪ ಪ್ರಮಾಣವು ಶುಕ್ತಿರಜತಾದಿಗಳಿಗೆ ಆಕಾಶ ಮೊದಲಾದುವುಗಳಿಗಾಗಲೀ ಅನಿರ್ವಚನೀಯತ್ವವನ್ನು ಸಾಧಿಸಿ ಕೊಡುತ್ತದೆ. ಹೇಗೆಂದರೆ- ಯತ್ ಅತ್ಯಂತಾಸತ್=ಯಾವುದು ಅತ್ಯಂತಾಸತ್ತು ಆದುದೋ, ತತ್ ನ ಪ್ರತೀಯತೇ=ಅದುತೋರುವುದಿಲ್ಲ. ಯಥಾ ನರವಿಷಾಣಂ=ಮನುಷ್ಯನ ಕೋಡಿನಂತೆ, ಯಚ್ಚ ಅತ್ಯಂತಸತ್=ಯಾವುದು ಅತ್ಯಂತ ಸತ್ ಪದಾರ್ಥವೋ, ತತ್ ನ ಬಾಧ್ಯತೇ=ಅದು ಬಾಧಿಸಲ್ಪಡುವುದಿಲ್ಲ. ಯಥಾऽತ್ಮಾ=ಆತ್ಮನಂತೆ, ಆದಪ್ರಯುಕ್ತ ಪ್ರಕೃತ ಜಗತ್ತಿಗೆ ಪ್ರತೀತಿಯೂ ಬಾಧವೂ ಎರಡೂ ಇವೆ. ಈ ಎರಡೂ ಬೇರೆ ರೀತಿಯಿಂದ ಕೂಡದಿದ್ದದ್ದಾಗಿ ಅನಿರ್ವಚನೀಯತ್ವವನ್ನು ಆಶ್ರಯಿಸುವುದೇ ಯುಕ್ತವೆಂದಾಶಂಕಿಸಿದರೆ-

**ಮೂ ॥ ನ ಚಾರ್ಥಾಪತ್ತ್ಯಾऽನಿರ್ವಚೆಯತ್ವಸಿದ್ಧಿಃ ॥ ೨೭ ॥**

ಅ ॥ ಅರ್ಥಾಪತ್ತ್ಯಾ ಚ=ಅರ್ಥಾಪತ್ತಿರೂಪಪ್ರಮಾಣದಿಂದಲೂ ಕೂಡ, ಅನಿರ್ವಚನೀಯತ್ವಸಿದ್ಧಿಃ=ಜಗತ್ತಿಗೆ ಅನಿರ್ವಚನೀಯತ್ವದ ಸಿದ್ಧಿಯು, ನ=ಆಗುವುದಿಲ್ಲ.

ತಾ ॥ ಅರ್ಥಾಪತ್ತಿಯಿಂದಲೂ ಜಗತ್ತು ಅನಿರ್ವಾಚ್ಯವೆಂದು ಸಿದ್ಧವಾಗುವುದಿಲ್ಲ. ಏಕೆಂದರೆ- ಅರ್ಥಾಪತ್ತಿಯು ಅನುಮಾನದಿಂದ ಬೇರೆಯಾಗುವುದಿಲ್ಲ. ವಿವಾದಪದಂ=ವಿವಾದ ವಿಷಯವಾದುದು, ಸದಸದ್ವಿಲಕ್ಷಣಂ=ಸತ್ತು ಅಸತ್ತು ಅಲ್ಲದಿರುವುದು, ಪ್ರತೀತತ್ವೇಸತಿ

ಬಾಧ್ಯತ್ವಾತ್=ತೋರಿಕೊಂಡು ಇದ್ದು ಬಾಧಿಸಲ್ಪಡುವುದರಿಂದ, ಎಂದು ಪ್ರಯೋಗಿಸಲಿಕ್ಕೆ ಬರುವುದರಿಂದ ಅನುಮಾನ ರೂಪವೇ, ಅನುಮಾನದಲ್ಲಿ ಅಪ್ರಸಿದ್ಧವಿಶೇಷಣತ್ವ ಮೊದಲಾದ ದೋಷಗಳು ಬರುತ್ತವೆ, ಎಂದು ನಿರಾಕರಣಮಾಡಿಯಾಗಿದೆ. (2) ಅಥವಾ 'ಅಸತ್ ನ ಪ್ರತೀಯತೇ' ಅಸತ್ತು ತೋರುವುದೇ ಇಲ್ಲ ಎಂಬ ವ್ಯಾಪ್ತಿಯಿಲ್ಲ. ಏಕೆಂದರೆ– ಮನುಷ್ಯನ ಕೋಡು ಮೊದಲಾದವುಗಳು ಅತ್ಯಂತಾಸತ್ತುಗಳೇ ಆಗಿವೆ. ಅವುಗಳಿಗೂ ನರವಿಷಾಣವೆಂಬ ಪದದಿಂದ ಪ್ರತೀತಿಯು (ಸಾಮಾನ್ಯಜ್ಞಾನವು) ಉಂಟಾಗುವುದು. ಆದ ಕಾರಣ ಶುಕ್ತಿರಜತಾದಿಗಳೂ ಅತ್ಯಂತಾಸತ್ತುಗಳೇ ಆದುವು. 'ಸತ್ ನ ಬಾಧ್ಯತೇ' ಯಾವುದು ಸತ್ ಆಗಿದೆಯೋ ಅದು ಬಾಧಿಸಲ್ಪಡುವುದಿಲ್ಲ, ಎಂಬೀ ವ್ಯಾಪ್ತಿಯಿಲ್ಲ, ಏಕೆಂದರೆ– ಬೇರೆ ರೀತಿಯಾಗಿ (ನಿರ್ಗುಣ ನಿರಾಕಾರ ಇತ್ಯಾದಿ ಪ್ರಕಾರ) ತಿಳಿದಿರುವುದನ್ನು ಚೆನ್ನಾಗಿ ತಿಳಿದು ಕೊಳ್ಳುವುದೇ (ಗುಣಪರಿಪೂರ್ಣನೆಂದು ತಿಳಿಯುವುದೇ) ಬಾಧವು. ಇದು ಸತ್ಯನಾದ ಬ್ರಹ್ಮನಿಗೂ ಕೂಡುತ್ತದೆ. ಆದ ಕಾರಣ ಆಕಾಶ ಮೊದಲಾದುವುಗಳು ಸತ್ಪದಾರ್ಥಗಳೇವೇ ಆದುವು. ಹೀಗಿರಲು ಅರ್ಥಾಪತ್ತಿಗೆ ಅನ್ಯಥೋಪಪತ್ತಿರೂಪವಾದ ದೋಷವು ಸಂಭವಿಸುವುದರಿಂದ ಆ ಅರ್ಥಾಪತ್ತಿರೂಪ ಪ್ರಮಾಣದಿಂದ ಜಗತ್ತು ಅನಿರ್ವಚನೀಯವೆಂದು ಸಿದ್ಧವಾಗಲಾರದು ॥ ೨೭ ॥

ಅತ್ಯಂತಾಸತ್ತಿಗೂ ಪ್ರತೀತಿಯನ್ನಂಗೀಕರಿಸದಿದ್ದರೆ ಬಾಧಕವೂ ಅದೆ, ಎಂದು ಸಮರ್ಥಿಸುತ್ತಾರೆ.

ಮೂ ॥ ಅಸತಃ ಪ್ರತೀತಿಂ ವಿನಾಽಸದ್ವೈಲಕ್ಷಣ್ಯ ಜ್ಞಾನಾನುಪಪತ್ತೇಃ ॥ ೨೮ ॥

ಅ ॥ ಅಸತಃ=ಅಸತ್ಪದಾರ್ಥದ, ಪ್ರತೀತಿಂ ವಿನಾ=ಜ್ಞಾನವಾಗದೆ, ಅಸದ್ವೈಲಕ್ಷಣ್ಯ ಜ್ಞಾನಾನುಪಪತ್ತೇಃ, ಅಸತ್=ಅಸತ್ಪದಾರ್ಥದಿಂದ, ವೈಲಕ್ಷಣ್ಯ=ಭೇದದ, ಜ್ಞಾನ=ಜ್ಞಾನವು, ಅನುಪಪತ್ತೇಃ=ಹುಟ್ಟದಿರುವುದರಿಂದ,

ತಾ ॥ (1) ಕುರ್ಚಿಯನ್ನೇ ತಿಳಿಯದವನು ಕುರ್ಚಿಯಿಂದ ಬೇರೆಂಚು ಬೇರೆಯೆಂದು ತಿಳಿಯಲಾರನು. ಭೇದ (ಬೇರೆಯೆಂದು) ಜ್ಞಾನ ಬರಬೇಕಾದರೆ ಪ್ರತಿಯೋಗಿಜ್ಞಾನವು ಆವಶ್ಯಕವೇ. ಆದಕಾರಣ ಅಸತ್ತೆಂಬ ಪ್ರತಿಯೋಗಿಯೇ ತೋರದಿದ್ದರೆ ಶುಕ್ತಿರಜತಾದಿಗಳು ಅಸದ್ವಿಲಕ್ಷಣಗಳು (ಅಸತ್ತಿನಿಂದ ಬೇರೆ) ಎಂದು ಪರನು ತಿಳಿಯಲಾರನು. (2) ಅಸತ್ತು ಕಣ್ಣಿನಿಂದ ತೋರುವುದಿಲ್ಲ. ಪರೋಕ್ಷಜ್ಞಾನಕ್ಕೆ ವಿಷಯವೇ ಆಗಿದೆ ಎಂದು ಪರರು ಹೇಳಿದರೂ ಇದೇ ಮೂಲವು ಉತ್ತರವು. ಅಸತ್ತು ಅಪರೋಕ್ಷಪ್ರತೀತಿಗೆ ತೋರದೆ ಹೋದರೆ ಪ್ರಾತಿಭಾಸಿಕವಾದ ಶುಕ್ತಿರಜತದಲ್ಲಿ ಅಸತ್ತಾದ ಪ್ರಾತಿಭಾಸಿಕ ವೈಲಕ್ಷಣ್ಯವನ್ನು ವಿಷಯೀಕರಿಸುವ ಅಪರೋಕ್ಷಪ್ರತೀತಿಯು ಕೂಡದೆ ಹೋಗಬೇಕಾಗುವುದು. (3) ಅತ್ಯಂತಾಸತ್ತು ಕಣ್ಣಿಗೆ ಗೋಚರವಾಗದಿದ್ದರೆ ಪ್ರಾತಿಭಾಸಿಕವಾದುದರಿಂದ ಕಾಲುಂಗುರಾದಿಗಳಿಗೆ ಉಪಯೋಗ ಬೀಳದ ಶುಕ್ತಿರಜತದಲ್ಲಿ ಅಸತ್ (ಇಲ್ಲದಿರುವ) ಪ್ರಾತಿಭಾಸಿಕದಿಂದ ಭೇದವು ಭ್ರಾಂತನಿಗೆ ಪ್ರತ್ಯಕ್ಷದಿಂದ ತೋರದೆ ಹೋಗಬೇಕಾದೀತು. ಶುಕ್ತಿಯಲ್ಲಿ ತೋರುವ ರಜತವನ್ನು ಇದು ಪ್ರಾತಿಭಾಸಿಕವೇ ಎಂದು ತಿಳಿದಿದ್ದರೆ ಬೆಳ್ಳಿಯನ್ನು ತರಲಿಕ್ಕೆ ಪ್ರವರ್ತಿಸಲಾರನು. (4) ಆದುದರಿಂದ ಬೆಳ್ಳಿಯನ್ನು ತರಲಿಕ್ಕೆ ಹೋಗುವವನು ಆ ಬೆಳ್ಳಿಯು ಪ್ರಾತಿಭಾಸಿಕವಲ್ಲವೆಂದೇ ತಿಳಿದಿರಬೇಕು. ಬೆಳ್ಳಿಯಲ್ಲಿ ತೋರುವ ಪ್ರಾತಿಭಾಸಿಕ ವೈಲಕ್ಷಣ್ಯವು ಅತ್ಯಂತಾಸತ್ತೆಂತ ಒಪ್ಪಬೇಕು. ಅಂತೂ ಅಸತ್ತಿಗೆ ಅಪರೋಕ್ಷ (ಪ್ರತ್ಯಕ್ಷ) ಪ್ರತೀತಿ ವಿಷಯತ್ವವನ್ನು ಅಂಗೀಕರಿಸಲೇಬೇಕು. 'ಅಸತ್ತು ಪ್ರತ್ಯಕ್ಷವಾಗುತ್ತದೆ' ಎಂದಂಗೀಕರಿಸದಿರಲಿಕ್ಕೆ ಏನು ಕಾರಣವು? ಎಂದು ದ್ವೈತಿಗಳು ಕೇಳಿದರೆ, ಪರರು ಒಂದು ಪ್ರತ್ಯಕ್ಷವು ಅಸತ್ತಾದ

ವಸ್ತುವನ್ನು ವಿಷಯೀಕರಿಸಿದರೆ ಎಲ್ಲಾ ಪ್ರತ್ಯಕ್ಷದಲ್ಲಿಯೂ ವಿಶ್ವಾಸವೇ ಹುಟ್ಟದೆ ಹೋಗ ಬೇಕಾಗುವುದು, ಎಂದುತ್ತರ ಕೊಟ್ಟರೆ ಆಗ ದ್ವೈತಿಗಳು ಅಸತ್ತನ್ನು ವಿಷಯೀಕರಿಸುವ ಪರೋಕ್ಷ ಜ್ಞಾನವನ್ನು ಒಪ್ಪಿದರೂ ವೇದಾಂತ ಮೊದಲಾದ ಶಬ್ದಗಳಿಂದುಂಟಾದ ಪರೋಕ್ಷ (ಕಣ್ಣಿಗೆ ಗೋಚರವಾಗದ) ಜ್ಞಾನದಲ್ಲಿಯೂ ಅಸದ್ವಿಷಯಕವೋ ಎಂಬ ಶಂಕೆಯಿಂದ ವಿಶ್ವಾಸ ಹುಟ್ಟದೆ ಹೋಗಬೇಕಾಗುವುದು. ಅದರಿಂದ ಅಸತ್ತನ್ನು ವಿಷಯೀಕರಿಸುವ ಪರೋಕ್ಷ ಜ್ಞಾನವನ್ನು ಕೂಡ ಸ್ವೀಕರಿಸದೆ ಹೋಗಬೇಕಾಗುವುದು. (5) ವಿಶ್ವಾಸವು ಬಾರದೆ ಹೋಗ ಬೇಕಾಗುವುದು ಎಂಬುವ ಅನಿಷ್ಟವು ಪ್ರಾತಿಭಾಸಿಕ ವಿಷಯಜ್ಞಾನವನ್ನು ಅಂಗೀಕರಿಸಿದರೂ ಸಮವೇ ಆಗಿರುತ್ತದೆ. 'ಇದು ಬೆಳ್ಳಿಯು' ಎಂಬುವ ಜ್ಞಾನವು ಪ್ರಾತಿಭಾಸಿಕವನ್ನು ವಿಷಯೀಕರಿಸುವುದಾದರೆ 'ಇದು ಕುರ್ಚಿಯು' ಇವೇ ಮೊದಲಾದ ಜ್ಞಾನಗಳೂ ಪ್ರಾತಿಭಾಸಿಕವನ್ನು ವಿಷಯೀಕರಿಸುತ್ತವೋ ಎಂಬಾಶಂಕೆಯಿಂದ ವಿಶ್ವಾಸವು ಬಾರದೆ ಇರುವುದರಿಂದ ಪ್ರವೃತ್ತಿಯೇ ಆಗದೆ ಹೋಗ ಬೇಕಾಗುವುದು. ಅಂದರೆ ಕುರ್ಚಿ ಮೊದಲಾದುವುಗಳಲ್ಲಿ ಕೂತುಕೊಳ್ಳಲಿಕ್ಕೆ ಪ್ರಯತ್ನವೇ ಇಲ್ಲದೆ ಹೋಗಬೇಕಾಗುವುದು. (6)ಆಗ ಪರರು 'ಇದು ಕುರ್ಚಿ' ಎಂಬ ಜ್ಞಾನದಲ್ಲಿ 'ಇದು ಕುರ್ಚಿಯಲ್ಲ' ಎಂಬುವ ಬಾಧಕ ಜ್ಞಾನವಿಲ್ಲದಿರುವುದರಿಂದ ವಿಶ್ವಾಸವು ಹುಟ್ಟುತ್ತದೆ. 'ಇದು ಬೆಳ್ಳಿಯು' ಎಂಬ ಜ್ಞಾನದಲ್ಲಿ 'ಇದು ಬೆಳ್ಳಿಯಲ್ಲ' ಎಂಬ ಬಾಧಕ ಜ್ಞಾನವು ಹುಟ್ಟುವುದರಿಂದ ವಿಶ್ವಾಸವು ಹುಟ್ಟುವುದಿಲ್ಲ. ಹೀಗೆ ವಿಂಗಡಿಸಿಕೊಳ್ಳುತ್ತೇವೆ ಎಂದು ಹೇಳಿದರೆ ಪ್ರಕೃತದಲ್ಲಿಯೂ ಸಮವೇ ಆಗಿಯದೆ. ಅಂದರೆ ಅಸತ್ತು ಪತ್ಯಕ್ಷವಾಗುತ್ತದೆ ಎಂದಂಗೀಕರಿಸಿದರೂ ಯಾವ ಅಪರೋಕ್ಷಜ್ಞಾನಕ್ಕೆ ಬಾಧಕ ಜ್ಞಾನವು ಹುಟ್ಟುತ್ತದೋ ಅಲ್ಲಿ ವಿಶ್ವಾಸ ಮಾಡುವುದು ಬೇಡ. ಬಾಧಕವಿಲ್ಲದಿರುವ 'ಇದು ಘಟವು' ಎಂಬುವ ಜ್ಞಾನದಲ್ಲಿ ವಿಶ್ವಾಸ ಮಾಡಲೇ ಬೇಕು. ಹೀಗೆ ವಿಂಗಡಿಸಿಕೊಳ್ಳುವೆವು. (7) ನಾವು (ದ್ವೈತಿಗಳು) ಶೂನ್ಯವಾದಿಗಳಂತೆ 'ಇದು ಬೆಳ್ಳಿಯು' ಎಂಬುವ ಜ್ಞಾನಕ್ಕೆ ವಿಷಯವಿಲ್ಲವೆಂದು ಹೇಳುವುದಿಲ್ಲ. ಈ ಶುಕ್ತಿರಜತ ಜ್ಞಾನಕ್ಕೆ ಶುಕ್ತಿಯೇ (ಮುತ್ತಿನ ಚಿಪ್ಪು) ವಿಷಯವೆಂದಂಗೀಕರಿಸಿರುವೆವು. ಆದರೂ ತನ್ನಲ್ಲಿ ತೋರುವ ಶುಕ್ತಿಯನ್ನು ಅತ್ಯಂತಾಸತ್ತಾದ ಬೆಳ್ಳಿಯನ್ನಾಗಿ ವಿಷಯೀಕರಿಸುವುದರಿಂದ ಈ ರಜತಜ್ಞಾನವು ಅಸದ್ವಿಷಯಕವೆನ್ನಿಸಿಕೊಳ್ಳುತ್ತದೆ. (೮) ರಜತಜ್ಞಾನವು ಶುಕ್ತಿಯನ್ನು ವಿಷಯೀಕರಿಸುತ್ತದೆ ಎನ್ನುವುದು ಅನುಭವ ವಿರುದ್ಧವಾಗಿದೆ. ಅಂತೂ 'ರಜತಜ್ಞಾನಂ ಶುಕ್ತಿವಿಷಯಕಂ ನ ಭವತಿ ರಜತಜ್ಞಾನತ್ವಾತ್' ಎಂಬೀ ಅನುಮಾನದಿಂದ ಹುಟ್ಟಿದ ಅನುಭವ ವಿರೋಧವನ್ನು ಹೇಳಿದಂತೆ ಆಯಿತು. ಅಂತೂ ರಜತಜ್ಞಾನವೆಂದಾಗದೆ ಹೋಗಬೇಕಾಗುವುದು. ಶುಕ್ತಿಜ್ಞಾನವೆಂದೇ ಆಗಬೇಕಾಗುವುದು ಎಂದು ಪರರು ಆಶಂಕಿಸಕೂಡದು. ಏಕೆಂದರೆ (9) 'ರಜತಜ್ಞಾನಸ್ಯ' ಎಂಬುವುದಕ್ಕೆ ಏನು ಅರ್ಥವನ್ನು ಹೇಳುವಿರಿ? ೧. ರಜತವನ್ನು ವಿಷಯೀಕರಿಸುವ ಜ್ಞಾನವೆಂದು ಇಟ್ಟುಕೊಂಡರೆ ಅಸಿದ್ಧಿಯು. ಹೇಗೆಂದರೆ- ಯಾವ ವಸ್ತುವಿನಲ್ಲಿ ಸಂಬಂಧವನ್ನು ಹೊಂದಿದ ಇಂದ್ರಿಯದಿಂದ ಯಾವ ಜ್ಞಾನವು ಹುಟ್ಟುತ್ತದೋ, ಅದು ಅದಕ್ಕೆ ವಿಷಯವಾಗುವುದು. ಆ ಕಾರಣ ರಜತವು ಮುಖ್ಯ ವಿಷಯವೇ ಆಗದಿರುವುದರಿಂದ ಈ ಜ್ಞಾನವು ಮುಖ್ಯವಾಗಿ ಬೆಳ್ಳಿಯನ್ನು ವಿಷಯೀಕರಿಸುವುದಿಲ್ಲ. ೨. ಬೆಳ್ಳಿಯನ್ನುಲ್ಲೇಖಿಸುವ ಜ್ಞಾನವೆಂದು ಇಟ್ಟುಕೊಂಡರೆ ಪರರಿಗೇನೇ ಅನುಭವವಿರೋಧವು ಬರುವುದು. ಯಾವ ಈ ವಸ್ತುವನ್ನು ಬೆಳ್ಳಿಯೆಂದು ನಾನು ತಿಳಿದೆನೋ ಅದು ಶುಕ್ತಿಯೇ ಎಂದು ಪ್ರತೀತಿಯು ರಜತೋಲ್ಲೇಖಿಯಾದ ಜ್ಞಾನಕ್ಕೆ ಶುಕ್ತಿವಿಷಯಕತ್ವವನ್ನೇ ವಿಷಯೀಕರಿಸುವುದರಿಂದ ಯದ್ಧ್ವಿಜ್ಞಾನಂ=ಯಾವ ಜ್ಞಾನವು, ಯದಾಕಾರಂ= ಯಾವ ಆಕಾರವುಳ್ಳದ್ದೋ (ಯಾವುದನ್ನು ಉಲ್ಲೇಖಿಸುವುದೋ), ತತ್ ತದ್ವಿಷಯಂ=ಆ ಜ್ಞಾನಕ್ಕೆ ಅದೇ ವಿಷಯವು ಎಂದು ವ್ಯಾಪ್ತಿಯದೆ. (ಈ ರಜತಜ್ಞಾನವು

ರಜತತೋಲ್ಲೇಖಿಯಾದುದರಿಂದ ಅಂದರೆ ರಜತವ್ಯವಹಾರವನ್ನು ಹುಟ್ಟಿಸುವುದರಿಂದ ಈ ಜ್ಞಾನಕ್ಕೆ ರಜತವೇ ವಿಷಯವು.) ಎಂದು ಪರರು ಆಶಂಕಿಸಿದರೆ- ಈ ವ್ಯಾಪ್ತಿಯನ್ನು ಯಥಾರ್ಥ ಜ್ಞಾನ ದಲ್ಲಿಯೇ ಇಟ್ಟುಕೊಳ್ಳಬೇಕು. ಭ್ರಾಂತಿಯಲ್ಲಿ ಹೇಳಕೂಡದು ಎಂದು ವ್ಯವಸ್ಥೆಯನ್ನಂಗೀಕರಿಸ ತಕ್ಕುದು. (10) ಮತ್ತು ಪ್ರತ್ಯಕ್ಷಜ್ಞಾನವು ವಸ್ತುಸಂಬದ್ಧವಾದ ಇಂದ್ರಿಯದಿಂದಲೇ ಹುಟ್ಟು ವುದು. ಇಂದ್ರಿಯಗಳಿಗೆ ಅಸತ್ತಿನಿಂದ ಸಂಬಂಧವೇ ಕೂಡಲಾರದು. ಆದುದರಿಂದ ಅಸತ್ತಾದ ರಜತವನ್ನು ವಿಷಯೀಕರಿಸುವ 'ಇದಂ ರಜತಂ' ಎಂಬುವ ಪ್ರತ್ಯಕ್ಷಜ್ಞಾನವೇ ಕೂಡಲಿಕ್ಕಿಲ್ಲ ಎಂಬ ಪರರ ಆಶಂಕೆಯನ್ನು ತಿರಸ್ಕರಿಸಿದಂತೆ ಆಯಿತು. ಹೇಗಂದರೆ- ಶುಕ್ತಿಯಿಂದ ಸನ್ನಿಕೃಷ್ಟವಾದ ಕಣ್ಣಿನಿಂದ ಥಳಥಳಿಸುವಿಕೆ ಇತ್ಯಾದಿ ದೋಷಗಳಿಂದ ಬೆಳ್ಳಿಯೆಂಬ ಜ್ಞಾನವು ಉಂಟಾಗುವುದು, ಎಂದು ನಾವು (ದ್ವೈತಿಗಳು) ಅಂಗೀಕರಿಸಿರುವೆವು. ॥ ೨೮ ॥

ಪುನಃ ಪರರು 'ವಿಪರೀತವಾಗಿ ತಿಳಿದಿದ್ದನ್ನು ಚೆನ್ನಾಗಿ ತಿಳಿಯುವುದೇ ಬಾಧವೆಂದು ನಾವು ಅಂಗೀಕರಿಸಿದ್ದಪಕ್ಷದಲ್ಲಿ ಅಂತಹ ಬಾಧ್ಯತ್ವವು ಆತ್ಮನಿಗೂ ಕೂಡುವುದರಿಂದ 'ಸತ್ ನ ಬಾಧ್ಯತೇ' ಯಾವುದು ಸತ್ತೋ ಅದು ಬಾಧಿಸಲ್ಪಡುವುದಿಲ್ಲ, ಎಂಬುವ ವ್ಯಾಪ್ತಿಗೆ ಭಂಗವು ಬರುತ್ತಿತ್ತು. ಹಾಗೆ ನಾವು ಅಂಗೀಕರಿಸಲಾರೆವು. ಜ್ಞಾನದಿಂದ ನಿವೃತ್ತಿಯಾಗುವುದೇ ಬಾಧವೆನ್ನುತ್ತೇವೆ, ಎಂದು ಆಶಂಕಿಸಿದರೆ ಆಚಾರ್ಯರು ಸಮಾಧಾನ ಹೇಳುತ್ತಾರೆ.

**ಮೂ ॥ ನ ಚ ಬಾಧ್ಯಂ ಜಗದಿತ್ಯತ್ರ ಕಿಂಚಿನ್ಮಾನಂ ॥ ೨೯ ॥**

ಅ ॥ ಜಗತ್=ಜಗತ್ತು, ಬಾಧ್ಯಂ=ಜ್ಞಾನದಿಂದ ನಾಶವಾಗುವುದು, ಇತ್ಯತ್ರ=ಈ ವಿಷಯದಲ್ಲಿ, ಕಿಂಚಿತ್=ಯಾವುದೊಂದು, ಮಾನಂ=ಪ್ರಮಾಣವು, ನ ಚ=ಇಲ್ಲವೇ ಇಲ್ಲ.

ತಾ ॥ (1) ಆಕಾಶ ಮೊದಲಾದ ಜಗತ್ತು ಜ್ಞಾನದಿಂದ ನಾಶವಾಗುತ್ತದೆ ಎನ್ನುವುದ ರಲ್ಲಿ ಪ್ರತ್ಯಕ್ಷ ಪ್ರಮಾಣವಿಲ್ಲವು. (2) ಜಗತ್=ಜಗತ್ತು, ಬಾಧ್ಯಂ=ಜ್ಞಾನದಿಂದ ನಾಶವಾಗು ವುದು, ಅನಿರ್ವಚನೀಯತ್ವಾತ್=ಅನಿರ್ವಚನೀಯವಾದುದರಿಂದ, ಇಂತಹ ಅನುಮಾನದಿಂದ ಸಿದ್ಧವಾಗುವುದೆಂದರೆ ಅನ್ಯೋನ್ಯಾಶ್ರಯವು ಬರುತ್ತದೆ. ಅನಿರ್ವಚನೀಯತ್ವವು ಸಿದ್ಧವಾದರೆ ಬಾಧ್ಯತ್ವವು ಸಿದ್ಧವಾಗುವುದು. ಬಾಧ್ಯತ್ವವು ಸಿದ್ಧವಾದರೆ ತದನ್ಯಥಾನುಪಪತ್ತಿಯಿಂದ ಅನಿ ರ್ವಚನೀಯತ್ವವು ಸಿದ್ಧವಾಗುವುದು. (3) ಹಾಗಾದರೆ ದೃಶ್ಯತ್ವ ಮೊದಲಾದ ಹೇತುಗಳಿಂದ ಜಗತ್ತಿಗೆ ಬಾಧ್ಯತ್ವವು ಸಿದ್ಧವಾಗುವುದು. ಕಾರಣ ಅನ್ಯೋನ್ಯಾಶ್ರಯವಿಲ್ಲವೆಂದರೆ ಆ ಅನು ಮಾನಗಳನ್ನು ನಿರಾಕರಣಮಾಡುವೆವು. (4) 'ಜ್ಞಾತೇ ದ್ವೈತಂ ನ ವಿದ್ಯತೇ' ಇದು ಮೊದಲಾದ ಆಗಮದಿಂದ ಬಾಧ್ಯತ್ವವು ಸಿದ್ಧವಾಗುವುದೆಂದರೆ, ಅದಕ್ಕೆ ಹಾಗೆ ಅರ್ಥವಲ್ಲವೆಂದು ಮಾಂಡೂ ಕೋಪನಿಷದ್ಭಾಷ್ಯಾದಿಗಳಲ್ಲಿ (ಪು. ೩೨೩.) ಪ್ರತಿಪಾದಿಸಲ್ಪಟ್ಟಿದೆ. (5) ಆತ್ಮನ ಜ್ಞಾನದಿಂದ ಅಜ್ಞಾನವು ನಾಶವಾಗೋಣ, ಅಜ್ಞಾನವೇ ಉಪಾದಾನ ಕಾರಣವಾಗಿ ಉಳ್ಳ ದುಃಖ ಮೊದಲಾದ ಬಂಧವೂ ನಾಶವಾಗುತ್ತದೆ. ಹೀಗೆ ಆತ್ಮಜ್ಞಾನದಿಂದ ಮುಕ್ತಿಯನ್ನು ಹೇಳಿರುವುದು, ಅನ್ಯಥಾ ನುಪಪನ್ನವಾಗಿ ಅಜ್ಞಾನವೇ ಉಪಾದಾನಕಾರಣವಾಗಿ ಉಳ್ಳ ಆಕಾಶ ಮೊದಲಾದ ಜಗತ್ತು ಜ್ಞಾನ ದಿಂದ ನಿವೃತ್ತಿಯಾಗುತ್ತದೆಂದು ಸಿದ್ಧವಾಗುವುದೆಂದು ಪರರು ಆಶಂಕಿಸಕೂಡದು. ಏಕೆಂದರೆ- ದುಃಖ ಮೊದಲಾದ ಬಂಧವು ಜ್ಞಾನದಿಂದ ನಿವೃತ್ತಿಯಾಗುವುದಿಲ್ಲ. ಭಗವಂತನ ಪ್ರಸಾದ ದಿಂದಲೇ ನಾಶವಾಗುವುದು. **'ಯಸ್ಯ ಪ್ರಸಾದಾತ್ಪರಮಾರ್ತಿರೂಪಾದಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ' ಯಸ್ಯ=ಯಾವ ಶ್ರೀ ಹರಿಯ, ಪ್ರಸಾದಾತ್=ಅನುಗ್ರಹದಿಂದಲೇ, ಪರಮಾರ್ತಿ ರೂಪಾತ್=ಅತ್ಯಂತ ದುಃಖಸ್ವರೂಪವಾದ, ಅಸ್ಮಾತ್ ಸಂಸಾರಾತ್=ಈ ಸಂಸಾರದಿಂದ,**

ಮುಚ್ಯತೇ = ಮುಕ್ತನಾಗುತ್ತಾನೆ. ಅಪರೇಣ = ಬೇರೆ ಯಾವುದರಿಂದಲೂ, ನ = ಮುಕ್ತನಾಗಲಾರನು, ಎಂದು ಶ್ರುತಿಯು ಆಘೋಷಿಸುತ್ತಿದೆ. (6) ಆದಕಾರಣ ಬಾಧ್ಯತ್ವವೆಂದರೆ ಜ್ಞಾನದಿಂದ ನಿವೃತ್ತಿಯಾಗುವಿಕೆ ಎಂದಿಟ್ಟು ಕೊಂಡರೆ ಅದು ಆಕಾಶಾದಿಗಳಲ್ಲಿಲ್ಲದಿರುವುದರಿಂದ ಅನ್ಯಥಾನುಪಪತ್ತಿಯಿಂದ ಸದ್ವಿಲಕ್ಷಣತ್ವ (ಸತ್ತಿನಿಂದ ಬೇರೆ) ಜ್ಞಾನವು ಬರಲಾರದು. (7) 'ಜ್ಞಾನನಿವರ್ತ್ಯತ್ವಂ' ಅಂದರೆ ಜ್ಞಾನದಿಂದ ನಾಶವಾಗುವಿಕೆ ಎಂದು ತಿಳಿದು ಶಿಷ್ಯನು ಶಂಕಿಸುವನು. 'ಕಶ್ಚಾತ್ರ ಬಾಧ ಉದ್ದಿಷ್ಟಃ ನ ಹಿ ನಾಶೋಽಸತೋ ಭವೇತ್' ಎಂದು ಹೇಳಿರುವುದರಿಂದ ಜ್ಞಾನ ನಿವರ್ತ್ಯತ್ವವನ್ನು ನಾವು ಶುಕ್ತಿರಜತಾದಿಗಳಿಗೂ ಒಡಂಬಡಲಿಲ್ಲ. ಕಾರಣ ಈ ಮೂಲದಲ್ಲಿ 'ಜಗತ್' ಎಂದು ಏತಕ್ಕೆ ಹೇಳಿರುವರು? ಹೀಗೆ ಹೇಳಬೇಡ. ಏಕೆಂದರೆ- ಜ್ಞಾನನಿವರ್ತ್ಯತ್ವವೆಂದರೆ ಜ್ಞಾನದಿಂದ ವಿನಾಶವೆಂದು ಪರರು ಒಡಂಬಡಲಿಲ್ಲ. ಅಧಿಷ್ಠಾನದ ಯಥಾರ್ಥ ಜ್ಞಾನದಿಂದ ಅವಿದ್ಯೆಯು ನಾಶವಾಗೋಣ, ಅವಿದ್ಯೆಯೇ ಉಪಾದಾನ ಕಾರಣವಾಗಿ ಉಳ್ಳ ಬೆಳ್ಳಿಯು ತಾನಾಗಿಯೇ ನಾಶವಾಗುವುದು, ಎಂದು ಪರರು ಅಂಗೀಕರಿಸಿರುತ್ತಾರಷ್ಟೆ. ಆದಕಾರಣ ಪರರು ಬಾಧ್ಯತ್ವವೆಂದರೆ 'ಪ್ರತಿಪನ್ನೋಪಾಧೌ ನಿಷೇಧಪ್ರತಿಯೋಗಿತ್ವಂ' ಎಂದು ಹೇಳುತ್ತಾರೆ. ಅಂದರೆ ಅಧಿಷ್ಠಾನವೆಂದು ತಿಳಿದುದರಲ್ಲಿ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿರುವಿಕೆಯು. ಈ ವಿಧವಾದ ಜ್ಞಾನನಿವರ್ತ್ಯತ್ವವು ಶುಕ್ತಿರಜತದಲ್ಲಿದೆ. ಇದು ಬೆಳ್ಳಿಯು ಎಂದು ಬೆಳ್ಳಿಗೆ ಅಧಿಷ್ಠಾನವಾಗಿ ತೋರುವ 'ಇದು' ಎಂಬ ಚಿಪ್ಪಿಯಲ್ಲೇ ಆ ಮೇಲೆ 'ಬೆಳ್ಳಿಯು ಇರಲೇ ಇಲ್ಲ,' ಎಂದು ನಿಷೇಧ (ಅಭಾವ) ಬುದ್ಧಿಯು ಹುಟ್ಟುತ್ತದೆ. ಆ ನಿಷೇಧಕ್ಕೆ ಬೆಳ್ಳಿಯೇ ಪ್ರತಿಯೋಗಿಯಾದುದರಿಂದ ಇಂತಹ ಜ್ಞಾನನಿವರ್ತ್ಯತ್ವರೂಪ ಬಾಧ್ಯತ್ವವು ಶುಕ್ತಿರಜತದಲ್ಲಿರುವುದರಿಂದ 'ಜಗತ್' ಎಂದು ಹೇಳಿರುತ್ತಾರೆ ॥ ೨೯ ॥

ಜಗತ್ತಿಗೆ ಸದ್ವೈಲಕ್ಷಣ್ಯವು ಸಿದ್ಧಿಯಾಗುವುದಕ್ಕೋಸ್ಕರ ಉಪನ್ಯಾಸಮಾಡಿದಬಾಧ್ಯತ್ವವನ್ನು ಪರರು (1) ಸತ್ಯವೆಂದು ಅಂಗೀಕರಿಸಿರುವರೋ, (2) ಮಿಥ್ಯೆಯೆಂದೋ, (1) ನೇದ್ಯ್ಟ ಅಯುಕ್ತವು. ಏಕೆಂದರೆ- ಬಾಧ್ಯತ್ವ ಒಂದು ಸತ್ಯವು. ಬ್ರಹ್ಮನೊಬ್ಬನು ಸತ್ಯನು. ಎರಡು ಸತ್ಯ ವಸ್ತುಗಳನ್ನು ಅಂಗೀಕಾರಮಾಡಿದಂತೆ ಆಗುವುದರಿಂದ ಪರರಿಗೆ ಅಪಸಿದ್ಧಾಂತ ದೋಷ ಬರುವ ಪ್ರಯುಕ್ತ (2) ನೇದ್ವನ್ನೇ ಅಂದರೆ ಮಿಥ್ಯೆಯೆಂದೇ ಅಂಗೀಕರಿಸ ಬೇಕೆಂದು ಹೇಳುತ್ತಾರೆ.

**ಮೂ ॥ ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ ॥ ೩೦ ॥**

ಅ ॥ ಬಾಧ್ಯತ್ವಮಪಿ=(ಜಗತ್ತುಮಾತ್ರವಲ್ಲ) ಬಾಧ್ಯತ್ವವೂ ಕೂಡ, ತೇಷಾಂ=ಅದ್ವೈತಿಗಳಿಗೆ, ಮಿಥ್ಯಾ ಹಿ=ಮಿಥ್ಯಾ ಭೂತವಾದುದೇ. ಸರ್ವವೂ ಸುಳ್ಳು ಎಂದು ಹೇಳುವವರಿಗೆ ಬಾಧ್ಯತ್ವಕ್ಕೆ ಸತ್ಯತ್ವವನ್ನಂಗೀಕರಿಸಿದರೆ ಅಪಸಿದ್ಧಾಂತ ಮೊದಲಾದ ದೋಷವು ಬರುವುದೆಂದು 'ತೇಷಾಂ ಹಿ' ಎನ್ನುವುದರಿಂದ ಸೂಚಿತವಾಯಿತು ॥ ೩೦ ॥

**ಮೂ ॥ ತಸ್ಯ ಚ ಮಿಥ್ಯಾತ್ವೇಽಬಾಧ್ಯತ್ವಮೇವ ಸತ್ಯಂ ಸ್ಯಾತ್ ॥ ೩೧ ॥**

ಅ ॥ ತಸ್ಯಚ=ಬಾಧ್ಯತ್ವಕ್ಕೆ, ಮಿಥ್ಯಾತ್ವೇ=ಮಿಥ್ಯಾತ್ವವು ಬಂದರೆ, ಅಬಾಧ್ಯತ್ವಮೇವ=ಅಬಾಧ್ಯತ್ವವೇ, ಸತ್ಯಂ=ಯಥಾರ್ಥವಾದದ್ದು, ಸ್ಯಾತ್=ಆಗುವುದು.

ತಾ ॥ (1) ಜಗತ್ತಿಗೆ ಹೇಳತಕ್ಕ ಬಾಧ್ಯತ್ವವೂ ಮಿಥ್ಯೆಯಾದರೆ, ಆತ್ಮಸಂಕೆಯೇ ಮಿಥ್ಯಾಭೂತವಾದ ಬಾಧ್ಯತ್ವವಿದ್ದುದರಿಂದ ಆತ್ಮನಂಕೆಯೇ ಜಗತ್ತಿಗೆ ಅಬಾಧ್ಯತ್ವವೇ ಸತ್ಯವಾದೀತು.

(2) ಪ್ರಮಾಣವಿಲ್ಲದಿರುವುದರಿಂದ ಮಾತ್ರ ಜಗತ್ತಿಗೆ ಬಾಧ್ಯತ್ವವಿಲ್ಲವೆಂದಲ್ಲ. ಪರರ ರೀತಿಯಿಂದಲೂ ಬಾಧ್ಯತ್ವವಿಲ್ಲ. (3) ಜಗತ್ತಿಗೆ ಬಾಧ್ಯತ್ವವಿಲ್ಲದಿರುವುದರಿಂದ ಮಾತ್ರ ಸದ್ವಿಲಕ್ಷಣತ್ವವು ಸಿದ್ಧವಾಗುವುದಿಲ್ಲವೆಂದಿಷ್ಟೇ ಅಲ್ಲ. ಮತ್ತೆ ಅಬಾಧ್ಯತ್ವವು ಸತ್ಯವಾದ ಪ್ರಯುಕ್ತವೂ ಜಗತ್ತು ಸತ್ಯವೆಂದೇ ಸಿದ್ಧವಾಗುವುದು. (4) ಹಾಗಾದರೆ 'ಬಾಧ್ಯತ್ವಂ ಮಿಥ್ಯಾ' ಎನ್ನುವುದರಿಂದಲೇ ಜಗತ್ತಿಗೆ ಬಾಧ್ಯತ್ವವಿಲ್ಲವೆಂದು ಸಿದ್ಧವಾಗುವುದು. ಹೀಗಿರಲು 'ತಸ್ಯ ಚ ಮಿಥ್ಯಾತ್ವೇ-ಎಂಬೀ ಮೇಲಿನ ವಾಕ್ಯವನ್ನು ಯಾವ ಪ್ರಯೋಜನಕ್ಕಾಗಿ ಹೇಳಿರುವರು ಎಂದು ಶಂಕಿಸಿದರೆ ಪರರು ಮಿಥ್ಯಾ ಎನ್ನುವುದಕ್ಕೆ ಅಸತ್ತೆಂದು ಅರ್ಥವೆಂದಂಗೀಕರಿಸಲಾರರು. ಅಂಗೀಕರಿಸಿದ್ದರೆ ಜಗತ್ತಿಗೆ ಬಾಧ್ಯತ್ವವಿಲ್ಲವೆಂದು ಸಿದ್ಧವಾಗುತ್ತಿತ್ತು. ಪರರ ರೀತಿಯಾಗಿಯೇ ಇಲ್ಲಿ ನಾವು ದೂಷಿಸುತ್ತಾ ಬಂದದ್ದು. ಯಾವ ಕಾರಣದಿಂದ ಬಾಧ್ಯತ್ವವೂ ಕೂಡ ಮಿಥ್ಯೆಯು ಎನ್ನುವುದರಿಂದ ಬಾಧ್ಯತ್ವಾಭಾವವು ಜಗತ್ತಿಗೆ ಸಿದ್ಧವಾಗುವುದಿಲ್ಲವೋ, ಆದ ಪ್ರಯುಕ್ತ ವ್ಯಾಪ್ತಿಯ ಸಾಮರ್ಥ್ಯದಿಂದಲೇ (ಅಂದರೆ (೧) ಯಾವುದು ಮಿಥ್ಯಾಭೂತವಾದ ಬಾಧ್ಯತ್ವವುಳ್ಳದ್ದೋ ಅದು ಬಾಧ್ಯವಲ್ಲನು. (೨) ಯಾವುದು ಮಿಥ್ಯಾಭೂತವಾದ ಬಾಧ್ಯತ್ವವುಳ್ಳದ್ದೋ, ಅದು ಸತ್ಯಭೂತವಾದ ಅಬಾಧ್ಯತ್ವವುಳ್ಳದ್ದು. (೩)ಯಾವುದು ಸತ್ಯಭೂತವಾದ ಅಬಾಧ್ಯತ್ವವುಳ್ಳದ್ದೋ ಅದು ಸತ್ಯವು,(ಆತ್ಮನಂತೆಯೇ) ಬಾಧ್ಯತ್ವಾಭಾವ ಸತ್ಯಭೂತವಾದ ಅಬಾಧ್ಯತ್ವದಿಂದ ಸತ್ಯತ್ವವನ್ನುಪಪಾದಿಸಲಿಕ್ಕೆ ಮೇಲಿನ ವಾಕ್ಯವನ್ನು ಹೇಳಿರುವರು. ಈ ಅಭಿಪ್ರಾಯವಿದ್ದುದರಿಂದಲೇ 'ತಸ್ಯ ಚ ಮಿಥ್ಯಾತ್ವೇ ಬಾಧ್ಯತ್ವಾಭಾವಃ' ಎಂದು ಆಚಾರ್ಯರು ಹೇಳಲಿಲ್ಲ (5) ಇದರಿಂದ 'ವಿಮತಂ ಸದ್ವಿಲಕ್ಷಣಂ ಬಾಧ್ಯತ್ವಾತ್' ಎಂಬುವ ಪರರ ಅನುಮಾನಕ್ಕೆ 'ವಿಮತಂ ಸತ್ಯಂ ಅಬಾಧ್ಯತ್ವಾತ್' ಎಂದು ಸತ್ಪ್ರತಿಪಕ್ಷವನ್ನು ಹೇಳಿದ ಹಾಗಾಯಿತು. (6) ಅನಿರ್ವಚನೀಯವನ್ನು ನಿರಾಕರಿಸಿದ್ದರಿಂದಲೇ ಮಿಥ್ಯೆಯೆಂದರೆ 'ಅಸತ್' ಎಂದೇ ಸಿದ್ಧವಾಗುವುದು. ಆದಕಾರಣ 'ಬಾಧ್ಯತ್ವಂ ಮಿಥ್ಯಾ' ಎಂಬುವ ಪೂರ್ವವಾಕ್ಯದಿಂದಲೇ ಜಗತ್ತಿಗೆ ಬಾಧ್ಯತ್ವವಿಲ್ಲವೆಂದು ಪ್ರತಿಪಾದಿಸಲಿಕ್ಕೆ ಶಕ್ಯವಾಗುವುದು. ಎಂದರೆ– 'ತಸ್ಯ ಚ' ಇತ್ಯಾದಿ ಮೇಲಿನ ವಾಕ್ಯದಿಂದ ಅಬಾಧ್ಯತ್ವ ಸತ್ಯತ್ವಮುಖದಿಂದ ಬಾಧ್ಯತ್ವಾಭಾವವನ್ನು ಹೇಳಿರುವುದು ಒಂದು ರೀತಿಯು. ಅದೂ ಒಂದು ರೀತಿ. ಕಾರಣ ದೋಷವಿಲ್ಲವು ॥ ೩೧ ॥

ಜಗತ್ತಿಗೆ ಬಾಧ್ಯತ್ವವಿಲ್ಲದಿರುವುದರಿಂದ ಮಾತ್ರ ಸದ್ವಿಲಕ್ಷಣತ್ವವು ಸಿದ್ಧವಾಗುವುದಿಲ್ಲವೆಂದಲ್ಲ. 'ಸತ್ ಆದರೆ ಬಾಧಿಸಲ್ಪಡಲಿಕ್ಕಿಲ್ಲ', ಎಂಬುವ ಅರ್ಥಾಪತ್ತಿಯಲ್ಲಿದ್ದ 'ಸತ್' ಶಬ್ದಾರ್ಥವನ್ನು ವಿಕಲ್ಪಿಸುವಾಗ ಅದು ಕೂಡದಿರುವುದರಿಂದಲೂ ಸದ್ವಿಲಕ್ಷಣತ್ವವು ಸಿದ್ಧವಾಗುವುದಿಲ್ಲವೆಂದಭಿಪ್ರಾಯದಿಂದ ವಿಕಲ್ಪಿಸುತ್ತಾರೆ.

**ಮೂ ॥ ಸದ್ವಿಲಕ್ಷಣತ್ವಂ ಚ ಸಜ್ಜಾತಿವಿಲಕ್ಷಣತ್ವಂ ಸನ್ಮಾತ್ರವಿಲಕ್ಷಣತ್ವಂ ವಾ ॥ ೩೨ ॥**

ಅ ॥ ಸದ್ವಿಲಕ್ಷಣತ್ವಂ ಚ = ಸದ್ವೈಲಕ್ಷಣ್ಯವೆಂದರೆ, ಸಜ್ಜಾತಿವಿಲಕ್ಷಣತ್ವಂ = ಸಜ್ಜಾತಿಯಿಂದ ವೈಲಕ್ಷಣ್ಯವೋ, ಸನ್ಮಾತ್ರವಿಲಕ್ಷಣತ್ವಂ ವಾ = ಕೇವಲ ಸತ್ತಿನಿಂದ ವೈಲಕ್ಷಣ್ಯವೆಂದರ್ಥವೋ?

ಟಾ ॥ (1) ಜಾತಿಯೇ 'ಸತ್' ಎಂಬುವ ಪದಕ್ಕೆ ಅರ್ಥವೆಂದು ಕೆಲವರುಹೇಳುತ್ತಾರೆ. (2) ಇತರರು ಜಾತಿಯಿಂದೊಡಗೂಡಿದ ವ್ಯಕ್ತಿಯೇ 'ಸತ್' ಪದಕ್ಕೆ ಅರ್ಥವೆನ್ನುತ್ತಾರೆ. (3)ಬೇರೆಯವರು ಸ್ವರೂಪ (ಆಕಾರ)ವೇ 'ಸತ್' ಪದಕ್ಕೆ ಅರ್ಥವೆನ್ನುತ್ತಾರೆ. (4) ಈ ಮೂರರಲ್ಲಿ ೧ನೇ ಮತದಲ್ಲಿ 'ಸತ್' ಎಂದರೆ ಸತ್ತಾಜಾತಿಯು. ೨ನೇ ಮತದಲ್ಲಿ ಸತ್ತಾಜಾತಿಯಿಂದ ಯುಕ್ತವಾದ ವ್ಯಕ್ತಿಯು.

ಈ ೨ ಮತದ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಆಚಾರ್ಯರು 'ಸಜ್ಜಾತಿ' ಎಂದು ಹೇಳಿರುವರು. ೧ನೇ ಮತದಲ್ಲಿ 'ಸತಃ ಜಾತಿಃ ಸಜ್ಜಾತಿಃ' ಸತ್ಪದಾರ್ಥದ ಜಾತಿಯು. ೨ನೇ ಮತದಲ್ಲಿ 'ಸತ್ವಂಜಾತಿರ್ಯಸ್ಯ ತತ್ ಸಜ್ಜಾತಿ' ಯಾವ ವ್ಯಕ್ತಿಗೆ ಸತ್ತಾಜಾತಿಯುದೆಯೋ, ಅಂತಹುದು. ಹೀಗೆ ಅರ್ಥವನ್ನು ಇಟ್ಟುಕೊಳ್ಳಬೇಕು. ೩ನೇ ಮತವನ್ನನುಸರಿಸಿ ಸನ್ಮಾತ್ರ ವಿಲಕ್ಷಣತ್ವಂ ಎಂದು ಹೇಳಿರುವರು. ಸನ್ಮಾತ್ರಂ=ಸ್ವರೂಪದಿಂದಲೇ ಸತ್ ಆದುದು. ಜಾತಿಯಿಂದಲ್ಲ. ಅಂದರೆ-ಪದಾರ್ಥವನ್ನು ನೋಡಿದೊಡನೆ ಯಾವುದೊಂದು ಆಕಾರವು ಕಾಣುತ್ತದೋ ಅದೇ 'ಸತ್' ಪದಕ್ಕೆ ಅರ್ಥವು. (5) ಇಲ್ಲಿ ಸತ್ ಪದಾರ್ಥವನ್ನೇ ವಿಕಲ್ಪಿಸಿರುತ್ತಾರೆ. ದೂಷಿಸಲಿಕ್ಕೆ ಸುಲಭವಾಗುವುದಕ್ಕೋಸ್ಕರವೇ ವಿಲಕ್ಷಣತ್ವಂ ಎಂದು ಅನುವಾದ ಮಾಡಿರುತ್ತಾರೆ. (6) ಸತ್ಯವೆಂದರೆ ಅಬಾಧ್ಯವೆಂದೂ ಪರರು ಅಂಗೀಕರಿಸಿರುವರು. ಅದನ್ನೂ ಕೂಡ ಸತ್ ಶಬ್ದಾರ್ಥವನ್ನು ವಿಕಲ್ಪಿಸಿಕೊಳ್ಳುವಾಗ ಏಕೆ ಶಂಕಿಸಲಿಲ್ಲವೆಂದರೆ 'ಸಚ್ಚೇತ್ ನ ಬಾಧ್ಯೇತ' ಎಂಬುವಲ್ಲಿದ್ದ ಸತ್ ಶಬ್ದಕ್ಕೆ 'ಯತ್ ಅಬಾಧ್ಯಂ ತತ್ ನ ಬಾಧ್ಯತೇ' ಯಾವುದು ಅಬಾಧ್ಯವೋ ಅದು ಬಾಧಿಸಲ್ಪಡುವುದಿಲ್ಲ ಎಂದು ಹೇಳಬೇಕಾಗುವುದು. ಆಗ ವ್ಯಾಪ್ಯವ್ಯಾಪಕಗಳಿಗೆ ಐಕ್ಯವಿರುವುದರಿಂದ ವ್ಯಾಪ್ಯವ್ಯಾಪಕಭಾವವು ಕೂಡುವುದಿಲ್ಲವೆಂದು ಸ್ಪಷ್ಟವೇ ಆಗಿರುತ್ತದೆ. ಕಾರಣ ಶಂಕಿಸಲಿಕ್ಕೂ ಅಯೋಗ್ಯವೆಂದರಿತು ಬಿಟ್ಟಿರುತ್ತಾರೆ ॥ ೩೨ ॥

ಈ ೩ ಕಲ್ಪಗಳಲ್ಲಿ, ೧ನೇ ೨ನೇ ಕಲ್ಪಗಳನ್ನು ನಿರಾಕರಿಸುತ್ತಾರೆ.

**ಮೂ ॥ ಜಾತ್ಯಂಗೀಕಾರೇ ಸದ್ಬಹುತ್ವಂ ॥ ೩೩ ॥**

ಅ ॥ ಜಾತ್ಯಂಗೀಕಾರೇ=ಸತ್ತಾಜಾತಿಯನ್ನೊಡಂಬಟ್ಟರೆ, ಸದ್ಬಹುತ್ವಂ=ಸತ್‌ಪದಾರ್ಥಗಳಿಗೆ ಬಾಹುಲ್ಯ (ಅನೇಕತ್ವ) ವನ್ನಂಗೀಕರಿಸಬೇಕಾಗುವುದು.

ತಾ ॥ ಸತ್ತಾಜಾತಿಯು, 'ಸತ್' ಪದಕ್ಕೆ ಅರ್ಥವು ಅಥವಾ 'ಸತ್' ಪದವು ಪ್ರವೃತ್ತಿಯಾಗಲಿಕ್ಕೆ ಕಾರಣವು ಎಂದೊಡಂಬಟ್ಟರೆ ಸತ್ಪದಾರ್ಥಗಳು ಅನೇಕಗಳವೆ ಎಂದಂಗೀಕರಿಸಬೇಕಾಗುವುದು. (2) ನಿತ್ಯವಾಗಿದ್ದು ಅನೇಕವ್ಯಕ್ತಿಗಳನ್ನಾಶ್ರಯಿಸಿಕೊಂಡಿರುವುದು ಜಾತಿಯು. (ಸಾಮಾನ್ಯವು.) ಜಾತಿಯು ಒಂದೇ ವ್ಯಕ್ತಿಯನ್ನಾಶ್ರಯಿಸಿಕೊಂಡು ಇದೆ ಎಂದು ಹೇಳಿದರೆ ಅನೇಕಾಶ್ರಿತತ್ವದಿಂದ ಕೂಡಿದ ಜಾತಿಲಕ್ಷಣಕ್ಕೆ ವ್ಯಾಹತಿಯು ಬರುತ್ತದೆ. ಮತ್ತು ಅನೇಕ ವ್ಯಕ್ತಿಗಳಲ್ಲಿ ಉಪದೇಶಿಸುವುದೇ ಅಸಾಧ್ಯವಾದುದರಿಂದ ಸಂಬಂಧಜ್ಞಾನವೇ ಆಗಲಾರದು. ಆದಪ್ರಯುಕ್ತ ಒಂದು ಜಾತಿಯುಲ್ಲಿ ಶಕ್ತಿಯನ್ನು ಅಂಗೀಕರಿಸಿರುವರು. ಜಾತಿಯು ಒಂದು ವ್ಯಕ್ತಿಯನ್ನು ಮಾತ್ರ ಆಶ್ರಯಿಸಿರುವುದಾದರೆ ಉಪದೇಶದಿಂದಲೇ ಒಂದು ವ್ಯಕ್ತಿಯಲ್ಲಿ ಶಕ್ತಿಜ್ಞಾನವು ಕೂಡುವುದರಿಂದ ಜಾತಿಯನ್ನಂಗೀಕರಿಸಿದ್ದೇ ವ್ಯರ್ಥವಾಗಬೇಕಾಗುವುದು. ಆದಪ್ರಯುಕ್ತ ಜಾತಿಯಲ್ಲಿ ಶಕ್ತಿಯನ್ನು ಹೇಳುವವರು ಜಾತಿಯು ಅನೇಕಾಶ್ರಿತವಾದುದು, ಎಂದು ಹೇಳಿರುವರು. ಸತ್ ಪದಾರ್ಥವು ಒಂದೇ ಎಂದು ಹೇಳುವ ಅದ್ವೈತಿಗಳಿಗೆ ಸತ್ ಪದಾರ್ಥಗಳು ಅನೇಕಗಳಿವೆ ಎಂದು ಹೇಳುವದನಿಷ್ಟವು. (3) ಸತ್ಪದಾರ್ಥಗಳ ಬಾಹುಲ್ಯವು ಅದ್ವೈತಿಗಳಿಗೆ ಅನಿಷ್ಟವೆಂದು ದ್ವೈತಿಗಳು ಹೇಳಿದಾಗ ಪರರು ವ್ಯಾವಹಾರಿಕ ಸತ್ಪದಾರ್ಥಗಳು ಅನೇಕಗಳಿವೆ. ಕಾರಣ ಇದು ನಮಗೆ ಅನಿಷ್ಟವಲ್ಲವೆಂದು ಹೇಳಿದರೆ, ದ್ವೈತಿಗಳು ಹಾಗಾದರೆ ಪ್ರಪಂಚವು ಸತ್ಪದಾರ್ಥವೇ ಆಯಿತು. ಸದ್ವಿಲಕ್ಷಣವಾಗಲಿಲ್ಲ, ಎಂದರು. (4) ಮೊಲದ ಕೋಡನ್ನು ಅಂಗೀಕರಿಸದೇನೇ ಮೊಲದ ಕೋಡು ಮೊದಲಾದುವುಗಳನ್ನು ನಿಷೇಧಿಸಿದಂತೆಯೇ ಸತ್ಪದಾರ್ಥಗಳು ಅನೇಕಗಳಿವೆ ಎದಂಗೀಕರಿಸದೇನೇ ಜಗತ್ತು ಸತ್ಯವೆಂಬುದನ್ನೂ ನಿಷೇಧಿಸುವೆವು. ಹೀಗೂ

ಪರರು ಹೇಳಕೂಡದು. ಏಕೆಂದರೆ, ಜಗತ್ತು ಬ್ರಹ್ಮನಂತೆಯೇ ಸತ್ಪದಾರ್ಥವು ಹೌದೋ ಅಲ್ಲವೋ, ಎಂದು ವಿವಾದ ಬರಲು, ಸತ್ತಾಜಾತಿಯಿಂದಲೂ ಜಾತಿಯಿಂದೊಡಗೂಡಿದ ವ್ಯಕ್ತಿಯಿಂದಲೂ ಭೇದವನ್ನು ಸಾಧಿಸಿದರೆ ಅರ್ಥಾಂತರತಾದೋಷವು ಪ್ರಾಪ್ತವಾಯಿತು. ಮತ್ತೂ ಸಿದ್ಧಾಂತದಲ್ಲಿ ಸತ್ತಾಜಾತಿಯನ್ನೊಡಂಬಟ್ಟರೂ ವ್ಯಕ್ತಿಯಿಂದ ಅತಿರಿಕ್ತವಾದ ಜಾತಿಯು ಇಲ್ಲದಿರುವುದರಿಂದ ಜಾತಿಯಿಂದೊಡಗೂಡಿದ ವ್ಯಕ್ತಿಯಿಂದ ಭೇದವನ್ನು ಸಾಧಿಸಿದರೆ ಸಿದ್ಧವಾದ ಅರ್ಥವನ್ನು ಸಾಧಿಸಿದಂತೆಯೇ ಆಯಿತು. ॥ ೩೩ ॥

೩ನೇ ಕಲ್ಪವನ್ನು ದೂಷಿಸುವರು.

**ಮೂ ॥ ಸನ್ಮಾತ್ರವಿಲಕ್ಷಣತ್ವಂ ಚೇತ್ಸಿದ್ಧಸಾಧನತಾ ।**
**ಬ್ರಹ್ಮವೈಲಕ್ಷಣ್ಯಾಂಗೀಕಾರಾತ್ ॥ ೩೪ ॥**

ಅ ॥ ಸನ್ಮಾತ್ರವಿಲಕ್ಷಣತ್ವಂ=ಕೇವಲ ಸತ್ತಿನಿಂದ ವೈಲಕ್ಷಣ್ಯವು, ಚೇತ್=ಸದ್ವಿಲಕ್ಷಣತ್ವ ಶಬ್ದಕ್ಕೆ ಅರ್ಥವಾಗಿದ್ದರೆ, ಸಿದ್ಧಸಾಧನತಾ=(ಅರ್ಥಾಪತ್ತಿಗೆ)ಸಿದ್ಧವಾದ ಅರ್ಥವನ್ನು ಸಾಧಿಸಿದಂತೆ ಆಗುವುದು. ಬ್ರಹ್ಮವೈಲಕ್ಷಣ್ಯಾಂಗೀಕಾರಾತ್=ಬ್ರಹ್ಮನಿಂದ ಭೇದವನ್ನುಅಂಗೀಕರಿಸಿರುವುದರಿಂದ.

ತಾ ॥ (1) ಪರರು ಸತ್ತಾಜಾತಿಯ ಸಂಬಂಧವಿಲ್ಲದೆ ಕೇವಲ ಸ್ವರೂಪದಿಂದಲೇ ಸತ್ ಅಂದರೆ ಬ್ರಹ್ಮನೇ, ಹೀಗೆ ಅಂಗೀಕರಿಸುವರು. ಆ ಬ್ರಹ್ಮನಿಂದ ವಿಲಕ್ಷಣತ್ವವೆಂದರೆ (೧) ಬ್ರಹ್ಮನಲ್ಲಿಲ್ಲದಿರುವ ಲಕ್ಷಣವಿರುವುದು. (೨) ಬ್ರಹ್ಮನಲ್ಲಿದ್ದ ಲಕ್ಷಣವಿರುವುದು. (೩) ಬ್ರಹ್ಮನಿಂದ ಭೇದವು. ಈ ೩ ಅರ್ಥಗಳನ್ನೂ ಪ್ರಪಂಚಕ್ಕೆ ನಾವು ಒಡಂಬಟ್ಟಪ್ರಯುಕ್ತ ಸಿದ್ಧಸಾಧನತಾದೋಷವು ತಪ್ಪಿದ್ದೇ ಅಲ್ಲವು. (2) ದ್ವೈತಿಗಳು ಜಗತ್ತಿಗೆ ಎಂತಹ ಸತ್ವವನ್ನು ಅಂಗೀಕರಿಸುವರೋ ಅಂತಹ ಸತ್ವದ ಅಭಾವವೇ ಸದ್ವಿಲಕ್ಷಣತ್ವವು ಎಂದು ಅದ್ವೈತಿಗಳು ಹೇಳಕೂಡದು. ಏಕೆಂದರೆ–ದ್ವೈತಿಗಳು 'ಅಧಿಷ್ಠಾನವಾಗಿ ತಿಳಿದಿರುವುದರಲ್ಲಿ ನಿಷೇಧಿಸಲಿಕ್ಕೆ ಯೋಗ್ಯವಲ್ಲದಿರುವಿಕೆಯು' ಸತ್ವವು ಎಂದಂಗೀಕರಿಸಿರುವರು. ಅಂತಹ ಸತ್ವಾಭಾವವನ್ನು ಸಾಧಿಸಿದರೆ, 'ಯಾವುದು ಅಬಾಧ್ಯವೋ' ಅದು ಬಾಧಿಸಲ್ಪಡುವುದಿಲ್ಲ' ಎನ್ನುವಾಗ ಹೇತುಸಾಧ್ಯಗಳು ಒಂದೆಯಾದುದರಿಂದ ವ್ಯಾಪ್ಯವ್ಯಾಪಕಭಾವವು ಕೂಡುವುದಿಲ್ಲವೆಂದು ದೋಷವನ್ನು ಹೇಳಿರುತ್ತೇವೆ. ಆದಕಾರಣ ಅನಿರ್ವಚನೀಯದಲ್ಲಿ ಯಾವ ಪ್ರಮಾಣವೂ ಇಲ್ಲವೆಂದು ಸಿದ್ಧವಾಯಿತು. ॥ ೩೪ ॥

ಇಷ್ಟರವರೇಗೆ ಅನಿರ್ವಚನೀಯವಸ್ತುವಿಷಯದಲ್ಲಿ ಸಾಧಕಪ್ರಮಾಣಗಳು ಇಲ್ಲದಿರುವುದರಿಂದ ಅನಿರ್ವಚನೀಯವನ್ನು ನಿರಾಸಮಾಡಿ, ವ್ಯಾಹತಿಮೊದಲಾದ ಬಾಧಕದಿಂದಲೂ ನಿರಾಕರಿಸುತ್ತಾರೆ.

**ಮೂ ॥ ನ ಚ ಕಯಾಽಪಿ ಯುಕ್ತ್ಯಾ ಮಾನೇನ ವಾ**
**ಭೇದನಿರಾಕರಣಂ ಭವತಿ ॥ ೩೫ ॥**

ಅ ॥ ಕಯಾಽಪಿ ಯುಕ್ತ್ಯಾ=ಯಾವ ಯುಕ್ತಿಯಿಂದಲೂ, ಮಾನೇನ ವಾ=ಯಾವ ಪ್ರಮಾಣದಿಂದಲೂ, ಭೇದನಿರಾಕರಣಂ=ಭೇದವನ್ನು ನಿರಾಕರಿಸುವುದು, ನ ಚ ಭವತಿ=ಆಗುವುದೇ ಇಲ್ಲವು.

ತಾ ॥ (1) ಆಕಾಶ ಮೊದಲಾದ ಜಗತ್ತನ್ನು ಪರರು ಅನಿರ್ವಚನೀಯವೆಂದಂಗೀಕರಿಸಿ, 'ಭೇದವು ಭೇದವುಳ್ಳ ಘಟದಿಂದ ಭೇದವುಳ್ಳದ್ದು' ಎಂದು ಹೇಳಿದ ಪಕ್ಷದಲ್ಲಿ, ಭೇದವುಳ್ಳ ಭೇದವು,

ಭೇದವುಳ್ಳ ಘಟವು ಇವುಗಳಲ್ಲಿದ್ದ ಭೇದವು ಭಿನ್ನವೇ ಎಂದು ಹೇಳಬೇಕಾಗುವುದು. ಇದೇ ಮೊದಲಾದ ರೀತಿಯಿಂದ ಭೇದವುಂಟೆಂದಂಗೀಕರಿಸಿದರೆ ಅನವಸ್ಥಾ ದೋಷವು ಬರುವುದು. (2) ಭೇದಕ್ಕೂ ಭೇದವುಳ್ಳ ಘಟಕ್ಕೂ ಭೇದವಿಲ್ಲದಿದ್ದರೆ ಎರಡರಲ್ಲೊಂದೇ ಉಳಿಯಬೇಕಾಗುವುದು. ಇದು ಮೊದಲಾದ ಯುಕ್ತಿಯಿಂದಲೂ, 'ಮಾಯಾಮಾತ್ರಮಿದಂ ದ್ವೈತಂ' ಇದು ಮೊದಲಾದ ಆಗಮದಿಂದಲೂ ಪರರು ತಮ್ಮ ಶಾಸ್ತ್ರದಲ್ಲಿ ಭೇದವನ್ನು ನಿರಾಕರಿಸಿದ್ದು ಅಯುಕ್ತವೇ ಸರಿ. (3) ಯುಕ್ತಿಯು ಪ್ರಮಾಣವಾಗುತ್ತದೋ ಇಲ್ಲವೋ, ಸ್ವತ ಏವ ಪ್ರಮಾಣವಾಗುವುದಾದರೆ 'ಯುಕ್ತ್ಯಾ' ಎಂದು ಪ್ರತ್ಯೇಕವಾಗಿ ಏತಕ್ಕೆ ಹೇಳಿರುವರು? ಪ್ರಮಾಣವಾಗದಿದ್ದರೆ ನಿರಾಕರಿಸುವುದರಲ್ಲಿ ಸಾಧಕವಾಗುವುದಿಲ್ಲ ಎಂದು ಶಂಕಿಸಿದರೆ ಯುಕ್ತಿಯು ಸ್ವತಏವ ಪ್ರಮಾಣವಾಗದಿದ್ದರೂ ಆಗಮಕ್ಕೆ ಸಹಕಾರಿಯಾದುದರಿಂದ ನಿರಾಕರಿಸಲಿಕ್ಕೆ ಅಂಗವಾಗುವುದೆಂದು ಪರರು ಅಂಗೀಕರಿಸಿರುವರು. ಅದನ್ನೇ ಅನುವಾದಮಾಡಿದ್ದಾಗಿರುತ್ತದೆ ॥ ೩೫ ॥

ಅನಿರ್ವಚನೀಯವನ್ನು ಅಂಗೀಕರಿಸುವವರಿಗೆ ಭೇದವನ್ನು ನಿರಾಕರಿಸುವುದು ಏತಕ್ಕೆ ಕೂಡುವುದಿಲ್ಲ ಎಂದು ಶಂಕಿಸಿದರೆ—

**ಮೂ ॥ ಅಂಗೀಕ್ರಿಯಮಾಣತ್ವಾತ್ ॥ ೩೬ ॥**

ಅ ॥ ಭೇದವು ಅಂಗೀಕರಿಸಲ್ಪಡುವುದರಿಂದ.

ತಾ ॥ (1) ಅನಿರ್ವಚನೀಯತ್ವವೆಂದರೆ-ಸದಸತ್ತುಗಳಿಂದ ವೈಲಕ್ಷಣ್ಯವು. ವೈಲಕ್ಷಣ್ಯವೆಂದರೆ-ಭೇದವೆಂದಾಗಲೀ ಭೇದವ್ಯಾಪ್ತ ಧರ್ಮವೆಂದಾಗಲೀ ಹೇಳುವರು. ಅಂತೂ ಅನಿರ್ವಚನೀಯವನ್ನು ಅಂಗೀಕರಿಸಿದವರು ಭೇದವನ್ನು ಅಂಗೀಕರಿಸಿದವರಾದುದರಿಂದ ಪುನಃ ಅಭೇದವನ್ನೇ ನಿರಾಕರಿಸಿದರೆ ವ್ಯಾಹತಿಯು. (ತನ್ನ ಮಾತು ತನಗೇನೇ ವಿರೋಧವಾಗುವುದು) ಆದಕಾರಣ ಭೇದವನ್ನು ನಿರಾಕರಿಸುವುದು ಕೂಡುವುದೇ ಇಲ್ಲವು. ಭೇದ ನಿರಾಕರಣವನ್ನಾದರೂ ಇಚ್ಛಿಸುತ್ತಾರೆ ಆದಪ್ರಯುಕ್ತ ಅನಿರ್ವಚನೀಯವನ್ನು ಒಡಂಬಡುವುದು ಅಯುಕ್ತವೇಸರಿ ॥ ೩೬ ॥

ಸದಸದ್ವಿಲಕ್ಷಣತ್ವವು ಮಿಥ್ಯಾಭೂತವಾದದ್ದೆಂದಂಗೀಕರಿಸುತ್ತೇವೆ. ಪಾರಮಾರ್ಥಿಕಭೇದವನ್ನು ನಿರಾಕರಿಸುವೆವು. ಪಾರಮಾರ್ಥಿಕಭೇದವನ್ನೇ ಅಂಗೀಕರಿಸಿದ್ದ ಪಕ್ಷದಲ್ಲಿ ಭೇದಾಂಗೀಕಾರಕ್ಕೂ, ಭೇದ ನಿರಾಕರಣಕ್ಕೂ ವಿರೋಧವು ಬರುತ್ತಿತ್ತು. ಮಿಥ್ಯಾಭೂತವಾದ ಚಂದ್ರಭೇದವನ್ನಂಗೀಕರಿಸಿ ಪಾರಮಾರ್ಥಿಕ ಚಂದ್ರಭೇದವನ್ನು ನಿರಾಕರಿಸಿದರೆ ವಿರೋಧವು ಬರುವುದಿಲ್ಲವಷ್ಟೇ? ಎಂದು ಪರರು ಆಶಂಕಿಸಿದರೆ—

**ಮೂ ॥ ಅನಿರ್ವಚನೀಯಾಸಿದ್ಧೇಶ್ಚ । ಸದ್ವಿಲಕ್ಷಣತ್ವಮಸದ್ವಿಲಕ್ಷಣತ್ವಂ ಚ ಮಿಥ್ಯೇತ್ಯವಿಲಕ್ಷಣತ್ವಮೇವ ಸತ್ಯಂ ಸ್ಯಾತ್ ॥ ೩೭ ॥**

ಅ ॥ ಅನಿರ್ವಚನೀಯಾಸಿದ್ಧೇಶ್ಚ=(ಹಿಂದೆ ಹೇಳಿದ ಪ್ರಕಾರ) ಅನಿರ್ವಚನೀಯವೇ ಸಿದ್ಧವಾಗದಿರುವುದರಿಂದ, ಸದ್ವಿಲಕ್ಷಣತ್ವಂ=ಸತ್ತಿನಿಂದ ಭೇದವೂ, ಅಸದ್ವಿಲಕ್ಷಣತ್ವಂ ಚ=ಅಸತ್ತಿನಿಂದ ಭೇದವೂ, ಇವೆರಡೂ, ಮಿಥ್ಯೇತಿ=ಮಿಥ್ಯೆಯಾಚುದರಿಂದ, ಅವಿಲಕ್ಷಣತ್ವಮೇವ=ಭೇದವಿಲ್ಲದಿರುವುದೇ (ಸದಸದ್ರೂಪವಾದುದೇ,) ಸತ್ಯಂ=ಯಥಾರ್ಥವಾದುದು, ಸ್ಯಾತ್=ಆಗುವುದು.

ತಾ ॥ (1) ವಿರೋಧಪರಿಹಾರಕ್ಕಾಗಿ ಜಗತ್ತಿಗೆ ಸದ್ವೈಲಕ್ಷಣ್ಯವೂ, ಅಸದ್ವೈಲಕ್ಷಣ್ಯವೂ- ಇವೆರಡರನ್ನು ಮಿಥ್ಯೆಯೆಂದು ಅಂಗೀಕರಿಸಿದರೆ ಪ್ರಮಾಣವಿಲ್ಲದಿರುವ ಪ್ರಯುಕ್ತ

ಅನಿರ್ವಚನೀಯವು ಸಿದ್ಧವಾಗದಿರುವುದರಿಂದ ಮಿಥ್ಯಾಶಬ್ದಕ್ಕೆ ಅನಿರ್ವಚನೀಯ ರೂಪವಾದ ಅರ್ಥವು ಕೂಡದಿರಲು 'ಅಸತ್' ಎಂದೇ ಅರ್ಥವನ್ನು ಅವಶ್ಯವಾಗಿ ಅಂಗೀಕರಿಸಬೇಕಾಯಿತು. ಅಂತೂ (ಜಗತ್ತು ಸತ್ ಅಸತ್‌ರೂಪವಾದ ಸತ್ಯವೆಂದೇ ಸಿದ್ಧವಾಗುವುದು.) ಜಗತ್ತಿಗೆ ಸದ ಸದ್ರೂಪತ್ವವೇ ಸತ್ಯವಾಗಬೇಕಾಯಿತು. ಕುರ್ಚಿಯಿಂದ ಬೆಂಚಿಗೆ ಭೇದವು ಅಸತ್ಯವಾದರೆ ಕುರ್ಚಿಸ್ವರೂಪತ್ವವು ಹೇಗೆ ಸತ್ಯವೋ ಅದರಂತೆಯೇ ಜಗತ್ತಿಗೆ ಸತ್ತಿನಿಂದಲೂ ಅಸತ್ತಿನಿಂದಲೂ ಭೇದವು ಸುಳ್ಳು ಆದರೆ ಸದಸದ್ರೂಪತ್ವವು ಸತ್ಯವೆಂದೇ ಸಿದ್ಧವಾಗಬೇಕಾದೀತು. (2) ಅಥವಾ ಸಾಧಕಪ್ರಮಾಣವಿಲ್ಲದಿರುವುದರಿಂದಲೂ ಬಾಧಕವು ಇರುವುದರಿಂದಲೂ ಅನಿರ್ವಚನೀಯವನ್ನು ನಿರಾಕರಿಸಿ ಲಕ್ಷಣವು ಕೂಡದಿರುವುದರಿಂದಲೂ ನಿರಾಕರಿಸುತ್ತಾರೆ.

## ಮೂ || ಅನಿರ್ವಚನೀಯಾಸಿದ್ಧೇಶ್ಚ || ೩೭ ||

ಅ || ಅನಿರ್ವಚನೀಯಾಸಿದ್ಧೇಶ್ಚ = ಅನಿರ್ವಚನೀಯಲಕ್ಷಣವು ಸಿದ್ಧವಾಗದಿರುವುದ ರಿಂದಲೂ, (ಭೇದೇ=ಭೇದವಿಷಯದಲ್ಲಿ, ವಿಕಲ್ಪಃ=ವಿಕಲ್ಪವು, ನ ಚ ಯುಜ್ಯತೇ=ಕೂಡು ವುದಿಲ್ಲ).

ತಾ || ಅದು ಇಂತಹುದು, ಅಂತಹುದದು, ಎಂದು ಮಾತುಗಳಿಂದ ತಿಳಿಸಲಿಕ್ಕೆ ಅಸಾಧ್ಯವಾದದ್ದು ಅನಿರ್ವಚನೀಯವೆಂದು ಪರರು ಹೇಳಕೂಡದು. ಏಕೆಂದರೆ ಅನಿರ್ವಚನೀಯ ಪದದಿಂದಲೇ ನಿರ್ವಚನ ಮಾಡಿದರೆ ವ್ಯಾಹತಿ ಬರುತ್ತದೆ ಎಂಬುವ ಹೆದರಿಕೆಯಿಂದ ಸುಮ್ಮನೆ ಕೂತುಕೊಂಡರೆ ಮೂಕತ್ವ (ಅನನುಭಾಷಣ) ದೋಷವು ಬರುವುದು. (2) ಸತ್ವ ಅಸತ್ವ ಗಳಿಂದ ಹೇಳಲಿಕ್ಕೆ ಬಾರದಿರುವುದು ಅನಿರ್ವಚನೀಯವು ಎಂದೂ ಹೇಳಕೂಡದು. ಪ್ರತ್ಯೇಕ ವಾಗಿ ಲಕ್ಷಣವಾದರೆ 'ಸತ್' ಎಂದು ನಿರ್ವಚನಮಾಡಲಿಕ್ಕೆ ಅಶಕ್ಯವಾದುದು ಅಸತ್ತೂ, ಅಸತ್ ಎಂದು ನಿರ್ವಚನ ಮಾಡಲಿಕ್ಕೆ ಅಶಕ್ಯನಾದವನು ಸತ್‌ಶಬ್ದವಾಚ್ಯನಾದ ಬ್ರಹ್ಮನು, ಹೀಗೆ ಸದಸತ್ತುಗಳೂ ಅನಿರ್ವಚನೀಯಗಳಾಗಬೇಕಾಗುವುವು. (3) ಸತ್ವದಿಂದೊಡಗೂಡಿದ ಅಸತ್ವದಿಂದ ನಿರ್ವಚನಮಾಡಲಿಕ್ಕೆ ಅಶಕ್ಯವಾದುದು ಅನಿರ್ವಚನೀಯವೆಂದಂಗೀಕರಿಸಿದರೆ ಸತ್ಪದಾರ್ಥಕ್ಕೂ ಅಸತ್ತಿಗೂ ಸದಸದ್ರೂಪತ್ವವಿಲ್ಲದಿರುವುದರಿಂದ ಅನಿರ್ವಚನೀಯತ್ವವು ಬರ ಬೇಕಾಗುವುದು. ಸತ್ಯನಾದ ಬ್ರಹ್ಮನಿಗೂ, ಅಸತ್ತಿಗೂ ಅನಿರ್ವಚನೀಯತ್ವವನ್ನು ಪರರು ಒಪ್ಪಲಿಲ್ಲ. (4) ಸತ್ ಎಂದು ನಿರ್ವಚನ ಮಾಡಲಿಕ್ಕೆ ಅಶಕ್ಯವಾಗಿದ್ದು ಅಸತ್ತೆಂದು ನಿರ್ವಚನ ಮಾಡಲಿಕ್ಕೆ ಅಶಕ್ಯವಾದುದು ಅನಿರ್ವಚನೀಯವು ಎಂದೂ ಹೇಳಕೂಡದು. ಸತ್ತಿಗೆ ಅಸ ತ್ತೆಂದು ನಿರ್ವಚನಮಾಡಲಿಕ್ಕೆ ಅಶಕ್ಯತ್ವವು ಬಂದೀತು. ಸತ್ತೆಂದು ನಿರ್ವಚನಮಾಡಲಿಕ್ಕೆ ಅಶ ಕ್ಯತ್ವವೆಂಬುವುದು ಬರಲಾರದು; ಹಾಗೆಯೇ ಅಸತ್ತಿಗೆ ಸತ್ ಎಂದು ನಿರ್ವಚನಮಾಡಲಿಕ್ಕೆ ಅಶಕ್ಯತ್ವವು ಬಂದೀತು. ಅಸತ್ ಎಂದು ನಿರ್ವಚನಮಾಡಲಿಕ್ಕೆ ಅಶಕ್ಯತ್ವವೆಂಬುವುದು ಬರ ಲಾರದು. ಅಂತೂ ವಿರುದ್ಧಗಳಾದುದರಿಂದ ವಿಶೇಷಣ, ವಿಶೇಷ್ಯ ಎರಡೂ ಒಂದುಕಡೆ ಇರ ಲಾರವು. ಆದುದರಿಂದ ಈ ಲಕ್ಷಣಕ್ಕೆ ಅಸಂಭವವೆಂಬುವ ದೋಷವು ಬರುವುದು. (5) ಅನಿ ರ್ವಚನೀಯ ಪದಾರ್ಥವನ್ನು ಒಪ್ಪುವವರಿಗೆ ವಿರೋಧವೂ ಬರಲಾರದು ಎಂದು ಹೇಳಕೂಡದು. ಅನಿರ್ವಚನೀಯವು ಸಿದ್ಧವಾದರೆ ವಿರೋಧವು ಇಲ್ಲವೆಂದು ಆಗುವುದು. ವಿರೋಧವು ಇಲ್ಲವೆಂದಾ ದರೆ ಅನಿರ್ವಚನೀಯಲಕ್ಷಣವು ಸಿದ್ಧವಾಗಿ ಅನಿರ್ವಚನೀಯವು ಸಿದ್ಧವಾಗುವುದು. ಹೀಗೆ ಅನ್ಯೋನ್ಯಾಶ್ರಯವು ಬರುವುದು.

ಈ ಎರಡು ನಿಷೇಧಗಳೂ ಯಥಾರ್ಥವಾಗಿದ್ದರೆ ವಿರೋಧವು ಬರುತ್ತಿತ್ತು. ಅದೂ ಮಿಥ್ಯೆಯೆಂದಂಗೀಕರಿಸಿದುದರಿಂದ ಯಥಾರ್ಥವಾದುದು ಅಲ್ಲವು. ಎಂದಾಶಂಕಿಸಿದರೆ-

**ಮೂ || ಸದ್ವಿಲಕ್ಷಣತ್ವಮಸದ್ವಿಲಕ್ಷಣತ್ವಂ ಚ ಮಿಥ್ಯೇತ್ಯವಿಲಕ್ಷಣತ್ವಮೇವ ಸತ್ಯಂ ಸ್ಯಾತ್ || ೩೭ ||**

ಅ || ಸತ್ತಿನಿಂದ ಭೇದವೂ ಅಸತ್ತಿನಿಂದ ಭೇದವೂ ಎರಡೂ ಮಿಥ್ಯೆಯಾದುದರಿಂದ ವೈಲಕ್ಷಣ್ಯವಿಲ್ಲವೆಂಬುವುದೇ ಸತ್ಯವಾಗುವುದು.

ತಾ || (1) ಈ ನಿಷೇಧಸಮುಚ್ಚಯಪಕ್ಷವನ್ನು ನಿರಾಕರಿಸುವುದಕ್ಕೋಸ್ಕರ ಎರಡಾವರ್ತಿ ವಿಲಕ್ಷಣತ್ವಂ ಎಂದು ಹೇಳಿರುವರು. ಇಲ್ಲವಾದರೆ ಸದಸದ್ವಿಲಕ್ಷಣತ್ವಂ ಎಂದು ಹೇಳುತ್ತಿದ್ದರು. (2) ಪ್ರಪಂಚವೇ ಇಲ್ಲದಿದ್ದಮೇಲೆ ಯಾವುದು ಸದಸದ್ರೂಪವಾಗಲಿ ಎಂದು ಆಪಾದನೆ ಮಾಡುತ್ತೀರಿ ಎಂದು ಹೇಳಕೂಡದು. ಏಕೆಂದರೆ ಪರರು ಪ್ರಪಂಚವನ್ನು ಅಸತ್ತೆಂದು ಒಪ್ಪದೆ ಇದ್ದುದರಿಂದ ಈ ದೋಷವನ್ನು ಅವರಿಗೆ ನಮ್ಮಮೇಲೆ ಹೇಳಲಿಕ್ಕೆ ಆಗುವುದಿಲ್ಲ || ೩೭ ||

ಇಷ್ಟರವರೆಗೆ ಅನಿರ್ವಚನೀಯವೇ ಸಿದ್ಧವಾಗದಿರುವುದರಿಂದ ಅನಿರ್ವಚನೀಯ ಭೇದವು ಸಾಧ್ಯವೋ ಪಾರಮಾರ್ಥಿಕವೋ ಎಂದು ವಿಕಲ್ಪಮಾಡಲಿಕ್ಕೇನೇ ಬರುವುದಿಲ್ಲವೆಂದು ಹೇಳಿ ಅಪಸಿದ್ಧಾಂತ ಮೊದಲಾದ ಪ್ರತಿಜ್ಞಾದೋಷಗಳನ್ನು ನಿರಾಕರಿಸಿದರು. ಇದೇ ನ್ಯಾಯವನ್ನು ಹೇತ್ವಾದಿದೋಷಗಳನ್ನು ನಿರಾಕರಿಸುವಾಗಲೂ ಇಟ್ಟುಕೊಳ್ಳಬೇಕು ಎಂದು ಹೇಳುತ್ತಾರೆ.

**ಮೂ || ಏವಮೇವ ಹೇತ್ವಾದಿಷ್ವಪಿ ವಿಕಲ್ಪೋ ನಿರಾಕರಣೀಯಃ || ೩೮ ||**

ಅ || ಏವಮೇವ=ಇದೇ ರೀತಿಯಾಗಿ, ಹೇತ್ವಾದಿಷ್ವಪಿ=ಹೇತು=ಹೇತುವಿನ ಅರ್ಥವಾದ ಮುಕ್ತತ್ವವೇ, ಆದಿಷು=ಮೊದಲಾದ ದೃಷ್ಟಾಂತದಲ್ಲಿರತಕ್ಕ ಮುಕ್ತತ್ವ ಭಿನ್ನತ್ವ ವಿಷಯಗಳಲ್ಲಿಯೂ, ವಿಕಲ್ಪಃ= ಸಂಶಯಮೂಲಕವಾದ ಪ್ರಶ್ನೆಯು, ನಿರಾಕರಣೀಯಃ=ನಿರಾಕರಿಸಲ್ಪಡಬೇಕು.

ತಾ || (1) ಅನಿರ್ವಚನೀಯ ಮುಕ್ತತ್ವವನ್ನು ಹೇತುವನ್ನಾಗಿ ಮಾಡುತ್ತೀರೋ, ಪಾರಮಾರ್ಥಿಕವನ್ನೋ, ಗನೇದ್ದು ವಾದಿಗಳಾದ ದ್ವೈತಿಗಳಿಗೆ ಸಿದ್ಧವಾಗಲಿಲ್ಲ. ಎನೇದ್ದು ಪ್ರತಿವಾದಿಗಳಾದ ಅದ್ವೈತಿಗಳಿಗೆ ಸಿದ್ಧವಾಗಲಿಲ್ಲ. 'ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ' ಮೋಕ್ಷವನ್ನು ಇಚ್ಛಿಸತಕ್ಕವನ ಸ್ಥಿತಿಯೂ ಮುಕ್ತನ ಸ್ಥಿತಿಯೂ ಎರಡೂ ಯಥಾರ್ಥವಾದುದಲ್ಲವು. ಎಂದು ಪರರು ಅಂಗೀಕರಿಸುವರು. (2) ಇದೇರೀತಿಯಾಗಿ ದೃಷ್ಟಾಂತದಲ್ಲಿದ್ದ ಮುಕ್ತತ್ವ ಭಿನ್ನತ್ವಗಳೂ ಅನಿರ್ವಚನೀಯಗಳಾದರೆ ದ್ವೈತಿಗಳರೀತ್ಯಾ ದೃಷ್ಟಾಂತದಲ್ಲಿ ಸಾಧ್ಯ ಸಾಧನಗಳಿಲ್ಲವು. ಪಾರಮಾರ್ಥಿಕಗಳಾದರೆ ಅದ್ವೈತಿಗಳಿಗೆ ಸಿದ್ಧವಾಗಲಿಲ್ಲ. ಅವುಗಳಿಗೆ ಪಾರಮಾರ್ಥಿಕತ್ವವನ್ನು ಸಾಧಿಸಲಿಕ್ಕೆ ಬೇರೆ ಒಂದು ದೃಷ್ಟಾಂತವನ್ನು ಅನುಸರಿಸಿದರೆ ಅನವಸ್ಥೆಯು. ಹೀಗೆ ಪರರು ಆಶಂಕಿಸಿದರೆ ಅನಿರ್ವಚನೀಯವೇ ಸಿದ್ಧವಾಗದಿರುವುದರಿಂದ ಈ ವಿಕಲ್ಪವೇ ಕೂಡುವುದಿಲ್ಲ. ಎಂದು ಹಿಂದಿನಂತೆ ನಿರಾಕರಿಸಬೇಕು. (3) ಒಂದು ಕಡೆ ಹೇಳಿದ ನ್ಯಾಯವನ್ನು ಅದಕ್ಕೆ ಸಮಾನವಾದ ಬೇರೆಕಡೆಯಲ್ಲಿಯೂ ಇಟ್ಟುಕೊಳ್ಳಬೇಕು ಎಂದು ಮುಂದಂಗೆ ತಿಳಿಸಲಿಕ್ಕೆ 'ಏವಮೇವ ಹೇತ್ವಾದಿಷು' ಎಂದು ಅತಿದೇಶಮಾಡಿರುತ್ತಾರೆ || ೩೮ ||

ಆದರೂ 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬುವ ಅನುಮಾನದಿಂದ ಮುಕ್ತಿಯಲ್ಲಿ ಭೇದವು ಸಿದ್ಧವಾಗುವುದಿಲ್ಲ. ಏಕೆಂದರೆ- ಪಕ್ಷದಲ್ಲಿ ಮುಕ್ತತ್ವರೂಪಹೇತುವು ಇಲ್ಲದಿರುವುದ

ರಿಂದ ಅಸಿದ್ಧಿರೂಪದೋಷವು ಬರುವುದು. ಪ್ರಮಾಣ ವಿರೋಧವೂ ಅದೆ. ಹೇಗೆಂದರೆ- ಜೀವ ಈಶ್ವರ ಜಡರೂಪವಾದ ಈ ಭೇದಪ್ರಪಂಚವು, ಸಜಾತೀಯರಾದ ಜೀವರಿಂದಲೂ ವಿಜಾತೀಯ ಗಳಾದ ಜಡವಸ್ತುಗಳಿಂದಲೂ ಭೇದವಿಲ್ಲದಿರುವವನೂ ಪಾರಮಾರ್ಥಿಕಸತ್ಯನೂ ಆದ ಪರ ಬ್ರಹ್ಮನ, ಅನಾದಿಯೂ, ಭಾವರೂಪವೂ, ಅನಿರ್ವಚನೀಯವೂ, ಪರಬ್ರಹ್ಮನ ಸ್ವರೂಪಕ್ಕೆ ಆವರಕವೂ ಆದ ಅವಿದ್ಯೆಯಿಂದ ತೋರತಕ್ಕುದು, ಪಾರಮಾರ್ಥಿಕವಾದುದಲ್ಲವು. ಪರಬ್ರಹ್ಮನೇ ಅವಿದ್ಯೆ (ತನಗೆ ವ್ಯಾಮೋಹಕವು) ಯಿಂದಲೂ, ಮಾಯೆ (ಪರರಿಗೆ ವ್ಯಾಮೋಹಕವು) ಇಂದಲೂ, ಪ್ರತಿಬಿಂಬಿತನೂ, ಬಿಂಬಭೂತನೂ ಆಗಿ, ಅಜ್ಞರಿಂದ ಜೀವನೆಂದೂ ಈಶ್ವರನೆಂದೂ ಹೇಳಿಸಲ್ಪಡು ತ್ತಾನೆ. ಘಟ ಪಟ ಮೊದಲಾದಜಡಪ್ರಪಂಚವು ಅವಿದ್ಯೆಯಿಂದಲೇ ಪರಿಣತವಾದುದು, ಪರಬ್ರಹ್ಮ ನಲ್ಲಿ ಆರೋಪಿತವಾದುದು. (2) ವಿವಾದ ಪದಂ=ವಿವಾದವಿಷಯವಾದ ಆಕಾಶಾದಿ ಜಗತ್ತು, ಪರಬ್ರಹ್ಮ, ಪ್ರಾತಿಭಾಸಿಕ, ಅಸತ್ತುಗಳಿಂದ ಬೇರೆಯಾದುದು) ಮಿಥ್ಯಾ=ಅನಿರ್ವಚನೀಯವು, ದೃಶ್ಯತ್ವಾತ್=ತೋರುವುದರಿಂದ, ಜಡತ್ವಾತ್=ಜಡವಾದುದರಿಂದ, ಪರಿಚ್ಛಿನ್ನತ್ವಾತ್=ಪರಿಚ್ಛಿನ್ನ ವಾದುದರಿಂದ, ಶುಕ್ತಿರಜತವತ್=ಚಿಪ್ಪಿನಲ್ಲಿ ತೋರಿದ ಬೆಳ್ಳಿಯಂತೆ, (3) 'ವಿಮತಾಃ ಆತ್ಮಾನಃ= ವಿವಾದಕ್ಕೆ ವಿಷಯರಾದ ಜೀವರು, ಪರಮಾತ್ಮನಃ ತತ್ವತೋ ನ ಭಿದ್ಯಂತೇ=ಬ್ರಹ್ಮನಿಂದ ನಿಜ ವಾಗಿಯೂ ಭೇದವುಳ್ಳವರಲ್ಲ, ಆತ್ಮತ್ವಾತ್=ಆತ್ಮತ್ವವಿದ್ದುದರಿಂದ, ಪರಮಾತ್ಮವತ್=ಬ್ರಹ್ಮ ನಂತೆ' ಇದುಮೊದಲಾದ ಅನುಮಾನಗಳು, ಜಗತ್ತು ಸುಳ್ಳು ಎಂಬುವ ವಿಷಯದಲ್ಲಿಯೂ, ಜೀವ ಪರಮಾತ್ಮರಿಗೆ ಭೇದವಿಲ್ಲವೆಂಬುವ ವಿಷಯದಲ್ಲಿಯೂ ಪ್ರಮಾಣವು. (4) 'ವಾಚಾರಂಭಣಂ ವಿಕಾರೋ ನಾಮಧೇಯಂ' ವಿಕಾರಃ=ವಿಕಾರವನ್ನು ಹೊಂದಿದ ಘಟಪಟಾದಿ ಜಗತ್ತು, ವಾಚಾ ರಂಭಣಂ=ಮಾತಿಗೆ ಮಾತ್ರ ವಿಷಯವಾಗಿದೆ. ನಾಮಧೇಯಂ=ಹೆಸರು ಮಾತ್ರ. ಅಂದರೆ ಬ್ರಹ್ಮನೇ ಜಗತ್ತಿನ ಆಕಾರನಾಗಿ ತೋರುತ್ತಾನೆ. ನಿಜವಾಗಿಯೂ ಜಗತ್ತು ಇಲ್ಲ. (5) ನಾನ್ಯೋ ತೋಽಸ್ತಿ ದ್ರಷ್ಟಾ. ಜೀವನು ಬ್ರಹ್ಮನಿಂದ ಬೇರೆ ಇಲ್ಲ. ಇದು ಮೊದಲಾದ ಶ್ರುತಿಗಳು ಪ್ರಮಾಣ ಗಳಿವೆ. (6) ಕರ್ತೃತ್ವ (ಮಾಡುವಿಕೆ) ಭೋಕ್ತೃತ್ವ (ಭೋಗಿಸುವಿಕೆ) ಮೊದಲಾದ ವಿರುದ್ಧ ಧರ್ಮಗಳು ಇದ್ದ ಪ್ರಯುಕ್ತ ಬ್ರಹ್ಮೈಕ್ಯವು ಕೂಡಲಾರದೆಂದು ದ್ವೈತಿಗಳು ಹೇಳಿದರ ಆ ಅವಿದ್ಯೆಯೇ ಕರ್ತೃತ್ವಾದಿಗಳ (ನಾನೇ ಕರ್ತನು, ಭೋಕ್ತನು, ರಾಗದ್ವೇಷಾದಿ ದೋಷ ಗಳುಳ್ಳವನು ಎಂಬುವ) ಆರೋಪ ಪ್ರವಾಹರೂಪವಾದ ಸಂಸಾರಕ್ಕೆ ಉಪಾದಾನ ಕಾರಣವು. ಅಂದರೆ ಕರ್ತೃತ್ವಮೊದಲಾದ ವಿರುದ್ಧಧರ್ಮಗಳು ಕಲ್ಪಿತಗಳಾದ ಪ್ರಯುಕ್ತ ನಿಜವಾದ ಐಕ್ಯಕ್ಕೆ ವಿರೋಧಿಗಳಲ್ಲ. (7) "ವಿಭೇದಜನಕೇ ಜ್ಞಾನೇ ನಾಶಮಾತ್ಯಂತಿಕಂ ಗತೇ । ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ"॥ ಭೇಧವನ್ನು ಹುಟ್ಟಿಸುವ ಜ್ಞಾನವು ಸಂಪೂರ್ಣವಾಗಿ ನಾಶವನ್ನು ಹೊಂದುತ್ತಿರಲು ಜೀವಬ್ರಹ್ಮರಿಗೆ ಭೇದವು ಇಲ್ಲದಿರುವುದರಿಂದ ಅದನ್ನು ಯಾರು ಮಾಡುವರು? ಇತ್ಯಾದಿ ಶ್ರುತಿಯಿಂದ ಆತ್ಮೈಕ್ಯಜ್ಞಾನವು ಅಜ್ಞಾನವನ್ನು ಹೋಗಲಾಡಿಸಿ ಸಂಸಾರ ವನ್ನು ನಾಶಮಾಡುತ್ತದೆ. ಇಂತಹ ಜ್ಞಾನದಿಂದ ಅವಶ್ಯವಾಗಿ ಅವಿದ್ಯೆಯನ್ನು ನಾಶಮಾಡಿಕೊಳ್ಳ ಬೇಕು. ಹೀಗಿರುತ್ತಾ ನಿಜವಾಗಿಯೂ ಸಂಸಾರವೇ ಇಲ್ಲದಿದ್ದಮೇಲೆ ಮುಕ್ತಿಯು ಹೇಗೆ ಇರು ವುದು, ಮುಕ್ತಿಯಲ್ಲಿ ಭೇದವೂ ಹೇಗೆ ತಾನೇ ಇರುವುದು? (8) ಜೀವರು ಅನೇಕರಿದ್ದಾರೆಂದು ಹೇಳುವವರೂ ಕೂಡ ಭೇದವಿದ್ದರೂ ಅದು ಅವಿದ್ಯಾಪರಿಕಲ್ಪಿತವೆನ್ನುತ್ತಾರೆ. ಅವಿದ್ಯೆಯು ನಾಶ ವಾದ ಮೇಲೆ ಮುಕ್ತನಿಗೆ ಭೇದಜ್ಞಾನವೇ ಇರುವುದಿಲ್ಲ. ಆದಪ್ರಯುಕ್ತ ಮುಕ್ತ, ಪರಮಾತ್ಮರಿಗೆ ಭೇದವೇ ಇಲ್ಲದಿರುವುದರಿಂದ ನಿಯಮ್ಯ ನಿಯಾಮಕಭಾವವದೆ ಎಂದು ಹೇಳಿದುದು ಅಸಂಗತವೇ ಸರಿ. ಅಂತೂ ಗ್ರಂಥಾರಂಭದ ಪದ್ಯದಲ್ಲಿ 'ನಿತ್ಯಾತಾದ್ಯತ ಚಿಜ್ಞೇತ್ಯಯಂಶಾ' ಸರ್ವನಿಯಾಮಕ

ನೆಂದು ಹೇಳಿರುವುದು ಅಸಂಗತವೆಂದು ಪರರು ಆಕ್ಷೇಪಿಸುವರು. "ಜಗತ್ತು ಮಿಥ್ಯೆಯಾಗಿದೆ" ಎಂಬುವ ವಿಷಯದಲ್ಲಿ ಪರರು ಉದಾಹರಿಸಿದ ಅನುಮಾನಗಳನ್ನು ತಿರಸ್ಕರಿಸುವುದಕ್ಕೋಸ್ಕರ ಹಿಂದಿನ ದೋಷಗಳನ್ನೇ ಇಲ್ಲಿಯೂ ಇಟ್ಟುಕೊಳ್ಳಬೇಕು ಎಂದುಪಪಾದಿಸುತ್ತಾರೆ.

**ಮೂ ॥ ದೃಶ್ಯತ್ವಾದ್ಯನುಮಾನೇಷ್ವಪ್ಯೇತ ಏವ ದೋಷಾಃ ॥ ೩೯ ॥**

ಅ ॥ ('ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್' ಇದು ಮೊದಲಾದ ಅನುಮಾನಕ್ಕೆ ಅಪ್ರಸಿದ್ಧ ವಿಶೇಷಣತ್ವ ಮೊದಲಾದ ಯಾವ ದೋಷಗಳು ಹೇಳಲ್ಪಟ್ಟವ್ವಾವೋ) ಏತ ಏವ ದೋಷಾಃ=ಈ ದೋಷಗಳೇವೇ, ದೃಶ್ಯತ್ವಾದ್ಯನುಮಾನೇಷ್ವಪಿ=ದೃಶ್ಯತ್ವ ಮೊದಲಾದ ಅನುಮಾನಗಳಲ್ಲಿಯೂ (ತಿಳಿದುಕೊಳ್ಳಬೇಕು).

ತಾ ॥ (1) 'ಮಿಥ್ಯಾ' ಎಂಬ ಶಬ್ದಕ್ಕೆ ಅನಿರ್ವಚನೀಯವೆಂದು ಅರ್ಥವೋ ಅಸತ್ತೆಂದೋ, ಅನಿರ್ವಚನೀಯತ್ವವನ್ನು ನಾವು (ದ್ವೈತಿಗಳು) ಒಪ್ಪದಿರುವುದರಿಂದ ಸಾಧ್ಯರೂಪ ವಿಶೇಷಣವು ಅಪ್ರಸಿದ್ಧವಾಯಿತು. ಆದಕಾರಣ ೧ನೇ ಕಲ್ಪವು ಕೂಡುವುದಿಲ್ಲ. ೨ನೇ ಕಲ್ಪವೂ ಅಯುಕ್ತವು. ಪರರು ಜಗತ್ತಿಗೆ ವ್ಯಾವಹಾರಿಕ ಸತ್ವವನ್ನು ಒಡಂಬಟ್ಟ ಪ್ರಯುಕ್ತವೂ ಜಗತ್ತು ಅಸದ್ವಿಲಕ್ಷಣವೆಂದು ಅಂಗೀಕರಿಸಿದ್ದರಿಂದಲೂ ಅಸತ್ತೆಂದು ಅಂಗೀಕರಿಸಿದರೆ ಅಪಸಿದ್ಧಾಂತವು ಬರುವುದು. (2) ಹಾಗಾದರೆ ಅನಿರ್ವಚನೀಯ, ಅಸತ್ತು ಈ ಎರಡರಲ್ಲಿಯೂ ಮಿಥ್ಯಾತ್ವವು ಸಮಾನವಾಗಿದೆ. ಅಂತಹ ಮಿಥ್ಯಾತ್ವವು ಈ ಅನುಮಾನದಿಂದ ಅವುಗಳಲ್ಲಿ ಜಗತ್ತಿಗೆ ಪ್ರತೀತಿ ಇರುವುದರಿಂದ ಆ ಮಿಥ್ಯಾತ್ವವು ಅಸತ್ತೆಂದು ಹೇಳಲಿಕ್ಕೆ ಆಗಲಾರದು. ಅಂತೂ ಅನಿರ್ವಾಚ್ಯವೆಂದೇ ಸಿದ್ಧವಾಗುವುದು, ಎಂದು ಪರರು ಆಶಂಕಿಸಕೂಡದು. ಏಕೆಂದರೆ– ವಾದಿ ಪ್ರತಿವಾದಿಗಳಿಬ್ಬರಿಗೂ ಸಮ್ಮತವಾದ ಮಿಥ್ಯಾತ್ವಸಾಮಾನ್ಯವೇ ಅಪ್ರಸಿದ್ಧವಾಗಿದೆ. (3) ಮಿಥ್ಯಾತ್ವವೆಂದರೆ ಸತ್ತಾದ ವಸ್ತುವಿನಿಂದ ಭೇದವು. ಇದನ್ನು ಸಾಧಿಸುವುದರಿಂದ ವಿಶೇಷಣವು ಅಪ್ರಸಿದ್ಧವಾಗುವುದಿಲ್ಲ. ಅಪಸಿದ್ಧಾಂತವೂ ಇಲ್ಲ, ಎಂದು ಪರರು ಹೇಳಿದರೆ, ದ್ವೈತಿಗಳು ಸದ್ವಿವೇಕ ಎಂಬಲ್ಲಿದ್ದ 'ಸತ್' ಎಂಬುವುದಕ್ಕೆ 'ಜಾತಿ' ಎಂದು ಅರ್ಥವೋ ಜಾತಿಯಿಂದ ಕೂಡಿದ ವ್ಯಕ್ತಿಯೋ, ಸ್ವರೂಪತಃ ಸತ್ಯವೆಂದೊ. ೧ನೇ, ೨ನೇ, ಕಲ್ಪಗಳು ಕೂಡಲಾರವು. ಏಕೆಂದರೆ– ಸತ್ ಪದಾರ್ಥಗಳು ಅನೇಕ ಉಂಟೆಂದು ಪರರು ಒಡಂಬಡಬೇಕಾಗುವುದು. ೩ನೇ, ಕಲ್ಪವೂ ಅಸಂಗತವು. ಸ್ವರೂಪತಃ ಸತ್ಯನಾದ ಪರಬ್ರಹ್ಮನಿಂದ ಭೇದವನ್ನು ದ್ವೈತಿಗಳು ಒಡಂಬಟ್ಟ ಪ್ರಯುಕ್ತ ಸಿದ್ಧವಾದ ಅರ್ಥವನ್ನೇ ಸಾಧಿಸಿದಂತೆ ಆಗುವುದು. ಅಲ್ಲದೆ ಸದ್ವೈಲಕ್ಷಣ್ಯರೂಪವಾದ ಬೇದವನ್ನು ಅಂಗೀಕರಿಸಿ ಪುನಃ ತಮ್ಮ ಗ್ರಂಥದಲ್ಲಿ ಭೇದವನ್ನು ನಿರಾಕರಿಸಿದರೆ ಸ್ವವಚನವಿರೋಧವೂ ಬರುವುದು. (4) ಮಿಥ್ಯಾತ್ವವೆಂದರೆ ಬಾಧ್ಯತ್ವವೆಂದು ಪರರು ಹೇಳಕೂಡದು. ಏಕೆಂದರೆ– ಆ ಸಾಧ್ಯವಾದ ಬಾಧ್ಯತ್ವವು ಸತ್ಯವೋ ಮಿಥ್ಯೆಯೋ, ಆ ಬಾಧ್ಯತ್ವಕ್ಕೆ ಸತ್ಯತ್ವವನ್ನು ಹೇಳಿದರೆ ಅಲ್ಲಿ ಮಿಥ್ಯಾತ್ವವೆಂಬುವ ಸಾಧ್ಯವು ಬರಲಿಲ್ಲ. ದೃಶ್ಯತ್ವರೂಪ ಹೇತುವು ಬರುತ್ತದೆ. ಕಾರಣ ಅಲ್ಲಿಯೂ ವ್ಯಭಿಚಾರವು ಬರುವುದು. ಬಾಧ್ಯತ್ವಕ್ಕೆ ಮಿಥ್ಯಾತ್ವವನ್ನು ಒಡಂಬಟ್ಟರೆ ಅಬಾಧ್ಯತ್ವವೇ (ಬಾಧವಿಲ್ಲವೆಂಬುವುದೇ) ಆತ್ಮನಂತೆ ಸತ್ಯವಾಗಬೇಕಾಯಿತು. ತಥಾಚ ಅನುಮಾನಕ್ಕೆ ಬಾಧವೆಂಬುವ ದೋಷವು ಬರುವುದು. (5) ಮತ್ತು ದೃಶ್ಯತ್ವಮೊದಲಾದ ಹೇತುಗಳು ಸತ್ಯಗಳೆಂದಾದರೆ ಅದ್ವೈತಿಗಳಿಗೆ ಸಿದ್ಧಗಳಾಗಲಿಲ್ಲ. ಅಸತ್ತುಗಳು ಅಥವಾ ಅನಿರ್ವಾಚ್ಯಗಳೆಂದು ಹೇಳುವುದಾದರೆ ದ್ವೈತಿಗಳಿಗೆ ಸಿದ್ಧಗಳಾಗಲಿಲ್ಲ. ಸತ್ಯಾಸತ್ಯಗಳಲ್ಲಿ ವಾದಿ ಪ್ರತಿವಾದಿಗಳಿಗೆ ಸಮ್ಮತವಾದ ದೃಶ್ಯತ್ವ ಸಾಮಾನ್ಯವು ಇಲ್ಲ ॥ ೩೯ ॥

ಈ ಪ್ರಕಾರವಾಗಿ ಸಾಮಾನ್ಯಾಕಾರವಾಗಿ ಅನುಮಾನಗಳನ್ನು ನಿರಾಕರಿಸಿ ವಿಶೇಷಾಕಾರ ವಾಗಿಯೂ ನಿರಾಕರಿಸಲಿಚ್ಛಿಸಿದವರಾಗಿ ದೃಶ್ಯತ್ವಾನುಮಾನಕ್ಕೆ ದೋಷಾಂತರವನ್ನು ಹೇಳುತ್ತಾರೆ.

**ಮೂ ॥ ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕತಾ ಚ ॥ ೪೦ ॥**

ಅ ॥ ಆತ್ಮನೋಽಪಿ=ಆತ್ಮನಿಗೂ ಕೂಡ, ದೃಶ್ಯತ್ವಾತ್=ಜ್ಞಾನವಿಷಯತ್ವವಿದ್ದಪ್ರಯುಕ್ತ, ಅನೈಕಾಂತಿಕತಾ ಚ=ವ್ಯಭಿಚಾರವೂ ಕೂಡ, (ಬರುತ್ತದೆ).

ತಾ ॥ (1) ಶುಕ್ತಿರಜತ ಮೊದಲಾದ ಸಪಕ್ಷದಲ್ಲಿ ಹೇಗೆ ದೃಶ್ಯತ್ವವಿದೆಯೋ, ಹಾಗೆಯೇ ವಿಪಕ್ಷನಾದ ಆತ್ಮನಿಗೂ ದೃಶ್ಯತ್ವವೆಂಬುವ ಹೇತುವು ಇದ್ದಪ್ರಯುಕ್ತ ವ್ಯಭಿಚಾರವು. (2) ಆತ್ಮಾ ವಾ ಅರೇ ದ್ರಷ್ಟವ್ಯಃ ಅರೇ=ಎಲೋ ಮೈತ್ರೇಯಿಯೇ, ಆತ್ಮಾ ವಾ=ಬ್ರಹ್ಮನು, ದ್ರಷ್ಟವ್ಯಃ=ಕಾಣಲ್ಪಡಬೇಕು. 'ದೃಶ್ಯತೇ ತ್ವಗ್ರ್ಯಯಾ ಬುಧ್ಯಾ ಸೂಕ್ಷ್ಮಯಾ' ಶ್ರೇಷ್ಠವಾಗಿಯೂ ಸೂಕ್ಷ್ಮವಾಗಿಯೂ ಇರುವ ಬುದ್ಧಿಯಿಂದ ಆತ್ಮನು ಕಾಣಲ್ಪಡುತ್ತಾನೆ. ಇದು ಮೊದಲಾದ ಶ್ರುತಿಯಿಂದ ಆತ್ಮನು ದೃಶ್ಯನೆಂದು ಸಿದ್ಧವಾಗುವುದು. ಆದಪ್ರಯುಕ್ತ ಮಿಥ್ಯಾತ್ವರೂಪ ಸಾಧ್ಯ ವಿಲ್ಲದಿರುವ ಆತ್ಮನಲ್ಲಿ ದೃಶ್ಯತ್ವರೂಪಹೇತುವಿರುವುದರಿಂದ ದೃಶ್ಯತ್ವಾನುಮಾನದಲ್ಲಿ ವ್ಯಭಿಚಾರ ವೆಂಬುವ ದೋಷವು ಬರುವುದು. ॥ ೪೦ ॥

**ಮೂ ॥ ನ ಚಾತ್ಮನೋ ದೃಕ್ಕರ್ಮತ್ವಂ ವಿನಾ ತಜ್ಜ್ಞಾನತ್ವಂ ॥ ೪೧ ॥**

ಅ ॥ ಆತ್ಮನಃ=ಬ್ರಹ್ಮನಿಗೆ, ದೃಕ್ಕರ್ಮತ್ವಂ=ದೃಗ್ವಿಷಯತ್ವವನ್ನು, ವಿನಾ=ಹೊರತು, ಆತ್ಮಜ್ಞಾನಸ್ಯ=ಆತ್ಮಜ್ಞಾನಕ್ಕೆ, ತಜ್ಜ್ಞಾನತ್ವಂ=ಆತ್ಮಕರ್ಮಕಜ್ಞಾನತ್ವವು, ನ=ಬರಲಾರದು.

ತಾ ॥ (1) ಆತ್ಮನು ದೃಶ್ಯನಾಗದಿದ್ದರೆ ವೇದಾಂತ ವಾಕ್ಯಗಳಿಂದುಂಟಾದ ವಿಜ್ಞಾನವು ಆತ್ಮಜ್ಞಾನವಾಗದೆ ಹೋಗಬೇಕಿದ್ದಿತು. ಜ್ಞಾನಕ್ಕೆ ವಿಷಯವಾದುದೇ ದೃಶ್ಯವು. ಆತ್ಮಕರ್ಮಕ ವಾದ ಜ್ಞಾನವೇ ಆತ್ಮಜ್ಞಾನವು. ಅಂತೂ ಆತ್ಮನು ದೃಶ್ಯನೇ ಆಗದಿದ್ದರೆ ವೇದಾಂತವಾಕ್ಯ ಗಳಿಂದುಂಟಾಗುವ ಜ್ಞಾನವು ಆತ್ಮವಿಷಯಕ ಜ್ಞಾನವು ಹೇಗೆ ಆಗುವುದು? ಇಂತಹ ಅತಿ ಪ್ರಸಂಗವನ್ನು ಸ್ಪಷ್ಟತೋರಿಸಲಿಕ್ಕಾಗಿ "ದೃಶ್ಯತ್ವಂ" ಎಂದು ಹೇಳುವ ಬದಲಿಗೆ "ದೃಕ್ಕರ್ಮತ್ವಂ" ಎಂದು ವಿವರಣ ಮಾಡಿರುತ್ತಾರೆ ॥ ೪೧ ॥

ಆತ್ಮಜ್ಞಾನವಿಲ್ಲದಿದ್ದರೆ ಬಾಧಕವೇನೆಂದರೆ—

**ಮೂ ॥ ತದಜ್ಞಾನನಿವೃತ್ತಿಶ್ಚ ತೇನ ಭವತಿ ॥ ೪೨ ॥**

ಅ ॥ ತದಜ್ಞಾನನಿವೃತ್ತಿಶ್ಚ=ಆತ್ಮವಿಷಯಕವಾದ ಅಜ್ಞಾನನಿವೃತ್ತಿಯೂ, ತೇನ= ಆತ್ಮಜ್ಞಾನದಿಂದ, ನ ಭವತಿ=ಆಗುವುದಿಲ್ಲ.

ತಾ ॥ (1) ವೇದಾಂತ ವಾಕ್ಯಗಳಿಂದುಂಟಾದ ವಿಜ್ಞಾನವೂ ಆತ್ಮಜ್ಞಾನವಾಗದಿದ್ದರೆ ಆತ್ಮ (ಬ್ರಹ್ಮ) ಜ್ಞಾನದಿಂದ ಆತ್ಮವಿಷಯಕವಾದ ಅಜ್ಞಾನವು ನಾಶವಾಗದಿರಬೇಕಾಯಿತು. ಆತ್ಮಜ್ಞಾನದಿಂದಲೇ ಆತ್ಮಜ್ಞಾನವು ನಾಶವಾಗುತ್ತದೆ ಎಂದು ಅನುಭವಸಿದ್ಧವು. ವೇದಾಂತ ಶಾಸ್ತ್ರ ಗಳು ಆತ್ಮಜ್ಞಾನವನ್ನುಂಟುಮಾಡದೆ ಹೋದರೆ ವೇದಾಂತ ಶಾಸ್ತ್ರವು ವ್ಯರ್ಥವಾಗಬೇಕಾಯಿತು. (2) ಅಥವಾ ಆತ್ಮನಿಗೆ ದೃಗ್ವಿಷಯತ್ವವನ್ನು ಅಂಗೀಕರಿಸದಿದ್ದರೆ ಬೇರೆ ಒಂದು ಅತಿಪ್ರಸಂಗವು. ಆತ್ಮನಿಗೆ ದೃಗ್ವಿಷಯತ್ವವಿಲ್ಲದಿದ್ದರೆ ಆತ್ಮವಿಷಯಕವಾದ ಅಜ್ಞಾನವೆಂಬುವುದೇ ಇಲ್ಲವೆಂದಾಗು ವುದು. ಒಂದು ವಸ್ತುವಿನ ಜ್ಞಾನವು ಹುಟ್ಟಲಿಕ್ಕೆ ಎಲ್ಲಾ ಕಾರಣಗಳು ಇರುವಾಗ, ವಸ್ತುವಿಷಯಕ ವಾದ ಜ್ಞಾನವನ್ನು ಯಾವುದು ಪ್ರತಿಬಂಧಿಸುತ್ತದೋ ಅದೇ ಅಜ್ಞಾನವು. ಅದರ ಅಜ್ಞಾನಕ್ಕೆ

ಅದರ ಜ್ಞಾನವನ್ನು ಪ್ರತಿಬಂಧಿಸುವುದೆಂಬ ಸಂಬಂಧವನ್ನು ಬಿಟ್ಟು ಬೇರೆ ಸಂಬಂಧ ಹೇಳಲಿಕ್ಕೆ ಬರುವುದಿಲ್ಲ. (3) ಆತ್ಮವಿಷಯಕವಾದ ಅಜ್ಞಾನವು ಇಲ್ಲದಿದ್ದರೆ ಆತ್ಮಾಜ್ಞಾನನಿವೃತ್ತಿರೂಪವಾದ ಮುಕ್ತಿಯೂ ಇಲ್ಲವೆಂದಾಗುವುದು. ಮುಕ್ತಿಯೇ ಇಲ್ಲದಿದ್ದಮೇಲೆ ಮುಕ್ತಿಗಾಗಿ ಶಾಸ್ತ್ರಗಳನ್ನು ಓದುವುದೇ ವ್ಯರ್ಥವಾಗಬೇಕಾದೀತು ॥ ೪೨ ॥

ಹಾಗಾದರೆ ಆತ್ಮನು ಜ್ಞಾನಕ್ಕೆ ವಿಷಯನಾಗದೆ ಇದ್ದರೂ ವೇದಾಂತ ವಾಕ್ಯಗಳಿಂದುಂಟಾದ ಜ್ಞಾನವು ಆತ್ಮನಿಗೆ ಆಕಾರವನ್ನು ಸಮರ್ಪಿಸುತ್ತದೆ. ಆದಪ್ರಯುಕ್ತ ಶಾಸ್ತ್ರಜನ್ಯ ಜ್ಞಾನವು ಆತ್ಮ ವಿಷಯಕವಾಗದಿದ್ದರೂ ಆತ್ಮಾಕಾರವಾಗಬಹುದು. ಯಾವ ಅತಿಪ್ರಸಂಗವೂ ಇರುವುದಿಲ್ಲ. (4) 'ಆತ್ಮಾ ವಾ ಅರೇ ದ್ರಷ್ಟವ್ಯಃ' ಇದು ಮೊದಲಾದ ಶ್ರುತಿಗಳೂ ಜ್ಞಾನಕ್ಕೆ ಆತ್ಮಾಕಾರತ್ವವಿದ್ದ ಪ್ರಯುಕ್ತವೇ ಕೂಡುತ್ತವೆ. (5) ಜ್ಞಾನವು ಆತ್ಮವಿಷಯಕವಾಗದೆ ಆತ್ಮಾಕಾರವಾಗುವುದು ಹೇಗೆ ಎಂದು ಹೇಳಕೂಡದು. ಏಕೆಂದರೆ– 'ಶಶಶೃಂಗ' ವೆಂಬುವ ಶಬ್ದದಿಂದ ತದಾಕಾರವಾದ ಜ್ಞಾನವು ಹುಟ್ಟುತ್ತದೆ. ಆ ಜ್ಞಾನಕ್ಕೆ ಶಶಶೃಂಗವು ಕರ್ಮವಾಗಲಾರದು. ಯಾವ ಸಾಮರ್ಥ್ಯವೂ ಇಲ್ಲದಿರುವ ಮೊಲದಕೋಡು ಕಾರಕವೇ ಆಗಲಾರದು. ಅದರಂತೆಯೇ ಇಲ್ಲಿಯೂ ವಿಜ್ಞಾನವು ಆತ್ಮವಿಷಯಕವಾಗದಿದ್ದರೂ ವೇದಾಂತ ವಾಕ್ಯಗಳ ಸಾಮರ್ಥ್ಯದಿಂದ ಆತ್ಮಾಕಾರವಾಗುವುದು. ಆದಪ್ರಯುಕ್ತ ಯಾವ ದೋಷವೂ ಇಲ್ಲವೆಂದು ಶಂಕಿಸಿದರೆ–

**ಮೂ ॥ ನ ಚ ತದಾಕಾರಂ ॥ ೪೩ ॥**

ಅ ॥ (ಆತ್ಮನು ದೃಕ್ಕಿಗೆ ವಿಷಯನಾಗದೆ ಇದ್ದರೆ) ತದಾಕಾರಂ=ಆತ್ಮಾಕಾರಜ್ಞಾನವು, ನ ಚ=ಹುಟ್ಟಲಾರದು ॥ ೪೩ ॥

ಆತ್ಮನು ಜ್ಞಾನಕ್ಕೆ ವಿಷಯನಾಗದೆ ಆತ್ಮಾಕಾರವಾದ ಜ್ಞಾನವು ಹುಟ್ಟುತ್ತಿದ್ದ ಪಕ್ಷದಲ್ಲಿ ಅತಿಪ್ರಸಂಗರೂಪವಾದ ಯಾವ ದೋಷವೂ ಬರುತ್ತಿದ್ದಿಲ್ಲ. ಆದರೆ ಆತ್ಮನು ಜ್ಞಾನಕ್ಕೆ ವಿಷಯ ನಾಗದೆ ಆತ್ಮಾಕಾರವಾದ ಜ್ಞಾನವೇ ಹುಟ್ಟುವುದಿಲ್ಲ. ಏಕೆಂದರೆ–

**ಮೂ ॥ ಅತದ್ವಿಷಯತ್ವಾದೇವ ॥ ೪೪ ॥**

ಅ ॥ ಅತದ್ವಿಷಯತ್ವಾದೇವ=ಆತ್ಮನಿಗೆ ವಿಷಯತ್ವವಿಲ್ಲದಿರುವುದರಿಂದಲೇ, ಆತ್ಮಾ ಕಾರವಾದ ಜ್ಞಾನವು ಹುಟ್ಟುವುದಿಲ್ಲ.

ತಾ ॥ ವೇದಾಂತ ವಾಕ್ಯದಿಂದ ಹುಟ್ಟಿದ ಜ್ಞಾನಕ್ಕೆ ಆತ್ಮನು ವಿಷಯನಾಗದೆ ಇರುವದ ರಿಂದ ಆತ್ಮಜ್ಞಾನವಾಗುವುದಿಲ್ಲವೆಂದು ನಾವು ಹಿಂದೆ ಹೇಗೆ ಹೇಳಿದೆವೋ, ಹಾಗೆಯೇ ಜ್ಞಾನಕ್ಕೆ ಆತ್ಮನು ವಿಷಯನಾಗದೆ ಇರುವುದರಿಂದಲೇ ವೇದಾಂತ ವಾಕ್ಯದಿಂದುಂಟಾದ ಜ್ಞಾನವೂ ಆತ್ಮಾ ಕಾರವು ಆಗಲಾರದು ॥ ೪೪ ॥

ಆತ್ಮನು ವಿಷಯನಾಗದೆ ಇದ್ದರೂ, ಜ್ಞಾನವು ಆತ್ಮಾಕಾರವೆಂದು ಏಕೆ ಹೇಳಬಾರದು, ಎಂದು ಪರರು ಶಂಕಿಸಿದರೆ,

**ಮೂ ॥ ತದ್ವಿಷಯತ್ವಮೇವ ಹಿ ತದಾಕಾರತ್ವಂ ॥ ೪೫ ॥**

ಅ ॥ ಹಿ=ಯಾವ ಕಾರಣದಿಂದ, (ಜ್ಞಾನಕ್ಕೆ) ತದ್ವಿಷಯತ್ವಮೇವ=ಆತ್ಮವಿಷಯತ್ವವೇ, ತದಾಕಾರತ್ವಂ=ಆತ್ಮಾಕಾರತ್ವವೋ,

ತಾ || ಆದಕಾರಣ ವಿಜ್ಞಾನಕ್ಕೆ ಆತ್ಮನು ವಿಷಯನಾಗದೆ ಇರುವುದರಿಂದ ಜ್ಞಾನವು ಆತ್ಮಾಕಾರವೂ ಕೂಡ ಆಗಲಾರದು. ಆಗುತ್ತದೆಂದಂಗೀಕರಿಸಿದರೆ ಸ್ವವಚನ ವಿರೋಧವು ||೪೫||

ಆತ್ಮವಿಷಯತ್ವವೇ ಆತ್ಮಾಕಾರತ್ವವೆಂದು ಏಕೆ ಅಂಗೀಕರಿಸಬೇಕೆಂದರೆ- ಪರಿಶೇಷಪ್ರಮಾಣ ದಿಂದ. ಹೇಗೆಂದರೆ, ತದಾಕಾರ ಎಂಬುವುದಕ್ಕೆ (1) "ತದಾಕಾರ ಏವ ಆಕಾರೋ ಯಸ್ಯ"= ಆತ್ಮಾಕಾರವೇ ಆಕಾರವು ಯಾವ ಜ್ಞಾನಕ್ಕೆ ಅದೆಯೋ ಎಂದಾಗಲೀ, (2) "ತದಾಕಾರ ಇವ ಆಕಾರೋ ಯಸ್ಯ"=ಬ್ರಹ್ಮನ ಆಕಾರದಂತೆ ಆಕಾರವು ಯಾವ ಜ್ಞಾನಕ್ಕೆ ಅದೆಯೋ ಎಂದಾಗಲೀ, (3) "ಸಃ ಆಕಾರೋ ಯಸ್ಯ"=ಆತ್ಮನೇ ಆಕಾರನು ಯಾವ ಜ್ಞಾನಕ್ಕೋ, ಅಂತಹ ಜ್ಞಾನವು ತದಾಕಾರವೆಂದಾಗಲೀ ಹೇಳಬೇಕು. ಬೇರೆ ರೀತಿಯಾಗಿ ಹೇಳಲು ಸಾಧ್ಯವಿಲ್ಲ. ಅವುಗಳಲ್ಲಿ ೧ನೇ, ೨ನೇ, ಕಲ್ಪಗಳನ್ನು ತಿರಸ್ಕರಿಸುತ್ತಾರೆ.

ಮೂ || ನ ಹಿ ಜ್ಞಾನಜ್ಞೇಯಯೋರೇಕಾಕಾರತಾ || ೪೬ ||

ಅ || ಜ್ಞಾನಜ್ಞೇಯಯೋಃ=ಜ್ಞಾನ ಮತ್ತು ತಿಳಿಯಲಿಕ್ಕೆ ಯೋಗ್ಯವಾದ ವಸ್ತು ಇವು ಗಳಿಗೆ (ಬ್ರಹ್ಮಜ್ಞಾನ, ಬ್ರಹ್ಮ ಇವರಿಗೆ,) ಏಕಾಕಾರತಾ=ಒಂದೇ ಆಕಾರತ್ವವು, ನಹಿ=ಇಲ್ಲವಷ್ಟೇ,

ತಾ || (1) ಆತ್ಮಜ್ಞಾನ, ಆತ್ಮ, ಇವರಿಗೆ ಒಂದೇ ಆಕಾರವಾಗಿದ್ದರೆ, ಆತ್ಮಾಕಾರವೇ ಯಾವ ಜ್ಞಾನಕ್ಕೆ ಆಕಾರವೋ, ಎಂಬುವುದು ಕೂಡುತ್ತಿತ್ತು. ಹೀಗೆ ಎಲ್ಲಿಯೂ ತೋರದಿರು ವುದರಿಂದ ಇದು ಕೂಡಲಾರದು. (2) ಒಂದೇ ಸತ್ತಾಜಾತಿಯು ಜ್ಞಾನ ಜ್ಞೇಯಗಳಿಗೆ ಆಕಾರವಾಗಿದೆ ಎಂದು ಹೇಳಕೂಡದು. ಏಕೆಂದರೆ- ಅನುಗತವಾದ (ಅನೇಕ ಕಡೆಯಲ್ಲಿರುವ) ಸತ್ತಾಜಾತಿಯನ್ನೇ ಅಂಗೀಕರಿಸಲಿಲ್ಲ. ಸತ್ತಾಜಾತಿಯಿಂದ ಒಂದೇ ಆಕಾರವೆಂದಿಟ್ಟುಕೊಂಡರೆ ವೇದಾಂತ ವಾಕ್ಯದಿಂದ ಉಂಟಾದ ಜ್ಞಾನವು ಪರರ ರೀತಿಯಾಗಿ ಆತ್ಮಾಕಾರವೇ ಆಗಬೇಕೆಂದಿಲ್ಲ. ಕುರ್ಚಿಮೊದಲಾದುವುಗಳ ಆಕಾರವೂ ಆಗಬಹುದು. ಅಂದರೆ ಕುರ್ಚಿಯಲ್ಲಿಯೂ ಆತ್ಮನಲ್ಲಿಯೂ ಒಂದೇ ಸತ್ತಾ ಇರುವುದೆಂದು ಒಪ್ಪಿದುದರಿಂದ ಪರರು ಕುರ್ಚಿಯಲ್ಲಿಯೂ ಆತ್ಮನಲ್ಲಿಯೂ ಇರುವ ಸತ್ತಾ ಒಂದೇ ಎಂದಂಗೀಕರಿಸುತ್ತಾರೆ. ದ್ವೈತಿಗಳು ಸತ್ತಾ ಬೇರೆ ಬೇರೆ ಎನ್ನುತ್ತಾರೆ. (3) ಮತ್ತು ಬ್ರಹ್ಮನಿಗೆ ಯಾವುದೊಂದು ಆಕಾರವನ್ನೂ ಪರರು ಅಂಗೀಕರಿಸದೆ ಇರುವುದರಿಂದ ಸತ್ತಾ ನಾಮಕವಾದ ಆಕಾರವನ್ನೂ ಒಡಂಬಡಲಾರರು. ಆದ ಪ್ರಯುಕ್ತ ಪರರಿಗೆ ಸತ್ತಾರೂಪವಾದ ಒಂದು ಆಕಾರವನ್ನು ಇಟ್ಟುಕೊಂಡು ಜ್ಞಾನ ಜ್ಞೇಯಗಳಿಗೆ ಏಕಾಕಾರವನ್ನು ಹೇಳಲಾಗುವುದಿಲ್ಲ. (4) ಹೀಗೆಯೇ ಜ್ಞಾನಜ್ಞೇಯಗಳಿಗೆ ಸದೃಶಾಕಾರತ್ವವೂ ಇಲ್ಲ. ಆದಕಾರಣ ತದಾಕಾರ ಎಂಬುವುದಕ್ಕೆ ೨ನೇ ಅರ್ಥವೂ ಕೂಡದು. ಆತ್ಮಾಕಾರಕ್ಕೂ ಜ್ಞಾನಾಕಾರಕ್ಕೂ ಅತಿಸಾದೃಶ್ಯ ವನ್ನು ಹೇಳಿದರೆ ಅನುಭವವಿರೋಧವು ಬರುವುದು. ೩ನೇ ಕಲ್ಪದಲ್ಲಿಯೂ ಆಧಾರಾಧೇಯ ಭಾವವೂ ಕೂಡದಿರುವುದರಿಂದ ಜ್ಞಾನಕ್ಕೆ ಸಾಕ್ಷಾತ್ ಜ್ಞೇಯವು ಆಕಾರವಾಗಲಾರದು. ಕಿಂಚಿತ್ಸಾದೃಶ್ಯವನ್ನು ಇಟ್ಟುಕೊಂಡರೆ ವೇದಾಂತಜನಿತಜ್ಞಾನವು ಆತ್ಮಾಕಾರವೇ ಆಗಬೇಕೆಂದಿಲ್ಲ. ಘಟಾಕಾರವೂ ಆಗಬಹುದೆಂದು ಅತಿಪ್ರಸಂಗವು ಬರುವುದು. ಆದ ಕಾರಣ ಆತ್ಮನೇ ಆಕಾರ ವೆಂಬುವ ೩ನೇ ಪಕ್ಷವು ಕೂಡಲಾರದು. ಬೇರೆ ರೀತಿಯು ಕೂಡದಿರುವುದರಿಂದ ಪರಿಶೇಷ ಪ್ರಮಾಣದಿಂದ 'ಸಃ ಆಕಾರ ಇವ ಯಸ್ಯ' ಎಂದೇ ತದಾಕಾರಂ ಎಂಬುವುದಕ್ಕೆ ಅರ್ಥ ಹೇಳ ಬೇಕು. ಹೀಗೆ ಹೇಳಿದರೆ ತದ್ವಿಷಯತ್ವವೇ ತದಾಕಾರತ್ವವೆಂದುಕ್ತವಾದ ಹಾಗಾಯಿತು. ಅಂತೂ ವೇದಾಂತ ವಾಕ್ಯದಿಂದ ಉಂಟಾದ ವಿಜ್ಞಾನವು ಆತ್ಮವಿಷಯಕವಾಗದೇ ಇದ್ದರೆ ಆತ್ಮಾಕಾರವು ಆಗಲಿಕ್ಕಿಲ್ಲ ಎಂದು ಹೇಳಿರುವುದು ಯುಕ್ತವೇ. (5) ಪರಿಶೇಷಪ್ರಮಾಣದಿಂದ ಸಿದ್ಧವಾದ ಈ

ಅರ್ಥವನ್ನು ಆಲೋಚಿಸಿಯೇ ಆಚಾರ್ಯರು ತದ್ವಿಷಯತ್ವವೇ ತದಾಕಾರತ್ವವೆಂದು ಹೇಳಿರುವರು, ಈ ಅಭೇದೋಕ್ತಿಯೂ ಅಮುಖ್ಯವೆಂದು ತಾತ್ಪರ್ಯವು. (6) ಹಾಗಾದರೆ ಆತ್ಮನು ಜ್ಞಾನಕ್ಕೆ ವಿಷಯನಾಗದಿದ್ದರೆ ವೇದಾಂತ ವಾಕ್ಯದಿಂದ ಉಂಟಾದ ಜ್ಞಾನವು ಆತ್ಮಾಕಾರವಾಗಲಾರದು ಎಂದು ಪ್ರತಿಜ್ಞಾಮಾಡಿ "ಅತತ್ಕರ್ಮತ್ವಾದೇವ" ಎಂದು ಹೇತುವನ್ನು ಹೇಳಬೇಕಿತ್ತು. "ತತ್ಕರ್ಮತ್ವಮೇವ ಹಿ ತದಾಕಾರತ್ವಂ" ಎಂದೂ ಉಪಪಾದಿಸಬೇಕಿದ್ದಿತು. "ಅತದ್ವಿಷಯತ್ವಾದೇವ" "ತದ್ವಿಷಯತ್ವಮೇವ ಹಿ" ಎಂದು ಏತಕ್ಕೆ ಪ್ರಯೋಗಿಸಿರುವರು ಎಂದು ಶಂಕಿಸಕೂಡದು. ಏಕಂದರೆ- ಮೊಲದಕೋಡು ಎಂಬುವ ಶಬ್ದದಿಂದ ಮೊಲದಕೋಡಿನ ಆಕಾರವಾದ ಜ್ಞಾನವು ಹುಟ್ಟುತ್ತದೆ ಎಂದು ಸಾಕ್ಷಿಗೆ ಸಿದ್ಧವಾಗಿದೆ. ಆ ಜ್ಞಾನವು ಸಕರ್ಮಕವೆಂದು ಹೇಳಕೂಡದು. ಹಾಗೆಯೇ ವೇದಾಂತ ವಾಕ್ಯದಿಂದ ಉಂಟಾದ ಜ್ಞಾನಕ್ಕೂ ಆತ್ಮನು ಕರ್ಮನಾಗ(ವಿಷಯನಾಗ)ದಿದ್ದರೂ ಆತ್ಮಾಕಾರವು ಏತಕ್ಕೆ ಆಗಬಾರದು ಎಂಬುವ ಆ ಶಂಕೆಯನ್ನು ನಿವೃತ್ತಿಮಾಡುವುದಕ್ಕೋಸ್ಕರ ಜ್ಞಾನವನ್ನು ಕುರಿತು ಕರ್ಮತ್ವವೆಂದರೂ, ವಿಷಯತ್ವವೆಂದರೂ ಭೇದವು ಇಲ್ಲವು ಎಂದು ಸೂಚಿಸಲಿಕ್ಕಾಗಿ ಕರ್ಮ ಎಂಬುವ ಶಬ್ದವನ್ನು ಆದಿಯಲ್ಲಿ ಹೇಳಿ ವಿಷಯ ಎಂಬುವ ಶಬ್ದವನ್ನು ಮೇಲೆ ಹೇಳಿದ್ದು ಯೋಗ್ಯವೇ ಆಗಿರುತ್ತದೆ. ಹೇಗೆಂದರೆ- ಮೊಲದ ಕೋಡು ಎಂಬುವ ಶಬ್ದದಿಂದ ಹುಟ್ಟುವ ಜ್ಞಾನವು ಸವಿಷಯಕವೋ ನಿರ್ವಿಷಯಕವೋ? ಅಂದರೆ ವಿಷಯವನ್ನು ವಿಷಯೀಕರಿಸುವುದೋ ಕರಿಸದೆ ಇರುವುದೋ? ವಿಷಯವನ್ನು ವಿಷಯೀಕರಿಸದೆ ಇದ್ದರೆ ಘಟದಂತೆ ಜ್ಞಾನವೇ ಆಗಲಾರದು. ವಿಷಯವನ್ನು ವಿಷಯೀಕರಿಸುವುದಾದರೆ ಅಕರ್ಮಕವು ಹೇಗೆ ಆಗುವುದು. ವಿಷಯವೇ ಕರ್ಮವು. (7) ಯಾವ ಸಾಮರ್ಥ್ಯವೂ ಇಲ್ಲದೆ ಇರುವ ಶಶಶೃಂಗವು ಜ್ಞಾನಕ್ಕೆ ಕರ್ಮವಾಗುವುದು ಹೇಗೆ, ಎಂದು ಶಂಕಿಸಿದರೆ ವಿಷಯವೂ ಆಗುವುದು ಹೇಗೆ ಎನ್ನುತ್ತೇವೆ. (೮) ವಿಷಯತ್ವವೆಂದರೆ ವಸ್ತುವಿನ ಸಾಮರ್ಥ್ಯವಲ್ಲ. ಜ್ಞಾನಸಾಧನಗಳ ಸಾಮರ್ಥ್ಯದಿಂದ ಯಾವುದನ್ನು ಉಲ್ಲೇಖಿಸುವ ಜ್ಞಾನವು ಹುಟ್ಟುವುದೋ, ಅದೇ ವಿಷಯವೆಂದು ಪರರು ಹೇಳಿದರೆ ದ್ವೈತಿಗಳು ಜ್ಞಾನಕ್ಕೆ ಕರ್ಮತ್ವವೆಂದರೂ ವಿಷಯತ್ವವೇ. ಅಂದರೆ ಕರ್ಮತ್ವಕ್ಕೂ, ವಿಷಯತ್ವಕ್ಕೂ ವಿಶೇಷವಿಲ್ಲವು ಎಂದು ಹೇಳಿದರು. (೯) ಕರ್ಮತ್ವವೆಂದರೆ ಜ್ಞಾನವನ್ನು ಹುಟ್ಟಿಸುವಿಕೆಯು ಎಂದು ಪರರು ಹೇಳಕೂಡದು. ಎಲ್ಲಾ ಜ್ಞಾನವನ್ನೂ ಕುರಿತು ವಿಷಯಕ್ಕೆ ಕಾರಣತ್ವವಿದೆ ಎಂಬುವುದು ನಮಗೆ ಸಮ್ಮತವಲ್ಲ. ಪ್ರತ್ಯಕ್ಷ ಜ್ಞಾನದಲ್ಲಿಯೂ ವಿಷಯಕ್ಕೆ ಜ್ಞಾನೋತ್ಪತ್ತಿಯಲ್ಲಿ ಕಾರಣತ್ವವಿಲ್ಲವು. ಇಂದ್ರಿಯಗಳಿಗೆ ಸಂಬಂಧವನ್ನು ಹುಟ್ಟಿಸುವ ವಿಷಯದಲ್ಲಿಯೇ ವಿಷಯಗಳು ಆವಶ್ಯಕಗಳು. (10) ಎಲ್ಲಿ, ಶಾಬ್ದ ಜ್ಞಾನದಲ್ಲಿ ವಿಷಯವಿಲ್ಲದಿದ್ದರೂ, ಕರಣ ಸಂಬಂಧವು ಹುಟ್ಟುತ್ತದೋ, ಅಂತಹ ಸ್ಥಳದಲ್ಲಿ ಅಸತ್ತಿಗೂ ವಿಷಯತ್ವ ಹೇಳಿದರೆ ಏನು ಬಾಧಕವು. (11) ಹಾಗಾದರೆ ಕರ್ತನಿಂದ ಭಿನ್ನವಾಗಿ ಕ್ರಿಯೆಯಿಂದ ಹುಟ್ಟಿದ ಫಲಕ್ಕೆ ಆಶ್ರಯವಾಗುವುದು ಕರ್ಮ ಎನ್ನುತ್ತೇವೆ. ಉದಾ=ಗಮನದಿಂದ ಹುಟ್ಟಿದ ಸಂಯೋಗಕ್ಕೆ ಆಶ್ರಯವಾದುದು ಗ್ರಾಮವು, ಇದು ಗಮನಕ್ಕೆ ಕರ್ಮವು. ಶಶಶೃಂಗಾದಿಗಳು ಜ್ಞಾನ (ಕ್ರಿಯೆ)ದಿಂದ ಹುಟ್ಟಿದ ಫಲಕ್ಕೆ ಆಶ್ರಯವಾದುವುಗಳಲ್ಲವು. ಆ ಕಾರಣ ಅವುಗಳು ಕರ್ಮಗಳಾಗಲಾರವು, ಎಂದು ಪರರು ಹೇಳಕೂಡದು. ಏಕೆಂದರೆ- ಅವುಗಳಲ್ಲಿಯೂ ಜ್ಞಾನರೂಪಕ್ರಿಯೆಯಿಂದ ವ್ಯವಹಾರರೂಪವಾದ ಫಲವು ಹುಟ್ಟುತ್ತದೆ. (12) ಪುನಃ ಸಾಕ್ಷಾತ್ತಾಗಿ ಶಶಶೃಂಗವನ್ನು ಆಶ್ರಯಿಸಿಕೊಂಡಿರುವ ಫಲವಿಲ್ಲವೆಂದು ಪರರು ಹೇಳಿದರೆ ಎಲ್ಲಾ ಜ್ಞಾನಕರ್ಮಗಳಲ್ಲಿಯೂ ಸಾಕ್ಷಾತ್ತಾಗಿ ವಿಷಯವನ್ನಾಶ್ರಯಿಸಿಕೊಂಡಿರುವ ಫಲವೇ ಇಲ್ಲದಿರುವುದರಿಂದ ನೀವು ಹೇಳಿದ ಕರ್ಮಲಕ್ಷಣಕ್ಕೆ ಅವ್ಯಾಪ್ತಿಯು (ಕೆಲವು ಲಕ್ಷ್ಯಗಳಲ್ಲಿ ಲಕ್ಷಣವಿಲ್ಲದಿರುವುದು) ಬರಬಹುದು. ಹೀಗೆ ದ್ವೈತಿಗಳು

ಹೇಳಿದರು. (13) ಜ್ಞಾನಕರ್ಮಮಾತ್ರದಲ್ಲಿ ಸಾಕ್ಷಾತ್ತಾಗಿ ವಿಷಯವನ್ನಾಶ್ರಯಿಸಿಕೊಂಡಿರುವ ಜ್ಞಾನದಿಂದುಂಟಾಗುವ ಜ್ಞಾತತಾರೂಪಫಲವಿದ್ದುದರಿಂದ ಹಿಂದಿನ ಅವ್ಯಾಪ್ತಿಯು ಬರುವುದಿಲ್ಲ ಎಂದರೆ ಜ್ಞಾನವಿಷಯತ್ವವನ್ನು ಬಿಟ್ಟು ಪ್ರತ್ಯೇಕ ಜ್ಞಾತತಾ ಅದೆ, ಎಂಬುವ ವಿಷಯದಲ್ಲಿ ಪ್ರಮಾಣವಿಲ್ಲ, ಎಂದು ಪ್ರಮಾಣಲಕ್ಷಣಾದಿಗಳಲ್ಲಿ ನಿರಾಕರಿಸಲ್ಪಟ್ಟದೆ. (14) ಆತ್ಮನು ಪ್ರಕಾಶರೂಪನೇ ಆಗಿರುತ್ತಾನೆ. ಆ ಕಾರಣ ಜ್ಞಾನದಿಂದ ಹುಟ್ಟಿದ ಪ್ರಕಾಶ (ಜ್ಞಾತತಾ) ಕೂಡದಿರುವುದರಿಂದ ಜ್ಞಾನಕರ್ಮತ್ವವು ಆತ್ಮನಿಗೆ ಕೂಡಲಾರದೆಂದರೆ ಜ್ಞಾತತಾವನ್ನೇ ತಿರಸ್ಕರಿಸಿದರಿಂದ ಈ ಸಂಶಯವು ಹೊರಟುಹೋಯಿತು. ಅಂತೂ ವಿಷಯತ್ವವೇ ಕರ್ಮತ್ವವು. ಅದು ಆತ್ಮನಿಗೂ ಕೂಡ ಬರಬಹುದು. (15) ಮತ್ತು ಜ್ಞಾನಕರ್ಮತ್ವವೆಂದರೆ ಜ್ಞಾನದಿಂದ ಹುಟ್ಟಿದ ಫಲಕ್ಕೆ ಆಶ್ರಯವಾದುದು, ಎಂದು ಹೇಳಿದರೆ ಪ್ರತಿವಾದಿಗಳಾದ ದ್ವೈತಿಗಳು ದೃಶ್ಯತ್ವವೆಂದರೆ ಜ್ಞಾನವಿಷಯತ್ವವೆನ್ನುತ್ತಾರೆ. ಜ್ಞಾನದಿಂದ ಹುಟ್ಟಿದ ಜ್ಞಾತತಾರೂಪ ಫಲಾಶ್ರಯತ್ವವೆನ್ನುವುದಿಲ್ಲ. ಆ ಕಾರಣ ಅವರ ರೀತಿಯಾಗಿ ಈ ಹೇತುವು ಪಕ್ಷದಲ್ಲಿಲ್ಲದಿರುವುದರಿಂದ ಅಸಿದ್ಧಿರೂಪ ದೋಷವು ಬರುವುದು. (16) ಜ್ಞಾತತಾವನ್ನಂಗೀಕರಿಸುವ ಭಾಟ್ಟರೂ ಕೂಡ ಪ್ರತ್ಯಕ್ಷಕ್ಕೆ ಅವಿಷಯಗಳಾದ ಧರ್ಮಾಧರ್ಮಾದಿಗಳಲ್ಲಿ ಜ್ಞಾನಜನ್ಯ (ಜ್ಞಾತತಾರೂಪ) ಫಲಾಶ್ರಯತ್ವರೂಪವಾದ ದೃಶ್ಯತ್ವವನ್ನು ಒಡಂಬಡದಿರುವುದರಿಂದ ಪಕ್ಷದ ಏಕದೇಶದಲ್ಲಿಲ್ಲವೆಂದಾಯಿತು. ಆ ಕಾರಣ ಭಾಗಾಸಿದ್ಧಿಯು. ॥ ೪೬ ॥

(1) ವೇದಾಂತವಾಕ್ಯದಿಂದ ಹುಟ್ಟಿದ ವಿಜ್ಞಾನವು ಆತ್ಮವಿಷಯವಾಗಿ ಆತ್ಮಜ್ಞಾನವಾಗದಿರಲಿ, ಆದಾಗ್ಯೂ ಆತ್ಮಾಜ್ಞಾನವನ್ನು ನಾಶಮಾಡುವುದರಿಂದ ಆತ್ಮಜ್ಞಾನವಾಗುವುದು. ಆದುದರಿಂದ ಆತ್ಮನಿಗೆ ಜ್ಞಾನವಿಷಯತ್ವದಿಂದ ಏನು ಪ್ರಯೋಜನವು? ಆತ್ಮನಿಗೆ ಜ್ಞಾನವಿಷಯತ್ವವನ್ನು ಹೇಳದಿದ್ದರೆ ಅಜ್ಞಾನವು ಆತ್ಮಾಜ್ಞಾನವು ಆಗಲಾರದು ಎಂದು ಹಿಂದೆಯೇ ಹೇಳಿರುತ್ತೇವೆ, ಎಂದು ಹೇಳಕೂಡದು. ಏಕೆಂದರೆ- ಬ್ರಹ್ಮನಲ್ಲಿ ಆಶ್ರಯಿಸಿಕೊಂಡಿರುವ ಅಜ್ಞಾನವು ಆತ್ಮಾಜ್ಞಾನವು ಎಂದು ಅಂಗೀಕರಿಸುತ್ತೇವೆ. (2) ವೇದಾಂತದಿಂದ ಹುಟ್ಟಿದ ಜ್ಞಾನವು ಯದ್ವಿಷಯಕವೋ ಅಜ್ಞಾನವು ಅವನನ್ನೇ ಆಶ್ರಯಿಸಿಕೊಂಡದೆ, ಎಂದು ಹೇಳಕೂಡದು. ಅಜ್ಞಾನವಾದರೂ ಪರಬ್ರಹ್ಮನನ್ನು ಆಶ್ರಯಿಸಿಕೊಂಡಿಲ್ಲ. ಜೀವನನ್ನೇ ಆಶ್ರಯಿಸಿಕೊಂಡದೆ. ವಸ್ತುತಃ ಜೀವ ಬ್ರಹ್ಮರಿಗೆ ಭೇದವಿಲ್ಲದಿದ್ದರೂ ಜ್ಞಾತೃ (ತಿಳಿಯುವವನು) ಜ್ಞೇಯ (ತಿಳಿಯಲರ್ಹವು) ಭಾವವು ಸಿದ್ಧಿಯಾಗುವುದಕ್ಕೋಸ್ಕರ ವ್ಯಾವಹಾರಿಕಭೇದವನ್ನು ಅಂಗೀಕರಿಸುತ್ತೇವೆ. ಆದಕಾರಣ ಅಜ್ಞಾನವು ಜ್ಞಾತೃಜೀವಾಶ್ರಿತವಾಗಿರುವುದರಿಂದ ಜ್ಞೇಯಾತ್ಮಾಶ್ರಿತವಾದ ಅಜ್ಞಾನಕ್ಕೆ ನಿವರ್ತಕವಾಗಿ ವೇದಾಂತಜನಿತ ಜ್ಞಾನವು ಆತ್ಮಜ್ಞಾನವೆಂದು ಹೇಳಿಸಿಕೊಳ್ಳುವುದು ಹೇಗೆ ಅಂದರೆ- ವೇದಾಂತದಿಂದ ಹುಟ್ಟಿದ ಜ್ಞಾನವು ಆತ್ಮಜ್ಞಾನವು ಆಗಲಾರದು, ಎಂದು ಹೇಳಕೂಡದು. ಏಕೆಂದರೆ- ಅಜ್ಞಾನವು ತಿಳಿಯಲರ್ಹನಾದ ಜ್ಞೇಯಪರಬ್ರಹ್ಮನನ್ನು ಆಶ್ರಯಿಸಿ ಕೊಂಡದೆ, ಎಂದು ಪರರು ಆಶಂಕಿಸಿದರೆ-

**ಮೂ ॥ ನಹ್ಯಜ್ಞಾನಸ್ಯ ಘಟಾಶ್ರಯತ್ವಂ ಬ್ರಹ್ಮಾಶ್ರಯತ್ವಂ ವಾಽಸ್ತಿ ॥ ೪೭ ॥**

**ಅ ॥ ವಾ=ಹೇಗೆ, ಅಜ್ಞಾನಸ್ಯ=ಘಟಾಜ್ಞಾನಕ್ಕೆ, ಘಟಾಶ್ರಯತ್ವಂ=ಘಟವನ್ನಾಶ್ರಯಿಸಿಕೊಂಡಿರೋಣವು, ನ=ಇಲ್ಲವೋ, (ಹೀಗೆ) ಅಜ್ಞಾನಸ್ಯ=ಬ್ರಹ್ಮಾಜ್ಞಾನಕ್ಕೂ, ಬ್ರಹ್ಮಾಶ್ರಯತ್ವಂ=ಪರಬ್ರಹ್ಮನನ್ನು ಆಶ್ರಯಿಸಿಕೊಂಡಿರುವಿಕೆಯು, ನಹ್ಯಸ್ತಿ=ಇರುವುದಿಲ್ಲ.**

ಟೀ ॥ ಅಜ್ಞಾನವು ಬ್ರಹ್ಮಾಶ್ರಿತವಾಗಿದೆ ಎಂದು ಹೇಳಿದರೆ ಘಟಾಜ್ಞಾನವು ಘಟವನ್ನಾಶ್ರಯಿಸಿಕೊಂಡಿರಬೇಕಾಗುವುದು. ಮೂಲದಲ್ಲಿದ್ದ ಹಿ ಶಬ್ದವು ಹೇತ್ವರ್ಥಕವು. ಯಾವಕಾರಣ ಬ್ರಹ್ಮಾಜ್ಞಾನವು ಬ್ರಹ್ಮನನ್ನು ಆಶ್ರಯಿಸಿಕೊಂಡಿಲ್ಲವೋ ಆದಪ್ರಯುಕ್ತ ವೇದಾಂತಜನಿತಜ್ಞಾನವು ಬ್ರಹ್ಮಾಶ್ರಿತವಾದ ಅಜ್ಞಾನಕ್ಕೆ ನಿವರ್ತಕವಾಗಿ ಬ್ರಹ್ಮಜ್ಞಾನವು ಆಗಲಾರದು. ಅಜ್ಞಾನವೇ ಬ್ರಹ್ಮನಲ್ಲಿ ಇಲ್ಲದಿದ್ದಮೇಲೆ ಬ್ರಹ್ಮಜ್ಞಾನವು ಬ್ರಹ್ಮಾಶ್ರಿತವಾದ ಅಜ್ಞಾನಕ್ಕೆ ನಿವರ್ತಕವಾಗುವುದು ಹೇಗೆ?

ಅಂತೂ 'ಅಜ್ಞಾನಂ'=ಅಜ್ಞಾನವು, ನ ಬಹ್ಮಾಶ್ರಿತಂ=ಬ್ರಹ್ಮನನ್ನು ಆಶ್ರಯಿಸಿಕೊಂಡಿಲ್ಲ, ಅಜ್ಞಾನತ್ವಾತ್=ಅಜ್ಞಾನವಾದುದರಿಂದ, ಘಟಾಜ್ಞಾನವತ್=ಘಟಾಜ್ಞಾನದಂತೆ, ಈ ಅನುಮಾನವನ್ನು ಸೂಚಿಸಿದರು. (2) ಘಟಾಜ್ಞಾನವೇ ಇಲ್ಲ ಏಕೆಂದರೆ- ಘಟಾಜ್ಞಾನವು ಹುಟ್ಟುವುದಕ್ಕಿಂತ ಮೊದಲು ಘಟಪ್ರಕಾಶಸಾಮಗ್ರೀ ಇಲ್ಲದಿರುವುದರಿಂದಲೇ ಜ್ಞಾನಾಭಾವವೂ ಕೂಡುವುದರಿಂದ ಪ್ರಕಾಶಕ್ಕೆ ಪ್ರತಿಬಂಧಕವಾದ ಅಜ್ಞಾನವನ್ನು ಅಂಗೀಕರಿಸುವುದು ಅಗತ್ಯವಿಲ್ಲ. ಜ್ಞಾನವು ಹುಟ್ಟಿದ ಮೇಲೆ ಜ್ಞಾನವು ಹುಟ್ಟಿದ್ದರಿಂದಲೇ ಅಜ್ಞಾನವನ್ನು ಕಲ್ಪಿಸುವ ಪ್ರಮಾಣವು ಇಲ್ಲದಿರುವುದರಿಂದಲೇ ಘಟಾಜ್ಞಾನವೆಂಬುವುದು ಇಲ್ಲ. ಆದುದರಿಂದ ಯತ್ ಅಜ್ಞಾನಂ=ಯಾವುದು ಅಜ್ಞಾನವೊ, ತತ್ ವಿಷಯಾಶ್ರಿತಂ ನ=ಆ ಅಜ್ಞಾನವು ಘಟ ಪಟವೊದಲಾದ ವಿಷಯಗಳನ್ನಾಶ್ರಯಿಸಿಕೊಂಡಿಲ್ಲ, ಎಂಬೀ ವ್ಯಾಪ್ತಿಯಲ್ಲಿ ಘಟಾಜ್ಞಾನವನ್ನು ದೃಷ್ಟಾಂತೀಕರಿಸಿದ್ದು ಹೇಗೆ ಕೂಡಬಹುದು? ಅಂದರೆ- ಸಾಧ್ಯ ಸಾಧನಗಳಿವೆಯೆಂದು ಎಲ್ಲಿ ನಿಶ್ಚಯವಿದೆಯೊ, ಅದನ್ನೇ ದೃಷ್ಟಾಂತೀಕರಿಸಬೇಕು. ಪ್ರಕೃತ ಘಟಾಜ್ಞಾನವೆಂಬುವ ಪದಾರ್ಥವೇ ಇಲ್ಲದಿರುವುದರಿಂದ ದೃಷ್ಟಾಂತೀಕರಿಸಿದ್ದು ಕೇವಲ ಅಯುಕ್ತವು. ಅಲ್ಲದೇ ಘಟಾಜ್ಞಾನವೇ ಇಲ್ಲದಿರುವುದರಿಂದ ಯಾವ ಅಜ್ಞಾನಕ್ಕೆ ಘಟಾಶ್ರಯತ್ವವನ್ನು ಆಪಾದಿಸುವಿರಿ. ಪರಬ್ರಹ್ಮನಾದರೂ ಸ್ವಯಮೇವ ಪ್ರಕಾಶರೂಪನಾಗಿರುತ್ತಾನೆ. ಆದಾಗ್ಯೂ ಅವನ ಸ್ವರೂಪವು ತಿಳಿಯದಿರಲಿಕ್ಕೆ ಬೇರೆ ಕಾರಣವಿಲ್ಲದಿದುವುದರಿಂದ ಆತನ ಸ್ವರೂಪಕ್ಕೆ ಆವರಕವಾದುದು ಭಾವರೂಪವಾದ ಅಜ್ಞಾನವಿದೆ ಎಂದು ಕಲ್ಪಿಸುವೆವು, ಎಂದು ಪರರು ಆಶಂಕಿಸಕೂಡದು. ಏಕೆಂದರೆ- ದೂರದಲ್ಲಿ ಘಟವನ್ನು ನೋಡಲು ಆ ಘಟವು ವಲ್ಮೀಕ (ಹಾವಿನಹುತ್ತು) ಮಣ್ಣಿನ ಹೆಂಟೆ, ಕಲ್ಲು ಇವುಗಳಂತೆಯೇ ಯಾವಾಗ ಕಾಣಿಸುವುದೋ ಆಗ ಕಣ್ಣು ಮೊದಲಾದ ಇಂದ್ರಿಯಗಳು ತಿಳಿಸಲಿಕ್ಕೆ ಪ್ರವರ್ತಿಸಿದ್ದಾಗ್ಯೂ ಘಟವೆಂದು ತಿಳಿಯದಿರಲಿಕ್ಕೆ ಅಜ್ಞಾನ ಹೊರತು ಬೇರೆ ಕಾರಣವಿಲ್ಲದಿರುವುದರಿಂದ ಘಟಾದಿಗಳಲ್ಲಿಯೂ ಅಜ್ಞಾನವನ್ನು ಪರರು ಅಂಗೀಕರಿಸಬೇಕಾಯಿತು. ಘಟಾಜ್ಞಾನವನ್ನು ಅಂಗೀಕರಿಸದೆ ಇದ್ದರೆ ಅದೇ ನ್ಯಾಯದಿಂದ ಶುಕ್ತಿಕಾಜ್ಞಾನವನ್ನೂ ಒಪ್ಪದೆ ಹೋಗಬೇಕಾಗುವುದು. ॥ ೪೭ ॥

ಅಜ್ಞಾನವು ಘಟ ಪಟ ಮೊದಲಾದ ವಿಷಯಗಳನ್ನಾಶ್ರಯಿಸದೆ ಇದ್ದರೆ ಯಾವುದನ್ನಾಶ್ರಯಿಸಿ ಕೊಂಡಿದೆ ಎಂಬ ಶಂಕಿಸಿದರೆ-

**ಮೂ ॥ ಪುಂಗತಮೇವ ಹಿ ತಮಃ ॥ ೪೮ ॥**

ಅ ॥ ತಮಃ = ಅಜ್ಞಾನವು, ಪುಂಗತಮೇವ = ಜ್ಞಾತೃ (ತಿಳಿಯುವ) ಪುರುಷನಲ್ಲಿರುವುದೇ, ಹಿ=ನಿಶ್ಚಯವು.

ಟೀ ॥ (1) ಕಗ್ಗತ್ತಲೆಯಂತೆ ಅಜ್ಞಾನವು ಜ್ಞಾನಪ್ರತಿಬಂಧಕವಾದುದರಿಂದ 'ತಮಃ'= ಎನ್ನಿಸುತ್ತದೆ. ಉತ್ತರವಾಕ್ಯದಲ್ಲಿ ದೃಷ್ಟಾಂತವಾಗಿ ಹೇಳುವುದಕ್ಕೋಸ್ಕರ ಈ ವಾಕ್ಯದಲ್ಲಿ ತಮಃ ಎಂಬೀ ಶಬ್ದವನ್ನು ಪ್ರಯೋಗಿಸಿರುತ್ತಾರೆ. (2) ಅಜ್ಞಾನವು ವಿಷಯವನ್ನಾಶ್ರಯಿಸಿಕೊಂಡಿದೆ

ಎಂಬುವುದನ್ನು ಪ್ರಮಾಣದಿಂದ ನಿರಾಕರಿಸಲು ಪರಿಶೇಷತಃ (ವಿಮತಂ ಅಜ್ಞಾನಂ=ವಿವಾದ ವಿಷಯವಾದ ಅಜ್ಞಾನವು, ಜ್ಞಾತ್ರಾಶ್ರಿತಂ=ತಿಳಿಯುವ ಪುರುಷನಲ್ಲಿ ಆಶ್ರಿತವಾಗಿದೆ. ತದನ್ಯಾನಾಶ್ರಿತತ್ವೇಸತಿ ಆಶ್ರಿತತ್ವಾತ್=ಜ್ಞಾತೃಪುರುಷರಿಂದ ಬೇರೆಯವರನ್ನಾಶ್ರಯಿಸದೆ ಇದ್ದು ಆಶ್ರಯಿಸಿಕೊಂಡಿರುವುದರಿಂದ, ಎಂದು ಏವ ಕಾರದಿಂದ ಪರಿಶೇಷಪ್ರಮಾಣವು ಸೂಚಿತವಾಯಿತು) ತಿಳಿಯುವ ಪುರುಷರಲ್ಲಿದೆ ಎಂದು ಸಿದ್ಧವಾಗುವುದು. (3) ಹಿ ಶಬ್ದವು 'ಅಹಮಜ್ಞಃ' ನಾನು ಅಜ್ಞನು, ಘಟಮಹಂ ನ ಜಾನಾಮಿ=ನಾನು ಘಟವನ್ನು ತಿಳಿಯುವುದಿಲ್ಲ. ಇದು ಮೊದಲಾದ ಅನುಭವರೂಪಪ್ರಮಾಣವನ್ನು ತೋರಿಸುತ್ತದೆ. ॥ ೪೮ ॥

ಮೂ ॥ ಜ್ಞಾನೇನ ನಿವರ್ತತೇ ॥ ೪೯ ॥

ಅ ॥ ತಮಃ=ಅಜ್ಞಾನವು, ಜ್ಞಾನೇನ=ಜ್ಞಾನದಿಂದ, ನಿವರ್ತತೇ=ನಾಶವಾಗುತ್ತದೆ.

ತಾ ॥ (1) ಪ್ರಕಾಶವು ಎಲ್ಲಿ ಅದೆಯೋ ಅಲ್ಲಿದ್ದ ಕಗ್ಗತ್ತಲೆಯೇ ಪ್ರಕಾಶದಿಂದ ನಿವೃತ್ತವಾಗುವುದು. ಬೇರೆ ಕಡೆಯಲ್ಲಿರತಕ್ಕದು ನಾಶವಾಗಲಾರದು. ಹಾಗೆಯೇ ಅಜ್ಞಾನವು ಜ್ಞಾನದಿಂದ ನಾಶವಾಗುವುದು. ಆದುದರಿಂದ ಜ್ಞಾನವು ಎಲ್ಲಿರುವುದೋ ಅಜ್ಞಾನವು ಅಲ್ಲಿಯೇ ಇರುವುದೆಂದು ಹೇಳಬೇಕು. ಜ್ಞಾನವು ತಿಳಿಯುವ ಪುರುಷನಲ್ಲಿದೆ. ಅಜ್ಞಾನಕ್ಕೂ ತಿಳಿಯುವ ಪುರುಷನೇ ಆಶ್ರಯನು. (2) ಇದರಿಂದ ಈ ಅನುಮಾನವನ್ನು ಹೇಳಿದಂತೆ ಆಯಿತು. ಅಜ್ಞಾನಂ=ಅಜ್ಞಾನವು, ಜ್ಞಾನಸಮಾನಾಶ್ರಯಂ ಸದೇವ ನಿವರ್ತತೇ = ಜ್ಞಾನವು ಎಲ್ಲಿರುವುದೋ ಅಲ್ಲಿಯೇ ಇರುವುದಾಗಿ ನಾಶವಾಗುತ್ತದೆ ಜ್ಞಾನನಿವರ್ತ್ಯತ್ವಾತ್=ಜ್ಞಾನದಿಂದ ನಾಶವಾಗುವ ಪ್ರಯುಕ್ತ, ಯತ್ ಯೇನ ನಿವರ್ತತೇ=ಯಾವುದು ಯಾವುದರಿಂದ ನಾಶವಾಗುತ್ತದೋ, ತತ್ ತತ್ಸಮಾನಾಶ್ರಯಮೇವ' ಸತ್ ನಿವರ್ತತೇ=ಅದು ಅದರ ಸಮಾನಾಶ್ರಯವುಳ್ಳದ್ದಾಗಿಯೇ ನಾಶವಾಗುವುದು, ಯಥಾ ಪ್ರಕಾಶನಿವರ್ತ್ಯಂ ತಮಃ=ಪ್ರಕಾಶದಿಂದ ನಾಶವಾಗುವ ತಮಸ್ಸಿನಂತೆಯೇ ॥ ೪೯ ॥

(1) ತಮಸ್ಸು ವಸ್ತುಗಳಲ್ಲಿ ಸಂಬದ್ಧವಾಗಿಯೇ ಜ್ಞಾನವನ್ನು ಪ್ರತಿಬಂಧಿಸುತ್ತದೆ. ಬೆಳಕಿನಲ್ಲಿರುವವನಿಗೆ ಕತ್ತಲೆಯಲ್ಲಿರುವ ಘಟವು ತೋರುವುದಿಲ್ಲ. ಕತ್ತಲೆಯಲ್ಲಿರುವವನಿಗೆ ಬೆಳಕಿನಲ್ಲಿರುವ ವಸ್ತುವು ತೋರುವುದು. ಹಾಗೆಯೇ ಅಜ್ಞಾನವು ಜ್ಞಾನವನ್ನು ಪ್ರತಿಬಂಧಿಸುವುದಾದರೂ ವಿಷಯವನ್ನಾಶ್ರಯಿಸಿಕೊಂಡಿದೆ ಎಂದೇ ಆಗಬೇಕು. ಅಂತೂ ಅಜ್ಞಾನಂ=ಅಜ್ಞಾನವು, ವಿಷಯಾಶ್ರಿತಂ = ವಿಷಯವನ್ನಾಶ್ರಯಿಸಿಕೊಂಡಿದೆ, ಜ್ಞಾನಪ್ರತಿಬಂಧಕತ್ವಾತ್=ಜ್ಞಾನಬಾರದೆ ಇರುವ ಹಾಗೆ ಮಾಡುವುದರಿಂದ, ತಮೋವತ್=ಕತ್ತಲೆಯಂತೆ. ಹೀಗೆ ಅಜ್ಞಾನವು ವಿಷಯವನ್ನಾಶ್ರಯಿಸಿಕೊಂಡು ಇದೆ, ಎಂಬುವ ವಿಷಯದಲ್ಲಿ ಪ್ರಮಾಣವಿದೆ. (2) 'ಆಶ್ರಯತ್ವ ವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ । ಪೂರ್ವಸಿದ್ಧ ತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ' ॥ ಶುದ್ಧ ಚೈತನ್ಯಕ್ಕೇನೇ ಅಜ್ಞಾನವನ್ನು ಕುರಿತು ಆಶ್ರಯತ್ವ ವಿಷಯತ್ವಗಳು ಇರುವುವು. ಅಜ್ಞಾನಕ್ಕೆ ಜೀವನು ಆಶ್ರಯನಾಗಲೀ ವಿಷಯನಾಗಲೀ ಆಗಲಾರನು, ಎಂದು ಅದ್ವೈತಿಗಳು (ಹೇಳುವುದರಿಂದ ಅಜ್ಞಾನವು ಅಚೇತನವನ್ನು ಆಶ್ರಯಿಸಿಕೊಂಡು ಇದೆ ಎಂದು ಹೇಳಿದರೆ ಪರರಿಗೆ ಅಪಸಿದ್ಧಾಂತ ಬರಬೇಕಾಗುವುದೆಂದು ಹೇಳಕೂಡದು. ಏಕೆಂದರೆ- ಶುಕ್ತ್ಯಾದಿಗಳಲ್ಲಿ ಸಂಬದ್ಧವಾಗಿರುವ ಚೈತನ್ಯವನ್ನಾಶ್ರಯಿಸಿಕೊಂಡು ಇದೆ ಎಂದೇ ಅಂಗೀಕರಿಸಿರುವರು. ಶುಕ್ತ್ಯಾದಿಗಳನ್ನಾಶ್ರಯಿಸಿರುವ ಚೈತನ್ಯವನ್ನಾಶ್ರಯಿಸಿರುವ ಅಜ್ಞಾನವು

ಶುಕ್ತ್ಯಾದಿರೂಪವನ್ನಾಚ್ಛಾದಿಸಿ ಬೆಳ್ಳಿ ಮೊದಲಾದ ರೂಪಾಂತರವನ್ನು ಹೊಂದಲಿಕ್ಕೆ ಉಪಾದಾನ ಕಾರಣವಾಗುವುದು ಎಂದು ಪರರು) ಹೇಳಿದಾಗ ದ್ವೈತಿಗಳು ಹೀಗಾದರೆ ಜ್ಞಾನವೂ ಪ್ರಕಾಶ ದಂತೆಯೇ ವಿಷಯಗಳನ್ನು ಸಂಬಂಧಿಸಿಯೇ ಅಜ್ಞಾನವನ್ನು ನಾಶಮಾಡಬೇಕಾಗುವುದು, ಎಂದು ಹೇಳಿದರೆ ಪರರು ಇದು ನಮಗೆ ಅನಿಷ್ಟವಲ್ಲ. ಏಕೆಂದರೆ- ಹೇಗೆ ಸರೋವರದ ನೀರು ಛಿದ್ರದಿಂದ ಹೊರಟು ಗದ್ದೆಗಳಿಗೆ ಪ್ರವೇಶಿಸಿ ಅವುಗಳಂತೆಯೇ ಚತುಷ್ಕೋಣಾಕಾರವಾಗಿ ಕಾಣಿಸುವುದೋ, ಹಾಗೆಯೇ ಪ್ರಕಾಶಸ್ವರೂಪವಾಗಿಯೂ ಅವುಗಳಿಂದೊಡಗೂಡಿಯೂ ಇರುವ ಅಂತಃಕರಣವು ಕಣ್ಣು ಮೊದಲಾದ ಇಂದ್ರಿಯಗಳದ್ವಾರಾ ಹೊರಗೆ ಹೋಗಿ ಧ್ರುವಾದಿಪರ್ಯಂತ ಉದ್ದವಾದ ತೇಜೋರೂಪದಿಂದ ಪರಿಣತವಾಗಿ ಘಟ ಮೊದಲಾದ ವಸ್ತುಗಳ ಆಕಾರವಾಗಿಯೇ ಪರಿಣತ ವಾಗುತ್ತದೆ. (3) ಅಜ್ಞಾನವು ಘಟಾದಿಗಳಲ್ಲಿರತಕ್ಕ ಚೈತನ್ಯವನ್ನಾಶ್ರಯಿಸಿಕೊಂಡಿದೆ ಎಂದಂಗೀ ಕರಿಸಿರುವುದರಿಂದಲೇ ಅಜ್ಞಾನವು ಹೇಗೆ ಘಟಾದಿಗಳನ್ನಾಶ್ರಯಿಸಿಕೊಂಡಿಲ್ಲವೋ, ಹಾಗೆ ಬ್ರಹ್ಮ ನನ್ನಾಶ್ರಯಿಸಿಕೊಂಡಿಲ್ಲ, ಎಂದು ಆಚಾರ್ಯರು ಹೇಳಿರುವುದು ನಿರಾಕೃತವಾಯಿತು. ಹೀಗೆ ಪರರು ಹೇಳುವರು. ಇವೆರಡೂ (ಅಂದರೆ ೧ ಅಜ್ಞಾನವು ಘಟಾದಿ ವಿಷಯಗಳಲ್ಲಿರತಕ್ಕ ಚೈತನ್ಯ ವನ್ನ ಆಶ್ರಯಿಸಿಕೊಂಡಿದೆ. ೨ ವಿಷಯಸನ್ನಿಕೃಷ್ಟ ಜ್ಞಾನದಿಂದ ನಾಶವಾಗುವುದು) ಅಯುಕ್ತವು. ಹೇಗೆಂದರೆ- 'ಅಜ್ಞಾನಂ ವಿಷಯಾಶ್ರಿತಂ ಜ್ಞಾನರೂಪಪ್ರಕಾಶನಿವರ್ತ್ಯತ್ವಾತ್ ಆಲೋಕರೂಪ ಪ್ರಕಾಶನಿವರ್ತ್ಯತಮೋವತ್' ಈ ಪರರ ಅನುಮಾನವು ಅಯುಕ್ತವು. ಏಕೆಂದರೆ- ದೂರದಲ್ಲಿ ಘಟವನ್ನು ನೋಡಿ 'ಇದು ಕಲ್ಲು' ಎಂದಾರೋಪಕ್ಕೆ ನಿಮಿತ್ತವಾದ ಅಜ್ಞಾನವಿದೆ. ಅದು 'ಇದು ಘಟವೇ' ಎಂಬುವ ಯಥಾರ್ಥಜ್ಞಾನದಿಂದ ನಾಶವಾಗುವುದೋ, ಇಲ್ಲವೋ, ೨ ನಾಶವಾಗದಿದ್ದರೆ ಸರ್ವದಾ ಭ್ರಾಂತಿಯೇ ಇರಬೇಕಾಗುವುದು. ೧ ನಾಶವಾಗುವುದಾದರೆ ಅತಿಪ್ರಸಂಗವನ್ನು ಹೇಳುತ್ತಾರೆ.

ಮೂ ॥ ವಿಷಯಾಶ್ರಯಂ ಚೇದಜ್ಞಾನಂ ನಿವರ್ತತೇ ತರ್ಹ್ಯೇಕೇನ ಜ್ಞಾತಸ್ಯ ಘಟಸ್ಯಾನ್ಯೈರಜ್ಞಾತತ್ವಂ ನ ಸ್ಯಾತ್ ॥ ೫೦ ॥

ಅ ॥ ಅಜ್ಞಾನಂ=ಅಜ್ಞಾನವು, ವಿಷಯಾಶ್ರಯಂ=ಘಟಾದಿ ವಿಷಯಗಳನ್ನಾಶ್ರಯಿಸಿ ಕೊಂಡು ಇದ್ದುದಾಗಿ, ನಿವರ್ತತೇ ಚೇತ್= (ಇದು ಘಟವೆಂಬ ಯಥಾರ್ಥ ಜ್ಞಾನದಿಂದ) ನಾಶ ವಾಗುವುದಾದರೆ, ತರ್ಹಿ=ಆ ಪಕ್ಷದಲ್ಲಿ, ಏಕೇನ = ಒಬ್ಬನಿಂದ, ಜ್ಞಾತಸ್ಯ = ತಿಳಿಯಲ್ಪಟ್ಟ, ಘಟಸ್ಯ = ಘಟಕ್ಕೆ, ಅನ್ಯೈಃ = ಬೇರೆಯವರಿಂದ, ಅಜ್ಞಾತತ್ವಂ = ತಿಳಿಯಲ್ಪಡದಿರೋಣವು ನ ಸ್ಯಾತ್=ಆಗಲಾರದು.

ತಾ ॥ (1) ಅಜ್ಞಾನವು ಘಟ ಮೊದಲಾದ ವಿಷಯಗಳನ್ನಾಶ್ರಯಿಸಿಕೊಂಡು ಇದ್ದು ಇದು ಘಟವೆಂಬುವ ಯಥಾರ್ಥಜ್ಞಾನದಿಂದ ನಾಶವಾಗುವುದೆಂದು ಅಂಗೀಕರಿಸುವುದಾದರೆ, ಘಟವನ್ನು ಒಬ್ಬನು ಕಲ್ಲು ಎಂದೂ ಇನ್ನೊಬ್ಬನು ಹಾವಿನ ಹುತ್ತು ಎಂದೂ ಹೀಗೆ ಅನೇಕ ಜನರು ಅನೇಕ ವಿಧವಾಗಿ ತಿಳಿದಿದ್ದರೂ ಒಬ್ಬನು ಘಟವೆಂದು ತಿಳಿದೊಡನೆ ಬೇರೆಯವರಿಗೆ ಅದರ ಅಜ್ಞಾನವೇ ಇಲ್ಲವೆಂದು ಆಗಬೇಕಾಗುವುದು. ಒಬ್ಬನು ಇದು ಘಟವೇ ಎಂದು ತಿಳಿದಿರುವುದರಿಂದ ಘಟಾಜ್ಞಾನವು ನಾಶವಾಗಿಯದೆ. ಇಂದ್ರಿಯ (ಕಣ್ಣು ಮೊದಲಾದ) ಸನ್ನಿಕರ್ಷಾದಿ ಸಾಮಗ್ರಿ ಗಳೂ ಇವೆ. ಬೆಳಕಿನಿಂದ ಕಗ್ಗತ್ತಲೆಯು ನಾಶವಾಗೋಣ ಘಟಕ್ಕೆ ಎಲ್ಲರದ್ದೂ ಮನಸ್ಸಹಿತವಾದ ಕಣ್ಣಿನ ಸಂಬಂಧವಿದ್ದರೂ ಘಟವು ಕೆಲವರಿಗೆ ತೋರುತ್ತದೆ, ಕೆಲವರಿಗೆ ತೋರುವುದಿಲ್ಲ ಎಂಬು ವುದು ಕೂಡಲಾರದಷ್ಟೆ. ಇಂತಹ ಅನಿಷ್ಟಪ್ರಸಂಗ ಬರುವುದರಿಂದ ಅಜ್ಞಾನವು ವಿಷಯಾಶ್ರಿತವಾಗಿ

ಜ್ಞಾನದಿಂದ ನಿವೃತ್ತವಾಗುತ್ತದೆ ಎಂದು ಹೇಳಕೂಡದು. (2) ಒಂದು ವಸ್ತುವಿನಲ್ಲಿ ಆವರಕವಾದ ಒಂದೇ ಅಜ್ಞಾನವಿರುವುದೆಂದು ಹೇಳಿದರೆ ಹಿಂದೆ ಹೇಳಿದ ಅನಿಷ್ಟಪ್ರಸಂಗವು ಬರಬಹುದು. ನಾವು ಹಾಗೆ ಹೇಳುವುದಿಲ್ಲ. ಘಟವನ್ನಾಶ್ರಯಿಸುತ್ತಿರುವ ಅಜ್ಞಾನಗಳು ಹೆಚ್ಚು ಇರುವುದರಿಂದ ಒಬ್ಬನು ತಿಳಿದಿದ್ದರೂ ಇತರರು ತಿಳಿಯದೆ ಇರಬಹುದು. ಎಂದರೆ ಘಟವನ್ನಾಶ್ರಯಿಸುತ್ತಿರುವ ಅಜ್ಞಾನಗಳಲ್ಲಿ ಒಂದು ಅಜ್ಞಾನವು ನಾಶವಾದರೂ ಬೇರೆ ಅಜ್ಞಾನಗಳೂ ಇರುವುದರಿಂದ ಯಾರಿಗೂ ಘಟವು ತಿಳಿಯದೆ ಹೋಗಬೇಕಾಗುವುದು. (3) ಪ್ರತಿಪುರುಷರ ತಿಳುವಳಿಕೆಗೆ ಪ್ರತಿಬಂಧಕವಾದ ಅಜ್ಞಾನವು ಬೇರೆ ಬೇರೆಯಾಗಿಯೇ ವಿಷಯಗಳಲ್ಲಿರುವುದು. ಅಂತೂ ಒಬ್ಬನ ಜ್ಞಾನದಿಂದ ಅವನ ತಿಳುವಳಿಕೆಗೆ ಪ್ರತಿಬಂಧಕವಾದ ಘಟದಲ್ಲಿರುವ ಅಜ್ಞಾನವು ನಾಶವಾದರೂ ಇತರರ ತಿಳುವಳಿಕೆಗೆ ಪ್ರತಿಬಂಧಕವಾದ ಅಜ್ಞಾನವೇ ಅಲ್ಲಿ ಇದ್ದುದರಿಂದ ಇತರರಿಗೆ ಘಟವು ತಿಳಿಯುವುದಿಲ್ಲವೆಂದು ಯುಕ್ತವೇ ಆಗುವುದು, ಎಂದರೆ ಪ್ರತಿಪುರುಷರಲ್ಲಿಯೂ ನಿಯತವಾದ (ಒಬ್ಬೊಬ್ಬನ ತಿಳುವಳಿಕೆಗೆ ಪ್ರತಿಬಂಧಕವಾದ ಅನೇಕ ಕಗ್ಗತ್ತಲೆಗಳು ಘಟದಲ್ಲಿ ಹೇಗೆ ಇರುವುದಿಲ್ಲವೋ ಆದರಂತೆಯೇ ಪ್ರತಿಒಬ್ಬನ ತಿಳುವಳಿಕೆಗೆ ಪ್ರತಿಬಂಧಕವಾದ) ಬೇರೆ ಬೇರೆ ಅಜ್ಞಾನಗಳು ಘಟದಲ್ಲಿವೆ, ಎಂದು ಹೇಳಿದರೆ ಎಲ್ಲಿಯೂ ಕಾಣದೆ ಇದ್ದುದನ್ನು ಕಲ್ಪನೆಮಾಡಿದ ಹಾಗೆ ಆಗುವುದು. (4) ಹಿಂದೆ ಹೇಳಿದ ಪ್ರಮಾಣದಿಂದ ಅಜ್ಞಾನವು ಘಟಾದಿ ವಿಷಯಗಳನ್ನಾಶ್ರಯಿಸಿಯದೆ, ಎಂದು ಸಿದ್ಧವಾಗೋಣ ಅಜ್ಞಾನವು ಪ್ರತಿಪುರುಷರಿಗೂ ನಿಯತಗಳಾಗಿ ವಿಷಯದಲ್ಲಿ ಉಂಟೆಂದು ಕಲ್ಪಿಸುತ್ತೇವೆ ಎಂದರೆ ಅನ್ಯೋನ್ಯಾಶ್ರಯವು. ಅಜ್ಞಾನವು ವಿಷಯವನ್ನಾಶ್ರಯಿಸಿಯದೆ, ಎಂದು ಸಿದ್ಧವಾದರೆ ಬಾಧಕವಿಲ್ಲದಿರುವುದರಿಂದ ಅಜ್ಞಾನವು ವಿಷಯವನ್ನಾಶ್ರಯಿಸಿಯದೆ ಎಂದು ಸಿದ್ಧವಾಗುವುದು. (5) ಆದಪ್ರಯುಕ್ತ ಅಜ್ಞಾನವು ತಿಳಿಯಲು ಯೋಗ್ಯನಾದ ಪರಬ್ರಹ್ಮನನ್ನು ಆಶ್ರಯಿಸಿಯದೆ, ಎಂದು ಯುಕ್ತವಲ್ಲ. ಆ ಕಾರಣ ಆತ್ಮನನ್ನಾಶ್ರಯಿಸಿರುವ ಅಜ್ಞಾನವನ್ನು ನಾಶಮಾಡುವುದರಿಂದ ವೇದಾಂತ ವಾಕ್ಯದಿಂದುಂಟಾದ ವಿಜ್ಞಾನವು ಆತ್ಮಜ್ಞಾನವೆಂದು ಸಿದ್ಧವಾಗುವುದಿಲ್ಲ ॥ ೫೦ ॥

(1) ಆತ್ಮಾಜ್ಞಾನವನ್ನಂಗೀಕರಿಸಿದರೂ ವೇದಾಂತ ವಾಕ್ಯದಿಂದ ಹುಟ್ಟಿದ ಜ್ಞಾನವು ಆತ್ಮಜ್ಞಾನವಾಗುವುದಿಲ್ಲ. ಏಕೆಂದರೆ— ವೇದಾಂತ ವಾಕ್ಯಜನ್ಯ ಜ್ಞಾನಕ್ಕೆ ಆತ್ಮನು ವಿಷಯನಾಗದೆ ಇರುವುದರಿಂದ ಆತ್ಮಾಜ್ಞಾನವನ್ನು ಆ ಜ್ಞಾನವು ನಿವರ್ತಿಸಲಾರದು. ಯಾವ ಜ್ಞಾನವು ಯಾವುದನ್ನು ವಿಷಯೀಕರಿಸುವುದೋ, ಆ ಜ್ಞಾನವು ಆ ವಿಷಯದ ಅಜ್ಞಾನವನ್ನೇ ಹೋಗಲಾಡಿಸುವುದು. (2) ವೇದಾಂತಜನ್ಯಜ್ಞಾನಕ್ಕೆ ಆತ್ಮನು ವಿಷಯನಾಗದೆ ಇದ್ದರೂ ಆತ್ಮಾಜ್ಞಾನವನ್ನು ನಾಶಮಾಡುವುದಾದರೆ ಘಟಜ್ಞಾನವೂ ಆತ್ಮಾಜ್ಞಾನವನ್ನು ನಾಶಮಾಡಬೇಕಾಗುವುದೆಂದುಪಪಾದಿಸುತ್ತಾರೆ.

**ಮೂ ॥ ಅತದ್ವಿಷಯಜ್ಞಾನೇನ ತದಜ್ಞಾನನಿವೃತ್ತೌ ಘಟಜ್ಞಾನೇನಾಪಿ ನಿವರ್ತೇತ ॥ ೫೧ ॥**

ಅ ॥ ಅತದ್ವಿಷಯಜ್ಞಾನೇನ = ಆತ್ಮನನ್ನು ವಿಷಯೀಕರಿಸದೆ ಇರುವ ಜ್ಞಾನದಿಂದ, ತದಜ್ಞಾನನಿವೃತ್ತೌ = ಆತ್ಮನ ಅಜ್ಞಾನವು ನಾಶವಾಗುವುದಾದರೆ, ಘಟಜ್ಞಾನೇನಾಪಿ = ಘಟವಿಷಯಕಜ್ಞಾನದಿಂದಲೂ (ಆತ್ಮಾಜ್ಞಾನವು), ನಿವರ್ತೇತ = ನಾಶವಾಗಬೇಕಾಗುವುದು ॥ ೫೧ ॥

ಘಟಜ್ಞಾನವು ಘಟ ಮೊದಲಾದುವುಗಳನ್ನು ವಿಷಯೀಕರಿಸುವುದರಿಂದ ಆತ್ಮಾಜ್ಞಾನವನ್ನು ನಾಶಮಾಡಲಾರದೆಂದರೆ ವೇದಾಂತವಾಕ್ಯದಿಂದ ಹುಟ್ಟಿದ ಜ್ಞಾನವು ಯಾವುದನ್ನೂ ವಿಷಯೀಕರಿಸುವುದಿಲ್ಲವೋ, ಇಲ್ಲವೆಂದು ಹೇಳಿದರೆ—

**ಮೂ ॥ ಅವಿಷಯತ್ವಾದೇವ ತಸ್ಯ ಜ್ಞಾನತ್ವಂ ಚ ನ ಸ್ಯಾದ್ಘಟವತ್ ॥ ೫೨ ॥**

ಅ ॥ ತಸ್ಯ=ವೇದಾಂತವಾಕ್ಯದಿಂದುಂಟಾದ ಜ್ಞಾನಕ್ಕೆ, ಅವಿಷಯತ್ವಾದೇವ=ವಿಷಯ ವಿಲ್ಲದಿರುವುದರಿಂದಲೇ, (ಆವುದನ್ನೂ ವಿಷಯೀಕರಿಸದೆ ಇರುವುದರಿಂದ). ಘಟವತ್= ಘಟದಂತೆಯೇ, ಜ್ಞಾನತ್ವಂ ಚ=ಜ್ಞಾನತ್ವವೂ ಕೂಡ, ನ ಸ್ಯಾತ್=ಬರಲಾರದು.

ತಾ ॥(1)'ಮೊಲದ ಕೋಡು' ಎಂಬುವ ಪದವನ್ನು ಕೇಳಿದೊಡನೆಯೇ ವಿಷಯವಿಲ್ಲದಿರುವ ಜ್ಞಾನವು ಹುಟ್ಟುವುದು. ಮೊಲಕ್ಕೆ ಕೋಡು ಇರುವುದಿಲ್ಲ. ಆದುದರಿಂದ ಆ ಜ್ಞಾನಕ್ಕೆ ವಿಷಯ ವಿರುವುದಿಲ್ಲ. ಶಶಶೃಂಗವೆಂಬುವ ಜ್ಞಾನಕ್ಕೆ ಮೊಲದ ಕೋಡು ಹೊರತು ಬೇರೆ ಯಾವುದೂ ವಿಷಯವಾಗಲಾರದು. ಆದರೂ ಶಶವಿಷಾಣವೆಂಬುವ ಪದದಿಂದುಂಟಾದ ಜ್ಞಾನಕ್ಕೆ ಜ್ಞಾನತ್ವವು ಹೇಗೆ ಇರುವುದೋ, ಅದರಂತೆಯೇ ವೇದಾಂತವಾಕ್ಯದಿಂದುಂಟಾದ ಜ್ಞಾನಕ್ಕೆ ವಿಷಯವಿಲ್ಲದಿದ್ದರೂ ಜ್ಞಾನತ್ವವು ಕೂಡಬಹುದು. ಆದುದರಿಂದ ವೇದಾಂತಜನ್ಯ ಜ್ಞಾನಕ್ಕೆ ವಿಷಯವಿಲ್ಲದಿರುವುದ ರಿಂದ ಘಟದಂತೆಯೇ ಜ್ಞಾನತ್ವವೇ ಕೂಡುವುದಿಲ್ಲವೆಂದು ಹೇಳಿದ್ದು ಅಯುಕ್ತವೆಂದು ಹೇಳ ಕೂಡದು. ಏಕೆಂದರೆ— ಇಲ್ಲಿ ವಿಷಯತ್ವವೆಂದರೆ ಅಸತ್ತು ವಿಷಯವಾಗಿಯದೆ ಎಂದು ಸಮ್ಮತ ವಲ್ಲ. ಮತ್ತೆ ನಿರಾಲಂಬನತ್ವವು (ಯಾವುದನ್ನೂ ವಿಷಯೀಕರಿಸದೆ ಇರುವಿಕೆ) ಶಶಶೃಂಗಾದಿ ಜ್ಞಾನವು ಹಾಗಲ್ಲವು. ಆದುದರಿಂದ ಯಾವುದನ್ನೂ ವಿಷಯೀಕರಿಸದೆ ಇದ್ದರೆ ಘಟದಂತೆಯೇ ಜ್ಞಾನವೇ ಆಗಲಾರದೆಂದು ಹೇಳಿದ್ದು ಯುಕ್ತವೇ ಸರಿ. ಆದಕಾರಣ ಯಾವ ರೀತಿಯಿಂದಲೂ ಆತ್ಮನು ಜ್ಞಾನವಿಷಯನಾಗದೆ ಇದ್ದರೆ ವೇದಾಂತವಾಕ್ಯದಿಂದ ಹುಟ್ಟಿದ ಜ್ಞಾನವು ಆತ್ಮಜ್ಞಾನ ವಾಗುವುದಿಲ್ಲ. ಅದಕ್ಕಾಗಿ ಆತ್ಮನಿಗೆ ಅವಶ್ಯವಾಗಿ ಜ್ಞಾನವಿಷಯತ್ವವನ್ನು ಅಂಗೀಕರಿಸ ಬೇಕಾಯಿತು. ಅಂತೂ ದೃಶ್ಯತ್ವಾನುಮಾನಕ್ಕೆ ಆತ್ಮನಲ್ಲಿ ವ್ಯಭಿಚಾರರೂಪದೋಷವು ಸಿದ್ಧ ವಾಯಿತು. ॥ ೫೨ ॥

ಜಡತ್ವರೂಪ ಹೇತುವಿಗೂ ವ್ಯಭಿಚಾರರೂಪ ದೋಷವದೆ ಎನ್ನುತ್ತಾರೆ —

**ಮೂ ॥ ಜಡತ್ವಂ ಚಾಪ್ರಮಾತೃತ್ವಮೇವ ॥ ೫೩ ॥**

ಅ ॥ ಚ=ಯಾವ ಕಾರಣದಿಂದ, ಜಡತ್ವಂ=ಜಡತ್ವರೂಪವಾದ ಹೇತುವು, ಅಪ್ರಮಾ ತೃತ್ವಮೇವ=ಯಥಾರ್ಥಜ್ಞಾನವಿಲ್ಲದಿರುವಿಕೆ.

ತಾ ॥ ಚೇತ್ಯತ್ವವೇ ಜಡತ್ವವೆಂದಂಗೀಕರಿಸಿದರೆ ದೃಶ್ಯತ್ವ-ಜಡತ್ವಗಳಿಗೆ ಭೇದವಿಲ್ಲವೆಂ ದಾಗುವುದು. ॥ ೫೩ ॥

**ಮೂ ॥ ನ ಚ ಪ್ರಮಾತೃತ್ವಮಾತ್ಮನಸ್ತೈರಂಗೀಕ್ರಿಯತೇ ॥ ಅತಸ್ತದಪ್ಯನೈ- ಕಾಂತಿಕಂ ॥ ೫೪ ॥**

ಅ ॥ ಚ=ಯಾವ ಕಾರಣದಿಂದ, ತೈಃ=ಜಗತ್ತು ಮಿಥ್ಯೆಯೆಂದು ವಾದಿಸುವವರಿಂದ, ಆತ್ಮನಃ=ಬ್ರಹ್ಮನಿಗೆ, ಪ್ರಮಾತೃತ್ವಂ=ಯಥಾರ್ಥಜ್ಞಾನವುಳ್ಳತನವು, ನಾಂಗೀಕ್ರಿಯತೇ=ಅಂಗೀ ಕಾರ ಮಾಡಲ್ಪಡುವುದಿಲ್ಲವೋ, ಅತಃ=ಆದುದರಿಂದ, ತದಪಿ=ಆ ಜಡತ್ವವೂ ಕೂಡ, ಅನೈ ಕಾಂತಿಕಂ=ವ್ಯಭಿಚರಿತವು.

ತಾ ॥ (1) ಪ್ರಮಾತೃತ್ವವನ್ನು ಅಂಗೀಕರಿಸಿದರೆ ಪ್ರಮಾಣ ಪ್ರಮೇಯಗಳನ್ನು ಅವಶ್ಯ ವಾಗಿ ಒಡಂಬಡಬೇಕಾದುದರಿಂದ ಜಗತ್ತಿಗೆ ಮಿಥ್ಯಾತ್ವವನ್ನು ವಾದಿಸುವವರು ಆತ್ಮನಿಗೆ

ಪ್ರಮಾತೃತ್ವವನ್ನೇ ಒಡಂಬಡುವುದಿಲ್ಲ. (2) ಯಾವಕಾರಣದಿಂದ ಪ್ರಮಾತೃತ್ವವು (ಯಥಾರ್ಥ ಜ್ಞಾನವುಳ್ಳತನವು) ಇಲ್ಲದಿರುವುದೇ ಜಡತ್ವವೋ, ಯಾವಕಾರಣದಿಂದ ಆತ್ಮನಿಗೆ ಪ್ರಮಾತೃತ್ವ ವನ್ನು ಪರರು ಅಂಗೀಕರಿಸಲಾರರೋ, ಆದಕಾರಣ ದೃಶ್ಯತ್ವರೂಪವಾದ ಹೇತುವಿನಂತೆ ಜಡತ್ವ ರೂಪವಾದ ಹೇತುವೂ ಕೂಡ ವಿಪಕ್ಷನಾದ ಆತ್ಮನಲ್ಲಿ ಇದ್ದುದರಿಂದ ವ್ಯಭಿಚರಿತವು. (3) ಆದರೆ ದೃಶ್ಯತ್ವರೂಪವಾದ ಹೇತುವು ಆತ್ಮನಲ್ಲಿದೆ, ಎಂದು ಉಪಪಾದಿಸುವುದರಿಂದ ಆ ಹೇತುವಿಗೆ ವ್ಯಭಿಚಾರವು ವಾದಿಪ್ರತಿವಾದಿಗಳಿಬ್ಬರಿಗೂ ಸಮ್ಮತವು. ದ್ವೈತಿಗಳು ಆತ್ಮನಿಗೆ ಪ್ರಮಾತೃತ್ವವನ್ನೇ ಅಂಗೀಕರಿಸಿದುದರಿಂದ ಜಡತ್ವರೂಪವಾದ ಹೇತುವಿಗೆ ವ್ಯಭಿಚಾರವು ಮಾಯಾವಾದಿಗಳ ಮತ ದಲ್ಲಿಯೇ. ಆದುದರಿಂದಲೇ ತೈಃ=ಮಾಯಾವಾದಿಗಳಿಂದ, ಎಂದುಪಪಾದಿಸಿರುವರು ॥ ೫೪ ॥

ಪುನಃ ಅದ್ವೈತಿಗಳು 'ಪಾರಮಾರ್ಥಿಕವಾದ ಪ್ರಮಾತೃತ್ವವನ್ನೇ ಆತ್ಮನಿಗೆ ನಾವು ಅಂಗೀ ಕರಿಸಲಾರೆವು. ಮಿಥ್ಯೆಯಾದ ಪ್ರಮಾತೃತ್ವವನ್ನು ಅಂಗೀಕರಿಸುವೆವು. ಇಲ್ಲವಾದರೆ ಸಂಸಾರವೇ ಕೂಡಲಾರದು. ಕಾರಣ ಜಡತ್ವರೂಪವಾದ ಹೇತುವಿಗೆ ಹೇಗೆ ವ್ಯಭಿಚಾರವು?' ಎಂದು ಶಂಕಿಸಿದರೆ —

**ಮೂ ॥ ಮಿಥ್ಯಾಪ್ರಮಾತೃತ್ವಂ ಚಾನಿರ್ವಚನೀಯನಿರಾಸಾದೇವ ನಿರಸ್ತಂ ॥ ೫೫ ॥**

ಅ ॥ ಅನಿರ್ವಚನೀಯ ನಿರಾಸಾದೇವ=ಅನಿರ್ವಚನೀಯವನ್ನು ನಿರಾಕರಣಮಾಡಿದು ದರಿಂದಲೇ, ಮಿಥ್ಯಾಪ್ರಮಾತೃತ್ವಂ ಚ=ಮಿಥ್ಯೆಯಾದ ಪ್ರಮಾತೃತ್ವವು, ನಿರಸ್ತಂ=ನಿರಾಕರಿ ಸಲ್ಪಟ್ಟಿತು.

ತಾ ॥ (1) ಅನಿರ್ವಚನೀಯವೇ ಅಪ್ರಾಮಾಣಿಕವೆಂದುಪಪಾದಿಸಿದುದರಿಂದ ಮಿಥ್ಯೆ ಯೆಂದರೆ ಅನಿರ್ವಚನೀಯವೆಂದು ಹೇಳಲಸಾಧ್ಯವು. ಆ ಕಾರಣ ಮಿಥ್ಯೆಯೆಂದರೆ ಅಸತ್ ಎಂದೇ ಹೇಳಬೇಕು. ಆಗ 'ಮಿಥ್ಯಾ ಪ್ರಮಾತೃತ್ವಂ' ಅಂದರೆ ಆತ್ಮನಿಗೆ ಪ್ರಮಾತೃತ್ವವಿಲ್ಲ ಎಂದು ಹೇಳಿದ ಹಾಗಾಯಿತು. ಅಂತೂ ವ್ಯಭಿಚಾರವು ಉಂಟೇವುಂಟು. (2) ಆತ್ಮನಿಗೆ ಪ್ರಮಾತೃತ್ವಾರೋಪ ವನ್ನು ನಾವು(ಅದ್ವೈತಿಗಳು) ಅಂಗೀಕರಿಸುವೆವು, ಎಂದರೆ ಸಾಂಖ್ಯಚಾರ್ವಾಕಾದಿಗಳು ಅಂತಃಕರ ಣಾದಿಗಳಲ್ಲಿ ಪ್ರಮಾತೃತ್ವಾರೋಪವನ್ನು ಅಂಗೀಕರಿಸಿದುದರಿಂದ ಪ್ರಮಾತೃತ್ವದ ಅಭಾವರೂಪ ವಾದ ಜಡತ್ವಹೇತುವು ಅಂತಃಕರಣಾದಿಗಳಲ್ಲಿ ಬಾರದೆ ಇರುವುದರಿಂದ ಭಾಗಾಸಿದ್ಧಿಯು ॥ ೫೫ ॥

ಹಾಗಾದರೆ ಜಡತ್ವವೆಂದರೆ ಅಪ್ರಮಾತೃತ್ವವೆಂದು ಹೇಳುವುದಿಲ್ಲ. ಅಪ್ರಕಾಶತ್ವವೆನ್ನುತ್ತೇವೆ. ಆತ್ಮನು ಪ್ರಕಾಶ (ಜ್ಞಾನ) ಸ್ವರೂಪನಾದುದರಿಂದ ಇದು ಆತ್ಮನಲ್ಲಿ ಬರಲಿಲ್ಲ. ಕಾರಣ ವ್ಯಭಿ ಚಾರವಿಲ್ಲವೆಂದರೆ —

**ಮೂ ॥ ಯದಿ ಜಡತ್ವಂ ನಾಮಾಪ್ರಕಾಶತ್ವಂ ತದಾಪ್ಯಾತ್ಮನಃ ಸ್ವವಿಷಯ ಪ್ರಕಾಶತ್ವಾಭಾವಾತ್ಪರ ವಿಷಯ ಪ್ರಕಾಶತ್ವಾಭಾವಾಚ್ಚಾನೈಕಾಂತಿಕ- ಮೇವ ॥ ೫೬ ॥**

ಅ ॥ ಜಡತ್ವಂ ನಾಮ=ಜಡತ್ವವೆಂದರೆ, ಅಪ್ರಕಾಶತ್ವಂ ಯದಿ=ಅಪ್ರಕಾಶ್ವವೆಂದು ಪರರು ಅಂಗೀಕರಿಸಿದ ಪಕ್ಷದಲ್ಲಿ, ತದಾಽಪಿ=ಆವಾಗಲೂ ಕೂಡ, ಆತ್ಮನಃ=ಪರಮಾತ್ಮನಿಗೆ, ಸ್ವವಿಷಯಪ್ರಕಾಶತ್ವಾಭಾವಾತ್=ತನ್ನನ್ನು ವಿಷಯೀಕರಿಸುವ ಪ್ರಕಾಶತ್ವವಿಲ್ಲದಿರುವುದರಿಂದಲೂ

ಪರವಿಷಯಪ್ರಕಾಶತ್ವಾಭಾವಾಚ್ಚ=ಇತರ ವಿಷಯಕವಾದ ಪ್ರಕಾಶತ್ವವಿಲ್ಲದಿರುವುದರಿಂದಲೂ, ಅನೈಕಾಂತಿಕಮೇವ=ವ್ಯಭಿಚಾರಿಯೇ.

ತಾ || (1) ಜಡತ್ವವೆಂದರೆ ಅಪ್ರಕಾಶತ್ವವೆಂದು ಪರರು ಒಡಂಬಟ್ಟರೂ ಆತ್ಮನಿಗೆ ಪ್ರಕಾಶತ್ವವೇ ಇಲ್ಲದಿರುವುದರಿಂದ ಈ ಹೇತುವಿಗೆ ವ್ಯಭಿಚಾರವೇ. (2) ಆತ್ಮನು ಪ್ರಕಾಶಸ್ವರೂಪ ನೆಂದರೆ ಆತ್ಮರೂಪ ಪ್ರಕಾಶವು ವಿಷಯುವುಳ್ಳದ್ದೋ. ವಿಷಯುವಿಲ್ಲದಿರುವುದೋ, ಆತ್ಮಸ್ವರೂಪವಾದ ಪ್ರಕಾಶಕ್ಕೆ ವಿಷಯುವು ಉಂಟೆಂದು ಒಡಂಬಟ್ಟರೆ (೧) ತಾನೇ ವಿಷಯುವೋ, (೨) ಪರವು ವಿಷ ಯುವೋ, ತನಗೆ ತಾನು ವಿಷಯನಾಗದಿರುವುದರಿಂದ ೧ನೇದ್ದು ಅಯುಕ್ತವು. ಬ್ರಹ್ಮನಿಂದ ಬೇರೆ ಯಾದ ವಸ್ತುವನ್ನೇ ಪರರು ಒಡಂಬಡದಿರುವುದರಿಂದ ಇತರವೇ ಇಲ್ಲದಿದ್ದ ಮೇಲೆ ಇತರವು ವಿಷಯುವಾಗಿದೆ ಎಂದು ಹೇಳಲಸಾಧ್ಯವಾದುದರಿಂದ ೨ನೇದ್ದೂ ಅಯುಕ್ತವು || ೫೬ ||

ವಾದಿಪ್ರತಿವಾದಿಗಳಿಬ್ಬರೂ ಆತ್ಮನನ್ನು ಸ್ವಪ್ರಕಾಶಜ್ಞಾನರೂಪನೆಂದಂಗೀಕರಿಸಿರುವರು. ಕಾರಣ ಆತ್ಮನಿಗೆ ಸ್ವವಿಷಯಪ್ರಕಾಶತ್ವವಿಲ್ಲವೆಂಬುವುದು ಹೇಗೆ ಕೂಡಬಹುದು. ಎಂದರೆ—

**ಮೂ || ಸ್ವವಿಷಯತ್ವಂ ಹಿ ಕರ್ತೃಕರ್ಮ**
**ವಿರೋಧಾತ್ತೈರ್ನಾಂಗೀ ಕ್ರಿಯತೇ || ೫೭ ||**

ಅ || (ಆತ್ಮಪ್ರಕಾಶಸ್ಯ=ಆತ್ಮಪ್ರಕಾಶಕ್ಕೆ) ಸ್ವವಿಷಯತ್ವಂ ಹಿ=ತನ್ನ ವಿಷಯತ್ವವಾದರೂ (ತನ್ನನ್ನು ವಿಷಯೀಕರಿಸುವಿಕೆಯು) ಕರ್ತೃಕರ್ಮವಿರೋಧಾತ್=ಕರ್ತೃಕರ್ಮಗಳಿಗೆ ವಿರೋಧ ವಿದ್ದುದರಿಂದ, ತೈಃ=ಮಾಯಾವಾದಿಗಳಿಂದ, ನಾಂಗೀಕ್ರಿಯತೇ=ಅಂಗೀಕರಿಸಲ್ಪಡುವುದಿಲ್ಲ.

ತಾ || (1) ನಾವು (ದ್ವೈತಿಗಳು) ಆತ್ಮನನ್ನು ಸ್ವವಿಷಯಪ್ರಕಾಶನೆಂದಂಗೀಕರಿಸು ವೆವು. ಪರರು (ಅದ್ವೈತಿಗಳು) ಅಂಗೀಕರಿಸಲಾರರು. (2) ಕರ್ತನಿಂದ ಬೇರೆಯಾಗಿ ಕ್ರಿಯೆ ಯಿಂದ ಹುಟ್ಟಿದ ಫಲಾಶ್ರಯವಾದುದು ಕರ್ಮವೆನಿಸುತ್ತದೆ. ಒಂದು ಕ್ರಿಯೆಯಲ್ಲಿ ಕರ್ತೃಕರ್ಮ ಗಳೆರಡೂ ಒಂದೇ ಆಗಲಾರವು. ಆದುದರಿಂದ ಆತ್ಮಜ್ಞಾನಕ್ಕೆ ಆತ್ಮನು ವಿಷಯನು (ಕರ್ಮವು) ಆಗಲಾರನು. (3) ಆದರೆ ಜ್ಞಾನಕ್ಕೆ ಸ್ವವಿಷಯತ್ವವನ್ನು ಇಟ್ಟುಕೊಳ್ಳುವಾಗ ಕರ್ತೃಕರ್ಮ ಭಾವವೇ ಇಲ್ಲವು. ಏಕೆಂದರೆ, ಜ್ಞಾನಕ್ಕೆ ಜ್ಞಾನವು ಕರ್ತೃ ಆಗಲಾರದು. ಕರ್ತನು ಇಲ್ಲದಿದ್ದ ಮೇಲೆ ಕರ್ಮವೂ ಕೂಡಲಾರದು. ಕರ್ಮಲಕ್ಷಣದಲ್ಲಿ ಕರ್ತನೂ ಸೇರಿರುತ್ತಾನೆ. ಆದುದರಿಂದ ವಿಷಯವಿಷಯೀಭಾವವು ಬಾಹ್ಯ (ಹೊರಗಿನದ್ದು) ಆಂತರ (ಒಳಗಿನದ್ದು) ಸ್ವರೂಪವಾದುದರಿಂದ ಒಂದಕ್ಕೇನೇ ಏಕಕಾಲದಲ್ಲಿ ವಿಷಯವಿಷಯೀಭಾವವು ವಿರುದ್ಧವಾದಕಾರಣ ಜ್ಞಾನಕ್ಕೆ ಸ್ವವಿಷಯ ತ್ವವನ್ನು ಪರರು ಅಂಗೀಕರಿಸಲಿಲ್ಲ, ಎಂದು ಹೇಳಬೇಕಿತ್ತು. 'ಕರ್ತೃಕರ್ಮವಿರೋಧಾತ್' ಎಂದು ಹೇಳಿದ್ದು ಹೇಗೆ ಕೂಡಬಹುದು, ಎಂದನ್ನಕೂಡದು. ವಿಷಯೀಕರಿಸುವುದು ಎಂಬುವ ವ್ಯಾಪಾರಕ್ಕೆ ಜ್ಞಾನವು ಕರ್ತೃ ಆಗಿದೆ. ಸ್ವವಿಷಯತ್ವವನ್ನಿಟ್ಟುಕೊಂಡರೆ ಕರ್ತೃಕರ್ಮಭಾವವು ತಪ್ಪಿದ್ದಲ್ಲ. ಇಲ್ಲವಾದರೆ ಜ್ಞಾನವು ವಸ್ತುವನ್ನು ವಿಷಯೀಕರಿಸುತ್ತದೆ ಎಂದು ಆಗದೆ ಹೋಗ ಬೇಕಾಯಿತು. (4) ಅಥವಾ ನಮ್ಮ ಮತದಲ್ಲಿ ಆತ್ಮನು ಜ್ಞಾನಸ್ವರೂಪನಾದಾಗ್ಯೂ ಜ್ಞಾನಕ್ಕೆ ಕರ್ತನೂ ಆಗುತ್ತಾನೆ, ಎಂದು ತಿಳಿಸುವುದಕ್ಕಾಗಿ 'ಕರ್ತೃಕರ್ಮವಿರೋಧಾತ್' ಎಂದು ಹೇಳಿರು ವರು. (5) ಕ್ರಿಯೆಯಿಂದ ಭಿನ್ನವಾದುದೇ ಕರ್ತೃ ಆದುದರಿಂದ ಆತ್ಮನು ಜ್ಞಾನರೂಪನಾದರೆ ಜ್ಞಾನಕ್ಕೆ ಕರ್ತನು ಹೇಗೆ ಆಗುವನು, ಎಂದರೆ ನಾವು (ದ್ವೈತಿಗಳು) ವಿಜ್ಞಾನಕ್ಕೆ ವಿಶೇಷವನ್ನು ಅಂಗೀಕರಿಸಿರುವೆವು. ಭೇದವಿಲ್ಲದಿದ್ದರೂ ಭೇದಕಾರ್ಯವನ್ನು ಮಾಡತಕ್ಕದ್ದು ವಿಶೇಷವು.

(6) ಹೀಗಾದರೆ ಎಲ್ಲಾ ಸ್ಥಲದಲ್ಲಿಯೂ ವಿಶೇಷದಿಂದಲೇ ಭೇದಕಾರ್ಯವು ಆಗುವಾಗ ಭೇದವೇ ಇಲ್ಲವೆಂದಾಗುವುದೆಂದು ಹೇಳಕೂಡದು. ಐಕ್ಯ ಮತ್ತು ಭೇದಕಾರ್ಯ ಇವೆರಡೂ ಇರುತ್ತವೆ, ಎಂಬುವಲ್ಲಿ ಪ್ರಮಾಣವಿದ್ದು ಭೇದಕಾರ್ಯವಾದ ವ್ಯವಹಾರ ನಿರ್ವಾಹಕ್ಕೆ ಕಾರಣವಾದ ಭೇದ ವಿಲ್ಲದಿದ್ದರೆ ಅದಕ್ಕೆ ಪ್ರತಿನಿಧಿಯಾದ ವಿಶೇಷವನ್ನು ಒಡಂಬಟ್ಟೇ ನಿರ್ವಾಹವಮಾಡಬೇಕು. ಈ ವಿಷಯವನ್ನು ಶ್ರೀಮದಾಚಾರ್ಯರು ಅನುವ್ಯಾಖ್ಯಾನಾದಿಗಳಲ್ಲಿ ವಿವರಣ ಮಾಡಿರುವರು ॥ ೫೭ ॥

ಆತ್ಮಪ್ರಕಾಶವು ಸ್ವವಿಷಯವಾಗದಿದ್ದರೂ ಪರವಿಷಯವಾಗಬಹುದು. ಮಿಥ್ಯಾಭೂತರಾದ ಪರರನ್ನು ಒಡಂಬಟ್ಟದ್ದೇವೆ. ಹೀಗಾದರೆ ಜ್ಞಾನದಲ್ಲಿರುವ ಪರವಿಷಯತ್ವವು ಮಿಥ್ಯೆಯಾಗ ಬೇಕಾಯಿತು, ಎಂದರೆ- ಇಷ್ಟವೇ ಆಗಿರುತ್ತದೆ. ಆದುದರಿಂದ ಮಿಥ್ಯಾರೂಪವಾದ ಪರವಿಷಯ ಕತ್ವವು ಇದ್ದುದರಿಂದ ಆತ್ಮನು ಪ್ರಕಾಶಸ್ವರೂಪನೇ ಆಗುವನು, ಎಂದರೆ—

**ಮೂ ॥ ಮಿಥ್ಯಾಭೂತಂ ಪರವಿಷಯತ್ವಂ ಚಾನಿರ್ವಚನೀಯನಿರಾಸಾದೇವ ನಿರಸ್ತಂ ॥ ೫೮ ॥**

**ಅ ॥** ಮಿಥ್ಯಾಭೂತಂ=ಮಿಥ್ಯೆಯಾದ, ಪರವಿಷಯತ್ವಂ ಚ=ಪರವೇ ವಿಷಯವಾಗಿದೆ ಎಂಬುವುದೂ ಕೂಡ, ಅನಿರ್ವಚನೀಯನಿರಾಸಾದೇವ=ಅನಿರ್ವಚನೀಯವನ್ನು ನಿರಾಕರಿಸಿ ದುದರಿಂದಲೇ, ನಿರಸ್ತಂ=ನಿರಾಕರಿಸಲ್ಪಟ್ಟಿತು.

**ತಾ ॥** (1) ಅವಿದ್ಯೆಯನ್ನು ನಾಶಮಾಡಿಕೊಂಡಿರುವ ಮುಕ್ತಸ್ವರೂಪವಾದ ಜ್ಞಾನಕ್ಕೆ ಅವಿದ್ಯೆಯೇ ಉಪಾದಾನಕಾರಣವಾಗಿವುಳ್ಳ ಪರವಿಷಯಕತ್ವವು ಕೂಡದಿರುವುದರಿಂದ ಅಪ್ರಕಾಶ ತ್ವವು ಪ್ರಾಪ್ತವಾಯಿತು. ಆದುದರಿಂದ ಮುಕ್ತಾತ್ಮನಲ್ಲಿ ಅಪ್ರಕಾಶತ್ವರೂಪವಾದ ಜಡತ್ವ ಹೇತುವು ಇದ್ದುದರಿಂದ ವ್ಯಭಿಚಾರವು. (2) ಶುಕ್ತಿರಜತವಿಲ್ಲದಿದ್ದರೂ ಶುಕ್ತಿರಜತವಿಷಯಕತ್ವವು ಜ್ಞಾನದಲ್ಲಿ ಯಥಾರ್ಥವಾಗಿಯೇ ಅದೆ. ಹಾಗೆಯೇ ಪರರು ಇಲ್ಲದಿದ್ದರೂ ಪರವಿಷಯಕತ್ವವು ಸತ್ಯವೇ ಏಕೆ ಆಗಬಾರದು, ಎಂದರೆ— ಹೀಗೆ ಮಿಥ್ಯಾಪದಾರ್ಥದಿಂದ ಸೇರಿರುವ ಧರ್ಮವು ಸುಳ್ಳು ಎಂದು ಹೇಳುವ ಪರರು ಮಿಥ್ಯಾಭೂತಪರವಿಷಯಕತ್ವವೆಂಬುವ ಧರ್ಮವನ್ನು ಜ್ಞಾನದಲ್ಲಿ ಸತ್ಯವೆಂದು ಒಪ್ಪಲಾರರು. ಆದುದರಿಂದ ಅದ್ವೈತಿಗಳ ರೀತಿಯಾಗಿಯೇ ವ್ಯಭಿಚಾರ ವನ್ನು ಹೇಳಿದ್ದಾಗಿರುತ್ತದೆ. ॥ ೫೮ ॥

ಆತ್ಮಪ್ರಕಾಶವು ಸ್ವವಿಷಯವೂ ಪರವಿಷಯವೂ ಆಗುವುದು ಬೇಡ. ನಿರ್ವಿಷಯವೇ ಏಕೆ ಆಗಲಾರದು ಎಂಬೀ ಇನೇ ಪಕ್ಷವನ್ನು ನಿರಾಕರಿಸುತ್ತಾರೆ.

**ಮೂ ॥ ವಿಷಯವರ್ಜಿತಃ ಪ್ರಕಾಶ ಏವ ನ ಭವತಿ ಘಟವತ್ ॥ ೫೯ ॥**

**ಅ ॥** ವಿಷಯವರ್ಜಿತಃ = ವಿಷಯವಿಲ್ಲದಿರುವುದು, ಪ್ರಕಾಶ ಏವ=ಪ್ರಕಾಶವೇ, ನ ಭವತಿ=ಆಗುವುದಿಲ್ಲ. ಘಟವತ್=ಘಟದಂತೆಯೆ,

**ತಾ ॥** (1) ಆತ್ಮಾ = ಆತ್ಮನು, ನ ಪ್ರಕಾಶಃ = ಪ್ರಕಾಶಸ್ವರೂಪನಲ್ಲ, ಪ್ರಕಾಶ್ಯ ಶೂನ್ಯತ್ವಾತ್ = ಪ್ರಕಾಶ್ಯವಿಲ್ಲದಿರುವುದರಿಂದ (ವಿಷಯವನ್ನು ವಿಷಯೀಕರಿಸದಿರುವುದರಿಂದ), ಘಟವತ್ = ಮಡಿಕೆಯಂತೆ. (2) ಪ್ರಕಾಶ್ಯವಿಲ್ಲದಿರುವುದಕ್ಕೂ ಪ್ರಕಾಶತ್ವವಿದ್ದರೆ ಘಟವೂ ಪ್ರಕಾಶವಾಗಬೇಕಾಯಿತು. ಅಪ್ರಕಾಶತ್ವವೆಂಬುವ ಜಡತ್ವಹೇತುವು ಪಕ್ಷವಾದ ಘಟದಲ್ಲಿ ಸಿದ್ಧವಾಗಲಿಲ್ಲ. ॥ ೫೯ ॥

(1) ವಿಷಯವಿಲ್ಲದಿರುವ (ವಿಷಯವನ್ನು ವಿಷಯೀಕರಿಸದೆ ಇರುವ) ಘಟವು ಪ್ರಕಾಶ ರೂಪವಾಗದಿದ್ದರೂ ವಿಷಯರಹಿತನಾದ ಆತ್ಮನು ಪ್ರಕಾಶಸ್ವರೂಪನಾಗಲಿ, ದೋಷವೇನು? ಎಲ್ಲಾ ಪದಾರ್ಥಗಳೂ ಒಂದೇಪ್ರಕಾರವಾಗಬೇಕೆಂದು ನಿಯಮವಿಲ್ಲವು. (2) ತಿಳಿಯುವವನು ಬೇರೆ, ತಿಳಿಯತಕ್ಕುದು ಬೇರೆ, ಎಂದು ಘಟಾದಿಗಳಲ್ಲಿ ತೋರಿಕೊಂಡಿದ್ದರೂ ಆತ್ಮನಲ್ಲಿ ಜ್ಞಾತೃ ಜ್ಞೇಯಗಳು ಒಂದೇ ಎಂದು ಹೇಗೆ ಗೃಹೀತವಾಗುವುದೋ, ಹಾಗೆಯೇ, ಎಂದರೆ — ಹೀಗೆ ಪ್ರಮಾಣವಿದ್ದರೆ ಆಗಬಹುದು. ಪ್ರಮಾಣವಿಲ್ಲವೆನ್ನುತ್ತಾರೆ.

**ಮೂ || ತತ್ಪ್ರಮಾಣಾಭಾವಾತ್ || ೭೦ ||**

ಅ || ತತ್=ಆತ್ಮನು ನಿರ್ವಿಷಯನಾದರೂ ಪ್ರಕಾಶಸ್ವರೂಪನಾಗಿದ್ದಾನೆ ಎಂಬುವಲ್ಲಿ, ಪ್ರಮಾಣಾಭಾವಾತ್=ಪ್ರಮಾಣವಿಲ್ಲದಿರುವುದರಿಂದ,

ತಾ || ಜಡತ್ವವೆಂದರೆ ಅಸ್ವಪ್ರಕಾಶತ್ವವೆಂದೂ ಪರರು ಅಂಗೀಕರಿಸಿದುದರಿಂದ ಅದನ್ನು ಏತಕ್ಕೆ ದೂಷಿಸಲಿಲ್ಲ, ಎಂದರೆ — ಪ್ರಕಾಶತ್ವವೇ ಕೂಡದಿರಲು ಆತ್ಮನು ಸ್ವಪ್ರಕಾಶನಾಗಿದ್ದಾನೆ ಎಂಬುವುದು ಸುತರಾಂ ಕೂಡುವುದಿಲ್ಲವೆಂದು ಶ್ರೀಮದಾಚಾರ್ಯರು ತಿಳಿದು ಪ್ರತ್ಯೇಕವಾಗಿ ತಿರಸ್ಕರಿಸಲಿಲ್ಲ || ೭೦ ||

ಪರಿಚ್ಛಿನ್ನತ್ವ ಹೇತುವನ್ನೂ ಕೂಡ ವಿಶೇಷಾಕಾರವಾಗಿ ನಿರಾಕರಿಸಲಿಚ್ಛಿಸಿದವರಾಗಿ ಆ ಪರಿಚ್ಛಿನ್ನತ್ವವೂ, ೧ ದೇಶದಿಂದಲೋ, ೨ ಕಾಲದಿಂದಲೋ, ೩ ವಸ್ತುವಿನಿಂದಲೋ ಎಂದು ವಿಕಲ್ಪಿಸಿ ಈ ೩ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು ೧, ೨ನೇ ಕಲ್ಪಗಳನ್ನು ನಿರಾಕರಿಸುತ್ತಾರೆ

**ಮೂ || ದೇಶತಃ ಕಾಲತಃ ಪರಿಚ್ಛಿನ್ನತ್ವಂ ಪ್ರಕೃತಿಕಾಲಾದಿಷ್ವಭಾವಾ- ದ್ಭಾಗಾಸಿದ್ಧಂ || ೭೧ ||**

ಅ || ದೇಶತಃ ಪರಿಚ್ಛಿನ್ನತ್ವಂ=ವ್ಯಾಪ್ತವಾಗದಿರುವುದು (ಕೆಲವು ದೇಶಗಳಲ್ಲಿಲ್ಲದಿರುವುದು), ಕಾಲತಃ ಪರಿಚ್ಛಿನ್ನತ್ವಂ=ಧ್ವಂಸಕ್ಕೆ ಪ್ರತಿಯೋಗಿತ್ವವು (ಅನಿತ್ಯತ್ವವು) (ಕೆಲವು ಕಾಲಗಳಲ್ಲಿಲ್ಲದಿರುವುದು), ಪ್ರಕೃತಿಕಾಲಾದಿಷು=ಪ್ರಕೃತಿಕಾಲ ಮೊದಲಾದುವುಗಳಲ್ಲಿ, ಅಭಾವಾತ್= ಇಲ್ಲದಿರುವುದರಿಂದ, ಭಾಗಾಸಿದ್ಧಂ=ಪಕ್ಷದ ಏಕದೇಶದಲ್ಲಿ ಸಿದ್ಧವಾಗಲಿಲ್ಲ.

ತಾ || (1) ಪಕ್ಷದಲ್ಲಿಯೇ ಸೇರಿದ ಪ್ರಕೃತಿಕಾಲ ಆಕಾಶ ಮೊದಲಾದುವುಗಳು ವ್ಯಾಪ್ತಗಳೂ ನಿತ್ಯಗಳೂ ಆಗಿವೆ. ಆದಕಾರಣ ಕೆಲವುದೇಶ, ಕೆಲವು ಕಾಲಗಳಲ್ಲಿಲ್ಲದಿರುವುದೆಂಬುವುದು. ಪ್ರಕೃತ್ಯಾದಿಗಳಲ್ಲಿ ಇರದಿರುವುದರಿಂದ ಭಾಗಾಸಿದ್ಧಿಯು. (2) ಜಡತ್ವದಿಂದಲೇ ಪ್ರಕೃತ್ಯಾದಿಗಳಿಗೂ ಪರಿಚ್ಛಿನ್ನತ್ವವನ್ನು ಸಾಧಿಸುವೆವೆಂದರೆ 'ಜಡತ್ವಂಚಾಪ್ರಮಾತೃತ್ವಮೇವ' ಇತ್ಯಾದಿ ಹಿಂದೆ ಹೇಳಿದಪ್ರಕಾರ ಆ ಹೇತುವಿಗೆ ವ್ಯಭಿಚಾರತಪ್ಪಿದ್ದಲ್ಲ. (3) 'ಗೌರನಾದ್ಯಂತವತೀ' ಪ್ರಕೃತಿಯು ಉತ್ಪತ್ತಿನಾಶವಿಲ್ಲದಿರುವುದು, 'ಆಕಾಶವತ್ಸರ್ವಗತಶ್ಚನಿತ್ಯಃ' ಆಕಾಶದಂತೆಯೇ ವ್ಯಾಪ್ತವೂ ನಿತ್ಯವೂ ಆಗಿದೆ. ೩ 'ಪ್ರಕೃತಿಃ ಪುರುಷಶ್ಚೈವ ನಿತ್ಯೌ ಕಾಲಶ್ಚ ಸತ್ತಮ' ಪ್ರಕೃತಿ ಪುರುಷಕಾಲಗಳು ನಿತ್ಯಗಳಾಗಿವೆ. ಇತ್ಯಾದ್ಯಾಗಮವಿರೋಧವೂ ಪ್ರಕೃತ್ಯಾದಿಗಳಿಗೆ ಪರಿಚ್ಛಿನ್ನತ್ವವನ್ನು ಸಾಧಿಸಿದರೆ ಬರುತ್ತದೆ. (4) ಪ್ರಕೃತ್ಯಾದಿಗಳಿಂದ ಬೇರೆಯಾದುದು ಪಕ್ಷವೆಂದೆನ್ನ ಕೂಡದು. ಪ್ರಕೃತ್ಯಾದಿಗಳಿಗೆ ಮಿಥ್ಯಾತ್ವವು ಸಿದ್ಧವಾಗದೆ ಹೋದೀತು. ದೃಶ್ಯತ್ವಾದಿಗಳಿಂದ ಅದಕ್ಕೆ ಮಿಥ್ಯಾತ್ವವು ಸಿದ್ಧವಾಗುತ್ತದೆ, ಎಂದು ಹೇಳಕೂಡದು. ದೃಶ್ಯತ್ವಾದಿಗಳು ದುಷ್ಟಗಳಾಗಿವೆ.

'ನೇಹ ನಾನಾಽಸ್ತಿ ಕಿಂಚನ' ಇತ್ಯಾದ್ಯಾಗಮಗಳನ್ನು ನಿರಾಕರಿಸುವೆವು. ಆದುದರಿಂದ ಆಗಮಗಳಿಂದಲೂ ಜಗತ್ತಿಗೆ ಮಿಥ್ಯಾತ್ವವು ಸಿದ್ಧವಾಗಲಾರದು. ಈ ಎಲ್ಲಾ ಹೇತುಗಳಿಗೂ ಹಿಂದಿನ ದೋಷಗಳೂ ಮೇಲೆ ಹೇಳುವ ಬಾಧಾದಿದೋಷಗಳೂ ತಪ್ಪಲಾರವು ॥ ೬೧ ॥

**ಮೂ ॥ ವಸ್ತುತಃ ಪರಿಚ್ಛಿನ್ನತ್ವಮಾತ್ಮನೋಽಪಿ ಭೇದಾಂಗೀಕಾರಾದನೈಕಾಂತಿಕಂ ॥ ೬೨ ॥**

ಅ ॥ ವಸ್ತುತಃ ಪರಿಚ್ಛಿನ್ನತ್ವಂ=ಇತರವಸ್ತುಗಳಿಂದ ಭೇದವು (ಅನ್ಯೋನ್ಯಾಭಾವತ್ವವು), ಆತ್ಮನೋಽಪಿ=ಪರಮಾತ್ಮನಿಗೂ, ಭೇದಾಂಗೀಕಾರಾತ್=ಭೇದವನ್ನೊಡಂಬಟ್ಟ ಪ್ರಯುಕ್ತ, ಅನೈಕಾಂತಿಕಂ=ವ್ಯಭಿಚರಿತವು

ತಾ ॥ (1) ವಿಪಕ್ಷನಾದ ಆತ್ಮನಿಗೆ ದ್ವೈತಿಗಳು ಭೇದವನ್ನಂಗೀಕರಿಸಿರುವುದರಿಂದ ವಸ್ತುತಃ ಪರಿಚ್ಛಿನ್ನತ್ವವೆಂಬ ಹೇತುವು ಅದೆ. ಮಿಥ್ಯಾತ್ವರೂಪವಾದ ಸಾಧ್ಯವು ಇಲ್ಲವು. ಕಾರಣ ವ್ಯಭಿಚಾರವು. (2) ಪ್ರತಿಯೋಗಿಭೂತವಾದ ಜಗತ್ತು ಮಿಥ್ಯೆಯಾದುದರಿಂದ ಆತ್ಮನಿಗೆ ಅದರಿಂದ ಭೇದವು ಕೂಡಲಾರದು, ಎಂದು ಹೇಳಕೂಡದು. ಜಗತ್ತು ಮಿಥ್ಯೆಯೆಂದು ಸಿದ್ಧವಾದರೆ ಜಗತ್ತಿನಿಂದ ಆತ್ಮನಲ್ಲಿರುವ ಭೇದವೂ ಮಿಥ್ಯೆಯೆಂದು ಪ್ರಾಪ್ತವಾಗುವುದರಿಂದ ವ್ಯಭಿಚಾರವಿಲ್ಲವು ಅದರಿಂದ ವಸ್ತುತಃ ಪರಿಚ್ಛಿನ್ನತ್ವವು ಹೇತುವೆಂದು ಸಿದ್ಧವಾಗುವುದು. ಅದು ಸಿದ್ಧವಾದರೆ ಜಗತ್ತು ಮಿಥ್ಯೆಯೆಂದು ಸಿದ್ಧವಾಗುವುದು. ಹೀಗೆ ಅನ್ಯೋನ್ಯಾಶ್ರಯವು. (3) ಭೇದಃ=ಭೇದವು, ಮಿಥ್ಯಾ=ಮಿಥ್ಯೆಯಾದುದು, ಭೇದತ್ವಾತ್=ಭೇದವಿದ್ದುದರಿಂದ, ಇದು ಮೊದಲಾದ ಅನುಮಾನಗಳಿಗಾದರೂ ಅಪಸಿದ್ಧಾಂತಮೊದಲಾದದೋಷಗಳು ತಪ್ಪಲಾರವು. (4) ವಿಮತಾಃ ಆತ್ಮಾನಃ=ವಿವಾದವಿಷಯೀಭೂತರಾದ ಆತ್ಮರು, ಪರಮಾತ್ಮನಃ ತತ್ವತೋ ನ ಭಿದ್ಯಂತೇ=ಪರಮಾತ್ಮನಿಂದ ಯಥಾರ್ಥವಾಗಿ ಭಿನ್ನರಲ್ಲ, ಆತ್ಮತ್ವಾತ್=ಆತ್ಮತ್ವವಿದ್ದುದರಿಂದ, ಇಲ್ಲಿರುವ ಆತ್ಮತ್ವಹೇತುವೂ ಇದರಿಂದಲೇ ತಿರಸ್ಕೃತವಾಯಿತು. ಹೇಗೆಂದರೆ ಆತ್ಮತ್ವವೆಂದರೆ— ೧ ಅದೃಶ್ಯತ್ವವೋ, ೨ ಪ್ರಮಾತೃತ್ವವೋ, ೩ ಪ್ರಕಾಶತ್ವವೋ, ೪ ಸ್ವಪ್ರಕಾಶತ್ವವೋ, ೫ ಅಪರಿಚ್ಛಿನ್ನತ್ವವೋ, ಇವೆಲ್ಲವೂ ಅಸಿದ್ಧವು (ಅಯುಕ್ತವು), ವೇದಾಂತವಾಕ್ಯದಿಂದ ಹುಟ್ಟಿದ ವಿಜ್ಞಾನಕ್ಕೆ ಆತ್ಮಜ್ಞಾನತ್ವವನ್ನು ನಿರ್ವಾಹಮಾಡಲಿಕ್ಕಾಗಿ ಆತ್ಮನಿಗೆ ದೃಶ್ಯತ್ವವನ್ನೇ ಒಡಂಬಡಿಸಿದ್ದೇವೆ. ಆತ್ಮನಿಗೆ ಪ್ರಮಾತೃತ್ವವನ್ನು ಅದ್ವೈತಿಗಳು ಅಂಗೀಕರಿಸಲಿಲ್ಲ. ವಿಷಯವೇ ಇಲ್ಲದಿರುವುದರಿಂದ ಪ್ರಕಾಶತ್ವವೂ ಸ್ವಪ್ರಕಾಶತ್ವವೂ ಕೂಡಲಾರದು. ಆತ್ಮನಿಗೆ ಜಗತ್ತಿನಿಂದ ಭೇದವನ್ನೇ ಅಂಗೀಕರಿಸಿದ್ದರಿಂದಲೂ ಅಪರಿಚ್ಛಿನ್ನತ್ವರೂಪವಾದ ಆತ್ಮತ್ವವು ಪಕ್ಷದಲ್ಲಿ ಸಿದ್ಧವಾಗಲಿಲ್ಲ. ದೃಷ್ಟಾಂತದಲ್ಲಿ (ಪರಮಾತ್ಮನಲ್ಲಿ) ಸಾಧನವಿಲ್ಲವು. (5) ಆತ್ಮತ್ವವೆಂದರೆ, ಜಾತಿವಿಶೇಷವೆಂದರೆ ಅದನ್ನು ಪರರು ವಸ್ತುತಃ ಅಂಗೀಕರಿಸಲಾರರು. ಮಿಥ್ಯಾಭೂತವಾದುದೆಂದರೆ, ಅನಿರ್ವಚನೀಯವನ್ನು ನಿರಾಕರಿಸಿದ್ದರಿಂದಲೇ ನಿರಾಕರಿಸಿ ಆಗಿದೆ. ಆರೋಪಿತವಾದುದೆಂದರೆ ಬಾಷ್ಪದಲ್ಲಿ ಆರೋಪಿತವಾದ ಹೊಗೆಯೂ ಬೆಂಕಿಯನ್ನು ಸಾಧಿಸಬೇಕಾಗುವುದು, ಅಂತೂ ಅತಿಪ್ರಸಂಗವು. ॥ ೬೨ ॥

ಈ ಪ್ರಕಾರ ಪ್ರತ್ಯೇಕವಾಗಿ ಅನುಮಾನಗಳನ್ನು ನಿರಾಕರಿಸಿ ಎಲ್ಲಾ ಅನುಮಾನಗಳಲ್ಲಿಯೂ ಸಾಧಾರಣವಾದ ದೂಷಣದಿಂದಲೂ ದೂಷಿಸುತ್ತಾರೆ.

**ಮೂ ॥ ಪ್ರತ್ಯಕ್ಷಬಾಧಿತಂ ಚ ಜಗನ್ಮಿಥ್ಯಾತ್ವಂ ॥ ೬೩ ॥**

ಅ ॥ ಜಗನ್ಮಿಥ್ಯಾತ್ವಂ=ಪ್ರಪಂಚಕ್ಕೆ ಮಿಥ್ಯಾತ್ವವು (ಆತ್ಮಗೆ ಭೇದವಿಲ್ಲವೆಂಬುವುದೂ ಕೂಡ), ಪ್ರತ್ಯಕ್ಷ ಬಾಧಿತಂ ಚ=ಪ್ರತ್ಯಕ್ಷಪ್ರಮಾಣದಿಂದ ಬಾಧಿಸಲ್ಪಟ್ಟದೆ ॥ ೬೩ ॥

ಪ್ರತ್ಯಕ್ಷಪ್ರಮಾಣವು ಪದಾರ್ಥಸ್ವರೂಪವನ್ನು ಮಾತ್ರ ವಿಷಯೀಕರಿಸುತ್ತದೆ. ಅನುಮಾನವಾದರೂ ಜಗತ್ತಿಗೆ ಮಿಥ್ಯಾತ್ವವನ್ನು ವಿಷಯೀಕರಿಸುತ್ತದೆ. ಹೀಗೆ ವಿಷಯಗಳು ಬೇರೆ ಬೇರೆಯಾದುದರಿಂದ ಅನುಮಾನಕ್ಕೆ ಹೇಗೆ ಪ್ರತ್ಯಕ್ಷವಿರೋಧವು, ಹೇಗೆತಾನೆ ಅನುಮಾನವು ಪ್ರತ್ಯಕ್ಷದಿಂದ ಬಾಧಿಸಲ್ಪಡುವುದು, ಎಂದು ಶಂಕಿಸಿದರೆ—

**ಮೂ ॥ ಸದಿತಿ ಪ್ರತೀಯಮಾನತ್ವಾತ್ ॥ ೨೪ ॥**

ಅ ॥ 'ಸತ್' ಎಂದು ತೋರುವುದರಿಂದ,

ತಾ ॥ (1) ಪ್ರತ್ಯಕ್ಷಪ್ರಮಾಣದಿಂದ ತೋರತಕ್ಕ ವಸ್ತುಗಳೆಲ್ಲವೂ 'ಸತ್' ಎಂದೇ ತೋರುತ್ತದೆ. ಆ ಕಾರಣ ಅನುಮಾನಕ್ಕೆ ಪ್ರತ್ಯಕ್ಷವಿರೋಧವದೆ. (2) ಪ್ರತ್ಯಕ್ಷಸಿದ್ಧವಾದ ವಸ್ತುವನ್ನು ಆಶ್ರಯಿಸಿಯೇ ಅನುಮಾನವು ಪ್ರವೃತ್ತವಾಗುವುದು. ಹಾಗಲ್ಲವಾದರೆ ಆಶ್ರಯವೇ ಇಲ್ಲವೆಂದಾಗುವುದು. ಅಂತೂ ಪ್ರಬಲವಾದ ಪ್ರತ್ಯಕ್ಷವು ದುರ್ಬಲವಾದ ಅನುಮಾನವನ್ನು ವಿರೋಧವು ಸ್ಪಷ್ಟವಾಗಿರಲು ಹೇಗೆ ತಾನೇ ಬಾಧಿಸಲಾರದು? ॥ ೨೪ ॥

(1) ಪ್ರತ್ಯಕ್ಷಪ್ರಮಾಣವು ಜಗತ್ತು 'ಸತ್' ಎಂದೇ ವಿಷಯೀಕರಿಸಲಿ. ಆದರೂ ಅನುಮಾನಾಗಮಗಳು ನಿರವಕಾಶಗಳಾದುದರಿಂದ ಅವುಗಳಿಂದಲೇ ಪ್ರತ್ಯಕ್ಷಪ್ರಮಾಣವು ಬಾಧಿಸಲ್ಪಡುವುದು. ವ್ಯಾಪ್ತಿಪಕ್ಷಧರ್ಮತೆಗಳಿಂದೊಡಗೂಡಿದ ಅನುಮಾನವನ್ನು ಅಪ್ರಮಾಣವೆಂದು ಹೇಳಲು ಸಾಧ್ಯವಿಲ್ಲ. (2) ಉಪಕ್ರಮಾದಿಲಿಂಗಗಳಿಂದ ತಾತ್ಪರ್ಯವು ನಿಶ್ಚಿತವಾದುದರಿಂದಲೂ ಅಪೌರುಷೇಯವಾದುದರಿಂದಲೂ ಆಗಮವನ್ನು ಅಪ್ರಮಾಣವೆಂದು ಹೇಳುವುದು ಅಸಾಧ್ಯವು. ಪ್ರತ್ಯಕ್ಷಪ್ರಮಾಣಕ್ಕಾದರೂ ದೋಷವು ಸಂಭಾವಿತವಾದುದರಿಂದ ಅದು ಅಪ್ರಮಾಣವೂ ಆಗಬಹುದು. ಎಂದರೆ—

**ಮೂ ॥ ನ ಚ ಪ್ರತ್ಯಕ್ಷಸಿದ್ಧಮನ್ಯೇನ ಕೇನಾಪಿ ಬಾಧ್ಯಂ ದೃಷ್ಟಂ ॥ ೨೫ ॥**

ಅ ॥ ಪ್ರತ್ಯಕ್ಷಸಿದ್ಧಂ=ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದುದು, ಅನ್ಯೇನ ಕೇನಾಪಿ=ಬೇರೆ ಯಾವುದರಿಂದಲೂ, ಬಾಧ್ಯಂ=ಬಾಧಿಸಲ್ಪಡುವುದಾಗಿ, ನ ಚ ದೃಷ್ಟಂ=ಕಾಣಲ್ಪಡುವುದಿಲ್ಲ.

ತಾ ॥ (1) ಪ್ರತ್ಯಕ್ಷಪ್ರಮಾಣದಿಂದಮಾತ್ರ ಸಿದ್ಧವಾದುದೂ ಪ್ರತ್ಯಕ್ಷದಿಂದ ಇತರವಾದ ಯಾವ ಅನುಮಾನದಿಂದಾಗಲೀ, ಆಗಮದಿಂದಾಗಲೀ ಬಾಧಿಸಲ್ಪಟ್ಟದ್ದು ಕಾಣಲ್ಪಟ್ಟದ್ದರೆ ಆಗಬಹುದಿತ್ತು. ಹೀಗೆ ಅನುಮಾನಾಗಮಗಳಿಂದ ಪ್ರತ್ಯಕ್ಷವು ಬಾಧಿಸಲ್ಪಟ್ಟದ್ದು ಕಾಣಿಸಲ್ಪಡಲಿಲ್ಲವಷ್ಟೆ! *ಉಪಜೀವ್ಯವಾದ ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದುದು ಎಷ್ಟುಮಾತ್ರಕ್ಕೂ ಬಾಧಿಸಲ್ಪಡಲಾರದು. (2) ಹಗ್ಗವನ್ನು ನೋಡಿ ಹಾವು ಎಂಬ ಭ್ರಾಂತಿಯೂ ಕೂಡ 'ಪರೀಕ್ಷಿಸಿದ ಮೇಲೆ ಇದು ಸರ್ಪವಲ್ಲ ಹಗ್ಗವೇ' ಎಂಬೀ ಪ್ರಬಲವಾದ ಪ್ರತ್ಯಕ್ಷದಿಂದಲೇ ಬಾಧಿಸಲ್ಪಡುವುದು. ಅನುಮಾನಾಗಮಗಳಿಂದಲ್ಲ. (3) ಅನುಮಾನದಿಂದಲೇ ಪ್ರತ್ಯಕ್ಷವು ಬಾಧಿಸಲ್ಪಡುವುದಾದರೆ †ಬಾಧವೆಂಬ ದೋಷವನ್ನೇ ಬಿಡಬೇಕಾಗುವುದು. ಕೇವಲ ಪ್ರತ್ಯಕ್ಷವೇ ಅನುಮಾನಾದಿಗಳಿಂದ ಬಾಧಿಸಲ್ಪಡುವುದಿಲ್ಲ. § ಉಪಜೀವ್ಯವಾದುದು ಎಷ್ಟು ಮಾತ್ರಕ್ಕೂ ಬಾಧಿಸಲ್ಪಡಲಾರದು.

§ * ಯಾವುದು ಇಲ್ಲದೆ ಯಾವುದು ಹುಟ್ಟಲಾರದೋ ಅದು ಉಪಜೀವ್ಯವು. ಪ್ರತ್ಯಕ್ಷವಿಲ್ಲದೆ ಅನುಮಾನವು ಹುಟ್ಟದಿರುವುದರಿಂದ ಪ್ರತ್ಯಕ್ಷವು ಉಪಜೀವ್ಯವು. ಅನುಮಾನವು ಉಪಜೀವಕವು.

† ವಹ್ನಿಃ=ಬೆಂಕಿಯು, ಅನುಷ್ಣಃ=ಬಿಸಿಯಲ್ಲ, ಪದಾರ್ಥತ್ವಾತ್=ವಸ್ತುವಾದುದರಿಂದ, ಘಟವತ್=ಮಡಿಕೆಯಂತೆ, ಈ ಅನುಮಾನವು "ಬೆಂಕಿಯು ಬಿಸಿಯಾಗಿದೆ" ಎಂಬುವ ಪ್ರತ್ಯಕ್ಷದಿಂದ ಬಾಧಿಸಲ್ಪಡುವುದು.

ಅನುಮಾನವನ್ನೇ ಬಾಧಿಸುವುದು. ಈ ಪ್ರಕಾರ ವ್ಯವಸ್ಥೆಯುನ್ನಾದರೂ ಹೇಳಬೇಕು. (4) ಹಗ್ಗವನ್ನು ನೋಡಿ ಹಾವೆಂಬ ಭ್ರಾಂತಿಯು 'ಇದು ಹಾವಲ್ಲ' ಎಂಬ ಮಿತ್ರನ ಮಾತಿನಿಂದ ನಾಶನಾಗುವುದಾದರೂ ಮಿತ್ರನ ಮಾತಿಗೆ ಕಾರಣವಾದ ಪ್ರತ್ಯಕ್ಷಪ್ರಮಾಣದಿಂದಲೇ ಬಾಧಿಸಲ್ಪಡುವುದು. ಆದುದರಿಂದಲೇ 'ಇದು ಹಾವಲ್ಲ' ಎಂದು ಹೇಳಿಸಿಕೊಂಡವರು ತಾವು ನೋಡದೇನೇ ಹೀಗೆ ಹೇಳುತ್ತೀರೋ, ನೋಡಿ ಹೇಳುವಿರೋ, ಎಂದು ಕೇಳುವರು. (5) ಪರೀಕ್ಷಿಸದಿರುವ ಪ್ರತ್ಯಕ್ಷಕ್ಕೆ ಪರೀಕ್ಷಿತವಾದ ಪ್ರತ್ಯಕ್ಷವು ಬಾಧಕವಾಗುವುದು. ಆದುದರಿಂದಲೇ 'ಅನ್ಯೇನ=ಬೇರೆ ಯಾವುದರಿಂದಲೂ' ಎಂದು ಹೇಳಿರುವರು ॥ ೬೫ ॥

'ಆಕಾಶವು ನೀಲವಾಗಿದೆ' ಎಂಬುವ ಪ್ರತ್ಯಕ್ಷವು 'ನಭಃ=ಆಕಾಶವು, ನ ನೀಲಂ=ನೀಲವಲ್ಲ, ವಿಭುತ್ವಾತ್=ವಿಭುವಾದುದರಿಂದ, ಆತ್ಮವತ್=ಆತ್ಮನಂತೆ, ಎಂಬುವ ಅನುಮಾನದಿಂದ ಬಾಧಿಸಲ್ಪಡತಕ್ಕದು ದೃಷ್ಟವಾಗಿದೆ.' ಹಾಗೆಯೇ 'ಚಂದ್ರನು ಪ್ರಾದೇಶ (ಗೇಣು) ಪರಿಮಿತನು' ಎಂಬುವ ಪ್ರತ್ಯಕ್ಷವು "ಅಷ್ಟಾಶೀತಿಸಹಸ್ರಾಣಿ ವಿಸ್ತೀರ್ಣೋ ಯೋಜನಾನಿ ತು । ಪ್ರಮಾಣಂ ತತ್ರ ವಿಜ್ಞೇಯಂ" ಚಂದ್ರನಿಗೆ (೮೮೦೦೦) ಎಂಭತ್ತೆಂಟು ಸಹಸ್ರಯೋಜನ ವಿಸ್ತೀರ್ಣ ಪ್ರಮಾಣವು, ಎಂದು ತಿಳಿಯುತಕ್ಕದು, ಎಂಬುವ ಆಗಮದಿಂದ ಬಾಧಿಸಲ್ಪಡುವುದು. ಆಕಾಶವು ನೀಲವಲ್ಲ ಎನ್ನುವುದು ಪ್ರತ್ಯಕ್ಷಸಿದ್ಧವಲ್ಲವಷ್ಟೆ! ಕಾರಣ ಅಲ್ಲಿಯೂ ಪ್ರತ್ಯಕ್ಷವೆ ಬಾಧಕವೆಂದು ಹೇಳಕೂಡದು. ಅಪೌರುಷೇಯವಾಕ್ಯದಿಂದ ಬಾಧ ಹೇಳುವಾಗ ಮೂಲಭೂತವಾದ ಪ್ರತ್ಯಕ್ಷವೂ ಇಲ್ಲ. ಆ ಕಾರಣ ಪ್ರತ್ಯಕ್ಷವು ಅನುಮಾನಾಗಮಗಳಿಂದ ಬಾಧಿಸಲ್ಪಡುವುದಿಲ್ಲ, ಎನ್ನುವುದು ಹೇಗೆ ಕೂಡಬಹುದೆಂದರೆ —

**ಮೂ ॥ ಚಂದ್ರಪ್ರಾದೇಶತ್ವಾದಿವಿಷಯಂ ತು ದೂರಸ್ಥತ್ವಾದಿ**
**ದೋಷಯುಕ್ತತ್ವಾದಪಟು ॥ ೬೬ ॥**

**ಅ ॥** ಚಂದ್ರಪ್ರಾದೇಶತ್ವಾದಿವಿಷಯಂ ತು=ಚಂದ್ರನು ಪ್ರಾದೇಶ (ಗೇಣು) ಪರಿಮಿತನಾಗಿರುತ್ತಾನೆ, ಇದು ಮೊದಲಾದುದನ್ನು ವಿಷಯೀಕರಿಸುವ ಪ್ರತ್ಯಕ್ಷವಾದರೂ (ಜಗತ್ಪ್ರತ್ಯಕ್ಷದಂತೆ ಅಲ್ಲ. ಮತ್ತೆ) ಅಪಟು=ತನ್ನ ಅರ್ಥದಲ್ಲಿ (ವಿಷಯದಲ್ಲಿ) ಪುರುಷರನ್ನು ಪ್ರವರ್ತಿಸಲಿಕ್ಕೆ ಸಮರ್ಥವಲ್ಲ. ದೂರಸ್ಥತ್ವಾದಿದೋಷಯುಕ್ತತ್ವಾತ್ = ಅತಿದೂರದಲ್ಲಿರತಕ್ಕದು, ಇದು ಮೊದಲಾದ ದೋಷದಿಂದೊಡಗೂಡಿದೆ, ಎಂದು ನಿಶ್ಚಿತವಾದುದರಿಂದ.

**ತಾ ॥** ಜ್ಞಾನವು ೧ ನಿಯಮೇನ ಏಕಾಕಾರವಾದುದು, ೨ ಡೋಲಾಯಮಾನವಾದುದು, ಎಂದು ೨ ಎರಡು ವಿಧವು. ೨ನೇದ್ದು ಸಂಶಯವೆನಿಸುವುದು. ೧ನೇದ್ದು ೨ ವಿಧವು. ಸ್ವಾರ್ಥವನ್ನು ನಿಶ್ಚಯಿಸತಕ್ಕದು. ಉ= ಇದು ಸ್ತಂಭವೇಸರಿ. ೨ ಸ್ವಾರ್ಥವನ್ನು ವಿಷಯೀಕರಿಸಿದರೂ ಅದನ್ನು ನಿಶ್ಚಯಿಸಲಾರದು. ಉದಾ='ಸೂರ್ಯನಲ್ಲಿ ರಂಧ್ರವಿದೆ' ಎಂದು ವಿಷಯೀಕರಿಸುವುದು. ಏಕಾಕಾರವನ್ನು ವಿಷಯೀಕರಿಸುವುದರಿಂದ ಸ್ವಾರ್ಥನಿಶ್ಚಾಯಕತ್ವಾದಿ ರೂಪವಾದ ವಿಶೇಷವು ಕೆಲವುಕಡೆ (ಸ್ತಂಭದಲ್ಲಿ ಸ್ತಂಭತ್ವವಿದೆ ಎನ್ನುವಲ್ಲಿ) ಸಂಭಾವನಾ ಇರೋಣ, (ಸೂರ್ಯರಂಧ್ರದಲ್ಲಿ) ಸಂಭಾವನಾ ಇಲ್ಲದಿರೋಣ ಇವುಗಳಿಂದಾಗುವುದು. ಕೆಲವುಕಡೆ ಸತ್ಯವಾದ ಬೆಳ್ಳಿಯ ಜ್ಞಾನದಲ್ಲಿ ಪರೀಕ್ಷೆಯನ್ನಪೇಕ್ಷಿಸಿದರೂ ಪ್ರವೃತ್ತಿಯಿರೋಣ, ಶುಕ್ತಿರಜತಜ್ಞಾನದಲ್ಲಿ ಪ್ರವೃತ್ತಿಯಿಲ್ಲದಿರೋಣ ಇವುಗಳಿಂದಾಗುವುದು. ಕೆಲವುಕಡೆ ಪೂರ್ವದಲ್ಲಿಯೇ ವಿಪರೀತ ಸಂಸ್ಕಾರವಿರೋಣ, ಇಲ್ಲದಿರೋಣ ಇವುಗಳಿಂದಾಗುವುದು. ಅಂದರೆ ಪರ್ವತದ ತುದಿಯಲ್ಲಿದ್ದ ವೃಕ್ಷದ

ಪರಿಮಾಣಾದಿಜ್ಞಾನದಲ್ಲಿ ದೂರಸ್ಥತ್ವವೊದಲಾದ ದೋಷಗಳು ಪೂರ್ವದಲ್ಲಿಯೇ ನಿಶ್ಚಿತವಾದುದರಿಂದ ಆ ಜ್ಞಾನವು ಸ್ವಾರ್ಥವನ್ನು ನಿಶ್ಚಯಿಸಲಾರದು. ಸಮೀಪದಲ್ಲಿರತಕ್ಕ ವೃಕ್ಷದ ಪರಿಮಾಣವು ಪೂರ್ವದಲ್ಲಿ ದೋಷನಿಶ್ಚಯವಿಲ್ಲದಿರುವುದರಿಂದ ಸ್ವಾರ್ಥವನ್ನು ನಿಶ್ಚಯಿಸುವುದು.

ಅವುಗಳಲ್ಲಿ ಒಂದನೇದ್ದು (ಸ್ವಾರ್ಥನಿಶ್ಚಯರೂಪವಾದ ಜ್ಞಾನವು) ನಿಸ್ಸಂಶಯವಾಗಿ ಪ್ರವೃತ್ತಿಗೆ ಕಾರಣವು. ೨ನೇದ್ದು (ಸ್ವಾರ್ಥಾನಿಶ್ಚಾಯಕವು)ನಿಸ್ಸಂಶಯ ಪ್ರವೃತ್ತಿಗೆ ಕಾರಣವಲ್ಲವು. ಚಂದ್ರನು ಪ್ರಾದೇಶಪರಿಮಿತನಾಗಿರುತ್ತಾನೆ, ಇತ್ಯಾದಿಗಳನ್ನು ವಿಷಯೀಕರಿಸಿಕೊಂಡಿರುವುದು ದೂರಸ್ಥತ್ವ ವೊದಲಾದ ದೋಷಗಳಿಂದೊಡಗೂಡಿರುವ ಯಾವುದೊಂದು ಪ್ರತ್ಯಕ್ಷವೋ, ಅದು ಚಂದ್ರನ ಪರಿಮಾಣಾದಿಗಳಲ್ಲಿ ಅಯಥಾರ್ಥವಾದುದು, ಎಂದು ಸಾಕ್ಷಿಯು ನಿಶ್ಚಯಿಸಿದ್ದರಿಂದ ಒಂದೇ ಆಕಾರವನ್ನು ವಿಷಯೀಕರಿಸಿದರೂ ಸ್ವಾರ್ಥವನ್ನು ನಿಶ್ಚಯಿಸದೆ ಇದ್ದುದಾಗಿಯೇ ಬಾಧಿತಪ್ರಾಯವಾಗಿ ಹುಟ್ಟುವುದು. ಆಮೇಲೆ ಪ್ರವೃತ್ತಗಳಾಗುವ ಅನುಮಾನಾಗಮಗಳು ಪೂರ್ವದಲ್ಲಿಯೇ ಸಾಕ್ಷಿಯಿಂದ ಅವಕಾಶವನ್ನು ಹೊಂದಿದವುಗಳಾಗಿ 'ಚಂದ್ರನು ಪ್ರಾದೇಶಪರಿಮಿತನಲ್ಲ' ಇತ್ಯಾದಿಗಳನ್ನು ನಿಶ್ಚಯಿಸಿದವುಗಳಾಗಿ ಪ್ರತ್ಯಕ್ಷಕ್ಕೆ ಬಾಧಕಗಳಂತೆ ಹೇಳಲ್ಪಡುತ್ತವೆ. ಆ ಕಾರಣ ಇದು ಪ್ರತ್ಯಕ್ಷವು ಅನುಮಾನಾಗಮಗಳಿಂದ ಬಾಧಿಸ್ಪಡುತ್ತದೆ, ಎಂಬುವ ವಿಷಯದಲ್ಲಿ ದೃಷ್ಟಾಂತವಾಗಲಾರದು ॥ ೬೬ ॥

ಇದೇ ರೀತಿಯಾಗಿ ಜಗತ್ತಿನ ಪ್ರತ್ಯಕ್ಷವೂ ಸ್ವಾರ್ಥದಲ್ಲಿ ಪುರುಷನನ್ನು ಪ್ರವರ್ತಿಸಲಿಕ್ಕೆ ಸಮರ್ಥವಾಗದೆ ಇದ್ದರೆ ಯದ್ಯಪಿ ಅನುಮಾನಾಗಮಗಳು ಪ್ರತ್ಯಕ್ಷವನ್ನು ಬಾಧಿಸಲಾರವು. ಆದಾಗ್ಯೂ ಪ್ರತ್ಯಕ್ಷಪ್ರಮಾಣದಿಂದ ಅನುಮಾನಾಗಮಗಳು ಬಾಧಿಸಲ್ಪಡದಿದ್ದವುಗಳಾಗಿ ಜಗತ್ತು ಮಿಥ್ಯೆಯೆಂದು ನಿಶ್ಚಯಿಸುವುವು. ಎಂದರೆ — 'ಚಂದ್ರನು ಪ್ರಾದೇಶಪರಿಮಿತನಾಗಿರುತ್ತಾನೆ' ಇತ್ಯಾದಿ ಪ್ರತ್ಯಕ್ಷದಂತೆ ಈ ಜಗತ್ಪ್ರತ್ಯಕ್ಷದಲ್ಲಿಯೂ ಪ್ರತ್ಯಕ್ಷತ್ವರೂಪಧರ್ಮವಿರೋಣದಿಂದ ಸ್ವಾರ್ಥದಲ್ಲಿ ಪುರುಷನನ್ನು ಪ್ರವರ್ತಿಸಲಿಕ್ಕೆ ಅಸಮರ್ಥವೆಂದು ಕಲ್ಪಿಸುತ್ತೀರೋ, ಅಥವಾ ಪ್ರಮಾಣಾಂತರದಿಂದಲೋ, ೧ 'ಸತ್ಯವಾದುದೇ ಸ್ತಂಭವು' ಎಂದು ನಿಶ್ಚಾಯಕವಾದುದಾಗಿಯೇ ಸಾಕ್ಷಿಯಿಂದ ತಿಳಿದುಬರುವುದರಿಂದ ಅಪಟುವೆಂದು ಕಲ್ಪಿಸಕೂಡದು. ೨ ಪ್ರಮಾಣಾಂತರದಿಂದ ಎಂದೂ ಹೇಳಕೂಡದು. ಏಕೆಂದರೆ —

**ಮೂ ॥ ನ ಚ ಜಗತ್ಪ್ರತ್ಯಕ್ಷಸ್ಯಾಪಟುತ್ವೇ ಕಿಂಚಿನ್ಮಾನಂ ॥ ೬೭ ॥**

**ಅ ॥** ಜಗತ್ಪ್ರತ್ಯಕ್ಷಸ್ಯ=ಆಕಾಶವೊದಲಾದುದೂ, ಆತ್ಮಂಗೆ ಭೇದವೂ, ಸತ್ಯವೇ ಸಂ ಎಂದು ಗ್ರಹಿಸುವ ಪ್ರತ್ಯಕ್ಷಕ್ಕೆ, ಅಪಟುತ್ವೇ = ಸ್ವಾರ್ಥದಲ್ಲಿ ಪುರುಷರನ್ನು ಪ್ರವರ್ತಿಸಲಿಕ್ಕೆ ಅಸಮರ್ಥವಾದುದು, ಎಂಬುವ ವಿಷಯದಲ್ಲಿ, ಕಿಂಚಿತ್ = ಯಾವುದೊಂದು, ಮಾನಂ= ಪ್ರಮಾಣವು, ನ ಚ=ಇಲ್ಲವು ॥ ೬೭ ॥

(1) ಹೇಗೆ * ಮಾಯೆಯಿಂದ ಹುಟ್ಟಿದ ಐಂದ್ರಜಾಲಿಕನು ತೋರಿಸುವ ವಸ್ತುವು, *ಅವಿದ್ಯೆಯಿಂದ ಹುಟ್ಟಿದ ಮರೀಚಿಕೋದಕವು ಇವುಗಳ ಪ್ರತ್ಯಕ್ಷವು ಅಪಟುವಾಗಿ ಹುಟ್ಟುತ್ತದೋ, ಹಾಗೆಯೇ ಆಕಾಶ ವೊದಲಾದುದೂ ದುಃಖ ವೊದಲಾದುದೂ ಮಾಯಾ ಅವಿದ್ಯಾರೂಪವಾದ ಅಜ್ಞಾನದಿಂದ ಹುಟ್ಟಿರುತ್ತದೆ. ಕಾರಣ ಅವುಗಳ ಪ್ರತ್ಯಕ್ಷವೂ ಅಪಟುವೇ ಆಗಬೇಕು. (2) ಇದು

---

* ಅಜ್ಞಾನವು ೨ ವಿಧವು. ಮಾಯಾ, ಅವಿದ್ಯಾ ಎಂದು. ಪರರಿಗೆ ವ್ಯಾಮೋಹವನ್ನು ಹುಟ್ಟಿಸುವುದು ಮಾಯೆಯು. ಸ್ವಾಶ್ರಯವಾದುದಕ್ಕೆ ಭ್ರಮೆಯನ್ನು ಹುಟ್ಟಿಸುವುದು ಅವಿದ್ಯೆಯು.

ಸ್ತಂಭವು ಇತ್ಯಾದಿ ಜ್ಞಾನವು ಅಪಟುವಾದರೆ ಯಾರಿಗೂ ಎಲ್ಲಿಯೂ ಪ್ರವೃತ್ತಿಯಾಗದೆ ಹೋಗಬೇಕಾಗುವುದು, ಎಂದರೆ– ಯದ್ಯಪಿ ಸ್ತಂಭಾದಿಗಳು ಅಜ್ಞಾನದಿಂದ ಹುಟ್ಟಿದ್ದೆಂದನುಸಂಧಾನವಿಲ್ಲದಿರುವವರಿಗೆ ಆ ಪ್ರತ್ಯಕ್ಷವು ಪುರುಷರನ್ನು ಪ್ರವೃತ್ತಿಮಾಡಿಸಲಿಕ್ಕೆ ಸಮರ್ಥವಾಗುವುದು. ಆದಾಗ್ಯೂ ಅಜ್ಞಾನದಿಂದ ಹುಟ್ಟಿದ್ದೆಂದನುಸಂಧಾನವಿರುವವರಿಗೆ ಹುಟ್ಟತಕ್ಕ ಆ ಪ್ರತ್ಯಕ್ಷವು (ಅಪಟುವೇ) ಅಸಮರ್ಥವೇ ಆಗುವುದು. ಅಜ್ಞಾನಜನ್ಯವೆಂದನುಸಂಧಾನವಿರುವವರ ಪ್ರತ್ಯಕ್ಷವು 'ಮಿಥ್ಯಾತ್ವಾನುಮಾನ' 'ವಾಚಾರಂಭಣ' ಮೊದಲಾದ ಶ್ರುತಿಯು ಇವುಗಳಿಂದ ಬಾಧಿಸಲ್ಪಡುತ್ತಿರಲು ಅನುಸಂಧಾನವಿಲ್ಲದಿರುವವರ ಪ್ರತ್ಯಕ್ಷವೂ ಕೂಡ ಅನುಮಾನಾಗಮಗಳಿಂದ ಬಾಧಿಸಲ್ಪಡುವುದು. ಅಂಬರಾದಿವಿಷಯಕಪ್ರತ್ಯಕ್ಷಂ=ಆಕಾಶಾದಿಗಳನ್ನು ವಿಷಯೀಕರಿಸುವ ಪ್ರತ್ಯಕ್ಷವು, ಅನುಮಾನಾಗಮಬಾಧ್ಯಂ = ಅನುಮಾನಾಗಮಗಳಿಂದ ಬಾಧಿಸಲ್ಪಡುವುದು, ಮಾಯಾಕಲ್ಪಿತಾರ್ಥವಿಷಯಕಪ್ರತ್ಯಕ್ಷತ್ವಾತ್ = ಮಾಯೆಯಿಂದ ನಿರ್ಮಿತವಾದ ಅರ್ಥವನ್ನು ವಿಷಯೀಕರಿಸುವ ಪ್ರತ್ಯಕ್ಷವಾದುದರಿಂದ, ಐಂದ್ರಜಾಲಿಕಾರ್ಥ ಪ್ರತ್ಯಕ್ಷವತ್=ಐಂದ್ರಜಾಲಿಕನು ತೋರಿಸುವ ವಸ್ತುವಿನ ಪ್ರತ್ಯಕ್ಷದಂತೆಯೇ. (೨) ದುಃಖಾದಿಪ್ರತ್ಯಕ್ಷಂ=ದುಃಖ ಮೊದಲಾದವುಗಳ ಪ್ರತ್ಯಕ್ಷವು, ಅಪಟು=ಅಸಮರ್ಥವು, ಅವಿದ್ಯಕಾರ್ಥವಿಷಯಕಪ್ರತ್ಯಕ್ಷತ್ವಾತ್=ಅವಿದ್ಯೆಯಿಂದ ಹುಟ್ಟಿದ ವಸ್ತುವನ್ನು ವಿಷಯೀಕರಿಸುವ ಪ್ರತ್ಯಕ್ಷವಾದುದರಿಂದ, ಮರೀಚಿಕೋದಕಪ್ರತ್ಯಕ್ಷವತ್=ಮರೀಚಿಕೋದಕದ ಪ್ರತ್ಯಕ್ಷದಂತೆಯೇ, ಇಂತಹ ಅನುಮಾನಗಳು ಇದ್ದುದರಿಂದ 'ಜಗತ್ತಿನ ಪ್ರತ್ಯಕ್ಷವು ಅಪಟುವಾಗಿದೆ' ಎಂಬುವ ವಿಷಯದಲ್ಲಿ ಪ್ರಮಾಣವಿಲ್ಲವೆಂಬುವುದು ಹೇಗೆ ಕೂಡಬಹುದು, ಎಂದರೆ— ನೀವು ಹೇಳಿದ್ದು 'ಜಗತ್ತು ಅಜ್ಞಾನದಿಂದ ಹುಟ್ಟಿದ್ದು' ಎಂಬುವ ವಿಷಯದಲ್ಲಿ ಪ್ರಮಾಣವಿದ್ದರೆ ಆಗಬಹುದಿತ್ತು. ಅಂತಹ ಪ್ರಮಾಣವೇ ಇಲ್ಲವೆಂದೆನ್ನುತ್ತಾರೆ.

**ಮೂ || ನ ಚ ಜಗತೋಽಜ್ಞಾನಜನ್ಯತ್ವೇ ಕಿಂಚಿನ್ಮಾನಂ || ೬೮ ||**

**ಅ ||** ಜಗತಃ=ಪ್ರಪಂಚಕ್ಕೆ, ಅಜ್ಞಾನಜನ್ಯತ್ವೇ=ಅಜ್ಞಾನಜನ್ಯತ್ವವಿಷಯದಲ್ಲಿ, ಕಿಂಚಿತ್=ಯಾವುದೊಂದು, ಮಾನಂ=ಪ್ರಮಾಣವು, ನ ಚ=ಇಲ್ಲವು.

**ತಾ ||** 'ಜಗತ್ತು ಅಜ್ಞಾನದಿಂದ ಹುಟ್ಟಿದ್ದು' ಎಂಬುವ ವಿಷಯದಲ್ಲಿ ಯಾವ ಪ್ರಮಾಣವೂ ಇರುವುದಿಲ್ಲ. || ೬೮ ||

ಜಗತ್ತು ಅಜ್ಞಾನದಿಂದ ಹುಟ್ಟಿದ್ದು ಎಂಬುವಲ್ಲಿ ಪ್ರಮಾಣವಿಲ್ಲ. ಮತ್ತು 'ಪ್ರತ್ಯಕ್ಷ ಅನುಮಾನ ಆಗಮ ಸೂತ್ರರೂಪವಾದ ಪ್ರಮಾಣವಿರೋಧವೂ ಅದೆ' ಎಂದು ತೋರಿಸುತ್ತಾ ಆಕಾಶಾದಿಗಳು ಈಶ್ವರನ ಮಾಯೆಯಿಂದ ಹುಟ್ಟಿದ್ದಲ್ಲ, ಎಂಬುವಲ್ಲಿ ವ್ಯಾಪ್ತಿಪಕ್ಷ ಧರ್ಮತೆಗಳಿಂದೊಡಗೂಡಿದ ಅನುಮಾನವನ್ನು ಪುರಾಣವಾಕ್ಯದಿಂದಲೇ ತೋರಿಸುತ್ತಾರೆ.

**ಮೂ || ನ ಚ ಮಾಯಾವಿನಾ ಮಾಯಾ ದೃಶ್ಯತೇ ವಿಶ್ವಮೀಶ್ವರಃ |**
**ಸದಾ ಪಶ್ಯತಿ ತೇನೇದಂ ನ ಮಾಯೇತ್ಯವಧಾರ್ಯತಾಂ || ೬೯ ||**

**ಅ ||** ಚ = ಯಾವಕಾರಣದಿಂದ, ಮಾಯಾವಿನಾ = ಮಾಯೆಯುಳ್ಳ ಪುರುಷನಿಂದ, ಮಾಯಾ=ಮಾಯಿಕವಾದ ವಸ್ತುವು, ನ ಚ ದೃಶ್ಯತೇ=ಕಾಣಲ್ಪಡುವುದೇ ಇಲ್ಲವೋ, (ಇದರಿಂದ ವ್ಯತಿರೇಕವ್ಯಾಪ್ತಿಯನ್ನು ತೋರಿಸಿದಂತೆ ಆಯಿತು.) ಈಶ್ವರಃ = ಶ್ರೀ ಹರಿಯು, ಸದಾ=ಯಾವಾಗಲೂ, ವಿಶ್ವಂ=ಜಗತ್ತನ್ನು, ಪಶ್ಯತಿ=ನೋಡುತ್ತಾನೆ. (ಇದರಿಂದ ಹೇತುವು

ಪಕ್ಷದಲ್ಲಿದೆ, ಎಂದು ತೋರಿಸಿದಂತೆ ಆಯಿತು.) ತೇನ=ಆದುದರಿಂದ, ಇದಂ=ಈ ಜಗತ್ತು, ಮಾಯಾ=ಮಾಯಿಕವಾದುದು, ನ=ಅಲ್ಲ, ಇತಿ=ಹೀಗೆ, ಅವಧಾರ್ಯತಾಂ=ನಿಶ್ಚಯಿಸಲ್ಪಡಲಿ.

ಟೀ || (1) ಅಂಬರಾದಿಕಂ=ಆಕಾಶವೊದಲಾದ ಜಗತ್ತು, ನ ಈಶ್ವರಮಾಯಾಜನ್ಯಂ=ಈಶ್ವರನ ಮಾಯೆಯಿಂದ ಹುಟ್ಟಿದ್ದಲ್ಲ, ತೇನ ದೃಶ್ಯಮಾನತ್ವಾತ್=ಈಶ್ವರನಿಂದ ಕಾಣಲ್ಪಡುವುದರಿಂದ, ಯತ್ ಯನ್ಮಾಯಾಜನ್ಯಂ=ಯಾವುದು ಯಾರ ಮಾಯೆಯಿಂದ ಹುಟ್ಟಿದ್ದೋ, ತತ್ ತೇನ ನ ದೃಶ್ಯತೇ=ಅದು ಆತನಿಂದ ಕಾಣಲ್ಪಡುವುದಿಲ್ಲ, ಯಥಾ ಐಂದ್ರಜಾಲಿಕಂ ವಸ್ತು ಮಾಯಾವಿನಾ=ಹೇಗೆ ಐಂದ್ರಜಾಲಿಕವಾದ ವಸ್ತುವು ಮಾಯೆಯುಳ್ಳವನಿಂದ ಕಾಣಲ್ಪಡುವುದಿಲ್ಲವೋ ಹಾಗೆಯೇ, (2) ಯಾವುದು ಯಾರಿಂದ ಕಾಣಲ್ಪಡುತ್ತದೋ ಅದು ಅವನ ಮಾಯೆಯಿಂದ ಹುಟ್ಟಿದ್ದಲ್ಲ, ಕುಲಾಲನಿಂದ ಕಾಣಲ್ಪಡತಕ್ಕ ಘಟಾದಿಗಳಂತೆಯೇ, ಹೀಗೆ ಋಜುವಾದ ಅನ್ವಯವು ಕೂಡುತ್ತಿರಲು ವಕ್ರವಾದ ವ್ಯತಿರೇಕ ವ್ಯಾಪ್ತಿಯನ್ನು ಏಕೆ ಅಂಗೀಕರಿಸಿದರು, ಎಂದರೆ ವಿಪಕ್ಷದಲ್ಲಿ ಹೇತುಸಾಧ್ಯಗಳು ಎರಡೂ ಇಲ್ಲವೆಂದು ಹೇಳಿದ್ದರಿಂದ ವ್ಯಾಪ್ತಿಯನ್ನೂ ವ್ಯಭಿಚಾರವಿಲ್ಲವೆಂಬುವುದನ್ನೂ ಎರಡನ್ನೂ ಸುಲಭದಿಂದ ತೋರಿಸುವುದಕ್ಕಾಗಿ ಅಂಗೀಕರಿಸಿರುವರು. (3) ಮಾಯಾವಿಯು ಐಂದ್ರಜಾಲಿಕವಸ್ತುವನ್ನು ಸಾಕ್ಷಾತ್ಕರಿಸಿಕೊಳ್ಳದೆ ಇದ್ದರೂ ಪರಮೇಶ್ವರನು ಸಾಕ್ಷಾತ್ಕರಿಸಿಕೊಳ್ಳುವ ಆಕಾಶಾದಿ ಜಗತ್ತು ಈಶ್ವರನ ಮಾಯಿಕವೆಂದು ಏಕೆ ಆಗಬಾರದು? ಅಂತೂ ವಿಪಕ್ಷದಲ್ಲಿ ಬಾಧಕ ಇಲ್ಲದಿರುವುದರಿಂದ 'ಜಗತ್ತು ಮಾಯಿಕವಲ್ಲ' ಎಂಬುವ ಅವಧಾರಣವು ಕೂಡಲಾರದು. ಎಂದರೆ ಆಕಾಶಾದಿಗಳಿಗೆ ಕಾರಣೀಭೂತವಾದ ಈಶ್ವರನಲ್ಲಿರುವ ಮಾಯೆಯು ಲೋಕದಲ್ಲಿ ಕಾಣುವ ಮಾಯಾವಿಯಲ್ಲಿರುವ ಮಾಯೆಗೆ ಸದೃಶವೆಂದಂಗೀಕರಿಸಿದರೆ ಮಾಯಾವಿಯಿಂದ ಮಾಡಲ್ಪಡತಕ್ಕ ಮಾಯಿಕವಾದ ವಸ್ತುವಿನಲ್ಲಿ ಕಾಣದಿರುವ ಮಾಯಿಕಪುರುಷನು ಕಾಣುತ್ತಾನೆಂಬುವುದನ್ನು ಜಗತ್ತಿನಲ್ಲಿ ಕಲ್ಪಿಸಬೇಕಾಗುವುದು. ಲೋಕದಲ್ಲಿರುವ ಮಾಯೆಯಿಂದ ವಿಲಕ್ಷಣವೆಂದಂಗೀಕರಿಸಿದರೆ ಜಗತ್ತು ಅವಿದ್ಯೆಯಿಂದ ಪರಿಕಲ್ಪಿತವೆಂದಾಗಬೇಕಾಗುವುದು. ಅಂತೂ ಆಕಾಶಾದಿ ಜಗತ್ತು ಮಾಯಿಕವು, ದುಃಖಾದಿಗಳು ಅವಿದ್ಯಾಪರಿಕಲ್ಪಿತವು, ಎಂಬೀ ವಿಭಾಗವು ಕೂಡದೆ ಹೋಗಬೇಕಾಗುವುದು. (4) ಮಾಯೆಯು 'ಈ ಎರಡು ಪ್ರಕಾರವೂ ಅಲ್ಲ' ಎಂದಂಗೀಕರಿಸಿದರೆ ಈಶ್ವರನ ಇಚ್ಛೆಯು ನಿಮಿತ್ತಕಾರಣವು, ಏತದ್ರೂಪವಾದ ಈಶ್ವರನ ಮಾಯಾಮಯವೆಂದು ಜಗತ್ತನ್ನು ಅಂಗೀಕರಿಸುವುದರಿಂದ ಜಗತ್ತು ಸತ್ಯವೆಂಬುದಕ್ಕೆ ಬಾಧಕವಿಲ್ಲ. ಆದುದರಿಂದಲೂ ಈಶ್ವರನಿಂದ ಕಾಣಲ್ಪಡುವ ಈ ಆಕಾಶಾದಿ ಪ್ರಪಂಚವು ಈಶ್ವರನ ಮಾಯೆಯಿಂದ ಹುಟ್ಟಿದ್ದೆಂದು ಹೇಳಿದರೆ ಹಿಂದೆ ಹೇಳಿದ ಬಾಧಕವಿದ್ದುದರಿಂದ 'ನ ಮಾಯೇತ್ಯವಧಾರ್ಯತಾಂ' ಎನ್ನುವ ಅವಧಾರಣೆಯು ಯುಕ್ತವೇ ಆಗುವುದು. ಈ ಅಭಿಪ್ರಾಯದಿಂದಲೇ 'ಅವಧಾರ್ಯತಾಂ' ಎಂದು ಹೇಳಿರುವರು || ೬೯ ||

ಈ ಪ್ರಕಾರ 'ಜಗತ್ತು ಮಾಯಿಕವಲ್ಲ' ಎಂಬುವ ವಿಷಯದಲ್ಲಿ ಪ್ರಮಾಣವನ್ನು ಹೇಳಿ ದುಃಖಾದಿಗಳು ಅವಿದ್ಯಕಗಳಲ್ಲ, ಎಂಬುವಲ್ಲಿಯೂ ಪ್ರಮಾಣವನ್ನು ಹೇಳಲಿಚ್ಛೈಸಿದವರಾಗಿ ಆ ಪ್ರಮಾಣವು 'ಆಕಾಶಾದಿ ಜಗತ್ತು ಮಾಯಿಕವಲ್ಲ'ವೆಂಬುವಲ್ಲಿಯೂ ಪ್ರವೃತ್ತವಾಗುವುದರಿಂದ, ಜಗತ್ತು ಮಾಯಿಕವಲ್ಲ, ದುಃಖಾದಿಗಳು ಅವಿದ್ಯಕಗಳಲ್ಲ, ಎಂಬೀ ಎರಡರಲ್ಲಿಯೂ ಸಾಧಾರಣವಾದ ಅನುಮಾನವನ್ನು ನಿರೂಪಿಸುತ್ತಾರೆ.

**ಮೂ || ಅಪರೋಕ್ಷದೃಶೋ ಮಿಥ್ಯಾದರ್ಶನಂ ನ ಕ್ವಚಿದ್ಭವೇತ್ | ಸರ್ವಾಪರೋಕ್ಷವಿದ್ವಿಷ್ಣುರ್ವಿಶ್ವದೃಕ್ ತನ್ನ ತನ್ಮೃಷಾ || ಇತಿ ಬ್ರಹ್ಮಾಂಡೇ ||೭೦||**

ಅ || ಅಪರೋಕ್ಷದೃಶಃ=ಅಧಿಷ್ಠಾನವನ್ನು ಪ್ರತ್ಯಕ್ಷವಾಗಿ ನೋಡತಕ್ಕವನಿಗೆ, ಮಿಥ್ಯಾದರ್ಶನಂ=ಅಲ್ಲಿ ಆರೋಪಿತವಾದ ಮಿಥ್ಯಾಭೂತವಾದ ವಸ್ತುವಿನ ನೋಡುವಿಕೆಯು, ಕ್ವಚಿತ್=ಎಲ್ಲಿಯೂ, ನ ಭವೇತ್=ಆಗಲಾರದು. (ಅಧಿಷ್ಠಾನದ, ಪ್ರತ್ಯಕ್ಷಜ್ಞಾನವುಳ್ಳವನಿಂದ ಕಾಣಲ್ಪಡತಕ್ಕುದು, ಅಧಿಷ್ಠಾನದಲ್ಲಿ ಆರೋಪಿಸಲ್ಪಡಲಿಕ್ಕಿಲ್ಲ.) (ಇದರಿಂದ ಅನ್ವಯವ್ಯಾಪ್ತಿಯನ್ನು ತೋರಿಸಿದಂತೆ ಆಯಿತು. ಅಥವಾ ಯಾವುದು ಮಿಥ್ಯೆಯಾದುದೋ ಅದರ ನೋಡುವಿಕೆಯು ಅಧಿಷ್ಠಾನವನ್ನು ಪ್ರತ್ಯಕ್ಷೀಕರಿಸಿಕೊಂಡವನಿಗೆ ಆಗಲಾರದು, ಎಂದು ವ್ಯತಿರೇಕವ್ಯಾಪ್ತಿಯನ್ನು ತೋರಿಸಿದಂತೆಯೇ ಆಯಿತು.) ಸರ್ವಾಪರೋಕ್ಷವಿತ್=ಸರ್ವಪ್ರಕಾರದಿಂದಲೂ ಪ್ರತ್ಯಕ್ಷವಾಗಿಯೇ ಅಧಿಷ್ಠಾನಾಭಿಮತವಾದುದನ್ನು ತಿಳಿದ, ವಿಷ್ಣುಃ=ಶ್ರೀಪರಮೇಶ್ವರನು, ವಿಶ್ವದೃಕ್=ಸರ್ವಜಗತ್ತನ್ನು ಪ್ರತ್ಯಕ್ಷೀಕರಿಸಿಕೊಳ್ಳುವನು, ತತ್=ಆದುದರಿಂದ, ತತ್=ಆಕಾಶಾದಿಜಗತ್ತು, ಮಾಯಿಕವಾದುದಾಗಿಯೂ, ದುಃಖಾದಿಗಳು ಅವಿದ್ಯಾಪರಿಕಲ್ಪಿತಗಳಾದುದಾಗಿಯೂ, ಮೃಷಾ=ಮಿಥ್ಯೆಯಾದುದು, ನ=ಅಲ್ಲ, ಇತಿ=ಹೀಗೆ, ಬ್ರಹ್ಮಾಂಡೇ=ಬ್ರಹ್ಮಾಂಡಪುರಾಣದಲ್ಲಿ ಹೇಳಿಯದೆ.

ತಾ || ವಿವಾದಪದಂ=ವಿವಾದಕ್ಕೆ ವಿಷಯವಾದ ಆಕಾಶಾದಿ ಜಗತ್ತು ದುಃಖವೊದಲಾದುದೂ ಕೂಡ, ನಾರೋಪಿತಂ=ಆರೋಪಿಸಲ್ಪಟ್ಟದ್ದಲ್ಲ, ಸರ್ವಾತ್ಮನಾ ಅಧಿಷ್ಠಾನಾಪರೋಕ್ಷಜ್ಞಾನವತಾ ದೃಶ್ಯಮಾನತ್ವಾತ್ = ಸರ್ವಪ್ರಕಾರದಿಂದಲೂ ಅಧಿಷ್ಠಾನವನ್ನು ಪ್ರತ್ಯಕ್ಷೀಕರಿಸಿಕೊಂಡಿರುವವನಿಂದ ಕಾಣಲ್ಪಡುವುದರಿಂದ, ಯದೇವಂ ತದೇವಂ=ಯಾವುದು ಪ್ರತ್ಯಕ್ಷೀಕರಿಸಿಕೊಂಡಿರುವವನಿಂದ ಕಾಣಲ್ಪಡತಕ್ಕುದೋ, ಅದು ಆರೋಪಿತವಲ್ಲವು, ಯಥಾ ಉಕ್ತವಿಧಯಾ ಸ್ತಂಭವಿದಾ ದೃಶ್ಯಮಾನೋ ನ ಕುಂಭಸ್ತತ್ರಾರೋಪಿತಃ=ಹೇಗೆಂದರೆ — ಹಿಂದೆ ಹೇಳಿದಪ್ರಕಾರ ಸ್ತಂಭವೆಂದು ತಿಳಿದವನಿಂದ ಕಾಣಲ್ಪಡತಕ್ಕ ಕುಂಭವು ಸ್ತಂಭದಲ್ಲಿ ಆರೋಪಿಸಲ್ಪಟ್ಟದ್ದಲ್ಲ. ಅಥವಾ ಯತ್ ಏವಂ ನ ತತ್ ಏವಂ ನ=ಯಾವುದು ಆರೋಪಿತವಲ್ಲವೆಂದಲ್ಲವೋ, ಆರೋಪಿತವೋ, ಅದು ಅಧಿಷ್ಠಾನವಿಷಯಕ ಯಥಾರ್ಥಜ್ಞಾನವುಳ್ಳವನಿಂದ ಕಾಣಲ್ಪಡತಕ್ಕುದಲ್ಲ, ಯಥಾ ಶುಕ್ತಿಕಾರೋಪಿತರಜತಂ ಉಕ್ತರೀತ್ಯಾ ಶುಕ್ತಿದರ್ಶಿನಾ ನ ದೃಶ್ಯತೇ=ಹೇಗೆಂದರೆ — ಚಿಪ್ಪಿಯಲ್ಲಿ ಆರೋಪಿಸಲ್ಪಟ್ಟಬೆಳ್ಳಿಯು ಹಿಂದೆ ಹೇಳಿದ ಪ್ರಕಾರ ಚಿಪ್ಪುವೆಂದು ತಿಳಿದವನಿಂದ ಕಾಣಲ್ಪಡುವುದಿಲ್ಲ. (3) ಅಧಿಷ್ಠಾನದ ಅಪರೋಕ್ಷಜ್ಞಾನವಿದ್ದವನಿಗೂ ಆರೋಪಿತವಾದ ವಸ್ತುವು ತೋರುವುದೆಂದಂಗೀಕರಿಸಿದರೆ, ಅಂದರೆ ಅಧಿಷ್ಠಾನ ಜ್ಞಾನವಿದ್ದರೂ ಭ್ರಾಂತಿಯಿರುವುದಾದರೆ, ಸಂಸಾರಬಾಧನಿರಾಸಕ್ಕಾಗಿ ಪರಬ್ರಹ್ಮನಜ್ಞಾನವನ್ನು ಸಂಪಾದಿಸುವ ಆಯಾಸವೇ ವ್ಯರ್ಥವಾಗಬೇಕಾಗುವುದು. (4) ಎರಡು ಸ್ಮೃತಿಗಳನ್ನು ತೋರಿಸಿದ್ದರಿಂದ ಜಗನ್ಮಿಥ್ಯಾತ್ವವಿಷಯದಲ್ಲಿ ಆಗಮವಿರೋಧವನ್ನು ಸೂಚಿಸಿದರು ॥ ೨೦ ॥

ಸ್ಪಷ್ಟವಾಗಿಯೂ ಜಗತ್ತಿಗೆ ಸತ್ಯತ್ವವನ್ನು ಪ್ರತಿಪಾದಿಸುವ ಆಗಮ ವಿರೋಧವನ್ನು ತೋರಿಸುತ್ತಾ 'ವಿಶ್ವಂ ಸತ್ಯಂ' 'ಯಚ್ಚಿಕೇತ ಸತ್ಯಮಿತ್' 'ದ್ವಾ ಸುಪರ್ಣಾ' ಇತ್ಯಾದ್ಯಾಗಮವನ್ನುದಾಹರಿಸುವ ವಿಷಯದಲ್ಲಿಯೂ, ಆ ಆಗಮವು ಜಗತ್ತು ಸತ್ಯವೆಂದು ಸಾಧಿಸುವುದು ಎಂದುಪಪಾದಿಸುವ ವಿಷಯದಲ್ಲಿಯೂ, ಮಿಥ್ಯಾತ್ವಸಾಧಕವಾದ ಆಗಮಕ್ಕಿಂತ ಪ್ರಬಲವಾಗಿದೆ ಎಂದುಪಪಾದಿಸುವ ವಿಷಯದಲ್ಲಿಯೂ, ಪರೋಕ್ಷವಾದ ಅರ್ಥಾಂತರಪರತ್ವವನ್ನು ಪರಿಹರಿಸುವ ವಿಷಯದಲ್ಲಿಯೂ, ಆಯಾಸವನ್ನು ನಿರಾಸಮಾಡುವುದಕ್ಕಾಗಿ ಆಗಮೋದಾಹರಣಾದಿಗಳಿಗೆ ಅನುಗುಣವಾದ ಸ್ಮೃತಿಯನ್ನುದಾಹರಿಸುತ್ತಾರೆ.

ಮೂ ॥ ಈಶೋಽನೀಶೋ ಜಗನ್ಮಿಥ್ಯಾ ನ ಪೂಜ್ಯೋ ಗುರುರಿತ್ಯಪಿ । ಏಕ ಆತ್ಮಾ ಪರಬ್ರಹ್ಮಭಾವೋ ಮುಕ್ತಿರಿತಿ ಹ್ಯಪಿ ॥ ಏವಮಾದಿ ವಿರುದ್ಧಾನಿ ವಚನಾನ್ಯಥ ಯುಕ್ತಯಃ । ಪ್ರಮಾಣೈರ್ಬಹುಭಿರ್ಜ್ಞೇಯಾ ಆಭಾಸಾ ಇತಿ ವೈದಿಕೈಃ ॥ ೬೧ ॥

ಅ ॥ ಈಶಃ=ಶ್ರೀ ಹರಿಯು, ಅನೀಶಃ ಇತಿ=ನಿಯಾಮಕನಲ್ಲವೆಂದೂ, ಜಗತ್=ಪ್ರಪಂಚವು, ಮಿಥ್ಯಾ ಇತಿ=ಅನಿರ್ವಚನೀಯವೆಂದೂ, ಗುರುಃ=ಜ್ಞಾನೋಪದೇಶಕರು, ಪೂಜ್ಯಃ ನ ಇತ್ಯಪಿ=ಪೂಜ್ಯರಲ್ಲರೆಂದೂ, ಆತ್ಮಾ ಏಕ ಇತಿ=ಆತ್ಮನು ಒಬ್ಬನೇ ಎಂದೂ, ಪರಬ್ರಹ್ಮಭಾವಃ=ಪರಬ್ರಹ್ಮನಿಂದೈಕ್ಯವೇ, ಮುಕ್ತಿರಿತಿ ಅಪಿ=ಮೋಕ್ಷವೆಂದೂ, ಹಿ=ಯಾವಕಾರಣದಿಂದ, ಇತಿ=ಈ ಪ್ರಕಾರ ಪ್ರತಿಪಾದಿಸುವ, ಏವಮಾದಿ=ಇದೇ ಮೊದಲಾದ, ವಚನಾನಿ=ವಾಕ್ಯಗಳು, ಯುಕ್ತಯಃ ಅಥ=ಯುಕ್ತಿಗಳೂ ಕೂಡ, ಬಹುಭಿಃ=ಅನೇಕಗಳಾದ, ವೈದಿಕೈಃ=ವೇದ ಸಂಬಂಧಿಗಳಾದ, ಪ್ರಮಾಣೈಃ=ಪ್ರಮಾಣಗಳಿಂದ, ವಿರುದ್ಧಾನಿ=ವಿರೋಧವುಳ್ಳವುಗಳು, (ಆದುದರಿಂದ) ಆಭಾಸಾ ಇತಿ=ದುಷ್ಟಗಳೆಂದು, ಅಪ್ರಮಾಣಗಳೆಂದು, ಜ್ಞೇಯಾಃ=ತಿಳಿಯಲ್ಪಡಬೇಕು.

ತಾ ॥ (1) ಜಗತ್ತಿಗೆ ಮಿಥ್ಯಾತ್ವವನ್ನು ಪ್ರತಿಪಾದಿಸುವ ವಚನಗಳಿಗಿಂತ ವಿರೋಧಿಗಳಾದ ಅಂದರೆ ಜಗತ್ತಿಗೆ ಸತ್ಯತ್ವವನ್ನು ಪ್ರತಿಪಾದಿಸುವ ಪ್ರಮಾಣಗಳು ಪ್ರಬಲಗಳಾಗಿವೆ, ನಿರವಕಾಶಗಳೂ ಆಗಿವೆ ಎಂದು ಸಮರ್ಥಿಸಲಿಕ್ಕೆ 'ಬಹುಭಿಃ' ಎಂದು ಹೇಳಿರುವರು. (2) ವೇದ ವಿರುದ್ಧಗಳಾದ ವಚನಗಳಿಗಿಂತಲೂ ಯುಕ್ತಿಗಳಿಗಿಂತಲೂ ಪ್ರಬಲವಾಗಿದೆ, ಎಂದುಪಪಾದಿಸಲಿಕ್ಕೆ 'ಬಹುಭಿಃ ವೈದಿಕೈಃ' ಎಂದೂ ಹೇಳಿರುವರು ॥ ೬೧ ॥

ಪ್ರಮಾಣವಿರುದ್ಧಗಳಾದ ಯುಕ್ತಿಗಳು ಬಾಧಿತಗಳಾದುದರಿಂದಲೂ ವ್ಯಾಪ್ತಿರಹಿತಗಳಾದುದರಿಂದಲೂ ಆಭಾಸಗಳಾದುದರಿಂದಲೂ ಹೇಗೆ ಸರ್ವಥಾ ಹೇಯಗಳೋ, ಹಾಗೆಯೇ ವಚನಗಳನ್ನೂ ಸರ್ವಥಾ ಪರಿತ್ಯಾಗ ಮಾಡಬೇಕೋ, ಎಂದಪೇಕ್ಷಿಸಿದರೆ ಸಮಾಧಾನ ಹೇಳುವರು —

ಮೂ ॥ ವೇದವೇದಾನುಸಾರೇಷು ವಿರೋಧೇಽನ್ಯಾರ್ಥಕಲ್ಪನಾ । ಇತರಾಣಿ ವಿರುದ್ಧಾನಿ ಪ್ರಲಂಭಭ್ರಮಜಾನ್ಯಪಿ ॥ ಇತಿ ವ್ಯಾಸಸ್ಮೃತಿಃ ॥ ೬೨ ॥

ಅ ॥ ವೇದವೇದಾನುಸಾರೇಷು=ಋಗಾದಿ ವೇದಗಳೂ ಅವುಗಳನ್ನನುಸರಿಸುವ ಗ್ರಂಥಗಳೂ ಇವುಗಳಲ್ಲಿ, ವಿರೋಧೇ=ಪ್ರಬಲಪ್ರಮಾಣ ವಿರೋಧವಿರುತ್ತಿರಲು, ಅನ್ಯಾರ್ಥಕಲ್ಪನಾ=ಅವುಗಳಿಗೆ ವಿರುದ್ಧವಾದ ಅರ್ಥವನ್ನು ಬಿಟ್ಟು ಅವಿರುದ್ಧವಾದ ಅರ್ಥವನ್ನು ಕಲ್ಪಿಸಬೇಕು. (ಸರ್ವಥಾ ಹೇಯಗಳಲ್ಲವು.) ಇತರಾಣಿ=ವೇದ ತದನುಸಾರಿಗ್ರಂಥಗಳಿಂದ ಬೇರೆಯಾದವುಗಳು, ವಿರುದ್ಧಾನಿ=ಪ್ರಮಾಣವಿರುದ್ಧಗಳಾದರೆ, ಪ್ರಲಂಭಭ್ರಮಜಾನ್ಯಪಿ=ಪರರನ್ನು ವಂಚಿಸಬೇಕೆಂಬ ಇಚ್ಛೆಯಿಂದಲೋ, ಭ್ರಾಂತಿಯಿಂದಲೋ ಹುಟ್ಟಿದವುಗಳು. (ವಂಚನೆ ಅಥವಾ ಭ್ರಾಂತಿ ಇವುಗಳಲ್ಲೊಂದರಿಂದ ಅಂತಹ ಗ್ರಂಥಗಳು ಹುಟ್ಟಿವೆಯೆಂದು ನಿಶ್ಚಯಿಸಿ ಸರ್ವಥಾ ಅಪ್ರಮಾಣಗಳೆಂದೇ ತಿಳಿಯಬೇಕು.) (ಇವುಗಳಲ್ಲಿ ಒಂದು ಎಂದು ನಿಶ್ಚಯವಿದ್ದುದರಿಂದ ಸರ್ವಥಾ ಅಪ್ರಮಾಣಗಳೆಂದೇ ತಿಳಿಯಬೇಕು) ಇತಿ=ಹೀಗೆ, ವ್ಯಾಸಸ್ಮೃತಿಃ=ವ್ಯಾಸಸ್ಮೃತಿಯು ಇದೆ.

ತಾ ॥ (1) ಶಬ್ದವು ಜ್ಞಾನಕ್ಕೆ ಮುಖ್ಯಕಾರಣವು. ಶಬ್ದದಿಂದ ಹುಟ್ಟಿದ ಜ್ಞಾನವಪ್ರಾಮಾಣ್ಯವು ಸ್ವತಏವ, ಅಂದರೆ — ಜ್ಞಾನಕ್ಕೆ ಮುಖ್ಯಕಾರಣವು ಯಾವುದೋ, ಕೇವಲ ಅದರ ಅಧೀನವು.

ಆಪ್ತೋಕ್ತತ್ವ ಮೊದಲಾದ ಗುಣಾಧೀನವಲ್ಲವು. ಆದಕಾರಣ ಇತರ ಪ್ರಮಾಣಗಳಿಗೆ ಬೇರೆ ಅರ್ಥವನ್ನೇ ಕಲ್ಪಿಸಬೇಕು. ಎಂದರೆ— ನೀವು ಹೇಳಿದ್ದೇನೋ ಯುಕ್ತವೇ, ಆದಾಗ್ಯೂ ಸ್ವತಏವ ಪ್ರಾಮಾಣ್ಯ ಹುಟ್ಟುವುದೆನ್ನುವುದು ಸಾಮಾನ್ಯವಾದುದರಿಂದ ದೋಷವಿದ್ದರೆ ಅಪ್ರಾಮಾಣ್ಯವೂ ಹುಟ್ಟುವುದು. ಪ್ರಕೃತ ವೇದ ತದನುಸಾರಿಗ್ರಂಥಗಳಿಂದ ಬೇರೆಯಾದ ವಾಕ್ಯಗಳು ಭ್ರಾಂತ್ಯಾದಿ ಮೂಲಕಗಳು. ಕಾರಣ ಅಪ್ರಮಾಣಗಳೇ. ಆದುದರಿಂದಲೇ ಈ ಅರ್ಥವನ್ನು ಉಪಪಾದಿಸ ಲಿಕ್ಕೇನೇ 'ಇತರಾಣಿ ಅಪ್ರಮಾಣಾನಿ' ಎಂದು ಹೇಳದೆ ಪ್ರಲಂಭಭ್ರಮಜಾನಿ ಎಂದು ಹೇಳಿರು ವರು. (2) 'ಬಲವತ್ಪ್ರಮಾಣತಶ್ಚೈವ ಜ್ಞೇಯಾ ದೋಷಾ ನ ಚಾನ್ಯಥಾ' । ಪ್ರಬಲವಾದ ಪ್ರಮಾಣವಿರೋಧದಿಂದಲೇ ದೋಷಗಳನ್ನು ತಿಳಿಯಬೇಕು. ಬೇರೆ ರೀತಿಯಾಗಿ ಅಲ್ಲ. ಹೀಗೆ ಬ್ರಹ್ಮತರ್ಕದ ವಚನಾನುಸಾರವಾಗಿ ಪ್ರಬಲಪ್ರಮಾಣವಿರೋಧದಿಂದ ವಿಪ್ರಲಂಭಾದಿಮೂಲಕ ವೆಂದನುಮೇಯಿಸಬೇಕು. ಆದುದರಿಂದಲೇ 'ವಿರುದ್ಧಾನಿ' ಎಂದು ಹೇಳಿರುವರು. (3) ಹಾಗಾದರೆ ವೇದಾದಿಗಳಲ್ಲಿಯೂ ವಿಪ್ರಲಂಭಮೂಲಕತ್ವವನ್ನು (ವಿಪ್ರಲಂಭಮೂಲಕಗಳೆಂದಾಗಲೀ, ಅಪ್ರಮಾಣಗಳೆಂದಾಗಲೀ) ಕಲ್ಪಿಸಬೇಕಾಗುವುದು. ಎಂದರೆ— ಅದನ್ನು ಬಾಧಿಸತಕ್ಕ ಅಪೌರುಷೇಯತ್ವಾದಿಗಳು ಇಲ್ಲವಾದರೆ ವೇದ ವೇದಾನುಸಾರಿಗ್ರಂಥಗಳಲ್ಲಿ ವಿಪ್ರಲಂಭಾದಿ ಮೂಲ ಕತ್ವವನ್ನು ಕಲ್ಪಿಸಬಹುದಿತ್ತು. ಅಪೌರುಷೇಯತ್ವ ಮೊದಲಾದ ಬಾಧಕಗಳನ್ನು ಸೂಚಿಸಲಿಕ್ಕೇನೇ 'ವೇದವೇದಾನುಸಾರೇಷು' ಎಂದು ಹೇಳಿರುವರು. (4) ಇತರಾರ್ಥಗಳನ್ನು ಕಲ್ಪಿಸತಕ್ಕ ರೀತಿ ಗಳನ್ನು ಸ್ವಲ್ಪವಾಗಿಯೇ 'ವಾಚಾರಂಭಣಂ' ಇತ್ಯಾದಿಗ್ರಂಥಗಳಿಂದ ತೋರಿಸುವರು. ॥ ೭೨ ॥

ಈ ಪ್ರಕಾರ ಮಿಥ್ಯಾತ್ವಸಾಧಕಗಳಾದ ಅನುಮಾನಾಗಮಗಳಿಗೆ ಸಾಮಾನ್ಯಾಕಾರವಾಗಿ ಆಗಮವಿರೋಧವನ್ನುಪಪಾದಿಸಿ ವಿಶೇಷಾಕಾರವಾಗಿಯೂ ಆಗಮವಿರೋಧವನ್ನು ತೋರಿಸುವರು.

**ಮೂ ॥ ನಾಸತೋಽದೃಷ್ಟತ್ವಾತ್ । ನಾಭಾವ ಉಪಲಬ್ಧೇಃ । ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ।** [ಬ್ರ. ಸೂ. ಅಧ್ಯಾ. ೨. ಪಾ. ೨. ಸೂ. ೨೬-೨೮-೨೯.]
**ಇ(ದಿ)ತ್ಯಾದಿ ಭಗವದ್ವಚನೇನಾಪಿ ನಿರಸ್ತಾಃ ॥ ೭೩ ॥**

ತಾ ॥ (1) ಆದಿಪದದಿಂದ 'ಪೃಥಗುಪದೇಶಾತ್' 'ಅಂಶೋ ನಾನಾವ್ಯಪದೇಶಾತ್' ಇದು ಮೊದಲಾದ ಆತ್ಮರಿಗೆ ಭೇದವನ್ನು ಪ್ರತಿಪಾದಿಸುವ ಸೂತ್ರವನ್ನು ಸಂಗ್ರಹಿಸಬೇಕು. (2) ಯದ್ಯಪಿ ಹಿಂದೆ ಹೇಳಿರುವುದೂ ಭಗವದ್ವಚನಗಳೇವೆ. ಆದಾಗ್ಯೂ ಈ ಸೂತ್ರಗಳು ವಿಶೇಷತಃ ವಿರೋಧಿಗಳಾಗಿವೆ ಮತ್ತು ಸರ್ವಶಾಸ್ತ್ರಾರ್ಥ ನಿರ್ಣಾಯಕಗಳಾಗಿವೆ. ಕಾರಣ ಅತಿಪ್ರಬಲಗಳು, ಎಂದು ಸೂಚಿಸಲಿಕ್ಕಾಗಿ 'ಭಗವದ್ವಚನೇನಾಪಿ'=ಪೂಜ್ಯರಾದ ವೇದವ್ಯಾಸರ ಸೂತ್ರರೂಪವಾದ ಮಾತಿನಿಂದಲೂ ಕೂಡ, ನಿರಸ್ತಾಃ = (ಜಗತ್ತಿಗೆ ಮಿಥ್ಯಾತ್ವಾದಿಗಳನ್ನ ಪ್ರತಿಪಾದಿಸುವ ಅನುಮಾನಾಗಮಗಳು, ಮಿಥ್ಯಾತ್ವವನ್ನ ವಾದಿಸುವವರಾಗಲೀ) ನಿರಾಕರಿಸಲ್ಪಟ್ಟರು. ॥ ೭೩ ॥

ಶಿಷ್ಯನು ಶಂಕಿಸುವನು, ಅದು ಹೇಗೆಂದರೆ:— 'ಸಿದ್ಧಾಂತದಲ್ಲಿ ಈ ಸೂತ್ರಗಳು ಶೂನ್ಯವಾದಿ ಗಳ ಮತವನ್ನು ನಿರಾಕರಣಮಾಡತಕ್ಕವುಗಳು ಎಂದು ವ್ಯಾಖ್ಯಾನಮಾಡಿರುವುದು ಹೇಗೆಂದರೆ (1) ಶೂನ್ಯದಿಂದಲೇ ಪ್ರಪಂಚವು ಹುಟ್ಟಲಿ. ಈಶ್ವರನು ಏತಕ್ಕೆ ಎಂಬಾಶಂಕೆಯನ್ನು ತಿರಸ್ಕರಿಸ ಲಿಕ್ಕಾಗಿ 'ನಾಸತೋಽದೃಷ್ಟತ್ವಾತ್' ಎಂದು ಸೂತ್ರವು. ಅಸತಃ=ಶೂನ್ಯವಾದುದಕ್ಕೆ, ನ= ಜಗತ್ಕಾರಣತ್ವವನ್ನು ತಿಳಿದುಕೊಳ್ಳಕೂಡದು, ಅದೃಷ್ಟತ್ವಾತ್=ಕಾಣದಿರುವುದರಿಂದ, ಅಂದರೆ ಶೂನ್ಯದಿಂದ ಹುಟ್ಟತಕ್ಕದ್ದು ಯಾವುದೂ ದೃಷ್ಟವಾಗಲಿಲ್ಲ. ಆದಕಾರಣ ಹೇಗೆ ಜಗತ್ತನ್ನು

ಹಾಗೆಂದು ತಿಳಿದುಕೊಳ್ಳುವೆವು. (2) ಪ್ರಪಂಚವು ಪಾರಮಾರ್ಥಿಕವಾಗಿದ್ದರೆ ಆಗಬಹುದಿತ್ತು. ಜಗತ್ತಿಗೆ ಶುಕ್ತಿರಜತದಂತೆಯೇ ಅಸತ್ವವಿದ್ದರೆ ಶೂನ್ಯದಿಂದ ಹುಟ್ಟುತ್ತದೆ ಎಂದಗೀಕರಿಸಬಹುದಷ್ಟೆ! ಏನು ಬಾಧಕವೆಂದರೆ — 'ನಾಭಾವ ಉಪಲಬ್ಧೇಃ=ಅಭಾವಃ=ಜಗತ್ತು ಅಸದ್ರೂಪವು ಎಂದು, ನ=ತಿಳಿದುಕೊಳ್ಳಕೂಡದು, ಉಪಲಬ್ಧೇಃ=ಸತ್ ಎಂದೇ ತೋರುವುದರಿಂದ, (3) ಜಗತ್ತು ಸತ್ ಎಂದು ತೋರಿದರೂ ಸ್ವಾಪ್ನ ಪದಾರ್ಥಗಳಂತೆಯೇ ಅಸತ್ ಎಂದು ಏಕೆ ಆಗಬಾರದು ಎಂದರೆ, 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್', ಸ್ವಪ್ನಾದಿವತ್=ಸ್ವಾಪ್ನ ಪದಾರ್ಥಗಳಂತೆಯೇ (ಅಸತ್ತೇ ಆದ ಜಗತ್ತು 'ಸತ್' ಎಂದು ತೋರುತ್ತದೆ. ಎಂದು) ನ=ಹೇಳಕೂಡದು. ವೈಧರ್ಮ್ಯಾಚ್ಚ=ವೈಲಕ್ಷಣ್ಯವಿದ್ದುದರಿಂದ, ಅಂದರೆ — ಸ್ವಪ್ನದಲ್ಲಿ ಮೇಲಿನಕಾಲದಲ್ಲಿ ಇದು ಸ್ವಪ್ನವೇ ಸರ್ಪವಲ್ಲ ಎಂದು ಬಾಧವಿದ್ದಂತೆಯೇ, ನಾನು ನೋಡಿದ್ದು ಪ್ರಪಂಚವಲ್ಲ ಎಂಬ ಬಾಧವಿಲ್ಲವು. ಕಾರಣ ಬಹು ವೈಲಕ್ಷಣ್ಯವಿದೆ. 'ಜಗತ್ತು ಸತ್ ಆಗಿದೆ' ಎಂಬುವ ಪ್ರತೀತಿಗೆ ಯಾವುದೊಂದು ಬಾಧಕವೂ ಇಲ್ಲ. ಜಗತ್ತು ಮಿಥ್ಯೆಯೆಂಬುವುದು ಅನುಮಾನವಿರುದ್ಧವಮಾತ್ರವಲ್ಲ, ಪ್ರತ್ಯಕ್ಷ ವಿರುದ್ಧವೂ ಪ್ರಮಾಣ ಶೂನ್ಯವೂ ಆಗಿರುತ್ತದೆ ಎಂದು ಇಲ್ಲಿ ಹೇಳದಿರುವ ದೋಷಾಂತರಗಳನ್ನು ಸೂಚಿಸಲಿಕ್ಕೂ ವೈಧರ್ಮ್ಯಾಚ್ಚ ಎಂಬುವಲ್ಲಿದ್ದ ಚ ಶಬ್ದವು. ಆದುದರಿಂದ, ಈ ಸೂತ್ರಗಳನ್ನು ಮಾಯಾವಾದಿಗಳ ಮತವನ್ನು ನಿರಾಕರಣ ಮಾಡಲಿಕ್ಕೆ ಉದಾಹರಿಸಿದರೆ ಸಿದ್ಧಾಂತ ವಿರೋಧವು ಬರುವುದು. ಶೂನ್ಯವಾದಿಗಳನ್ನೂ ಮಾಯಾವಾದಿಗಳನ್ನೂ ನಿರಾಕರಿಸಲಿಕ್ಕೆ ಈ ಸೂತ್ರಗಳು ಹೊರಟವೆ, ಎಂದು ಹೇಳಕೂಡದು. ಹಾಗೆ ಕಾಣುವುದಿಲ್ಲ. ಎಂದರೆ—

**ಸೂ ॥ ನ ಚ ಶೂನ್ಯವಾದಿನಃ ಸಕಾಶಾದ್ವೈಲಕ್ಷಣ್ಯಂ ಮಾಯಾವಾದಿನಃ ॥ ೭೪ ॥**

ಅ ॥ ಶೂನ್ಯವಾದಿನಃ ಸಕಾಶಾತ್=ಶೂನ್ಯವಾದಿಯ ಮತದಿಂದ, ಮಾಯಾವಾದಿನಃ=ಮಾಯಾವಾದಿಯ ಮತಕ್ಕೆ, ವೈಲಕ್ಷಣ್ಯಂ=ಭೇದವು (ವ್ಯತ್ಯಾಸವು), ನ ಚ=ಇಲ್ಲವೇ ಇಲ್ಲ.

ತಾ ॥ (1) ಸೂತ್ರಗಳು ಕೇವಲ ಶೂನ್ಯವಾದಿಗಳ ಮತವನ್ನು ನಿರಾಕರಿಸಲಿಕ್ಕೇನೇ ಹೊರಟವುಗಳಲ್ಲ. ಆ ರೀತಿಯಾಗಿದ್ದರೆ 'ಬಹು ಶಾಖೆಗಳನ್ನು ನಿರ್ಣಯಿಸುವುದು, ಅನೇಕ ಮತಗಳನ್ನು ನಿರಾಕರಿಸುವುದು ಇತ್ಯಾದಿ ರೂಪವಾದ ಸೂತ್ರತ್ವವೇ ವ್ಯಾಹತವಾಗಬೇಕಾಗುವುದು. ವಿಷಯ ವಿಶೇಷಗಳು ಅಪರಿಮಿತಗಳಾದುದರಿಂದ ಶಾಸ್ತ್ರಕ್ಕೆ ಪರ್ಯವಸಾನವೇ ಇಲ್ಲವೆಂದಾಗಬೇಕಾಗುವುದು. ಕಾರಣ ವಿಷಯ ವಿಶೇಷವನ್ನುದಾಹರಣೆಯಾಗಿಟ್ಟುಕೊಂಡು, ಅದಕ್ಕೆ ಸಮಾನವಾದ ವಿಷಯದಲ್ಲಿಯೂ ಅದೇ ನ್ಯಾಯವನ್ನು ಇಟ್ಟುಕೊಳ್ಳಬೇಕು. ಶೂನ್ಯವಾದಿಗಳ ಮತಕ್ಕಿಂತ ಮಾಯಾವಾದಿಗಳ ಮತಕ್ಕೆ ಸ್ವಲ್ಪವೂ ಭೇದವು ಇರಲಾರದು. ಆದ ಪ್ರಯುಕ್ತ ಈ ಸೂತ್ರಗಳು ಶೂನ್ಯವಾದಿಗಳ ಮತವನ್ನು ನಿರಾಕರಿಸತಕ್ಕವುಗಳಾದಾಗ್ಯೂ ಮಾಯಾವಾದಿಗಳ ಮತವನ್ನು ತಿರಸ್ಕರಿಸತಕ್ಕವುಗಳೂ ಆಗುವುವು. ಕಾರಣ ಅದ್ವೈತಿಗಳನ್ನು ನಿರಾಕರಿಸಲಿಕ್ಕೆ ಈ ಸೂತ್ರವನ್ನುದಾಹರಿಸಿದರೆ ಸ್ವಲ್ಪವೂ ಸಿದ್ಧಾಂತ ವಿರೋಧವು ಇಲ್ಲ. (2) ಶೂನ್ಯವಾದಿ ಮತಕ್ಕಿಂತ ಮಾಯಾವಾದಿ ಮತಕ್ಕೆ (1) ಸಂಪೂರ್ಣವಾಗಿ ಭೇದವಿಲ್ಲವೋ, (2) ಏಕದೇಶದಿಂದಲೋ, ಆಚಾರಾದಿಗಳಲ್ಲಿ ವೈಲಕ್ಷಣ್ಯವು ಸ್ಪಷ್ಟವಾಗಿ ತೋರುವುದರಿಂದ ಗನೇದ್ದು ಅಯುಕ್ತವು. ಏಕದೇಶವು ಸಮಾನವಾಗಿದೆ, ಎಂಬುವುದರಿಂದ ಸೂತ್ರವನ್ನು ಉಭಯಪರವೆಂದು ಅಂಗೀಕರಿಸಿದರೆ ಸರ್ವ ಶಾಸ್ತ್ರಗಳಲ್ಲಿಯೂ ಏಕದೇಶತಃ ಸಾಮ್ಯವೇ ಇರುತ್ತದೆ. ಮತಾಂತರಗಳನ್ನು ನಿರಾಕರಿಸತಕ್ಕ

ಸೂತ್ರಾಂತರ ನಿರ್ಮಾಣರೂಪವಾದ ಪ್ರಯಾಸವೇ ವ್ಯರ್ಥವಾಗಬೇಕಾಗುವುದು, ಕಾರಣ ೨ನೇದ್ದೂ ಅಯುಕ್ತವೆಂದು ಆಶಂಕಿಸಕೂಡದು. ಏಕೆಂದರೆ — ಎರಡು ಮತದಲ್ಲಿಯೂ ನಿರಾಕರಿಸತಕ್ಕ ಅಂಶವು ಸಮಾನವಾದುದರಿಂದ ಸೂತ್ರಗಳು ಎರಡು ಮತಗಳನ್ನು ನಿರಾಕರಿಸಲಿಕ್ಕೂ ಯುಕ್ತವಾಗುವುವು, ಕಾರಣ ಯಾವ ದೋಷವೂ ಇಲ್ಲ. (3) ಹಾಗಾದರೆ ಈ ಸೂತ್ರಗಳಲ್ಲಿ 'ಅಸತ್ತೇ ಆದ ಜಗತ್ತು ಶೂನ್ಯದಿಂದ ಹುಟ್ಟುತ್ತದೆ' ಎಂಬೀ ಶೂನ್ಯವಾದಾಂಶವು ನಿರಾಕರಿಸಲ್ಪಡುವುದು. ಈ ಎರಡು ಪ್ರಮೇಯವೂ ( (1) ಜಗತ್ತು ಅಸತ್ತು (2) ಶೂನ್ಯದಿಂದ ಹುಟ್ಟುತ್ತದೆ.) ಮಾಯಾವಾದಿಗಳಿಗೆ ಸಮ್ಮತವಲ್ಲ. ಏಕೆಂದರೆ — ಜಗತ್ತಿಗೆ ಪಾರಮಾರ್ಥಿಕ ಸತ್ವವನ್ನು ಒಪ್ಪದಿದ್ದರೂ ವ್ಯಾವಹಾರಿಕ ಸತ್ವವನ್ನೇ ಅಂಗೀಕರಿಸಿರುವರು. ಅಲ್ಲದೆ ಪರಬ್ರಹ್ಮನೇ ಜಗತ್ಕಾರಣನೆಂದು ಒಡಂಬಟ್ಟಿದ್ದಾರೆ. ಆ ಕಾರಣ ಶೂನ್ಯವಾದಿಗಳಿಗೂ ಮಾಯಾವಾದಿಗಳಿಗೂ ಅಪರಪ್ರಮೇಯದಲ್ಲಿಯೂ ಪರಪ್ರಮೇಯದಲ್ಲಿಯೂ, ಬಹಳ ವೈಲಕ್ಷಣ್ಯವಿದೆ, ಎಂದು ಹೇಳಕೂಡದು, ಏಕೆಂದರೆ— ಶೂನ್ಯವಾದಿಗಳು ಪಾರಮಾರ್ಥಿಕವಲ್ಲವೆಂಬ ಅಭಿಪ್ರಾಯದಿಂದಲೇ ಜಗತ್ತು 'ಅಸತ್' ಎಂದು ಹೇಳುವರು. ಮಾಯಾವಾದಿಗಳೂ ಜಗತ್ತು ಪಾರಮಾರ್ಥಿಕವಲ್ಲವೆಂದು ಅಂಗೀಕರಿಸಿರುವರು ॥ ೭೪ ॥

(ಹಾಗಾದರೆ ಶೂನ್ಯವಾದಿಗಳು ಪಾರಮಾರ್ಥಿಕವಾಗಿ ಜಗತ್ತನ್ನು 'ಅಸತ್' ಎಂದು ಹೇಳುವುದಿಲ್ಲ. ಶೂನ್ಯತತ್ವದ ಸಾಕ್ಷಾತ್ಕಾರವಾಗೋಣ ಅವಿದ್ಯೆಗೆ ನಿಸ್ಸ್ವರೂಪತ್ವವನ್ನಂಗೀಕರಿಸಿ ಜಗತ್ತನ್ನು ಅಸತ್ತೆಂದು ಹೇಳುವರು. ಅಂತೂ ಅಪರಪ್ರಮೇಯದಲ್ಲಿ ವೈಲಕ್ಷಣ್ಯವುಂಟೇವುಂಟು. ಎಂದರೆ — ಶಬ್ದತಃ ಮಾತ್ರ ವೈಲಕ್ಷಣ್ಯವು,ಅರ್ಥದಿಂದ ವೈಲಕ್ಷಣ್ಯವಿಲ್ಲವು)ಮಾಯಾವಾದಿಗಳು ಜಗತ್ತಿಗೆ ವ್ಯಾವಹಾರಿಕ ಸತ್ವವನ್ನು ಒಡಂಬಡುವುದರಿಂದ ಅಪರಪ್ರಮೇಯದಲ್ಲಿ ವೈಲಕ್ಷಣ್ಯವುಂಟೇ ಉಂಟು,ಎಂದು ಹೇಳಿದರೆ, ಜಗತ್ತಿಗೆ ವ್ಯಾವಹಾರಿಕ ಸತ್ವವನ್ನು ಶೂನ್ಯವಾದಿಗಳೂ ಅಂಗೀಕರಿಸಿರುವುದರಿಂದ ವೈಲಕ್ಷಣ್ಯವಿಲ್ಲವೆಂದುಪಪಾದಿಸುತ್ತಾರೆ.

**ಮೂ ॥ ವ್ಯಾವಹಾರಿಕಸತ್ವಸ್ಯ ತೇನಾಪ್ಯಂಗೀಕ್ರಿಯಮಾಣತ್ವಾತ್ ॥ ೭೫ ॥**

ಅ ॥ ತೇನಾಪಿ=ಶೂನ್ಯವಾದಿಯಿಂದಲೂ ಕೂಡ, ವ್ಯಾವಹಾರಿಕಸತ್ವಸ್ಯ=ವ್ಯಾವಹಾರಿಕ ಸತ್ಯತ್ವಕ್ಕೆ, ಅಂಗೀಕ್ರಿಯಮಾಣತ್ವಾತ್=ಅಂಗೀಕಾರವಿದ್ದುದರಿಂದ (ಅಂದರೆ ಶೂನ್ಯವಾದಿಗಳು ಜಗತ್ತು ವ್ಯಾವಹಾರಿಕಸತ್ ಆಗಿದೆ ಎಂದು ಅಂಗೀಕರಿಸಿರುವರು) ॥ ೭೫ ॥

'ಜಗತ್ತು ವ್ಯಾವಹಾರಿಕಸತ್ ಆಗಿದೆ, ಎಂದು ಶೂನ್ಯವಾದಿಗಳು ಅಂಗೀಕರಿಸುತ್ತಾರೆ' ಎಂಬ ವಿಷಯವು ಅವರ ವಾಕ್ಯದಿಂದಲೇ ಸಿದ್ಧವಾಗುವುದು, ಎಂದಭಿಪ್ರಾಯದಿಂದ ಆ ವಾಕ್ಯವನ್ನು ಉದಾಹರಿಸುತ್ತಾರೆ —

**ಮೂ ॥ ಸತ್ಯಂ ತು ದ್ವಿವಿಧಂ ಪ್ರೋಕ್ತಂ ಸಾಂವೃತಂ ಪಾರಮಾರ್ಥಿಕಂ ।**
**ಸಾಂವೃತಂ ವ್ಯಾವಹಾರ್ಯಂ ಸ್ಯಾನ್ನಿವೃತ್ತೌ ಪಾರಮಾರ್ಥಿಕಂ ॥ ೭೬ ॥**

ಅ ॥ ಸತ್ಯಂ ತು=ಸತ್ಯವಾದರೂ, ಸಾಂವೃತಂ=ಸಾಂವೃತವು, ಪಾರಮಾರ್ಥಿಕಂ=ಯಥಾರ್ಥವಾದುದು, (ಹೀಗೆ), ದ್ವಿವಿಧಂ=ಎರಡು ವಿಧವಾಗಿ, ಪ್ರೋಕ್ತಂ=ಹೇಳಲ್ಪಟ್ಟಿದೆ. ವ್ಯಾವಹಾರ್ಯಂ=ಇದನ್ನು ಬಿಡಬೇಕು, ಇದನ್ನು ಸ್ವೀಕರಿಸಬೇಕು, ಇದು ಮೊದಲಾದ ವ್ಯವಹಾರವಿಷಯವಾದ ಜಗತ್ತು, ಸಾಂವೃತಂ ಸ್ಯಾತ್=ಸಾಂವೃತಸತ್ಯವೆನಿಸುವುದು, ಅಂದರೆ

ಅವಿದ್ಯೆಯಿಂದ ಮಾಡಲ್ಪಡತಕ್ಕುದು, ನಿವೃತ್ತೌ = ವ್ಯವಹಾರವು ನಿವೃತ್ತಿಯಾದಮೇಲೆ, (ಯಾವುದು ಇರುತ್ತದೋ ಅದು) ಪಾರಮಾರ್ಥಿಕಂ = ಪಾರಮಾರ್ಥಿಕಸತ್ಯವೆನಿಸುವುದು. (ಅಂದರೆ ಅವ್ಯಾವಹಾರ್ಯವು. ಶೂನ್ಯವು.)

ತಾ || ವ್ಯವಹಾರಕ್ಕೆ ವಿಷಯವಾಗದಿರುವುದು ಪಾರಮಾರ್ಥಿಕವು. ಅಥವಾ ವಿಜ್ಞಾನ ದಿಂದ ಎಲ್ಲಾ ಪ್ರಪಂಚವೂ ನಿವೃತ್ತವಾದರೂ ಯಾವುದು ನಿವೃತ್ತವಾಗುವುದಿಲ್ಲವೋ, ಅದು ಪಾರ ಮಾರ್ಥಿಕವು. ಅಂದರೆ ಭೂತಭವಿಷ್ಯದ್ವರ್ತಮಾನಾಖ್ಯ ಮೂರು ಕಾಲಗಳಲ್ಲಿಯೂ ಬಾಧಿಸಲ್ಪಡ ದಿರುವುದು ಪಾರಮಾರ್ಥಿಕಸತ್ಯವು || ೭೭ ||

ಸಾಂವೃತಸತ್ಯಕ್ಕೆ ಲಕ್ಷಣವನ್ನು ಹೇಳುತ್ತಾರೆ —

**ಮೂ || ವಿಚಾರ್ಯಮಾಣೇ ನೋ ಸತ್ವಂ ಸತ್ವಂ ಚಾಪಿ ಪ್ರತೀಯತೇ |**
**ಯಸ್ಯ ತತ್ಸಾಂವೃತಂ ಜ್ಞೇಯಂ ವ್ಯವಹಾರಪದಂ ಚ ಯತ್ ||**
**ಇತ್ಯಾದಿನಾ || ೭೭ ||**

ಅ || ('ಪ್ರಾಗೂರ್ಧ್ವಂ ಯಸ್ಯ ಸತ್ವಂ ನ ಮಧ್ಯೇ ತಸ್ಯ ಕುತೋ ಭವೇತ್ । ಅನ್ಯಥಾ ಶುಕ್ತಿರೂಪ್ಯಾದೇಸ್ಸತ್ವಂ ಕೇನ ನಿವಾರ್ಯತೇ' ಪೂರ್ವದಲ್ಲಿಯೂ ಮೇಲೆಯೂ ಯಾವ ವಸ್ತು ವಿಗೆ ಸತ್ಯತ್ವವು ಇಲ್ಲವೋ ಆ ವಸ್ತುವಿಗೆ ಮಧ್ಯದಲ್ಲಿ ಹೇಗೆ ಸತ್ವವಿರಬಹುದು. ಇಲ್ಲವಾದರೆ ಶುಕ್ತಿರಜತಾದಿಗಳಿಗೆ ಸತ್ಯತನವನ್ನು ಯಾವುದರಿಂದ ನಿವಾರಣಮಾಡುವಿರಿ. ಇತ್ಯಾದಿ ಪ್ರಕಾರ) ವಿಚಾರ್ಯಮಾಣೇ=ವಿಚಾರ ಮಾಡಲ್ಪಡುತ್ತಿರಲು, ಯಸ್ಯ=ಯಾವ ವಸ್ತುವಿಗೆ, ಸತ್ವಂ=ಸತ್ಯ ತನವು, ನೋ=ಕೂಡುವುದಿಲ್ಲವೋ, ಅಪಿ=ಆದರೂ, ಸತ್ವಂ=ಸತ್ಯತ್ವವು, ಪ್ರತೀಯತೇ ಚ= ತೋರುತ್ತದೋ, ತತ್=ಅಂತಹ ವಸ್ತುವು, ಸಾಂವೃತಂ=ಸಾಂವೃತ ಸತ್ಯವೆಂದು, ಜ್ಞೇಯಂ= ತಿಳಿಯತಕ್ಕದ್ದು. ಯತ್=ಯಾವುದು, ವ್ಯವಹಾರಪದಂ ಚ=ಹಾನಾದಿ ವ್ಯವಹಾರಗಳಿಗೆ ವಿಷಯವಾಗಿದೋ, ತತ್=ಅದೂ ಕೂಡ, ಸಾಂವೃತಂ=ಸಾಂವೃತ ಸತ್ಯವೆನಿಸುವುದು, ಇತ್ಯಾ ದಿನಾ=ಇದು ಮೊದಲಾದ ಶೂನ್ಯವಾದಿಗಳ ವಾಕ್ಯಗಳಿಂದ (ಜಗತ್ತಿಗೆ ವ್ಯಾವಹಾರಿಕ ಸತ್ಯತ್ವವನ್ನು ಅವರು ಅಂಗೀಕಾರಮಾಡಿದ್ದಾರೆಂದು ತಿಳಿಯುತ್ತದೆ).

ತಾ || ೧ನೇ ವಿಶೇಷಣದಿಂದ ಪಾರಮಾರ್ಥಿಕ ಸತ್ಯವಲ್ಲವೆಂದು, ೨ನೇ ವಿಶೇಷಣದಿಂದ ಅತ್ಯಂತಾಸತ್ ಅಲ್ಲವೆಂದು ಹೇಳಿದಂತೆ ಆಯಿತು. ಪಾರಮಾರ್ಥಿಕವಾದುದೂ ಅತ್ಯಂತಾಸತ್ತು ಆದುದೂ ಹಾನಮೊದಲಾದುವುಗಳಿಗೆ ವಿಷಯವಾಗದಿರುವುದರಿಂದ ವ್ಯವಹಾರಕ್ಕೆ ವಿಷಯ ವಾದುದೂ ಸಾಂವೃತಸತ್ಯವೆನಿಸುವುದು. ಎಂದು ಲಕ್ಷಣಾಂತರವು. (2) ಆದಿ ಎಂಬುವ ಪದ ದಿಂದ 'ದ್ವೇ ಸತ್ಯೇ ಸಮುಪಾಶ್ರಿತ್ಯ ಬುದ್ಧಾನಾಂ ಧರ್ಮದೇಶನಾ । ಲೋಕೇ ಸಾಂವೃತಸತ್ಯಂ ಚ ಸತ್ಯಂ ಚ ಪರಮಾರ್ಥತಃ ॥' ಎರಡು ಸತ್ಯಗಳನ್ನು ಆಶ್ರಯಿಸಿ ಲೋಕದಲ್ಲಿ ಬುದ್ಧರ ಧರ್ಮೋಪ ದೇಶವು. '(1) ಸಾಂವೃತಸತ್ಯವು. (2) ಪಾರಮಾರ್ಥಿಕಸತ್ಯವು. ಹೀಗೆ ೨ ವಿಧವು.' ಇತ್ಯಾದಿ ಅವರ ವಾಕ್ಯಗಳನ್ನು ಉದಾಹರಿಸಿಕೊಳ್ಳಬೇಕು || ೭೭ ||

ಹೀಗೆ ಅಪರ ಪ್ರಮೇಯಗಳಲ್ಲಿ ವೈಲಕ್ಷಣ್ಯವಿಲ್ಲವೆಂದು ಹೇಳಿ ಪರಪ್ರಮೇಯದಲ್ಲಿಯೂ ವೈಲಕ್ಷಣ್ಯವಿಲ್ಲವೆಂದು ಉಪಪಾದಿಸುತ್ತಾರೆ.

**ಮೂ || ನ ಚ ನಿರ್ವಿಶೇಷಬ್ರಹ್ಮವಾದಿನಃ ಶೂನ್ಯಾತ್ಕಶ್ಚಿದ್ವಿಶೇಷಸ್ತಸ್ಯ || ೭೮ ||**

ಅ ‖ ನಿರ್ವಿಶೇಷಬ್ರಹ್ಮವಾದಿನಃ=ವಿಶೇಷವಿಲ್ಲದ ಬ್ರಹ್ಮನನ್ನು ಅಂಗೀಕರಿಸುವ ಮಾಯಾವಾದಿಗಳ, ತಸ್ಯ=ಆ ಬ್ರಹ್ಮನಿಗೆ, ಶೂನ್ಯಾತ್=ಶೂನ್ಯತತ್ವದಿಂದ, ಕಶ್ಚಿತ್=ಯಾವುದೊಂದು, ವಿಶೇಷಃ=ವಿಶೇಷವು, ನ ಚ=ಇಲ್ಲವು.

ತಾ ‖ (1) ಯದ್ಯಪಿ ಮಾಯಾವಾದಿಗಳು ಬ್ರಹ್ಮನು ಜಗತ್ಕಾರಣನೆಂದೂ, ಶೂನ್ಯವಾದಿಗಳು ಶೂನ್ಯವೇ ಜಗತ್ಕಾರಣವೆಂದೂ ಹೇಳುತ್ತಾರೆ. ಆದಾಗ್ಯೂ ಮಾಯಾವಾದಿಗಳು 'ಬ್ರಹ್ಮನು ನಿರ್ವಿಶೇಷನು, ನಿರಾಕಾರನು' ಎಂದಂಗೀಕರಿಸಿರುವುದರಿಂದ ಆ ಬ್ರಹ್ಮನಿಗೆ ಶೂನ್ಯದಿಂದ ಯಾವುದೊಂದು ವಿಶೇಷವೂ ಬರಲಿಲ್ಲ. ಶಬ್ದಗಳು ಬೇರೆ ಬೇರೆಯಾದರೂ, ಅರ್ಥಗಳಿಗೆ ಭೇದವಿಲ್ಲವು. (2) ನಿರ್ವಿಶೇಷನಾದ ಬ್ರಹ್ಮನಿಗೂ ಶೂನ್ಯದಿಂದ ವಿಶೇಷವನ್ನೊಡಂಬಟ್ಟರೆ ಸ್ವವಚನ ವಿರೋಧವು ॥ ೭೮ ॥

ಶೂನ್ಯದಿಂದ ಬ್ರಹ್ಮನಿಗೆ ವಿಶೇಷವಿಲ್ಲದಿದ್ದರೂ ಶೂನ್ಯಕ್ಕೆ ಬ್ರಹ್ಮನಿಂದ ವಿಶೇಷವಿರಬಹುದೆಂಬ ಆಶಂಕೆಯನ್ನು ಶೂನ್ಯವಾದಿಗಳ ವಾಕ್ಯದಿಂದಲೇ ನಿರಾಕರಿಸುತ್ತಾರೆ.

**ಮೂ ॥ ನಿರ್ವಿಶೇಷಂ ಸ್ವಯಂಭಾತಂ ನಿರ್ಲೇಪಮಜರಾಮರಂ । ಶೂನ್ಯಂ ತತ್ವಮವಿಜ್ಞೇಯಂ ಮನೋವಾಚಾಮಗೋಚರಂ ॥ ೭೯ ॥**

ಅ ‖ ಶೂನ್ಯಂ ತತ್ವಂ=ಶೂನ್ಯಾಖ್ಯತತ್ವವು, ನಿರ್ವಿಶೇಷಂ=ನಿರ್ಧರ್ಮಕವು, ಸ್ವಯಂಭಾತಂ=ಸ್ವಪ್ರಕಾಶವು, ನಿರ್ಲೇಪಂ=ಪಾಪಾದಿಲೇಪವಿಲ್ಲದಿರುವುದು, ಅಜರಾಮರಂ=ಮುಪ್ಪು ಸಾವು ಇಲ್ಲದಿರುವುದು, ಅವಿಜ್ಞೇಯಂ = ತಿಳಿಯಲು ಯೋಗ್ಯವಾದುದು ಅಲ್ಲ, ಅಂದರೆ, ಮನೋವಾಚಾಂ=ಮನಸ್ಸಿಗೂ ವಚನಗಳಿಗೂ, ಅಗೋಚರಂ=ವಿಷಯವಲ್ಲದಿರುವುದು.

ತಾ ‖ (1) ಶೂನ್ಯವೆಂದರೆ ನಿಸ್ಸ್ವರೂಪವೆಂದಲ್ಲ. ಅದೂ ತತ್ವವೇ. ಆದರೂ ವಿಶೇಷವಿಲ್ಲದಿರುವುದರಿಂದ ಶೂನ್ಯವೆನಿಸುವುದು. (2) ಹಾಗಾದರೆ ಹೇಗೆ ಪ್ರಮಾಣಗಳು ಪ್ರವೃತ್ತಗಳಾಗುವವೆಂದರೆ ಸ್ವಪ್ರಕಾಶವೇ, ಅಂದರೆ ಆತ್ಮನೇ ಶೂನ್ಯನೆಂದು ಒಡಂಬಟ್ಟಿರುತ್ತಾರೆ. (3) ಪಾಪಾದಿಲೇಪವು ಮುಪ್ಪು ಸಾವು ಮೊದಲಾದ ವಿಶೇಷಗಳೂ ಇವೆಲ್ಲವೂ ದೇಹದ ಧರ್ಮಗಳೇವೇ ಸರಿ. ಆತ್ಮನ ಧರ್ಮಗಳು ಅಲ್ಲ. (4) ಆದರೂ ಸ್ವವಿಷಯಪ್ರಕಾಶತ್ವರೂಪವಾದ ವಿಶೇಷವು 'ಸ್ವಯಂಭಾತ' ಎಂಬುವ ವಿಶೇಷಣದಿಂದ ಹೇಳಿರುತ್ತಾರೆ, ಎಂದರೆ ಹಾಗಲ್ಲ. ಸ್ವಯಂಭಾತವೆಂದರೆ ಪರಪ್ರಕಾಶ್ಯವಲ್ಲವೆಂದೇ ಅರ್ಥವು. ಸ್ವವಿಷಯಪ್ರಕಾಶರೂಪವೆಂದಲ್ಲ ॥ ೭೯ ॥

ಸತ್ಯಜ್ಞಾನ ಮೊದಲಾದ ವಿಶೇಷಗಳನ್ನಂಗೀಕರಿಸಿರುವುದರಿಂದ ನಿರ್ವಿಶೇಷನೆಂಬುವುದು ಹೇಗೆ ಕೂಡಬಹುದು, ಎಂದರೆ—

**ಮೂ ॥ ಜಾಡ್ಯಸಂವೃತಿ ದುಃಖಾಂತ ಪೂರ್ವದೋಷ ವಿರೋಧಿ ಯತ್ ॥ ೮೦ ॥**

ಅ ‖ ಯತ್=ಯಾವ ಶೂನ್ಯವು, ಜಾಡ್ಯಸಂವೃತಿ ದುಃಖಾಂತಪೂರ್ವದೋಷವಿರೋಧಿ; ಜಾಡ್ಯ=ಅಸಂವಿದ್ರೂಪತ್ವವು, ಸಂವೃತಿ=ನಿಶ್ವಾರೋಪನಿಮಿತ್ತಕಾಜ್ಞಾನವು, ದುಃಖ=ದುಃಖವು, ಅಂತ=ನಾಶವು ಇವುಗಳೇವೆ, ಪೂರ್ವ=ಮೊದಲಾದ, ದೋಷ=ಬಂಧಾದಿ ದೋಷಗಳಿಗೆ, ವಿರೋಧಿ=ವಿರೋಧಿಯಾದುದು.

ತಾ ‖ (1) ಶೂನ್ಯತತ್ವವು ಜಾಡ್ಯಸಂವೃತಿಗಳ ತಾದಾತ್ಮ್ಯ (ತತ್ಸ್ವರೂಪ)ಕ್ಕೆ ವಿರೋಧಿಯಾದುದರಿಂದಲೇ ಜ್ಞಾನವೆನ್ನಿಸಿಕೊಳ್ಳುವುದು. ಜ್ಞಾನತ್ವರೂಪವಾದ ಜಾತಿಯಿದ್ದುದರಿಂದಲ್ಲ.

(2) ಶೂನ್ಯತತ್ತ್ವವು ಸಂವೃತಿವಿರೋಧಿಯಾದರೆ ವಿರೋಧಿಯಾದ ಶೂನ್ಯವು ಯಾವಾಗಲೂ ಇದ್ದುದರಿಂದ ಸಂವೃತಿಯೇ ಇಲ್ಲವೆಂದಾಗುವುದು, ಎಂದು ಹೇಳಕೂಡದು. ಪ್ರಮಾಣದಿಂದ ಹುಟ್ಟಿದ ಜ್ಞಾನಸಂಬದ್ಧವಾದ ಶೂನ್ಯವೇ ಸಂವೃತಿಯನ್ನು ನಾಶಮಾಡುತ್ತದೆ. ಕೇವಲ ಶೂನ್ಯ ವಲ್ಲ. ಆ ಪ್ರಮಾಣಜ್ಞಾನವಾದರೂ ಯಾವಾಗಲೂ ಇಲ್ಲ. (3) ಬಾಧಿಸಲ್ಪಡತಕ್ಕ ಸಂವೃತಿ ಮತ್ತು ಅದರಿಂದ ಹುಟ್ಟಿದ ಜಡವಸ್ತುಗಳು ಇವುಗಳಿಂದ ಭಿನ್ನವಾದ ಪ್ರಯುಕ್ತವೇ ಅಬಾಧ್ಯ, ಸತ್ಯ ಎನಿಸುವುದು. (4) ದುಃಖಕ್ಕೆ ವಿರೋಧಿಯಾದ ಪ್ರಯುಕ್ತವೇ ಆನಂದವೆನಿಸುವುದು, ಸುಖತ್ವವಿದ್ದುದರಿಂದಲ್ಲ. (5) ದೇಶತಃ ಅಂತಕ್ಕೆ (ಕೆಲವು ದೇಶದಲ್ಲಿ ಮಾತ್ರ ಇರುವುದಕ್ಕೆ) ವಿರೋಧಿಯಾದುದರಿಂದಲೇ ಸರ್ವಗತವು (ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸಿಕೊಂಡಿರುವುದು) ಎನಿಸುವುದು. ದೊಡ್ಡ ಪರಿಮಾಣವಿದ್ದುದರಿಂದಲ್ಲ. (6) ಕಾಲತಃ ನಾಶಕ್ಕೆ ವಿರೋಧಿಯಾದುದ ರಿಂದ ನಿತ್ಯವೆನಿಸುವುದು. ಸರ್ವಕಾಲದಲ್ಲಿಯೂ ಇರುವ ಸತ್ತಾಜಾತಿಯಿಂದ, ಎಂದಲ್ಲ. (7) ವಸ್ತುತಃ ಅಂತಕ್ಕೆ ವಿರೋಧಿಯಾದುದರಿಂದಲೇ ಸರ್ವಾತ್ಮಕವೆನಿಸುವುದು. ಸರ್ವ ವಸ್ತುಗಳ ಸ್ವರೂಪವಾದುದರಿಂದಲ್ಲ. (8) ಸಂಸಾರಬಂಧವಿಲ್ಲದಿರುವುದರಿಂದಲೇ ಮುಕ್ತವೆನಿಸುವುದು. ಮಲ (ಕಶ್ಮಲ)ವಿಲ್ಲದಿರುವುದರಿಂದಲೇ ಶುದ್ಧವೆನಿಸುವುದು. ॥ ೮೦ ॥

**ಮೂ ॥ ನಿತ್ಯಭಾವನಯಾ ಭಾತಂ ತದ್ಭಾವಂ ಯೋಗಿನಂ ನಯೇತ್ ॥ ೮೧ ॥**

ಅ ॥ ನಿತ್ಯಭಾವನಯಾ=ಯಾವಾಗಲೂ ಶೂನ್ಯಜ್ಞಾನದಿಂದ, ಭಾತಂ=ಸಾಕ್ಷಾತ್ಕಾರ ಸಲ್ಪಟ್ಟ ಶೂನ್ಯತತ್ತ್ವವು, ಯೋಗಿನಂ=ಧ್ಯಾನಿಸತಕ್ಕವನನ್ನು, ತದ್ಭಾವಂ=ಶೂನ್ಯಭಾವವನ್ನೇ, ನಯೇತ್=ಹೊಂದಿಸುವುದು. ಅಂದರೆ ಶೂನ್ಯಭಾವವಿಲ್ಲವೆಂಬುವುದು ಆರೋಪಿತವಾಗಿದೆ, ಅದನ್ನು ನಿವರ್ತಿಸುವುದು ॥ ೮೧ ॥

ತತ್ತ್ವವೆಂದಾಗಬೇಕಾದರೆ ಭಾವ ಅಭಾವ ಇವುಗಳಲ್ಲಿ ಒಂದಾಗಬೇಕು. ಭಾವವೆಂದಾದರೆ ಗುಣಾದಿಗಳೂ, ಅಭಾವವೆಂದಾದರೆ ಪ್ರತಿಯೋಗಿತ್ವಾದಿಗಳೂ ಬರಬೇಕಾಗುವುವು. ಆದ್ದರಿಂದ ವಿಶೇಷವಿಲ್ಲವೆಂಬುವುದು ಹೇಗೆ ಕೂಡಬಹುದೆಂದರೆ—

**ಮೂ ॥ ಭಾವಾರ್ಥಪ್ರತಿಯೋಗಿತ್ವಂ ಭಾವತ್ವಂ ವಾ ನ ತತ್ತ್ವತಃ । ವಿಶ್ವಾಕಾರಂ ಚ ಸಂವೃತ್ಯಾ ಯಸ್ಯ ತತ್ಪದಮಕ್ಷಯಂ ॥ ಇತ್ಯಾದಿ ತದ್ವಚಃ ॥ ೮೨ ॥**

ಅ ॥ ಯಸ್ಯ=ಯಾವಶೂನ್ಯಕ್ಕೆ, ಭಾವಾರ್ಥಪ್ರತಿಯೋಗಿತ್ವಂ=ಭಾವವಸ್ತುಗಳೇ ಪ್ರತಿ ಯೋಗಿಯಾಗಿವುಳ್ಳತನವು, ಅಂದರೆ ಅಭಾವತ್ವವಾಗಲೀ, ಭಾವತ್ವಂ ವಾ=ಭಾವತ್ವವಾಗಲೀ, ತತ್ತ್ವತಃ=ಯಥಾರ್ಥವಾಗಿ, ನ=ಇಲ್ಲವೋ, ಸಂವೃತ್ಯಾ ಚ=ಅಜ್ಞಾನದಿಂದಲೇ, ವಿಶ್ವಾಕಾರಂ= ಜಗತ್ತಿನ ಆಕಾರವಾಗಿ ತೋರುತ್ತದೋ, ಪದಂ=ಪ್ರಾಪಿಸಲಿಕ್ಕೆ ಯೋಗ್ಯವಾದ, ತತ್=ಆ ಶೂನ್ಯತತ್ತ್ವವು, ಅಕ್ಷಯಂ=ನಾಶವಿಲ್ಲದಿರುವುದು. ಇತ್ಯಾದಿ=ಇದುಮೊದಲಾದುದು, ತದ್ವಚಃ= ಶೂನ್ಯವಾದಿಗಳ ಮಾತು.

ತಾ ॥ (1) ಅಭಾವತ್ವಪ್ರಯುಕ್ತಗಳಾದ ಸಪ್ರತಿಯೋಗಿತ್ವ ಮೊದಲಾದ ವಿಶೇಷಗಳನ್ನು ನಿರಾಕರಿಸಲಿಕ್ಕಾಗಿ, 'ಅಭಾವತ್ವಂ' ಎಂದು ಹೇಳದೆ 'ಭಾವಾರ್ಥಪ್ರತಿಯೋಗಿತ್ವಂ' ಎಂದು ಹೇಳಿರು ವರು, ಹೀಗೆಯೇ ಭಾವತ್ವಪ್ರಯುಕ್ತ ಗುಣಾದಿ ವಿಶೇಷಗಳೂ ಇಲ್ಲವು. (2) ಅಜ್ಞಾನದಿಂದಲೇ

ಶೂನ್ಯವು ಜಗತ್ತೆಂದು ತೋರುತ್ತದೆ. ವಸ್ತುತಃ ಶೂನ್ಯವು ಜಗತ್ತಾಗುವುದು ಅಲ್ಲವು. (3) ತತ್ತ್ವವು ಭಾವಾಭಾವಗಳಲ್ಲೊಂದಾಗಬೇಕು, ಎಂಬುವುದು ಪರಮಾರ್ಥವಲ್ಲದ ಪ್ರಪಂಚ ವಿಷಯವಾಗಿದೆ ॥ ೮೨ ॥

ಶೂನ್ಯವಾದಿಗಳು ಶೂನ್ಯವನ್ನು ಹೇಳುವಂತೆಯೇ ಮಾಯಾವಾದಿಗಳೂ ಪರಬ್ರಹ್ಮನನ್ನು ಹೇಳುತ್ತಾರೆ. ಎಂಬುವ ಅಭಿಪ್ರಾಯದಿಂದ ಮಾಯಾವಾದಿಗಳ ವಾಕ್ಯವನು ಉದಾಹರಿಸುತ್ತಾರೆ.

**ಮೂ ॥ ಅನೃತಜಡವಿರೋಧಿರೂಪಮಂತತ್ರಯಮಲಬಂಧನದುಃಖತಾ- ವಿರುದ್ಧಂ ॥ ಇತಿ ಚ ಮಾಯಾವಾದೀ ॥ ೮೩ ॥**

ಅ ॥ (ಈ ಮೂಲದ ಉತ್ತರಾರ್ಧವು ಹೀಗಿರುತ್ತದೆ. 'ಅತಿನಿಕಟಮವಿಕ್ರಿಯಂ ಮುರಾರೇಃ ಪರಮಪದಂ ಪ್ರಣಯಾದಭಿಷ್ಟವೀಮಿ' ಇದು ಶಂಕರಾಚಾರ್ಯರು ಮಾಡಿದ ಮುರಾರಿಶತಕದ ೧ನೇ ಶ್ಲೋಕವು) ಅನೃತಜಡವಿರೋಧಿರೂಪಂ=ಅನೃತತ್ವ ಜಡತ್ವಗಳಿಗೆ ವಿರೋಧಿಸ್ವರೂಪವಾದ, ಅಂತತ್ರಯಮಲಬಂಧನದುಃಖತಾವಿರುದ್ಧಂ=ದೇಶ,ಕಾಲ, ವಸ್ತು ಪರಿಚ್ಛೇದರೂಪವಾದ ಮೂರು ವಿಧ ನಾಶವು, ಕಶ್ಮಲವು, ಸಂಸಾರಬಂಧವು, ದುಃಖತನವೂ ಇವುಗಳಿಗೆ ವಿರುದ್ಧವಾದುದು. (ಅತಿನಿಕಟಂ=ಅತಿಸಮೀಪವಾದ, ಅವಿಕ್ರಿಯಂ=ವಿಕಾರವಿಲ್ಲದಿರುವ, ಮುರಾರೇಃ=ಶ್ರೀಕೃಷ್ಣನ, ಪರಮಪದಂ=ಉತ್ತಮವಾದ ಸ್ವರೂಪವನ್ನು, ಪ್ರಣಯಾತ್=ಸ್ನೇಹದಿಂದ, ಅಭಿಷ್ಟವೀಮಿ= ಸ್ತುತಿಸುತ್ತೇನೆ.) ಇತಿ ಚ=ಹೀಗೆಯೇ, ಮಾಯಾವಾದೀ=ಶಂಕರಾಚಾರ್ಯರು (ಮುರಾರಿ ಶತಕದಲ್ಲಿ ಹೇಳಿರುವರು).

ತಾ ॥ (1) ಬ್ರಹ್ಮನು ಅನೃತನಲ್ಲದಿರುವುದರಿಂದ ಸತ್ಯನೆಂದೂ, ಜಡನಲ್ಲದಿರುವುದರಿಂದ ಜ್ಞಾನನೆಂದೂ, ಅಪರಿಚ್ಛಿನ್ನನಾದುದರಿಂದ ಅನಂತನೆಂದೂ, ಮಲನಲ್ಲದಿರುವುದರಿಂದ ಶುದ್ಧನೆಂದೂ, ಸಂಸಾರಬಂಧವಿಲ್ಲದಿರುವುದರಿಂದ ಮುಕ್ತನೆಂದೂ, ದುಃಖವಿಲ್ಲದಿರುವುದರಿಂದ ಆನಂದನೆಂದೂ ಹೇಳಲ್ಪಡುತ್ತಾನೆ. ಆಯಾಯ ಧರ್ಮಗಳು ಇದ್ದುದರಿಂದಲ್ಲ. ಈ ಪ್ರಕಾರ ಮಾಯಾವಾದಿಗಳೂ ಶೂನ್ಯವಾದಿಗಳಂತೆಯೇ ಬ್ರಹ್ಮನನ್ನು ತಿಳಿಯುವುದರಿಂದ ಅವರಿಗೆ ವಿಶೇಷವಿಲ್ಲವು. (2) 'ನಿರ್ವಿಶೇಷಂ ಸ್ವಯಂಭಾತಂ' ಎಂದು ಶೂನ್ಯವಾದಿಗಳು ಹೇಳಿದ ಎಲ್ಲಾ ಅರ್ಥಗಳನ್ನು ಪ್ರತಿಪಾದಿಸುವ ಅದ್ವೈತಿಗಳ ವಾಕ್ಯಗಳು ಶಂಕರಾಚಾರ್ಯರು ಮಾಡಿದ ಅಧ್ಯಾಸಭಾಷ್ಯಾದಿಗಳಲ್ಲಿ ಪ್ರಸಿದ್ಧಗಳಾದುದರಿಂದ ಶ್ರೀ ಮದಾಚಾರ್ಯರು ಉದಾಹರಿಸಲಿಲ್ಲ ॥ ೮೩ ॥

ಇದನ್ನೇ ವಿಶದೀಕರಿಸುವವರಾಗಿ ನಿರ್ವಿಶೇಷತ್ವವನ್ನು ವಿವರಣಮಾಡತಕ್ಕ ಶೂನ್ಯವಾದಿಗಳ ವಾಕ್ಯವನ್ನು ಉದಾಹರಿಸುತ್ತಾರೆ. —

**ಮೂ ॥ ನಾಸ್ಯ ಸತ್ತ್ವಮಸತ್ತ್ವಂ ವಾ ನ ದೋಷೋ ಗುಣ ಏವ ವಾ। ಹೇಯೋ- ಪಾದೇಯರಹಿತಂ ತಚ್ಛೂನ್ಯಂ ಪದಮಕ್ಷಯಂ ॥ ಇತಿ ಶೂನ್ಯ ವಾದೀ ॥ ೮೪ ॥**

ಅ ॥ ಅಸ್ಯ=ಈ ಶೂನ್ಯತತ್ತ್ವಕ್ಕೆ, ಸತ್ತ್ವಂ=ಸತ್ತಾರೂಪಜಾತಿಯು, ಅಥವಾ ಪ್ರಮಾಣ ಗಳಪ್ರವೃತ್ತಿಗೆ ವಿಷಯೀಭೂತವಾದುದು, ಅಸತ್ತ್ವಂ ವಾ=ಅತ್ಯಂತಾಭಾವಕ್ಕೆ ಪ್ರತಿಯೋಗಿ ಯಾದುದಾಗಲೀ, ದೋಷಃ=ದುಃಖಾದಿಗಳಾಗಲೀ, ಗುಣೋ ವಾ=ಸುಖಾದಿಗಳಾಗಲೀ, ನೈವ=ಇಲ್ಲವೇ ಇಲ್ಲ. ಹೇಯೋಪಾದೇಯರಹಿತಂ=ಹೇಯತ್ವ ಉಪಾದೇಯತ್ವಗಳಿಲ್ಲದಿರುವ,

ಅಕ್ಷಯಂ=ವಿನಾಶವಿಲ್ಲದಿರುವ, ತತ್ ಶೂನ್ಯಂ=ಆ ಶೂನ್ಯತತ್ತ್ವವು, ಪದಂ=ಪ್ರಾಪ್ಯವು, ಇತಿ= ಹೀಗೇ, ಶೂನ್ಯವಾದೀ=ಶೂನ್ಯವಾದಿಯು, (ಹೇಳುತ್ತಾನೆ.)

ತಾ || (1) ದೋಷಗಳಿಲ್ಲದಿರುವುದರಿಂದ ಹೇಯ (ಬಿಡಲಿಕ್ಕೆ ಯೋಗ್ಯನು)ನಲ್ಲ. ಗುಣಗಳಿಲ್ಲದಿರುವುದರಿಂದ ಸ್ವೀಕರಿಸಲಿಕ್ಕೆ ಯೋಗ್ಯನಲ್ಲ. (2) ಅಥವಾ ಸ್ವೀಕರಿಸುವವನಾಗಲೀ, ಬಿಡುವವನಾಗಲೀ ಮತ್ತೊಬ್ಬನಿಲ್ಲದಿರುವುದರಿಂದ ಹೇಯೋಪದೇಯ ರಹಿತನು. (3) ಅಥವಾ ಅನಿಷ್ಟವಿಲ್ಲದಿರುವುದರಿಂದ ಶೂನ್ಯಕ್ಕೆ ಹೇಯವಿಲ್ಲವು. ಅಪೂರ್ಣತೆಯಿಲ್ಲದಿರುವುದರಿಂದ ಉಪಾದೇಯವೂ ಇಲ್ಲ || ೮೪ ||

ಶೂನ್ಯವಾದಿಯು ಶೂನ್ಯತತ್ತ್ವಕ್ಕೆ ಸತ್ತ್ವಮೊದಲಾದ ಧರ್ಮಗಳು ಇಲ್ಲವೆಂದು ತಿಳಿಯುತ್ತಾನೆ. ಎಂದರೆ—

**ಮೂ || ಸತ್ತ್ವಾದಯೋ ಧರ್ಮಾಃ ಪರಮಾರ್ಥತೋ ಮಾಯಾವಾದಿನಾಽಪಿ ನಾಂಗೀಕ್ರಿಯಂತೇ || ೮೫ ||**

ಅ || (ಬ್ರಹ್ಮಣಃ=ಪರಬ್ರಹ್ಮನಿಗೆ,) ಸತ್ತ್ವಾದಯಃ=ಸತ್ತ್ವಮೊದಲಾದ, ಧರ್ಮಾಃ= ಧರ್ಮಗಳು, ಪರಮಾರ್ಥತಃ=ಯಥಾರ್ಥವಾಗಿ, ಮಾಯಾವಾದಿನಾಽಪಿ=ಅದ್ವೈತಿಯಿಂದಲೂ ಕೂಡ, ನಾಂಗೀಕ್ರಿಯಂತೇ=ಅಂಗೀಕರಿಸಲ್ಪಡುವುದಿಲ್ಲ.

ತಾ || ಕಾಲ್ಪನಿಕಧರ್ಮಗಳನ್ನು ಮಾಯಾವಾದಿಗಳು ಬ್ರಹ್ಮನಿಗೆ, ಶೂನ್ಯವಾದಿಗಳು ಶೂನ್ಯಕ್ಕೆ, ಒಡಂಬಟ್ಟಿರುತ್ತಾರೆ. ಯಥಾರ್ಥವಾದುದನ್ನು ಇಬ್ಬರೂ ಒಡಂಬಡಲಿಲ್ಲ. ಆದುದರಿಂದ ಶೂನ್ಯಬ್ರಹ್ಮರಿಗೆ ಇವರ ಮತಪ್ರಕಾರ ವಿಶೇಷವಿಲ್ಲವು || ೮೫ ||

ಧರ್ಮಗಳನ್ನಂಗೀಕರಿಸಿದರೂ ಅವುಗಳು ಯಥಾರ್ಥಗಳಲ್ಲವೆಂದು ಹೇಗೆ ತಿಳಿಯುವುದು, ಎಂದರೆ—

**ಮೂ || ಸರ್ವವಿಶೇಷವಿನಿರ್ಮುಕ್ತತ್ವಾಂಗೀಕಾರಾತ್ || ೮೬ ||**

ಅ || (ಬ್ರಹ್ಮಣಃ=ಪರಬ್ರಹ್ಮನಿಗೆ) ಎಲ್ಲಾ ಧರ್ಮಗಳಿಂದಲೂ ರಾಹಿತ್ಯವನ್ನಂಗೀಕರಿಸಿರುವುದರಿಂದ,

ತಾ || ಯಾವ ಮಾಯಾವಾದಿಗಳು ಬ್ರಹ್ಮನಿಗೆ ಧರ್ಮಗಳನ್ನ ಸ್ವೀಕರಿಸಿರುವರೋ, ಅವರೇ ಎಲ್ಲಾ ವಿಶೇಷಗಳೂ ಇಲ್ಲವೆಂದು ಅಂಗೀಕರಿಸಿರುತ್ತಾರೆ. ಆ ಧರ್ಮಗಳನ್ನ ಒಡಂಬಟ್ಟದ್ದು ಪಾರಮಾರ್ಥಿಕವಾದರೆ ಪರಸ್ಪರವಾಗಿ ಪರಾಹತಿಯು ಬರಬೇಕಾಗುವುದು. ಆದ ಕಾರಣ ಧರ್ಮಗಳನ್ನೊಡಂಬಟ್ಟದ್ದು ಪಾರಮಾರ್ಥಿಕವಲ್ಲವೆಂದು ತಿಳಿಯುತ್ತದೆ || ೮೬ ||

ಮತ್ತು ಪರತತ್ತ್ವವಿಷಯದಲ್ಲಿ ೨ ಸಿದ್ಧಾಂತಗಳೂ ಸಮವೆಂದು ತೋರಿಸಲಿಚ್ಛಿಸಿದವರಾಗಿ ಶೂನ್ಯವಾದಿಗಳ ವಾಕ್ಯವನ್ನು ಅನುವಾದಮಾಡುತ್ತಾರೆ —

**ಮೂ || ಅನಾಚ್ಯಂ ಸರ್ವಶಬ್ದೈಸ್ತಲ್ಲಕ್ಷ್ಯತೇ ಚಾಖಿಲೈಃ ಪದೈಃ | ಅಜ್ಞೇಯಂ ಜ್ಞಾನಲಕ್ಷ್ಯಂ ಚ ತಚ್ಛೂನ್ಯಂ ಪದಮಕ್ಷಯಂ || ಇತಿ ಶೂನ್ಯವಾದೀ || || ೮೭ ||**

ಅ ॥ ತತ್=ಆ ಶೂನ್ಯವು, ಸರ್ವಶಬ್ದೈಃ=ಎಲ್ಲಾ ಶಬ್ದಗಳಿಂದಲೂ, ಅವಾಚ್ಯಂ ಚ= ಹೇಳಲ್ಪಡದಿದ್ದಾಗ್ಯೂ, ಅಖಿಲೈಃ ಪದೈಃ=ನಿರ್ವಿಶೇಷಮೊದಲಾದ ಎಲ್ಲಾ ಪದಗಳಿಂದಲೂ, ಲಕ್ಷ್ಯತೇ = ಲಕ್ಷಿಸಲ್ಪಡುತ್ತದೆ. ಅಜ್ಞೇಯಂ ಚ = ಜ್ಞಾನಕ್ಕೆ ವಿಷಯುವಾಗದಿದ್ದರೂ, ಜ್ಞಾನಲಕ್ಷ್ಯಂ = ವೃತ್ತಿವಿಷಯುವಾದುದರಿಂದ ಜ್ಞಾನದಿಂದ ಲಕ್ಷಿಸಲ್ಪಡುತ್ತದೆ. ಅಕ್ಷಯಂ= ಅವಿನಾಶಿಯಾದ, ತತ್=ಆ, ಶೂನ್ಯಂ=ಶೂನ್ಯತತ್ವವು, ಪದಂ=ಪ್ರಾಪ್ಯವು, ಇತಿ=ಹೀಗೆ, ಶೂನ್ಯವಾದೀ=ಶೂನ್ಯವಾದಿಯು, (ಹೇಳುತ್ತಾನೆ.)

ತಾ ॥ ಶೂನ್ಯವಾದಿಗಳಂತೆಯೇ ಬ್ರಹ್ಮನು ಅವಾಚ್ಯನಾಗಿರುತ್ತಾನೆ, ಇದು ಮೊದಲಾದುದೇ ಮಾಯಾವಾದಿಗಳ ಸಿದ್ಧಾಂತವು. ಕಾರಣ ಪರತತ್ವದಲ್ಲಿ ಯಾವ ವಿಶೇಷವೂ ಇಲ್ಲ ॥ ೮೭ ॥

ಮತ್ತು ಬ್ರಹ್ಮಶೂನ್ಯಗಳಿಗೆ ಭೇದವನ್ನು ಹುಟ್ಟಿಸತಕ್ಕ ಯಾವುದೊಂದು ಧರ್ಮವೂ ಇಲ್ಲ. ಶೂನ್ಯವಾದಿ ಮಾಯಾವಾದಿಗಳು ಇಬ್ಬರು, ಶೂನ್ಯಬ್ರಹ್ಮರಿಬ್ಬರನ್ನೂ ಅಖಂಡರೆಂದು ಅಂಗೀಕರಿಸಿರುವರು. ಕಾರಣ ಶೂನ್ಯಬ್ರಹ್ಮರಿಗೆ ಭೇದವಿಲ್ಲವೆನ್ನುತ್ತಾರೆ.

**ಮೂ ॥ ನ ಚಾಖಂಡತ್ವೇನ ಕಶ್ಚಿದ್ವಿಶೇಷಃ ॥ ೮೮ ॥**

ಅ ॥ ಅಖಂಡತ್ವೇನ=ಅವಯುವಗಳಿಂದೊಡಗೂಡದಿರುವುದರಿಂದ, ಕಶ್ಚಿತ್=ಯಾವುದೊಂದು, ವಿಶೇಷಃ=ಭೇದಕವಾದ ಧರ್ಮವು, ನ ಚ=ಇಲ್ಲವೇ ಇಲ್ಲ.

ತಾ ॥ (1) ಭೇದವು ವಸ್ತುಸ್ವರೂಪವೇ ಆಗಿರುತ್ತದೆ. ವಿಶೇಷದಿಂದ ಹುಟ್ಟತಕ್ಕದ್ದಲ್ಲ. ಆ ಕಾರಣ ವಿಶೇಷವಿಲ್ಲದಿದ್ದರೆ ಏನು ಬಾಧಕವು, ಎಂದು ಹೇಳಕೂಡದು. ಏಕೆಂದರೆ — ಭೇದವು ವಸ್ತುಸ್ವರೂಪವಾದಾಗ್ಯೂ, ಅದರಲ್ಲಿ ವಿವಾದವು ಹುಟ್ಟಿದರೆ ಭೇದವನ್ನು ಜ್ಞಾಪಿಸತಕ್ಕ ಧರ್ಮದಿಂದಲೇ ತಿಳಿಯಬೇಕಾದುದರಿಂದ ವಿಶೇಷವನ್ನು ಅವಶ್ಯವಾಗಿ ಅಪೇಕ್ಷಿಸಬೇಕಾಗಿಯದೆ. (2) 'ನ ಚ ನಿರ್ವಿಶೇಷಬ್ರಹ್ಮವಾದಿನಃ ಶೂನ್ಯಾತ್ಕಶ್ಚಿದ್ವಿಶೇಷಃ' ಎಂದು ಪೂರ್ವದಲ್ಲಿ ಹೇಳಿರುವುದರಿಂದ, ಇಲ್ಲಿ ಪುನಃ 'ನ ಚಾಖಂಡತ್ವೇನ ಕಶ್ಚಿದ್ವಿಶೇಷಃ' ಎಂದು ಪುನರುಕ್ತವಾಯಿತೆಂದರೆ ಪೂರ್ವದಲ್ಲಿ ಸ್ವವಚನವಿರೋಧವು ಬರುವುದರಿಂದ ವಿಶೇಷವಿಲ್ಲವೆಂದೂ, ಇಲ್ಲಿ ಭೇದಕಧರ್ಮವಿಲ್ಲದಿರುವುದರಿಂದ ವಿಶೇಷವಿಲ್ಲವೆಂದೂ ಹೇಳಿರುವುದರಿಂದ ಪುನರುಕ್ತಿಬರಲಿಲ್ಲ. (3) 'ನಿರ್ವಿಶೇಷಂ ಸ್ವಯಂಭಾತಂ' ಇದು ಮೊದಲಾದ ಶೂನ್ಯವಾದಿಯ ವಾಕ್ಯದಿಂದಲೇ ಶೂನ್ಯತತ್ವವನ್ನು ಅಖಂಡವೆಂದು ಅಂಗೀಕಾರಮಾಡಿದ್ದಾನೆ, ಎಂದು ತಿಳಿಯುತ್ತದೆ. ಯಾವುದೊಂದು ವಿಶೇಷವಿಲ್ಲದಿರುವುದೇ **ಅಖಂಡವೆನಿಸುತ್ತದೆ** ॥ ೮೮ ॥

**ಮೂ ॥ ಯದಖಂಡಂ ಪದಂ ಲಕ್ಷ್ಯಂ ಸರ್ವೈರಪಿ ವಿಶೇಷಣೈಃ । ಸರ್ವೈರ್ನಿರ್ವಿಶೇಷಣೈರ್ಮುಕ್ತಂ ತಚ್ಛೂನ್ಯಂ ಪದಮಕ್ಷಯಂ ॥ ಇತಿ ಚ ಶೂನ್ಯವಾದೀ ॥ ೮೯ ॥**

ಅ ॥ ಪದಂ=ಪ್ರಾಪ್ಯವಾದ, ಯತ್ ಅಖಂಡಂ=ಯಾವ ಅಖಂಡವು, ಸರ್ವೈರ್ನಿರ್ವಿಶೇಷಣೈಃ=ನಿರ್ವಿಶೇಷ ಮೊದಲಾದ ಎಲ್ಲಾ ವಿಶೇಷಣಗಳಿಂದಲೂ, ಮುಕ್ತಂ=ರಹಿತವಾದುದೋ, ಸರ್ವೈರಪಿ ವಿಶೇಷಣೈಃ=ಎಲ್ಲಾ ವಿಶೇಷಣಗಳಿಂದಲೂ, ಲಕ್ಷ್ಯಂ=ಉಪಲಕ್ಷ್ಯವಾಗಿದೆಯೋ, ತತ್=ಆ, ಅಕ್ಷಯಂ=ಅವಿನಾಶಿಯಾದ, ಶೂನ್ಯಂ=ಶೂನ್ಯತತ್ವವು, ಪದಂ= ಪ್ರಾಪ್ಯವು, ಇತಿ ಚ=ಹೀಗೆ, ಶೂನ್ಯವಾದೀ=ಶೂನ್ಯವಾದಿಯು (ಹೇಳುತ್ತಾನೆ).

ತಾ ॥ (1) 'ಶೂನ್ಯವು ಅಕ್ಷಯುವಾಗಿದೆ' ಎಂದುಪಪಾದಿಸಲಿಕ್ಕೆ ಅಖಂಡವೆಂದು ಹೇಳಿರುವರು. ಅವಯುವಾದಿಗಳಿದ್ದರೆ ನಾಶವಾಗಬಹುದು. (2) ಯಾವ ವಿಶೇಷಣವೂ ಇಲ್ಲದಿದ್ದರೆ 'ನಿರ್ವಿಶೇಷಂ' ಎಂದು ಮೊದಲಾದ ವಿಶೇಷಣಗಳು ಹೇಗೆ ಕೂಡಬಹುದೆಂದರೆ 'ಹೇಗೆ' ಕಾಗೆ ಇರುವುದು ದೇವದತ್ತನ ಮನೆಯು, ಎಂದು ಹೇಳಲು ಕಾಗೆಯು ಮನೆಯಲ್ಲಿ ಅಂತರ್ಗತವಾಗದೇನೇ ಬೇರೆಯುವರ ಮನೆಯಿಂದ ದೇವದತ್ತನ ಮನೆಯನ್ನು ವ್ಯಾವೃತ್ತಿಮಾಡು ವುದೋ, ಹಾಗೆಯೇ ನಿರ್ವಿಶೇಷತ್ವ ಮೊದಲಾದ ಧರ್ಮಗಳು ಶೂನ್ಯದಲ್ಲಿಲ್ಲದೇನೇ ಶೂನ್ಯತತ್ತ್ವ ವನ್ನು ವ್ಯಾವೃತ್ತಿ ಮಾಡುತ್ತವೆ ॥ ೮೯ ॥

ಮಾಯಾವಾದಿಗಳು 'ಬ್ರಹ್ಮನನ್ನು ಅಖಂಡನೆಂದು' ಅಂಗೀಕರಿಸಿರುತ್ತಾರೆ ಎಂದು ಪ್ರಸಿದ್ಧವೇ ಆಗಿದೆ, ಎಂದು ಹೇಳುತ್ತಾರೆ.

**ಮೂ ॥ ಏವಮೇವ ಮಾಯಾವಾದಿರಾದ್ಧಾಂತಃ ॥ ೯೦ ॥**

ಅ ॥ ಏವಮೇವ= ಇದೇ ರೀತಿಯಾಗಿ, ಮಾಯಾವಾದಿ ರಾದ್ಧಾಂತ=ಮಾಯಾವಾದಿಗಳ ಸಿದ್ಧಾಂತವು.

ತಾ ॥ ಶೂನ್ಯವಾದಿಗಳಿಗೆ ಶೂನ್ಯವು ಅಖಂಡವಾಗಿರುತ್ತದೆ ಎಂಬುವಲ್ಲಿ 'ಪ್ರಕ್ರಿಯಾ, ಪ್ರಮಾಣ, ಲಕ್ಷಣ, ವ್ಯವಹಾರ, ಮೊದಲಾದುದು ಎಷ್ಟು ಉಪಯುಕ್ತವಾಗಿರುತ್ತದೋ, ಅದೆಲ್ಲವೂ ಮಾಯಾವಾದಿಗಳಿಗೂ ಸಮಾನವೇ ಆಗಿರುತ್ತದೆ, ಎಂದು 'ಏವಮೇವ' ಎಂಬುವುದರಿಂದ ಸೂಚಿಸಿದರು. ॥ ೯೦ ॥

'ಬ್ರಹ್ಮ' ಎಂದು ಹೇಳಲು ವಿಧಿಯು ತೋರುತ್ತದೆ. 'ಶೂನ್ಯಂ' ಎಂದು ಹೇಳಲು ನಿಷೇಧವು ತೋರುತ್ತದೆ. ಅಷ್ಟರಿಂದಲೂ ವಿಶೇಷವು ಸಿದ್ಧವಾಗುವುದು, ಎಂದು ಹೇಳಕೂಡದು. ವಿಧಿ ನಿಷೇಧಗಳು ಬ್ರಹ್ಮಶೂನ್ಯಸ್ವರೂಪಗಳೋ, ಅಥವಾ ಬ್ರಹ್ಮಶೂನ್ಯಗಳ ಧರ್ಮಗಳೋ,ನೇ ಕಲ್ಪದಲ್ಲಿ ವಿಧಿ, ನಿಷೇಧ, ಶಬ್ದಗಳಿಂದಲೇ ಹೇಗೆ ವಿಶೇಷವು ಸಿದ್ಧವಾಗುವುದು, ೨ನೇ ಕಲ್ಪದಲ್ಲಿ ಧರ್ಮಗಳೆಂದು ಹೇಳಲಿಕ್ಕೇನೇ ಬರುವುದಿಲ್ಲ, ಎಂದುಪಪಾದಿಸುತ್ತಾರೆ—

**ಮೂ ॥ ನ ಚ ಮಾಯಾವಾದಿನೋ ಭಾವತ್ವಂ ನಾಮ ಧರ್ಮಃ ನ ಚ ಶೂನ್ಯವಾದಿನಶ್ಶೂನ್ಯತ್ವಂ ನಾಮ ಧರ್ಮಃ ॥ ೯೧ ॥**

ಅ ॥ ಮಾಯಾವಾದಿನಃ=ಮಾಯಾವಾದಿಯ ಮತದಲ್ಲಿ (ಬ್ರಹ್ಮಣಃ=ಪರಬ್ರಹ್ಮನಿಗೆ) ಭಾವತ್ವಂ ನಾಮ ಧರ್ಮಃ=ವಿಧಿತ್ವರೂಪವಾದ ಧರ್ಮವು, ನ ಚ= ಅಂಗೀಕರಿಸಲ್ಪಡಲಿಲ್ಲ, ಶೂನ್ಯವಾದಿನಃ=ಶೂನ್ಯವಾದಿಯ ಮತದಲ್ಲಿ, (ಶೂನ್ಯಸ್ಯ=ಶೂನ್ಯತತ್ತ್ವಕ್ಕೆ,) ಶೂನ್ಯತ್ವಂ ನಾಮ ಧರ್ಮಃ=ನಿಷೇಧತ್ವರೂಪವಾದ ಧರ್ಮವು, ನ ಚ=ಅಂಗೀಕರಿಸಲ್ಪಡಲಿಲ್ಲ.

ತಾ ॥ ಆದಕಾರಣ ಶೂನ್ಯವಾದಿಮತಕ್ಕೂ ಮಾಯಾವಾದಿಮತಕ್ಕೂ ವಿಶೇಷವಿಲ್ಲದಿರುವುದರಿಂದ ಹಿಂದಿನ ಸೂತ್ರಗಳಿಗೆ ಶೂನ್ಯವಾದಿಗಳ ಮತವನ್ನು ನಿರಾಕರಿಸತಕ್ಕವುಗಳೆಂದು ಅರ್ಥಮಾಡಿದ್ದರೂ ಈಗ ಮಾಯಾವಾದಿಗಳ ಮತವನ್ನು ನಿರಾಕರಿಸಲಿಕ್ಕೆ ಉದಾಹರಿಸಿದರೂ ಸಿದ್ಧಾಂತ ವಿರೋಧವಿಲ್ಲವೆಂದು ಸಿದ್ಧವಾಯಿತು ॥ ೯೧ ॥

ಆದರೂ ಚಿಂತಿಲ್ಲ. ಪರಬ್ರಹ್ಮನು ಅಖಂಡನಾದುದರಿಂದ ಶೂನ್ಯದಿಂದ ವಿಶೇಷವಿಲ್ಲವೆಂದೂ ಆ ಕಾರಣ ಶೂನ್ಯವಾದಿಗಳನ್ನು ನಿರಾಕರಿಸಿದುದರಿಂದಲೇ ಮಾಯಾವಾದಿಗಳನ್ನು

ನಿರಾಕರಿಸುವುದೂ ಸೂತ್ರಕಾರರಿಗೆ ಅಭಿಮತವಾಗಿದೆ ಎಂದು ವ್ಯಕ್ತವಾಗುತ್ತದೆ. ಹೀಗಾದರೆ ಸೂತ್ರಕಾರರಿಗೆ ಅಪಸಿದ್ಧಾಂತವು ಪ್ರಸಕ್ತವಾಗುವುದು. ಹೇಗೆಂದರೆ— 'ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ' ಬ್ರ. ಸೂ॥ ಅ. ೩. ಪಾ. ೨. ಸೂ. ೧೧ ॥ ಪರಸ್ಯ=ಪರಬ್ರಹ್ಮನಿಗೆ, ಸ್ಥಾನತೋಽಪಿ=ಉಪಾಧಿಯಿಂದಲೂ, ಉಭಯಲಿಂಗಂ=ಸವಿಶೇಷತ್ವ ನಿರ್ವಿಶೇಷತ್ವರೂಪಗಳಾದ ೨ ಲಿಂಗಗಳು, ನ=ಇಲ್ಲವು, ಸರ್ವತ್ರ ಹಿ=ಶ್ರುತ್ಯಾದಿಗಳಲ್ಲಿ ದ್ವೈತಕ್ಕೆ ಅಪವಾದವಾಗಿ ನಿರ್ವಿಶೇಷತ್ವವನ್ನೇ ಪ್ರತಿಪಾದಿಸಿದ್ದರಿಂದ, ಬ್ರಹ್ಮನು ಅಖಂಡನೆಂದೇ ಸೂತ್ರಕಾರರ ಸಿದ್ಧಾಂತವು. ಅಲ್ಲದೆ ಎಲ್ಲಾ ಶ್ರುತಿಗಳೂ ('ಅಶಬ್ದಮಸ್ಪರ್ಶಮರೂಪಂ' ಮೊದಲಾದುವುಗಳು) ಬ್ರಹ್ಮನು ನಿರ್ವಿಶೇಷನೆಂದೇ ಪ್ರತಿಪಾದಿಸುತ್ತವೆ. ಕಾರಣ ಶ್ರುತಿವಿರೋಧವೂ ಬರುವುದು. ಆದ ಪ್ರಯುಕ್ತ ಈ ಸೂತ್ರಗಳಿಂದ ಮಾಯಾವಾದಿಗಳ ಮತ ನಿರಾಸವು ಸೂತ್ರಕಾರರಿಗೆ ಅಭಿಮತವಲ್ಲ, ಎಂದರೆ—

**ಮೂ ॥ ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ ।**
**ಯದಾಸೀತ್ತತ ಏವಾದ್ಯಃ ಸ್ವಯಂಭೂಃ ಸಮಭೂದಜಃ ॥ ೯೨ ॥**

ಅ ॥ ಅನಂತಗುಣೇ=ಅಪರಿಮಿತ ಗುಣಗಳುಳ್ಳ, ಗುಣತಃ ಅನಂತೇ=ಒಂದೊಂದು ಗುಣಗಳಿಗೂ ಅವಧಿಯಿಲ್ಲದಿರುವ, ಅನಂತವಿಗ್ರಹೇ=ಅಪರಿಮಿತ ಶರೀರವುಳ್ಳ, ಮಯಿ=ನನ್ನ ಹೊಕ್ಕಳಿನಲ್ಲಿ, ಯತ್ ಪದ್ಮಂ=ಯಾವ ಪದ್ಮವು, ಆಸೀತ್=ಇರುತ್ತಿತ್ತೋ, ತತ ಏವ=ಆ ಪದ್ಮದಿಂದಲೇ, ಆದ್ಯಃ=ಒಂದನೆಯವನಾದ, ಸ್ವಯಂಭೂಃ ಅಜಃ=ಚತುರ್ಮುಖನು, ಸಮಭೂತ್=ಹುಟ್ಟಿದನು.

ತಾ ॥ (1) ಉತ್ತರಾರ್ಧದಿಂದ 'ಚತುರ್ಮುಖನು ಶ್ರೀಹರಿಯಿಂದ ಹುಟ್ಟಿದವನು' ಎಂಬುವ ವಿಷಯದಲ್ಲಿ (೧) 'ನಾರಾಯಣಾದ್ಬ್ರಹ್ಮಾ ಜಾಯತೇ' ನಾರಾಯಣನಿಂದ ಚತುರ್ಮುಖನು ಹುಟ್ಟುತ್ತಾನೆ. (೨) 'ಯಸ್ಯ ಪ್ರಸಾದಜೋ ಬ್ರಹ್ಮಾ' ಚತುರ್ಮುಖನು ಯಾವ ಶ್ರೀಹರಿಯ ಅನುಗ್ರಹದಿಂದ ಹುಟ್ಟಿದವನು. (೩) 'ಯನ್ನಾಭಿಪದ್ಮಾತ್' ಯಾವ ಶ್ರೀಹರಿಯ ಹೊಕ್ಕಳಿನಲ್ಲಿರುವ ಕಮಲದಿಂದ ಹುಟ್ಟಿದನೋ, ಇದು ಮೊದಲಾದ ಆಗಮಸಮ್ಮತಿಯಿದೆ, ಎಂದು ತೋರಿಸಿದರು. ಹೇಗೆಂದರೆ — (೧) ಸ್ವಾತಂತ್ರ್ಯಾತ್ಸ್ವ ಇತಿ ಪ್ರೋಕ್ತಃ=ಶ್ರೀಹರಿಯು ಸರ್ವಸ್ವತಂತ್ರನಾದುದರಿಂದ 'ಸ್ವಃ' (ಸ್ವಯಂ) ಎಂದು ಹೇಳಲ್ಪಡುತ್ತಾನೆ. (೨) ಅಃ ಇತಿ ಬ್ರಹ್ಮ=ಬ್ರಹ್ಮನು 'ಅಃ' ಎಂದು ಹೇಳಲ್ಪಡುತ್ತಾನೆ, ಎಂದು ಶ್ರುತಿಯು. ಸ್ವಯಂ ಶಬ್ದವು ಅಕಾರವೂ ಶ್ರೀಹರಿಯ ನಾಮಧೇಯವಾಗಿರುತ್ತದೆ. ಸ್ವಯಂಭೂಃ=ಶ್ರೀಹರಿಯಿಂದ ಹುಟ್ಟಿದವನು. ಅಜಃ=ಶ್ರೀಹರಿಯಿಂದ ಹುಟ್ಟಿದವನು ॥ ೯೨ ॥

**ಮೂ ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ಇತಿ ಭಗವದ್ರಾದ್ಧಾಂತಃ ॥ ೯೩ ॥**

[ಗೀ. ಅಧ್ಯಾ. ೧೫, ಶ್ಲೋ. ೧೭.]

ಅ ॥ ಯಃ ಅವ್ಯಯಃ ಈಶ್ವರಃ=ಯಾವ ಅವಿನಾಶಿಯಾದ ಶ್ರೀಹರಿಯು, ಲೋಕತ್ರಯಂ=ಮೂರು ಲೋಕವನ್ನು, ಆವಿಶ್ಯ=ಪ್ರವೇಶಿಸಿ, ಬಿಭರ್ತಿ=ಧರಿಸುತ್ತಾನೋ, ಪೋಷಿಸುತ್ತಾನೋ, ಪುರುಷಃ=ಅಂತಹ ಗುಣಪೂರ್ಣನಾದ ಶ್ರೀಹರಿಯು, ಉತ್ತಮಃ=ಕ್ಷರಾಕ್ಷರ

ಪುರುಷರಿಂದುತ್ತಮನು, ಅನ್ಯಃ=ಭಿನ್ನನು, ಪರಮಾತ್ಮೇತಿ=ಪರಮಾತ್ಮನೆಂದು, ಉದಾಹೃತಃ= ಹೇಳಲ್ಪಟ್ಟದ್ದಾನೆ, ಇತಿ=ಹೀಗೆ, ಭಗವದ್ರಾದ್ಧಾಂತಃ=ಭಗವಂತನ ಸಿದ್ಧಾಂತವು. (ಸೂತ್ರ ಕಾರರ ಸಿದ್ಧಾಂತವು.)

ತಾ ॥ (1) ಇದರಿಂದ ಶ್ರೀಹರಿಗೆ ಎಲ್ಲಾ ವಸ್ತುಗಳಿಂದಲೂ ಭೇದವನ್ನೂ ಉತ್ತಮತ್ವ ವನ್ನೂ ಹೇಳಿದರು. (2) 'ಪರಮಾತ್ಮೇತ್ಯುದಾಹೃತಃ' ಎನ್ನುವುದರಿಂದ ಆಗಮಸಮ್ಮತಿಯು ಹೇಳಲ್ಪಟ್ಟಿತು. (3) 'ಲೋಕತ್ರಯಮಾವಿಶ್ಯ' ಎನ್ನುವುದರಿಂದ ಯಾರು ಯಾರನ್ನು ಪೋಷಿಸು ವನೋ, ಅವನು ಅವನಿಂದ ಉತ್ತಮನು, ಎಂದು ಯುಕ್ತಿಯು. (4) ವಿನಾಶಿಯಾದ ಮೂರು ಲೋಕದಲ್ಲಿದ್ದವನಿಗೆ ನಾಶಬರಬೇಕಾಗುವುದು, ಎಂಬುವ ಸಂಶಯ ನಿರಾಸಕ್ಕಾಗಿ 'ಅವ್ಯಯಃ' ಎಂದು ಹೇಳಿರುವರು. ಅದನ್ನುಪಪಾದಿಸಲಿಕ್ಕಾಗಿ ಐಶ್ವರ್ಯವನ್ನು (ಅಚಿಂತ್ಯಶಕ್ತಿ ಯನ್ನು) ತಿಳಿಸಿಕೊಡುವ 'ಈಶ್ವರಃ' ಎಂಬುವ ಪದವು. (5) ಪರಬ್ರಹ್ಮನು ಅಖಂಡನು, ನಿರ್ವಿಶೇಷನು, ಎಂದು ಸೂತ್ರ ಸಿದ್ಧಾಂತವಾಗಿದ್ದರೆ ಅಪಸಿದ್ಧಾಂತವು ಬರುತ್ತಿತ್ತು. ವೇದವ್ಯಾಸರು ಸ್ಪಷ್ಟವಾಗಿ ಶ್ರೀಹರಿಯು ಅನಂತಾನಂತ ಗುಣಪೂರ್ಣನು, ಎಂದೇ ಪ್ರತಿಪಾದಿಸಿರುವರು. 'ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ' ಈ ಸೂತ್ರಕ್ಕೂ ಹಿಂದಿನ ಅರ್ಥವಲ್ಲವೇ ಅಲ್ಲ. ಜಾಗ್ರದಾದಿ ಎಲ್ಲಾ ಅವಸ್ಥೆಗಳನ್ನೂ ಪ್ರೇರಿಸಿಕೊಂಡಿರುವ ಪರಮಾತ್ಮನು (೧) ಪ್ರತಿ ಶರೀರದಲ್ಲಿಯೂ ಚಕ್ಷುರಾದಿ ಸ್ಥಾನಗಳಲ್ಲಿದ್ದವನು ಪರಸ್ಪರ ಭಿನ್ನನೋ, (೨) ಅಭಿನ್ನನೋ, ಎಂದು ಸಂಶಯವು ಹುಟ್ಟಲು ಸ್ಥಾನಭೇದವಿದ್ದುದರಿಂದ ಪರಮಾತ್ಮನಿಗೂ ಭೇದವಿದೆ, ಎಂಬುವ ಪೂರ್ವಪಕ್ಷವನ್ನು ನಿರಾಕರಿಸಲಿಕ್ಕೆ ಈ ಸೂತ್ರವು ಹೊರಟದೆ. ಸ್ಥಾನಭೇದವಿದ್ದರೂ ಪರಸ್ಪರವಾಗಿ ಬೇರೆಬೇರೆ ರೂಪವಲ್ಲ. 'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಲ್ಲಾ ಪ್ರಾಣಿ ಗಳಲ್ಲಿಯೂ ಒಬ್ಬನೇ ಗುಣಪೂರ್ಣನು, ಇದು ಮೊದಲಾದ ಶ್ರುತಿಯಿದ್ದುದರಿಂದ. ಆದುದರಿಂದ ಸ್ಥಾನಗಳು ಬೇರೆಯಾದರೂ ಪರಮಾತ್ಮನಿಗೆ ತತ್ಪ್ರಯುಕ್ತ ಭೇದವನ್ನು ನಿರಾಕರಿಸಲಿಕ್ಕೆ ಸೂತ್ರವು ಹೊರಟದ್ದು. (6) ಯಾವ ಶ್ರುತಿವಿರೋಧವೂ ಇರುವುದಿಲ್ಲ. ಪೂರ್ವೋತ್ತರ ವಿಚಾರಮಾಡದೆ ಶ್ರುತಿಗೆ ಅರ್ಥವನ್ನು ಹೇಳುವರು. ವೇದವ್ಯಾಸರ ಸಿದ್ಧಾಂತವನ್ನನುಸರಿಸಿಯೇ ಶ್ರುತಿಗಳಿಗೆ ಅರ್ಥ ವನ್ನು ಮಾಡಬೇಕು. ॥ ೯೩ ॥

ಶ್ರುತಿಗಳಲ್ಲಿ 'ಪರಬ್ರಹ್ಮನು ಅನಂತಾನಂತ ಗುಣಪೂರ್ಣನು' ಎಂದು ಸ್ಪಷ್ಟವಾಗಿ ಪ್ರತಿಪಾದಿ ಸಿದುದರಿಂದ 'ನಿರ್ವಿಶೇಷನು' ಎಂದು ಪ್ರತಿಪಾದಿಸುವುದಿಲ್ಲ. ಎಂದಭಿಪ್ರಾಯದಿಂದ ಶ್ರುತಿ ಯನ್ನುದಾಹರಿಸುವರು. —

**ಮೂ ॥ ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾ ಚ ॥ ಇತ್ಯಾದಿ ಶ್ರುತಿಃ ॥ ೯೪ ॥**

ಅ ॥ ಅಸ್ಯ=ಈ ಶ್ರೀಪರಮಾತ್ಮನ, ಪರಾ=ಉತ್ಕೃಷ್ಟವಾದ, ವಿವಿಧೈವ=ಅನೇಕ ಪ್ರಕಾರವಾದ, ಶಕ್ತಿಃ=ಸಾಮರ್ಥ್ಯವು, ಜ್ಞಾನ ಬಲ ಕ್ರಿಯಾ ಚ=ಜ್ಞಾನಬಲಗಳಿಂದೊಡಗೂಡಿದ ಕ್ರಿಯೆಯು ಕೂಡ, ಸ್ವಾಭಾವಿಕೀ=ಪಾರಮಾರ್ಥಿಕವಾಗಿಯೇ, ಶ್ರೂಯತೇ=ಕೇಳಲ್ಪಡುತ್ತದೆ, (ಶ್ರುತಿ ಸಿದ್ಧವಾಗಿದೆ), ಇತ್ಯಾದಿಶ್ರುತಿಃ=ಇದೇ ಮೊದಲಾದ ಶ್ರುತಿಯು.

ತಾ ॥ (1) 'ಸ್ವಾಭಾವಿಕೀ' ಎಂದು ಇದ್ದುದರಿಂದ 'ಬ್ರಹ್ಮನು ಪಾರಮಾರ್ಥಿಕವಾಗಿ ನಿರ್ವಿಶೇಷನೇ. ಅವಿದ್ಯಾಪರಿಕಲ್ಪಿತ ವಿಶೇಷಗಳಿಂದ ಸವಿಶೇಷನು, ಎಂದು ಅದ್ವೈತಿಗಳು

ಹೇಳುವರು.' ಅದು ಶ್ರುತಿವಿರುದ್ಧವಾದ ಪ್ರಯುಕ್ತ ಅಯುಕ್ತವು. (2)ಮತ್ತು ಶ್ರುತಿಗಳು ಅಖಂಡ ಬ್ರಹ್ಮನನ್ನು ಪ್ರತಿಪಾದಿಸುತ್ತವೆ, ಎನ್ನುವುದು ಯುಕ್ತಿವಿರುದ್ಧವೂ ಆಗಿರುತ್ತದೆ. ಹೇಗೆಂದರೆ — ಅಖಂಡಾರ್ಥ ಪ್ರತಿಪಾದಕಗಳೆಂದರೆ, ೧ ತನ್ನ ಗುಣ ಕರ್ಮಾದಿಗಳಿಂದ ಭೇದವಿಲ್ಲದಿರುವ ಬ್ರಹ್ಮ ಪ್ರತಿಪಾದಕಗಳೆಂದರೆ,ಭೇದವಿಲ್ಲದಿದ್ದರೂ ಭೇದಪ್ರತಿನಿಧಿರೂಪವಾದ ವಿಶೇಷದಿಂದಲೇ ಗುಣಗಳಿವೆ, ಎಂಬುವುದು ಯುಕ್ತವಾಗುವುದು. ೨ ಬ್ರಹ್ಮನ ಸ್ವರೂಪವನ್ನುಮಾತ್ರ ಪ್ರತಿಪಾದಿಸುತ್ತವೆ, ಎಂದರೆ, 'ಸತ್ಯಂ ಜ್ಞಾನಮನಂತಂ ಬ್ರಹ್ಮ ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಸ್ಥಳಗಳಲ್ಲಿ 'ಸತ್ಯ' ಎಂಬ ಪದವು ತಿಳಿಸಿಕೊಟ್ಟ ಸ್ವರೂಪವನ್ನೇ, ಜ್ಞಾನಾದಿ ಪದಗಳೂ ತಿಳಿಸಿಕೊಡುವುದರಿಂದ ಏಕಾರ್ಥಕವಾಗುವುದು. ಇದರಿಂದ 'ಸತ್ಯಂ ಜ್ಞಾನಂ ಅನಂತಂ' ಎಂದು ಒಟ್ಟಿಗೆ ಪ್ರಯೋಗವು ಕೂಡದೆ ಹೋಗಬೇಕಾಗುವುದು. ಆದಕಾರಣ ಬ್ರಹ್ಮನಿಗೆ, ಅನಂತಾನಂತ ಗುಣಗಳಿವೆ, ಎಂಬುವುದೇ ಶ್ರುತಿಗಳ ಅಭಿಪ್ರಾಯವು. ॥ ೯೪ ॥

ಪರರು ಆಶಂಕಿಸುತ್ತಾರೆ — ಶ್ರುತಿಗಳು ನಿರ್ವಿಶೇಷನಾದ ಬ್ರಹ್ಮನನ್ನು ಪ್ರತಿಪಾದಿಸುವುದಾದರೂ ಶ್ರೌತಪದಗಳಿಗೆ ಪರ್ಯಾಯತ್ವವು ಬರಬೇಕಾಗುವುದೆಂದು ಹೇಳಕೂಡದು. ಪ್ರತಿಪಾದ್ಯವಾದ ಅರ್ಥಕ್ಕೆ ವಿಶೇಷವಿಲ್ಲದಿದ್ದರೂ, ಧರ್ಮಗಳಿಗೆ ಭೇದವಿದ್ದುದರಿಂದ ಒಟ್ಟಿಗೆ ಪ್ರಯೋಗವು ಕೂಡಬಹುದು. ಬ್ರಹ್ಮನಲ್ಲಿ ಆರೋಪಿಸಿರುವ ಅಸತ್ಯತ್ವಾದಿಗಳನ್ನು ವ್ಯಾವೃತ್ತಿಮಾಡುವುದಕ್ಕೋಸ್ಕರ 'ಸತ್ಯಂ ಜ್ಞಾನಂ' ಇದುಮೊದಲಾದ ಪದಗಳನ್ನು ಪ್ರಯೋಗಿಸಿರುವರು. ಕಾರಣ ವೈಯರ್ಥ್ಯವಿಲ್ಲವು. ಹೇಗೆಂದರೆ — ವೇದಾಂತವಾಕ್ಯಗಳು ೨ ಪ್ರಕಾರ ಪ್ರವೃತ್ತಗಳಾಗುವವು. ೧ 'ತತ್ತ್ವಮಸಿ' ಮೊದಲಾದ ಮಹಾವಾಕ್ಯಗಳಲ್ಲಿರುವ 'ತತ್‌ತ್ವಂ' ಇತ್ಯಾದಿ ಪದಗಳ ಅರ್ಥವನ್ನು ಪ್ರತಿಪಾದಿಸುತ್ತವೆ. ೨ನೇದ್ದು ಜೀವಬ್ರಹ್ಮರಿಗೆ ಐಕ್ಯರೂಪವಾದ ವಾಕ್ಯಾರ್ಥವನ್ನು ಬೋಧಿಸುವುವು. (1) 'ಬ್ರಹ್ಮವಿದಾಪ್ನೋತಿ ಪರಂ' ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ, ಎನ್ನುವಲ್ಲಿ ಪ್ರಸ್ತುತನಾದ, ಬ್ರಹ್ಮನು ಯಾರು? ಎಂದು ಕೇವಲ ಬ್ರಹ್ಮನ ಸ್ವರೂಪವನ್ನು ವಿಚಾರಿಸಿದಾಗ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಬ್ರಹ್ಮನಿಗೆ ಲಕ್ಷಣವು ಹೇಳಲ್ಪಟ್ಟಿತು, ಇಂತಹ ಪದಾರ್ಥವನ್ನು ಬೋಧಿಸುವ ವಾಕ್ಯವು ನಿರ್ಧರ್ಮಕನಾದ ಬ್ರಹ್ಮನನ್ನು ಪ್ರತಿಪಾದಿಸುತ್ತದೆ. ಈ ಜ್ಯೋತಿಸ್ಸುಗಳಲ್ಲಿ 'ಚಂದ್ರನು ಯಾರು' ಎಂದು ಪ್ರಶ್ನೆಮಾಡಿದಾಗ 'ಪ್ರಕೃಷ್ಟಪ್ರಕಾಶವುಳ್ಳವನು ಚಂದ್ರನು' ಎಂದು ಲಕ್ಷಣವನ್ನು ಹೇಳುತ್ತದೆ. ಪ್ರಕೃಷ್ಟಪ್ರಕಾಶಪದಗಳು ಚಂದ್ರನ ಸ್ವರೂಪವನ್ನು ಮಾತ್ರ ತಿಳಿಸಿಕೊಡುವವು. ಅದರೂ ಪರ್ಯಾಯಪದಗಳಲ್ಲ. ಏಕೆಂದರೆ— ಪ್ರಥಮತಃ ಗುಣಸಂಬಂಧವನ್ನು ಪ್ರತಿಪಾದಿಸಿ, ಆದಿಯಲ್ಲಿ ಪ್ರಶ್ನೆಮಾಡಿದ್ದಕ್ಕೆ ಉತ್ತರವು ಸಮವಾಗಲಿಲ್ಲವಾದುದರಿಂದ ಅದನ್ನು ಬಿಟ್ಟು ಲಕ್ಷಣೆಯಿಂದ (ಅಮುಖ್ಯವೃತ್ತಿಯಿಂದ) ಚಂದ್ರನ ಸ್ವರೂಪವನ್ನೇ ಬೋಧಿಸುತ್ತವೆ. ನಕ್ಷತ್ರಾದಿಗಳಿಂದ ಚಂದ್ರನು ಬೇರೆ ಎಂದು ತಿಳಿಸುವುದಕ್ಕಾಗಿ ಪ್ರಕೃಷ್ಟಾದಿ ಪದಗಳನ್ನು ಪ್ರಯೋಗಿಸಿದ್ದರಿಂದ ವ್ಯರ್ಥವಲ್ಲ. ಹಾಗೆಯೇ ಸತ್ಯಾದಿಪದಗಳಿಗೂ ಮಾಯಾವಿಶಿಷ್ಟ ಬ್ರಹ್ಮನಿಗೆ ಸತ್ಯತ್ವಾದಿಧರ್ಮಗಳಿದ್ದುದರಿಂದ ಆತನಲ್ಲಿ ಶಕ್ತಿಯೆಂಬ ಮುಖ್ಯವೃತ್ತಿಯಿಂದ ಆ ಪದಗಳು ಸತ್ಯತ್ವಾದಿಧರ್ಮಗಳನ್ನು ತಿಳಿಸಿಕೊಡುವವುಗಳಾಗಿ ಲಕ್ಷಣಯಾ ಅಂದರೆ ಅಮುಖ್ಯವೃತ್ತಿಯಿಂದ ಅಖಂಡಬ್ರಹ್ಮಸ್ವರೂಪವನ್ನು ಮಾತ್ರ ತಿಳಿಸಿಕೊಡುತ್ತವೆ. ಕಾರಣ ಪರ್ಯಾಯಪದಗಳಲ್ಲ. ಹಾಗಾದರೆ ಸತ್ಯಾದಿಪದಗಳಿಂದ ಪ್ರತಿಪಾದಿಸಲಿಕ್ಕೆ ಇಷ್ಟವಾದ ಬ್ರಹ್ಮಸ್ವರೂಪವು 'ಬ್ರಹ್ಮ'ನೆಂಬುವ ಒಂದು ಪದದಿಂದಲೇ ಸಿದ್ಧವಾಗುವುದರಿಂದ ಜ್ಞಾನಾದಿಪದಗಳು ವ್ಯರ್ಥಗಳೆಂದು ಹೇಳಕೂಡದು. ಲಕ್ಷ್ಯವಾದ ಅರ್ಥಕ್ಕೆ ಭೇದವಿಲ್ಲದಿದ್ದರೂ ಆರೋಪಿಸಿರುವ

ಅಸತ್ಯತ್ವಾದಿಗಳನ್ನು ನಿರಾಕರಿಸುವುದೇ ಪ್ರಯೋಜನವು. ತಥಾಚ ಹೀಗೆ ಅನುಮಾನವು ಸಿದ್ಧವಾಗುವುದು. ೧ಸತ್ಯಜ್ಞಾನಾದಿವಾಕ್ಯಂ='ಸತ್ಯಂ ಜ್ಞಾನಂ'ಇದುಮೊದಲಾದವಾಕ್ಯಗಳು,ಅಖಂಡಾರ್ಥನಿಷ್ಠಂ=ಅಖಂಡವಾದ ವಸ್ತು (ಬ್ರಹ್ಮ) ವನ್ನು ಪ್ರತಿಪಾದಿಸುವುವು, ಲಕ್ಷಣವಾಕ್ಯತ್ವಾತ್=ಲಕ್ಷಣವನ್ನು ಪ್ರತಿಪಾದಿಸುವ ವಾಕ್ಯವಾದುದರಿಂದ, 'ಪ್ರಕೃಷ್ಟಪ್ರಕಾಶಃ ಚಂದ್ರಃ' ಇತ್ಯಾದಿ ವಾಕ್ಯವತ್='ಚಂದ್ರನು ಒಳ್ಳೇ ಪ್ರಕಾಶವುಳ್ಳವನು' ಇದು ಮೊದಲಾದ ವಾಕ್ಯದಂತೆ. ೨ ಸತ್ಯಜ್ಞಾನಾದಿವಾಕ್ಯಂ=ಬ್ರಹ್ಮಸ್ವರೂಪಮಾತ್ರಪರಂ=ಬ್ರಹ್ಮನ ಸ್ವರೂಪವನ್ನು ಮಾತ್ರ ತಿಳಿಸಿಕೊಡುವುದು, ತತ್ಪ್ರಶ್ನೋತ್ತರತ್ವಾತ್=ಆ ಪ್ರಶ್ನೆಗೆ ಉತ್ತರವಾದುದರಿಂದ, ಯತ್ ಯತ್ಸ್ವರೂಪಮಾತ್ರಪ್ರಶ್ನೋತ್ತರಂ ತತ್ ತತ್ಸ್ವರೂಪಮಾತ್ರಪರಂ ಯಥೋದಾಹೃತಂ ವಾಕ್ಯಂ=ಯಾವುದು ಯಾರ ಸ್ವರೂಪವನ್ನು ಮಾತ್ರ ಕೇಳಿದ್ದಕ್ಕೆ ಉತ್ತರವೋ, ಅದು ಅದರ ಸ್ವರೂಪವನ್ನು ಮಾತ್ರ ತಿಳಿಸಿಕೊಡುವುದು. ಹಿಂದಿನ ವಾಕ್ಯದಂತೆ. ಇದೇ ರೀತಿಯಾಗಿ ಬ್ರಹ್ಮಜೀವರಿಗೆ ಐಕ್ಯವನ್ನು ಬೋಧಿಸುವ 'ತತ್ತ್ವಮಸಿ' ಮೊದಲಾದ ವಾಕ್ಯಗಳೂ ಚಿತ್ಸ್ವರೂಪವನ್ನು ಮಾತ್ರ ವಿಷಯೀಕರಿಸುವ ಯಥಾರ್ಥಜ್ಞಾನವನ್ನು ಹುಟ್ಟಿಸುವುವು. ಹೇಗೆಂದರೆ— ಶ್ವೇತಕೇತುವು ಉದ್ದಾಲಕರ ಹತ್ತಿರ 'ಕೋಽಹಂ' ನಾನು ಯಾರು ಎಂದು ಸ್ವರೂಪವನ್ನು ಮಾತ್ರ ವಿಚಾರಮಾಡಿದಾಗ ಉದ್ದಾಲಕರು 'ತತ್ತ್ವಮಸಿ' ಎಂದುತ್ತರಕೊಟ್ಟರು. 'ತತ್ತ್ವಮಸಿ' ಎಂಬುವ ವಾಕ್ಯವು ಸಮಾನಾಧಿಕರಣವಾದುದರಿಂದ (ಪ್ರವೃತ್ತಿನಿಮಿತ್ತಗಳು ಬೇರೆಬೇರೆಯಾಗಿದ್ದು ಒಂದೇ ವಿಭಕ್ತಿಯುಳ್ಳ ಶಬ್ದವಾದುದರಿಂದ) ದೇವದತ್ತನ ಧನವು ಎನ್ನುವುದರಂತೆ ಭಿನ್ನಾರ್ಥಕವೆಂದು ಹೇಳಕೂಡದು. (2) ಕಾರ್ಯಕಾರಣಗಳಾಗದಿರುವುದರಿಂದ 'ಮಣ್ಣು ಘಟವು' ಎನ್ನುವುದರಂತೆ ಎಂದೂ ಹೇಳಕೂಡದು. ಜೀವಬ್ರಹ್ಮಸ್ವರೂಪಗಳಿಗೆ ಐಕ್ಯವು ಮೊದಲೇ ಸಿದ್ಧವಾಗಿರುವುದರಿಂದ ಐಕ್ಯವನ್ನು ಬೋಧಿಸುತ್ತದೆ ಎಂದೂ ಹೇಳಕೂಡದು. ಆದಕಾರಣ ಸರ್ವಜ್ಞತ್ವ, ಅಸರ್ವಜ್ಞತ್ವರೂಪಾಂಶಗಳನ್ನು ಬಿಟ್ಟು ಚಿನ್ಮಾತ್ರವನ್ನು ಲಕ್ಷಿಸತಕ್ಕುದು. (ಅಮುಖ್ಯವೃತ್ತಿಯಿಂದ ಬೋಧಿಸುತ್ತದೆ ಎಂದು ಇಟ್ಟುಕೊಳ್ಳಬೇಕು.) 'ಭೇದವದೆ' ಎಂಬುವ ಭ್ರಾಂತಿಯನ್ನು ತಿರಸ್ಕರಿಸುವುದೇ ಪ್ರಯೋಜನವು. ತತ್ ಅಂದರೆ ಸರ್ವಜ್ಞತ್ವವಿಶಿಷ್ಟನು, ತ್ವಂ ಅಂದರೆ ಅಸರ್ವಜ್ಞತ್ವವಿಶಿಷ್ಟನು. ಕಾರಣ ವಾಚ್ಯಾರ್ಥಗಳಿಗೆ ಭೇದವಿದ್ದುದರಿಂದಲೂ ಭೇದಭ್ರಾಂತಿಯನ್ನು ನಿರಾಕರಿಸುವುದೆಂಬ ಪ್ರಯೋಜನವಿದ್ದುದರಿಂದಲೂ ವೈಯರ್ಥ್ಯವಿಲ್ಲವು. ಹೇಗೆಂದರೆ — 'ಇವನು ಯಾರು' ಎಂದು ಪ್ರಶ್ನೆಮಾಡಿದಾಗ 'ಸೋಽಯಂ ದೇವದತ್ತಃ' ಆ ಈ ದೇವದತ್ತನು, ಎಂಬುವ ೩ ಪದಗಳು ದೇವದತ್ತನ ಸ್ವರೂಪವನ್ನು ಮಾತ್ರ ತಿಳಿಸಿಕೊಡುವಾಗ್ಯೂ ಸಃ=ಆ ದೇಶಕಾಲಗಳಲ್ಲಿದ್ದವನು, ಅಯಂ=ಈ ದೇಶಕಾಲಗಳಲ್ಲಿದ್ದವನು ಇವರಿಗೆ ಐಕ್ಯವು ಕೂಡದಿರುವುದರಿಂದ 'ಆ ದೇಶಕಾಲ' ಈ 'ದೇಶಕಾಲ' ಎಂಬುವ ಅಂಶಗಳನ್ನು ಬಿಟ್ಟು ದೇವದತ್ತನ ಸ್ವರೂಪವನ್ನು ಅಮುಖ್ಯವೃತ್ತಿಯಿಂದ ಇಟ್ಟುಕೊಂಡು ಪ್ರವೃತ್ತವಾದುದರಿಂದ ಪರ್ಯಾಯಪದವಲ್ಲವು. ಆ ದೇಶಕಾಲದಲ್ಲಿದ್ದವನು ಬೇರೆ, ಈ ದೇಶಕಾಲದಲ್ಲಿದ್ದವನು ಬೇರೆ ಎಂಬೀ ಭ್ರಾಂತಿಯನ್ನು ನಿರಾಕರಿಸಲಿಕ್ಕಾಗಿ ಪ್ರಯೋಗಿಸಿದ್ದರಿಂದ ವೈಯರ್ಥ್ಯವಿಲ್ಲವು. ಈ ವಿಷಯದಲ್ಲಿಯೂ ಹೀಗೆ ಅನುಮಾನವು ಸಿದ್ಧವಾಗುವುದು. ೧ ತತ್ತ್ವಮಸೀತ್ಯಾದಿವಾಕ್ಯಂ='ತತ್ತ್ವಮಸಿ' ಮೊದಲಾದವಾಕ್ಯಗಳು, ಅಖಂಡಾರ್ಥನಿಷ್ಠಂ=ಅಖಂಡವಾದ ಅರ್ಥವನ್ನು ಪ್ರತಿಪಾದಿಸುವುವು. ಅಕಾರ್ಯಕಾರಣದ್ರವ್ಯನಿಷ್ಠತ್ವೇ ಸತಿ ಸಮಾನಾಧಿಕರಣತ್ವಾತ್=ಕಾರ್ಯಕಾರಣಗಳಾಗದ ದ್ರವ್ಯವನ್ನು ಪ್ರತಿಪಾದಿಸುವುದಾಗಿ ಏಕವಿಭಕ್ತ್ಯಂತ ಪದದಿಂದ ಹೇಳಲ್ಪಡುವ ವಸ್ತುವನ್ನು ಪ್ರತಿಪಾದಿಸುವುದರಿಂದ, 'ಸೋಽಯಂ ದೇವದತ್ತಃ' ಇತ್ಯಾದಿ ವಾಕ್ಯವತ್=ಅವನೇ ಈ ದೇವದತ್ತನು ಎಂಬಿತ್ಯಾದಿ ವಾಕ್ಯಗಳಂತೆ.

೨ ತತ್ತ್ವಮಸ್ಯಾದಿವಾಕ್ಯಂ='ತತ್ತ್ವಮಸಿ'ಮೊದಲಾದವಾಕ್ಯಗಳು, ಬ್ರಹ್ಮಸ್ವರೂಪಮಾತ್ರಪರಂ= ಕೇವಲ ಬ್ರಹ್ಮಸ್ವರೂಪವನ್ನು ಬೋಧಿಸುತ್ತವೆ, ಸ್ವರೂಪಮಾತ್ರಪ್ರಶ್ನೋತ್ತರತ್ವಾತ್=ಕೇವಲ ಸ್ವರೂಪ ಪ್ರಶ್ನೆಗೆ ಉತ್ತರವಾದುದರಿಂದ, ಯತ್ ಯತ್ಸ್ವರೂಪಮಾತ್ರಪ್ರಶ್ನೋತ್ತರಂ ತತ್ ತತ್ಸ್ವರೂಪಮಾತ್ರಪರಂ ಯಥಾ ಸೋಽಯಂ ದೇವದತ್ತಃ ಇತ್ಯಾದಿವಾಕ್ಯವತ್=ಯಾವುದು ಯಾರ ಸ್ವರೂಪವನ್ನು ಮಾತ್ರ ಪ್ರಶ್ನೆಮಾಡಿದ್ದಕ್ಕೆ ಉತ್ತರವೋ, ಅದು ಅದರ ಸ್ವರೂಪವನ್ನು ಮಾತ್ರ ಬೋಧಿಸುತ್ತದೆ, ಅವನೇ ಈ ದೇವದತ್ತನು, ಎಂಬಿತ್ಯಾದಿ ವಾಕ್ಯಗಳಂತೆ. ಆದಕಾರಣ ಶ್ರುತಿಗಳು ಅಖಂಡಾರ್ಥವನ್ನೇ ಪ್ರತಿಪಾದಿಸುವುದರಿಂದಲೂ ಯಾವ ಬಾಧಕವಿಲ್ಲವಿರುವುದರಿಂದಲೂ ಸಗುಣಬ್ರಹ್ಮನನ್ನು ಪ್ರತಿಪಾದಿಸುತ್ತವೆ, ಎನ್ನುವುದು ಹೇಗೆ ಕೂಡಬಹುದೆಂದು ಅದ್ವೈತಿಗಳು ಆಕ್ಷೇಪಿಸಿದರು. ಆಗ ಆಚಾರ್ಯರು ದೃಷ್ಟಾಂತದಲ್ಲಿ ಸಾಧ್ಯವಿಲ್ಲದಿರುವುದರಿಂದ ನಿಮ್ಮ ಅನುಮಾನವೇ ಅಸಂಗತವೆಂದಭಿಪ್ರಾಯದಿಂದ ೧ನೇ ದೃಷ್ಟಾಂತವನ್ನು ದೂಷಿಸುವರು.

**ಮೂ || ಪ್ರಕೃಷ್ಟಪ್ರಕಾಶಶ್ಚಂದ್ರ ಇತ್ಯಾದಿಷು ಪ್ರಕೃಷ್ಟತ್ವಾದಿ ವಿಶೇಷಣಾನಿ ಸಂತ್ಯೇವೇತಿ ನ ತತ್ಸಾಮ್ಯಂ || ೯೫ ||**

**ಅ ||** ಪ್ರಕೃಷ್ಟಪ್ರಕಾಶಶ್ಚಂದ್ರ ಇತ್ಯಾದಿಷು='ಚಂದ್ರನು ಉತ್ಕೃಷ್ಟವಾದ ಪ್ರಕಾಶವುಳ್ಳವನು' ಇದು ಮೊದಲಾದ ಲಕ್ಷಣವಾಕ್ಯಗಳಲ್ಲಿ, (ಇರುವ ಪದಗಳಿಂದ ಹೇಳಲ್ಪಡುವ,) ಪ್ರಕೃಷ್ಟತ್ವಾದಿವಿಶೇಷಣಾನಿ=ಪ್ರಕೃಷ್ಟತ್ವ ಮೊದಲಾದ ವಿಶೇಷಣಗಳು, ಸಂತ್ಯೇವ=ಇರುತ್ತವೆ, ಇತಿ=ಆದುದರಿಂದ, ತತ್ಸಾಮ್ಯಂ=ಪ್ರಕೃಷ್ಟಪ್ರಕಾಶವುಳ್ಳವನು ಚಂದ್ರನು ಇದು ಮೊದಲಾದವುಗಳ ಸಾದೃಶ್ಯವು, ನ=(ಸತ್ಯಜ್ಞಾನಾದಿ ವಾಕ್ಯಗಳಿಗೆ) ಇಲ್ಲವು. (ಆ ವಾಕ್ಯವನ್ನು ದೃಷ್ಟಾಂತೀಕರಿಸಿಕೊಂಡು ಸತ್ಯಜ್ಞಾನಾದಿ ವಾಕ್ಯಗಳಿಗೆ ಅಖಂಡಾರ್ಥವನ್ನು ಸಾಧಿಸುವುದು ಯುಕ್ತವಲ್ಲ.)

**ತಾ ||** (1) ವಾಚ್ಯವಾದ ಅರ್ಥವು ಕೂಡದಿದ್ದರೇನೇ ಲಕ್ಷಣಾವನ್ನಂಗೀಕರಿಸಬೇಕು. ವಾಚ್ಯಾರ್ಥಕ್ಕೆ ಬಾಧಕವಿಲ್ಲದಿದ್ದರೂ ಲಕ್ಷಣಾವನ್ನಂಗೀಕರಿಸಿದರೆ 'ಬೆಲ್ಲವು ಮಧುರವು' ಎನ್ನುವಲ್ಲಿಯೂ ಲಕ್ಷಣಾವನ್ನಂಗೀಕರಿಸಬೇಕಾಗುವುದು. ಪ್ರಕೃತ ಚಂದ್ರನಲ್ಲಿ ಪ್ರಕೃಷ್ಟತ್ವಾದಿ ವಿಶೇಷಣಗಳು ಪ್ರಮಾಣಸಿದ್ಧಗಳಾಗಿವೆ. ಆ ಕಾರಣ ಅನುಪಪತ್ತಿಯಿಲ್ಲದಿರುವುದರಿಂದ 'ಪ್ರಕೃಷ್ಟಪ್ರಕಾಶಃ ಚಂದ್ರಃ' ಇತ್ಯಾದಿವಾಕ್ಯಗಳು ಲಕ್ಷಣಾವೃತ್ತಿಯಿಂದ (ಅಂದರೆ ಅಮುಖ್ಯವೃತ್ತಿಯಿಂದ) ಚಂದ್ರಾದಿಗಳ ಸ್ವರೂಪವನ್ನು ಪ್ರತಿಪಾದಿಸತಕ್ಕವುಗಳಲ್ಲ. (2) ಹಾಗಾದರೆ ಶಕ್ತಿರೂಪವಾದ ಮುಖ್ಯವೃತ್ತಿಯಿಂದಲೇ ಪ್ರಕೃಷ್ಟಾದಿಪದಗಳು ಚಂದ್ರನ ಸ್ವರೂಪವನ್ನು ತಿಳಿಸಿಕೊಡುತ್ತವೆ. ಕಾರಣ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲವು, ಎಂದರೆ ಲಕ್ಷಣಾವನ್ನಂಗೀಕರಿಸದೆ ಶಕ್ತಿಯಿಂದಲೇ ಚಂದ್ರನ ಸ್ವರೂಪವನ್ನು ತಿಳಿಸಿಕೊಡುತ್ತವೆ, ಎಂದಂಗೀಕರಿಸಿದರೆ ಕೇವಲ ಚಂದ್ರನ ಸ್ವರೂಪವು 'ಚಂದ್ರ' ಎಂಬ ಒಂದು ಪದದಿಂದಲೇ ತಿಳಿಯುವುದರಿಂದ ಪ್ರಕೃಷ್ಟಮೊದಲಾದ ಪದಗಳು ವ್ಯರ್ಥಗಳಾಗುವುವು ಅಲ್ಲದೆ ಪರ್ಯಾಯಪದಗಳಾಗಬೇಕಾಗುವುವು. ಅಂತೂ ದೃಷ್ಟಾಂತದಲ್ಲಿ ಸಾಧ್ಯವಿಲ್ಲದಿರುವುದರಿಂದ ಈ ದೃಷ್ಟಾಂತದಿಂದ ಸತ್ಯಜ್ಞಾನಾದಿ ವಾಕ್ಯಗಳು ಲಕ್ಷಣಾವೃತ್ತಿಯಿಂದ ಬ್ರಹ್ಮನ ಸ್ವರೂಪವನ್ನು ಮಾತ್ರ ತಿಳಿಸಿಕೊಡುತ್ತವೆ ಎಂದು ಸಿದ್ಧವಾಗಲಾರದು || ೯೫ ||

'ಸೋಽಯಂ ದೇವದತ್ತಃ ಇತ್ಯಾದಿ ವಾಕ್ಯವತ್' ಎಂಬ ೨ನೇ ದೃಷ್ಟಾಂತವನ್ನೂ ದೂಷಿಸುತ್ತಾರೆ.

**ಮೂ ॥ ಅನಿತ್ಯದೇಶಕಾಲಸಂಬಂಧಿತ್ವಸ್ಯ ಸತ್ವಾನ್ನ ಸೋಽಯಂ ದೇವದತ್ತ ಇತ್ಯಾದ್ಯುಪಮಾ ಚ ॥ ೯೬ ॥**

ಅ ॥ ಅನಿತ್ಯ ದೇಶಕಾಲಸಂಬಂಧಿತ್ವಸ್ಯ=ಅನಿತ್ಯವಾದ ದೇಶಕಾಲಗಳ ಸಂಬಂಧವುಳ್ಳ ತನವು, ಸತ್ವಾತ್=ಇದ್ದುದರಿಂದ, ಸೋಽಯಂ ದೇವದತ್ತಃ ಇತ್ಯಾದಿ=ಆ ಈ ದೇವದತ್ತನು ಇದು ಮೊದಲಾದ ವಾಕ್ಯವು,ಉಪಮಾ=('ತತ್ವಮಸಿ'ಮೊದಲಾದ ವಾಕ್ಯಗಳು ಅಖಂಡಾರ್ಥವನ್ನು ಪ್ರತಿಪಾದಿಸುತ್ತವೆ ಎಂಬುವುದರಲ್ಲಿ) ದೃಷ್ಟಾಂತವು, ನ ಚ=ಆಗಲಾರದು.

ತಾ ॥ (1) ಸಃ=ಅತೀತದೇಶಕಾಲಗಳ ಸಂಬಂಧವಿರುವವನೆಂದೇ ಅನುಭವವು. ಅಂದರೆ, ಆ ದೇಶಕಾಲಗಳ ಸಂಬಂಧವು ಪೂರ್ವದಲ್ಲಿ ಇರುತ್ತಿತ್ತು. ಅಯಂ=ವರ್ತಮಾನದೇಶಗಳ ಸಂಬಂಧವಿರುವವನು, ಅಂದರೆ ಈಗ ಈ ದೇಶಕಾಲಗಳ ಸಂಬಂಧವು ದೇವದತ್ತನಿಗೆ ಇದೆ ಎಂದು. ಇದು ದೇವದತ್ತಾದಿಗಳಲ್ಲಿ ಪ್ರಮಾಣಸಿದ್ಧವೇ ಆಗಿರುತ್ತದೆ. ಕಾರಣ ವಾಚ್ಯವಾದ ಅರ್ಥವೇ ಕೂಡುವುದರಿಂದ 'ಸೋಽಯಂ ದೇವದತ್ತಃ' ಇದು ಮೊದಲಾದ ವಾಕ್ಯಗಳು ಲಕ್ಷಣಾ ವೃತ್ತಿಯಿಂದ ದೇವದತ್ತಾದಿಗಳ ಸ್ವರೂಪವನ್ನುಮಾತ್ರ ತಿಳಿಸಿಕೊಡಲಾರವು. ಇದನ್ನು ದೃಷ್ಟಾಂತೀಕರಿಸಿಕೊಂಡು 'ತತ್ತ್ವಮಸಿ' ಮೊದಲಾದ ವಾಕ್ಯಗಳು ಅಖಂಡಾರ್ಥವನ್ನು ಪ್ರತಿಪಾದಿಸುತ್ತವೆ, ಎಂದು ಸಿದ್ಧವಾಗಲಾರದು. ಅಂತೂ ಲಕ್ಷಣಾವೃತ್ತಿಯನ್ನು ಅಂಗೀಕರಿಸಕೂಡದು ॥ ೯೬ ॥

ವಾಚ್ಯಾರ್ಥವು ಅನುಪಪನ್ನವಾಗದಿದ್ದರೂ ತಾತ್ಪರ್ಯವು ಕೂಡುವುದಿಲ್ಲ. ಶತ್ರುವಿನ ಮನೆಯಲ್ಲಿ ಭೋಜನಮಾಡತಕ್ಕವನನ್ನು ಕುರಿತು ಆಪ್ತನು 'ವಿಷಂ ಭುಂಕ್ಷ್ವ' ವಿಷವನ್ನು ಉಣ್ಣು ಎಂದು ಹೇಳಿದರೂ ಹೀಗೆ ತಾತ್ಪರ್ಯವಿಲ್ಲವು. ಶತ್ರುಗಳ ಅನ್ನವನ್ನು ಊಟಮಾಡಬಾರದೆಂದೇ ತಾತ್ಪರ್ಯವು. ಅದನ್ನು ಲಕ್ಷಿಸತಕ್ಕದ್ದು. ಅಂದರೆ ಅಮುಖ್ಯವೃತ್ತಿಯಿಂದ ಇಟ್ಟುಕೊಳ್ಳಬೇಕು. ಹೀಗೆಯೇ 'ತತ್ತ್ವಮಸಿ' ಎಂಬುವಲ್ಲಿಯೂ ಹಿಂದೆ ಹೇಳಿದ ಪ್ರಕಾರ ಸರ್ವಜ್ಞತ್ವ ವಿಶಿಷ್ಟ, ಅಸರ್ವಜ್ಞತ್ವವಿಶಿಷ್ಟಗಳಿಗೆ ಐಕ್ಯರೂಪವಾದ ಮುಖ್ಯಾರ್ಥವು ಕೂಡದಿದ್ದರೂ, ಉಪದೇಶಿಸತಕ್ಕ ಉದ್ದಾಲಕರಿಗೆ ವಿಶಿಷ್ಟಗಳಿಗೆ ಐಕ್ಯವನ್ನು ಪ್ರತಿಪಾದಿಸುವುದರಲ್ಲಿ ತಾತ್ಪರ್ಯವಿಲ್ಲದಿರುವುದರಿಂದ ಲಕ್ಷಣಾ, ಎಂದಂಗೀಕರಿಸುವೆವು. ಸ್ವರೂಪಮಾತ್ರ ಪ್ರಶ್ನೆಗೆ ಉತ್ತರವಾದುದರಿಂದ ತಾತ್ಪರ್ಯವಿಲ್ಲವೆನ್ನುವುದು ಸಿದ್ಧವಾಗುವುದು. ಅದಲ್ಲದೆ ಈ ಜ್ಯೋತಿಸ್ಸುಗಳಲ್ಲಿ ಚಂದ್ರನು ಯಾರು? ಇವನು ಯಾರು? ಎಂದೂ, ಚಂದ್ರ ದೇವದತ್ತರ ಸ್ವರೂಪವನ್ನು ಮಾತ್ರ ಪ್ರಶ್ನೆಮಾಡಿದ್ದಾಗಿದೆ. ಪ್ರಶ್ನಿಸಿಕೊಂಡವನು ಪ್ರಕೃಷ್ಟತ್ವಾದಿಗಳಿಂದ ವಿಶಿಷ್ಟವಾದ ಅರ್ಥವನ್ನು ಹೇಳಿದರೆ ಹುಣಸೆಮರವನ್ನು ಪ್ರಶ್ನಿಸಿಕೊಂಡವನು ನಿಂಬ (ಕಹಿಬೇವು) ವೃಕ್ಷವನ್ನು ಹೇಳುವವನಂತೆ ಅಸಂಗತವಾದ ಮಾತುಳ್ಳವನಾಗುತ್ತಾನೆ ಎಂದಾಕ್ಷೇಪಿಸುವುದಾದರೆ, ಅದಕ್ಕೆ ಸ್ವರೂಪವನ್ನು ಮಾತ್ರ ಪ್ರಶ್ನೆ ಮಾಡಿದ್ದಾದರೆ ಇದು ಕೂಡಬಹುದಿತ್ತು; ಆದರೆ ಕೇವಲ ಸ್ವರೂಪವನ್ನು ಪೂರ್ವದಲ್ಲಿಯೇ ತಿಳಿದಿರುವುದರಿಂದ ಕೇವಲ ಸ್ವರೂಪವನ್ನು ಪ್ರಶ್ನೆಮಾಡಿದ್ದಲ್ಲ. ಯಾರೊಬ್ಬನೂ ಸಿದ್ಧವಾದುದನ್ನು ಕೇಳಲಾರನು, ಎಂದು ಹೇಳುತ್ತಾರೆ.

**ಮೂ ॥ ದೇವದತ್ತಾದಿಸ್ವರೂಪಮಾತ್ರಸ್ಯ ಸಿದ್ಧತ್ವಾನ್ನ ಸ್ವರೂಪಮಾತ್ರೇ ಪ್ರಶ್ನಃ ॥ ೯೭ ॥**

ಅ ॥ ದೇವದತ್ತಾದಿಸ್ವರೂಪಮಾತ್ರಸ್ಯ=ದೇವದತ್ತಮೊದಲಾದವರ ಕೇವಲಸ್ವರೂಪಗಳು, ಸಿದ್ಧತ್ವಾತ್=ಸಿದ್ಧವಾದುದರಿಂದ, ಸ್ವರೂಪಮಾತ್ರೇ=ಕೇವಲ ಸ್ವರೂಪವಿಷಯದಲ್ಲಿ, ಪ್ರಶ್ನಃ=ಪ್ರಶ್ನೆಯು, ನ=ಅಲ್ಲ.

ತಾ ॥ (1) 'ಚಂದ್ರನು ಪ್ರಕೃಷ್ಟಪ್ರಕಾಶವುಳ್ಳವನು' ಎಂಬೀಉದಾಹರಣೆಯನ್ನು ಆದಿಯಲ್ಲಿ ನಿರಾಕರಿಸಿ ಆ ಮೇಲೆ 'ಸೋಽಯಂ ದೇವದತ್ತಃ' ಎಂಬುವುದನ್ನು ನಿರಾಕರಿಸಿರುವರು. ಆದಕಾರಣ 'ಚಂದ್ರಾದಿಸ್ವರೂಪಮಾತ್ರಸ್ಯ' ಎಂದು ಹೇಳದೆ ಕ್ರಮವನ್ನು ಏತಕ್ಕೆ ಬಿಟ್ಟರು? ಎಂದರೆ ಪರರು ತಮ್ಮ ಗ್ರಂಥದಲ್ಲಿ ಪ್ರಕೃಷ್ಟಾದಿ ವಾಕ್ಯವಿಷಯದಲ್ಲಿಯೇ ಪ್ರಶ್ನೆಯು ಕೂಡುವುದಿಲ್ಲ, ಎಂದಿದ್ದರು. 'ಸೋಽಯಂ' ಎಂಬುವಲ್ಲಿ ಆದರೂ ವಾಚ್ಯವಾದ ಅರ್ಥವು ಕೂಡುವುದಿಲ್ಲವೆಂದೇ. ಆದ ಕಾರಣ 'ಚಂದ್ರಾದಿ ಸ್ವರೂಪಮಾತ್ರಸ್ಯ' ಎಂದು ಹೇಳಿದರೆ 'ಪ್ರಕೃಷ್ಟಪ್ರಕಾಶಃ' ಎಂಬುವ ವಾಕ್ಯವಿಷಯದಲ್ಲಿ ಬಂದ ಅನುಪಪತ್ತಿಯನ್ನೇ ಪರಿಹರಿಸಿದ್ದು, ಎಂದು ತಿಳಿಯುತ್ತಿತ್ತು. ಅಂತೂ ಮುಖ್ಯಾರ್ಥದಲ್ಲಿ ತಾತ್ಪರ್ಯಾನುಪಪತ್ತಿಯನ್ನು ಪರಿಹರಿಸಿದ್ದು, 'ಪ್ರಕೃಷ್ಟಪ್ರಕಾಶಃ ಚಂದ್ರಃ, ಸೋಽಯಂ ದೇವದತ್ತಃ' ಈ ೨ ದೃಷ್ಟಾಂತದಲ್ಲಿಯೂ ಸರಿಯೇ, ಎಂದು ತಿಳಿಸಲಿಕ್ಕೆ ಕ್ರಮವನ್ನು ಬಿಟ್ಟಿರುವರು. (3) ಕ್ರಮವನ್ನು ಬಿಟ್ಟರೂ 'ದೇವದತ್ತಾದಿಸ್ವರೂಪಮಾತ್ರಸ್ಯ' ಎಂದು ಹೇಳಿದ್ದರಿಂದ 'ಸೋಽಯಂ' ಎಂಬುವ ವಾಕ್ಯದಲ್ಲಿಯೇ ಮುಖ್ಯಾರ್ಥದಲ್ಲಿ ತಾತ್ಪರ್ಯ ಕೂಡುವುದಿಲ್ಲ ಎಂಬುವುದರ ಪರಿಹಾರವೇ ಮಾಡಲ್ಪಡುತ್ತದೆ, ಎಂದು ತಿಳಿಯುವುದು. 'ಪ್ರಕೃಷ್ಟ ಪ್ರಕಾಶಃ' ಎಂಬುವ ವಾಕ್ಯದ ಅನುಪಪತ್ತಿಯು ಪರಿಹರಿಸಲ್ಪಡುವುದಿಲ್ಲ. ಆದ ಕಾರಣ ೨ ದೃಷ್ಟಾಂತದ ಅನುಪಪತ್ತಿಯನ್ನು ಪರಿಹರಿಸುತ್ತದೆ ಎಂದು ಹೇಳಿದ್ದು ಅಯುಕ್ತವು, ಎಂದು ಹೇಳಕೂಡದು. ಏಕೆಂದರೆ — ಪ್ರಕೃಷ್ಟಾದಿ ವಾಕ್ಯವಿಷಯದಲ್ಲಿ ಪ್ರಶ್ನೆಯು ಕೂಡುವುದಿಲ್ಲವೆಂದು ಪರರು ಒಪ್ಪಿರುವುದರಿಂದ ಆ ಅನುಪಪತ್ತಿಯನ್ನು ಸುಖದಿಂದ ಪರಿಹರಿಸಬಹುದು. (4) 'ಸೋಽಯಂ' ಎಂಬುವ ವಾಕ್ಯವು ವಿಶಿಷ್ಟಾರ್ಥಕವಾದರೆ 'ಕೋಽಯಂ' ಇವನು ಯಾರು? ಎಂದು ಸ್ವರೂಪವನ್ನು ಮಾತ್ರ ಪ್ರಶ್ನೆಮಾಡಿದ್ದು ಕೂಡುವುದಿಲ್ಲ, ಎನ್ನುವುದನ್ನು ಪರರು ಹೇಳದಿರುವುದರಿಂದ ಯಾಕೆ ಶಂಕಿಸಿದ್ದು, ಎಂದರೆ ಪ್ರಕೃಷ್ಟಾದಿ ವಾಕ್ಯದಂತೆ 'ಸೋಽಯಂ' ಎಂಬುವಲ್ಲಿಯೂ 'ಸ್ವರೂಪಮಾತ್ರಪ್ರಶ್ನೋ ನ ಯುಜ್ಯತೇ' ಎಂಬೀನ್ಯಾಯಯಾರ್ಥವು ಪ್ರಾಪ್ತವಾಗುವುದರಿಂದ ಅದನ್ನು ಅವಶ್ಯವಾಗಿ ಪರಿಹರಿಸಬೇಕು ॥ ೪೭ ॥

(1) ಚಂದ್ರ ದೇವದತ್ತಾದಿಗಳ ಸ್ವರೂಪಗಳು ಸಿದ್ಧಗಳಾದರೂ ನಕ್ಷತ್ರಾದಿ ಸಾಧಾರಣವಾಗಿಯೇ ಸಿದ್ಧಗಳಾಗಿವೆ. ಚಂದ್ರನ ಸ್ವರೂಪವು ನಕ್ಷತ್ರಾದಿಗಳಿಂದ ಭಿನ್ನವಾಗಿದೆ, ಎಂದು ಸಿದ್ಧವಾಗಲಿಲ್ಲ. ದೇವದತ್ತನ ಸ್ವರೂಪವು ನಿನ್ನೆ ನೋಡಿದವನಿಗೂ ಇವನಿಗೂ ಭೇದವಿಲ್ಲವೆಂದು ಸಿದ್ಧವಾಗಲಿಲ್ಲ. ಆ ಕಾರಣಸ್ವರೂಪದಲ್ಲಿಯೇ ಪ್ರಶ್ನೆಯು. (2) ಆದುದರಿಂದಲೇ 'ಪ್ರಕಾಶಃ ಎಂದಿಷ್ಟೇ ಹೇಳಿದರೆ ನಕ್ಷತ್ರಾದಿಗಳಿಗೂ ಬರಬೇಕಾಗುವುದು. 'ಪ್ರಕೃಷ್ಟಃ' ಎಂದಿಷ್ಟೇ ಹೇಳಿದರೆ ಕಗ್ಗತ್ತಲೆಗೂ ಬರುವುದು. ನಕ್ಷತ್ರಾದಿಗಳಿಂದ ಬೇರೆಮಾಡಿ ಚಂದ್ರನ ಸ್ವರೂಪವನ್ನು ಮಾತ್ರ ಪ್ರತಿಪಾದನೆಮಾಡಲಿಕ್ಕೆ 'ಪ್ರಕೃಷ್ಟಪ್ರಕಾಶಶ್ಚಂದ್ರಃ' ಎಂದು ಹೇಳಿರುವರು. ಹೀಗೆಯೇ 'ಸಃ' ಎಂದಿಷ್ಟೇ ಹೇಳಿದರೂ, 'ಅಯಂ' ಎಂದಿಷ್ಟೇ ಹೇಳಿದರೂ, ಆಗ ನೋಡಿದವನೂ ಈಗ ನೋಡಿದವನೂ ಬೇರೆ ಬೇರೆ ಎಂಬುವ ಭ್ರಾಂತಿಯನ್ನು ನಿರಾಕರಿಸಿದ ಹಾಗೆ ಆಗುವದಿಲ್ಲ. ಭ್ರಾಂತಿಯನ್ನು ನಿರಾಕರಿಸಿ ಚೈತ್ರನ ಸ್ವರೂಪವನ್ನು ಮಾತ್ರ ಪ್ರತಿಪಾದಿಸಲಿಕ್ಕೆ 'ಸೋಽಯಂ ದೇವದತ್ತಃ' ಎಂದು ಹೇಳಿರುವರು, ಎಂದು ತಿಳಿಯುವುದೆಂದು ಹೇಳಕೂಡದು. ಏಕೆಂದರೆ— (೧) ನಕ್ಷತ್ರಾದಿಗಳಿಂದ ಭಿನ್ನನು ಇತ್ಯಾದಿ ಸ್ವರೂಪವೇ ಪ್ರಶ್ನೆಗೂ ಪ್ರತ್ಯುತ್ತರಕ್ಕೂ ವಿಷಯವೆಂದರೆ ವಿಶಿಷ್ಟವಾದ ಅರ್ಥವೇ

ಆಯಿತು. ವ್ಯಾವೃತ್ತ್ಯಾದಿಗಳೂ ಆಕ್ಷೇಪದಿಂದಲೇ ಸಿಗುವುವು. ಶಬ್ದಾರ್ಥವಲ್ಲವೆಂದರೆ, ವಿಶೇಷಣವಿಲ್ಲದೆ ನಕ್ಷತ್ರಾದಿಗಳಿಂದ ಭೇದವೊದಲಾದುದೂ ಆಕ್ಷೇಪದಿಂದ ಸಿದ್ಧವಾಗಲಾರದು. ೨ ಚಂದ್ರಾದಿಗಳ ಸ್ವರೂಪದಲ್ಲಿ ವಿಶೇಷಣವಾಗದೇನೇ ನಕ್ಷತ್ರಾದಿಗಳಿಂದ ಭೇದವೊದಲಾದುದು ಸಿದ್ಧವಾಗುವುದು, ಎಂದರೆ ಅದನ್ನು ನಿರಾಕರಿಸುತ್ತಾರೆ.

**ಮೂ ॥ ನಕ್ಷತ್ರಾದಿವ್ಯತಿರೇಕಮಾತ್ರಸ್ಯಾಪಿ ಸಿದ್ಧತ್ವಾನ್ನ ವ್ಯತಿರೇಕಮಾತ್ರೇ ॥ ಅನ್ಯಥಾ ಪ್ರಶ್ನಸ್ಯೈವಾಸಂಭವಾತ್ ॥ ೯೮ ॥**

ಅ ॥ ನಕ್ಷತ್ರಾದಿವ್ಯತಿರೇಕಮಾತ್ರಸ್ಯಾಪಿ=ನಕ್ಷತ್ರಾದಿಗಳಿಂದ ಕೇವಲ ಭೇದವೂ ಕೂಡ, ಸಿದ್ಧತ್ವಾತ್=ಘಟಾದಿಗಳಲ್ಲಿ ಸಿದ್ಧವಾದ ಕಾರಣ, ವ್ಯತಿರೇಕಮಾತ್ರೇ=ಕೇವಲಭೇದವೆಂಬ ವಿಷಯದಲ್ಲಿ (ಭೇದವಿಲ್ಲವೆಂಬುವ ವಿಷಯದಲ್ಲಿಯೂ), ನ=ಪ್ರಶ್ನೆಯು ಕೂಡುವುದಿಲ್ಲ. (ಪ್ರಶ್ನಿಸಿ ಕೊಂಡವನು ಘಟಾದಿಗಳಲ್ಲಿ ನಕ್ಷತ್ರಾದಿಗಳಿಂದ ಭೇದವನ್ನಾಗಲೀ, ಭೇದವಿಲ್ಲವೆಂಬುವುದನ್ನಾಗಲೀ ತಿಳಿಯುವುದಿಲ್ಲವೆಂದು ಕೂಡುವುದಿಲ್ಲವಷ್ಟೇ), ಅನ್ಯಥಾ=ಕೇವಲ ಸ್ವರೂಪವೂ ಸಿದ್ಧವಾಗದಿದ್ದರೆ, ಪ್ರಶ್ನಸ್ಯೈವ = ಪ್ರಶ್ನೆಗೇನೇ, ಅಸಂಭವಾತ್ = ಕೂಡುವಿಕೆಯಿಲ್ಲದಿರುವುದರಿಂದ, ಅಂದರೆ ಪ್ರಶ್ನೆಯೇ ಕೂಡಲಾರದು.

ತಾ ॥ ಪ್ರಶ್ನೆಮಾಡುವವನು ಚಂದ್ರಾದಿಗಳ ಸ್ವರೂಪವನ್ನು ಸಹ ತಿಳಿಯದಿದ್ದರೆ, 'ಚಂದ್ರನು ಯಾರು' ಎಂದು ಹೇಗೆ ಪ್ರಶ್ನೆಮಾಡುವನು? ತಿಳಿಯದಿರುವ ವಸ್ತುವನ್ನು ಅನುವಾದ ಮಾಡಿ ಪ್ರಶ್ನೆಮಾಡಲಾರನು. ಆದ ಕಾರಣ ಚಂದ್ರಾದಿಗಳ ಸ್ವರೂಪವನ್ನು ತಿಳಿದಿದ್ದಾನೆ, ಎಂದು ಸಿದ್ಧವಾಗುವುದು. ॥ ೯೮ ॥

ಪ್ರಶ್ನೆ, ಪರಿಹಾರಗಳಿಗೆ ಕೇವಲ ಸ್ವರೂಪವು ವಿಷಯವಾಗದಿದ್ದರೆ ಯಾವುವು ವಿಷಯಗಳಾಗುವುವು. ಎಂದರೆ—

**ಮೂ ॥ ಅತಃ ಕೈರ್ವಿಶೇಷಣೈರ್ವಿಶಿಷ್ಟ ಇತಿ ಪ್ರಶ್ನೇ ಪ್ರಕೃಷ್ಟಪ್ರಕಾಶ ತದ್ದೇಶಕಾಲಾದಿವಿಶಿಷ್ಟ ಏವ ವಾಕ್ಯಾರ್ಥಃ ॥ ೯೯ ॥**

ಅ ॥ (ಯಾವ ಕಾರಣದಿಂದ ಚಂದ್ರಾದಿಗಳ ಕೇವಲ ಸ್ವರೂಪದಲ್ಲಿ ಪ್ರಶ್ನೆಯು ಕೂಡಲಾರದೋ) ಅತಃ=ಆದಕಾರಣ, ಕೈರ್ವಿಶೇಷಣೈರ್ವಿಶಿಷ್ಟಃ ಇತಿ ಪ್ರಶ್ನೇ=ಯಾವ ವಿಶೇಷಣಗಳಿಂದ ಕೂಡಿದ್ದಾನೆ, ಎಂದು ಪ್ರಶ್ನೆಮಾಡಲು, ಪ್ರಕೃಷ್ಟಪ್ರಕಾಶತದ್ದೇಶಕಾಲಾದಿವಿಶಿಷ್ಟ ಏವ= ಉತ್ಕೃಷ್ಟಪ್ರಕಾಶತ್ವ, ಆ ದೇಶಕಾಲಾದಿಗಳಿಂದ ಕೂಡಿರುತ್ತಾನೆ ಎಂದೇ, ವಾಕ್ಯಾರ್ಥಃ=ವಾಕ್ಯದ ಅಭಿಪ್ರಾಯವು, ಉಪಪದ್ಯತೇ=ಕೂಡುತ್ತದೆ.

ತಾ ॥ (1) ಚಂದ್ರನು ಯಾರು, ಇವನು ಯಾರು, ಎಂದು ಸಾಮಾನ್ಯಾಕಾರವಾದ ಪ್ರಶ್ನವಾಕ್ಯದ ರೀತಿಯಿಂದ ಕೇಳಿದರೂ ಯಾವ ವಿಶೇಷಣಗಳಿಂದ ಕೂಡಿರುತ್ತಾನೆ, ಎಂದು ವಿಶಿಷ್ಟವನ್ನು ವಿಷಯೀಕರಿಸುವ ಪ್ರಶ್ನೆಯೆಂದೇ ಅಂಗೀಕರಿಸಬೇಕು. ಪ್ರಶ್ನೆಯು ವಿಶಿಷ್ಟವನ್ನು ವಿಷಯೀಕರಿಸಲು ಪರಿಹಾರವಾಕ್ಯಕ್ಕೂ ವಿಶಿಷ್ಟಾರ್ಥವೇ ಕೂಡುತ್ತದೆ. (2) ಅವುಗಳಲ್ಲಿ 'ಪ್ರಕೃಷ್ಟಪ್ರಕಾಶಶ್ಚಂದ್ರಃ' ಇದುಮೊದಲಾದ ವಾಕ್ಯಗಳು ಪ್ರಕೃಷ್ಟಪ್ರಕಾಶತ್ವಾದಿಗಳಿಂದ ಕೂಡಿದ ಚಂದ್ರಮೊದಲಾದವರನ್ನು ಪ್ರತಿಪಾದಿಸುತ್ತವೆ. ನಕ್ಷತ್ರಾದಿಗಳಿಂದ ಭಿನ್ನನೆಂಬುವುದು ಅರ್ಥಾತ್ ಸಿಗುವುದು. (3) 'ಸೋಽಯಂ ದೇವದತ್ತಃ' ಇದುಮೊದಲಾದ ವಾಕ್ಯಗಳು ಕೆಲವು ವೇಳೆ ಆ ದೇಶ

ಕಾಲಗಳ ಸಂಬಂಧವುಳ್ಳವನಿಗೆ ಈ ದೇಶಕಾಲಗಳ ಸಂಬಂಧವನ್ನು ಪ್ರತಿಪಾದಿಸುತ್ತದೆ. ಕೆಲವು ವೇಳೆ ಈ ದೇಶಕಾಲಗಳ ಸಂಬಂಧವುಳ್ಳವನಿಗೆ ಆ ದೇಶಕಾಲಗಳ ಸಂಬಂಧವನ್ನು ಪ್ರತಿಪಾದಿಸುತ್ತದೆ. ಇವರಿಗೆ ಐಕ್ಯವು ಅರ್ಥಾತ್‌ಸಿಗುವುದು. (4) ಕೆಲವುವೇಳೆ ವಿಶಿಷ್ಟಗಳೆರಡಕ್ಕೂ ಐಕ್ಯವನ್ನು ಪ್ರತಿಪಾದಿಸುತ್ತದೆ. (5) ಹೀಗೆಯೇ 'ಬ್ರಹ್ಮವಿದಾಪ್ನೋತಿ ಪರಂ' ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ. ಎಂಬುವ ಮಾತಿನಿಂದ ಸಾಮಾನ್ಯಾಕಾರವಾಗಿ ತಿಳಿದ ಪರಬ್ರಹ್ಮನು ಯಾವ ವಿಶೇಷಣಗಳಿಂದ ಯುಕ್ತನಾಗಿರುತ್ತಾನೆ ಎಂದು ವಿಶೇಷಣವನ್ನು ತಿಳಿಯಬೇಕೆಂಬಿಚ್ಛೆಯಿಂದಲೇ ಪ್ರಶ್ನೆಮಾಡಲು 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಹೀಗೆ ಸತ್ಯತ್ವಾದಿಗಳಿಂದ ಕೂಡಿರುತ್ತಾನೆ ಎಂದೇ ಶ್ರುತಿಯಲ್ಲಿ ಹೇಳಲ್ಪಟ್ಟಿದೆ. (6) ಜೀವಾತ್ಮನಾದರೂ ಪ್ರತ್ಯಕ್ಷಪ್ರಮಾಣದಿಂದ ಸಾಮಾನ್ಯವಾಗಿ ತಿಳಿಯಲ್ಪಟ್ಟಿರುತ್ತಾನೆ. ಕಾರಣ ಆತನ ವಿಶೇಷವನ್ನು ತಿಳಿಯಲು ಅಪೇಕ್ಷಿಸಿ ಪ್ರಶ್ನಿಸಿಕೊಂಡವನಾಗಿ 'ಸಿಂಹೋ ದೇವದತ್ತಃ' ಎಂದರೆ,ಸಿಂಹಸದೃಶನು ದೇವದತ್ತನು ಎಂದು ಹೇಗೆ ಅರ್ಥವಾಗುವುದೋ ಹಾಗೆಯೇ 'ತತ್ತ್ವಮಸಿ' ಎಂಬುವ ವಾಕ್ಯದಿಂದಲೂ ನೀನು ಪರಮಾತ್ಮ ಸದೃಶನು ಎಂದೇ ಅರ್ಥವಾಗುವುದು. ಐಕ್ಯವು (ಅಂದರೆ ನೀನು ಪರಬ್ರಹ್ಮನೆಂಬುವುದು) ಪ್ರಮಾಣಬಾಧಿತವಾಗಿರುತ್ತದಷ್ಟೆ! (7) ಹಾಗಾದರೆ ಶಬ್ದಪ್ರಯೋಗವು ತಮ್ಮಧೀನವಾಗಿರಲು ಇಂತಹ ಗೌಣಪ್ರಯೋಗವನ್ನು ಏಕೆ ಮಾಡಿರುವರು ಎಂದು ಶಂಕಿಸಿದರೆ 'ತಾನು ಮಹಾಗುಣಗಳುಳ್ಳವನು, ಸರ್ವಸ್ವತಂತ್ರನು' ಎಂದು ತಿಳಿದು ಶ್ವೇತಕೇತುವು ಸ್ತಬ್ಧನಾಗಿರುತ್ತಾನೆ. ಆತನನ್ನುದ್ದೇಶಿಸಿ ತಾವೇ ಸ್ವತಂತ್ರರೆಂದು ಭಾವಿಸಿಕೊಂಡ ಸರ್ವಜೀವರ ಅಹಂಕಾರವನ್ನು ಶಾಂತಿಮಾಡಲಿಕ್ಕಾಗಿ 'ತತ್ತ್ವಮಸಿ' ಎಂದು ಹೇಳಿದ್ದಾಗಿರುತ್ತದೆ. ಬೇರೆ ರೀತಿಯಾಗಿ ಹೇಳಿದರೆ ಅಹಂಕಾರವು ಶಾಂತವಾಗುತ್ತಿರಲಿಲ್ಲ. ಹೀಗೆ ಹೇಳಿದರೆ ವಿಚಾರವು ಹುಟ್ಟುವುದು. ಪ್ರತ್ಯಕ್ಷಾದಿಪ್ರಮಾಣವಿರೋಧವು ಬರುವುದರಿಂದ ಮುಖ್ಯಾರ್ಥವು ಕೂಡಲಾರದು. ಅಪ್ರಸಿದ್ಧವಾದುದನ್ನು ತಿಳಿಯಲಿಕ್ಕೆ ಪ್ರಸಿದ್ಧವಾದುದನ್ನು ದೃಷ್ಟಾಂತೀಕರಿಸುವುದರಿಂದ ಅವನಂತೆ ನೀನು ಎಂಬುವ ಅರ್ಥವೂ ಕೂಡಲಾರದು. ಆದುದರಿಂದ 'ತತ್ತ್ವಮಸಿ' ಎಂಬುವುದಕ್ಕೆ ಕೇವಲ ಉಪಮಾನದಲ್ಲಿ ತಾತ್ಪರ್ಯವಲ್ಲವೆಂದು ತಿಳಿದು ಸೂರ್ಯ ಪ್ರತಿಸೂರ್ಯರಂತೆಯೇ ಈಶ್ವರನಿಗೂ ನನಗೂ ಬಿಂಬ ಪ್ರತಿಬಿಂಬಭಾವವು ಅದೆ. ಆದುದರಿಂದ ಆತನೇ ಸರ್ವಸ್ವತಂತ್ರನು, ನಿಯಾಮಕನು, ನಾನು ನಿಯಮ್ಯನು ಎಂದು ತಿಳಿಯುತ್ತಾ ಅಹಂಕಾರವನ್ನು ಬಿಟ್ಟುಬಿಡುತ್ತಾನೆ. ನೀನು ಪರತಂತ್ರನು ಎಂದಿಷ್ಟೇ ಹೇಳಿದರೆ ರಾಜ, ರಾಜನಭಟ ಇವರಂತೇ, ಎಂದಿಷ್ಟೇ ಜ್ಞಾನವು ಬರುವುದು. ಅಂತೂ ಪ್ರತಿಬಿಂಬನಾದ ತನಗೆ ನಿಷಿದ್ಧಗಳಲ್ಲದ ಬಿಂಬದಲ್ಲಿರುವ ಅನೇಕ ಧರ್ಮಗಳನ್ನು ತಿಳಿದುಕೊಳ್ಳುವನು. ಕಾರಣ, ಅನೇಕಾರ್ಥವನ್ನು ತಿಳಿಯಲಿಕ್ಕಾಗಿ 'ತತ್ ತ್ವಮಸಿ' ಎಂದು ಹೇಳಿದ್ದಾಗಿರುತ್ತದೆ ॥ ೯೯ ॥

ಹೀಗೆ ಸತ್ಯಜ್ಞಾನಾದಿ ವಾಕ್ಯಗಳಿಗೆ ಅಖಂಡಾರ್ಥತ್ವವನ್ನು ನಿರಾಕರಿಸಿ ವಿಶಿಷ್ಟಾರ್ಥತ್ವವನ್ನು ಸಮರ್ಥಿಸಿದರು. ಅದನ್ನೇ ಬೇರೆ ಹೇತುವಿನಿಂದಲೂ ಉಪಪಾದಿಸುತ್ತಾರೆ.

**ಮೂ ॥ ಅಂಗೀಕ್ರಿಯಮಾಣತ್ವಾದ್ವಿಶಿಷ್ಟಾದೇರನಿರ್ವಚನೀಯಾಭಾವಾಚ್ಚ ಸತ್ಯತ್ವಂ ಚ ಸಿದ್ಧಂ ॥ ೧೦೦ ॥**

**ಅ ॥** ವಿಶಿಷ್ಟಾದೇಃ=ವಿಶಿಷ್ಟ ವಿಶೇಷಣ ಇವುಮೊದಲಾದುದಕ್ಕೆ, ಅಂಗೀಕ್ರಿಯಮಾಣತ್ವಾತ್=ಅಂಗೀಕರಿಸಲ್ಪಟ್ಟಪ್ರಯುಕ್ತವೂ, ಅನಿರ್ವಚನೀಯಾಭಾವಾಚ್ಚ=ಅನಿರ್ವಚನೀಯವು ಇಲ್ಲದಿರುವುದರಿಂದಲೂ, ಸತ್ಯತ್ವಂ ಚ=ಸತ್ಯತ್ವವೂ ಕೂಡ, ಸಿದ್ಧಂ=ಸಿದ್ಧವಾಯಿತು.

**ತಾ ||** (1)'ಸತ್ಯಜ್ಞಾನಾದಿಗಳು ಲಕ್ಷಣಯಾ ಬ್ರಹ್ಮಸ್ವರೂಪವನ್ನು ಮಾತ್ರ ಪ್ರತಿಪಾದಿಸುತ್ತವೆ' ಎಂದು ಹೇಳುವವರು ಅವಶ್ಯವಾಗಿ ವಾಚ್ಯಾರ್ಥವನ್ನೊಡಂಬಡಬೇಕು. ವಾಚ್ಯವಾದ ಅರ್ಥವಿಲ್ಲದೆ ಲಕ್ಷಣೆಯಿರಲಾರದು. ಅನಂತತ್ವಾದಿಗಳು ಬೇರೆಯೆಲ್ಲಿಯೂ ಇಲ್ಲ. ಆದಕಾರಣ ಬ್ರಹ್ಮನಲ್ಲಿಯೇ ಸತ್ಯತ್ವ ಮೊದಲಾದ ವಿಶೇಷಣಗಳು, ಅದಕ್ಕೆ ಉಪಯುಕ್ತಗಳಾದ ಭೇದ ಮೊದಲಾದುವುಗಳು, ಸತ್ಯತ್ವಾದಿ ವಿಶೇಷಣಗಳಿಂದ ಕೂಡಿದ ಆಕಾರವೂ ಇವೆ ಎಂದಂಗೀಕರಿಸಬೇಕು. ಅಂತೂ ಮುಖ್ಯಾರ್ಥವನ್ನು ಬ್ರಹ್ಮನಲ್ಲಿ ಒಡಂಬಡಬೇಕಾದುದರಿಂದ ಬಾಧಕಗಳಿಲ್ಲದಿರುವುದರಿಂದ ಕೇವಲ ಸ್ವರೂಪದಲ್ಲಿ 'ಲಕ್ಷಣಾ' ಎಂದಾಶ್ರಯಿಸಿ ಏನು ಪ್ರಯೋಜನವು? (2) ಹಾಗಾದರೆ ಬ್ರಹ್ಮನಲ್ಲಿ ವಿಶಿಷ್ಟಾದಿಗಳನ್ನು ಅಂಗೀಕರಿಸುವುದಾದರೂ ಅವುಗಳು ಸತ್ಯಗಳಲ್ಲ. ಆದಕಾರಣ ಪಾರಮಾರ್ಥಿಕನಾದ ಬ್ರಹ್ಮನ ಸ್ವರೂಪದಲ್ಲಿ ಸೇರಿದ ವಿಶೇಷಣವಾಗಿ ಹೇಳಲಿಕ್ಕೆ ಬರಲಾರದು ಎಂದೇ ಬಾಧಕವು. ಎಂದೂ ಹೇಳಕೂಡದು. ಏಕೆಂದರೆ— ಅವುಗಳು ಅಸತ್ಯ ಆಗಲಾರವು. ಅತಂತ್ವಾಸತ್ವಾದ ವಸ್ತುವು ಉಪಲಕ್ಷಕವಾಗಿ ವ್ಯಾವೃತ್ತಿಯನ್ನು ಹುಟ್ಟಿಸಲಾರದು. (3) ಪ್ರಮಾಣವೇ ಇಲ್ಲದಿರುವುದರಿಂದ ಅನಿರ್ವಚನೀಯವೆಂದೂ ಹೇಳಕೂಡದು. ಆದಕಾರಣ ವಿಶಿಷ್ಟಾದಿಗಳು ಸತ್ಯಗಳೆಂದೇ ಸಿದ್ಧಗಳಾಗುವವು. ಅಂತೂ ಬಾಧಕವಿಲ್ಲದಿರುವುದರಿಂದ ವಿಶಿಷ್ಟವೇ ಸತ್ಯಜ್ಞಾನಾದಿವಾಕ್ಯಕ್ಕೆ ಅರ್ಥವು || ೧೦೦ ||

ವಿಶಿಷ್ಟವು 'ವಿಶೇಷಣ' 'ವಿಶೇಷ್ಯ' ಅವುಗಳ ಸಂಬಂಧಗಳಿಂದ (1) ಭಿನ್ನವೋ (2) ಅಭಿನ್ನವೋ (3) ಭಿನ್ನಾಭಿನ್ನವೋ (೧) ಬೇರೆ ಎಂದು ಹೇಳಕೂಡದು. ದಂಡೀ=ದಂಡವುಳ್ಳವನೆಂಬುವಲ್ಲಿ, ದಂಡ, ಪುರುಷ ಸಂಬಂಧಗಳು ಹೊರತು ಬೇರೊಬ್ಬನು ತೋರುವುದಿಲ್ಲ. ಇದ್ದರೆ ದಂಡಿಯನ್ನು ಕರಕೊಂಡು ಬಾ ಎಂದು ಹೇಳಲು ಮತ್ತೊಬ್ಬನನ್ನೇ ಕರಕೊಂಡು ಬರಬೇಕಾಗುವುದು. (೨) ಅಭಿನ್ನನೆಂಬುವ ಕಲ್ಪದಲ್ಲಿ 'ದಂಡ ಸಂಬಂಧವೇ ದಂಡಿತ್ವವು' ಅದು ಪ್ರತ್ಯೇಕವಾಗಿ ದಂಡಾದಿಗಳ ಸ್ವರೂಪವಾದರೆ ವಸ್ತುತಃ ದಂಡಿಯಾದವನಕ್ಕಿಂತ ದಂಡಾದಿಗಳಿಗೆ ವಿಶೇಷವಿಲ್ಲದಿರುವುದರಿಂದ ಪ್ರತ್ಯೇಕವಾಗಿಯೂ, ದಂಡದಲ್ಲಿಯೂ, ಪುರುಷನಲ್ಲಿಯೂ, ಅವುಗಳ ಸಂಬಂಧದಲ್ಲಿಯೂ ದಂಡೀ ಎಂಬುವ ವ್ಯವಹಾರವು ಬರಬೇಕಾಗುವುದು. (೩) ಮೂರನೇ ಕಲ್ಪದಲ್ಲಿ ಭೇದ ಅಭೇದ ಪಕ್ಷಗಳಲ್ಲಿ ಹೇಳಿದ ಎರಡು ದೋಷಗಳೂ ಬರುವುವು. ಅಲ್ಲದೆ ವ್ಯಾಹತಿಯೂ ಅಧಿಕವಾಗಿ ಬರುವುದು. ಆದುದರಿಂದ ಯಾವ ರೀತಿಯಿಂದಲೂ ಹೇಳಲಿಕ್ಕೆ ಬಾರದಿರುವುದರಿಂದ ವಿಶಿಷ್ಟಾದಿಗಳು ಅನಿರ್ವಚನೀಯಗಳೆಂದೇ ಸಿದ್ಧಗಳಾಗುವುವು. ಕಾರಣ ಬಾಧಕವು ಹೇಗೆ ಇರಲಾರದು ಎಂದು ಶಂಕಿಸಿದರೆ—

**ಮೂ || ದೃಷ್ಟಸ್ಯ ವಸ್ತುನೋ ಬಲವದ್ದೃಷ್ಟಿಂ ವಿನಾ ನಾನ್ಯದ್ಬಾಧಕಮಿತಿ ದುರ್ಘಟತ್ವೇ ಸುಘಟತ್ವೇ ವಾ ನಾನಿರ್ವಚನೀಯಸಿದ್ಧಿಃ || ೧೦೧ ||**

**ಅ ||** ದೃಷ್ಟಸ್ಯ ವಸ್ತುನಃ=ಪ್ರತ್ಯಕ್ಷಕಂಡ ವಸ್ತುವಿಗೆ, ಬಲವದ್ದೃಷ್ಟಿಂ ವಿನಾ=ಪ್ರಬಲವಾದ ಪ್ರಮಾಣವನ್ನು ಹೊರತು, ಅನ್ಯತ್ ಬಾಧಕಂ=ಬೇರೆ ಬಾಧಕವು, ನ=ಇರುವುದಿಲ್ಲ, ಇತಿ = ಆದಕಾರಣ, ದುರ್ಘಟತ್ವೇ = (ಅನುಮಾನದಿಂದ) ಸಾಧಿಸಲಿಕ್ಕೆ ಬಾರದಿದ್ದರೂ, ಸುಘಟತ್ವೇ ವಾ=ಸಾಧಿಸಲಿಕ್ಕೆ ಬಂದರೂ, (ವಿಶಿಷ್ಟಾದೇಃ=ವಿಶಿಷ್ಟಾದಿಗಳಿಗೆ) ಅನಿರ್ವಚನೀಯಸಿದ್ಧಿಃ=ಅನಿರ್ವಚನೀಯತ್ವದ ಸಿದ್ಧಿಯು, ನ=ಆಗುವುದಿಲ್ಲ.

**ತಾ ||** (1) ವಿಶಿಷ್ಟಾದಿಗಳು ಭಿನ್ನವೋ ಅಭಿನ್ನವೋ ಯಾವರೀತಿಯಿಂದಲೂ ಹೇಳಲಿಕ್ಕೆ ಬಾರದಿರುವುದರಿಂದ ಅನಿರ್ವಚನೀಯವೆಂದೇ ಹೇಳಬೇಕು. ಆದಕಾರಣ ಅದರ ಪ್ರತೀತಿಯನ್ನು

ಒಡಂಬಡದಿದ್ದರೆ ಅನುಭವವನ್ನೇ ಅಪಲಾಪಮಾಡುವುದರಿಂದ ಉಪೇಕ್ಷಿಸಬೇಕಾಗಿಯದೆ. ಪ್ರತೀತಿಯನ್ನಂಗೀಕರಿಸಿದರೆ ವಿಶಿಷ್ಟಾದಿಗಳನ್ನು ಹೇಳಲಿಕ್ಕೆ ಬಾರದಿದ್ದರೂ ಅನಿರ್ವಚನೀಯತ್ವವು ಸಿದ್ಧಿಯಾಗುವುದಿಲ್ಲ. (2) ವಿಶಿಷ್ಟಾಕಾರಕ್ಕೆ ವಿಶೇಷಣಾದಿಗಳಿಂದ ಭೇದವನ್ನಿಟ್ಟುಕೊಂಡರೂ, ಅಭೇದವನ್ನಿಟ್ಟುಕೊಂಡರೂ ದೋಷವು ತೋರುವುದರಿಂದ ವಿಶಿಷ್ಟಾಕಾರವು ಅಸತ್ ಅಥವಾ ಅನಿರ್ವಚನೀಯವು ಸತ್ಯವಲ್ಲ, ಎಂಬೀ ವಿಪರ್ಯಯಪರ್ಯವಸಾನವು ವಿಶಿಷ್ಟಾಕಾರಕ್ಕೆ ಸತ್ವವನ್ನು ಗ್ರಹಿಸತಕ್ಕ ಪ್ರತ್ಯಕ್ಷ ಪ್ರಮಾಣದಿಂದ ವಿರೋಧವು ಬರುವುದರಿಂದ ಅಸಂಗತವಾಗುವುದು, ಆದಕಾರಣ ತರ್ಕವು ದುಷ್ಟವಾದಕಾರಣ ನಂಬಕೂಡದು. (3) ವಿಶಿಷ್ಟಾದಿಗಳು ಕಾಣಲ್ಪಡುವುದಾದರೂ ತರ್ಕದಿಂದ ಬಾಧಿಸಲ್ಪಡುತ್ತವೆ ಎಂದು ಹೇಳಕೂಡದು. ಪ್ರತ್ಯಕ್ಷಸಿದ್ಧವಾದ ಅರ್ಥವನ್ನು ತರ್ಕವು ಬಾಧಿಸಲಾರದು. (4) ಹಾಗಾದರೆ ಈ ಶುಕ್ತಿರಜತವು ಸತ್ ಆದರೆ ತದ್ಯೋಗ್ಯವಾದ ಅರ್ಥಕ್ರಿಯೆಗಳಿಗೆ ಉಪಯುಕ್ತವಾಗಬಹುದಿತ್ತು. ಶರೀರವೇ ಆತ್ಮನಾದರೆ ಮಾಡಿದ್ದ ಕರ್ಮಕ್ಕೆ ನಾಶವು ಬರಬೇಕಾಗುವುದು, ಇದುಮೊದಲಾದ ತರ್ಕಗಳಿಂದ ಬಾಧಿಸಲ್ಪಡತಕ್ಕುದು, ಕಾಣಲ್ಪಟ್ಟದೆ ಎಂದೂ ಹೇಳಕೂಡದು. ಅಲ್ಲಿಯೂ 'ಇದು ಬೆಳ್ಳಿಯಲ್ಲ' 'ಇದು ನನ್ನ ಶರೀರವು' ಎಂಬೀ ಪ್ರಬಲವಾದ ವಿರೋಧಿಯಾದ ಪ್ರತ್ಯಕ್ಷದಿಂದಲೇ ಬಾಧವೆಂದು ಅಂಗೀಕರಿಸತಕ್ಕುದು. (5)'ನ ಚ ಪ್ರತ್ಯಕ್ಷಸಿದ್ಧಮನ್ಯೇನ ಕೇನಾಪಿ ಬಾಧ್ಯಂ ದೃಷ್ಟಂ' ಎಂಬ ಮೂಲ (೬೫) ದಿಂದ ಈ ಮೂಲ (೧೦೧)ಕ್ಕೆ ಪುನರುಕ್ತಿಯು ಉಂಟಾಯಿತೆಂದರೆ ಅಲ್ಲಿ ಪ್ರತ್ಯಕ್ಷವು ಅನುಮಾನಾಗಮಗಳಿಂದ ಬಾಧಿಸಲ್ಪಡುವುದಿಲ್ಲ ಎಂದು ಹೇಳಲ್ಪಟ್ಟದೆ. ಇಲ್ಲಿಯಾದರೂ ಪ್ರಮಾಣಸಿದ್ಧವಾದುದು ತರ್ಕದಿಂದ ಬಾಧಿಸಲ್ಪಡಲಿಕ್ಕಿಲ್ಲ ಎಂದು ಹೇಳಲ್ಪಟ್ಟಿತು. (೬) ಅಲ್ಲದೆ, ಹಿಂದೆ ಪ್ರತ್ಯಕ್ಷಕ್ಕೆ ಅನುಮಾನಾದಿಗಳಿಂದ ಬಾಧ್ಯತ್ವವಿಲ್ಲವೆಂದುಪಪಾದಿಸುವ ವಿಷಯದಲ್ಲಿ ತಾತ್ಪರ್ಯವು. ಇಲ್ಲಿ ತರ್ಕಕ್ಕೆ ಪ್ರತ್ಯಕ್ಷಬಾಧಕತ್ವವನ್ನು ನಿರಾಕರಿಸುವುದರಲ್ಲಿ ತಾತ್ಪರ್ಯವು ॥ ೧೦೧ ॥

ಪ್ರಮಾಣದೃಷ್ಟಾರ್ಥದಲ್ಲಿ ತರ್ಕಬಾಧವು ಅಪ್ರಯೋಜಕವೆಂಬುವುದು ಹೇಗೆ ಸಿದ್ಧವಾಗುವುದೆಂದರೆ—

**ಮೂ ॥ ಸರ್ವವೈಲಕ್ಷಣ್ಯಾಂಗೀಕಾರಾದ್ದುರ್ಘಟಮಪಿ ಬ್ರಹ್ಮ ಪ್ರಮಾಣಾದಂಗೀಕ್ರಿಯತ ಏವ ॥ ೧೦೨ ॥**

ಅ ॥ ಸರ್ವವೈಲಕ್ಷಣ್ಯಾಂಗೀಕಾರಾತ್ = ಸರ್ವ ವಸ್ತುಗಳಿಂದ ಭೇದವನ್ನು ಅಂಗೀಕರಿಸಿರುವುದರಿಂದ, ದುರ್ಘಟಮಪಿ = ಹೇಳಲಿಕ್ಕೆ ಬಾರದಿದ್ದರೂ, ಬ್ರಹ್ಮ = ಪರಬ್ರಹ್ಮನು, ಪ್ರಮಾಣಾತ್='ಸದೇವ ಸೌಮ್ಯ' ಇತ್ಯಾದಿ ಪ್ರಮಾಣಗಳಿಂದ, ಅಂಗೀಕ್ರಿಯತೇ ಏವ=ಅಂಗೀಕರಿಸಲ್ಪಡುತ್ತಾನಷ್ಟೆ!

ತಾ ॥ (1) ಬ್ರಹ್ಮನು 'ಸದೇವ ಸೋಮ್ಯ' ಇದುಮೊದಲಾದ ಪ್ರಮಾಣಗಳಿಂದ ಸತ್ಯನೆಂದೇ ತಿಳಿಯಲ್ಪಟ್ಟಿರುತ್ತಾನೆ. ಮೇಲೆ ಹೇಳುವ ತರ್ಕದಿಂದ ವಿರೋಧ ಬರುವುದರಿಂದ ದುರ್ಘಟನೂ ಆಗಿರುತ್ತಾನೆ. ಪ್ರಮಾಣವನ್ನು ಆದರಿಸದೆ ತರ್ಕದಿಂದಲೇ ಅದ್ವೈತಿಗಳು ಬ್ರಹ್ಮನು ಅನಿರ್ವಚನೀಯನೆಂದು ಅಂಗೀಕರಿಸಲಾರರು. ಆದರೆ ತರ್ಕವಿರೋಧವಿರುವುದರಿಂದ ಬ್ರಹ್ಮನು ದುರ್ಘಟನಾದಾಗ್ಯೂ ಪ್ರಮಾಣಗಳಿಂದ ಸತ್ಯನೆಂದೇ ಅಂಗೀಕರಿಸುತ್ತಾರೆ. ಹೀಗೆಯೇ ಪರರೂ ಅಂಗೀಕರಿಸಿರುತ್ತಾರೆ. ಇಲ್ಲವಾದರೆ ಬ್ರಹ್ಮನೂ ಮಿಥ್ಯಾಭೂತನೆಂದಂಗೀಕರಿಸಬೇಕಾಗುವುದು. (2) ಪರರ ರೀತಿಯಾಗಿ ಬ್ರಹ್ಮನು ದುರ್ಘಟನಾಗುವುದು ಹೇಗೆ ಎಂದು ಶಂಕಿಸಿದರೆ, ಪರರು 'ಬ್ರಹ್ಮನು

ಸರ್ವ ವಸ್ತುಗಳಿಂದಲೂ ವಿಲಕ್ಷಣನೆಂದು' ಅಂಗೀಕರಿಸಿರುವರು. ಚೇತನತ್ವ, ಅಚೇತನತ್ವಾದಿಗಳನ್ನು ಬ್ರಹ್ಮನಿಗೆ ಒಪ್ಪಲಿಲ್ಲ. ಬ್ರಹ್ಮನು ನಿತ್ಯನು, ಶುದ್ಧನು(ಜಡಸಂಪರ್ಕವಿಲ್ಲದಿರುವವನು)ಜ್ಞಾನಸ್ವರೂಪನು, ಬಂಧವಿಲ್ಲದಿರುವವನು, ಜಾತಿ ಗುಣ ಕರ್ಮ ಅವಯುವಾದಿಗಳಿಲ್ಲದಿರುವವನು ಎಂದು ಅದ್ವೈತಿಗಳು ಅಂಗೀಕರಿಸಿರುತ್ತಾರೆ. (2)ಹಿಂದೆ ಹೇಳಿದ್ದನ್ನು ಒಡಂಬಡದೆ ಇದ್ದ ಕೆಲವು ತಾರ್ಕಿಕಾದಿಗಳು(೧)ಚೇತನ (೨) ಅಚೇತನ ಎಂದಾಗಲೀ, (೧)ಭಾವ (೨)ಅಭಾವ ಎಂದಾಗಲೀ ತತ್ವವು ೨ ವಿಧವೆನ್ನುತ್ತಾರೆ. (3) ಇತರರು (೧) ಪ್ರಮಾಣ (೨) ಪ್ರಮೇಯು (೩) ಪ್ರಮಾತೃಭೇದದಿಂದ ತತ್ತ್ವವು ೩ ವಿಧವೆನ್ನುತ್ತಾರೆ. (4) ಇತರರು (೧)ದ್ರವ್ಯ, (೨) ಗುಣ, (೩)ಕರ್ಮ, (೪) ಸಾಮಾನ್ಯ, ಹೀಗೆ ೪ ವಿಧವೆನ್ನುತ್ತಾರೆ. (5) ಇನ್ನು ಕೆಲವರು ಹಿಂದೆ ಹೇಳಿದ್ದು ೪, ೫ ವಿಶೇಷ, ೬ ಸಮವಾಯು, ಹೀಗೆ ೬ ವಿಧವೆನ್ನುತ್ತಾರೆ. (6) ಆ ತಾರ್ಕಿಕಾದಿಗಳಾದರೂ ಹೀಗೆ ತರ್ಕಿಸುವರು — ನಿತ್ಯ ಶುದ್ಧೇತ್ಯಾದಿ ಲಕ್ಷಣವಿರತಕ್ಕ ಬ್ರಹ್ಮನು ತತ್ತ್ವವಾದರೆ ಚೇತನಾಚೇತನ ಮೊದಲಾದುವುಗಳಲ್ಲಿ ಸೇರಬೇಕು. ಪರರಿಗೆ ಹಾಗೆ ಹೇಳಲಿಕ್ಕೆ ಸಾಧ್ಯವಿಲ್ಲ. ಏಕೆಂದರೆ — ಚೇತನಾದಿಗಳಿಂದ ವೈಲಕ್ಷಣ್ಯವನ್ನೇ ಅಂಗೀಕರಿಸಿರುವರು. ಚೇತನತ್ವವನ್ನು ಅಂಗೀಕರಿಸಿಬಿಟ್ಟರೆ ನಿರ್ವಿಶೇಷತ್ವವು ತಪ್ಪಿಹೋಗಬೇಕಾಗುವುದು. ಈ ಚೇತನಾದಿಗಳಲ್ಲಿ ಸೇರದೆ ಇದ್ದುದು ಮೊಲದ ಕೋಡಿನಂತೆ ತತ್ತ್ವವಾಗಲಾರದು. ಹೀಗೆ ತರ್ಕದಿಂದ ಬ್ರಹ್ಮನು ದುರ್ಘಟನಾಗಲು ಅದ್ವೈತಿಗಳು ಇಷ್ಟೇ ಹೇಳಬೇಕಾಗಿಯುದೆ. ವಿಚಿತ್ರಬುದ್ಧಿಯುಳ್ಳ ಪುರುಷರು ತಂತಮ್ಮ ಬುಧ್ಯನುಸಾರವಾಗಿ ಅನೇಕಪ್ರಕಾರ ತರ್ಕಿಸುವರು. ಆ ತರ್ಕದಿಂದ ಪ್ರಮಾಣಸಿದ್ಧನೂ ಹಿಂದೆ ಹೇಳಿದ ಲಕ್ಷಣವಿಶಿಷ್ಟನೂ ಆದ ಬ್ರಹ್ಮನನ್ನು ನಿರಾಕರಿಸಕೂಡದು. ಮತ್ತೆ ತರ್ಕವೇ ಪ್ರಮಾಣವಿರುದ್ಧಾರ್ಥದಲ್ಲಿ ಪ್ರವೃತ್ತವಾದರೆ ದುಷ್ಟವಾಗುವುದು. ಈ ಹೇಳಿದ ತತ್ವಗಳಲ್ಲಿ ಸೇರದಿದ್ದರೂ ಬೇರೆ ಪ್ರಕಾರ ತತ್ತ್ವವಾಗುವುದು ಎಂದು, ಅಂತೂ ಪ್ರಮಾಣಸಿದ್ಧವಾದ್ದಕ್ಕೆ ತರ್ಕಬಾಧವಿಲ್ಲವೆಂದು ಒಪ್ಪಲೇಬೇಕು. (7) ಹಾಗೆಯೇ 'ದಂಡೀ ಚೈತ್ರಃ' 'ಯಸ್ಸರ್ವಜ್ಞಃ' ಇದು ಮೊದಲಾದ ಪ್ರಮಾಣಗಳಿಂದ ವಿಶಿಷ್ಟಾದಿಗಳು ಪ್ರಮಾಣಸಿದ್ಧಗಳಾಗಿರುವುದರಿಂದ ಹಿಂದೆ ಹೇಳಿದ ಪ್ರಕಾರ ಅದನ್ನು ತರ್ಕದಿಂದ ನಿರಾಕರಿಸಲು ಸಾಧ್ಯವಿಲ್ಲ. ಆ ತರ್ಕಗಳೇವೇ ಪ್ರಮಾಣವಿರುದ್ಧಗಳಾಗಿರುವುದರಿಂದ ದುಷ್ಟಗಳಾಗಿರುತ್ತವೆ ಎಂದು ಅವರ ನ್ಯಾಯದಿಂದಲೇ ಒಪ್ಪಬೇಕು ॥ ೧೨ ॥

ಈ ಪ್ರಕಾರ ವಿಶಿಷ್ಟಾದಿಗಳನ್ನು ನಿರಾಕರಿಸತಕ್ಕ ತರ್ಕಕ್ಕೆ ದೋಷವನ್ನು ಹೇಳಿ ಪ್ರತಿತರ್ಕದ ಪರಾಹತಿಯನ್ನೂ ಹೇಳುತ್ತಾರೆ —

**ಮೂ ॥ ಜಗತೋ ಭಿನ್ನಮಭಿನ್ನಂ ಭಿನ್ನಾಭಿನ್ನಂ ವೇತ್ಯಾದಿ ವಿಕಲ್ಪಸ್ತತ್ರಾಪಿ ಯುಜ್ಯತೇ ॥ ೧೩ ॥**

**ಅ ॥** ಜಗತಃ=ಜಗತ್ತಿನಿಂದ, ಭಿನ್ನಂ=ಭೇದವಿದೆಯೋ, ಅಭಿನ್ನಂ=ಭೇದವಿಲ್ಲವೋ, ಭಿನ್ನಾಭಿನ್ನಂ ವಾ=ಭೇದಾಭೇದವಿದೆಯೋ, ಇತ್ಯಾದಿ ವಿಕಲ್ಪಃ=ಇದು ಮೊದಲಾದ ವಿಕಲ್ಪಗಳು, ತತ್ರಾಪಿ=ಬ್ರಹ್ಮನಲ್ಲಿಯೂ, ಯುಜ್ಯತೇ=ಕೂಡುತ್ತವೆ.

**ತಾ ॥** ಹೇಗೆ ವಿಶಿಷ್ಟವು ವಿಶೇಷಣಾದಿಗಳಿಂದ ಭಿನ್ನವೋ ಅಭಿನ್ನವೋ ಇತ್ಯಾದಿ ವಿಕಲ್ಪಗಳನ್ನು ಪರರು ಮಾಡಿರುವರೋ, ಹಾಗೆಯೇ ಪರಬ್ರಹ್ಮನೂ ಜಗತ್ತಿನಿಂದ ಭಿನ್ನನೋ, ಅಭಿನ್ನನೋ, ಭಿನ್ನಾಭಿನ್ನನೋ, ಉಭಯ ವಿಲಕ್ಷಣನೋ ಎಂಬೀ ವಿಕಲ್ಪಗಳನ್ನು ಮಾಡಬಹುದು ॥೧೩॥

**ಮೂ ॥ ಭಿನ್ನಂ ಚೇದ್ಭೇದಾದಿವಿಶಿಷ್ಟಾಚ್ಛಿದ್ರಂ ಭಿನ್ನಮಭಿನ್ನಂ ವೇತ್ಯಾದ್ಯನವಸ್ಥಾ ॥ ೧೪ ॥**

ಅ ॥ ಭಿನ್ನಂ ಚೇತ್=(ಜಗತ್ತಿನಿಂದ ಬ್ರಹ್ಮನು) ಭಿನ್ನನಾದರೆ, ಭೇದಾದಿ ವಿಶಿಷ್ಟಾತ್= ಭೇದಾದಿಗಳಿಂದ ಕೂಡಿದ ಬ್ರಹ್ಮನಿಂದ, ಶುದ್ಧಂ=ಕೂಡದಿರುವ ಬ್ರಹ್ಮನು, ಭಿನ್ನಂ=ಭೇದ ವುಳ್ಳವನೋ, ಅಭಿನ್ನಂ ವಾ=ಭೇದವಿಲ್ಲದಿರುವವನೋ, ಇತ್ಯಾದಿ=ಇದು ಮೊದಲಾದ ಪ್ರಕಾರ ಗಳಿಂದ, ಅನವಸ್ಥಾ=ಅವಸಾನವೇ ಇಲ್ಲವೆಂದಾಗುವುದು.

ತಾ ॥ (1) ಬ್ರಹ್ಮನು ಜಗತ್ತಿನಿಂದ ಭಿನ್ನನಾದರೆ ಭೇದದಿಂದಲೂ, ಅದರ ಸಂಬಂಧ ದಿಂದಲೂ, ಭೇದವನ್ನು ಹುಟ್ಟಿಸುವ ಧರ್ಮಾದಿಗಳಿಂದಲೂ, ವಿಶಿಷ್ಟವು ಮಿಥ್ಯೆಯಾಗಬೇಕಾಗು ವುದು. ಮಿಥ್ಯೆಯಾದುದು ಮುಮುಕ್ಷುವಿಗೆ ಉಪಾಸನಾ ಮಾಡಲಿಕ್ಕೆ ಯೋಗ್ಯವಲ್ಲದಿರುವುದ ರಿಂದ ಉಪಾಸ್ಯವೇ ಇಲ್ಲವೆಂದಾಗುವುದು. (2) ಹಾಗಾದರೆ ವಿಶಿಷ್ಟನು ಉಪಾಸ್ಯನಾಗದಿದ್ದರೂ ಶುದ್ಧನೇ ಉಪಾಸ್ಯನಾಗುವನೆಂದರೆ ಆ ಶುದ್ಧನು ವಿಶಿಷ್ಟನಿಂದ ಭಿನ್ನನೋ, ಅಭಿನ್ನನೋ ಇತ್ಯಾದಿ ಪ್ರಕಾರ ಅಲ್ಲಿಯೂ ವಿಕಲ್ಪಮಾಡುವೆವು. ಭಿನ್ನನಾದರೆ ಅವನೂ ಕೂಡ ಭೇದಾದಿಗಳಿಂದ ಕೂಡಿರುವುದರಿಂದ ಮಿಥ್ಯೆಯಾಗಬೇಕಾಗುವನು. ಅಂತೂ ಉಪಾಸ್ಯನಿಲ್ಲವೆಂದಾಗುವುದು. (3) ಪುನಃ ಶುದ್ಧನನ್ನೇ ಉಪಾಸನಾ ಮಾಡಬೇಕೆಂದು ಹೇಳುವುದಾದರೆ ಹಿಂದಿನ ದೋಷಗಳು ತಪ್ಪಲಾರವು. * ಅನವಸ್ಥಾದೋಷವು. (ಅಪ್ರಾಮಾಣಿಕಗಳಾದ ಅನಂತ ಸಜಾತೀಯ ಪದಾರ್ಥ ಗಳ ಕಲ್ಪನೆಗೆ ವಿಶ್ರಾಂತಿಯಿಲ್ಲವೆಂದಾಗುವುದು.) ಅಂತೂ ಯಾವಾಗಲೂ ಬ್ರಹ್ಮಜ್ಞಾನವೇ ಇಲ್ಲ ವೆಂದಾಗುವುದು. (4) ಅಭೇದಾದಿ ಪಕ್ಷಗಳನ್ನು ಮೇಲೆ ಹೇಳುವಂತೆ ದೂಷಿಸತಕ್ಕದ್ದು ॥ ೧೦೪ ॥

**ಮೂ ॥ ಅಭಿನ್ನಂ ಚೇನ್ಮಿಥ್ಯಾರೂಪೇಣ ಜಗತಾ ಬ್ರಹ್ಮಾಪಿ ಮಿಥ್ಯೈವ ಸ್ಯಾತ್ ॥ ೧೦೫ ॥**

ಅ ॥ ಬ್ರಹ್ಮ=ಪರಬ್ರಹ್ಮನು, ಮಿಥ್ಯಾರೂಪೇಣ=ಮಿಥ್ಯಾಸ್ವರೂಪವಾದ, ಜಗತಾ= ಪ್ರಪಂಚದಿಂದ, ಅಭಿನ್ನಂ ಚೇತ್=ಭೇದವಿಲ್ಲದಿರುವವನಾದರೆ, ಬ್ರಹ್ಮಾಪಿ=ಬ್ರಹ್ಮನೂ ಕೂಡ, ಮಿಥ್ಯೈವ=ಮಿಥ್ಯಾಭೂತನಾದವನೇ, ಸ್ಯಾತ್=ಆಗುವನು.

ತಾ ॥ ಜಗತ್ತು ಮಿಥ್ಯೆಯಾದುದರಿಂದ ಬ್ರಹ್ಮನೂ ಮಿಥ್ಯೆಯಾಗುವನು. ಯದ್ಯಪಿ ಬ್ರಹ್ಮನು ಸತ್ಯನಾದುದರಿಂದ ಜಗತ್ತೂ ಸತ್ಯವೇ ಆಗಬೇಕಾಗುವುದು ಎಂದೂ ಇಲ್ಲಿ ಹೇಳ ಬಹುದಿತ್ತು. ಆದರೂ ಅದು ಪ್ರಕೃತಕ್ಕೆ ಉಪಯುಕ್ತವಾಗದಿರುವುದರಿಂದ ಹೇಳಲಿಲ್ಲ ॥ ೧೦೫ ॥

**ಮೂ ॥ ಭಿನ್ನಾಭಿನ್ನಂ ಚೇದ್ದೋಷದ್ವಯಮಪಿ ॥ ೧೦೬ ॥**

ಅ ॥ ಬ್ರಹ್ಮ=ಬ್ರಹ್ಮನು, ಜಗತಾ=ಪ್ರಪಂಚದಿಂದ, ಭಿನ್ನಾಭಿನ್ನಂ ಚೇತ್=ಭೇದವಿರು ವವನೂ ಭೇದವಿಲ್ಲದಿರುವವನೂ ಆದರೆ, ದೋಷದ್ವಯಮಪಿ=ಹಿಂದೆ ಹೇಳಿದ ಎರಡು ದೋಷ ಗಳೂ ಬರುತ್ತವೆ, ವ್ಯಾಹತಿಯೂ ಬರುತ್ತದೆ ॥ ೧೦೬ ॥

**ಮೂ ॥ ಉಭಯವಿಲಕ್ಷಣಂ ಚೇದನಿರ್ವಚನೀಯತ್ವಂ ಬ್ರಹ್ಮಣ ಏವಾಪತಿತಂ ॥ ೧೦೭ ॥**

---

* (ಅನವಸ್ಥಾದೋಷ! — ಪ್ರಮಾಣವಿಲ್ಲದೇನೇ, ಇದಕ್ಕೆ– ಇದು ಕಾರಣ, ಅದಕ್ಕೆ– ಮತ್ತೊಂದು ಕಾರಣ, ಅದಕ್ಕೆ– ಇನ್ನೊಂದು, ಅದಕ್ಕೆ– ಬೇರೊಂದು,— ಹೀಗೆ ಅವಸಾನವನ್ನೇ ಮಾಡಲು ಬಾರ ದಿದ್ದರೆ ಅದಕ್ಕೆ ಅನವಸ್ಥಾ ದೋಷವೆಂದು ಹೆಸರು.)

ಅ || (ಬ್ರಹ್ಮ=ಬ್ರಹ್ಮನು, ಜಗತಾ=ಪ್ರಪಂಚದಿಂದ,) ಉಭಯವಿಲಕ್ಷಣಂ ಚೇತ್=ಭಿನ್ನ ಅಭಿನ್ನಗಳಿಂದ ವಿಲಕ್ಷಣನಾದರೆ, ಬ್ರಹ್ಮಣಿ ಏವ = ಬ್ರಹ್ಮನಿಗೇನೇ, ಅನಿರ್ವಚನೀಯತ್ವಂ= ಅನಿರ್ವಚನೀಯತ್ವವು, ಆಪತಿತಂ=ಪ್ರಾಪ್ತವಾಯಿತು.

ತಾ || (1) ಬ್ರಹ್ಮನು ಜಗತ್ತಿನಿಂದ ಭಿನ್ನಾಭಿನ್ನ ವಿಲಕ್ಷಣನೆಂದಂಗೀಕರಿಸುವುದಾದರೆ ಈ ೨ ನಿಷೇಧವೂ, ೧ ತಾತ್ವಿಕವೋ ೨ ತಾತ್ವಿಕವಲ್ಲವೋ, ೧ ತಾತ್ವಿಕವೆಂದು ಹೇಳಕೂಡದು. ಅದು ವಿರುದ್ಧವಾಗಿದೆ. ೨ ತಾತ್ವಿಕವಲ್ಲವಾದರ ಪಾರಮಾರ್ಥಿಕ ಸತ್ಯನಾದ ಬ್ರಹ್ಮನಿಗೇನೇ ಅನಿರ್ವಚ ನೀಯತ್ವವು ಬರಬೇಕಾಗುವುದು. (2) 'ದೃಷ್ಟಸ್ಯವಸ್ತುನಃ'ಇತ್ಯಾದಿ ಗ್ರಂಥಗಳಿಂದ ಇಷ್ಟು ಹೇಳಿದ ಹಾಗಾಯಿತು. ಭೇದಾದಿವಿಕಲ್ಪಗಳು ಕೂಡದಿರುವುದರಿಂದ ವಿಶಿಷ್ಟಾದಿಗಳು ಅನಿರ್ವಚನೀಯ ಗಳಾಗುವುದಾದರೆ ಆತನಲ್ಲಿಯೂ ಭೇದಾದಿ ವಿಕಲ್ಪಗಳು ಕೂಡುವುದಿಲ್ಲವಷ್ಟೆ! ॥ ೧೦೭ ॥

ಈ ಪ್ರಕಾರ ಪ್ರಸಂಗವನ್ನು (ತರ್ಕವನ್ನು) ಹೇಳಿ ವಿಪರ್ಯಯದಲ್ಲಿ ಪರ್ಯವಸಾನ ವನ್ನು ಹೇಳುತ್ತಾರೆ—

**ಮೂ || ಯದ್ಯೇವಮಪಿ ನಾನಿರ್ವಚನೀಯತ್ವಂ ಬ್ರಹ್ಮಣಸ್ತರ್ಹಿ ಜಗತೋಽಪಿ ನ ಸ್ಯಾತ್ || ೧೦೮ ||**

ಅ || ಏವಮಪಿ=ಭಿನ್ನತ್ವಾದಿ ವಿಕಲ್ಪಗಳು ಕೂಡದಿರುವುದರಿಂದ ಹೀಗೆ ಪ್ರಸಕ್ತವಾಗು ವುದಾಗ್ಯೂ, ಅನಿರ್ವಚನೀಯತ್ವಂ=ಅನಿರ್ವಚನೀಯತ್ವವು, ಬ್ರಹ್ಮಣಃ=ಪರಬ್ರಹ್ಮನಿಗೆ, ನ ಯದಿ=ಅಂಗೀಕರಿಸಲ್ಪಡದಿದ್ದರೆ, ತರ್ಹಿ=ಹಾಗಾದರೆ, ಜಗತೋಽಪಿ=ವಿಶಿಷ್ಟಾದಿ ಜಗತ್ತಿಗೂ, ನ ಸ್ಯಾತ್=(ಬ್ರಹ್ಮನಿಂದ ವಿಶೇಷವಿಲ್ಲದಿರುವುದರಿಂದ) ಅನಿರ್ವಚನೀಯತ್ವವು ಬರಲಾರದು ॥ ೧೦೮ ॥

ಚಿಂತಿಲ್ಲ. ತರ್ಕದಿಂದ ಅನಿರ್ವಚನೀಯತ್ವವು ಪ್ರಾಪ್ತವಾದರೂ ಬ್ರಹ್ಮನಿಗೆ ಸತ್ಯತ್ವವನ್ನು ಪ್ರತಿ ಪಾದಿಸತಕ್ಕ 'ತತ್ಸತ್ಯಂ' ಇದು ಮೊದಲಾದ ಶ್ರುತಿಯೇ ತರ್ಕವನ್ನು ಆಭಾಸೀಕರಿಸುವುದರಿಂದ ಬ್ರಹ್ಮನಿಗೆ ಅನಿರ್ವಚನೀಯತ್ವವು ಬರುವುದಿಲ್ಲ. ಎಂದು ಹೇಳುವುದಾದರೆ ವಿಶಿಷ್ಟಾದಿಗಳಿಗೂ ಅನಿರ್ವಚನೀಯತ್ವವು ಕೂಡುವುದಿಲ್ಲ. ಅದಕ್ಕೂ ಸತ್ಯತ್ವವನ್ನೇ ಶ್ರುತಿಯು ಸಮರ್ಥಿಸುತ್ತದೆ.

**ಮೂ || ವಿಶ್ವಂ ಸತ್ಯಮಿತ್ಯಾದಿವಚನಮತ್ರಾಪ್ಯುಕ್ತಂ || ೧೦೯ ||**

ಅ || ಅತ್ರಾಪಿ=ವಿಶಿಷ್ಟಮೊದಲಾದ ಜಗತ್ತಿಗೆ ಸತ್ಯತ್ವವಿಷಯದಲ್ಲಿಯೂ, 'ವಿಶ್ವಂ ಸತ್ಯಂ'=ಜಗತ್ತು ಯಥಾರ್ಥವಾದುದು, ಇತ್ಯಾದಿ ವಚನಂ=ಇದು ಮೊದಲಾದ ಶ್ರುತಿಯು, ಉಕ್ತಂ=ಹೇಳಲ್ಪಟ್ಟಿದೆ ॥ ೧೦೯ ॥

ಆದರೂ ಚಿಂತಿಲ್ಲ. ತರ್ಕವು ಪ್ರಮಾಣಗಳಿಗೆ ಅನುಗ್ರಾಹಕವಾಗುತ್ತದಷ್ಟೆ! 'ವಾಚಾ ರಂಭಣಂ' ಇದು ಮೊದಲಾದ ಪ್ರಮಾಣವು ವಿಶಿಷ್ಟಾದಿಗಳ ಸತ್ಯತೆಯನ್ನು ನಿರಾಕರಿಸತಕ್ಕ ತರ್ಕಕ್ಕೆ ಅನುಗ್ರಾಹ್ಯವಾಗಿರುತ್ತದೆ. ಬ್ರಹ್ಮನ ಸತ್ಯತೆಯನ್ನು ನಿರಾಕರಿಸತಕ್ಕ ತರ್ಕಕ್ಕೆ ಅನು ಗ್ರಾಹ್ಯಪ್ರಮಾಣವಿಲ್ಲವು. ಆದ ಕಾರಣ ವೈಷಮ್ಯವದೆ ಎಂದರೆ ಬ್ರಹ್ಮನ ಸತ್ಯತ್ವವನ್ನು ನಿರಾಕರಿ ಸುವ ತರ್ಕಕ್ಕೂ ಅನುಗ್ರಾಹ್ಯ ಶ್ರುತಿಯುದೆ.

**ಮೂ || ನ ಸತ್ತನ್ನಾಸದುಚ್ಯತೇ । ಅಸದ್ವಾ ಇದಮಗ್ರ ಆಸೀತ್ । ನಾಸದಾ- ಸೀನ್ನೋ ಸದಾಸೀತ್ತದಾನೀಮಿತ್ಯಾದಿ ಬ್ರಹ್ಮಣೋಽಪಿ ಮಿಥ್ಯಾತ್ವೇ ಪ್ರಮಾಣಮಸ್ತಿ ॥ ೧೧೦ ||**

ಅ ॥ ತತ್=ಆ ಬ್ರಹ್ಮನು, ಸತ್=ಸತ್ಯನೆಂದು, ನ ಉಚ್ಯತೇ=ಹೇಳಲ್ಪಡುವುದಿಲ್ಲ, ಅಸತ್=ಅಸತ್ಯನೆಂದೂ, ನ ಉಚ್ಯತೇ=ಹೇಳಲ್ಪಡುವುದಿಲ್ಲ. ಇದಂ=ಈ ಪ್ರಪಂಚದ, ಅಗ್ರೇ=ಪ್ರಳಯಕಾಲದಲ್ಲಿ, ಅಸದ್ವಾ=ಅಸತ್ತೇ, ಆಸೀತ್=ಇತ್ತು, ತದಾನೀಂ=ಪ್ರಳಯಕಾಲದಲ್ಲಿ, ಅಸತ್=ಅಸತ್ತು, ನಾಸೀತ್=ಇರಲಿಲ್ಲ, ಸತ್=ಸತ್ ಆದುದೂ, ನೋ ಆಸೀತ್=ಇರಲಿಲ್ಲ, ಇತ್ಯಾದಿ=ಇದುಮೊದಲಾದುದು, ಬ್ರಹ್ಮಣಃ=ಪರಬ್ರಹ್ಮನಿಗೆ, ಮಿಥ್ಯಾತ್ವೇ=ಅನಿರ್ವಚನೀಯತ್ವ ವಿಷಯದಲ್ಲಿ, ಪ್ರಮಾಣಂ=ಪ್ರಮಾಣವು, ಅಸ್ತಿ=ಅದೆ, (ಇದು ಪರರು ಉಪನ್ಯಾಸಮಾಡಿದ ತರ್ಕಕ್ಕೆ ಅನುಗ್ರಾಹ್ಯವಾಗುವುದು.)

ತಾ ॥ (1) ಜಗತ್ತೇ ಮಿಥ್ಯೆಯು, ಜಗತ್ಪ್ರತಿಯೋಗಿಕವಾದ, ಭೇದಾದಿ ವಿಶಿಷ್ಟನಾದ ಬ್ರಹ್ಮನೂ ಮಿಥ್ಯೆಯೇ ಆಗಲಿ. ಆದಕಾರಣ 'ತದ್ಭಿನ್ನಂ' ಎಂಬುವುದರಿಂದ ಬ್ರಹ್ಮನು ಶುದ್ಧನಾಗದಿರುವುದು ಹೇಗೆ ಎಂದರೆ — ವಿಶಿಷ್ಟಕ್ಕೂ ಆಕಾಶಾದಿ ಜಗತ್ತಿಗೂ ಮಿಥ್ಯಾತ್ವವು ಸಿದ್ಧಿಯಾದರೆ ಬ್ರಹ್ಮನಿಗೆ ಶುದ್ಧತ್ವವು ಸಿದ್ಧಿಯಾಗುವುದು. ಬ್ರಹ್ಮನಿಗೆ ಶುದ್ಧತ್ವವು ಸಿದ್ಧಿಯಾದರೆ ವಿಶಿಷ್ಟಾದಿಗಳಿಗೆ ಮಿಥ್ಯಾತ್ವವು ಸಿದ್ಧಿಯಾಗುವುದು. ಹೀಗೆ ಅನ್ಯೋನ್ಯಾಶ್ರಯವು. ವಿಶಿಷ್ಟಕ್ಕೆ ಮಿಥ್ಯಾತ್ವವು ಸಿದ್ಧಿಯಾಗಲಿಕ್ಕೇನೇ ಪರರು ಈಗಲೂ ಪ್ರಯತ್ನಿಸುತ್ತಿದ್ದಾರೆ. ಆದಕಾರಣ ವಿಶಿಷ್ಟಾದಿಗಳನ್ನು ನಿರಾಕರಿಸತಕ್ಕ ತರ್ಕಕ್ಕೆ ಪ್ರತಿತರ್ಕಪರಾಹತಿಯನ್ನು ಪ್ರತಿಪಾದಿಸುತ್ತಾ 'ಜಗತೋ ಭಿನ್ನಂ' ಇತ್ಯಾದಿ ಗ್ರಂಥಗಳಿಂದ ವ್ಯಾಪ್ತಿಯಿಲ್ಲವೆಂದು ತೋರಿಸಿದರು ॥ ೧೧೦ ॥

ಹಟಸಾಧನೆಗಾಗಿ ಹೊರಟ ಪ್ರತಿವಾದಿಗೆ ಉತ್ತರವನ್ನು ಕೊಟ್ಟು ಸುಹೃದ್ಭಾವದಿಂದ ಕೇಳುವವರಿಗೆ ಉತ್ತರಕೊಡುತ್ತಾರೆ —

**ಮೂ ॥ ನ ಹಿ ದೃಷ್ಟೇರ್ಬಲವತ್ಕಿಂಚಿತ್ಪ್ರಮಾಣಂ । ನ ಹಿ ಯುಕ್ತಿಪರಾ-**
**ಜಿತೋಽಪಿ ಕ್ಷುಧಿತೋ ನಾನ್ನಮತ್ತಿ । ಬಲವದ್ದೃಷ್ಟ್ಯಬಾಧೇ ॥ ೧೧೧ ॥**

ಅ ॥ ದೃಷ್ಟೇಃ= ಪ್ರತ್ಯಕ್ಷದಿಂದ, ಬಲವತ್=ಪ್ರಬಲವಾದುದು, ಕಿಂಚಿತ್ = ಯಾವುದೊಂದು, ಪ್ರಮಾಣಂ=ಪ್ರಮಾಣವು, ನ ಹಿ=ಇಲ್ಲವಷ್ಟೆ, ಯುಕ್ತಿಪರಾಜಿತೋಽಪಿ=ಯುಕ್ತಿಯಿಂದ ಸೋಲಿಸಲ್ಪಟ್ಟರೂ, ಕ್ಷುಧಿತಃ=ಹಸಿವೆ ಇದ್ದವನು, ಅನ್ನಂ=ಅನ್ನವನ್ನು, ನ ಅತ್ತಿ= ಊಟಮಾಡುವುದಿಲ್ಲವೆಂದು, ನ ಹಿ=ಇಲ್ಲವಷ್ಟೇ, ಬಲವದ್ದೃಷ್ಟ್ಯಬಾಧೇ=ಪ್ರಬಲವಾದ ಪ್ರತ್ಯಕ್ಷದ ಬಾಧವಿಲ್ಲದಿರಲು.

ತಾ ॥ (1) ಕೇವಲ ವಿರೋಧಿಯಾದುದು ಬಾಧಕವಾಗಲಾರದು. ಪ್ರಬಲವಾದುದೇ ಬಾಧಕವಾಗಬೇಕು. ವಿಶಿಷ್ಟಮೊದಲಾದ ಜಗತ್ತನ್ನು ವಿಷಯೀಕರಿಸುವ ಪ್ರತ್ಯಕ್ಷಕ್ಕಿಂತ ತರ್ಕವು ಪ್ರಬಲವಲ್ಲ. ಹೇಗೆ ತಾನೇ ಬಾಧಕವಾಗುವುದು? (2) ಏಕೆಂದರೆ— ತರ್ಕವು ಪ್ರತ್ಯಕ್ಷಕ್ಕಿಂತ ಪ್ರಬಲವಲ್ಲವೆಂದರೆ ಉಡುಪಿಯಲ್ಲಿದ್ದ ಒಬ್ಬ ಪುರುಷನು ಅನ್ನವನ್ನು ನೋಡುವನು. ಆಗ ಉತ್ತರ ದೇಶದಲ್ಲಿದ್ದವನು ತಾನು ಅನುಭವಿಸಿದ ಭಕ್ರಿ, ನುಚ್ಚು, ಗೋಧಿರೊಟ್ಟಿ ಇತ್ಯಾದಿಗಳ ರಸಾದಿಗಳನ್ನು ಅದರಲ್ಲಿ ಅನುಭವಿಸದಿರುವವನಾಗಿ, ಇದು ಅನ್ನವಾದರೆ ನಾನು ಅನುಭವಿಸಿದ್ದ ರಸಾದಿಗಳು ಇರಬೇಕಿದ್ದಿತು. ಹೀಗೆ ಇಲ್ಲವು. ಆದಕಾರಣ ಇದು ಅನ್ನವಲ್ಲವೆಂದು ತರ್ಕಿಸಿದರೆ ಆಗ ಏನಾಗಬಹುದು? ತರ್ಕವು ಪ್ರತ್ಯಕ್ಷಕ್ಕಿಂತ ಪ್ರಬಲವಾಗಿದ್ದರೆ ಈ ತರ್ಕವೂ ಕೂಡ ಪ್ರಬಲವಾದುದರಿಂದ ಉಡುಪಿಯಲ್ಲಿದ್ದವನ ಅನ್ನವೆಂಬ ಪ್ರತ್ಯಕ್ಷವನ್ನು ಬಾಧಿಸೀತು. ತಥಾಚ ಅನ್ನವನ್ನು ಕಂಡರೂ ತರ್ಕದಿಂದ ಅನ್ನವಲ್ಲವೆಂದು ತಿಳಿದು ತನ್ನ ಪ್ರತ್ಯಕ್ಷವನ್ನೂ ನಂಬದೆ ಊಟಮಾಡದೇ ಹೋಗ

ಬೇಕಾಗುವುದು ಹೀಗೆ ಎಲ್ಲಾದರೂ ಉಂಟೇ! ಇದರಿಂದ ತರ್ಕವು ಪ್ರಬಲವಲ್ಲವೆಂದು ತಿಳಿಯುತ್ತದೆ. (3) ಯಾವಾಗ ವಸ್ತುತಃ ಅನ್ನವಲ್ಲದಿರುವುದರಲ್ಲಿ ಪ್ರತ್ಯಕ್ಷದಿಂದ ಅನ್ನವೆಂಬುವ ಭ್ರಾಂತಿಯು ಹುಟ್ಟುತ್ತದೋ, ಆಗ ಅನ್ನವನ್ನು ಬಿಡತಕ್ಕುದನ್ನು ನೋಡುವುದರಿಂದ ತರ್ಕದಿಂದ ಪ್ರತ್ಯಕ್ಷಕ್ಕೆ ಬಾಧವುಂಟೇ ಉಂಟು. ಕಾರಣ ಇದು ಹೇಗೆ ಕೂಡಬಹುದೆಂದರೆ — ಪ್ರಬಲವಾದ ಅನ್ನವಲ್ಲವೆಂಬುವ ಪ್ರತ್ಯಕ್ಷದಿಂದಲೇ ಅನ್ನವೆಂಬುವ ಭ್ರಮರೂಪ ಪ್ರತ್ಯಕ್ಷಕ್ಕೆ ಬಾಧವಲ್ಲದೆ ಕೇವಲ ತರ್ಕದಿಂದಲ್ಲ, ಆಗಲೇ ಭ್ರಾಂತಿಯಿಂದ. ಕಂಡದ್ದನ್ನು ಬಿಡುತ್ತಾನೆ ಕೇವಲ ತರ್ಕದಿಂದಲ್ಲ ॥ ೧೧೧ ॥

ಹಾಗಾದರೆ ಪ್ರತ್ಯಕ್ಷದಿಂದ ಕಂಡ ಅನ್ನವೂ ತರ್ಕದಿಂದ ಬಾಧಿಸಲ್ಪಡುತ್ತದೆ. ಬಾಧಿತವಾದ ಅರ್ಥದಲ್ಲಿಯೂ ರಾಗಾತಿರೇಕದಿಂದ ಪ್ರವೃತ್ತಿಯು ಕೂಡಬಹುದೆಂದರೆ —

**ಮೂ ॥ ನ ಚಾನ್ನತ್ವೇ ದುರ್ಘಟೇ ತಸ್ಯಾನನ್ನತ್ವಂ ಭವತಿ ॥ ೧೧೨ ॥**

**ಅ ॥** ಅನ್ನತ್ವೇ=ಅನ್ನತ್ವವು, ದುರ್ಘಟೇ ಸತಿ=ಬಾಧಿತವಾಗುತ್ತಿರಲು, ತಸ್ಯ=ಅದಕ್ಕೆ, ಅನನ್ನತ್ವಂ=ಅನ್ನವಲ್ಲವೆಂಬುವುದು, ನ ಚ ಭವತಿ=ಆಗುವುದಿಲ್ಲ.

**ತಾ ॥** (1) ಅನ್ನವೆಂಬುವುದು ಬಾಧಿಸಲ್ಪಟ್ಟರೆ ಯಥಾರ್ಥವಾಗಿಯೂ ಅನ್ನವಲ್ಲವೆಂಬುವುದು ಆಗಬೇಕಾಗುವುದು. ಹೇಗೆ ಬೆಳ್ಳಿಯೆಂಬುವುದು ಬಾಧಿಸಲ್ಪಡಲು ಬೆಳ್ಳಿಯಲ್ಲವೆಂಬುವುದು ಯಥಾರ್ಥವೋ ಹಾಗೆಯೇ, ಬೆಳ್ಳಿಯಲ್ಲಿ ರಾಗಾತಿರೇಕವುಳ್ಳವನು ಭ್ರಾಂತಿಯು ತೊಲಗಿದರೂ ಪ್ರವರ್ತಿಸುವುದೇ ಇಲ್ಲವು. ಇಲ್ಲಿಮಾತ್ರ ಹಾಗಲ್ಲವು. ಅನ್ನವನ್ನು ಊಟಮಾಡುತ್ತಾನೆಯೇ ಸರಿ ॥ ೧೧೨ ॥

ಯಾವಾಗ ಅನ್ನವಲ್ಲದಿರುವುದನ್ನು ಅನ್ನವೆಂದು ತಿಳಿಯುತ್ತಾನೋ ಆಗ ಅನ್ನವು ತರ್ಕದಿಂದ ಬಾಧಿತವೇ ಆಗುವುದೆಂದರೆ —

**ಮೂ ॥ ದೃಷ್ಟ್ಯಬಾಧಿತದೃಷ್ಟಸ್ಯ ॥ ೧೧೩ ॥**

**ಅ ॥** ಪ್ರತ್ಯಕ್ಷದಿಂದ ಬಾಧಿಸಲ್ಪಡದಿದ್ದು ಕಾಣಲ್ಪಟ್ಟದ್ದಕ್ಕೆ.

**ತಾ ॥** ಪ್ರತ್ಯಕ್ಷದಿಂದ ಅಬಾಧಿತವಾಗಿ ಕಾಣಲ್ಪಟ್ಟು ವಸ್ತುತಃ ಅನ್ನವಾದುದಕ್ಕೆ ಇದು ಅನ್ನವಾಗಿದ್ದರೆ ನಾನು ಅನುಭವಿಸಿದ್ದ ರಸಾದಿಗಳಿರಬೇಕಾಗುವುವು, ಎಂಬೀ ತರ್ಕದಿಂದ ಅನ್ನವೆಂಬುವುದು ಬಾಧಿತವಾಗಲು ಅನ್ನವಲ್ಲವೆಂಬುವುದು ಆಗುವುದಿಲ್ಲವಷ್ಟೆ! ಅನ್ನವೇ ಆಗುತ್ತದೆ. ಪ್ರತ್ಯಕ್ಷದಿಂದ ಬಾಧಿಸಲ್ಪಟ್ಟರೆ ಅನ್ನವಲ್ಲವೆನ್ನುವುದೇ ಸರಿಯು ॥ ೧೧೩ ॥

**ಹಾಗಾದರೆ, ವಸ್ತುತಃ ಅನ್ನವಾಗಿರುವುದು ತರ್ಕದಿಂದ ಬಾಧಿಸಲ್ಪಟ್ಟರೆ ಅನ್ನವಲ್ಲವೆಂದೇ ಆಗುವುದು. ಹಾಗಾದರೆ ಊಟಮಾಡದೆ ಹೋಗಬೇಕಾಗುವುದೆಂದು ಹೇಳಕೂಡದು. ಅನನ್ನಕ್ಕಿಂತ ವಿಲಕ್ಷಣವಾಗಿರುತ್ತದೆ ಎಂದು ಊಟಮೊದಲಾದವುಗಳು ಯುಕ್ತವಾಗುವುವು. ತರ್ಕದಿಂದ ಪದಾರ್ಥಗಳ ಸ್ವರೂಪವೇ ಅಸತ್ತೆಂದು ಹೇಳುವುದಿಲ್ಲ, ಅನಿರ್ವಾಚ್ಯವೆಂದೇ ಹೇಳುತ್ತದೆ ಎಂದು ಹೇಳಕೂಡದು. ಹಾಗಿದ್ದರೆ ಇದು ಬೆಳ್ಳಿಯಲ್ಲ ಎಂದು ಬಾಧಕಜ್ಞಾನ ಬಂದ ಮೇಲೆ ಇದು ಚಿಪ್ಪು ಎಂದು ಅನುಭವವದೆಯೋ ಹಾಗೆಯೇ ಅನನ್ನಕ್ಕಿಂತ ವಿಲಕ್ಷಣವೆಂದು ಅನುಭವವು ಬರಬೇಕಾಗುವುದು. ಇಂತಹ ಅನುಭವವೇ ಇಲ್ಲವೆನ್ನುತ್ತಾರೆ.**

ಮೂ || ನ ಚಾನ್ಯಾನನ್ಯವೈಲಕ್ಷಣ್ಯಮನುಭೂಯತೇ । ನ ಚ ತಥಾ ವ್ಯವಹಾರಃ ॥ ನ ಚ ತತ್ರ ಕಿಂಚಿನ್ಮಾನಂ ॥ ೧೧೪ ॥

ಅ || ಅನ್ಯಾನನ್ಯವೈಲಕ್ಷಣ್ಯಂ=ಅನ್ಯ ಅನನ್ಯಗಳಿಂದ ಭೇದವು, ನ ಚ ಅನುಭೂಯತೇ= ಅನುಭವಿಸಲ್ಪಡುವುದಿಲ್ಲ, ತಥಾ=ಹಾಗೆಯೇ, ವ್ಯವಹಾರಃ=ಶಬ್ದಪ್ರಯೋಗವು, ನ ಚ=ಇಲ್ಲವು, ತತ್ರ=ಆ ವಿಷಯದಲ್ಲಿ, ಕಿಂಚಿತ್=ಯಾವುದೊಂದು, ಮಾನಂ=ಪ್ರಮಾಣವು, ನ ಚ=ಇಲ್ಲವು.

ತಾ || (1) ಇದು, ಅನ್ಯ ಅನನ್ಯಗಳಿಂದ ವಿಲಕ್ಷಣವೆಂದು ಅನುಭವವೇ ಇಲ್ಲವು. (2) ಅನುಭವವಿಲ್ಲವೆನ್ನುವುದು ಹೇಗೆ ತಿಳಿಯುವುದೆಂದರೆ – ಅನುಭವ ಕಾರ್ಯವಾದ ವ್ಯವಹಾರವು ಇಲ್ಲದಿರುವುದರಿಂದ. (3) ಬಾಲ ಮೂಕಾದಿಗಳಿಗೆ ವ್ಯವಹಾರವಿಲ್ಲದಿದ್ದರೂ ಅನುಭವವಿದ್ದುದರಿಂದ ಅನುಭವದಲ್ಲಿ ವ್ಯವಹಾರವೇ ಪ್ರಮಾಣವಾಗಲಾರದು. ಆದಕಾರಣ ವಿಚಾರ ಚತುರನಿಗೆ ವ್ಯವ ಹಾರವಿಲ್ಲದಿದ್ದರೂ ಅನುಭವವದೆ ಎಂದು ಏಕೆ ಆಗಬಾರದೆಂದರೆ — ಹಾಗೆಯೇ ಇಲ್ಲಿಯೂ ಯಾವುದಾದರೂ ಪ್ರಮಾಣವಿದ್ದರೆ ಆಗಬಹುದಿತ್ತು. ಪ್ರಮಾಣವೇ ಇಲ್ಲವಷ್ಟೆ ॥ ೧೧೪ ॥

ಮೂ || ಅತೋ ವಿಶಿಷ್ಟಾದಿ ನಿರಾಕರಣಯುಕ್ತೀನಾಮಪಿ ವಿಶಿಷ್ಟಾದ್ಯ-ಪೇಕ್ಷತ್ವಾಜ್ಜಾತ್ಯುತ್ತರಮಿತಿ ನ ಯುಕ್ತಿಬಾಧಾಽಪಿ ॥ ೧೧೫ ॥

ಅ || ಅತಃ=ಆದಕಾರಣ, ವಿಶಿಷ್ಟಾದಿ ನಿರಾಕರಣಯುಕ್ತೀನಾಮಪಿ=ವಿಶಿಷ್ಟಾದಿಗಳನ್ನ ನಿರಾಕರಿಸತಕ್ಕ ಯುಕ್ತಿಗಳಿಗೂ ಕೂಡ, ವಿಶಿಷ್ಟಾದ್ಯಪೇಕ್ಷತ್ವಾತ್=ವಿಶಿಷ್ಟಾದಿಗಳ ಅಪೇಕ್ಷೆ ಇದ್ದುದರಿಂದ, ಜಾತ್ಯುತ್ತರಂ=ಜಾತ್ಯುತ್ತರವಾಯಿತು, ಇತಿ=ಆದಕಾರಣ, ಯುಕ್ತಿಬಾಧಾಽಪಿ= ಯುಕ್ತಿಪೀಡೆಯೂ ಕೂಡ, ನ=ಇಲ್ಲವು.

ತಾ || (1) ವಿಶಿಷ್ಟಾದಿಗಳನ್ನ ನಿರಾಕರಿಸತಕ್ಕ ತರ್ಕಕ್ಕೆ ಹಿಂದೆ ಹೇಳಿದ ಪ್ರಕಾರ ೫ ಅಂಗಗಳೂ ಇಲ್ಲವು. ಆದುದರಿಂದ ಜಾತ್ಯುತ್ತರವಾಯಿತು. ಕಾರಣ ಶ್ರುತಿಗಳು ವಿಶಿಷ್ಟಾರ್ಥ ವನ್ನು ಪ್ರತಿಪಾದಿಸುತ್ತವೆ ಎನ್ನುವುದಕ್ಕೆ ತರ್ಕದಿಂದ ಬಾಧೆಯು ಇಲ್ಲ. (2) ಜಾತಿಯ ಪ್ರಭೇದಾದಿ ಗಳನ್ನು ಪ್ರಮಾಣಲಕ್ಷಣದಲ್ಲಿ (ಪುಟ ೪೩-೪೪) ಹೇಳಿರುತ್ತದೆ. ಇದು ನಿತ್ಯಸಮಾ ಜಾತಿಯು. 'ವಿವಕ್ಷಿತಧರ್ಮಸ್ಯ ತದತದ್ರೂಪ ವಿಕಲ್ಪಾನುಪಪತ್ತ್ಯಾ ಧರ್ಮಿಣಸ್ತದ್ವಿಶಿಷ್ಟತ್ವಖಂಡನಂ ನಿತ್ಯಸಮಾ' ಹೇಳಬೇಕಿಂದಿಷ್ಟವಾದ ಧರ್ಮಕ್ಕೆ ಅದೋ ಇದೋ ಎಂಬೀ ವಿಕಲ್ಪ ಕೂಡದಿರುವುದರಿಂದ ಧರ್ಮಿಯೂ ಅದರಿಂದ ವಿಶಿಷ್ಟವಲ್ಲ ಎಂದು ಹೇಳುವುದು ನಿತ್ಯಸಮಾ ಎನ್ನುವುದು ॥ ೧೧೫ ॥

ಮೂ || ಅತೋ ನಿಖಿಲಗುಣಗಣಾಢ್ಯಮೇವ ಬ್ರಹ್ಮ ಶ್ರುತ್ಯಭಿಪ್ರೇತಂ ॥ ೧೧೬ ॥

ಅ || (ಯಾವಕಾರಣದಿಂದ 'ಪರಾಸ್ಯ ಶಕ್ತಿಃ' ಇತ್ಯಾದಿ ಶ್ರುತಿಗಳಲ್ಲಿ ವಿಶಿಷ್ಟವನ್ನು ಪ್ರತಿಪಾದಿ ಸುತ್ತದೋ, ಅಂತರಂಗಾನುಪಪತ್ತಿಬಾಧಕವೂ ಬಾಹ್ಯತರ್ಕದ ಬಾಧೆಯೂ ಇಲ್ಲವೋ), ಅತಃ= ಆದಕಾರಣ, ಬ್ರಹ್ಮ=ಪರಬ್ರಹ್ಮನು, ನಿಖಿಲಗುಣಗಣಾಢ್ಯಮೇವ=ಎಲ್ಲಾ ಗುಣಗಳ ಸಮೂಹ ದಿಂದ ಸಂಪನ್ನವಾದುದಾಗಿಯೇ, ಶ್ರುತ್ಯಭಿಪ್ರೇತಂ=ಶ್ರುತಿಗಳಿಗೆ ಸಮ್ಮತವಾದುದು. (ಅಂತೂ ಸೂತ್ರಕಾರರಿಗೆ ಶ್ರುತಿವಿರೋಧವಿಲ್ಲವು ಎಂದು ಸಿದ್ಧವಾಯಿತು.) ॥ ೧೧೬ ॥

ಹೀಗೆ ದೃಶ್ಯತ್ವಾದ್ಯನುಮಾನಗಳಿಗೆ ಬಾಧನನ್ನು ಹೇಳಿ ಅಸಿದ್ಧಿಯನ್ನೂ ಹೇಳುತ್ತಾರೆ —

ಮೂ || ಅನಿರ್ವಚನೀಯಾಸಿದ್ಧೇರೇವಾನುಮಾನಸ್ಯಾಪ್ಯಸಿದ್ಧಿಃ ॥ ೧೧೭ ॥

ಅ || ಅನಿರ್ವಚನೀಯಾಸಿದ್ಧೇರೇವ=ಅನಿರ್ವಚನೀಯವು ಸಿದ್ಧವಾಗದಿರುವುದರಿಂದಲೇ, ಅನುಮಾನಸ್ಯಾಪಿ=ದೃಶ್ಯತ್ವಾದ್ಯನುಮಾನಕ್ಕೂ, ಅಸಿದ್ಧಿಃ=ಅಸಿದ್ಧಿಯು. (ಪಕ್ಷದಲ್ಲಿ ಹೇತುವಿಲ್ಲದಿರುವುದು.)

ತಾ || (1) ದೃಶ್ಯತ್ವಾದಿಗಳು ಸತ್ ಆಗಲಾರವು, ಅನಿರ್ವಚನೀಯವೂ ಅಲ್ಲವು, ಅಸತ್ ಎಂದರೂ ಅಸಿದ್ಧಿಯೇ ಬರುವುದು. (2) ಸಾಮಾನ್ಯಾಕಾರವಾಗಿ ಪ್ರಯುಕ್ತವಾದ ಹೇತುವಿನಲ್ಲಿ ವಿಶೇಷಾಕಾರವಾಗಿ ವಿಕಲ್ಪಿಸಿ ನಿರಾಕರಿಸಿದರೆ 'ಪರ್ವತೋ ವಹ್ನಿಮಾನ್ ಧೂಮಾತ್' ಇದು ಮೊದಲಾದ ಅನುಮಾನಗಳಿಗೂ ಹಾನಿಬರಬೇಕಾಗುವುದೆಂದು ಹೇಳಕೂಡದು. ಪ್ರಕೃತ ಅನಿರ್ವಚನೀಯವೇ ಸಿದ್ಧವಾಗಲಿಲ್ಲ. ಆಶ್ರಯವೇ ಸಿದ್ಧವಾಗದಿದ್ದ ಮೇಲೆ ಸಾಮಾನ್ಯವು ಸಿದ್ಧವಾಗಲಾರದು.

ಅಥವಾ ಇದಕ್ಕೆ ಪ್ರತಿಕೂಲತರ್ಕಪರಾಹತಿಯನ್ನು ಹೇಳುತ್ತಾರೆ. —

*** ಯದಿ ಜಗನ್ಮಿಥ್ಯಾ ಸ್ಯಾತ್ತದಾ ದೃಶ್ಯತ್ವಾದ್ಯನುಮಾನಸ್ಯಾಪಿ**
**ಜಗದಂತಃಪಾತಿತ್ವೇನ ಮಿಥ್ಯಾತ್ವಾದಸಿದ್ಧಿಃ ಸ್ಯಾತ್ ||**

ಅ || ಜಗತ್ತು ಮಿಥ್ಯೆಯಾದರೆ ದೃಶ್ಯತ್ವಾದ್ಯನುಮಾನವೂ ಜಗತ್ತಿನಲ್ಲಿ ಸೇರಿದ್ದರಿಂದ ಮಿಥ್ಯೆಯಾದುದರಿಂದ ಅಸಿದ್ಧಿರೂಪದೋಷವು ಪ್ರಾಪ್ತವಾಗುವುದು.

ತಾ || ಹಾಗಾದರೆ ನಾವು ಮಿಥ್ಯೆಯೆಂದರೆ ಜಗತ್ತು ಅಸತ್ತೆಂದು ಹೇಳುವುದಿಲ್ಲ. ಅನಿರ್ವಚನೀಯವೆಂದೇ ಹೇಳುತ್ತೇವೆ. ಹೇಗೆ ಅನುಮಾನವು ಅಸಿದ್ಧವಾಗುವುದೆಂದರೆ ಅನಿರ್ವಚನೀಯವೇ ಸಿದ್ಧವಾಗದಿರುವುದರಿಂದ ಅಪ್ರಸಿದ್ಧವಿಶೇಷಣವೆಂದು ಹೇಳಿರುತ್ತೇವೆ || ೧೧೭ ||

ಅನುಮಾನದಿಂದ ಜಗತ್ತಿಗೆ ಮಿಥ್ಯಾತ್ವವು ಸಿದ್ಧಿಯಾಗದಿದ್ದರೂ ಶ್ರುತಿಯಿಂದಾಗುವುದು. 'ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಸೋಮ್ಯ=ಸೋಮಪಾನಾರ್ಹನೇ, ವಿಕಾರಃ=ಘಟಾದಿಗಳು, ವಾಚಾರಂಭಣಂ=ಮಾತಿನಿಂದಲೇ ಕೇವಲವಾಗಿ ಉಂಟೆಂದು ಆರಂಭಿಸಲ್ಪಡುತ್ತವೆ, (ವಸ್ತುತಃ ಯಾವುದೊಂದು ವಿಕಾರವೂ ಇಲ್ಲ.) ನಾಮಧೇಯಂ=ಕೇವಲ ಹೆಸರು, (ಇದೆಲ್ಲವೂ ಸುಳ್ಳು.) ಮೃತ್ತಿಕೇತ್ಯೇವ ಸತ್ಯಂ = ಮೃತ್ತಿಕೆಯೆಂಬುವುದು ಮಾತ್ರ ಸತ್ಯವು, ಏಕೇನ ಮೃತ್ಪಿಂಡೇನ = ಯಥಾರ್ಥವಾಗಿ ಮಣ್ಣಿನ ಸ್ವರೂಪವೆಂದು ತಿಳಿದುದರಿಂದ, ಸರ್ವಂ ಮೃಣ್ಮಯಂ=ಎಲ್ಲಾ ಘಟಶರಾವಲುದಂಚನಾದಿಗಳು, ವಿಜ್ಞಾತಂ ಸ್ಯಾತ್=ಮಣ್ಣಿನ ಸ್ವರೂಪದಿಂದ ವಿಶೇಷವಾಗದಿರುವುದರಿಂದ ತಿಳಿದಹಾಗೆ ಆಗುವುವು. ಕಾರಣ ಹೊರತಾದ ಕಾರ್ಯವಿಲ್ಲವು. ಒಂದರ ಜ್ಞಾನದಿಂದ ಸರ್ವವೂ ತಿಳಿದಂತೆಯೇ ಆಗುವುದು ಎಂದು ಪರರು ಈ ಶ್ರುತಿಗಳಿಗೆ ಹೀಗೆ ಅರ್ಥಮಾಡುವರು. ಇದು ಅಯುಕ್ತವು, ಬೇರೆಯೇ ಅರ್ಥವನ್ನುಪಪಾದಿಸಬೇಕೆಂದು ಹೇಳುತ್ತಾರೆ.

**ಮೂ || ವಾಚಾರಂಭಣಂ ವಿವಿಧಪ್ರಕಾರಃ ನಾಮಧೇಯಂ ನಿತ್ಯಂ ಧಾರ್ಯಂ ನಾಮ ಮೃತ್ತಿಕೇತ್ಯಾದಿ ವೈದಿಕಮೇವ || ಇತ್ಯೇತದ್ವಚನಂ ಸತ್ಯಮಿತಿ ಶ್ರುತ್ಯರ್ಥಃ || ೧೧೮ ||**

---

*ಇದು ಟೀಕಾವಾಕ್ಯವು. ಕುಂಭಘೋಣ ಛಾಪಾಪುಸ್ತಕದಲ್ಲಿ ಆಚಾರ್ಯರ ವಾಕ್ಯದೊಂದಿಗೆ ಸೇರಿಸಲ್ಪಟ್ಟಿದೆ.

ಅ ॥ ವಾಚಾರಂಭಣಂ=ವಾಗಿಂದ್ರಿಯದಿಂದ ಉತ್ಪತ್ತಿಯುಳ್ಳ ಸಾಂಕೇತಿಕನಾಮವು, ವಿವಿಧಪ್ರಕಾರಃ=ಬಹುಪ್ರಕಾರವುಳ್ಳದ್ದು, (ಅಂದರೆ ಸಾಂಕೇತಿಕನಾಮಗಳು ಪುರುಷಬುದ್ಧ್ಯನು-ಸಾರವಾಗಿ ಅನೇಕ ಪ್ರಕಾರ ಕಲ್ಪಿತಗಳಾಗುವುವು, ಕಾರಣ ಅನಿತ್ಯಗಳು. ನಿತ್ಯವಾದುವುಗಳು ಪುರುಷರ ಬುದ್ಧ್ಯನುಸಾರವಾಗಿ ಅನೇಕವಿಧಗಳಾಗಲಾರವು.) ಮೃತ್ತಿಕೇತ್ಯಾದಿ ವೈದಿಕಮೇವ= ಮೃತ್ತಿಕಾಮೊದಲಾದ ವೇದಗಳಲ್ಲಿರತಕ್ಕುದೇ, ಧೇಯಂ ನಾಮ=ನಿತ್ಯದಲ್ಲಿಯೂ ಧರಿಸತಕ್ಕುದು, ನಾಮವು, ಸದಾತಿಳಿಯತಕ್ಕುದು, ಇತಿ = ಈ ಪ್ರಕಾರ, ಏತದ್ವಚನಂ = ಈ ಮಾತು, ಸತ್ಯಮಿತಿ=ಸತ್ಯವೆಂದು, ಶ್ರುತ್ಯರ್ಥಃ=ಶ್ರುತಿಗಳ ಅಭಿಪ್ರಾಯವು. (ಎನ್ನುವುದರಿಂದ ಸಂಸ್ಕೃತ ಶಬ್ದಗಳು ನಿತ್ಯಗಳೆಂದುಕ್ತವಾಯಿತು.)

ತಾ ॥ ಈ ಪ್ರಕಾರ ಪ್ರಾಕೃತವೊದಲಾದ ಭಾಷೆಗಳಿಗೆ ಅನಿತ್ಯತ್ವವನ್ನೂ ಸಂಸ್ಕೃತ ಭಾಷೆಗೆ ನಿತ್ಯತ್ವವನ್ನೂ ಸಮರ್ಥಿಸಿದರು ॥ ೧೧೮ ॥

**ಮೂ ॥ ಅನಿತ್ಯತ್ವಾತ್ಸಾಂಕೇತಿಕಂ ನಾಮಪ್ರಧಾನಂ ನಿತ್ಯತ್ವಾನ್ಮೃತ್ತಿಕಾದಿ ನಾಮೈವ ಪ್ರಧಾನಂ । ಪ್ರಧಾನಜ್ಞಾನಾದಪ್ರಧಾನಮಪಿ ಜ್ಞಾತಾರ್ಥ ಮಿವ ಭವತಿ॥ ಏವಂ ಪ್ರಧಾನಸ್ಯ ಪರಮಾತ್ಮನೋ ಜ್ಞಾನಾದಪ್ರಧಾ ನಂ ಜ್ಞಾತಮಿವ ಭವತಿ ॥ ೧೧೯ ॥**

ಅ ॥ ಸಾಂಕೇತಿಕಂ ನಾಮ = ಕಲ್ಪಿತಶಕ್ತಿಯುಳ್ಳದ್ದು, ಅನಿತ್ಯತ್ವಾತ್=ನಿತ್ಯವಲ್ಲದಿರುವುದರಿಂದ, ಅಪ್ರಧಾನಂ=ಅಮುಖ್ಯವಾದುದು, ನಿತ್ಯತ್ವಾತ್=ನಿತ್ಯವಾದುದರಿಂದ, (ಶಬ್ದಾರ್ಥಗಳಿಗೆ ಸ್ವಾಭಾವಿಕ ಸಂಬಂಧವಿರುವುದರಿಂದ) ಮೃತ್ತಿಕಾದಿ ನಾಮೈವ=ಮೃತ್ತಿಕೆ ಮೊದಲಾದ ನಾಮಧೇಯಗಳೇ, ಪ್ರಧಾನಂ=ಮುಖ್ಯವಾದುವು, ಪ್ರಧಾನಜ್ಞಾನಾತ್=ಪ್ರಧಾನವಾದ ಸಂಸ್ಕೃತ ಜ್ಞಾನದಿಂದ, ಅಪ್ರಧಾನಮಪಿ=ಪ್ರಾಕೃತಾದಿಗಳೂ ಕೂಡ, ಜ್ಞಾತಾರ್ಥಮಿವ=ತಿಳಿಯಲ್ಪಟ್ಟ ಪ್ರಯೋಜನವುಳ್ಳದರಂತೆ, ಭವತಿ=ಆಗುತ್ತವೆ, ಅಂದರೆ ಆ ಜ್ಞಾನಕ್ಕೆ ಯಾವ ಪ್ರಯೋಜನವೋ ಆ ಪ್ರಯೋಜನವು ಸಿಗುವುದು, ಏವಂ=ಹೀಗೆಯೇ, ಪ್ರಧಾನಸ್ಯ=ಸರ್ವೋತ್ತಮನಾದ, ಪರಮಾತ್ಮನಃ=ಪರಬ್ರಹ್ಮನ, ಜ್ಞಾನಾತ್=ಜ್ಞಾನದಿಂದ, ಅಪ್ರಧಾನಂ= ಅಮುಖ್ಯವಾದುದು, ಜ್ಞಾತಮಿವ=ತಿಳಿಯಲ್ಪಟ್ಟಂತೆ, ಭವತಿ=ಆಗುತ್ತದೆ.

ತಾ ॥ (1) ಇದರಿಂದ ಬ್ರಹ್ಮಜ್ಞಾನದಿಂದ ಅಪ್ರಧಾನವಾದ ಜಗತ್ತಿನ ಜ್ಞಾನವು ಆಗುತ್ತದೆ ಎಂಬುವುದಕ್ಕೆ ದೃಷ್ಟಾಂತವನ್ನು ತೋರಿಸಲಿಕ್ಕೇನೆ ಹೊರಟದೆ. ಮಣ್ಣಿನಿಂದ ಬೇರೆ ಮೃಣ್ಮಯವಾದ ಘಟಾದಿಗಳು ಇಲ್ಲವೆಂದು ಹೇಳಲಿಕ್ಕೆ ಬಂದದ್ದಲ್ಲ. ಆದಕಾರಣ ಮೃತ್ಪಿಂಡಾದಿ ದೃಷ್ಟಾಂತಕ್ಕೆ ಪರರು ಹೇಳಿದ ಅರ್ಥದಲ್ಲಿ ತಾತ್ಪರ್ಯವಿಲ್ಲವು ಎಂದು ಹೇಳಿದಂತೆ ಆಯಿತು. ॥೧೧೯॥

**ಕಾರಣ ಬಿಟ್ಟು ಕಾರ್ಯವಿಲ್ಲವೆನ್ನುವುದು ಇಲ್ಲಿ ವಿವಕ್ಷಿತವಾಗದಿದ್ದರೆ 'ಸದೇವ ಸೋಮ್ಯೇದಮಗ್ರ ಆಸೀತ್' ಪ್ರಳಯಕಾಲದಲ್ಲಿ ಸತ್‌ಶಬ್ದವಾಚ್ಯವಾದುದೇ ಇರುತ್ತಿತ್ತು. 'ತತ್ತೇಜೋಽಸೃಜತ' ಆ ಬ್ರಹ್ಮನು ತೇಜಸ್ಸನ್ನು ಸೃಷ್ಟಿಮಾಡಿದನು. 'ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ' ಈ ಎಲ್ಲಾ ಪ್ರಜೆಗಳೂ ಸತ್ತೇ ಕಾರಣವಾಗಿ ಉಳ್ಳವುಗಳು, ಇದು ಮೊದಲಾದ ಶ್ರುತಿಗಳಿಂದ ಆದಿಯಲ್ಲಿ ಕೇವಲ ಬ್ರಹ್ಮನಿರುತ್ತಿದ್ದನು. ಅವನಿಂದಲೇ ಜಗತ್ತು ಸೃಷ್ಟಿಸಲ್ಪಟ್ಟಿತು. ಇದು ಮೊದಲಾದುದು ಅಸಂಗತವಾಗಬೇಕಾಗುವುದು. ಅದು ಜಗತ್ತಿಗೆ ಬ್ರಹ್ಮನಲ್ಲಿ ಆರೋಪಿತತ್ವವನ್ನು ಹೇಳುವುದರಿಂದ ಕಾರ್ಯವು ಪ್ರತ್ಯೇಕವಾಗಿ ಇಲ್ಲವೆಂದುಪಪಾದಿಸುವುದೆಂದರೆ —**

**ಮೂ || ಪ್ರಾಧಾನ್ಯ ಜ್ಞಾಪನಾರ್ಥಮೇವ ಸೃಷ್ಟ್ಯಾದಿಕಥನಂ || ೧೨೦ ||**

ಅ || ಪ್ರಾಧಾನ್ಯ ಜ್ಞಾಪನಾರ್ಥಮೇವ=ಪರಮಾತ್ಮನಿಗೆ ಮುಖ್ಯತ್ವವನ್ನು ತಿಳಿಸಿಕೊಡುವುದಕ್ಕೋಸ್ಕರವೇ, ಸೃಷ್ಟ್ಯಾದಿಕಥನಂ=ಜಗತ್ತಿನ ಸೃಷ್ಟ್ಯಾದಿಗಳನ್ನು ಹೇಳಿದ್ದು.

ತಾ || ಜಗತ್ತು ಬ್ರಹ್ಮನಲ್ಲಿ ಆರೋಪಿತವಲ್ಲವು. ವಾಚಾರಂಭಣ ದೃಷ್ಟಾಂತದಿಂದ ಪ್ರಧಾನವಾದ ಬ್ರಹ್ಮಜ್ಞಾನದಿಂದ ಅಪ್ರಧಾನವಾದ ಜಗತ್ತಿನ ಜ್ಞಾನವಾಗುತ್ತದೆಂದು ಹೇಳಿರುತ್ತದೆ. ಜಗತ್ತಿನಿಂದ ಬ್ರಹ್ಮನಿಗೆ ಪ್ರಾಧಾನ್ಯವು ಹೇಗೆಂದರೆ — ಜಗತ್ತಿಗೆ ಬ್ರಹ್ಮನು ನಿಮಿತ್ತಕಾರಣನಾಗಿರುತ್ತಾನೆ, ಕಾರಣ ಪ್ರಧಾನನು. ಅದನ್ನು ತಿಳಿಸಿಕೊಡುವುದಕ್ಕೋಸ್ಕರವೇ ಸೃಷ್ಟ್ಯಾದಿಗಳನ್ನು ನಿರೂಪಿಸಿದ್ದಾಗಿರುತ್ತದೆ. || ೧೨೦ ||

ಉಪಾದಾನಕಾರಣಕ್ಕಿಂತ ಉಪಾದೇಯವು ಪ್ರತ್ಯೇಕವಾಗಿ ಇಲ್ಲ ಎಂಬುವುದರಲ್ಲಿ ಮೃತ್ಪಿಂಡಾದಿ ದೃಷ್ಟಾಂತವಲ್ಲವಾದರೆ ಬೇರೆ ತಾತ್ಪರ್ಯವು ತೋರದಿರುವುದರಿಂದ ವ್ಯರ್ಥವೇ ಆಗಬೇಕಾಯಿತು. ಎಂದರೆ—

**ಮೂ || ಯಥಾ ಸೋಮ್ಯೇತ್ಯಾದ್ಯಪಿ ಸಾದೃಶ್ಯಕಥನಂ || ೧೨೧ ||**

ಅ || (ಸಾದೃಶ್ಯವಿದ್ದುದರಿಂದಲೂ ಪ್ರಧಾನವಾದುದರಿಂದಲೂ ಬ್ರಹ್ಮನ ಜ್ಞಾನದಿಂದ ಜಗತ್ತಿನ ಜ್ಞಾನವಾಗುವುದೆಂದಭಿಪ್ರಾಯವು. ಅವುಗಳಲ್ಲಿ) 'ಯಥಾ ಸೋಮ್ಯ' ಇತ್ಯಾದ್ಯಪಿ= ಇದು ಮೊದಲಾದ ವಾಕ್ಯವೂ ಕೂಡ, ಸಾದೃಶ್ಯಕಥನಂ=ಸಾದೃಶ್ಯವನ್ನು ಪ್ರತಿಪಾದಿಸುವುದು. ಸಾದೃಶ್ಯದಿಂದ ಒಂದರ ಜ್ಞಾನದಿಂದ ಸರ್ವಜ್ಞಾನವೂ ಬರುವುದೆಂದು ಉಪಪಾದಿಸಿ ದೃಷ್ಟಾಂತವನ್ನು ಹೇಳಲಿಕ್ಕೆ ಹೊರಟಿದ್ದಾಗಿರುತ್ತದೆ. ಕಾರಣ ವ್ಯರ್ಥವಲ್ಲ. 'ಅಪಿ' ಶಬ್ದದಿಂದ 'ಸದೇವ ಸೋಮ್ಯ' ಇತ್ಯಾದಿಗಳು ಮಾತ್ರ ವ್ಯರ್ಥವಲ್ಲವೆಂದಲ್ಲ. 'ಯಥಾ ಸೋಮ್ಯ' ಇತ್ಯಾದಿಗಳೂ ವ್ಯರ್ಥವಲ್ಲವು ಎಂದು ಹೇಳಿದ್ದಾರೆ. || ೧೨೧ ||

'ಯಥಾ ಸೋಮ್ಯ' ಇತ್ಯಾದಿ ವಾಕ್ಯಗಳಿಗೆ ಪರರು ಹೇಳುವ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳಿದೆವು. ಅವರು ಹೇಳುವ ಅರ್ಥವನ್ನಿಟ್ಟುಕೊಂಡರೆ ಬಾಧಕವೂ ಇದೆ ಎಂದುಪಪಾದಿಸುತ್ತಾರೆ —

**ಮೂ || ನ ಚೈಕನಖನಿಕೃಂತನವಿಕಾರಃ ಸರ್ವಂ ಕಾರ್ಷ್ಣಾಯಸಂ || ೧೨೨ ||**

ಅ || ಸರ್ವಂ ಕಾರ್ಷ್ಣಾಯಸಂ = ಕತ್ತಿ ಮೊದಲಾದವುಗಳೆಲ್ಲವೂ, ಏಕನಖನಿಕೃಂತನವಿಕಾರಃ=ಒಂದು ಚೂರಿಯ ವಿಕಾರವಾದವುಗಳು (ಉಗುರುಕಡ್ಡಿ), ನ ಚ=ಅಲ್ಲವಷ್ಟೆ.

ತಾ || (1) ಈ ದೃಷ್ಟಾಂತಗಳು ಕಾರ್ಯಕಾರಣ ಭಾವವನ್ನು ವಿವಕ್ಷಿಸಿ ಬಂದಿರುವುದಾದರೆ ಏಕ ಮೃತ್ಪಿಂಡ ಮೊದಲಾದ ಶಬ್ದಗಳು ವ್ಯರ್ಥಗಳೇ ಆಗಬೇಕಾಗುವುವು. ಎಲ್ಲಾ ಮೃಣ್ಮಯವಾದದ್ದು ಒಂದು ಮಣ್ಣಿನ ಹೆಂಟೆಯ ವಿಕಾರವಲ್ಲವಷ್ಟೆ! (2)'ಯಥಾ ಸೋಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್' ಒಂದು ಚೂರಿಯ ಜ್ಞಾನದಿಂದ ಎಲ್ಲಾ ಕಬ್ಬಿಣಪದಾರ್ಥಗಳು ಜ್ಞಾತವಾಗುವುವು. ಇದು ಕೇವಲ ಅಯುಕ್ತವಾಗುವುದು. ಮೃತ್ಪಿಂಡಾದಿಗಳಿಗೆ ಮೃಣ್ಮಯವಾದ ಪದಾರ್ಥದ ಕಾರಣತ್ವವಾದರೂ ಉಂಟು. ಚೂರಿಯೆಂಬುವುದು ತಾನು ಕಾರ್ಯವಾದುದರಿಂದ ಇತರ ಕಬ್ಬಿಣಸಾಮಾನಿಗೆ ಕಾರಣವೇ ಆಗಲಾರದು. ಒಂದು ಚೂರಿಯ ವಿಕಾರವು ಎಲ್ಲವೂ ಆಗುವುದಿಲ್ಲವೆಂದು ಸುತರಾಂ ಸಿದ್ಧವು.

ಆದುದರಿಂದ ಕಾರ್ಯಕಾರಣತ್ವವನ್ನು ವಿವಕ್ಷಿಸಿ ಈ ದೃಷ್ಟಾಂತಗಳಲ್ಲವೆಂದು ತಿಳಿಯುತ್ತದೆ. ಇವುಗಳಿಗೂ ಸಾದೃಶ್ಯವಾದರೂ ಉಂಟೇ ಉಂಟು. ಕಾರಣ ನಾವು ಹೇಳಿದ ಅರ್ಥವೇ ಯುಕ್ತವಾಗಿರುತ್ತದೆ ॥ ೧೨೨ ॥

ಪ್ರಾಧಾನ್ಯ ಸಾದೃಶ್ಯಗಳಿಂದ ಒಂದರ ಜ್ಞಾನದಿಂದ ಸರ್ವಜ್ಞಾನವೂ ಆಗುವುದೆಂದು ಲೋಕವ್ಯವಹಾರವನ್ನು ಅನುಸರಿಸಿ ಇಟ್ಟುಕೊಳ್ಳಬೇಕೆಂದು ಹೇಳುತ್ತಾರೆ.

ಮೂ ॥ ಪ್ರಧಾನಪುರುಷಜ್ಞಾನಾದ್ಗ್ರಾಮೋ ಜ್ಞಾತ ಇತಿ ವ್ಯಪದೇಶೋಽಸ್ತಿ ।
ನ ಹಿ ಸತ್ಯಜ್ಞಾನೇನ ಮಿಥ್ಯಾಜ್ಞಾನಂ ಭವತಿ ॥ ೧೨೩ ॥

ಅ ॥ ಪ್ರಧಾನಪುರುಷಜ್ಞಾನಾತ್=ಮುಖ್ಯಪುರುಷನ ಜ್ಞಾನದಿಂದ, ಗ್ರಾಮಃ=ಗ್ರಾಮವು, ಜ್ಞಾತ ಇತಿ=ತಿಳಿಯಲ್ಪಟ್ಟಿತೆಂದು, ವ್ಯಪದೇಶಃ=ವ್ಯವಹಾರವು, ಅಸ್ತಿ=ಇರುತ್ತದೆ. (ಹೀಗೆಯೇ ಸಾದೃಶ್ಯದಿಂದ ಒಂದು ಗೋವಿನ ಜ್ಞಾನದಿಂದ ಬೇರೆ ಗೋವಿನ ಜ್ಞಾನವು ಆಗುವುದು.) ಸತ್ಯಜ್ಞಾನೇನ=ಯಥಾರ್ಥಜ್ಞಾನದಿಂದ, ಮಿಥ್ಯಾಜ್ಞಾನಂ=ಮಿಥ್ಯಾರ್ಥಜ್ಞಾನವು, ನ ಹಿ ಭವತಿ= ಆಗುವದಿಲ್ಲವಷ್ಟೆ!

ತಾ ॥ ಚಿಪ್ಪು ಎಂಬುವ ಜ್ಞಾನದಿಂದ ಬೆಳ್ಳಿ ಎಂಬುವ ಜ್ಞಾನವು ನಿವೃತ್ತವೇ ಆಗುವುದು. ಆ ಕಾರಣ ಪರರ ಅರ್ಥವು ಕೂಡಲಾರದು. ಈ ರೀತಿಯಾಗಿ ಪ್ರಪಂಚಕ್ಕೆ ಮಿಥ್ಯಾತ್ವಾದಿಗಳು ಯಾವ ರೀತಿಯಿಂದಲೂ ಸಿದ್ಧವಾಗದಿರುವುದರಿಂದ ಭೈತಿಗಳು ಪ್ರಯೋಗಿಸಿದ ಮುಕ್ತತ್ವಾನುಮಾನಕ್ಕೆ ಅಸಿದ್ಧಿದೋಷವೂ ಪ್ರಮಾಣವಿರೋಧವೂ ಇರುವುದಿಲ್ಲ ॥ ೧೨೩ ॥

ಹಾಗಾದರೆ ಮುಕ್ತತ್ವಹೇತುವಿರಲಿ, ಭೇದರೂಪವಾದ ಸಾಧ್ಯವನ್ನು ಒಪ್ಪುವುದಿಲ್ಲ. ಬಾಧಕವೇನು? ಅಂತೂ ಸಾಧ್ಯವನ್ನು ಒಪ್ಪದಿದ್ದರೂ ಬಾಧಕವಿಲ್ಲದಿರುವುದರಿಂದ ಮುಕ್ತತ್ವರೂಪವಾದ ಹೇತುವು ಅಪ್ರಯೋಜಕವಾಗಿರುತ್ತದೆ. ಎಂದರೆ —

ಮೂ ॥ ಮುಕ್ತಾಮುಕ್ತಯೋರ್ಭೇದಾಭಾವೇ ಮುಕ್ತಸ್ಯ ಸಂಸಾರಃ
ಸಂಸಾರಿಣೋ ಮುಕ್ತತ್ವಂ ವಾ ಸ್ಯಾತ್ ॥ ೧೨೪ ॥

ಅ ॥ ಮುಕ್ತಾಮುಕ್ತಯೋಃ = ಮುಕ್ತಾಮುಕ್ತರಿಗೆ, ಭೇದಾಭಾವೇ = ಭೇದವಿಲ್ಲವಾದರೆ, ಮುಕ್ತಸ್ಯ=ಮುಕ್ತನಿಗೆ, ಸಂಸಾರಃ=ಸಂಸಾರವು, ಸಂಸಾರಿಣಃ=ಸಂಸಾರಿಯಾದವನಿಗೆ, ಮುಕ್ತತ್ವಂ ವಾ=ಮುಕ್ತನ ಧರ್ಮವಾಗಲೀ, ಸ್ಯಾತ್=ಆಗಬೇಕಾದೀತು.

ತಾ ॥ ಮುಕ್ತನಿಗೆ ಭೇದವಿಲ್ಲವೆಂದಾದರೆ ಸಂಸಾರಿಗೂ ಆತನಿಗೂ ಐಕ್ಯವೆಂದಾಯಿತು. ಮುಕ್ತನು ಸಂಸಾರಿಯಿಂದ ಐಕ್ಯವನ್ನು ಹೊಂದಿದರೆ ಆತನಿಗೆ ಇದ್ದ ಸಂಸಾರವನ್ನು ಅನುಭವಿಸಬೇಕಾಗುವುದು. ಅಂತೂ ಮುಕ್ತನೇ ಆಗದೆ ಹೋದಾನು. (2) ಅಥವಾ ಮುಕ್ತನಿಂದ ಐಕ್ಯವನ್ನು ಹೊಂದಿದ ಸಂಸಾರಿಗೆ ಮುಕ್ತತ್ವವು ಆಗಬೇಕಾಯಿತು. ಅಂತೂ ಮುಕ್ತ ಅಮುಕ್ತರೆಂಬ ವ್ಯವಸ್ಥೆಯೇ ಇಲ್ಲವೆಂದಾಗುವುದು. ಏಕಕಾಲದಲ್ಲಿಯೇ ಒಬ್ಬನೇ ಮುಕ್ತನೂ ಅಮುಕ್ತನೂ ಎಂಬುವುದು ಕೂಡಲಾರದಷ್ಟೆ! ಕಾರಣ ವಿಪಕ್ಷದಲ್ಲಿ ಬಾಧಕವು ಉಂಟೇ ಉಂಟು ॥ ೧೨೪ ॥

ಮುಕ್ತನಿಗೆ ಸಂಸಾರಿಯಿಂದ ಭೇದವಿಲ್ಲವಾದರೆ ಸಂಸಾರಿಗೆ ಮುಕ್ತನಿಂದ ಭೇದವು ಹೇಗೆ ಕೂಡಬಹುದೆಂದರೆ— ಈ ಭೇದವು ಪಾರಮಾರ್ಥಿಕವಾಗಿದ್ದರೆ ಈ ಬಾಧಕವು ಇರುತ್ತಿತ್ತು.

ಸಂಸಾರಿಗೆ ಮುಕ್ತನಿಂದ ಭೇದವು ಅಜ್ಞಾನನಿಮಿತ್ತವಾದುದರಿಂದ ಅಜ್ಞಾನಿಯೂದ ಸಂಸಾರಿಗೆ ತೋರುವುದು. ಅಜ್ಞಾನವನ್ನು ಹೋಗಲಾಡಿಸಿಕೊಂಡ ಮುಕ್ತನಿಗೆ ಭೇದವು ತೋರಲಾರದು. ಕಾರಣ ಏನು ಬಾಧಕವೆಂದರೆ —

ಮೂ || ಯದ್ಯಜ್ಞಾನಕೃತೋ ಭೇದಸ್ತರ್ಹೀಶ್ವರಸ್ಯಾಜ್ಞಾನಾಭಾವಾ-
ತ್ಸಂಸಾರಿಣ್ಯೈಕ್ಯಂ ತೇನಾನುಭೂಯೇತ || ೧೨೫ ||

ಅ || ಭೇದಃ=ಅಂತಃಕರಣವೊದಲಾದುದು, ಯದಿ ಅಜ್ಞಾನಕೃತಃ=ಅಜ್ಞಾನನಿಮಿತ್ತಕವಾಗಿದ್ದಲ್ಲಿ, ತರ್ಹಿ=ಹಾಗಾದರೆ, ಈಶ್ವರಸ್ಯ=ಪರಮಾತ್ಮನಿಗೆ, ಅಜ್ಞಾನಾಭಾವಾತ್=ಅಜ್ಞಾನವಿಲ್ಲದಿರುವುದರಿಂದ, ಸಂಸಾರಿಣಾ=ಸಂಸಾರಿಯಾದವನಿಂದ, ಐಕ್ಯಂ=ಅಭೇದವು, ತೇನ=ಈಶ್ವರನಿಂದ, ಅನುಭೂಯೇತ=ಅನುಭವಿಸಲ್ಪಡಬೇಕಾದೀತು.

ತಾ || (1) ಅನುಭವವೇ ನಿಮಿತ್ತಕಾರಣವಾಗಿವುಳ್ಳ ಅಂತಃಕರಣ, ಶರೀರ, ಇಂದ್ರಿಯುಗಳು ಅಜ್ಞಾನದಿಂದ ಮಾಡಲ್ಪಟ್ಟವುಗಳು. ಕಾರಣ ಅಜ್ಞಾನವನ್ನು ಹೋಗಲಾಡಿಸಿಕೊಂಡವನಿಗೆ ಅಂತಃಕರಣಾದಿಗಳು ಇಲ್ಲದಿರುವುದರಿಂದ ಸಂಸಾರಾನುಭವವೇ ಉಂಟಾಗುವುದಿಲ್ಲ ಎಂದಾಗಲೀ, (2) ಸಂಸಾರಿಗೆ ಮುಕ್ತನಿಂದ ಅಜ್ಞಾನಕೃತವಾದ ಭೇದವಿದ್ದುದರಿಂದ ಸಂಸಾರಿಗೆ ಮುಕ್ತತ್ವಾನುಭವವು ಪ್ರಸಕ್ತವಾಗುವುದಿಲ್ಲ ಎಂದಾಗಲೀ ಸಮಾಧಾನವನ್ನು ಹೇಳಿದಾಗ್ಯೂ ಈಶ್ವರನು ಸಂಸಾರಿಯಿಂದ ಅಭೇದವನ್ನು ಅನುಭವಿಸಬೇಕಾಗುವುದು. ಏಕೆಂದರೆ — ಆತನಿಗೆ ಸಂಸಾರಿಯಂತೆ ಅಜ್ಞಾನವಿಲ್ಲವಷ್ಟೆ! ಆದ್ದರಿಂದ ಈಶ್ವರನಿಗೆ ಸಂಸಾರ ಪ್ರಾಪ್ತಿರೂಪ ಬಾಧಕವು ಇದ್ದೇ ಇದೆ. || ೧೨೫ ||

ಚಿಂತಿಲ್ಲ, ಈಶ್ವರನು ಸಂಸಾರಿಯಿಂದ ಐಕ್ಯವನ್ನನುಭವಿಸುತ್ತಾನೆಂದೇ ಹೇಳುವ. ನನಗೇನು ಅನಿಷ್ಟವನ್ನು ಬಗೆದಂತಾಯಿತು? ಎಂದು ಕೇಳಿದರೆ ಅನಿಷ್ಟವಿದೆಯೆನ್ನುತ್ತಾರೆ—

ಮೂ || ತತಶ್ಚ ದುಃಖಿತ್ವಂ ಸ್ಯಾತ್ || ೧೨೬ ||

ಅ || ತತಶ್ಚ=ಈಶ್ವರನಿಗೆ ಐಕ್ಯಾನುಭವವನ್ನು ಒಪ್ಪುವುದರಿಂದ (ಈಶ್ವರಸ್ಯ=ಈಶ್ವರನಿಗೆ), ದುಃಖಿತ್ವಂ=ದುಃಖಾನುಭವವು, ಸ್ಯಾತ್=ಆಗಬೇಕಾಯಿತು.

ತಾ || ಯಾರು ದುಃಖವುಳ್ಳವನಿಂದ ಐಕ್ಯವನ್ನು ಅನುಭವಿಸುತ್ತಾನೋ, ಆತನು ದುಃಖಿಯಾಗುವನು ಚೈತ್ರನಂತೆ. ಈಶ್ವರನೂ ಸಂಸಾರಿಯಿಂದ ಐಕ್ಯವನ್ನು ಅನುಭವಿಸುವುದಾದರೆ ಆತನೂ ದುಃಖಿಯಾಗುವನು. ಆದರೆ ಆತನು ದುಃಖವುಳ್ಳವನಲ್ಲವಷ್ಟೆ! ಆದಕಾರಣ ಈಶ್ವರನಿಗೆ ಸಂಸಾರಿಯಿಂದ ಐಕ್ಯಾನುಭವವದೆ ಎಂದ ಅಂಗೀಕರಿಸುವುದು ಯೋಗ್ಯವಲ್ಲ || ೧೨೬ ||

ಮತ್ತು ಈಶ್ವರನ ವಾಕ್ಯಗಳಿಂದಲೇ ಈಶ್ವರನಿಗೆ ಸಂಸಾರಿಗಳಿಂದ ಭೇದವೇ ಅನುಭೂತವಾಗಿದೆ ಎಂದು ಅನುಮೇಯಿಸುತ್ತೇವೆ. ಅಭೇದವು ಅನುಭೂತವಾಗುವುದೇ ಇಲ್ಲವೆನ್ನುತ್ತಾರೆ —

ಮೂ || ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ || ೧೨೭ ||
[ ಗೀ. ಅ. ೪. ಶ್ಲೋ. ೫ ]

ಅ || ಪರಂತಪ=ಶತ್ರುಗಳಿಗೆ ಸಂತಾಪವನ್ನು ಕೊಡುವ ಅರ್ಜುನನೇ, ಅಹಂ=ನಾನು, ತಾನಿ=ಆ ದಾಟದ, ಸರ್ವಾಣಿ=ಎಲ್ಲಾ ಜನ್ಮಗಳನ್ನು, ವೇದ=ತಿಳಿದಿದ್ದೇನೆ. ತ್ವಂ=ನೀನು,

ನ ವೇತ್ಥ=ತಿಳಿಯಲಿಲ್ಲ. (ಇಲ್ಲಿ ನಾನು ಜ್ಞಾನಿಯು, ನೀನು ಅಜ್ಞಾನಿಯು, ಎನ್ನುವುದರಿಂದ ಭೇದವು ಉಕ್ತವಾಯಿತು.)

ಮೂ ॥ ಸುಖಂ ದುಃಖಂ ಭವೋ ಭಾವೋ ಭಯಂ ಚಾಭಯಮೇವ ಚ ।
ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ॥
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೧೨೮ ॥
[ಗೀ. ಅ. ೧೦. ಶ್ಲೋ. ೪-೫.]

ಅ ॥ ಸುಖಂ=ಸುಖವು, ದುಃಖಂ=ದುಃಖವು, ಭವಃ=ಹುಟ್ಟುವಿಕೆಯು, ಭಾವಃ=ಸ್ಥಿತಿಯು, ಭಯಂ ಚ=ಭೀತಿಯು, ಅಭಯಮೇವ ಚ=ಭಯವಿಲ್ಲದಿರುವುದು, ಅಹಿಂಸಾ=ಹಿಂಸಾಮಾಡದಿರುವುದು, ಸಮತಾ=ಸುಖದಲ್ಲಿ ಹಿಗ್ಗದೆಯೂ ದುಃಖದಲ್ಲಿ ಕುಗ್ಗದೆಯೂ ಇರುವಿಕೆ, ತುಷ್ಟಿಃ=ವಿಷಯಗಳಲ್ಲಿ ಸಾಕೆನ್ನುವ ಬುದ್ಧಿಯು, ತಪಃ=ತಪಸ್ಸು, ದಾನಂ=ದಾನವು, ಯಶಃ-ಕೀರ್ತಿಯು, ಅಯಶಃ=ಅಪಕೀರ್ತಿಯು, ಭಾವಾಃ=ಧರ್ಮಗಳು, ಪೃಥಗ್ವಿಧಾಃ=ಬೇರೆ ಬೇರೆ ವಿಧಗಳಾದವುಗಳು, ಭೂತಾನಾಂ=ಪ್ರಾಣಿಗಳಿಗೆ, ಮತ್ತ ಏವ=ನನ್ನಿಂದಲೇ, ಭವಂತಿ=ಆಗುತ್ತವೆ. ಇಲ್ಲಿ ಈಶ್ವರನು ನಿಯಾಮಕನೆಂದೂ, ಇತರಗಳು ನಿಯಮ್ಯಗಳೆಂದೂ ಹೇಳಿರುವುದರಿಂದ ಭೇದವನ್ನು ಹೇಳಿದಂತೆ ಆಯಿತು ॥ ೧೨೮ ॥

ಮೂ ॥ ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ [ಗೀ. ಅ. ೧೫.ಶ್ಲೋ.೧೮]
ಇತ್ಯಾದಿನೇಶ್ವರೇಣಾಪಿ ಭೇದಸ್ಯೈವಾನುಭೂಯಮಾನತ್ವಾಚ್ಚ
॥ ೧೨೯ ॥

ಅ ॥ ಯಸ್ಮಾತ್=ಯಾವ ಕಾರಣದಿಂದ, ಅಹಂ=ನಾನು, ಕ್ಷರಂ=ಎಲ್ಲಾ ಪ್ರಾಣಿಗಳನ್ನು, ಅತೀತಃ=ಮೀರಿ ಇದ್ದವನೋ, ಅಕ್ಷರಾದಪಿ=ಅಕ್ಷರಶಬ್ದವಾಚ್ಯಳಾದ ಲಕ್ಷ್ಮೀದೇವಿಯಿಂದಲೂ, ಉತ್ತಮಶ್ಚ=ಶ್ರೇಷ್ಠನೋ, ಅತಃ=ಆದಕಾರಣ, ಲೋಕೇ=ಲೋಕದಲ್ಲಿಯೂ, (ಪೌರುಷೇಯಗ್ರಂಥದಲ್ಲಿಯೂ), ವೇದೇ ಚ=ವೇದದಲ್ಲಿಯೂ, ಪುರುಷೋತ್ತಮಃ=ಪುರುಷೋತ್ತಮನೆಂದು, ಪ್ರಥಿತಃ=ಪ್ರಸಿದ್ಧಿಪಟ್ಟವನು, ಅಸ್ಮಿ=ಆಗಿರುತ್ತೇನೆ, ಇತ್ಯಾದಿನಾ=ಇದುಮೊದಲಾದ ವಾಕ್ಯಗಳಿಂದ, ಈಶ್ವರೇಣಾಪಿ=ಶ್ರೀ ಹರಿಯಿಂದಲೂ, ಭೇದಸ್ಯೈವ=ಸಂಸಾರಗಳಿಂದ ಭೇದಕ್ಕೇನೇ, ಅನುಭೂಯಮಾನತ್ವಾಚ್ಚ=ಅನುಭವಿಸಲ್ಪಡುವಿಕೆ ಇರುವುದರಿಂದಲೂ.

ತಾ ॥ ಇಲ್ಲಿಯೂ ಈಶ್ವರನೇ ಉತ್ಕೃಷ್ಟನು, ಇತರರು ಅಪಕೃಷ್ಟರು ಎಂದು ಹೇಳಿರುವುದರಿಂದ ಈಶ್ವರನು ಸಂಸಾರಿಗಳಿಂದ ಭಿನ್ನನೆಂದೇ ಹೇಳಿದಂತೆ ಆಯಿತು. ಅರ್ಜುನನಿಗೆ ಈಶ್ವರನು ಆಪ್ತನಾದುದರಿಂದ ಅನುಭೂತವಾಗದಿರುವುದನ್ನು ಹೇಳಲಾರನು, ಅಂತೂ ಮುಕ್ತತ್ವಹೇತುವನ್ನೊಪ್ಪಿ ಭೇದರೂಪಸಾಧ್ಯವನ್ನು ಒಡಂಬಡದೆ ಈ ರೀತಿಯಾದ ಐಕ್ಯವನ್ನು ಹೇಳಿದರೆ ಬಾಧಕವಿದ್ದಪ್ರಯುಕ್ತ ಸಾಧ್ಯವನ್ನು ಒಪ್ಪಲೇಬೇಕು. ಅಂತೂ ಹೇತುವು ಅಪ್ರಯೋಜಕವಾಗಲಿಲ್ಲ ॥ ೧೨೯ ॥

ಹೀಗೆ ಮುಕ್ತತ್ವರೂಪಹೇತುವಿನಿಂದ ಮುಕ್ತನಿಗೆ ಭೇದವನ್ನು ಸಾಧಿಸಿ ಬೇರೆ ಅನುಮಾನದಿಂದಲೂ ಸಾಧಿಸುತ್ತಾರೆ.

**ಮೂ || ತತ ಏವಾಭ್ರಾಂತತ್ವಾನ್ನ ಮುಕ್ತಸ್ಯಾಪಿ ಭೇದನಿವೃತ್ತಿಃ || ೧೩೦ ||**

ಅ || ತತ ಏವ=ಈಶ್ವರನಿಂದಲೂ ಭೇದವು ಅನುಭವಿಸಲ್ಪಡುವುದರಿಂದಲೇ, ಅಭ್ರಾಂತತ್ವಾತ್=ಈಶ್ವರನಿಗೆ ಭ್ರಾಂತಿಯಿಲ್ಲದಿರುವುದರಿಂದ, ಮುಕ್ತಸ್ಯಾಪಿ=ಮುಕ್ತನಿಗೂ ಕೂಡ, ಭೇದನಿವೃತ್ತಿಃ ನ=ಭೇದವು ಹೊರಟುಹೋಗುವುದಿಲ್ಲ, ಅಂದರೆ ಬಾಧ್ಯವಾಗುವುದಿಲ್ಲ.

ತಾ || (1) ವಿಮತೋ ಭೇದಃ=ವಿವಾದವಿಷಯವಾದ ಭೇದವು, ಮುಕ್ತೌ ನ ನಿವರ್ತತೇ=ಮುಕ್ತಿಯಲ್ಲಿ ಹೊರಟುಹೋಗುವುದಿಲ್ಲ. ಈಶ್ವರೇಣಾನುಭೂಯಮಾನತ್ವಾತ್=ಈಶ್ವರನಿಂದ ಅನುಭವಿಸಲ್ಪಡುವುದರಿಂದ, ಸ್ವರೂಪವತ್=ಸ್ವರೂಪದಂತೆ. (2) ಜೀವಬ್ರಹ್ಮಭೇದವು ಈಶ್ವರನಿಂದ ಅನುಭವಿಸಲ್ಪಡುವುದಾದರೂ ಮುಕ್ತಿಯಲ್ಲಿ ನಿವೃತ್ತಿಯಾಗುತ್ತದೆ ಎಂದಂಗೀಕರಿಸಿದರೆ ಈಶ್ವರನು ಭ್ರಾಂತನೆಂದು ಆಗಬೇಕಾಗುವುದು. ಬಾಧ್ಯವಾದ ಶುಕ್ತಿರಜತವನ್ನು ನೋಡಿದ ಪುರುಷನಂತೆ, ಈಶ್ವರನಾದರೂ ಭ್ರಾಂತನಾಗದಿರುವುದರಿಂದ ಆತನಿಂದ ಅನುಭವಿಸಲ್ಪಡುವ ಜೀವಬ್ರಹ್ಮಭೇದವು ನಿವೃತ್ತಿಯಾ (ಬಾಧ್ಯವಾ) ಗುವುದಿಲ್ಲ. (3) ಅಥವಾ ಅನುಮಾನದಿಂದ ಮುಕ್ತಪರಮಾತ್ಮರಿಗೆ ಭೇದವನ್ನು ಸಾಧಿಸಿ ಪ್ರತ್ಯಕ್ಷದಿಂದಲೂ ಭೇದವನ್ನು ಸಾಧಿಸಲಿಕ್ಕೆ ಈ ವಾಕ್ಯವು ಹೊರಟದೆ. ತತ ಏವ=ಈಶ್ವರನ ಪ್ರತ್ಯಕ್ಷದಿಂದಲೇ, ಮುಕ್ತಸ್ಯಾಪಿ=ಮುಕ್ತನಿಗೂ ಕೂಡ, ಭೇದನಿವೃತ್ತಿಃ ನ=ಭೇದವು ಹೊರಟುಹೋಗುವುದಿಲ್ಲ. (4) ಹಾಗಾದರೆ ಈಶ್ವರನಿಗೆ ಪ್ರತ್ಯಕ್ಷಸಿದ್ಧವಾದುದು ಸಂಸಾರಿಗಳಿಂದ ಭೇದವು. ಸಾಧಿಸುವುದು ಮುಕ್ತರಭೇದವು ಹೇಗೆ ಕೂಡಬಹುದು. ಎಂದರೆ ಭೇದವು ಭ್ರಾಂತವಲ್ಲ ಅಂದರೆ ಈಶ್ವರನಿಗೆ ಭ್ರಮೆಗೆ ಕಾರಣವಾದ ಅವಿದ್ಯಾವರಣವು ಇಲ್ಲದಿರುವುದರಿಂದ ಈಶ್ವರನಿಂದ ಅನುಭವಿಸಲ್ಪಡತಕ್ಕ, ತನ್ನಿಂದ ಸಂಸಾರಿಗಳಿಗೆ ಇರತಕ್ಕ ಭೇದವು ಭ್ರಾಂತವಲ್ಲ. ಆದಕಾರಣ ಪಾರಮಾರ್ಥಿಕ ಭೇದವು ಮುಕ್ತಿಯಲ್ಲಿಯೂ ಉಂಟೆಂದು ಈಶ್ವರನ ಪ್ರತ್ಯಕ್ಷದಿಂದಲೇ ಸಿದ್ಧವಾಗಿರುತ್ತದೆ || ೧೩೦ ||

ಈ ವಿಷಯದಲ್ಲಿ ಉಪಾಧಿಯೂ ಸತ್ಯವು, ಅದರಿಂದುಂಟಾದ ಭೇದವೂ ಸತ್ಯವು ಎಂದು ಹೇಳುವ ಮತದವರು ಶಂಕಿಸುತ್ತಾರೆ. 'ಈಶ್ವರನು ತನ್ನಿಂದ ಸಂಸಾರಿಗಳ ಭೇದವನ್ನು ಪ್ರತ್ಯಕ್ಷೀಕರಿಸಿಕೊಂಡಿದ್ದರೂ ಮುಕ್ತರ ಭೇದವು ಸಿದ್ಧವಾಗುವುದಿಲ್ಲ.' ಏಕೆಂದರೆ — ನಾವು ಮಾಯಾವಾದಿಗಳಂತೆ ಜೀವಬ್ರಹ್ಮರಿಗಾಗಲೀ ಜೀವರಿಗಾಗಲೀ ಇರುವ ಭೇದವು ಅಯಥಾರ್ಥವೆನ್ನುವುದಿಲ್ಲ, ಔಪಾಧಿಕವೆನ್ನುತ್ತೇವೆ. ಉಪಾಧಿಯಿಂದ ಮಾಡಲ್ಪಟ್ಟ ಪ್ರಯುಕ್ತವೇ ಪಾರಮಾರ್ಥಿಕವಾಗಿರುತ್ತದೆ. ಪಾರಮಾರ್ಥಿಕವಾದುದರಿಂದಲೇ ಈಶ್ವರನು ಸಂಸಾರಿಗಳಿಂದ ಭೇದವೊದಲಾದವುಗಳನ್ನು ಅನುಭವಿಸುತ್ತಾನೆ ಎಂದೂ ಯುಕ್ತವಾಗುವುದು. ಔಪಾಧಿಕವಾದುದರಿಂದಲೇ ಉಪಾಧಿಯು ನಾಶವಾದ ಮೇಲೆ ಮುಕ್ತಿಯಲ್ಲಿ ಭೇದವೂ ನಾಶವಾಗುವುದರಿಂದ ಸ್ವಭಾವತಃ ಐಕ್ಯವೂ ಸಿದ್ಧವಾಗುವುದು ಎಂದಾಶಂಕಿಸಿದರೆ ಹೀಗೆ ಸಮಾಧಾನವನ್ನು ತಿಳಿಯತಕ್ಕದು.

ಐಕ್ಯವು ಸ್ವಾಭಾವಿಕವೆಂದೂ, ಭೇದವಾದರೂ ಉಪಾಧಿಯಿಂದ ಮಾಡಲ್ಪಟ್ಟದ್ದೆಂದೂ ಯುಕ್ತವಾಗಿದ್ದರೆ ಈ ಮತವು ಆಗಬಹುದಿತ್ತು. ಆದರೆ ಹೀಗೆ ಹೇಳಲು ಬರಲಾರದು. ಏಕೆಂದರೆ- ಐಕ್ಯವು ಸ್ವಾಭಾವಿಕವಾಗಿದ್ದರೆ ಸುಖದುಃಖವೊದಲಾದುವುಗಳ ಅನುಸಂಧಾನವು ಅನ್ಯೋನ್ಯರಿಗೆ ಬರಬೇಕಾಗುವುದು. (2) ಹಾಗಾದರೆ ನಾವು, ಜೀವರು ಪರಬ್ರಹ್ಮನ ಅಂಶರೆಂದು ಅಂಗೀಕರಿಸುತ್ತೇವೆ. ಆಗ (೧) ಅಂಶಗಳಿಗೆ ಪರಸ್ಪರವಾಗಿ ಸುಖದುಃಖಾದಿಗಳ ಅನುಸಂಧಾನವನ್ನು ಆಪಾದಿಸುವಿರೋ, (೨) ಅಂಶಿಯಾದ ಬ್ರಹ್ಮನಿಗೆ ಆಪಾದಿಸುವಿರೋ, ೧ ಅಂಶಗಳಿಗೆ ಎಂದು ಹೇಳಕೂಡದು. ಹಸ್ತಕ್ಕೆ ಆಗತಕ್ಕ ಸುಖವು ಕಾಲಿಗೆ ಗೊತ್ತಾಗುವುದಿಲ್ಲ. ಪಾದಕ್ಕೆ ಆಗತಕ್ಕ ಸುಖವು ಹಸ್ತಕ್ಕೆ

ಗೊತ್ತಾಗುವುದಿಲ್ಲ. ಔಪಾಧಿಕಭೇದವು ಉಂಟೇಉಂಟು. ೨ ಔಪಾಧಿಕಭೇದವಿದ್ದುದರಿಂದಲೇ ಅಂಶಿಗೆ ಎಂದೂ ಹೇಳಕೂಡದು ಎಂದು ಪರರು ಪುನಃ ಆಶಂಕಿಸಿದರೆ ಹೀಗೆ ಸಮಾಧಾನ ಹೇಳುವೆವು. ಅಂಶಿಯಾದ ಪರಮೇಶ್ವರನಿಗೇನೇ ಸರ್ವಜೀವರಿಂದಲೂ ಸ್ವಾಭಾವಿಕವಾಗಿ ಅಭೇದ ವಿದ್ದರೆ ಸರ್ವ ಜೀವರಿಗೂ ಆಗತಕ್ಕ ಸುಖದುಃಖಾದಿಗಳ ಅನುಸಂಧಾನವು ಈಶ್ವರನಿಗೇ ಇರ ಬೇಕಾಗುವುದು ಎಂದುಪಪಾದಿಸುವೆವು.

(3) ಹಾಗಾದರೆ, ಜೀವೇಶ್ವರರಿಗೆ ಸ್ವಭಾವತಃ ಅಭೇದವಿದ್ದರೂ ಔಪಾಧಿಕಭೇದವಿದ್ದುದ ರಿಂದ ಈಶ್ವರನಿಗೆ ಜೀವರ ಸುಖದುಃಖಗಳ ಅನುಸಂಧಾನಗಳು ಪ್ರಾಪ್ತಗಳಾಗುವುದಿಲ್ಲ, ಎಂದರೆ- ಮೂಲಕಾರರು ಸಮಾಧಾನಗೊಳಿಸುವರು.

ಮೂ || ನ ಚೋಪಾಧಿಭೇದಮಾತ್ರೇಣೇಶ್ವರಸ್ಯ ದುಃಖಾಭಾವಃ | ಹಸ್ತಪಾ-ದಾದ್ಯುಪಾಧಿಭೇದೇऽಪಿ ಭೋಕ್ತುರೇಕತ್ವಾನುಭವಾತ್ || ೧೩೦ ||

ಅ || (ಸ್ವಾಭಾವಿಕ ಅಭೇದವಿರಲು) ಉಪಾಧಿಭೇದಮಾತ್ರೇಣ=ಕೇವಲ ಉಪಾಧಿ ಯಿಂದ ಮಾಡಲ್ಪಟ್ಟ ಭೇದದಿಂದ, ಈಶ್ವರಸ್ಯ=ಪರಬ್ರಹ್ಮನಿಗೆ, ದುಃಖಾಭಾವಃ=ದುಃಖವಿಲ್ಲ ವೆನ್ನುವುದು, ನ ಚ=ಕೂಡಲಾರದು, ಹಸ್ತಪಾದಾದ್ಯುಪಾಧಿ ಭೇದೇऽಪಿ=ಕೈಕಾಲು ಮೊದ ಲಾದ ಉಪಾಧಿಗಳಿಂದ ಮಾಡಲ್ಪಟ್ಟ ಭೇದವಿದ್ದರೂ, ಭೋಕ್ತುಃ=ಭೋಗಿಸತಕ್ಕವನಿಗೆ, ಏಕ ತ್ವಾನುಭವಾತ್=ಒಬ್ಬನೇ ಎಂದು ಅನುಭವಿಸುವುದರಿಂದ, ಅಂದರೆ ಒಬ್ಬನೇ ಅಂಶಿಯು ಎಲ್ಲಾ ದನ್ನು ಅನುಸಂಧಾನ ಮಾಡಿಕೊಳ್ಳುತ್ತಾನೆ.

ತಾ || ಹೇಗೆ ದೇವದತ್ತನು ತನ್ನ ಕೈಕಾಲು ಮೊದಲಾದ ಅಂಶಗಳ ಸುಖಾದಿಗಳನ್ನು ಅನುಸಂಧಾನಮಾಡುತ್ತಾನೋ ಹಾಗೆಯೇ ಈಶ್ವರನಿಗೂ ಸರ್ವಜೀವರಿಂದಲೂ ಐಕ್ಯವಿದ್ದರೆ ಸರ್ವಜೀವರಲ್ಲಿಯೂ ಇರತಕ್ಕ ಸುಖದುಃಖಾದಿಗಳನ್ನು ಈಶ್ವರನು ಅನುಭವಿಸಬೇಕಾಗುವುದು ಎಂದು ನಾವು ಆಪಾದಿಸಿದ್ದಕ್ಕೆ ಉಪಾಧಿಗಳು ಬೇರೆ ಬೇರೆಯಾದುದರಿಂದ ಅನುಭವಿಸುವುದಿಲ್ಲ ವೆಂದು ಪರರು ಹೇಳಿದರು. ಆದರೆ ಪರರ ಅಭಿಪ್ರಾಯವು ಯಾವುದು — ೧ ಐಕ್ಯವಿದ್ದರೂ ಅನುಸಂಧಾನವಿಲ್ಲ ಎಂಬುವ ಸ್ಥಳದಲ್ಲಿ ವೈಷಮ್ಯವನ್ನು ಮಾತ್ರ ತೋರಿಸಿದ್ದೆಂದು ಹೇಳಕೂಡದು. ಕೇವಲ ವೈಷಮ್ಯವು ಸಾಧಿಸಲಿಕ್ಕೂ, ಬಾಧಿಸಲಿಕ್ಕೂ ಸಮರ್ಥವಲ್ಲ. ೨ ದುಃಖಾದ್ಯನುಸಂಧಾನ ದಲ್ಲಿ ಕೇವಲ ಐಕ್ಯವು ಪ್ರಯೋಜಕವಲ್ಲ. ಔಪಾಧಿಕವಾದ ಭೇದವೂ ಇರಬಾರದು. ಅಂದರೆ ಔಪಾಧಿಕ ಭೇದವಿಲ್ಲದಿದ್ದು ಸ್ವರೂಪೈಕ್ಯವೇ ಅನುಸಂಧಾನದಲ್ಲಿ ಪ್ರಯೋಜಕವು, ಹೀಗೂ ಹೇಳ ಕೂಡದು. ಕೈಕಾಲು ಮೊದಲಾದ ಉಪಾಧಿಗಳಿಂದ ಮಾಡಲ್ಪಟ್ಟ ಭೇದವಿದ್ದರೂ ಅಂಶಿಯು ಅನುಸಂಧಾನವನ್ನು ಮಾಡಿಕೊಳ್ಳುವನಷ್ಟೆ! ಔಪಾಧಿಕ ಭೇದಾಭಾವದಿಂದೊಡಗೂಡಿದ ಸ್ವರೂ ಪೈಕ್ಯವೆಂಬುವ ಅನುಸಂಧಾನ ಪ್ರಯೋಜಕವಿರುವುದಿಲ್ಲ, ಆದರೂ ಅನುಸಂಧಾನವಿದೆ. ಆದುದ ರಿಂದ ನೀವು ಹೇಳಿದ ಪ್ರಯೋಜ್ಯ ಪ್ರಯೋಜಕಭಾವವು ಸರಿಯಲ್ಲ ||೧೩೦ ||

ಪುನಃ ಪರರು ಶಂಕಿಸುವರು. ಔಪಾಧಿಕಭೇದವಿಲ್ಲದಿದ್ದು ಸ್ವರೂಪೈಕ್ಯವೇ ಅನುಸಂಧಾನ ದಲ್ಲಿ ಪ್ರಯೋಜಕವೆಂದು ನಾವು ಹೇಳಿದ್ದರೆ ಈ ದೋಷವು ಬರಬಹುದು. ಆದರೆ ವಿಶ್ಲಿಷ್ಟೋ ಪಾಧಿಕೃತಭೇದವಿಲ್ಲದಿದ್ದು ಸ್ವರೂಪೈಕ್ಯವೇ ಅನುಸಂಧಾನಕ್ಕೆ ಪ್ರಯೋಜಕವೆಂದು ಹೇಳುತ್ತೇವೆ. ಉಪಾಧಿಗಳು ಪರಸ್ಪರ ಸಂಬಂಧಿಸಿ ಇರದಿದ್ದರೆ ವಿಶ್ಲಿಷ್ಟೋಪಾಧಿಗಳು. ಕೈಕಾಲುಮೊದಲಾದ ಉಪಾಧಿಗಳಾದರೂ ಒಂದೇ ಶರೀರದಲ್ಲಿ ಸಂಬದ್ಧಗಳಾಗಿವೆ. ಕಾರಣ ಅವುಗಳು ಸಂಶ್ಲಿಷ್ಟೋ-

ಪಾಧಿಗಳು. ಬ್ರಹ್ಮನ ಅಂಶೋಪಾಧಿಭೂತಗಳಾದ ಚೈತ್ರಾದಿಗಳ ಶರೀರಗಳಾದರೂ ಪರಸ್ಪರ ಸಂಬದ್ಧಗಳಲ್ಲ. ಹೀಗೆ ಹೇಳಿದರೆ ಹಿಂದಿನ ದೋಷವು ಬರುವುದಿಲ್ಲ. ಒಂದು ಶರೀರದಲ್ಲಿ ಕೈಕಾಲು ಮೊದಲಾದ ಉಪಾಧಿಗಳಿಗೆ ಭೇದವಿದ್ದರೂ ಒಂದು ಶರೀರದಲ್ಲಿ ವಿಶ್ಲಿಷ್ಟೋಪಾಧಿಕೃತ ಭೇದವಿಲ್ಲ. ಇಂತಹ ಪ್ರಯೋಜಕವು ಪ್ರಕೃತದಲ್ಲಿ ಇಲ್ಲ. ಈಶ್ವರನ ಶರೀರಕ್ಕಿಂತ ಜೀವರ ಶರೀರಗಳು ಬೇರೆ ಬೇರೆಯಾಗಿಯೇ ಇವೆ. ಆದ ಕಾರಣ ಈಶ್ವರನು ಜೀವರ ದುಃಖಾದಿಗಳನ್ನು ಅನುಸಂಧಾನ ಮಾಡುವುದಿಲ್ಲ; ಎಂಬುವ ಪರರ ಆಶಂಕೆಯನ್ನು ಪರಿಹರಿಸುತ್ತಾರೆ —

**ಮೂ ॥ ಉದ್ಯತಾಯುಧದೋರ್ದಂಡಾಃ ಪತಿತಸ್ವಶಿರೋಽಕ್ಷಿಭಿಃ । ಪಶ್ಯಂತಃ ಪಾತಯಂತಿ ಸ್ಮ ಕಬಂಧಾ ಅಪ್ಯರೀನ್ಯುಧಿ ॥ ಇತಿ ಭಾರತ ವಚನಾನ್ನ ವಿಶ್ಲೇಷಾದ್ವಿಶೇಷಃ ॥ ೧೩೧ ॥**

ಅ ॥ ಕಬಂಧಾ ಅಪಿ=ಶಿರಸ್ಸಿಲ್ಲದ ಮುಂಡಗಳೂ ಕೂಡ, ಉದ್ಯತಾಯುಧದೋ-ರ್ದಂಡಾಃ=ಎತ್ತಿಹಿಡಿದ ಆಯುಧವುಳ್ಳ ಬಾಹುದಂಡವುಳ್ಳವುಗಳಾಗಿ, ಪತಿತಸ್ವಶಿರೋಽಕ್ಷಿಭಿಃ= ಕಳಚಿಹೋಗಿದ್ದ ತಮ್ಮ ಶಿರಸ್ಸಿನಲ್ಲಿರುವ ಕಣ್ಣುಗಳಿಂದ, ಅರೀನ್=ಶತ್ರುಗಳನ್ನು, ಪಶ್ಯಂತಃ= ನೋಡುವವುಗಳಾಗಿ. ಯುಧಿ=ಯುದ್ಧದಲ್ಲಿ, ಅರೀನ್=ಶತ್ರುಗಳನ್ನು. (ಆಯುಧೈಃ=ಆಯುಧ ಗಳಿಂದ,) ಪಾತಯಂತಿ ಸ್ಮ=ಬೀಳಿಸುತ್ತಿದ್ದವು, ಇತಿ=ಹೀಗೆ, ಭಾರತವಚನಾತ್=ಭಾರತದ ವಾಕ್ಯದಿಂದ, (ವಿಶ್ಲಿಷ್ಟೋಪಾಧಿಕೃತಭೇದವಿದ್ದರೂ ಅನುಸಂಧಾನವಿರುವುದರಿಂದ, ಶರೀರಗಳಿಗೆ) ವಿಶ್ಲೇಷಾತ್=ಸಂಬಂಧವಿಲ್ಲದಿರುವುದರಿಂದ, ವಿಶೇಷಃ=ಅನುಸಂಧಾನವಿಲ್ಲವೆಂಬುವ ವಿಶೇಷವು, ನ=ಇಲ್ಲವು.

ತಾ ॥ ಈ ಪ್ರಕಾರ ಜೀವೇಶ್ವರರ ಭೇದವು ಔಪಾಧಿಕವಾದರೂ ಸ್ವಭಾವತಃ ಐಕ್ಯವಿದ್ದರೆ ಈಶ್ವರನಿಗೆ ಜೀವರಲ್ಲಿರತಕ್ಕ ದುಃಖಾದ್ಯನುಸಂಧಾನವು ತಪ್ಪಲಾರದು. ಅದನ್ನಂಗೀಕರಿಸುವುದು ಸರ್ವಪ್ರಮಾಣವಿರುದ್ಧವು. ಆದಕಾರಣ ಜೀವೇಶ್ವರರಿಗೆ ಭೇದವು ಸ್ವಾಭಾವಿಕವೇ, ಎಷ್ಟು ಮಾತ್ರಕ್ಕೂ ಔಪಾಧಿಕವಲ್ಲವೆಂದು ಸಿದ್ಧವಾಯಿತು ॥ ೧೩೧ ॥

**ಮೂ ॥ ಅತೋಽನೌಪಾಧಿಕತ್ವಾದೇವ ಭೇದಸ್ಯ ನ ಮುಕ್ತಸ್ಯೇಶ್ವರೈಕ್ಯಂ॥೧೩೨॥**

ಅ ॥ ಈಶ್ವರಸ್ಯ=ಶ್ರೀ ಪರಬ್ರಹ್ಮನಿಗೆ, ಅತಃ=ಜೀವರಲ್ಲಿರುವ ಸುಖದುಃಖಾದಿಗಳನ್ನು ತನ್ನದೆಂದನುಭವಿಸದಿರುವುದರಿಂದ, ಭೇದಸ್ಯ=ಭೇದಕ್ಕೆ, ಅನೌಪಾಧಿಕತ್ವಾದೇವ=ಉಪಾಧಿ ಯಿಂದ ಮಾಡಲ್ಪಡದಿರುವುದರಿಂದಲೇ, ಅಂದರೆ ಸ್ವಾಭಾವಿಕತ್ವವಿದ್ದುದರಿಂದಲೇ, ಮುಕ್ತಸ್ಯ= ಮುಕ್ತಿಯನ್ನು ಹೊಂದಿದವನಿಗೂ ಕೂಡ, ಈಶ್ವರೈಕ್ಯಂ=ಬ್ರಹ್ಮೈಕ್ಯವು, ನ=ಇಲ್ಲ.

ತಾ ॥ (1) ಸ್ವಾಭಾವಿಕವಾದುದು ಯಾವಾಗಲೂ ಬೇರೆ ರೀತಿಯಾಗಲಾರದು. ಸ್ವಭಾವಕ್ಕೂ ನಾಶವಾದರೆ ಸ್ವರೂಪಕ್ಕೂ ನಾಶವು ಬರಬೇಕಾಗುವುದು. (2) ಇನ್ನು ಕೆಲವರು ಮುಕ್ತನಿಗೆ ಈಶ್ವರನಿಂದ ಭೇದಾಭೇದವೆನ್ನುತ್ತಾರೆ. ಇದೂ ಅಯುಕ್ತವು. ಅಭೇದವಿದ್ದರೆ ಹಿಂದೆ ಹೇಳಿದ ಅನುಸಂಧಾನವು ತಪ್ಪಲಾರದು ॥ ೧೩೨ ॥

ಹೀಗೆ ಈಶ್ವರಪ್ರತ್ಯಕ್ಷ ಮತ್ತು ಮುಕ್ತತ್ವಮೊದಲಾದ ಅನುಮಾನ ಇವುಗಳಿಂದ ಮುಕ್ತೇಶ್ವರರಿಗೆ ಭೇದವನ್ನು ಸಾಧಿಸಿ ಆಗಮದಿಂದಲೂ ಸಾಧಿಸುತ್ತಾರೆ.

ಮೂ || ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ | ಸರ್ಗೇऽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ || ೧೩೩ ||

[ಗೀ. ಅ. ೧೪. ಶ್ಲೋ. ೨.]

ಅ || ಮುಕ್ತರು, ಇದಂ ಜ್ಞಾನಂ=ಈ ಜ್ಞಾನವನ್ನು, ಉಪಾಶ್ರಿತ್ಯ=ಆಶ್ರಯಿಸಿ, ಮಮ=ನನ್ನ, ಸಾಧರ್ಮ್ಯಂ=ಸದೃಶಧರ್ಮವುಳ್ಳತನವನ್ನು, ಆಗತಾಃ=ಹೊಂದಿರುತ್ತಾರೆ, ಸರ್ಗೇऽಪಿ=ಸೃಷ್ಟಿಕಾಲದಲ್ಲಿಯೂ, ನೋಪಜಾಯಂತೇ=ಹುಟ್ಟುವುದಿಲ್ಲ, ಪ್ರಲಯೇ=ಪ್ರಲಯ ಕಾಲದಲ್ಲಿಯೂ, ನ ವ್ಯಥಂತಿ ಚ=ನಾಶವನ್ನು ಹೊಂದುವುದಿಲ್ಲ.

ತಾ || (1) 'ಸಾಧರ್ಮ್ಯಮಾಗತಾಃ' ಎನ್ನುವುದರಿಂದ ಭೇದವಿದೆ ಎಂದು ಹೇಳಿದಂತೆಯೇ ಆಯಿತು. ಐಕ್ಯವೇ ಇರುತ್ತಿದ್ದರೆ ಸದೃಶಧರ್ಮವು ಕೂಡಲಾರದು. (2) ಸೃಷ್ಟಿಪ್ರಲಯಗಳು ಇಲ್ಲವೆಂದು ಹೇಳಿದ್ದರಿಂದ ಸಾಧರ್ಮ್ಯವನ್ನು ಹೊಂದಿದವರು ಮುಕ್ತರೆಂದೇ ಅಂಗೀ ಕರಿಸಬೇಕು || ೧೩೩ ||

ಮೂ || ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ | ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ || [ಅಥರ್ವ. ಖಂ. ೫. ಮಂ. ೩.ಪು.೨೭೭] ಇತ್ಯಾದಿ ಮುಕ್ತಭೇದವಚನೇಭ್ಯಶ್ಚ || ೧೩೪ ||

ಅ || ಪಶ್ಯಃ=ನೋಡತಕ್ಕ ಜೀವನು, ಯದಾ=ಯಾವಾಗ, ರುಗ್ಮವರ್ಣಂ=ಭಂಗಾರ ವರ್ಣಶರೀರವುಳ್ಳ, ಬ್ರಹ್ಮಯೋನಿಂ=ಚತುರ್ಮುಖನಿಗೂ ಕಾರಣನಾದ, ಕರ್ತಾರಂ=ಜಗತ್ಕ ರ್ತನಾದ, ಪುರುಷಂ=ಗುಣಪೂರ್ಣನಾದ, ಈಶಂ=ಸ್ವಾಮಿಯಾದ ಶ್ರೀ ಹರಿಯನ್ನು, ಪಶ್ಯತೇ= ನೋಡುತ್ತಾನೋ, ತದಾ=ಆಗ, ವಿದ್ವಾನ್=ಅಪರೋಕ್ಷಜ್ಞಾನಿಯು, ಪುಣ್ಯಪಾಪೇ=ಅವಶ್ಯಕ ವಿಲ್ಲದ ಪುಣ್ಯವೂ ಸರ್ವಪಾಪವೂ ಇವುಗಳನ್ನು, ವಿಧೂಯ=ಬಿಟ್ಟು, ನಿರಂಜನಃ=ನಿರ್ಲೇಪ ನಾಗಿ, ಪರಮಂ ಸಾಮ್ಯಂ=ನಿರ್ದುಃಖಪೂರ್ಣಾನಂದತ್ವಾದಿ ರೂಪವಾದ ಬ್ರಹ್ಮಸಾಮ್ಯವನ್ನು, ಉಪೈತಿ=ಹೊಂದುತ್ತಾನೆ.

ತಾ || (ಇಲ್ಲಿಯೂ 'ಸಾಮ್ಯಮುಪೈತಿ' ಎನ್ನುವುದರಿಂದ ಭೇದವು ಹೇಳಲ್ಪಡುತ್ತದೆ. ಪುಣ್ಯಪಾಪೇ ವಿಧೂಯ ನಿರಂಜನಃ ಎನ್ನುವುದರಿಂದ ಮುಕ್ತನ ವಿಷಯಕವೆಂದು ತಿಳಿಯುತ್ತದೆ.) ಇತ್ಯಾದಿ ಮುಕ್ತಭೇದವಚನೇಭ್ಯಶ್ಚ=ಇದುಮೊದಲಾದ ಮುಕ್ತರಿಗೆ ಭೇದವನ್ನು ಪ್ರತಿಪಾದಿಸುವ ವಾಕ್ಯಗಳಿಂದಲೂ, ಮುಕ್ತೇಶ್ವರರಿಗೆ ಭೇದವು ಸಿದ್ಧವಾಗುವುದು || ೧೩೪ ||

'ಪರೇऽವ್ಯಯೇ ಸರ್ವ ಏಕೀಭವಂತಿ' ಸರ್ವೋತ್ತಮನಾದ ಶ್ರೀ ಹರಿಯಲ್ಲಿ ಸರ್ವರೂ ಐಕ್ಯ ವನ್ನು ಹೊಂದುತ್ತಾರೆ. 'ಪರಂ ಬ್ರಹ್ಮ ವೇದ ಬ್ರಹ್ಮೈವ ಭವತಿ' ಪರಬ್ರಹ್ಮನನ್ನು ತಿಳಿದರೆ ಬ್ರಹ್ಮನೇ ಆಗುತ್ತಾನೆ. ಇದುಮೊದಲಾದ ಐಕ್ಯವನ್ನು ಪ್ರತಿಪಾದಿಸುವ ಶ್ರುತಿಗಳೂ ಇರುವುದರಿಂದ ಮುಕ್ತರಿಗೂ ಈಶ್ವರನಿಗೂ ಭೇದವಿದೆ ಎಂಬುವುದು ಹೇಗೆ ನಿಶ್ಚಯವಾಗುವುದು? ಎಂದು ಪರರು ಶಂಕಿಸಿದರೆ—

ಮೂ || ಏವಂ ಪ್ರತ್ಯಕ್ಷಾನುಮಾನಾಗಮವಿರುದ್ಧತ್ವಾದಭೇದವಿಷಯವತ್ಪ್ರತೀಯಮಾನಾನ್ಯಪಿ ವಾಕ್ಯಾನಿ ಸಾದೃಶ್ಯಾದ್ಯರ್ಥಾನ್ಯೇವ ಯೋಜನೀಯಾನಿ || ೧೩೫ ||

ಅ || ಏವಂ=ಹೀಗೆ, ಪ್ರತ್ಯಕ್ಷಾನುಮಾನಾಗಮವಿರುದ್ಧತ್ವಾತ್ =ಪ್ರತ್ಯಕ್ಷದಿಂದಲೂ, ಅನುಮಾನದಿಂದಲೂ, ಆಗಮದಿಂದಲೂ ವಿರೋಧವು ಬರುವುದರಿಂದ, ಅಭೇದವಿಷಯವತ್= ಐಕ್ಯವಿಷಯದಂತೆಯೇ (ಅಂದರೆ ಐಕ್ಯವನ್ನು ಪ್ರತಿಪಾದಿಸುವಂತೆಯೇ), ವಾಕ್ಯಾನಿ='ಸರ್ವ ಏಕೀಭವಂತಿ' ಮೊದಲಾದ ವಚನಗಳು, ಪ್ರತೀಯಮಾನಾನ್ಯಪಿ=ತೋರಿದವುಗಳಾದಾಗ್ಯೂ, ಸಾದೃಶ್ಯಾದ್ಯರ್ಥಾನ್ಯೇವ=ಸಾದೃಶ್ಯಮೊದಲಾದ (ಸ್ಥಾನೈಕ್ಯ, ಮತ್ಯೈಕ್ಯ) ಅರ್ಥವುಳ್ಳವುಗಳಾಗಿಯೇ ಯೋಜನೀಯಾನಿ= ಅನ್ವಯಿಸತಕ್ಕವುಗಳು.

ತಾ || (1) ಮುಕ್ತರಿಗೂ ಈಶ್ವರನಿಗೂ ಭೇದವನ್ನು ಪ್ರತಿಪಾದಿಸುವ ವಾಕ್ಯವಿದ್ದಂತೆಯೇ ಐಕ್ಯವನ್ನು ಪ್ರತಿಪಾದಿಸುವಂತೆ ತೋರುವ ವಾಕ್ಯಗಳೂ ಇವೆ. ಆದರೂ ಅವುಗಳಿಗೆ ಬೇರೆ ಅರ್ಥವನ್ನೇ ಹೇಳಬೇಕು; ಏಕೆಂದರೆ— ಭೇದವನ್ನು ಪ್ರತಿಪಾದಿಸುವ ವಾಕ್ಯಗಳು ಪ್ರತ್ಯಕ್ಷಾದಿಗಳನ್ನನುಸರಿಸುತ್ತಾ ಇದ್ದುದರಿಂದ ಪ್ರಬಲವಾಗಿವೆ. ಕಾರಣ ಅವುಗಳಿಂದ ವಿರೋಧವು ಬರುವುದು. ಪ್ರಬಲಗಳಾದವುಗಳಿಂದ ವಿರೋಧವು ಬಂದರೆ ದುರ್ಬಲವಾದುದಕ್ಕೆ ಬೇರೆ ಅರ್ಥವನ್ನು ಮಾಡುವುದೇ ಯೋಗ್ಯವಾಗಿದೆ || ೧೩೫ ||

ಮೂ || ವಿರುದ್ಧವತ್ಪ್ರತೀಯಂತೇ ಆಗಮಾ ಯತ್ರ ವೈ ಮಿಥಃ | ತತ್ರ ದೃಷ್ಟಾನುಸಾರೇಣ ತೇಷಾಮರ್ಥೋಽನ್ವವೇಕ್ಷ್ಯತೇ || ಇತಿ ಬ್ರಾಹ್ಮವಚನಾಚ್ಚ || ೧೩೬ ||

ಅ || ಆಗಮಾಃ=ವೇದಗಳು, ಯತ್ರ=ಎಲ್ಲಿ, ಮಿಥಃ=ಪರಸ್ಪರವಾಗಿ, ವಿರುದ್ಧವತ್= ವಿರೋಧವುಳ್ಳವುಗಳಂತೆಯೇ, ಪ್ರತೀಯಂತೇ ವೈ=ತೋರುವುವೋ, ತತ್ರ=ಅಲ್ಲಿ, ದೃಷ್ಟಾನುಸಾರೇಣ=ಪ್ರತ್ಯಕ್ಷವನ್ನನುಸರಿಸಿ, ತೇಷಾಂ=ಅವುಗಳಿಗೆ, ಅರ್ಥಃ=ಅಭಿಪ್ರಾಯವು, ಅನ್ವವೇಕ್ಷ್ಯತೇ=ತಿಳಿಯಲ್ಪಡುತ್ತದೆ, ಇತಿ=ಹೀಗೆ, ಬ್ರಾಹ್ಮವಚನಾಚ್ಚ=ಬ್ರಾಹ್ಮಪುರಾಣದ ಮಾತಿನಿಂದಲೂ (ಸಿದ್ಧವಾಗುವುದು).

ತಾ || (1) ಯಥಾರ್ಥವಾಗಿ ವಿರೋಧವಿದ್ದರೆ ಅವುಗಳನ್ನು ಬಿಟ್ಟುಬಿಡಬೇಕು. ಅವುಗಳನ್ನು ವ್ಯಾಖ್ಯಾನವೇ ಮಾಡಬಾರದು. ಆದುದರಿಂದಲೇ 'ವಿರುದ್ಧವತ್' ಎಂದು ಹೇಳಿರುವರು. (2)ಯಾವ ಆಗಮಗಳು ಪ್ರತ್ಯಕ್ಷಕ್ಕೆ ಅನುಕೂಲಗಳಾಗಿವೆಯೋ, ಅವುಗಳನ್ನನುಸರಿಸಿಯೇ ಬೇರೆ ಇದ್ದವುಗಳಿಗೆ ಅರ್ಥಮಾಡಬೇಕು. (2) ಹೀಗೆ ಸ್ಮೃತಿಯಿದ್ದುದರಿಂದಲೂ ನಿರವಕಾಶಗಳಾದ ಭೇದಾಗಮಗಳನ್ನನುಸರಿಸಿ ಐಕ್ಯವನ್ನು ಪ್ರತಿಪಾದಿಸುವ ಆಗಮಗಳಿಗೆ ಸಾದೃಶ್ಯ, ಸ್ಥಾನೈಕ್ಯ, ಮತ್ಯೈಕ್ಯ ಮೊದಲಾದ ಅರ್ಥಗಳನ್ನು ಇಟ್ಟುಕೊಳ್ಳಬೇಕು || ೧೩೬ ||

ಏವಮತಃ ಭೇದ ಭೇದಿ ವೈಲಕ್ಷಣ್ಯಾದಿ ಪ್ರತ್ಯಯಃ=ಭ್ರಮತ್ವ ಅಭ್ರಮತ್ವಗಳಿಂದ ಸಂಶಯವಿಷಯವಾದ ಭೇದಪ್ರತ್ಯಯವು, ಭೇದವುಳ್ಳ ಘಟಾದಿವಸ್ತುಜ್ಞಾನವು, ನಿಯಮ್ಯನಿಯಾಮಕತ್ವಾದಿ ರೂಪವಾದ ವೈಲಕ್ಷಣ್ಯಜ್ಞಾನವು, ಸಾಮ್ಯಮೊದಲಾದ ಜ್ಞಾನವೂ, ಭ್ರಮಃ=ಭ್ರಾಂತಿರೂಪವು, ಭೇದಾದಿಪ್ರತ್ಯಯತ್ವಾತ್=ಭೇದಮೊದಲಾದ ಜ್ಞಾನವಾದುದರಿಂದ, ಅಬ್ರಹ್ಮಜ್ಞಾನತ್ವಾಚ್ಚ= ಬ್ರಹ್ಮಜ್ಞಾನವಾಗದಿರುವುದರಿಂದಲೂ ಕೂಡ, ಚಂದ್ರಭೇದಾದಿಪ್ರತ್ಯಯವತ್=ಬೆರಳಿನಿಂದ

ಕಣ್ಣನ್ನು ಚುಚ್ಚಿದರೆ ಇಬ್ಬರು ಚಂದ್ರರು ತೋರುತ್ತಾರೆ, ಅದು ಭ್ರಮೆಯೇ. ಇದೇ ರೀತಿಯಾದ ಜ್ಞಾನದಂತೆಯೇ, ಎಂದು ಇದೇ ಮೊದಲಾದ ಯುಕ್ತಿಗಳಿದ್ದುದರಿಂದ ಪ್ರತ್ಯಕ್ಷಾದಿಗಳಿಂದ ಹುಟ್ಟಿದ ಭೇದಾದಿಜ್ಞಾನವು ಭ್ರಮೆಯಾಗಿದೆ. ಆದಕಾರಣ 'ಪ್ರತ್ಯಕ್ಷಾದಿಗಳಿಂದ ವಿರೋಧವು ಬರುವ ಪ್ರಯುಕ್ತ ಐಕ್ಯವಿಷಯಕಗಳಾದ ವಾಕ್ಯಗಳಿಗೆ ಬೇರೆ ಅರ್ಥಮಾಡಬೇಕೆಂದು ಹೇಳಿದ್ದು ಹೇಗೆ ಕೂಡಬಹುದು? ಎಂದು ಪರರು ಆಶಂಕಿಸಿದರೆ ಆಚಾರ್ಯರು ಸಮಾಧಾನ ಗೊಳಿಸುತ್ತಾರೆ —

ಮೂ ॥ ಭೇದಾದ್ಯನುಭವಸ್ಯ ಭ್ರಾಂತಿತ್ವಾಂಗೀಕಾರೇ ತ್ವಪಲಾಪಯುಕ್ತೇ ರ್ನಿತರಾಂ ಭ್ರಾಂತಿತ್ವಾದ್ಭೇದಾದ್ಯನುಭವಸ್ಯಾಭ್ರಾಂತಿತ್ವಮೇವ ಭವತಿ ॥ ೧೩೭ ॥

ಅ ॥ ಭೇದಾದ್ಯನುಭವಸ್ಯ=ಭೇದಮೊದಲಾದ ಅನುಭವಗಳಿಗೆ, ಭ್ರಾಂತಿತ್ವಾಂಗೀಕಾರೇ ತು = ಭ್ರಮತ್ವವನ್ನಂಗೀಕರಿಸಿದರೆ, ಅಪಲಾಪಯುಕ್ತೇಃ = ಅಪಲಾಪಮಾಡತಕ್ಕ ಯುಕ್ತಿಗೆ, ನಿತರಾಂ=ಅತ್ಯಂತವಾಗಿ, ಭ್ರಾಂತಿತ್ವಾತ್=ಭ್ರಮತ್ವವಿದ್ದುದರಿಂದ, ಭೇದಾದ್ಯನುಭವಸ್ಯ=ಭೇದ ಮೊದಲಾದ ಜ್ಞಾನಗಳಿಗೆ, ಅಭ್ರಾಂತಿತ್ವಮೇವ=ಭ್ರಮತ್ವವಿಲ್ಲವೆನ್ನುವುದೇ, ಭವತಿ=ಆಗುತ್ತದೆ.

ತಾ ॥ (1) 'ಭೇದಾದಿಪ್ರತ್ಯಯತ್ವಾತ್' ಎಂಬುವ ಹೇತುವಿನಿಂದ ಭೇದಮೊದಲಾದ ಎಲ್ಲಾ ಜ್ಞಾನಗಳೂ ಭ್ರಮೆಯೆಂದಂಗೀಕರಿಸಿದರೆ 'ಭೇದಮೊದಲಾದ ಪ್ರತ್ಯಯಗಳು ಭ್ರಮೆಯು' ಎಂಬುವ ಯುಕ್ತಿಯಿಂದ ಹುಟ್ಟಿದ ಜ್ಞಾನವೂ ಮುಖ್ಯತಃ ಭ್ರಮೆಯಾಗಬೇಕಾಯಿತು. ಅದೂ ಕೂಡ ಭೇದಾದಿ ಪ್ರತ್ಯಯವಾಗಿದೆಯಷ್ಟೆ! (2) ಪರರು ಶಂಕಿಸುವರು — 'ಯುಕ್ತಿಜನ್ಯವಾದ ಅನುಭವವೂ ಭ್ರಮೆಯಾಗಲಿ, ನಮಗೆ ಏನು ಬಾಧಕವು? ನಿರ್ಧರ್ಮಕನಾದ ಬ್ರಹ್ಮನೊಬ್ಬನೇ ತತ್ವವು, ಎಂದಂಗೀಕರಿಸುವೆವು' ಎಂದರೆ, ಹಾಗಾದರೆ ವಿಪ್ರತಿಪನ್ನವಾದ ಭೇದಾದಿ ಜ್ಞಾನವೂ ಭ್ರಮೆಯಾಗದೆ ಹೋಗಬೇಕಾಯಿತು. ಯಾವ ರೀತಿಯಿಂದಿಟ್ಟುಕೊಂಡರೂ ದೋಷವು ತಪ್ಪ ಲಾರದು. ಯುಕ್ತಿಜನ್ಯವಾದ ಅನುಭವವು ಭ್ರಮೆಯಲ್ಲವೆಂದರೆ ನಿಮ್ಮ ಅನುಮಾನಕ್ಕೆ ವ್ಯಭಿ ಚಾರವು ಬರುವುದು. ಅದು ಭ್ರಮೆಯಾದರೆ ಅನುಮಾನವೇ ಬಾಧಿತವಾಯಿತು. ಕಾರಣ ವಿಪ್ರತಿ ಪನ್ನಗಳಾದ ಭೇದಮೊದಲಾದ ಅನುಭವಗಳನ್ನು ಭ್ರಾಂತಿಯೆಂದು ಸಾಧಿಸಲಿಕ್ಕೇನೇ ನಿಮ್ಮ ಹೇತು ವಿಗೆ ಸಾಮರ್ಥ್ಯವಿಲ್ಲ. (3) ಭ್ರಾಂತಿತ್ವದಲ್ಲಿ ಹೆಚ್ಚುಕಡಿಮೆಯಿಲ್ಲದಿರುವುದರಿಂದ 'ನಿತರಾಂ' ಅತ್ಯಂತವಾಗಿ ಎಂದು ಹೇಗೆ ಹೇಳಿದರು ಎಂದರೆ, ತಮಗೂ ಪರರಿಗೂ ಇಬ್ಬರಿಗೂ ಸಮ್ಮತ ವಾಗಿರುವುದರಿಂದ ಭ್ರಮೆಯೆಂದು ನಿಶ್ಚಿತವೇ ಆಗಿದೆ ಎಂದು ಸೂಚಿಸುವುದಕ್ಕೋಸ್ಕರ ॥ ೧೩೭ ॥

ಹಾಗಾದರೆ ಯುಕ್ತಿಜನ್ಯವಾದ ಜ್ಞಾನವು ಭ್ರಮೆಯಾದರೂ ವಿಪ್ರತಿಪನ್ನವಾದ ಭೇದಾದ್ಯನು ಭವವು ಏಕೆ ಭ್ರಮೆಯಲ್ಲ ಎಂದರೆ—

ಮೂ ॥ ಪರಸ್ಪರವಿರುದ್ಧಯೋರನ್ಯತರನಿಷೇಧಸ್ಯಾನ್ಯತರವಿಧಿನಾಂತರೀ ಯಕತ್ವಾತ್ ॥ ೧೩೮ ॥

ಅ ॥ ಪರಸ್ಪರವಿರುದ್ಧಯೋಃ=ಅನ್ಯೋನ್ಯವಾಗಿ ವಿರೋಧವುಳ್ಳ ಎರಡರ ಮಧ್ಯದಲ್ಲಿ, ಅನ್ಯತರನಿಷೇಧಸ್ಯ=ಒಂದರ ನಿಷೇಧಕ್ಕೆ, ಅನ್ಯತರವಿಧಿನಾಂತರೀಯಕತ್ವಾತ್=ಮತ್ತೊಂದು ವಿಧಿಯಿಂದ ವ್ಯಾಪ್ತವಾಗಿರುವುದರಿಂದ,

ತಾ ॥ (1) ವಿಪ್ರತಿಪನ್ನಗಳಾದ ಭೇದಾದಿ ಜ್ಞಾನಗಳ ಯಾಥಾರ್ಥ್ಯವೂ, ಅವನ್ನನಲಾಪ ಮಾಡತಕ್ಕ ಯುಕ್ತ್ಯನುಭವದ ಯಾಥಾರ್ಥ್ಯವೂ ಪರಸ್ಪರ ವಿರುದ್ಧಗಳಾಗಿವೆ. ಅವುಗಳಲ್ಲಿ ಯುಕ್ತ್ಯನುಭವವು ಯಥಾರ್ಥವಲ್ಲವೆಂದು ಹೇಳಿದರೆ ಭೇದಮೊದಲಾದವುಗಳ ಅನುಭವವು ಯಥಾರ್ಥವೆಂದೇ ಸಿದ್ಧವಾಗುವುದು. ಪರಸ್ಪರ ವಿರುದ್ಧಗಳಲ್ಲಿ ಒಂದನ್ನ ನಿಷೇಧಿಸಿದರೆ ಮತ್ತೊಂದು ಸಿದ್ಧವಾಗುವುದಷ್ಟೆ! (2) ತಥಾ ಚ ಭೇದಾದ್ಯನುಭವಃ=ಭೇದವೇ ಮೊದಲಾದ ಜ್ಞಾನಗಳು, ಯಥಾರ್ಥಃ=ಯಥಾರ್ಥವಾದುವು, ತದ್ವಿರುದ್ಧಪ್ರತ್ಯಯಸ್ಯಾಯಥಾರ್ಥತ್ವಾತ್= ಅದಕ್ಕೆ ವಿರುದ್ಧವಾದ ಜ್ಞಾನವು ಯಥಾರ್ಥವಾಗದಿರುವುದರಿಂದ, ಎಂಬುವ ಅನುಮಾನವು ಸಿದ್ಧವಾಗುವುದು. ಹೇತುಸಾಧ್ಯಗಳಿಗೆ ವೈಯಧಿಕರಣ್ಯಬಂದರೂ ದೋಷವಿಲ್ಲವೆಂದು ಪ್ರಮಾಣಲಕ್ಷಣಾದಿಗಳಲ್ಲಿ ನಿರೂಪಿಸಿಯದೆ. (3) ಹಾಗಾದರೆ ಭ್ರಮೆಯೆಂದು ಸಾಧಿಸುವ ಭೇದಾದ್ಯನುಭವತ್ತ್ವ ಯುಕ್ತಿಯೂ ಮಣ್ಣಿನಿಂದ ಕದಡಿದ ನೀರಿಗೆ ಕತಕಬೀಜವನ್ನು ಅಂದರೆ ಚಿಲ್ಲುಬೀಜದ ಹುಡಿಯನ್ನು ಹಾಕಿದರೆ ನೀರಿನಲ್ಲಿದ್ದ ಮಣ್ಣನ್ನು ಕೆಳಗೆಮಾಡಿ ತಾನೂ ಕೆಳಗೆ ಹೋಗುತ್ತದೆ. ಅದರಂತೆಯೇ ಭೇದಾದ್ಯನುಭವವನ್ನು ಮಿಥ್ಯವನ್ನಾಗಿಮಾಡಿ ತಾನೂ ಮಿಥ್ಯವಾಗುವುವೆಂದರೆ ವೈಷಮ್ಯವಿದೆ. ಹೇಗೆಂದರೆ— ಕತಕಬೀಜದ ರಜಸ್ಸುಗಳು ಸತ್ಯಾಗಿವೆ. ಹಾಗೆಯೆ ಯುಕ್ತಿಯು ಕೆಲವು ಕಾಲದಲ್ಲಿಯೂ ಸತ್ತಲ್ಲ. (ಯಥಾರ್ಥವಲ್ಲವೇ ಅಲ್ಲ.) ॥ ೧೩೮ ॥

ಪುನಃ ಅದ್ವೈತಿಗಳು ಶಂಕಿಸುವರು. ಮುಕ್ತರಿಗೂ ಅಮುಕ್ತರಿಗೂ ಭೇದವಿಲ್ಲವಾದರೆ ಮುಕ್ತನಿಗೆ ಸಂಸಾರವು, ಸಂಸಾರಿಗೆ ಮುಕ್ತತ್ವವಾಗಲೀ ಆಗಬೇಕಾಗುವುದು. ಇದುವೊದಲಾದುದು ಯಾವುದದೆಯೋ, ಅದು ಯುಕ್ತವು. ಏಕೆಂದರೆ— ಪರಬ್ರಹ್ಮನೇ ಅವಿದ್ಯೆಯು ನಶದಿಂದ ಜೀವಭಾವವನ್ನು ಹೊಂದಿ ಎಲ್ಲಾ ಶರೀರಗಳಲ್ಲಿಯೂ ಸುಖಾದಿಗಳನ್ನನುಭವಿಸುತ್ತಾನೆ ಪ್ರತಿ ಶರೀರಗಳಲ್ಲಿಯೂ ಜೀವರಿಗೆ ಭೇದವಿಲ್ಲವು. ಆ ಬ್ರಹ್ಮನೇ ಜ್ಞಾನವು ಹುಟ್ಟಿದ ಕೂಡಲೆ ಮುಕ್ತನಾಗುವನು. ಆಗ ಯಾವುದೂ ಉಳಿಯುವುದಿಲ್ಲ. ಶುಕವಾಮದೇವಾದಿಗಳಿಗೆ ಮುಕ್ತಿಯಾಗಿದೆ ಎಂಬುವುದು ಅರ್ಥವಾದವು. ಆದಕಾರಣ ಭಾಸ್ಕರಮತದವರು— 'ಯಥಾರ್ಥವಾಗಿಯೂ ಬಹುಜೀವರು ಇರುತ್ತಾರೆ. ಈಶ್ವರನೊಬ್ಬನೆ' ಎಂದೂ, ಮಾಯಾವಾದಿಗಳು 'ಕಲ್ಪಿತರಾದವರು ಬಹು ಜೀವರು ಈಶ್ವರನೊಬ್ಬನೇ ಎಂದೂ ಯಾರಿಗೆ ಅಜ್ಞಾನವು ನಿವೃತ್ತಿಯಾಗಿದೆಯೋ ಆತನು ಮುಕ್ತನಾಗುವನು, ಇತರರು ಸಂಸಾರದಲ್ಲಿರುವರು ಎಂದು' ಹೇಳುವರೋ ಇವರಿಗೇನೇ ಈ ಅತಿಪ್ರಸಂಗವು (ಅಂದರೆ ಮುಕ್ತನಿಗೆ ಸಂಸಾರವು, ಸಂಸಾರಿಗೆ ಮುಕ್ತತ್ವವಾಗಲೀ ಎಂಬುವುದು) ಕೂಡಬಹುದು. ಏಕಜೀವವಾದಿಗಳಿಗೆ ಅತಿಪ್ರಸಂಗವು ಕೂಡಲಾರದು. ಏಕೆಂದರೆ— ಅವರ ರೀತಿಯಾಗಿ ಮುಕ್ತ್ಯವಸ್ಥೆಯಲ್ಲಿ ಸಂಸಾರಿಗಳು ಇಲ್ಲ. ಸಂಸಾರಾವಸ್ಥೆಯಲ್ಲಿ ಮುಕ್ತನೇ ಇಲ್ಲ. ಅಂತೂ ಏಕಜೀವವಾದಿಗಳ ಮತಪ್ರಕಾರ ಬಾಧಕವೇ ಇಲ್ಲದಿರುವುದರಿಂದ 'ಮುಕ್ತತ್ವಾತ್' ಎಂಬುವ ಹೇತುವು ಅಪ್ರಯೋಜಕವು. ಎಂದರೆ —

**ಮೂ ॥ ಏಕಜೀವವಾದಪಕ್ಷೇ ತನ್ನಿಷ್ಠಾನಾಂ ಮೃತ್ಯನಂತರಮಪಿ ವಿಶ್ವಸ್ಯಾನಿವೃತ್ತತ್ವಾದ್ಭೇದನಿಷ್ಠ ಏವೈಕಜೀವ ಇತ್ಯಾಪತತಿ ॥ ೧೩೯ ॥**

ಅ ॥ ಏಕಜೀವವಾದಪಕ್ಷೇ=ಒಬ್ಬನೇ ಜೀವನೆಂದು ವಾದಿಸುವವರ ಪಕ್ಷದಲ್ಲಿ, ತನ್ನಿಷ್ಠಾನಾಂ = ಅದರಲ್ಲಿಯೇ ಆಸಕ್ತರಾದವರಿಗೆ, ಮೃತ್ಯನಂತರಮಪಿ = ಮರಣಾನಂತರದಲ್ಲಿಯೂ, ವಿಶ್ವಸ್ಯ=ಜಗತ್ತಿಗೆ, ಅನಿವೃತ್ತತ್ವಾತ್=ನಿವೃತ್ತಿಯಿಲ್ಲದಿರುವುದರಿಂದ, ಏಕಜೀವಃ=ಒಬ್ಬಜೀವನು, ಭೇದನಿಷ್ಠ ಏವ=ಭೇದದಲ್ಲಿಯೇ ಆಸಕ್ತನು, ಇತಿ=ಹೀಗೆ, ಆಪತತಿ=ಹೇಳಬೇಕಾಗುತ್ತದೆ.

ತಾ || ಯಾರು ಎಲ್ಲಾ ಶರೀರಗಳಲ್ಲಿಯೂ ಒಬ್ಬನೇ ಜೀವನು, ಆತನ ಜ್ಞಾನದಿಂದಲೇ ಜಗತ್ತು ತೋರುವುದು, ಜ್ಞಾನದಿಂದ ಮುಕ್ತಿಯಾಗೋಣ ಯಾವುದೂ ಅವಶಿಷ್ಟವಾಗುವುದಿಲ್ಲ. ಹೀಗೆ ತಿಳಿಯುತ್ತಾರೋ, ಅವರ ಪಕ್ಷದಲ್ಲಿ ಆ ಒಬ್ಬಜೀವನು ಈಗ ಭೇದದಲ್ಲಿಯೇ ಆಸಕ್ತನೆಂದು ಅಂಗೀಕರಿಸಬೇಕಾಗುವುದು. ಇವನು ಅದ್ವೈತದಲ್ಲಿಯೇ ಆಸಕ್ತನಾಗಿದ್ದರೆ ಆಗ ಅದ್ವೈತದಲ್ಲಿ ಆಸಕ್ತರೆಂದು ಪರಪ್ರಸಿದ್ಧರಾದ ಶಂಕರಾಚಾರ್ಯರೋ ಗೌಡಪಾದರೋ ಯಾರಾದರೂ ಒಬ್ಬರು ಆಗುವನು, ಇವನು ಹಾಗೆ ಅಲ್ಲವು. ಹಾಗೆ ಇದ್ದರೆ ಮರಣಾನಂತರದಲ್ಲಿ ಜಗತ್ತೇ ಇಲ್ಲವೆಂದಾಗುವುದು. ಜಗತ್ತು ನಿವೃತ್ತಿಯಾಗುವುದಿಲ್ಲ. ಆ ಕಾರಣ ಈ ಒಬ್ಬಜೀವನು ಅದ್ವೈತದಲ್ಲಿ ಆಸಕ್ತನಲ್ಲ. ಭೇದದಲ್ಲಿಯೇ ಆಸಕ್ತನೆಂದು ಸ್ವೀಕರಿಸಲೇಬೇಕು || ೧೩೯ ||

ಮೂ || ತಸ್ಯ ಚ ತತ್ರೈವಾಗ್ರಹಾನ್ನ ಕದಾಚಿದ್ಭೇದನಿವೃತ್ತಿರಿತ್ಯನಿವೃತ್ತಿರೇವ ಭವತಿ || ೧೪೦ ||

ಅ || ತಸ್ಯ ಚ=ಆತನಿಗೆ, ತತ್ರೈವ=ಭೇದದಲ್ಲಿಯೇ, ಆಗ್ರಹಾತ್=ಆಗ್ರಹವಿದ್ದುದರಿಂದ, ಕದಾಚಿತ್=ಯಾವಾಗಲೂ, ಭೇದನಿವೃತ್ತಿಃ=ಭೇದದನಾಶವು, ನ=ಆಗುವುದಿಲ್ಲ. ಇತಿ=ಹೀಗೆ ಆದಕಾರಣ, ಅನಿವೃತ್ತಿರೇವ=ಸಂಸಾರಕ್ಕೆ ನಿವೃತ್ತಿಯಿಲ್ಲವೆಂದೇ, ಭವತಿ=ಆಗುತ್ತದೆ.

ತಾ || ಆ ಒಬ್ಬ ಜೀವನು ಈಗಲೂ ಭೇದದಲ್ಲಿಯೇ ಆಸಕ್ತನಾಗಿದ್ದರೆ ಕಾಲಾಂತರದಲ್ಲಿಯೂ ಅದೇ ಸಂಸ್ಕಾರವಿದ್ದುದರಿಂದ ಭೇದದಲ್ಲಿಯೇ ಆಗ್ರಹವು ಬೆಳೆಯುವುದು. ಯಾವಾಗಲೂ ಐಕ್ಯಸಾಕ್ಷಾತ್ಕಾರವಾಗಬಾರದು. ಅಂತೂ ನಿವರ್ತಕವೇ ಇಲ್ಲದಿರುವುದರಿಂದ ಯಾವಾಗಲೂ ಭೇದವೇ ನಿವೃತ್ತಿಯಾಗದೆ ಹೋಗಬೇಕಾಗುವುದು. ಅದರಿಂದ ದುಃಖನೊದಲಾದ ಸಂಸಾರವೂ ನಿವೃತ್ತಿಯಾಗದೆ ಹೋಗಬೇಕಾಗುವುದು. ಹಾಗಾದರೆ ಭೇದವಿದ್ದರೆ ದುಃಖಾದಿಗಳೂ ನಿಯತಗಳಾಗಿವೆ || ೧೪೦ ||

ಹೀಗೆ ಏಕಜೀವವಾದಿಗಳ ಮತದಲ್ಲಿ ಅನಿಷ್ಟವಿದೆ ಎಂದು ನಿರಾಕರಿಸಿ ಪ್ರಮಾಣವಿಲ್ಲವೆಂತಲೂ ನಿರಾಕರಿಸುತ್ತಾರೆ.

ಮೂ || ನ ಚೈಕಜೀವಾಜ್ಞಾನಪರಿಕಲ್ಪಿತಾಸ್ಸಮಸ್ತಾ ಇತ್ಯತ್ರ ಕಿಂಚಿನ್ಮಾನಂ || ೧೪೧ ||

ಅ || ಸಮಸ್ತಾಃ=ಎಲ್ಲರೂ, ಏಕಜೀವಾಜ್ಞಾನಪರಿಕಲ್ಪಿತಾಃ=ಒಬ್ಬ ಜೀವನ ಅಜ್ಞಾನದಿಂದ ಕಲ್ಪಿಸಲ್ಪಟ್ಟವರು, ಇತ್ಯತ್ರ=ಹೀಗೆಂಬ ವಿಷಯದಲ್ಲಿ, ಕಿಂಚಿತ್=ಯಾವುದೊಂದೂ, ಮಾನಂ=ಪ್ರಮಾಣವು, ನ ಚ=ಇಲ್ಲವೇ ಇಲ್ಲ.

ತಾ || ಆದಕಾರಣ ಏಕಜೀವವಾದಿಗಳ ಮತವು ಅತಿಪ್ರಸಂಗವಿದ್ದುದರಿಂದಲೂ ಪ್ರಮಾಣವಿಲ್ಲದಿರುವುದರಿಂದಲೂ ದುಷ್ಟವಾದುದರಿಂದ ಬಹುಜೀವರಿದ್ದಾರೆಂದೇ ಅಂಗೀಕರಿಸಬೇಕಾಯಿತು. ಅಲ್ಲಿ ಬಹಳ ಬಾಧಕಗಳನ್ನು ಹೇಳಿರುತ್ತೇವೆ. ಕಾರಣ ಮುಕ್ತತ್ವಹೇತುವು ಅಪ್ರಯೋಜಕವಲ್ಲ ಅಥವಾ ಮುಕ್ತನು ಭಿನ್ನನಾಗಬಿದ್ದರೆ ಜೀವನೊಬ್ಬನೇ ಆದರೆ ಮುಕ್ತಿಯಲ್ಲಿ ಯಾರೂ ಉಳಿಯದೆ ಹೋಗಲಿ, ಈಗ ಮುಕ್ತನೇ ಇಲ್ಲನೆಂದಾಗುವುದು. ಇದೇ ಪ್ರಕಾರ ಮೇಲೆಯೂ ಮುಕ್ತನೇ ಇಲ್ಲದೆ ಹೋಗುವನು || ೧೪೧ ||

**ಮೂ ॥ ಅತೋ ಮುಕ್ತೇಭ್ಯೋಽಪ್ಯನ್ಯ ಏವ ಸಮಸ್ತಗುಣಪರಿಪೂರ್ಣೋ ಭಗವಾನ್ವಿಷ್ಣುರಿತಿ ಸಿದ್ಧಂ ॥ ೧೪೨ ॥**

ಅ ॥ ಅತಃ=ಆದಕಾರಣ, ಭಗವಾನ್=ಪೂಜ್ಯನಾದ, ವಿಷ್ಣುಃ=ಶ್ರೀ ಪರಮಾತ್ಮನು, ಮುಕ್ತೇಭ್ಯೋಽಪಿ=ಮುಕ್ತರಿಂದಲೂ, ಅನ್ಯ ಏವ=ಭಿನ್ನನೇ, ಸಮಸ್ತಗುಣಪರಿಪೂರ್ಣಃ=ಸರ್ವಗುಣಪರಿಪೂರ್ಣನು, ಇತಿ=ಹೀಗೆಂದು, ಸಿದ್ಧಂ=ನಿಶ್ಚಯುವಾಯಿತು ॥ ೧೪೨ ॥

ಮುಕ್ತನಿಗೆ ಈಶ್ವರನಿಂದ ಭೇದವಿರಲಿ, ಆದರೂ ಈಶ್ವರನು ನಿಯಾಮಕನೆಂಬುವುದು ಕೂಡಲಾರದು. ನಿಯಮ್ಯನಿಯಾಮಕಭಾವವು ಭೇದಮಾತ್ರದಿಂದ ಹೇಳಲು ಬಾರದು, ನೀಚೋಚ್ಚಭಾವದಿಂದಲೇ ಕೂಡುತ್ತದೆ. ಅಂತಹ ನೀಚೋಚ್ಚಭಾವವು ಪ್ರಕೃತ ಪ್ರಮಾಣವಿಲ್ಲದಿರುವುದರಿಂದ ಕೂಡಲಾರದು ಎಂದು ಶಂಕಿಸಿದರೆ —

**ಮೂ ॥ ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂ ನೈವ ಶಕ್ಯತೇ । ತದ್ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇ ॥ ೧೪೩ ॥**

ಅ ॥ ಬ್ರಹ್ಮೇಶಾನಾದಿಭಿಃ=ಬ್ರಹ್ಮರುದ ಮೊದಲಾದ, ದೇವೈಃ=ದೇವತೆಗಳಿಂದ, ಯತ್=ಯಾವ ಸರ್ವೋತ್ತಮತ್ವವು,ಪ್ರಾಪ್ತುಂ=ಹೊಂದಲಿಕ್ಕೆ,ನೈವ ಶಕ್ಯತೇ=ಸಮರ್ಥವಾಗುವುದಿಲ್ಲವೋ, ತತ್ ಕೈವಲ್ಯಂ=ಆ ಸರ್ವೋತ್ತಮತ್ವವು, ಯತ್ಸ್ವಭಾವಃ=ಯಾವಾತನ ಸ್ವಭಾವವಾಗಿದೆಯೋ, ಹರೇ=ಶ್ರೀಹರಿಯೇ, ಸ ಭವಾನ್=ಅಂತಹನೀನೇ, ಕೇವಲಃ=ಸರ್ವೋತ್ತಮನು ॥ ೧೪೩ ॥

**ಮೂ ॥ ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ ॥ ೧೪೪ ॥**

ಅ ॥ ತನ್ವಾ=ಶರೀರದಿಂದ, ವೃಧಾನ=ಅಭಿವೃದ್ಧನಾದ ವಿಷ್ಣುವೇ, ಮಾತ್ರಯಾ=ಮಿತಿಯಿಂದ, ಪರಃ=ದಾಟದವನು, (ಅಪರಿಮಿತನಾಗಿರುತ್ತಿ) ತೇ=ನಿನ್ನ, ಮಹಿತ್ವಂ=ಮಹಿಮೆಯನ್ನು, (ಮುಕ್ತರೂ ಅಮುಕ್ತರೂ ಯಾರೂ ಕೂಡ) ನ ಅನ್ವಶ್ನುವಂತಿ=ಅನುಭವಿಸುವುದಿಲ್ಲ.

ತಾ ॥ (1) 'ನಿರಂಜನಃ ಪರಮಂ ಸಾಮ್ಯಮುಪೈತಿ, (2) ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ' ಇದುಮೊದಲಾದ ಸಾಮ್ಯಪ್ರತಿಪಾದಕಗಳಾದ ವಚನಗಳಿಗೆ ಪರಾನಂದ ದುಃಖಾಭಾವಾದಿಗಳಿಂದಲೇ ಸಾಮ್ಯವು, ಸರ್ವಾತ್ಮನಾ ಸಾಮ್ಯವಲ್ಲ. ಎಂದು ಅನುವ್ಯಾಖ್ಯಾನಾದಿಗಳಲ್ಲಿ ಹೇಳಲ್ಪಟ್ಟದೆ. (2) ಶ್ರೀ ಹರಿಯು ಮುಕ್ತರಿಗೂ ನಿಯಾಮಕನು ಇತ್ಯಾದಿವಿಷಯದಲ್ಲಿ ಶ್ರುತಿಗಳನ್ನು ಆಚಾರ್ಯರು ಅನುವ್ಯಾಖ್ಯಾನಾದಿಗಳಲ್ಲಿ ಹೇಳಿರುವರು ॥ ೧೪೪ ॥

ಪ್ರಕರಣಾಂತ್ಯದಲ್ಲಿಯೂ ಆಚಾರ್ಯರು ಶ್ರೀಹರಿಯನ್ನು ನಮಸ್ಕರಿಸುತ್ತಾರೆ—

**ಮೂ ॥ ಸತ್ಯಚಿಚ್ಚೇತ್ಯಪತಯೇ ಮುಕ್ತಾಮುಕ್ತೋತ್ತಮಾಯ ತೇ । ನಮೋ ನಾರಾಯಣಾಯಾರ್ಯವೃಂದವಂದಿತಪದ್ವಯ ॥ ೧೪೫ ॥**

ಅ ॥ ಆರ್ಯವೃಂದವಂದಿತಪದ್ವಯ; ಆರ್ಯ=ಪೂಜ್ಯರಾದ ಬ್ರಹ್ಮಾದಿಗಳ, ವೃಂದ=ಸಮೂಹಗಳಿಂದ, ವಂದಿತ=ನಮಸ್ಕರಿಸಲ್ಪಟ್ಟ, ಪತ್=ಪಾದಗಳ, ದ್ವಯ=ಎರಡುಳ್ಳ ಶ್ರೀ ಹರಿಯೇ, ಸತ್ಯಚಿಚ್ಚೇತ್ಯಪತಯೇ=ಯಥಾರ್ಥಗಳಾದ ಚೇತನಾಚೇತನಗಳಿಗೆ ಸ್ವಾಮಿಯಾದ,

ಮುಕ್ತಾಮುಕ್ತೋತ್ತಮಾಯ= ಮುಕ್ತಾಮುಕ್ತರಿಂದ ಅತ್ಯುತ್ತಮನಾದ, ನಾರಾಯಣಾಯ= ಗುಣ ಪರಿಪೂರ್ಣನಾದ, ತೇ=ನಿನಗೋಸ್ಕರ, ನಮಃ=ನಮಸ್ಕಾರವು. ॥ ೧೪೫ ॥

ಇನ್ನು ಮೇಲೆ ಶ್ರೀಮದಾಚಾರ್ಯರ ಶಿಷ್ಯರು ಮಾಡಿದ ಶ್ಲೋಕಗಳು — ಈ ವಿಷಯದಲ್ಲಿ ಹೀಗೆ ಕಥೆಯನ್ನು ಹೇಳುವರು — ಪುಂಡರೀಕಪುರಿಯೆಂದು ಹೆಸರುಳ್ಳ ಮಾಯಾವಾದಿಗೂ, ಶ್ರೀಮದಾಚಾರ್ಯರಿಗೂ ವಿತಂಡಾಕಥೆಯು ಪ್ರಸಕ್ತವಾಯಿತು. ಆಗ ಸಭ್ಯರು, ಸಭಾಪತಿಗಳು, ಪ್ರಾಶ್ನಿಕರು ಎಲ್ಲರೂ ಕೂಡಿರುವರು. ಆಗ ಪ್ರತಿವಾದಿಯು ಆಚಾರ್ಯರನ್ನು ನೋಡಿದೊಡನೆಯೇ ಮಾತಾಡದೆ ಸುಮ್ಮನಿದ್ದು ಬಿಟ್ಟನು. ಆ ಸಮಯದಲ್ಲಿ ಮಾಯಾವಾದಿಗಳನ್ನು ಲಕ್ಷಿಸದೆ ಇಡೀಶಾಸ್ತ್ರವನ್ನು (ಮಾಯಾವಾದಿ ಮತವನ್ನು) ತಿರಸ್ಕರಿಸುವ ಉಪನ್ಯಾಸವನ್ನು ಮಾಡಿದರು. ಅದನ್ನು ಕೇಳಿ ಪುಂಡರೀಕಪುರಿಯು ಅತಿ ಭಯಗ್ರಸ್ತನಾಗಿ ಓಡಿದನು. ಆಗ ಆಚಾರ್ಯರ ಶಿಷ್ಯರು ಪ್ರತಿವಾದಿಗಳಿಗೆ ಭಯಂಕರರಾದ ಶ್ರೀಮದಾಚಾರ್ಯರನ್ನೂ ಅವರಿಗೆ ಅಭೀಷ್ಟದೇವತೆಯಾದ ನರಸಿಂಹನನ್ನೂ ಮುಂದೆ ಉದಾಹರಿಸುವ ಶ್ಲೋಕಗಳಿಂದ ಸ್ತುತಿಸಿದರು. ಮೇಲೆ ಶಿಷ್ಯರ ಪ್ರಾರ್ಥನೆ ಮೇರೆಗೆ ಈ ಶ್ಲೋಕಗಳನ್ನು ಪ್ರಕರಣಾಂತ್ಯದಲ್ಲಿ ಸೇರಿಸಿದರು. ಬೇರೆ ಬೇರೆ ಶಿಷ್ಯರು ಈ ಶ್ಲೋಕಗಳನ್ನು ನಿರ್ಮಿಸಿರುವುದರಿಂದ ಅವುಗಳಿಗೆ ಪರಸ್ಪರವಾಗಿ ಸಂಗತಿಯಿಲ್ಲವು.

**ಮೂ ॥ ಆನಂದತೀರ್ಥಪುಂಸಿಂಹೋ ಮಾಯಾವಾದಿದಿತೇಃಸುತಾನ್ ॥**
**ವಿದಾರ್ಯ ಯುಕ್ತಿನಖರೈರಪ್ರತೀಪೋಽಭಿ(ವಿ)ಭಾಸತೇ ॥ ೧ ॥**

ಅ ॥ ಆನಂದತೀರ್ಥಪುಂಸಿಂಹಃ=ಶ್ರೀಮದಾಚಾರ್ಯರೆಂಬ ನರಸಿಂಹದೇವರು,ಮಾಯಾವಾದಿದಿತೇಃಸುತಾನ್=ಮಾಯಾವಾದಿಗಳೆಂಬ ದೈತ್ಯರನ್ನು, ಯುಕ್ತಿನಖರೈಃ=ಯುಕ್ತಿಗಳೆಂಬ ಉಗುರುಗಳಿಂದ, ವಿದಾರ್ಯ=ಶೀಳಿ, ಅಪ್ರತೀಪಃ=ಪ್ರತಿಭಟವಿಲ್ಲದವರಾಗಿ, ಅಭಿಭಾಸತೇ= ವಿಶೇಷವಾಗಿ ಶೋಭಿಸುತ್ತಾರೆ ॥ ೧ ॥

**ಮೂ ॥ ಪಲಾಯಧ್ವಂ ಪಲಾಯಧ್ವಂ ತ್ವರಯಾ ಮಾಯಿದಾನವಾಃ ।**
**ಸರ್ವಜ್ಞಹರಿರಾಯಾತಿ ತರ್ಕಾಗಮದರಾರಿಭೃತ್ ॥ ೨ ॥**

ಅ ॥ ಮಾಯಿ ದಾನವಾಃ=ಮಾಯಾವಾದಿಗಳೆಂಬ ದೈತ್ಯರುಗಳಿರಾ, ತ್ವರಯಾ= ಶೀಘ್ರವಾಗಿ, ಪಲಾಯಧ್ವಂ ಪಲಾಯಧ್ವಂ=ಓಡಿರಿ, ಓಡಿರಿ, ತರ್ಕಾಗಮದರಾರಿಭೃತ್=ತರ್ಕ ಆಗಮಗಳೆಂಬ ಶಂಖಚಕ್ರಗಳನ್ನು ಧರಿಸಿದ, ಸರ್ವಜ್ಞಹರಿಃ= ಸರ್ವಜ್ಞಾಚಾರ್ಯರೆಂಬ ಶ್ರೀ ಹರಿಯು, ಆಯಾತಿ=ಬರುತ್ತಾನೆ ॥ ೨ ॥

**ಮೂ ॥ ದ್ರವತದ್ರವತಾಶು ಮಾಯಿನಃ ಪ್ರವಿಶಧ್ವಮತಂದ್ರಿತಾ ಗುಹಾಃ ।**
**ಕಮಲಾರಮಣಾಂಬರಾಶ್ರಯಃ ಸಮುದೇತ್ಯಖಿಲಜ್ಞಭಾಸ್ಕರಃ ॥ ೩ ॥**

ಅ ॥ ಮಾಯಿನಃ=ಮಾಯಾವಾದಿಗಳೆಂಬ ಚೋರರೆ, ಕಮಲಾರಮಣಾಂಬರಾಶ್ರಯಃ= ಲಕ್ಷ್ಮೀಪತಿಯಾದ ಶ್ರೀಹರಿಯೆಂಬ ಆಕಾಶವನ್ನು ಆಶ್ರಯಿಸಿಕೊಂಡಿರುವ, ಅಖಿಲಜ್ಞಭಾಸ್ಕರಃ= ಪೂರ್ಣಪ್ರಜ್ಞರೆಂಬ ಸೂರ್ಯನು, ಸಮುದೇತಿ=ಚೆನ್ನಾಗಿ ಉದಯಿಸುತ್ತಾನೆ, ಅತಃ=ಆ ಕಾರಣ, ಆಶು=ಶೀಘ್ರವಾಗಿ, ದ್ರವತದ್ರವತ=ಓಡಿರಿ, ಓಡಿರಿ, ಅತಂದ್ರಿತಾಃ = ಆಲಸ್ಯಶೂನ್ಯರಾಗಿ, ಗುಹಾಃ=ಗುಹೆಗಳನ್ನು, ಪ್ರವಿಶಧ್ವಂ=ಪ್ರವೇಶಮಾಡಿರಿ ॥ ೩ ॥

ಮೂ || ನೃಹರಿಃ ಸಕಲಜ್ಞನಾಮಕಃ ಸಮುಪೈತಿ ಹಿ ಮಾಯಿದಾನವಾನ್ |
ಪ್ರಪಲಾಯನಮತ್ರ ತತ್ಕ್ಷಮಂ ತ್ವರಯಾ ಪೋ
ವಸತಿರ್ಗುಹಾಸು ಚ || ೪ ||

ಅ || ಹಿ=ಯಾವಕಾರಣದಿಂದ, ಸಕಲಜ್ಞನಾಮಕಃ=ಸರ್ವಜ್ಞರೆಂದು ಹೆಸರುಳ್ಳ, ನೃಹರಿಃ=ನರಸಿಂಹನು, ಮಾಯಿದಾನವಾನ್=ಮಾಯಿಗಳೆಂಬ ದೈತ್ಯರನ್ನು, ಸಮುಪೈತಿ=ಸಮೀಪಿಸುತ್ತಾನೋ, ತತ್=ಆದಕಾರಣ, ಅತ್ರ=ನರಸಿಂಹನ ಆಗಮನದಲ್ಲಿ, ಪ್ರಪಲಾಯನಂ=ಚೆನ್ನಾಗಿ ಓಡುವಿಕೆಯು, ತ್ವರಯಾ=ಶೀಘ್ರವಾಗಿ, ಗುಹಾಸು=ಗುಹೆಗಳಲ್ಲಿ, ವಸತಿಶ್ಚ=ಆವಾಸವೂ ಕೂಡ, ಕ್ಷಮಂ=ಯೋಗ್ಯವು. (ಕೋಪಶಾಂತಿಯನ್ನು ಮಾಡತಕ್ಕದ್ದು.) || ೪ ||

ಮೂ || ಜಯತ್ಯಾನಂದತೀರ್ಥೇಷ್ಟದೇವತಾ ನರಕೇಸರೀ | ವಿಪಾಟಿತಾ
ಜ್ಞಾನತಮಃಕಪಾಟೋತ್ಯುರುಹುಂಕೃತಃ || ೫ ||

ಅ || ವಿಪಾಟಿತಾಜ್ಞಾನತಮಃಕಪಾಟೋತ್ಯುರುಹುಂಕೃತಃ, ವಿಪಾಟಿತ=ಒಡೆಯಲ್ಪಟ್ಟ, ಅಜ್ಞಾನತಮಃಕಪಾಟ=ಅಜ್ಞಾನಾಖ್ಯವಾದ ತಮಸ್ಸೆಂಬ ಬಾಗಿಲುವುಳ್ಳ, ಅತ್ಯುರುಹುಂಕೃತಃ=ಅತ್ಯಂತವಾಗಿ ಹೆಚ್ಚು ಗರ್ಜನೆಯುಳ್ಳ, ಆನಂದತೀರ್ಥೇಷ್ಟದೇವತಾನರಕೇಸರೀ=ಶ್ರೀಮದಾನಂದತೀರ್ಥರಿಗೆ ಇಷ್ಟದೇವತೆಯಾದ ನರಸಿಂಹನು, ಜಯತಿ=ಉತ್ಕೃಷ್ಟನಾಗಿರುತ್ತಾನೆ.

ತಾ || (1) ತಮಸ್ಸು, ಆಲೋಕ ಮೊದಲಾದ ಪ್ರಕಾಶಗಳನ್ನು ಪ್ರತಿಬಂಧಿಸುತ್ತದೆ. ಅಜ್ಞಾನವು ಜ್ಞಾನವನ್ನು ಪ್ರತಿಬಂಧಿಸುತ್ತದೆ. (2) ಪ್ರಸಿದ್ಧವಾದ ಬಾಗಲು ಗೃಹಪ್ರವೇಶಕ್ಕೆ ಪ್ರತಿಬಂಧಕವು. ಅಜ್ಞಾನಾಖ್ಯವಾದ ತಮಸ್ಸು ವಿಷ್ಣುವಿನ ಮಂದಿರಪ್ರವೇಶಕ್ಕೆ ಪ್ರತಿಬಂಧಕವು. ನರಸಿಂಹನ ಉತ್ಕೃಷ್ಟವಾದ ಹೂಂಕಾರದಿಂದ ಅಜ್ಞಾನತಮಸ್ಸೆಂಬ ಬಾಗಲು ಒಡೆದು ಹೋಗುವುದು || ೫ ||

ಮೂ || ಜಯತ್ಯಮಿತಪೌರುಷಃ ಸ್ವಜನತೇಷ್ಟಚಿಂತಾಮಣಿಃ | ಅಜೇಶಮುಖ
ವಂದಿತೋ ಗುಣಗಣಾರ್ಣವಃ ಶ್ರೀಪತಿಃ || ೬ ||

ಅ || ಅಮಿತಪೌರುಷಃ=ಬಹುಪರಾಕ್ರಮಶಾಲಿಯಾದ, ಸ್ವಜನತೇಷ್ಟಚಿಂತಾಮಣಿಃ=ತನ್ನ ಭಕ್ತಜನಸಮೂಹದ ಇಷ್ಟಸಿದ್ಧಿಯಲ್ಲಿ ಚಿಂತಾಮಣಿಯಂತೆ ಇರುವವನು, ಅಜೇಶಮುಖವಂದಿತಃ=ಬ್ರಹ್ಮರುದ್ರೇಂದ್ರಾದಿಗಳಿಂದ ನಮಸ್ಕರಿಸಲ್ಪಟ್ಟವನು, ಗುಣಗಣಾರ್ಣವಃ=ಗುಣಗಳ ಸಮೂಹಗಳಿಂದ ಸಮುದ್ರದಂತಿರುವವನು, ಶ್ರೀಪತಿಃ=ಶ್ರೀಲಕ್ಷ್ಮೀಪತಿಯಾದ ಶ್ರೀ ಹರಿಯು, ಜಯತಿ=ಉತ್ಕೃಷ್ಟನಾಗಿರುತ್ತಾನೆ. || ೬ ||

ಮೂ || ಸರ್ವಜ್ಞಸನ್ಮುನೀಂದ್ರೋಚ್ಚ ಸನ್ಮನಃ ಪಂಕಜಾಲಯಃ | ಅಜಿತೋ
ಜಯತಿ ಶ್ರೀಶೋ ರಮಾಬಾಹುಲತಾಶ್ರಯಃ || ೭ ||

ಅ || ಸರ್ವಜ್ಞಸನ್ಮುನೀಂದ್ರೋಚ್ಚ ಸನ್ಮನಃಪಂಕಜಾಲಯಃ, ಸರ್ವಜ್ಞಸನ್ಮುನೀಂದ್ರ=ನಿರ್ದುಷ್ಟರೂ ಮುನಿಶ್ರೇಷ್ಠರೂ ಆದ ಪೂರ್ಣಪ್ರಜ್ಞಾಚಾರ್ಯರ, ಉಚ್ಚ=ಅನೇಕಾರ್ಥಗಳನ್ನು ವಿಷಯೀಕರಿಸುವ,ಸತ್=ರಾಗಾದಿದೋಷಗಳಿಂದಕಲುಷಿತವಾಗದಿರುವ,ಮನಃ=ಮನಸ್ಸೆಂಬುವ,

ಪಂಕಜ=ಕಮಲವೇ, ಆಲಯಃ=ಸ್ಥಾನವಾಗಿ ಉಳ್ಳ, ಅಜಿತಃ=ಪರಾಜಿತನಾಗದಿರುವ, ರಮಾ ಬಾಹುಲತಾಶ್ರಯಃ=ಲಕ್ಷ್ಮೀದೇವಿಯ ಭುಜಗಳೆಂಬ ಲತೆಗಳಿಗೆ ಆಶ್ರಯನಾದ (ಭುಜಗಳಿಂದ ಲಕ್ಷ್ಮೀದೇವಿಯಿಂದ ಆಲಿಂಗಿಲಸ್ಪಟ್ಟವನು), ಶ್ರೀಶಃ=ಲಕ್ಷ್ಮೀಪತಿಯಾದ ಶ್ರೀ ಹರಿಯು, ಜಯತಿ= ಉತ್ಕೃಷ್ಟನಾಗಿರುತ್ತಾನೆ ॥ ೭ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ**
**ತತ್ತ್ವೋದ್ಯೋತಃ ಸಂಪೂರ್ಣಃ ॥**

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ**
**ನಿರ್ಮಿಸಲ್ಪಟ್ಟ ತತ್ತ್ವೋದ್ಯೋತವು ಸಂಪೂರ್ಣವಾಯಿತು.**

ಶ್ರೀಮದಾನಂದತೀರ್ಥಾರ್ಯಹೃದಯಾಂಭೋಜಮಂದಿರಃ ।
ಕಮಲಾಕ್ಷೀಸರಸಿಕಃ ಪ್ರೀಯತಾಂ ಸಃ ಪರಃ ಪುಮಾನ್ ॥
ಶ್ರೀಮದಾನಂದತೀರ್ಥಾರ್ಯಚರಣಾವಾಶ್ರಯೋಽನಿಶಂ ।
ಬಭಾರ ಭಾರತೀ ಯತ್ರ ಪ್ರೇಮಭಾರಮನಾರತಂ ॥
ದುರ್ಮಾರ್ಗಗಾದುದ್ಧೃತೋ ಯೈಶ್ಚ ಸನ್ಮಾರ್ಗೇ ಸಂಪ್ರವೇಶಿತಃ ।
ತಾನ್ ಗುರೂನ್ ಸತತಂ ಸೇವೇ ಸರ್ವಶಾಸ್ತ್ರವಿಶಾರದಾನ್ ॥
ತಂತ್ರಿನಾರಾಯಣೇನಾಸ್ಯ ವ್ಯಾಖ್ಯಾ ಕರ್ನಾಟಕೀ ಕೃತಾ ।
ಭೂಯಾತ್ಕುಸುಮಮಾಲೇವ ಮುದೇ ಮಾಧವಮಧ್ವಯೋಃ ॥

**॥ ಶ್ರೀ ಕೃಷ್ಣಾರ್ಪಣಮಸ್ತು ॥**



॥ ಶ್ರೀಃ ॥

# ಶ್ರೀಮದ್ವಿಷ್ಣುತತ್ತ್ವವಿನಿರ್ಣಯವು.



ಓಂ ವಿಶ್ವಸ್ಯೋದಯಮಾತನೋತಿ ತದನು ತ್ರಾಣಂ ವಿಧತ್ತೇ ಪುನಃ
ಸೌಖ್ಯಾಪ್ತೀತರಹಾನಿಸಾಧನಮಲಂ ವಕ್ತಿ ಶ್ರುತೀರ್ವ್ಯಂಜಯನ್ ।
ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ ಕಲ್ಪಾವಸಾನೇ ಚ ಯಸ್ತಂ
ದೇವಂ ಪಿತರಂ ಪತಿಂ ಗುರುತಮಂ ವಂದೇ ರಮಾವಲ್ಲಭಂ ॥

ಶ್ರೀರಾಮಂ ಹನುಮತ್ಸೇವ್ಯಂ ಶ್ರೀಕೃಷ್ಣಂ ಭೀಮಸೇವಿತಂ ।
ಶ್ರೀವ್ಯಾಸಂ ಮಧ್ವಸಂಸೇವ್ಯಂ ಸಮಸ್ತಾಭೀಷ್ಟದಂ ಭಜೇ ॥

ನಿಖಿಲಾದ್ವೈತಸಿದ್ಧಾಂತ ಪ್ರಾಪ್ತಾಜ್ಞಾನವಿನಾಶಕಃ ।
ಶ್ರೀಮದಾಚಾರ್ಯಸೂರ್ಯೋಯಂ ದದ್ಯಾತ್ತತ್ವಪ್ರಕಾಶನಂ ॥

ಶ್ರೀಪದ್ಮನಾಭತೀರ್ಥಾದೀನ್ ವಂದೇ ವಿಜ್ಞಾನವಾರಿಧೀನ್ ।
ಟೀಕಾಕೃತಸ್ತ್ವ ವಿಶ್ವೇಶತೀರ್ಥಾನ್ ವೇದಾಂತಕೋವಿದಾನ್ ॥

ಶ್ರೀಮನ್ಮಧ್ವಮತಾಂಭೋಧಿವಿಕ್ರೀಡನವಿಶಾರದಾನ್ ।
ಶಮಾದಿಗುಣಸಂಪನ್ನಾನ್ ವಂದೇ ವಿದ್ಯಾಗುರೂನ್ಮಮ ॥

ಸ್ಮೃತ್ವಾ ಹರಿಂ ಗುರೂಂಶ್ಚಾಪಿ ವಿಷ್ಣುತತ್ತ್ವವಿನಿರ್ಣಯಂ ।
ನಾರಾಯಣಸ್ಯತಾಂ ಪ್ರೀತ್ಯೈ ವ್ಯಾಕರೋತ್ಯದ್ಯ ಭಾಷಯಾ ॥

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ**
**ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

**ಮೂ ॥ ಸದಾಗಮೈಕವಿಜ್ಞೇಯಂ ಸಮತೀತಕ್ಷರಾಕ್ಷರಂ । ನಾರಾಯಣಂ**
**ಸದಾ ವಂದೇ ನಿರ್ದೋಷಾಶೇಷಸದ್ಗುಣಂ ॥**

**ಅ ॥** ನಿರ್ದೋಷಾಶೇಷಸದ್ಗುಣಂ, ನಿರ್ದೋಷ=ದೋಷವಿರಹಿತನು, ಅಶೇಷ=ಪರಿಪೂರ್ಣಗಳಾದ, ಸತ್=ಉತ್ತಮಗಳಾದ, ಅಥವಾ ಉತ್ಪತ್ತ್ಯಾದಿರಹಿತಗಳಾದ, ಗುಣಂ=ಗುಣಗಳುಳ್ಳವನು, ಸಮತೀತಕ್ಷರಾಕ್ಷರಂ, ಸಮತೀತ=ಚೆನ್ನಾಗಿ ಅತಿಕ್ರಮಿಸಲ್ಪಟ್ಟ, ಕ್ಷರ=ಸರ್ವಜೀವರೂ, ಅಕ್ಷರಂ=ಪ್ರಕೃತಿಯೂ, (ಜಡಗಳೂ) ಉಳ್ಳವನು (ಅಂದರೆ ಜಡ ಜೀವ ಪ್ರಕೃತಿಗಳಿಂದ ಅತ್ಯಂತ ವಿಲಕ್ಷಣನು), ಸದಾಗಮೈಕವಿಜ್ಞೇಯಂ, ಸತ್=ನಿರ್ದುಷ್ಟಗಳಾದ, ಆಗಮೈಕ=ಕೇವಲ ಋಗಾದ್ಯಾಗಮಗಳಿಂದ, ವಿಜ್ಞೇಯಂ=(ಸರ್ವೋತ್ತಮನೆಂದೂ, ವಿಲಕ್ಷಣನೆಂದೂ) ತಿಳಿಯಲಿಕ್ಕೆ ಯೋಗ್ಯನೂ ಆದ, ನಾರಾಯಣಂ=ಲಕ್ಷ್ಮೀಪತಿಯಾದ ಶ್ರೀಹರಿಯನ್ನು, (ಅಹಂ=ನಾನು), ಸದಾ=ಯಾವಾಗಲೂ, ವಂದೇ=ನಮಸ್ಕರಿಸುತ್ತೇನೆ.

**ತಾ ॥** ಲಕ್ಷಣವನ್ನು ಹೇಳದೆ ಸ್ವರೂಪನಿರ್ಧಾರಣೆಯಾಗಲಾರದು. ಸ್ವರೂಪನಿರ್ಧಾರಣೆಯಾಗದಿದ್ದರೆ ನಮಸ್ಕಾರಾದಿಗಳು ಕೂಡಲಾರವು. ಕಾರಣ ಶ್ರೀನಾರಾಯಣನ ಲಕ್ಷಣಗಳನ್ನು

ಹೇಳುತ್ತಾರೆ. (1) 'ನಿರ್ದೋಷ'ಪದದಿಂದ ಪಾರತಂತ್ರ್ಯ ಮೊದಲಾದ ಸರ್ವದೋಷಗಳ ಅಭಾವವೂ, 'ಅಶೇಷ ಸದ್ಗುಣಂ' ಎನ್ನುವುದರಿಂದ ಪರಿಪೂರ್ಣಾನಂದತ್ವ ಮೊದಲಾದ ಅನಂತಾನಂತಲಕ್ಷಣಗಳೂ ಸೂಚಿತಗಳಾದವು. ತಾರ್ಕಿಕರು ದುಃಖಾದಿಗಳನ್ನೂ ಗುಣಗಳೆಂದು ಹೇಳುವುದರಿಂದ ಅವುಗಳಿಗೆ ಗ್ರಹಣವಾಗಬಾರದೆಂದು ತಿಳಿಸುವುದಕ್ಕೋಸ್ಕರ (ಅಂದರೆ ಅವುಗಳನ್ನು ತಿರಸ್ಕರಿಸುವುದಕ್ಕೋಸ್ಕರ) ಸತ್=ಸಾಧುವಾದುದು, (ಉತ್ತಮವು.) ಉತ್ಪತ್ತಿ ಮೊದಲಾದ ದೋಷರಹಿತವು (ನಿತ್ಯವು) ಎಂದು ಹೇಳಿರುವರು. (2) ಈ ಲಕ್ಷಣವನ್ನು ನಿಶ್ಚಯಿಸುವುದಕ್ಕಾಗಿ ಅಥವಾ ಈ ಲಕ್ಷಣದಲ್ಲಿ ಅಸಂಭಾವನಾಶಂಕಾಪರಿಹಾರಕ್ಕಾಗಿ 'ಸಮತೀತಕ್ಷರಾಕ್ಷರಂ' ಎಂದುಕ್ತವಾಗಿದೆ. ಶರೀರಕ್ಕೆ ನಾಶವಿರುವುದರಿಂದ ಬ್ರಹ್ಮಾದಿಗಳೆಲ್ಲರೂ ಕ್ಷರರೆಂದೂ, ಅವಿನಾಶಿಯಾದ ಶರೀರವಿರುವುದರಿಂದ ಲಕ್ಷ್ಮೀದೇವಿಯು ಅಕ್ಷರಳೆಂದೂ ಹೇಳಲ್ಪಡುತ್ತಾರೆ. ಈ ೨ ಪದಗಳಿಂದ ನಿತ್ಯಾನಿತ್ಯ ಜಡಗಳನ್ನು ಉಪಲಕ್ಷಿಸತಕ್ಕದು. (ತನ್ನ ಅರ್ಥವನ್ನು ಬಿಡದೆ ಬೇರೆ ಅರ್ಥವನ್ನು ಸ್ವೀಕರಿಸುವುದು) ಬ್ರಹ್ಮಾದಿ ಚೇತನರಿಂದಲೂ, ಲಕ್ಷ್ಮೀದೇವಿಯಿಂದಲೂ, ಜಡಪದಾರ್ಥಗಳಿಂದಲೂ ಅತ್ಯಂತವಿಲಕ್ಷಣನು. (3) ನಾರಾಯಣನು ಇಂತಹನೆಂದು ಅಂದರೆ ಇಂತಹ ಲಕ್ಷಣವುಳ್ಳವನೆಂದೂ, ಸಂಭಾವಕಧರ್ಮವುಳ್ಳವನೆಂದೂ ಯಾವುದರಿಂದ ತಿಳಿಯಬೇಕೆಂದರೆ- ಸದಾಗಮಗಳಿಂದಲೇ ಮುಖ್ಯವಾಗಿ ತಿಳಿಯಬೇಕು. ಪ್ರತ್ಯಕ್ಷಾನುಮಾನಗಳಿಂದ ಬೇರೆ ರೀತಿಯಾಗಿಯೂ ತಿಳಿಯಲ್ಪಡಬಹುದು. ಆದರೆ ಆ ಪ್ರತ್ಯಕ್ಷಾದಿಗಳು ಉಪಜೀವ್ಯಗಳಾದ ಸದಾಗಮಗಳಿಂದ ವಿರುದ್ಧಗಳಾಗಿರುವ ಪ್ರಯುಕ್ತ ಪ್ರಮಾಣವಾಗಲಾರವು. ಪಾಶುಪತ ಮೊದಲಾದ ಆಗಮಗಳನ್ನು ಅಯೋಗ್ಯ ಜನರನ್ನು ಮೋಹಿಸುವುದಕ್ಕೋಸ್ಕರ ನಿರ್ಮಿಸಿರುವುದರಿಂದ ಅವುಗಳು ದುರಾಗಮಗಳಾಗಿವೆ. ಆ ಕಾರಣ ಅವುಗಳಲ್ಲಿ ಹೇಳಿದ ಪ್ರಕಾರ ತಿಳಿಯಬಾರದು. (4) ಕೋಡನ್ನು ಯಾ ಕಿವಿಯನ್ನು ಹಿಡಿದು ದನವನ್ನು ಹೇಗೆ ತಿಳಿಸುವನೋ, ಹಾಗೆ ಆಗಮವು ನಾರಾಯಣನನ್ನು ತಿಳಿಸಿಕೊಡುವುದಿಲ್ಲ. ಲಕ್ಷಣದಿಂದಲೇ ತಿಳಿಸಿಕೊಡುವುದು. ಲಕ್ಷಣವೂ ಪ್ರಮಾಣಸಿದ್ಧವಾಗದೆ ಲಕ್ಷ್ಯವನ್ನು ನಿರ್ಧರಿಸಲಾರದು. ಪ್ರಮಾಣಪ್ರಸಿದ್ಧಗಳಾದಾಗ್ಯೂ ಅಸಂಭಾವನಾದಿಂದ ತಿರಸ್ಕರಿಸಲ್ಪಡುತ್ತವೆ. ಉದಾ— "ಉತ್ತಾನಾ ವೈ ದೇವಗವಾ ವಹಂತಿ, ದೇವತೆಗಳ ಗೋವುಗಳು ಪೃಷ್ಠಭಾಗವನ್ನು ಕೆಳಗೆಮಾಡಿಕೊಂಡು ಪಾದಗಳನ್ನು ಮೇಲೆ ಮಾಡಿಕೊಂಡು ಹೊರುತ್ತವೆ ಎಂದು." ಪ್ರಕೃತ ನಾರಾಯಣನಲ್ಲಿಯೂ 'ಅಣೋರಣೀಯಾನ್ ಮಹತೋ ಮಹೀಯಾನ್' 'ಅಸ್ಥೂಲಃ ಅನಣುಃ' ಇತ್ಯಾದಿ ಪ್ರಮಾಣಪ್ರಮಿತಗಳಾದ ಅಣುತ್ವ ಮಹತ್ವಾದಿಲಕ್ಷಣಗಳಿಗೆ ಅಸಂಭಾವನೆಯಿಂದ ವಿರೋಧವನ್ನು ಶಂಕಿಸಬಾರದೆಂದು ಸಂಭಾವನೆಯೂ ಹೇಳತಕ್ಕದ್ದು. ಹೀಗೆ ಲಕ್ಷಣ ಸಂಭಾವನಾ ಪ್ರಮಾಣ ಇವು ಮೂರನ್ನು ಹೇಳಿದ್ದು ಯುಕ್ತವು. (5) 'ಸದಾ ವಂದೇ' ಎನ್ನುವುದರಿಂದ ಆಚಾರ್ಯರಿಗೆ ನಾರಾಯಣನ ನಮಸ್ಕಾರವು ವಿಘ್ನಪರಿಹಾರ ಮೊದಲಾದ ಪ್ರಯೋಜನಕ್ಕಾಗಿ ಅಲ್ಲವೆಂದು ಸೂಚಿಸಿದರು ॥ ೧ ॥

ವಿಷಯ ಪ್ರಯೋಜನ ಸಂಬಂಧಗಳಿಲ್ಲದಿರುವುದರಿಂದ ಈ ಪ್ರಕರಣವನ್ನೇ ಆರಂಭಿಸಕೂಡದು. ಎದುರಿನಲ್ಲಿ ತೋರುವ ವಸ್ತುಸ್ವರೂಪವನ್ನು ಪ್ರತಿಪಾದಿಸುವ ವಾಕ್ಯದಲ್ಲಿ ಹೇಗೆ ವಿಷಯವಿಲ್ಲವೋ ಹಾಗೆಯೇ ಪ್ರಕೃತದಲ್ಲಿಯೂ ವಿಷಯವಿಲ್ಲವು. ['ಕಾಕಸ್ಯ ಕತಿ ವಾ ದಂತಾಃ ಮೇಷಸ್ಯಾಂಡಂ ಕಿಯತ್ಪಲಂ । ಕಂಬಲೇ ಕತಿ ರೋಮಾಣಿ ಕಾ ವಾರ್ತಾ ಚೋಲಮಂಡಲೇ'] ॥ ಕಾಗೆಗೆ ಎಷ್ಟು ಹಲ್ಲು, ಮೇಷದ ಅಂಡವು ಎಷ್ಟು ಭಾರವು, ಕಂಬಲದಲ್ಲಿ ಎಷ್ಟು ರೋಮಗಳು, ಚೋಲದೇಶದಲ್ಲಿ ಏನು ವಾರ್ತೆಯು, ಇತ್ಯಾದಿ ವಾಕ್ಯಗಳಲ್ಲಿ ಹೇಗೆ ಪ್ರಯೋಜನಾದಿಗಳಿಲ್ಲವೋ,

ಹಾಗೆಯೇ ಈ ಗ್ರಂಥದಲ್ಲಿಯೂ ಪ್ರಯೋಜನಾದಿಗಳಿಲ್ಲವು. ಏಕೆಂದರೆ— (1) ಯಾವುದು ತಿಳಿಯಲ್ಪಡಲಿಲ್ಲವೋ ಯಾ ಸಂಶಯಗ್ರಸ್ತವೋ ಯಾ ವಿಪರೀತವಾಗಿ ತಿಳಿಯಲ್ಪಡುವುದೋ, ಅಂತಹುದೇ ಶಾಸ್ತ್ರಕ್ಕೆ ವಿಷಯುವಾಗುವುದು. ಈ ಪ್ರಕರಣಕ್ಕೆ ವಿಷಯನೆಂದಭಿಮತನಾದ ನಾರಾಯಣನು ಸರ್ವರಿಗೂ ಸಮ್ಮತನೇ ಆಗಿರುವನು. ಆದಕಾರಣ ವಿಷಯುವಿಲ್ಲವು. (2) ಐಹಿಕಪ್ರಯೋಜನವು ಕೃಷ್ಯಾದಿಗಳಿಂದಲೂ, ಪಾರತ್ರಿಕಪ್ರಯೋಜನವು ಯಾಗಾದಿಗಳಿಂದಲೂ ಸಿಗುವುದರಿಂದ ಪ್ರಯೋಜನವೂ ಇರುವುದಿಲ್ಲ. 'ಅಪಾಮ ಸೋಮಮಮೃತಾ ಅಭೂಮ' ಸೋಮವನ್ನು ಕುಡಿದೆವು, ಮುಕ್ತರಾದೆವು, ಇದು ಮೊದಲಾದ ಶ್ರುತಿಗಳಿರುವುದರಿಂದ ಮೋಕ್ಷವೂ ಕರ್ಮದಿಂದಲೇ ಸಿಗುವುದು. (3) ತಥಾಚ ವಿಷಯಪ್ರಯೋಜನಗಳಿಲ್ಲದಿರುವುದರಿಂದಲೇ ಸಂಬಂಧವೂ ಇರುವುದಿಲ್ಲ. (4) ಸರ್ವ ಐಹಿಕ ಪಾರತ್ರಿಕ ಭೋಗ ಪರಿತ್ಯಾಗರೂಪವಾದ (ಅಂದರೆ ೨೧ ದುಃಖಧ್ವಂಸರೂಪವಾದ) ಮುಕ್ತಿಯನ್ನು ಯಾರೂ ಅಪೇಕ್ಷಿಸಲಾರರು, ಆ ಕಾರಣ ಅಧಿಕಾರಿಯೂ ಇಲ್ಲವೆಂದಾಯಿತು. ಯಾರು ಯಾವ ಪ್ರಯೋಜನವನ್ನು ಇಚ್ಛಿಸುತ್ತಾ ವಿಷಯುವನ್ನು ತಿಳಿಯಲಿಚ್ಛಿಸುವನೋ ಆತನೇ ಅಧಿಕಾರಿಯು. ಅಂತೂ ಈ ಪ್ರಕರಣವನ್ನು ಆರಂಭಿಸಕೂಡದು, ಎಂಬ ಆಶಂಕೆಯನ್ನು ಪರಿಹರಿಸುತ್ತಾರೆ.

**ಮೂ ॥ ವಿಶೇಷಣಾನಿ ಯಾನೀಹ ಕಥಿತಾನಿ ಸದುಕ್ತಿಭಿಃ । ಸಾಧಯಿಷ್ಯಾಮಿ ತಾನ್ಯೇವ ಕ್ರಮಾತ್ಸಜ್ಜನಸಂವಿದೇ ॥ ೨ ॥**

ಅ ॥ ಇಹ=ಇಲ್ಲಿ, (ಅಂದರೆ ಮೇಲಿನ(೧)ಪದ್ಯದಲ್ಲಿ,)ಯಾನಿ ವಿಶೇಷಣಾನಿ=ನಿರ್ದೋಷತ್ವ ಅಶೇಷಸದ್ಗುಣತ್ವ ಮೊದಲಾದ ಯಾವ ವಿಶೇಷಣಗಳು, ಕಥಿತಾನಿ=ಹೇಳಲ್ಪಟ್ಟವೋ, ತಾನ್ಯೇವ= ಅವುಗಳನ್ನೇ, ಸದುಕ್ತಿಭಿಃ=ಸದಾಗಮಗಳಿಂದ, ಅಥವಾ ನಿರ್ದುಷ್ಟಗಳಾದ ವೇದಾದ್ಯುಕ್ತಿಗಳೇ ಅನುಗ್ರಾಹಕವಾಗಿ ಉಳ್ಳ ಅನುಮಾನಾದಿಗಳಿಂದ, ಕ್ರಮಾತ್=ನಿರ್ದೇಶಕ್ರಮವಾಗಿ, ಸಜ್ಜನ ಸಂವಿದೇ, ಸಜ್ಜನ=ಸಜ್ಜನರಿಗೆ, ಸಂವಿದೇ=ನಾರಾಯಣನ ಜ್ಞಾನಕ್ಕೋಸ್ಕರ, ಅಥವಾ ಸಜ್ಜನ= ಸಜ್ಜನರಿಗೆ, ಸಂವಿದೇ=ಜ್ಞಾನಸಾಧ್ಯವಾದ ಮೋಕ್ಷಕ್ಕೋಸ್ಕರ, ಸಾಧಯಿಷ್ಯಾಮಿ=ಸಾಧಿಸುವೆನು.

ತಾ ॥ (1) ಕಾಮಧೇನು ಮೊದಲಾದವುಗಳು ಲೋಕವಿಲಕ್ಷಣಗಳಾದುದರಿಂದ ಅವುಗಳ * ಪ್ರಾಸಾದೋದ್ಧರಣಾದಿಗಳು ಹೇಗೆ ಅಸಂಭಾವಿತಗಳಾಗುವುದಿಲ್ಲವೋ ಹಾಗೆಯೇ ಶ್ರೀ ನಾರಾಯಣನಿಗೂ ನಿರ್ದೋಷತ್ವವೂ ಅಶೇಷ ಸದ್ಗುಣತ್ವವೂ ಅಸಂಭಾವಿತವಲ್ಲ ಎಂದು ತೋರಿಸುವುದಕ್ಕಾಗಿ ಸರ್ವವಸ್ತುವಿನಿಂದಲೂ ಅತ್ಯಂತವೈಲಕ್ಷಣ್ಯವೂ, ಅವುಗಳಲ್ಲಿ ಯಾವುದು ಪ್ರಮಾಣವು ಎಂದು ಆಕಾಂಕ್ಷಾಬರಲು 'ವೇದಾದಿವೇದ್ಯತ್ವವು' ಅದಕ್ಕೆ ವಿರೋಧಪರಿಹಾರಕ್ಕಾಗಿ 'ದುರಾಗಮಾದ್ಯವೇದ್ಯತ್ವವು' ಹೀಗೆ (೧)ನೇ ಪದ್ಯದಲ್ಲಿ ಹೇಳಿದ ನಾರಾಯಣನ ವಿಶೇಷಣಗಳನ್ನೇ ಈ ಗ್ರಂಥದಲ್ಲಿ ಸಾಧಿಸುವೆನು. (2) ಸದಾಗಮಗಳಿಂದಲೇ ತಿಳಿಯಲರ್ಹನೆಂದು ಹೇಳುವಾಗ ವೇದಗಳೇ ಅಪ್ರಮಾಣಗಳಾದುದರಿಂದ ಇದು ಹೇಗೆ ಕೂಡಬಹುದೆಂದಾಶಂಕಾಬರಲು ವೇದಗಳಿಗೆ ಪ್ರಾಮಾಣ್ಯಾದಿಗಳನ್ನೂ ಸಾಧಿಸುವೆವು. ನಾರಾಯಣನ ಸ್ವರೂಪವನ್ನು ಮಾತ್ರ ಸಾಧಿಸು

---

* (1) ಜಮದಗ್ನಿಯ ಕಾಮಧೇನುವನ್ನು ಕಾರ್ತವೀರ್ಯನು ಬಲಾತ್ಕರಿಸಲು ಆಕೆಯ ಹುಂಕಾರದಿಂದ ಶಸ್ತ್ರಧರರಾದ ಭಟರು ಹುಟ್ಟಿದರು. [ಸಹ್ಯಾದ್ರಿಖಂಡ. ಪು. ೪೬೩.] (2) ವಸಿಷ್ಠರ ಕಾಮಧೇನುವನ್ನು ವಿಶ್ವಾಮಿತ್ರನು ಬಲಾತ್ಕರಿಸಲು ಕಾಮಧೇನುವಿನಿಂದ ಮ್ಲೇಚ್ಛಾದಿಗಳು ಹುಟ್ಟಿ ವಿಶ್ವಾಮಿತ್ರನ ಸೇನೆಯನ್ನು ಕೊಂದರು. [ರಾಮಾಯಣ. ಬಾ. ಕಾ. ಸ. ೫೫-೫೬] ಹೀಗೆ ಭಕ್ಷ್ಯ ಭೋಜ್ಯ ಚತುರಂಗ ಸೈನ್ಯಾದಿಗಳನ್ನು ಹುಟ್ಟಿಸುವ ಕಾಮಧೇನುವಿಗೆ ಪ್ರಾಸಾದಾದಿಗಳ ನಿರ್ಮಾಣ (ಸೃಷ್ಟಿ) ವು ಅಸಂಭಾವಿತವಲ್ಲ.

ವುದಲ್ಲ. (3) ಇಂತಹ ವಿಶೇಷಣಗಳಿಂದೊಡಗೂಡಿದ ನಾರಾಯಣನ ವಿಷಯದಲ್ಲಿ ಜನರಿಗೆ ಅಜ್ಞಾನ ಸಂಶಯ ವಿಪರ್ಯಾಸಗಳು (ವಿಪರೀತ ನಿಶ್ಚಯಗಳು) ಇವೆ. ಇದರಿಂದ ನಾರಾಯಣನೇ ವಿಷಯನೆಂದುಕ್ತವಾಯಿತು. (4) 'ಇಹ ಸಾಧಯಿಷ್ಯಾಮಿ' ಎಂದು ಹೇಳಿದ್ದರಿಂದ ಪ್ರಕರಣಕ್ಕೆ ವಿಷಯದಿಂದ ಪ್ರತಿಪಾದ್ಯ ಪ್ರತಿಪಾದಕತ್ವರೂಪವಾದ ಸಂಬಂಧವೂ ಹೇಳಲ್ಪಟ್ಟಿತು. (5) ಆಗ ಪರರು ಶಂಕಿಸುತ್ತಾರೆ. ಸದಾಗಮೈಕವಿಜ್ಞೇಯತ್ವಾದಿಗಳಿಂದ ವಿಶಿಷ್ಟನಾದ ನಾರಾಯಣನೇ ವಿಷಯನೆಂದು ಹೇಳಿರುವುದಯುಕ್ತವು, ಸಾಧಕಪ್ರಮಾಣವಿರುವುದಿಲ್ಲ. ಅನುಮಾನ ಪ್ರತ್ಯಕ್ಷ ಗಳಿಂದಲಾದರೂ ಸಾಧಿಸಲಿಕ್ಕೆ ಕೂಡಲಾರದು. ಏಕೆಂದರೆ— ಆಗಮಗಳಿಂದಲೇ ವಿಜ್ಞೇಯ ನೆಂದು ಹೇಳಿ ಈಗ ಅನುಮಾನಾದಿಗಳಿಂದ ವೇದ್ಯನೆಂದಂಗೀಕರಿಸಿದರೆ ಸ್ವವಚನವಿರೋಧವು ಬರುವುದು. ವೇದ ಮೊದಲಾದ ಸದಾಗಮಗಳಿಂದ ಸಾಧಿಸುವೆನು ಎಂದೂ ಹೇಳಕೂಡದು. ವೇದಗಳಿಗೆ ಪ್ರಾಮಾಣ್ಯವನ್ನೊಡಂಬಡದಿದ್ದ ಬೌದ್ಧಾದಿಗಳನ್ನು ಕುರಿತು ಹಾಗೆ ಉಪನ್ಯಾಸವು ಕೂಡಲಾರದು; ಎಂದರೆ— ಸದಾಗಮಗಳಿಂದಲೇ ಸಾಧಿಸುವೆನು. ವೇದಗಳಿಗೆ ಪ್ರಾಮಾಣ್ಯವನ್ನೂ ಸಾಧಿಸಿಕೊಡುವೆನು. 'ಸದಾಗಮೈಕವಿಜ್ಞೇಯಂ' ಅಂದರೆ ಆಗಮಗಳಿಂದಲೇ ವಿಜ್ಞೇಯನು. ಮತ್ತು ವೇದಾದಿವಿರುದ್ಧಗಳಾದ ಅನುಮಾನಾದಿಗಳಿಂದ ಅವೇದ್ಯನೆಂದೂ, ಅರ್ಥವು. (6) 'ಕ್ರಮಾತ್' ಎಂದು ಅಜ್ಞರ ಮನಸ್ಸನ್ನು ಸಮಾಧಾನಗೊಳಿಸುವುದಕ್ಕೋಸ್ಕರ ಹೇಳಿದ್ದು. ಇಲ್ಲ ವಾದರೆ ಎಲ್ಲಿ ಯಾವುದನ್ನು ಸಾಧಿಸಿರುವರು ಎಂದು ಮಂದರು ಸಂಭ್ರಾಂತಮನಸ್ಕರು ಆದಾರು. ಇಲ್ಲಿ ನಿರ್ದೇಶಕ್ರಮವೇ ವಿವಕ್ಷಿತವಾಗಿದೆ. ಆಕಾಂಕ್ಷಾಕ್ರಮವಲ್ಲ. (7) 'ಸಂವಿದೇ' ಎನ್ನುವುದ ರಿಂದ ಸದಾಗಮೈಕವಿಜ್ಞೇಯತ್ವಾದಿಗಳಿಂದ ವಿಶಿಷ್ಟನಾದ ನಾರಾಯಣನ ಜ್ಞಾನವೇ ಪ್ರಯೋಜನ ವೆಂದುಕ್ತವಾಯಿತು. (8) ಗ್ರಂಥಪ್ರತಿಪಾದ್ಯನಾದ ನಾರಾಯಣನ ಕೇವಲ ಜ್ಞಾನವು ಪ್ರಯೋಜನ ವಾಗಲಾರದು. ಸುಖಪ್ರಾಪ್ತಿ ದುಃಖಪರಿತ್ಯಾಗಗಳು ಪ್ರಯೋಜನಗಳಾಗುವುವು. ಇವೆರಡರಲ್ಲಿಯೂ ಇದು ಸೇರಲಿಲ್ಲ, ಎಂದು ಶಂಕಿಸಿದರೆ 'ಸಜ್ಜನ ಸಂವಿದೇ' ಎಂದು; ಸುಖಪ್ರಾಪ್ತಿ ಮೊದಲಾದು ದನ್ನು ಪ್ರಾರ್ಥಿಸದೆ ಪರಮೇಷ್ಟನಾದ ನಾರಾಯಣ ಜ್ಞಾನವನ್ನು ಮಾತ್ರ ಅಪೇಕ್ಷಿಸುವ ಪುರುಷರು (ಏಕಾಂತಭಕ್ತರು) ಇರುತ್ತಾರೆ. ಅವರನ್ನು ಕುರಿತು ಈ ಸಾಧನವು ಸಂಗತವಾಗುವುದು. ಅಂಥವರಿಗೆ ನಾರಾಯಣನ ಜ್ಞಾನವೇ ಮುಖ್ಯ ಪ್ರಯೋಜನವಾಗುವುದು. ಯಾವ ಶಾಸ್ತ್ರವೂ ಸರ್ವಾಧಿಕಾರಿ ಸಾಧಾರಣವಾಗಿರಲಾರದು. (9) ಅಥವಾ 'ಸಂವಿತ್' ಪದದಿಂದ ಜ್ಞಾನಸಾಧ್ಯ ವಾದ ಮೋಕ್ಷವನ್ನುಪಲಕ್ಷಿಸತಕ್ಕದು. ಮೋಕ್ಷಕ್ಕೆ ಕರ್ಮಸಾಧ್ಯತ್ವವನ್ನು ನಿರಾಕರಿಸಲಿಕ್ಕೂ ಪ್ರಕರಣ ಪ್ರಯೋಜನಗಳಿಗೆ ಸಂಬಂಧವನ್ನುಪಪಾದಿಸಲಿಕ್ಕೂ 'ಸಜ್ಜನಮುಕ್ತಯೇ' ಎಂದು ಹೇಳದೆ ಲಾಕ್ಷಣಿಕ ಪದವನ್ನು ಪ್ರಯೋಗಿಸಿರುವರು. (10) ಹೀಗಾದರೆ ಏಕಾಂತಭಕ್ತರು ಮುಕ್ತಿಯನ್ನಪೇಕ್ಷಿಸದೆ ಇರುವುದರಿಂದಲೂ, ಬೇರೆ ಅಧಿಕಾರಿಗಳೇ ಇಲ್ಲದಿರುವುದರಿಂದಲೂ ಈ ಪ್ರಕರಣವು ನಿರಧಿಕಾರಿಕವಾಗಬೇಕಾಯಿತು, ಎಂದು ಶಂಕಿಸಿದರೆ 'ಸಜ್ಜನಸಂವಿದೇ' ಎಂದು; ಅಂದರೆ ಯಾರು ಸಾತ್ವಿಕಸ್ವಭಾವವುಳ್ಳವರೋ, ಷಡಂಗಸಹಿತಗಳಾದ ವೇದಗಳನ್ನು ಅಧ್ಯಯನ ಮಾಡಿರುವರೋ, ಶಮದಮಾದಿಸಂಪನ್ನರೋ, ನಿತ್ಯಾನಿತ್ಯವಸ್ತುಗಳ ವಿವೇಕಜ್ಞಾನವುಳ್ಳವರೋ, ಸರ್ವಸಾಂಸಾರಿಕ ಭೋಗಗಳಿಂದ ವಿರಕ್ತರಾಗಿ ಮುಕ್ತಿಯನ್ನಪೇಕ್ಷಿಸುತ್ತಾ, ಮುಕ್ತಿಯು ಭಗವಂತನ ಜ್ಞಾನದಿಂದಲೇ ಸಾಧ್ಯವಾಗುವಪ್ರಯುಕ್ತ ಶ್ರೀಹರಿಯ ಜ್ಞಾನವನ್ನೇ ಪ್ರಾರ್ಥಿಸು ವರೋ, ಅವರಿಗೆ ಮುಕ್ತಿಸಾಧನೀಭೂತ ಜ್ಞಾನಕ್ಕಾಗಿಯೂ, ಹೀಗೆ ಪ್ರಯೋಗಿಸಿರುವರು. ಆದ ಕಾರಣ ವಿಷಯ ಪ್ರಯೋಜನ ಸಂಬಂಧ ಅಧಿಕಾರಿಗಳಿರುವುದರಿಂದ ಈ ಪ್ರಕರಣವನ್ನು ಆರಂಭಿ ಸಲೇಬೇಕು ॥ ೨ ॥

'ಕ್ರಮಾತ್' ಎನ್ನುವುದರಿಂದ ಸದಾಗಮೈಕವಿಜ್ಞೇಯತ್ವವನ್ನು ಪ್ರಥಮತಃ ಪ್ರತಿಪಾದಿಸುತ್ತೇನೆಂದು ಪ್ರತಿಜ್ಞಾಮಾಡಿ ಸದುಕ್ತಿಗಳಿಂದ ಸಾಧಿಸುವೆನು ಎಂದು ಹೇಳಿರುವರು. ನಾರಾಯಣನು ಸದಾಗಮಗಳಿಂದಲೇ ವೇದ್ಯನೆಂದು ಪ್ರತಿಪಾದಿಸುವ ಸದುಕ್ತಿಗಳು ಯಾವುವೆಂದು ಶಂಕಿಸಿದರೆ,

ಮೂ ॥ ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಂ । ಮೂಲ-
ರಾಮಾಯಣಂ ಚೈವ ಪುರಾಣಂ ಚೈತದಾತ್ಮಕಂ ॥ ಯೇ ಚಾನು-
ಯಾಯಿನಸ್ತ್ವೇಷಾಂ ಸರ್ವೇ ತೇ ಚ ಸದಾಗಮಾಃ । ದುರಾಗ-
ಮಾಸ್ತದನ್ಯೇ ಯೇ ತೈರ್ನಜ್ಞೇಯೋ ಜನಾರ್ದನಃ ॥ ಜ್ಞೇಯ
ಏತೈಸ್ಸದಾ ಯುಕ್ತೈರ್ಭಕ್ತಿಮದ್ಭಿಸ್ಸುನಿಷ್ಠಿತೈಃ ॥ ೩ ॥

ಅ ॥ ಋಗಾದ್ಯಾಃ = ಋಗ್ಯಜುಃ ಸಾಮ ಅಥರ್ವ ಎಂಬ ಹೆಸರುಳ್ಳ ವೇದಗಳು, ಭಾರತಂ ಚ = ಮಹಾಭಾರತವು, ಅಥ ಏವ = ಹಾಗೆಯೇ, ಅಖಿಲಂ ಪಂಚರಾತ್ರಂ = ಎಲ್ಲಾ ಪಂಚರಾತ್ರಾಗಮವೂ, ಮೂಲರಾಮಾಯಣಂ ಚ = ಮೂಲರಾಮಾಯಣವೂ, ಏತದಾತ್ಮಕಂ = ಋಗಾದಿಗಳಿಗೆ ಅನುಕೂಲವಾದ, ಪುರಾಣಂ ಚ ಏವ = ಪುರಾಣವೂ, ಏಷಾಂ = ಈ ಋಗಾದಿಗಳಿಗೆ, ತು = ವಿಶೇಷವಾಗಿ, ಯೇ ಚ ಅನುಯಾಯಿನಃ = (ಮನುಸ್ಮೃತಿಯೇ ಮೊದಲಾದ) ಅನುಕೂಲಗ್ರಂಥಗಳಿವೆಯೋ, ತೇ ಸರ್ವೇ ಏವ ಚ = ಸಮಸ್ತಗಳಾದ ಅವುಗಳೇವೇ, ಸದಾಗಮಾಃ = ಸದಾಗಮಗಳು. ತದನ್ಯೇ = ತದ್ವಿರುದ್ಧಗಳೂ ಉದಾಸೀನಗಳೂ ಆದ, ಯೇ = ಯಾವ ಗ್ರಂಥಗಳೋ, ತೇ ಸರ್ವೇ = ಅವೆಲ್ಲವೂ, ದುರಾಗಮಾ ಏವ = ದುಷ್ಟಾಗಮಗಳೇವೇ ಸರಿ. ಜನಾರ್ದನಃ = ಶ್ರೀಹರಿಯು, ತೈಃ = ಅವುಗಳಿಂದ, ನೈವ ಜ್ಞೇಯಃ = ತಿಳಿಯಲು ಸಾಧ್ಯನಲ್ಲ. ಏತೈರೇವ = ಈ ಸದಾಗಮಗಳಿಂದಲೇ, ಸದಾ = ಯಾವಾಗಲೂ, ಯುಕ್ತೈಃ = ವೇದಾದಿಗಳ ಅರ್ಥವಿಚಾರದಲ್ಲಿ ಆಗ್ರಹ ವಿಶೇಷದಿಂದೊಡಗೂಡಿದ, ಭಕ್ತಿಮದ್ಭಿಃ = ಅತ್ಯಾದರವುಳ್ಳ, ಸುನಿಷ್ಠಿತೈಃ, ಸು = ಚೆನ್ನಾಗಿ, ನಿ = ಅತ್ಯಂತವಾಗಿ, ಸ್ಥಿತೈಃ = ಇರುವ, ಭಕ್ತಿಯ ಹೋಗೋಣದರ ನಿವೃತ್ತಿಯುಳ್ಳ, ಕೆಲವು ಕಾಲದಲ್ಲಿಯೇ ಇರುವ ಭಕ್ತಿಶೂನ್ಯರಾದ, (ಅಂದರೆ ಸರ್ವಕಾಲದಲ್ಲಿಯೂ ಭಕ್ತಿಯಿರುವ) ಅಧಿಕಾರಿಗಳಿಂದ, ಜ್ಞೇಯಃ = ತಿಳಿಯಲರ್ಹನು.

ತಾ ॥ (1) ವಾಸುದೇವನಿಂದ ಸಂಕರ್ಷಣನಾಮಕನಾದ ಜೀವನು ಹುಟ್ಟಿದನು. ಸಂಕರ್ಷಣನಿಂದ ಪ್ರದ್ಯುಮ್ನನಾಮಕವಾದ ಮನಸ್ಸು ಹುಟ್ಟಿತು. ಇದು ಮೊದಲಾದ ಪಂಚರಾತ್ರದಲ್ಲಿ ಇರತಕ್ಕ ಕೆಲವು ವಾಕ್ಯಗಳು ಅಪ್ರಮಾಣಗಳೆಂದು ಮಾಯಾವಾದಿಗಳು ಹೇಳುವರು. ಅದನ್ನು ನಿರಾಕರಿಸಲಿಕ್ಕಾಗಿ 'ಅಖಿಲಂ' ಎಂದುಕ್ತವಾಯಿತು. 'ಜೀವಾಭಿಮಾನಿಶೇಷಸ್ಯ ನಾಮ್ನಾ ಸಂಕರ್ಷಣಸ್ಯ ತು । ವಾಸುದೇವಾಜ್ಜನಿಃ ಪ್ರೋಕ್ತಾ' ಸಂಕರ್ಷಣನಾಮಕನಾದ, ಜೀವಾಭಿಮಾನಿಯಾದ ಶೇಷನಿಗೆ ವಾಸುದೇವನಿಂದುತ್ಪತ್ತಿಯು ಹೇಳಲ್ಪಟ್ಟಿತು. ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ ಪ್ರಕಾರ ಆ ವಾಕ್ಯಗಳಿಗೆ ಪ್ರಾಮಾಣ್ಯವು ಸಂಗತವಾಗುವುದು. (2) ಇಂತಹ ವಿಶೇಷಣ ವಿಶಿಷ್ಟನಾದ ನಾರಾಯಣನನ್ನು ವೈಶೇಷಿಕಾದಿಗಳು ಏಕೆ ತಿಳಿಯಲಾರರೆಂದರೆ — ವಿಚಾರ ಮಾಡಿದರೇನೇ ವಾಕ್ಯಾರ್ಥವು ಸ್ಪಷ್ಟವಾಗುವುದು. ವೈಶೇಷಿಕಾದಿಗಳು ವೇದಾದಿಗಳ ಅರ್ಥವನ್ನು ವಿಚಾರಮಾಡುವುದರಲ್ಲಿ ಆಗ್ರಹಯುಕ್ತರಲ್ಲ. (3) ಹಾಗಾದರೆ ಮೀಮಾಂಸಕರು ಏಕೆ ತಿಳಿಯುವುದಿಲ್ಲವೆಂದರೆ — ಯಾರಿಗೆ ಎಲ್ಲಿ ಆದರವಿದೆಯೋ ಅವರಿಗೇನೇ ಇರತಕ್ಕ ಆ ವಸ್ತುವು ಪ್ರಕಾಶವಾಗುವುದು, ಆದರವಿಲ್ಲದಿರುವವರಿಗೂ ಬೇರೆಕಡೆ ಆದರವಿರುವವರಿಗೂ ಪ್ರಕಾಶ

ವಾಗಲಾರದು ಎಂದನುಭವಸಿದ್ಧವು. ಮೀಮಾಂಸಕರು ಹಾಗೆ ಅಲ್ಲ. ಅಂದರೆ ಕರ್ಮ ದಲ್ಲಿಯೇ ಆಸಕ್ತಿಯಿರುವವರು. ಆ ಕಾರಣ ವೇದದಿಂದ ಬ್ರಹ್ಮಜ್ಞಾನವು ಅವರಿಗೆ ಇಲ್ಲವು ॥ ೩ ॥

**ಮೂ ॥ ನ ಚ ಕೇವಲತರ್ಕೇಣ ನಾಕ್ಷಜೇನ ನ ಕೇನಚಿತ್ । ಕೇವಲಾಗಮ ವಿಜ್ಞೇಯೋ ಭಕ್ತ್ಯೈರೇವ ನ ಚಾನ್ಯಥಾ ॥ ಇತಿ ಬ್ರಹ್ಮಾಂಡೇ ॥ ೪ ॥**

ಅ ॥ ಕೇವಲತರ್ಕೇಣ, ಕೇವಲ=ವೇದಾದಿಗಳ ಅನುಕೂಲ್ಯರಹಿತವಾದ, ತರ್ಕೇಣ= ದೂಷಣಾನುಮಾನದಿಂದ, ನ ಚ=ತಿಳಿಯಲರ್ಹನಲ್ಲ, ಅಕ್ಷಜೇನ=ಪ್ರತ್ಯಕ್ಷದಿಂದಲೂ, ನ= ಜ್ಞೇಯನಲ್ಲ, ಕೇನಚಿತ್=ಸಾಧನಾನುಮಾನದಿಂದಲೂ, ನ=ಜ್ಞೇಯನಲ್ಲ, ಅಥವಾ ಕೇವಲ ತರ್ಕೇಣ=ವೇದಾದ್ಯಾನುಕೂಲ್ಯ ರಹಿತಗಳಾದ ಸಾಧನದೂಷಣಾನುಮಾನಗಳಿಂದ, ನ ಚ= ಜ್ಞೇಯನಲ್ಲ, ಕೇನಚಿತ್=ಅರ್ಥಾಪತ್ತ್ಯಾದಿಗಳಿಂದಲೂ, ನ=ಜ್ಞೇಯನಲ್ಲ, ಅಥವಾ ಕೇನಚಿತ್= ವೇದಾದ್ಯರ್ಥವಿಚಾರದಲ್ಲಿ ಆಗ್ರಹಾದಿಗಳಿಲ್ಲದಿರುವವರಿಂದ, ನ=ಜ್ಞೇಯನಲ್ಲ, ಭಕ್ತ್ಯೈರೇವ= ವೇದಾದ್ಯರ್ಥವಿಚಾರದಲ್ಲಿ ಸದಾಗ್ರಹಯುಕ್ತರಾದ ಸಾರ್ವಕಾಲಿಕಭಕ್ತಿಯುಳ್ಳವರಿಂದಲೇ, ಕೇವಲಾಗಮವಿಜ್ಞೇಯಃ, ಕೇವಲ=ದುರಾಗಮ ಕೇವಲಾನುಮಾನಾದಿಗಳಲ್ಲದ, ಆಗಮ= ಸದಾಗಮಗಳಿಂದಲೇ, ವಿಜ್ಞೇಯಃ=ತಿಳಿಯಲರ್ಹನು, ಅನ್ಯಥಾ=ಬೇರೆ ರೀತಿಯಾಗಿ, ನ ಚ= ತಿಳಿಯಲರ್ಹನಲ್ಲ, ಇತಿ=ಹೀಗೆ, ಬ್ರಹ್ಮಾಂಡೇ=ಬ್ರಹ್ಮಾಂಡಪುರಾಣದಲ್ಲಿ (ಹೇಳಲ್ಪಟ್ಟದೆ) ॥ ೪ ॥

**ಮೂ ॥ ನಾವೇದವಿನ್ಮನುತೇದಂ ಬೃಹಂತಂ ಸರ್ವಾನುಭೂಮಾತ್ಮಾನಂ ಸಾಂಪರಾಯೇ ॥ ಇತಿ ತೈತ್ತಿರೀಯಶ್ರುತಿಃ ॥ ೫ ॥**

ಅ ॥ ಅವೇದವಿತ್=ಸರ್ವ ಸದಾಗಮಗಳನ್ನು ತಿಳಿಯದಿದ್ದವರು, ಸಾಂಪರಾಯೇ= ಮೋಕ್ಷಕ್ಕೋಸ್ಕರ, ಇದಂ=ಈ, ಬೃಹಂತಂ=ಪೂರ್ಣನಾದ, ಸರ್ವಾನುಭೂಂ=ಸರ್ವವನ್ನೂ ಅನುಭವಿಸತಕ್ಕ, ಆತ್ಮಾನಂ=ಪರಮಾತ್ಮನನ್ನು, ನ ಮನುತೇ=ತಿಳಿಯುವುದಿಲ್ಲ. ಇತಿ= ಹೀಗೆ, ತೈತ್ತಿರೀಯಶ್ರುತಿಃ=ತೈತ್ತಿರೀಯ ಶ್ರುತಿಯು, ವಕ್ತಿ=ಹೇಳುತ್ತದೆ ॥ ೫ ॥

**ಮೂ ॥ ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾಽನ್ಯೇನೈವ ಸುಜ್ಞಾನಾಯ ಪ್ರೇಷ್ಠ ॥ ಇತಿ ಕಠಶ್ರುತಿಃ ॥ ೬ ॥** [ಕಾಠ. ಪು. ೪೬.]

ಅ ॥ ಪ್ರೇಷ್ಠ=ಪ್ರಿಯನಾದ ನಚಿಕೇತನೇ, ಏಷಾ=ಪರಮಾತ್ಮವಿಷಯಕವಾದ, ಮತಿಃ= ಬುದ್ಧಿಯು, ತರ್ಕೇಣ=ವೇದಾದ್ಯಾನುಕೂಲ್ಯ ರಹಿತವಾದ ಅನುಮಾನದಿಂದ, ಆನೇಯಾ= ಹುಟ್ಟಿಸಲಿಕ್ಕೆ ಯೋಗ್ಯವೂ, ಅಪನೇಯಾ ಚ=ನಿರಾಕರಿಸಲಿಕ್ಕೆ ಯೋಗ್ಯವೂ, ನ=ಆಗುವುದಿಲ್ಲ; ಅಂದರೆ ಪರಬ್ರಹ್ಮವಿಷಯವಾದ ಬುದ್ಧಿಯು ಕೇವಲ ಅನುಮಾನದಿಂದ ಸಂಪಾದಿಸಲಿಕ್ಕೂ ನಿರಾ ಕರಿಸಲಿಕ್ಕೂ ಸಾಧ್ಯವಿಲ್ಲ. ಅನ್ಯೇನ=ಜೀವೇಶ್ವರರಿಗೆ ಭೇದಜ್ಞಾನವುಳ್ಳವನಿಂದ, (ಅಂದರೆ— ಭಗವ ದ್ಭಕ್ತ್ಯಾದಿಗಳುಳ್ಳ ಆಚಾರ್ಯರಿಂದ) ಪ್ರೋಕ್ತಾ=ಚೆನ್ನಾಗಿ ವೇದವ್ಯಾಖ್ಯಾನದಿಂದ ಹುಟ್ಟಿಸಲ್ಪಟ್ಟ ದ್ದಾಗಿಯೇ, ಸುಜ್ಞಾನಾಯ=ಭಗವತ್ಸಾಕ್ಷಾತ್ಕಾರಕ್ಕಾಗಿ, ಭವತಿ=ಆಗುತ್ತದೆ, (ಹೀಗೆ ಯಮ ದೇವರು ನಚಿಕೇತಸರಿಗೆ ಉಪದೇಶಿಸಿರುವರು) ಇತಿ=ಹೀಗೆ, ಕಠಶ್ರುತಿಃ=ಕಠಶ್ರುತಿಯು (ಕಾಠಕೋಪನಿಷತ್ತು) ॥ ೬ ॥

**ಮೂ ॥ ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ ತಸ್ಮಾದಾಹುರ್ವೇದಾಃ ॥ ಇತಿ ಪಿಪ್ಪಲಾದ ಶ್ರುತಿಃ ॥ ೭ ॥**

ಅ ॥ ಇಂದ್ರಿಯಾಣಿ=ಚಕ್ಷುರಾದೀಂದ್ರಿಯಗಳು, ಏನಂ=ಈ ಪರಮಾತ್ಮನನ್ನು, ನ ವೇದಯಂತಿ=ತಿಳಿಸಿಕೊಡುವುದಿಲ್ಲ, ಅನುಮಾನಂ=ಅನುಮಾನವೂ, ನ=ತಿಳಿಸಿಕೊಡುವುದಿಲ್ಲ, ಹಿ = ಯಾವಕಾರಣದಿಂದ, ವೇದಾಃ ಏವ = ಋಗಾದಿವೇದಗಳೇವೆ, ಏನಂ=ಈ ಪರಮಾತ್ಮನನ್ನು, ವೇದಯಂತಿ=ತಿಳಿಸಿಕೊಡುತ್ತವೋ, ತಸ್ಮಾತ್=(ತಿಳಿಸಿಕೊಡುವಿಕೆಯು ದುರಾಗಮಾದಿಗಳಲ್ಲಿ ಸಾಧಾರಣವಾದಾಗ್ಯೂ 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಎಂಬುವ ನ್ಯಾಯದಿಂದ) ಸರ್ವೋತ್ತಮವಾದ ವಸ್ತುವನ್ನು ತಿಳಿಸಿಕೊಡುವುದರಿಂದಲೇ, (ಏತಾನ್=ಇವುಗಳನ್ನು) ವೇದಾಃ ಇತಿ=ವೇದಗಳೆಂದು, ಆಹುಃ=ಹೇಳುತ್ತಾರೆ ॥ ೭ ॥

ಈ ವಿಷಯದಲ್ಲಿ ಹೀಗೆ ಪರರು ಆಶಂಕಿಸುವರು. (1) ಯಾವುದು ಅನೃತವೋ ಅದು ಅಪ್ರಮಾಣವು, 'ಪುತ್ರಕಾಮಃ ಪುತ್ರೇಷ್ಟ್ಯಾ ಯಜೇತ' ಮಕ್ಕಳನ್ನು ಹೊಂದಲಿಚ್ಛಿಸುವವರು ಪುತ್ರಕಾಮೇಷ್ಟಿಯನ್ನು ಮಾಡಬೇಕು. ಇದು ಮೊದಲಾದ ವೇದವಾಕ್ಯವು ಅನೃತವು, (ಸುಳ್ಳು) ಏಕೆಂದರೆ— ಯಾಗಮಾಡಿದರೂ ಪುತ್ರೋತ್ಪತ್ತಿಯಾಗುವುದಿಲ್ಲ. ಹೀಗೆಯೇ 'ಮೃದಬ್ರವೀತ್' ಮಣ್ಣು ಹೇಳಿತು. ಇದು ಮೊದಲಾದ ವೇದವಾಕ್ಯವೂ ಅಪ್ರಮಾಣವು. (2) ಸ್ವವ್ಯಾಹತವಾದುದು ಅಪ್ರಮಾಣವು. 'ಉದಿತೇ ಹೋತವ್ಯಂ ಅನುದಿತೇ ಹೋತವ್ಯಂ' ಸೂರ್ಯನು ಉದಯಿಸುವಾಗ ಹೋಮಿಸಬೇಕು, ಉದಯಿಸದಿರುವಾಗ ಹೋಮಿಸಬೇಕು, ಇದು ಮೊದಲಾದ ವೇದವಾಕ್ಯವು ಸ್ವವ್ಯಾಹತವಾದುದರಿಂದ ಅಪ್ರಮಾಣವು. (3) ಯಾವುದು ಪುನರುಕ್ತವೋ ಅದು ಅಪ್ರಮಾಣವು. ಋಕ್ಶಾಖೆಯಲ್ಲಿ ಹೇಳಿದ ಪುರುಷಸೂಕ್ತಾದಿಗಳನ್ನೇ ಯಜುಃಶಾಖೆಯಲ್ಲಿಯೂ ಹೇಳಿರುವುದರಿಂದ ವೇದವಾಕ್ಯವು ಪುನರುಕ್ತವೂ ಆಗಿರುತ್ತದೆ. ಮತ್ತೂ ಒಂದೇ ಶಾಖೆಯಲ್ಲಿಯೂ 'ಮರುದ್ಭಿರಗ್ನ ಆಗಾಹಿ' ಇತ್ಯಾದಿ ವಾಕ್ಯಗಳಿಗೆ ಆವೃತ್ತಿಯು ಕಂಡದೆ. ಅಲ್ಲದೆ 'ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ' ಪ್ರಥಮ ಋಕ್ಕನ್ನೂ, ಅಂತ್ಯದ ಋಕ್ಕನ್ನೂ ಮೂರಾವರ್ತಿ ಹೇಳತಕ್ಕುದು ಎಂದು ವೇದವು ತಾನೇ ವಿಧಾನಮಾಡಿರುತ್ತದೆ. (4) ನಿರರ್ಥಕವಾದುದೂ ಅಪ್ರಮಾಣವು, 'ಸೃಣ್ಯೇವ ಜರ್ಭರೀ ತುರ್ಭರೀ ಪರ್ಭರೀತಿ' ಇದು ಮೊದಲಾದ ವೇದವಾಕ್ಯಗಳು ನಿರರ್ಥಕಗಳು. (5) ಇತರ ಪ್ರಮಾಣಗಳಿಂದ ಸಿದ್ಧಗಳಾದ ಅರ್ಥಗಳನ್ನು ಪ್ರತಿಪಾದಿಸುವುದು ಅಪ್ರಮಾಣವು. 'ಅಗ್ನಿರ್ಹಿಮಸ್ಯ ಭೇಷಜಂ' ಬೆಂಕಿಯು ಚಳಿಗೆ ಔಷಧವು, ಇದುಮೊದಲಾದ ವೇದವಾಕ್ಯವು ಸಿದ್ಧವಾದ ಅರ್ಥವನ್ನೇ ಪ್ರತಿಪಾದಿಸುವುದು. (6) ಹೀಗೆಯೇ ಪುರಾಣಾದಿಗಳೂ ಅನೃತಾದಿದೋಷಗಳಿಂದೊಡಗೂಡಿವೆ ಎಂದು ತಿಳಿಯತಕ್ಕುದು. (7) ಅಸತ್ಯಾದಿ ದೋಷಗಳಿಂದೊಡಗೂಡಿದ ವಾಕ್ಯಗಳು ವೇದಗಳಲ್ಲಿರುವುದರಿಂದ ಆ ದೃಷ್ಟಾಂತದಿಂದಲೇ ಸಂಪೂರ್ಣ ವೇದಾದಿಗಳೂ ಅಪ್ರಮಾಣಗಳೆಂದು ಊಹಿಸಬೇಕು. (೮) ವೇದಾರ್ಥಭೂತಗಳಾದ ಈಶ್ವರ ಸ್ವರ್ಗಾದಿಗಳೂ ಇತರ ಪ್ರಮಾಣಗಳಿಂದ ತಿಳಿಯಲ್ಪಡುವುದಿಲ್ಲವಾದುದರಿಂದಲೂ ಅವು ಅಪ್ರಮಾಣಗಳೇ ಸರಿ. ವೇದ ಪುರಾಣಗಳು ಅಪ್ರಮಾಣಗಳಾದುದರಿಂದ ಅವುಗಳಿಂದ 'ವಿಷ್ಣುವು ಸದಾಗಮೈಕವಿಜ್ಞೇಯ' ನೆಂದು ಹೇಗೆ ಸಿದ್ಧವಾಗುವುದು? ನಿರ್ದೋಷತ್ವಾದಿಗಳೂ ಹೇಗೆ ಸಿದ್ಧಗಳಾಗುವುವು? ಎಂದು ಶಂಕಿಸಿದರೆ—

**ಮೂ ॥ ನ ಚೈತೇಷಾಂ ವಚನಾನಾಮೇವಾಪ್ರಾಮಾಣ್ಯಂ ॥ ೮ ॥**

**ಅ ॥ ಏತೇಷಾಂ ವಚನಾನಾಮೇವ=ಈ ವಾಕ್ಯಗಳಿಗೇನೇ, ಅಪ್ರಾಮಾಣ್ಯಂ ಚ= ಅಪ್ರಾಮಾಣ್ಯವೂ ಕೂಡ, ನ=ಇಲ್ಲ.**

**ತಾ ॥ (1) ವೇದಗಳು ಅಪ್ರಮಾಣಗಳೆಂಬ ಸಂಶಯವನ್ನು ನಿರಾಕರಿಸದಿದ್ದರೆ ಹಿಂದೆ ಉದಾಹರಿಸಿದ ಪ್ರಮಾಣಗಳಿಂದ ವಿವಕ್ಷಿತಾರ್ಥವು ಸಿದ್ಧವಾಗಲಾರದು. (2) ಅನೃತತ್ವವೆಂದರೆ**

(೧) ಆಪಾತತಃ ಬೇರೆ ಪ್ರಮಾಣಗಳಿಂದ ವಿರೋಧವೋ, (೨) ಸರ್ವಥಾ ವಿರೋಧವೋ, ೧ನೇದ್ದು ಅಯುಕ್ತವು. "ಕೇಶವಂ ಪತಿತಂ ದೃಷ್ಟ್ವಾ ಪಾಂಡವಾ ಹರ್ಷನಿರ್ಭರಾಃ । ರುದಂತಿ ಕೌರವಾಸ್ಸರ್ವೇ ಹಾ ಹಾ ಕೇಶವ ಕೇಶವ॥" ಎಂಬೀ ಪ್ರಮಾಣಭೂತವಾದ ವಾಕ್ಯಕ್ಕೂ ಆಪಾತತಃ "ಪಾಂಡವರು ಬಿದ್ದ ಶ್ರೀಕೃಷ್ಣನನ್ನು ನೋಡಿ ಹರ್ಷಯುಕ್ತರಾದರು. ಕೌರವರೆಲ್ಲರೂ ಎಲೋ ಶ್ರೀ ಕೃಷ್ಣನೇ ಎಂದು ಮರುಗುತ್ತಾರೆ." ಹೀಗೆ ಅರ್ಥವು ತೋರುವುದು. ಇದಕ್ಕೆ ಭಾರತ ಮೊದಲಾದ ಪ್ರಮಾಣಗಳಿಂದ ವಿರೋಧ ಬರುವ ಪ್ರಯುಕ್ತ ವ್ಯಭಿಚಾರವು. (ಸಾಧ್ಯವಿಲ್ಲ, ಹೇತುವದೆ.) ಈ ಪ್ರಮಾಣಕ್ಕೆ ವಾಸ್ತವಿಕವಾದ ಅರ್ಥವು ಈ ರೀತಿಯಾಗಿದೆ. 'ಬಕ ಪಕ್ಷಿಗಳು ನೀರಿನಲ್ಲಿ ಬಿದ್ದುಕೊಂಡಿದ್ದ ಶವ (ಹೆಣ)ವನ್ನು ನೋಡಿ ಸಂತೋಷಯುಕ್ತಗಳಾದುವು. ಕಾಗೆಗಳೆಲ್ಲವೂ ನೀರಿನಲ್ಲಿ ಹೆಣ, ಹಾಯ್ ಹಾಯ್ ಎಂದು ಕೂಗುತ್ತವೆ.' ಈ ರೀತಿಯಾಗಿಟ್ಟು ಕೊಂಡರೆ ಪ್ರಮಾಣಾಂತರ ವಿರೋಧವಿಲ್ಲವು. (೨) ಸರ್ವಥಾ ಪ್ರಮಾಣಾಂತರಗಳಿಂದ ವಿರೋಧ ವೆಂದರೆ ಸಂದಿಗ್ಧಾಸಿದ್ಧಿಯು. ಹೇಗೆಂದರೆ — 'ಪುತ್ರಕಾಮಃ ಪುತ್ರೇಷ್ಟ್ಯಾ ಯಜೇತ' ವಾಕ್ಯಳನ್ನು ಪಡೆಯಲಿಚ್ಛಿಸುವವನು 'ಪುತ್ರೇಷ್ಟಿಯನ್ನು ಮಾಡಬೇಕು' ಎಂದು ಶ್ರುತಿಯಿದ್ದರೂ ಈ ಯಾಗ ಮಾಡಿದವರಿಗೆ ಪುತ್ರೋತ್ಪತ್ತಿಯಾಗದಿರುವುದರಿಂದ ಸರ್ವಥಾ ಬೇರೆ ಪ್ರಮಾಣಗಳಿಂದ ವಿರೋಧ ವಿರುವಪ್ರಯುಕ್ತ ತನ್ನಿಮಿತ್ತವಾಗಿಯೇ ಪುತ್ರೋತ್ಪತ್ತಿರೂಪ ಫಲವು ತೋರದಿರುವುದೋ, ಅಥವಾ ಕರ್ತೃ (ಮಾಡುವವನು) ಕರ್ಮಾದಿಗಳಲ್ಲಿ ಗುಣವು ಇಲ್ಲದಿರುವುದರಿಂದ ತನ್ನಿಮಿತ್ತವಾಗಿ ಆ ಫಲವು ತೋರದಿರುವುದೋ, ಎಂಬೀ ಸಂಶಯವು ಪರಿಹೃತವಾಗುವುದಿಲ್ಲ. (ವಸ್ತುತಸ್ತು ಅಧಿ ಕಾರಿಗಳು ಭಕ್ತಿಪೂರ್ವಕವಾಗಿ ಪುತ್ರೇಷ್ಟಿಯನ್ನು ಸಾಂಗವಾಗಿ ಮಾಡಿದರೆ ಪುತ್ರೋತ್ಪತ್ತಿಯು ಆಗುವುದು. ಕಾರಣ ಶ್ರುತಿಯು ಅಪ್ರಮಾಣವಲ್ಲ.) (3) ವ್ಯಾಹತಿಯಿರುವುದರಿಂದ (೧) ಎರಡು ವಾಕ್ಯಗಳಿಗೂ ಅಪ್ರಾಮಾಣ್ಯವನ್ನುಸಾಧಿಸುವಿರೋ, (೨) ಎರಡರಲ್ಲೊಂದಕ್ಕೋ, ೧ನೇದ್ದು ಅಯು ಕ್ತವು. ಎರಡರಲ್ಲೊಂದು ಪ್ರಮಾಣವಾದರೂ ವ್ಯಾಹತಿಕೂಡುವುದರಿಂದ ಸಂದಿಗ್ಧಬಾಧವೂ ಅಂದರೆ ಸಾಧ್ಯಾಭಾವ ಸಂಶಯವು (ಸಾಧ್ಯವಿಲ್ಲವೆಂದು ಬೇರೆ ಪ್ರಮಾಣದಿಂದ ನಿಶ್ಚಿತವಾದುದು ಬಾಧವು.) ವ್ಯಭಿಚಾರವೂ ಬರುತ್ತದೆ. ಎರಡರಲ್ಲೊಂದು ವಾಕ್ಯಕ್ಕೆ ಪ್ರಾಮಾಣ್ಯವಿದ್ದರೂ ವ್ಯಾಹತಿಯು ಕೂಡಬಹುದು. ಆದರೂ ಯಾವ ವಾಕ್ಯಕ್ಕೆ ಅಪ್ರಾಮಾಣ್ಯವನ್ನು ಸಾಧಿಸುತ್ತೀರೆಂದು ಕೇಳೋಣ! 'ಉದಿತೇ ಜುಹೋತಿ' ಯಾ 'ಅನುದಿತೇ ಜುಹೋತಿ' ಎಂಬುವ ವಾಕ್ಯಕ್ಕೆ ಎಂದು ಹೇಳಬೇಕು; ಹಾಗಾದರೆ ವಸ್ತುತಃ ಅದಕ್ಕೆ ಪ್ರಾಮಾಣ್ಯವೇ ಏಕೆ ಆಗಬಾರದು, ಹೀಗೆ ಎರಡಕ್ಕೂ ಅಪ್ರಾ ಮಾಣ್ಯವು ಸಂದಿಗ್ಧಬಾಧಿತವಾಯಿತು. ಹಾಗೆಯೇ ವ್ಯಾಹತಗಳಾದ ಎರಡರ ಮಧ್ಯದಲ್ಲಿ ವಸ್ತುತಃ ಯಾವುದು ಪ್ರಮಾಣವೋ ಅಲ್ಲಿ ವ್ಯಾಹತತ್ವವದೆ. ಅಪ್ರಾಮಾಣ್ಯವಿಲ್ಲವು, ಹೀಗೆ ವ್ಯಭಿಚಾರವು. (೨) ಎರಡನೇ ಕಲ್ಪದಲ್ಲಿ (ಎರಡರಲ್ಲೊಂದಕ್ಕೆ ಎಂಬುವ ಕಲ್ಪದಲ್ಲಿ) ಪಕ್ಷವಾಗಿ ಇಟ್ಟುಕೊಂಡದ್ದಕ್ಕೇನೇ ಪ್ರಾಮಾಣ್ಯವು ಕೂಡುವುದರಿಂದ ಸಂದಿಗ್ಧಬಾಧವು ಹೊರಟು ಹೋಗು ವುದಿಲ್ಲ. ವ್ಯಾಘಾತವೂ ಕೂಡ ೧ಆಪಾತತಃ ನೋಡುವಾಗಲೋ, ೨ ಸರ್ವ ಪ್ರಕಾರದಿಂದಲೋ, ೧ನೇದ್ದು ಅಯುಕ್ತವು. 'ಕೇಶವಂ ಪತಿತಂ' ಎಂಬುವ ವಾಕ್ಯದಲ್ಲಿ ವ್ಯಭಿಚಾರವು. ೨ನೇದರಲ್ಲಿ ಸಂದಿಗ್ಧಾಸಿದ್ಧಿಯು. ಇಲ್ಲಿ ಸರ್ವಥಾ ವ್ಯಾಹತಿಯೇ ಆದೆಯೋ ಅಥವಾ ಅಧಿಕಾರ್ಯಾದಿಗಳಿಗೆ ಭೇದವಿರುವುದರಿಂದ ವ್ಯವಸ್ಥೆಯುದೆಯೋ ಎಂಬುವ ಸಂಶಯವು ಹೊರಟುಹೋಗುವುದಿಲ್ಲ. (4) ಪೌನರುಕ್ತಿಯಾದರೂ ಒಂದೇ ಅರ್ಥವನ್ನು ಪ್ರತಿಪಾದಿಸುವ ವಕ್ಯಗಳು ಬೇರೆ ಬೇರೆಯಾಗಿ ಉಕ್ತ ಶಬ್ದರೂಪಗಳಾದ ಪ್ರಮಾಣಗಳ ಸಮೂಹದಲ್ಲಿ ವ್ಯಭಿಚಾರ ಬರುವುದರಿಂದ (ಅಪ್ರಾಮಾಣ್ಯ ರೂಪ ವಾದ ಸಾಧ್ಯವಿಲ್ಲವಿರುವಲ್ಲಿ ಪೌನರುಕ್ತ್ಯರೂಪವಾದ ಹೇತುವಿರುವುದರಿಂದ) ಅಪ್ರಾಮಾಣ್ಯವನ್ನು

ಸಾಧಿಸತಕ್ಕುದು ಆಗುವುದಿಲ್ಲ. ವೈಯರ್ಥ್ಯವನ್ನಾದರೂ ಕಥಂಚಿತ್ ಸಾಧಿಸಬಹುದು, ಆದರೆ ಅದೂ ಕೂಡಲಾರದು. ಇದು ಪುನರುಕ್ತವೇ ಆಗಿಯದೋ ಅಥವಾ ಅಧಿಕಾರ್ಥವನ್ನು ವಿಧಾನಮಾಡುವುದಕ್ಕಾಗಿ ಅನುವಾದಾದಿರೂಪವಾಗಿಯದೋ ಎಂದು ಸಂದಿಗ್ಧವೇ ಆಗಿಯದೆ. (5) ನಿರರ್ಥಕತ್ವವೂ ಆಪಾತತಃ ಎಂದರೆ— ವ್ಯಭಿಚಾರವು. ಸರ್ವಪ್ರಕಾರದಿಂದಲೂ ಎಂದರೆ— ಸಂದಿಗ್ಧವಾಗಿಯದೆ. ಶಕ್ತಿತಾತ್ಪರ್ಯಗಳ ಪರಿಜ್ಞಾನವಿಲ್ಲದಿರುವುದರಿಂದ ಅರ್ಥಜ್ಞಾನವಾಗುವುದಿಲ್ಲವೋ ಅಥವಾ ಸರ್ವಥಾ ಅರ್ಥವಿಲ್ಲದಿರುವುದರಿಂದಲೋ ಎಂದು ಸಂಶಯವೇ ಬರುವುದು. (6) 'ಅಗ್ನಿರ್ಹಿಮಸ್ಯ ಭೇಷಜಂ' ಇತ್ಯಾದಿಗಳಲ್ಲಿ ಸಂವಾದವು ತೋರುವುದರಿಂದ ಸಂವಾದವಿಲ್ಲ ಎನ್ನುವುದು ಭಾಗಾಸಿದ್ಧವು. ಮತ್ತು ಯಥಾರ್ಥವಾಗದಿರುವುದರಿಂದಲೇ ಸಂವಾದವಿಲ್ಲವೋ ಅಥವಾ ಆ ಅರ್ಥಕ್ಕೆ ಅದೊಂದೇ ಪ್ರಮಾಣವಿರುವುದರಿಂದಲೋ ಎಂದು ಸಂಶಯ ಬರುವುದರಿಂದ ಪ್ರಮಾಣವಲ್ಲವು ॥ ೮ ॥

ಹೀಗೆ ಹೇತುಗಳು ಸಂದಿಗ್ಧಾಸಿದ್ಧಿ ಮೊದಲಾದ ದೋಷಗಳಿಂದೊಡಗೂಡಿರುವುದರಿಂದ ವೇದಗಳು ಅಪ್ರಮಾಣಗಳೆಂದು ನಿಶ್ಚಯವಾಗದಿರಲಿ. ಆದರೂ ಅನೃತತ್ವಾದಿಗಳಿಂದ ಅಪ್ರಮಾಣಗಳಾದ ಪ್ರಯುಕ್ತ ಫಲವಿಸಂವಾದವೋ, ಅಥವಾ ವೈಗುಣ್ಯಾದಿ ನಿಮಿತ್ತಕವೋ ಎಂದು ಸಂಶಯವಿದ್ದೇ ಇದೆ. ತಥಾ ಚ ತಮ್ಮ ಇಷ್ಟಸಿದ್ಧಿಗಾಗಿ ವೇದ ಪುರಾಣವಚನಗಳನ್ನುದಾಹರಿಸಿದ್ದು ಅಯುಕ್ತವು. ಎಂದಾಶಂಕಿಸಿದರೆ —

**ಮೂ ॥ ಅಪೌರುಷೇಯತ್ವಾದ್ವೇದಸ್ಯ ॥ ೯ ॥**

ಅ ॥ ವೇದಸ್ಯ=ವೇದಕ್ಕೆ, ಅಪೌರುಷೇಯತ್ವಾತ್=ಪೌರುಷೇಯತ್ವವಿಲ್ಲದಿರುವುದರಿಂದ, ಅಂದರೆ ವೇದವು ಅನಾದಿನಿತ್ಯವಾದ ಪ್ರಯುಕ್ತ.

ತಾ ॥ (1) 'ವಚನಾನಾಂ' ಎಂದು ಪ್ರಸ್ತುತವಾಗಿದ್ದರೂ 'ವೇದಸ್ಯ' ಎಂದು ಪುನಃ ಹೇಳಿರುವುದು ಪುರಾಣವಚನಗಳೂ ಪ್ರಸ್ತುತಗಳಾಗಿರುವುದರಿಂದ 'ವಚನಾನಾಂ' ಎಂದು ಪ್ರಯೋಗಿಸಿ ಅಪ್ರಾಮಾಣ್ಯಾಭಾವವನ್ನು ಸಾಧಿಸಲಿಕ್ಕೆ ಪುರಾಣವನ್ನು ಪಕ್ಷೀಕರಿಸಿದರೆ ಅಪೌರುಷೇಯತ್ವ ಹೇತುವು ಅಲ್ಲಿಲ್ಲದಿರುವುದರಿಂದ ಭಾಗಾಸಿದ್ಧರೂಪದೋಷವು ಬರುವುದರಿಂದ ಅದನ್ನು ಬಿಟ್ಟು ಈಗ ಇಲ್ಲಿ ವೇದವೇ ಪಕ್ಷವು ಎಂದು ತಿಳಿಸುವುದಕ್ಕಾಗಿ ಹೇಳಿದ್ದು. ಪುರಾಣಕ್ಕೆ ಅಪ್ರಾಮಾಣ್ಯಾಭಾವವನ್ನು 'ಇತಿಹಾಸ ಪುರಾಣಃ ಪಂಚಮಃ' ಇತ್ಯಾದಿಗಳಿಂದ ಸಾಧಿಸುವೆವು. (2) ಕರಣಗಳಿಗೆ ಅಪ್ರಾಮಾಣ್ಯವೆಂದರೆ ಅಬೋಧಕತ್ವವು (ತಿಳಿಸಿಕೊಡದಿರುವಿಕೆಯು) ಯಾ ವಿಪರೀತವಾಗಿ ತಿಳಿಸಿಕೊಡುವಿಕೆಯು, ಅವುಗಳಲ್ಲಿ ಶಬ್ದವು 'ಪದವೆಂದು ಸಮ್ಮತಗಳಾದವುಗಳಿಗೆ ವಾಚ್ಯವಾದ ಅರ್ಥವಿಲ್ಲದಿರುವುದರಿಂದಲೂ, ವಾಚ್ಯವಾದ ಅರ್ಥವಿದ್ದರೂ, ಅನ್ವಯವಿಲ್ಲದಿರುವುದರಿಂದಲೂ ಹೀಗೆ ಎರಡುಪ್ರಕಾರ ಅಬೋಧಕತ್ವವು ಕೂಡಬಹುದು.' ವಿಪರೀತವಾದ ಅನ್ವಯದಿಂದ ವಿಪರೀತ ಬೋಧಕವಾಗುವುದು. ಈ ನಿರಭಿಧೇಯತ್ವಾದಿಗಳು ಸ್ವತಂತ್ರ ವಕ್ತೃಪುರುಷನ ದೋಷಾಧೀನಗಳಾಗಿವೆ, ಶಬ್ದದ ಸ್ವಭಾವಗಳಲ್ಲ. ಹೀಗೆ ಅಪ್ರಾಮಾಣ್ಯಕ್ಕೆ ಪರತಸ್ತ್ವವನ್ನು ಅಂಗೀಕರಿಸಬೇಕು ಎಂದು ಮೇಲೆ ಹೇಳುವೆವು. (3) ಪುರುಷನು ಅಜ್ಞಾನದಿಂದಾಗಲೀ, ವಿಪರೀತಜ್ಞಾನದಿಂದಾಗಲೀ ಪ್ರಮಾದದಿಂದಾಗಲೀ, ಇಂದ್ರಿಯಗಳು ಪಟುಗಳಾಗದಿರುವುದರಿಂದಾಗಲೀ ವಾಚ್ಯಾರ್ಥಗಳಿಲ್ಲದಿರುವ ಅಥವಾ ಅನ್ವಯವಿಲ್ಲದಿರುವ ಶಬ್ದಗಳನ್ನು ಪ್ರಯೋಗಿಸುವನು. (4) ಪ್ರಮಾದದಿಂದ ಇಂದ್ರಿಯಗಳಲ್ಲಿ ಪಟುತ್ವವಿಲ್ಲದಿರುವುದರಿಂದಲೂ, ವಿಪರೀತಜ್ಞಾನದಿಂದಲೂ, ಪರವಂಚನೇಚ್ಛೆ

ಯಿಂದಲೂ ವಿಪರೀತಾನ್ವಯವುಳ್ಳ ಶಬ್ದಗಳನ್ನು ಪ್ರಯೋಗಿಸುತ್ತಾನೆ. (5) ಶಬ್ದಕ್ಕೆ ಅಪ್ರಾಮಾಣ್ಯ ವಿಲ್ಲವೆಂಬುವುದು ಎರಡುಪ್ರಕಾರವಾಗಿ. ಅಂದರೆ ಶಬ್ದವು ಅಪೌರುಷೇಯವಾಗಿದ್ದರೂ ಹೇಳುವವ ನಲ್ಲಿ ಆಪ್ತಿಯಿದ್ದರೂ ಕೂಡಬಹುದು. (ಆಪ್ತಿಯೆಂದರೆ ೧ ಹೇಳಲಿಷ್ಟವಾದ ಅರ್ಥದ ತತ್ವಜ್ಞಾನವು, ೨ ಹೇಳಲಿಚ್ಛೆಯು, ೩ ಇಂದ್ರಿಯಪಾಟವವು, ೪ ಪರರಿಗೆ ಮೋಸಕೊಡುವ ಇಚ್ಛೆ ಇಲ್ಲದಿರು ವುದು.) ಅದರಲ್ಲಿ ವೇದವು ಅಪೌರುಷೇಯವಾದಪ್ರಯುಕ್ತ ಪುರುಷದೋಷಾಧೀನವಾದ ದೋಷ ವಿರಹಿತವಾಗಿದೆ. ದೋಷರೂಪವಾದ ಕಾರಣವೇ ಇಲ್ಲದಿದ್ದಮೇಲೆ ಅಪ್ರಾಮಾಣ್ಯರೂಪವಾದ ಕಾರ್ಯವನ್ನು ಶಂಕಿಸಲಿಕ್ಕೂ ಸಾಧ್ಯವಿಲ್ಲ. ಆ ಕಾರಣ ಅಪ್ರಮಾಣವಲ್ಲವೆಂದೇ ನಿಶ್ಚಿತವಾಗು ವುದು. (6) ತಥಾಚ ೧ ವೇದಃ=ವೇದವು, ಅಪ್ರಮಾಣಂ ನ=ಅಪ್ರಮಾಣವಲ್ಲವು, ಅಪ್ರಾ ಮಾಣ್ಯಕಾರಣದೋಷಶೂನ್ಯತ್ವಾತ್=ಅಪ್ರಾಮಾಣ್ಯಕ್ಕ ಹೇತುವಾದ ದೋಷವೇ ಇಲ್ಲದಿರುವುದ ರಿಂದ, ಪ್ರತ್ಯಕ್ಷಾದಿವತ್=ಪ್ರತ್ಯಕ್ಷಾದಿ ಪ್ರಮಾಣಗಳಂತೆಯೇ. ೨ ಶಬ್ದದೋಷಾಶ್ಚ=ಶಬ್ದದಲ್ಲಿ ಇರುವ ದೋಷಗಳು, ಪುರುಷದೋಷಾಧೀನಾಃ = ಪುರುಷರ ದೋಷವನ್ನಧೀನೀಕರಿಸಿರತಕ್ಕವು ಗಳು,(ಅಂದರೆ ಪುರುಷದೋಷಗಳಿಂದುಂಟಾಗುವವು.)ತದನ್ವಯವ್ಯತಿರೇಕಾನುವಿಧಾಯಿತ್ವಾತ್= ಪುರುಷದೋಷಾನ್ವಯವ್ಯತಿರೇಕಗಳನ್ನನುಸರಿಸಿರುವುದರಿಂದ,(ಅಂದರೆ ಪುರುಷರಲ್ಲಿ ದೋಷವಿದ್ದರೆ ಶಬ್ದದಲ್ಲಿ ದೋಷವು, ಇಲ್ಲವಾದರೆ ಶಬ್ದದಲ್ಲಿ ದೋಷವಿಲ್ಲದಿರುವುದು,) ಯತ್ ಯದನ್ವಯ ವ್ಯತಿ ರೇಕಾನುವಿಧಾಯಿ=ಯಾವುದು ಯಾವುದರ ಅನ್ವಯ ವ್ಯತಿರೇಕಗಳನ್ನು (ಸಂಬಂಧ ತದಭಾವ ಗಳನ್ನು) ಅನುಸರಿಸಿರುವುದೋ, ತತ್ ತದಧೀನಂ=ಅದು ಅದರ ಅಧೀನವು, ಯಥಾ ಪಟಃ ತಂತ್ವಧೀನಃ=ಹೇಗೆಂದರೆ ಪಟವು ತಂತುಗಳ ಅಧೀನವು, ಅಪ್ರಾಮಾಣ್ಯಸಾಧಕಗಳಾದ ಅನ್ಯ ತತ್ವಮೊದಲಾದ ಹೇತುಗಳು ಅಪ್ರಾಮಾಣ್ಯಾಭಾವನಿಶ್ಚಯವಿಲ್ಲದಿರುವಾಗ ಸಂದಿಗ್ಧಸಿದ್ಧಗಳು. (ಇಲ್ಲಿ ಸರ್ವಥಾ ಇತರ ಪ್ರಮಾಣಗಳಿಂದ ವಿರೋಧವಿದ್ದುದರಿಂದಲೇ ಫಲವು ತೋರದಿರುವುದೋ, ಅಥವಾ ವೈಗುಣ್ಯಾದಿ ನಿಮಿತ್ತಕವೋ ಎಂಬ ಸಂಶಯವು ಪರಿಹೃತವಾಗದಿರುವುದರಿಂದ) ಅಪೌ ರುಷೇಯವಾದುದರಿಂದ ಅಪ್ರಮಾಣವಲ್ಲವೆಂದು ನಿಶ್ಚಿತವಾಗೋಣ ಫಲವಿಸಂವಾದವು ವೈಗುಣ್ಯಾದಿ ನಿಮಿತ್ತಕವೆಂದು ನಿಶ್ಚಿತವಾದಪ್ರಯುಕ್ತ ನಿಶ್ಚಿತಾಸಿದ್ಧಗಳೇ ಆಗಿವೆ. (7) ಈಪ್ರಕಾರ ಅಪ್ರಮಾಣ ವಲ್ಲವೆಂದು ನಿಶ್ಚಿತವಾಗೋಣ ಅಪೌರುಷೇಯತ್ವರೂಪಹೇತುವಿನಿಂದ ಸಾಧಿಸಿದ ಪುರುಷದೋಷಾ ಧೀನವಾದ ಅಬೋಧಕತ್ವ, ವಿಪರೀತಬೋಧಕತ್ವವಿಲ್ಲದಿರುವುದರಿಂದ ಪ್ರಮಾಣವೆಂದೇ ನಿಶ್ಚಿತ ವಾಗುವುದು. (೮) ಮಹಾಜನರು ಪರಿಗ್ರಹಿಸಿದರಿಂದಲೇ ವೇದವು ಪ್ರಮಾಣವು ಎಂದು ನಿಶ್ಚೈಸ ಬಹುದು. ಅಪೌರುಷೇಯತ್ವರೂಪಹೇತುವಿನಿಂದ ಎಂದು ಏಕೆ ಅಂಗೀಕರಿಸಬೇಕು? ಎಂದಾ ಕ್ಷೇಪಿಸಿದರೆ ೧ ಮಹತ್ ಶಬ್ದದಿಂದ ಹೆಚ್ಚು ಸಂಖ್ಯೆಯನ್ನಂಗೀಕರಿಸಿದರೆ ವೇದವನ್ನು ಸ್ವೀಕರಿ ಸಿದವರು ೧೦೦ ಯಾ ೧೦೦೦ ಎಂದು ತಿಳಿದುಕೊಳ್ಳಲು ಅಶಕ್ಯವಾದುದರಿಂದ ಸಂದಿಗ್ಧಾಸಿದ್ಧವು. ಕೀಕಟದೇಶವಿಶೇಷವಾದ ಬುದ್ಧಗಯಾದಿಗಳಲ್ಲಿ ಬೌದ್ಧಾದಿಶಾಸ್ತ್ರಗಳನ್ನು ಬಹುಮಂದಿ ಅಂಗೀಕರಿ ಸಿರುವುದರಿಂದ ವ್ಯಭಿಚರಿತವು. ೨ ಮಹತ್ ಶಬ್ದದಿಂದ ಪೂಜ್ಯತನವು ವಿವಕ್ಷಿತವೆಂದಂಗೀಕರಿಸಿದರೆ ವೇದವನ್ನು ಪರಿಗ್ರಹಿಸಿದವರಿಗೆ ಪೂಜ್ಯತನವನ್ನು ಪರರು (ಬೌದ್ಧರು) ಅಂಗೀಕರಿಸಲಿಲ್ಲ. ಬೌದ್ಧ ಶಾಸ್ತ್ರವನ್ನು ಪ್ರಮಾಣವೆಂದಂಗೀಕರಿಸಿದವರಿಗೆ ಪೂಜ್ಯತನವನ್ನು ಬೌದ್ಧರು ಅಂಗೀಕರಿಸಿರುವರು. ಆದಕಾರಣ ಅಪೌರುಷೇಯತ್ವದಿಂದಲೇ ಪ್ರಮಾಣವೆಂದು ನಿಶ್ಚೈಸಬೇಕು ॥ ೯ ॥

ಹೀಗಾದರೆ ವೇದವು ಅಪೌರುಷೇಯವಾದುದುದರಿಂದ ಅಪ್ರಾಮಾಣ್ಯಕ್ಕೆ ಕಾರಣವಾದ ದೋಷರಹಿತವಾಗಿದೆ. ಅದರಿಂದಲೇ ಅಪ್ರಮಾಣವಲ್ಲವೆಂದು ನಿಶ್ಚಯವೂ, ಪ್ರಮಾಣವೆಂದು ನಿಶ್ಚಯವೂ ಆಗಲಿ,ಆದರಿಂದಲೇ ಫಲವಿಸಂವಾದಾದಿಗಳನ್ನುಅವಶ್ಯವಾಗಿ ವೈಗುಣ್ಯಾದಿನಿಮಿತ್ತಕ

ವೆಂದೇ ಕಲ್ಪಿಸಬೇಕಾದುದರಿಂದ ಪರರು ಹೇಳಿರುವ ಹೇತುಗಳೆಲ್ಲವೂ, ಅಸಿದ್ಧಗಳೆಂದೂ ನಿಶ್ಚಯವಾಗಲಿ, ಪುರಾಣವಾಕ್ಯವು ಅಪೌರುಷೇಯವಲ್ಲದಿರುವುದರಿಂದ ಅದಕ್ಕೆ ಪ್ರಾಮಾಣ್ಯಾದಿ ನಿಶ್ಚಯವು ಹೇಗೆ ಆಗಬಹುದೆಂದರೆ—

**ಮೂ || ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ ಇತಿ ತದ್ಗೃಹೀತತ್ವಾಚ್ಚ || ೧೦ ||**

ಅ || ಇತಿಹಾಸಪುರಾಣಃ = ಇತಿಹಾಸಪುರಾಣಾಖ್ಯವಾದ ಗ್ರಂಥವು, ವೇದಾನಾಂ= ಋಗಾದಿ ವೇದಗಳಿಗೆ, ಪಂಚಮಃ=ಪಂಚತ್ವಸಂಖ್ಯಾಪೂರಕವಾದ, ವೇದಃ=ವೇದವು, ಇತಿ= ಹೀಗೆ, ತದ್ಗೃಹೀತತ್ವಾಚ್ಚ=ಅಪ್ರಾಮಾಣ್ಯಸಂಶಯ ಶೂನ್ಯವಾದ ಪ್ರಮಾಣವೆಂದು ನಿಶ್ಚಿತವಾದ ವೇದದಿಂದ ವೇದಸಮಾನವಾಗಿಯೇ ಸ್ವೀಕರಿಸಲ್ಪಟ್ಟ ಪ್ರಯುಕ್ತ, (ಪುರಾಣವಚನಕ್ಕೂ ಕೂಡ ಅಪ್ರಾಮಾಣ್ಯಾಭಾವಾದಿಗಳು ನಿಶ್ಚಿತಗಳಾದುದರಿಂದ ಅವುಗಳನ್ನು ಉದಹರಿಸಿದ್ದು ಯುಕ್ತವೇಸರಿ.)

ತಾ || (1) 'ಅನುಕ್ತಂ ಪಂಚಭಿರ್ವೇದೈರ್ನ ವಸ್ತ್ವಸ್ತಿ ಕುತಶ್ಚನ' ೫ ವೇದಗಳಿಂದ ಹೇಳಲ್ಪಡದೆ ಇದ್ದದ್ದು ಯಾವ ವಸ್ತುವೂ ಇಲ್ಲ. ಇತ್ಯಾದಿಗಳಲ್ಲಿ ಋಗಾದಿ ವೇದಗಳಿಗೆ ಪಂಚತ್ವ ಸಂಖ್ಯೆಯು ಹೇಳಲ್ಪಟ್ಟದೆ. ಅದರಲ್ಲಿ ಋಗಾದಿಗಳು ೪ ನಾಲ್ಕು ಪ್ರಸಿದ್ಧಗಳು. ಮತ್ತೊಂದು ೫ ನೇ ವೇದವು ಇತಿಹಾಸಪುರಾಣರೂಪವಾದುದೆಂದು ತಿಳಿಯತಕ್ಕದು. (2) ಇಲ್ಲಿ ಯದ್ಯಪಿ ಇತಿಹಾಸಪುರಾಣಃ' ಎಂದು ಸಾಮಾನ್ಯವಾಗಿ ಹೇಳಲ್ಪಟ್ಟದೆ. ಆದರೂ 'ಅವಿರುದ್ಧಂ ತು ಯತ್ತ್ವಸ್ಯ' ಪ್ರಮಾಣಂ ತಚ್ಚ ನಾನ್ಯಥಾ । ಏತದ್ವಿರುದ್ಧಂ ಯತ್ತು ಸ್ಯಾನ್ನ ತನ್ಮಾನಂ ಕಥಂಚನ' ಇತ್ಯಾದಿ ಪ್ರಮಾಣಗಳ ಸಾಮರ್ಥ್ಯದಿಂದ ವೇದಾನುಕೂಲಗಳಾದ ಇತಿಹಾಸಪುರಾಣಗಳಿಗೇನೇ ಸ್ವೀಕಾರವೆಂದು ತಿಳಿಯಬೇಕು. (3) ಆಪ್ತನು ಹೇಳಿರುವುದರಿಂದಲೇ ಪುರಾಣವು ಅಪ್ರಮಾಣವಲ್ಲವೆಂದು ನಿಶ್ಚಯಿಸಬಹುದಷ್ಟೆ! ಎಂದರೆ— ಆಪ್ತಿನಿಶ್ಚಯವನ್ನೂ ಕೂಡ ಕೊನೆಗೆ ವೇದವನ್ನನುಸರಿಸದೆ ಮಾಡಲು ಸಾಧ್ಯವಿಲ್ಲ. ಕಾರಣ ಈ ರೀತಿಯಾಗಿಯೇ ನಿರೂಪಿಸಿರುವರು || ೧೦ ||

ವೇದಾದಿಗಳಿಗೆ ಪ್ರಾಮಾಣ್ಯಸಮರ್ಥನೆಯು ಸಮಾಪ್ತವಾಯಿತು.

ಆಗ ವೇದಗಳಿಗೆ ಪ್ರಾಮಾಣ್ಯವನ್ನು ಹೇಳುವ ತಾರ್ಕಿಕಾದಿಗಳೂ, ಅಪ್ರಾಮಾಣ್ಯವನ್ನು ಹೇಳುವ ಬೌದ್ಧಾದಿಗಳೂ ಆಶಂಕಿಸುವರು. ವೇದವು ಅಪೌರುಷೇಯವೆಂದು ಹೇಳಕೂಡದು. ವಾಕ್ಯತ್ವ ಅಪೌರುಷೇಯತ್ವವಿವೆರಡು ಎಷ್ಟುಮಾತ್ರಕ್ಕೂ ಏಕತ್ರ ಕೂಡಲಾರವು. ಅದನ್ನು ಸಾಧಿಸಲಿಕ್ಕೂ ಕೂಡದು. ಸಂಭಾವಿತವಾದುದೇ ಸಾಧಿಸಲಿಕ್ಕೆ ಯೋಗ್ಯವಾಗುವುದು. 'ಸಂಭಾವಿತಃ ಪ್ರತಿಜ್ಞಾಯಾ ಅರ್ಥಃ ಸಾಧ್ಯೇತ ಹೇತುನಾ । ನ ತಸ್ಯ ಹೇತುಭಿಸ್ತ್ರಾಣಮುತ್ಪತನ್ನೇವ ಯೋ ಮೃತಃ ||' ಪ್ರತಿಜ್ಞೆಯಲ್ಲಿ ವಿಶೇಷಣೀಭೂತವಾದ ಸಾಧ್ಯಧರ್ಮವು ಸಂಭಾವಿತವಾಗಿದ್ದರೆ ಹೇತುವಿನಿಂದ ಸಾಧಿಸಬಹುದು. ಹುಟ್ಟುವಾಗಲೇ ಯಾವುದು ಸತ್ತುಹೋಗಿಯದೋ, ಅದನ್ನು ಹೇತುಗಳಿಂದ ರಕ್ಷಿಸಲು ಸಾಧ್ಯವಿಲ್ಲ. ಆನೆಯು ನನ್ನ ಕಿವಿಯಲ್ಲಿ ಹೋಗಿ ಗರ್ಜಿಸುತ್ತದೆ ಎಂದು ಸಾಧಿಸುವುದು ಯೋಗ್ಯವಾಗಲಾರದಷ್ಟೆ! ಅದು ಆದರಣೀಯವೇ ಅಲ್ಲವೆಂದಾಶಂಕಿಸಿದರೆ —

**ಮೂ || ನ ಚಾಪೌರುಷೇಯಂ ವಾಕ್ಯಮೇವ ನಾಸ್ತೀತಿ ವಾಚ್ಯಂ || ೧೧ ||**

ಅ || ಅಪೌರುಷೇಯಂ = ಪುರುಷಕರ್ತೃಕವಲ್ಲದಿರುವ, ವಾಕ್ಯಮೇವ= ವಾಕ್ಯವೇ, ನಾಸ್ತಿ=ಇಲ್ಲ. ಇತಿ=ಹೀಗೆ, ನ ಚ ವಾಚ್ಯಂ=ಹೇಳಕೂಡದು || ೧೧ ||

ಏಕೆ ಹೇಳಕೂಡದೆಂದರೆ—

**ಮೂ ॥ ತದಭಾವೇ ಸರ್ವಸಮಯಾಭಿಮತಧರ್ಮಾದ್ಯಸಿದ್ಧೇಃ ॥ ೧೨ ॥**

ಅ ॥ ತದಭಾವೇ = ಅಪೌರುಷೇಯವಾಕ್ಯವಿಲ್ಲವಾದರೆ, ಸರ್ವಸಮಯಾಭಿಮತಧರ್ಮಾದ್ಯಸಿದ್ಧೇಃ= ಎಲ್ಲಾ ಸಿದ್ಧಾಂತಗಳಿಗೂ ಸಮ್ಮತಗಳಾದ ಧರ್ಮಾದಿಗಳು ಸಿದ್ಧಗಳಾಗದೆ ಹೋಗಬೇಕಾಗುವುದು.

ತಾ ॥ (1) ಧರ್ಮ ಮೊದಲಾದ ಅತೀಂದ್ರಿಯ ವಸ್ತುಗಳು ಸರ್ವಸಿದ್ಧಾಂತಗಳಿಗೂ ಸಮ್ಮತವು. ಆ ಕಾರಣ ಅದನ್ನು ಎಲ್ಲಾ ಸಿದ್ಧಾಂತಿಗಳೂ ಪ್ರಾಮಾಣಿಕವೆಂದೇ ಅಂಗೀಕರಿಸಬೇಕು. ಪ್ರಮಾಣಸಿದ್ಧವೆಂದು ಅಂಗೀಕರಿಸಿದ ಅರ್ಥವೇ ಶಾಸ್ತ್ರಸಿದ್ಧಾಂತವಾಗುವುದು. ಅಪೌರುಷೇಯವಾಕ್ಯವಲ್ಲದೆ ಧರ್ಮಾದಿಗಳನ್ನು ಸಾಧಿಸುವ ಪ್ರಮಾಣವಿಲ್ಲ. ಆದಕಾರಣ ಅಪೌರುಷೇಯವಾಕ್ಯವಿಲ್ಲದಿದ್ದರೆ ಧರ್ಮಾದಿಗಳು ಸಿದ್ಧಗಳಾಗದೆ ಹೋಗಬೇಕಾಗುವುವು. ಅಪ್ರಾಮಾಣಿಕವಾದ ಅರ್ಥವು ಸರ್ವಶಾಸ್ತ್ರಗಳಿಗೆ ಅಭಿಮತವಾಗಲಾರದು. ಆದಪ್ರಯುಕ್ತ ಎಲ್ಲಾ ಸಿದ್ಧಾಂತಿಗಳೂ ಧರ್ಮಾದಿಗಳನ್ನು ನಿಶ್ಚಯಿಸುವುದಕ್ಕಾಗಿ ಅಪೌರುಷೇಯವಾಕ್ಯವನ್ನು ಅಂಗೀಕರಿಸಲೇ ಬೇಕು. ತಥಾಚ ವಾಕ್ಯತ್ವ ಅಪೌರುಷೇಯತ್ವಗಳು ಒಂದು ಕಡೆಯಲ್ಲಿ ಮಿಲಿತಗಳಾಗುತ್ತವೆ. ಎಂದು ಸರ್ವರೂ ಅಂಗೀಕರಿಸಲು ವೇದವು ಅಪೌರುಷೇಯವು ಎನ್ನುವುದು ಅಸಂಭಾವಿತವು ಹೇಗೆ ಆದೀತು? ॥ ೧೨ ॥

ವೈಶೇಷಿಕಾದಿಗಳೂ, ಬೌದ್ಧಾದಿಗಳೂ ಅತೀಂದ್ರಿಯವಾದ ಧರ್ಮ ಮೊದಲಾದ ವಸ್ತುಗಳನ್ನು ಅಂಗೀಕರಿಸಿರುವುದರಿಂದ ಅವರನ್ನು ಕುರಿತು ಅಪೌರುಷೇಯವಾಕ್ಯವನ್ನಂಗೀಕರಿಸಬೇಕೆಂದು ಆಪಾದಿಸಬಹುದು. ಚಾರ್ವಾಕನಿಗೆ ಧರ್ಮಾದ್ಯಭಿಮಾನವೇ ಇಲ್ಲದಿರುವುದರಿಂದ ಆತನನ್ನು ಕುರಿತು ಆಪಾದಿಸುವುದು ಯುಕ್ತವಲ್ಲ. ಆತನಿಗೆ ಇಷ್ಟವಾದ ವಸ್ತುವು ಪ್ರತ್ಯಕ್ಷದಿಂದಲೇ ಸಿದ್ಧವಾಗುವುದರಿಂದ ಅತೀಂದ್ರಿಯವನ್ನಂಗೀಕರಿಸಲಾರನು. ತಥಾಚ ಚಾರ್ವಾಕನನ್ನು ಕುರಿತು ಅಸಂಭಾವನಾ ಪರಿಹಾರವಾಗುವುದಿಲ್ಲ, ಎಂದಾಶಂಕಿಸಿದರೆ — ಚಾರ್ವಾಕನಿಗೂ ದರ್ಮಾದ್ಯಂಗೀಕಾರವನ್ನು ಮಾಡಿಸಿ ಧರ್ಮಾದಿಗಳನ್ನ ಸಾಧಿಸತಕ್ಕ ಅಪೌರುಷೇಯವಾಕ್ಯವನ್ನಂಗೀಕಾರಮಾಡಿಸುವೆನು ಎಂಬ ಅಭಿಪ್ರಾಯದಿಂದ ಮೂಲಕಾರರು ಹೇಳುತ್ತಾರೆ.

**ಮೂ ॥ ಯಸ್ಯ ತೌ ನಾಭಿಮತೌ ನಾಸೌ ಸಮಯೀ ॥ ಸಮಯಪ್ರಯೋಜನಾಭಾವಾತ್ ॥ ೧೩ ॥**

ಅ ॥ ಯಸ್ಯ=ಯಾರಿಗೆ, ತೌ=ಆ ಧರ್ಮಾಧರ್ಮಗಳು (ಅತೀಂದ್ರಿಯವಸ್ತುಗಳೆಲ್ಲವೂ), ನಾಭಿಮತೌ=ಸಮ್ಮತಗಳಲ್ಲವೋ, ಅಸೌ=ಈತನು, ಸಮಯೀ=ಸಿದ್ಧಾಂತಿಯು, ನ ಸ್ಯಾತ್ = ಆಗಲಾರನು. (ಧರ್ಮಾದಿಗಳನ್ನಂಗೀಕರಿಸದಿರುವವನು ಶಾಸ್ತ್ರಕರ್ತನಾಗದೆ ಹೋಗಬೇಕಾಗುವನು.) ಏಕೆಂದರೆ— ಸಮಯಪ್ರಯೋಜನಾಭಾವಾತ್ =ಚಾರ್ವಾಕಶಾಸ್ತ್ರಕ್ಕೆ ವಿಷಯಾದಿಗಳಿಲ್ಲದಿರುವುದರಿಂದ.

ತಾ ॥ (1) 'ಪ್ರಯುಜ್ಯತೇ ಅನೇನ' ನಿರ್ಮಿಸುವವನು ನಿರ್ಮಾಣಮಾಡುವ ವಿಷಯದಲ್ಲಿಯೂ, ಕೇಳುವವನು ಕೇಳುವುದರಲ್ಲಿಯೂ ಯಾವುದರಿಂದ ಪ್ರೇರಿಸಲ್ಪಡುವನೋ ಅದು ಪ್ರಯೋಜನವು, ಅಂದರೆ ವಿಷಯವು ಮತ್ತು ಸಾಧ್ಯವಾದ ಫಲವು. ಚಾರ್ವಾಕ ಶಾಸ್ತ್ರಕ್ಕೆ ವಿಷಯಪ್ರಯೋ

ಜನಾದಿಗಳೇವೇ ಇಲ್ಲವೆಂದು ಆಗಬೇಕಾಗುವುದು. (2) ಚಾರ್ವಾಕ ಶಾಸ್ತ್ರಕ್ಕೆ ಪ್ರತ್ಯಕ್ಷಸಿದ್ಧವಾದುದು ವಿಷಯವೆಂದಾಗಲಾರದು. ಪ್ರತ್ಯಕ್ಷದಿಂದಲೇ ಸಿದ್ಧವಾಗುವಾಗ ಶಾಸ್ತ್ರದ ಅಪೇಕ್ಷೆಯಿಲ್ಲ. (3) ಆದಕಾರಣ ಧರ್ಮಾದಿ ಅತೀಂದ್ರಿಯ ವಸ್ತುಗಳನ್ನು ವಿಷಯವೆಂದೂ, ಸ್ವರ್ಗಾದಿಗಳನ್ನು ಫಲವೆಂದೂ ಅಂಗೀಕರಿಸಲೇಬೇಕು. (4)ಅದನ್ನು ಅಂಗೀಕರಿಸದಿದ್ದರೆ ಶಾಸ್ತ್ರಕ್ಕೆ ವಿಷಯ ಪ್ರಯೋಜನಗಳಿಲ್ಲದಿರುವುದರಿಂದ ಕಾಕದಂತಪರೀಕ್ಷಾಗ್ರಂಥದಂತೆ ಶಾಸ್ತ್ರವಾಗದೆ ಹೋಗಬೇಕಾಗುವುದು. ಹೇಳುವವರಿಗೂ, ಕೇಳುವವರಿಗೂ ಇಷ್ಟವಾದ ಇತರದಿಂದ ಸಿಗದಿರುವ ಫಲವನ್ನಧಿಕರಿಸಿ ಅದಕ್ಕೆ ಕಾರಣವಾದ ಇತರ ಪ್ರಮಾಣದಿಂದ ಬೋಧಿಸದಿರುವ ಅರ್ಥವನ್ನು ಪ್ರತಿಪಾದಿಸುವ ವಾಕ್ಯಗಳ ಸಮುದಾಯಕ್ಕೆ ಶಾಸ್ತ್ರವೆಂದು ಹೆಸರು. ಉದಾ=ಚರಕ (ವೈದ್ಯ)ಶಾಸ್ತ್ರ ಮೊದಲಾದುದು. ಅಂತೂ ಅದು ಅಶಾಸ್ತ್ರವಾದರೆ ಆತನು ಅಶಾಸ್ತ್ರಿಯಾಗುವನು. ಅದು ಸರ್ವಥಾ ಆತನಿಗೆ ಇಷ್ಟವಲ್ಲ. ಆದ ಕಾರಣ ಆತನೂಕೂಡ ವಿಷಯಾದಿಗಳ ಸಿದ್ಧಿಗಾಗಿ ಧರ್ಮಾದಿಗಳನ್ನಂಗೀಕರಿಸಲೇಬೇಕು ॥ ೧೩ ॥

ಪುನಃ ಆಶಂಕಿಸಿರುವರು. (1) ಧರ್ಮಾದಿಗಳನ್ನಂಗೀಕರಿಸದಿದ್ದರೂ ಶಾಸ್ತ್ರಕ್ಕೆ ವಿಷಯಾದಿಗಳಿಲ್ಲವೆಂದಾಗುವುದಿಲ್ಲ ಧರ್ಮಾದಿಗಳ ಅಭಾವವೇ ವಿಷಯವು. ಹಾಗಾದರೆ ಪಶ್ವಾದಿಗಳಿಗೆ ಹೇಗೆ ಸ್ವಾಭಾವಿಕವಾಗಿಯೇ ಧರ್ಮಾದಿಗಳ ಜ್ಞಾನವಿಲ್ಲದಿರುವುದರಿಂದ ಅವುಗಳನ್ನ ಕುರಿತು ಶಾಸ್ತ್ರದಿಂದ ಧರ್ಮಾದ್ಯಭಾವವನ್ನು ಪ್ರತಿಪಾದಿಸಕೂಡದೋ, ಹೀಗೆಯೇ ಎಲ್ಲಾ ಪುರುಷರಿಗೂ ಧರ್ಮಾದಿಗಳಿಲ್ಲವೆಂಬುವುದು ಶಾಸ್ತ್ರವಿಲ್ಲದೆ ಸ್ವತಏವ ಇದ್ದುದರಿಂದ ಅವರನ್ನು ಕುರಿತು ಶಾಸ್ತ್ರದಿಂದ ಧರ್ಮಾದಿಗಳಿಲ್ಲವೆಂದುಪಪಾದಿಸುವುದು ವ್ಯರ್ಥವು ಎಂದು ಹೇಳಕೂಡದು ಏಕೆಂದರೆ— ವೇದಾದಿಗಳಿಂದುಂಟಾದ ಭ್ರಾಂತಿಯಿಂದ ಧರ್ಮಾದಿಗಳು ಇವೆ ಎಂದು ಪ್ರಸಕ್ತವಾದುದರಿಂದ 'ಇದು ಸರ್ಪವಲ್ಲ' ಎನ್ನುವುದರಂತೆ ಧರ್ಮಾದ್ಯಭಾವವನ್ನು ಪ್ರತಿಪಾದಿಸುವುದು ಯುಕ್ತವು. (2) ಜನರಿಗೆ ಇಚ್ಛಾನುಸಾರವಾಗಿ ವಿಷಯಗಳನ್ನನುಭವಿಸುವುದೂ, (ವಿಷಯಗಳನ್ನನುಭವಿಸಿದ ಮೇಲೆ ಅವುಗಳು ಸಿಗದಿರುವುದರಿಂದುಂಟಾದ) ದುಃಖನಿವೃತ್ತಿಯೂ, ಫಲವಾಗುವುದು. ಯದ್ಯಪಿ ಶಾಸ್ತ್ರವು ವಿಷಯಗಳನ್ನು ಕೊಡುವುದಿಲ್ಲ. ವಿಷಯಗಳು ಅರ್ಥಾದಿಗಳಿಂದಲೇ ಸಿಗುವವು. ಶಾಸ್ತ್ರವು ವಿಷಯಭೋಗಗಳನ್ನು ಕೊಡುವುದಿಲ್ಲ. ವಿಷಯಭೋಗಗಳು ಅನುರಾಗದಿಂದಲೇ ಕೂಡುವವು. ಔಷಧಾದಿಗಳಂತೆ ದುಃಖವನ್ನು ಪರಿಹರಿಸುವುದಿಲ್ಲ. ಶಾಸ್ತ್ರಕಲಿತರೂ ದುಃಖಶಾಂತಿಯಾಗುವುದಿಲ್ಲವಷ್ಟೆ, ಆದಾಗ್ಯೂ 'ಧರ್ಮಾದಿಗಳಿವೆ' ಎಂಬುವ ಭ್ರಾಂತಿಯಿಂದ ಕೆಲವರು ಇಚ್ಛಾನುಸಾರವಾಗಿ ವಿಷಯಗಳನ್ನುಪಭೋಗಿಸದೇನೇ ಇರುತ್ತಾರೆ. ಚಾಂದ್ರಾಯಣವ್ರತ ಮೊದಲಾದುವುಗಳನ್ನು ಮಾಡುವ ನಿಮಿತ್ತವಾಗಿ ದುಃಖವೂ ಪ್ರಸಕ್ತವಾಗಿದೆ. ಧರ್ಮಾದಿಗಳಿಲ್ಲವೆಂದುಪಪಾದಿಸಲು ಭ್ರಾಂತಿಯು ನಿವೃತ್ತವಾಗುವುದು. ಆಗ ಇಚ್ಛಾನುಸಾರವಾಗಿ ವಿಷಯಗಳನ್ನನುಭವಿಸಬಹುದು, ದುಃಖಾದಿಗಳೂ ಹುಟ್ಟಲಾರವು. (3) ಶಾಸ್ತ್ರಗಳನ್ನು ನಿರ್ಮಿಸಿದವರಿಗೆ ಲೋಕೋಪಕಾರವೇ ಫಲವು. ಜನರು ಉಪಕೃತರಾಗೋಣ ನಮಗೆ ಇವನು ವಿಷಯಭೋಗಗಳ ತಡೆಯುವಿಕೆಯನ್ನೂ ಧರ್ಮಾದಿಗಳ ಅನುಷ್ಠಾನನಿಮಿತ್ತವಾದ ದುಃಖವನ್ನೂ ನಿವಾರಣೆಮಾಡಿದನು ಎಂದು ಶಾಸ್ತ್ರವನು, ನಿರ್ಮಿಸಿದವನಲ್ಲಿ ಪ್ರೀತಿಯುಳ್ಳವರಾಗುತ್ತಾರೆ. ಜನಾನುರಾಗದಿಂದ ಸಂಪತ್ತುಗಳು ಹುಟ್ಟುತ್ತವೆ. 'ಜಿತೇಂದ್ರಿಯತ್ವಂ ವಿನಯಸ್ಯ ಕಾರಣಂ ಗುಣಪ್ರಕರ್ಷೋ ವಿನಯಾದವಾಪ್ಯತೇ । ಗುಣಾಧಿಕೇ ಪುಂಸಿ ಜನೋಽನುರಜ್ಯತೇ ಜನಾನುರಾಗಪ್ರಭವಾಶ್ಚ ಸಂಪದಃ'॥ ಇಂದ್ರಿಯ ಜಯದಿಂದ ವಿನಯವು ಹುಟ್ಟುವುದು. ವಿನಯದಿಂದ ಗುಣಾಧಿಕ್ಯವು ಹುಟ್ಟುವುದು. ಗುಣಾಧಿಕ್ಯವುಳ್ಳ ಪುರುಷರಲ್ಲಿ ಜನರು ಅನುರಾಗಯುಕ್ತರಾಗುತ್ತಾರೆ. ಜನಾನುರಾಗದಿಂದ ಸಂಪತ್ತುಗಳು ಹುಟ್ಟುತ್ತವೆ, ಎಂದು ಶಂಕಿಸಿದರೆ —

**ಮೂ ॥ ನ ಚ ತೇನ ಲೋಕೋಪಕಾರಃ । ಧರ್ಮಾದ್ಯಭಾವಜ್ಞಾನೇ ಪರಸ್ಪರಂ ಹಿಂಸಾದಿನಾಽಪಕಾರಸ್ಯೈವ ಪ್ರಾಪ್ತೇಃ ॥ ೧೪ ॥**

ಅ ॥ ತೇನ=ಶಾಸ್ತ್ರವನ್ನು ನಿರ್ಮಿಸಿದವನಿಂದ, ತೇನ=ನಿರ್ಮಿಸಲ್ಪಟ್ಟ ಶಾಸ್ತ್ರದಿಂದ, ಲೋಕೋಪಕಾರಃ=ಜನರಿಗೆ ಉಪಕಾರವು, (ಮಾಡಲ್ಪಡುವುದು ಎಂದು) ನ ಚ=ಹೇಳ ಕೂಡದು, (ಲೋಕಕ್ಕೆ ಪ್ರಯೋಜನಾದಿಗಳೂ ಇಲ್ಲ. ಏಕೆ ಇಲ್ಲವೆಂದರೆ) ಧರ್ಮಾದ್ಯಭಾವ ಜ್ಞಾನೇ=ಧರ್ಮಾದಿಗಳು ಇಲ್ಲವೆಂಬುವ ಜ್ಞಾನವು, (ಜನರಿಗೆ ಚಾರ್ವಾಕ ಶಾಸ್ತ್ರದಿಂದ ಹುಟ್ಟು ತ್ತಿರಲು) ಪರಸ್ಪರಂ=ಅನ್ಯೋನ್ಯವಾಗಿ, ಹಿಂಸಾದಿನಾ=ಪ್ರಾಪ್ತವಾಗುವ ಹಿಂಸಾದಿಗಳಿಂದ, ಅಪಕಾರಸ್ಯೈವ=ಅಪಕಾರಕ್ಕೇನೇ, ಪ್ರಾಪ್ತೇಃ=ಪ್ರಾಪ್ತಿಯಿದ್ದುದರಿಂದ.

ತಾ ॥ (1) ಧರ್ಮಾದಿಗಳನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು. ಧರ್ಮಾದಿ ಜ್ಞಾನವು ಯಥಾರ್ಥವಾಗಲೀ, ಭ್ರಮೆಯಾಗಲೀ, ಹೇಗಾದರೂ ಸರ್ವ ಮರ್ಯಾದೆಗಳ ಸ್ಥಿತಿಗೆ ಕಾರಣ ವಾದುದರಿಂದ ಮಹಾನರ್ಥವನ್ನು ಪರಿಹರಿಸಿಕೊಂಡಿತ್ತು. ಏಕೆಂದರೆ — ಧರ್ಮಾದಿಗಳು ಇಲ್ಲ ವೆಂದಾದರೆ ಪರರ ದ್ರವ್ಯ ಭಾರ್ಯಾದಿಗಳನ್ನು ಅಪಹರಿಸಲಿಕ್ಕೆ ಇಚ್ಛಿಸಿ ಪರಸ್ಪರ ಹಿಂಸಾದಿಗಳನ್ನೇ ಹೊಂದುವರು. ತಥಾಚ ಶಾಸ್ತ್ರವನ್ನು ನಿರ್ಮಿಸಿದವನು ಜನರಿಗೆ ಅಪಕಾರವನ್ನೇ ಮಾಡಿದಂತೆ ಆಯಿತು. ತಾತ್ಕಾಲಿಕ ಸುಖಪ್ರಾಪ್ತಿಗಾಗಿ ಜೀವನವನ್ನೇ ನಾಶಮಾಡಿದವನು ಉಪಕಾರಿಯಾಗ ಲಾರನಷ್ಟೆ! ಅಂತೂ ಶ್ರೋತೃಗಳಿಗೆ ಈ ಶಾಸ್ತ್ರದಿಂದ ಫಲವಿಲ್ಲವಷ್ಟೆ! ಫಲಸಂಬಂಧಿಯೇ ವಿಷಯ ವಾದುದರಿಂದ ಶಾಸ್ತ್ರಕ್ಕೆ ವಿಷಯವೂ ಇಲ್ಲದಿರಲು ಶಾಸ್ತ್ರವನ್ನು ನಿರ್ಮಿಸಿದವನಲ್ಲಿ ಜನರಿಗೆ ಅಪ ಕಾರಿಯೆಂಬುವ ಬುದ್ಧಿಯಿಂದ ದ್ವೇಷವೇ ಹುಟ್ಟುವುದು. ಅನುರಾಗವು ಹುಟ್ಟಲಾರದು. (2) ಹಾಗಾದರೆ ಅವಿವೇಕಿಗಳಾದ ಕೆಲವರಿಗೆ ದ್ವೇಷವಿರಲಿ, ವಿವೇಕಿಗಳಾದರೂ ಈತನು ನಮ್ಮ ಸುಖ ಕ್ಕಾಗಿಯೇ ಉದ್ಯೋಗವನ್ನು ಮಾಡಿರುವನು, ನಮಗೆ ಸಾಮರ್ಥ್ಯವಿಲ್ಲದಿರುವುದರಿಂದ ಹಿಂಸಾದಿ ಗಳು ಪ್ರಾಪ್ತಗಳಾಗುವವು. ಆ ವಿಷಯದಲ್ಲಿ ಈತನು ಏನು ಮಾಡಲಿ, ಎಂದು ತಿಳಿಯುತ್ತಾ ಅನುರಾಗವುಳ್ಳವರೇ ಆಗುವರು. ವೈದ್ಯನು ರೋಗಿಗೆ ಆರೋಗ್ಯವಾಗಲಿಕ್ಕೆ ಔಷಧವನ್ನು ಕೊಡು ತ್ತಿರಲು ತಾನು ಅಪಥ್ಯಮಾಡಿದರಿಂದ ಅನಿಷ್ಟವು ಹುಟ್ಟುತ್ತಿರಲು ರೋಗಿಯು ವೈದ್ಯನಿಗೆ ಕೋಪಿಸುವುದಿಲ್ಲ, ಪ್ರತ್ಯುಪಕಾರವನ್ನೇ ಮಾಡುವನು, ಎಂದು ಹೇಳಕೂಡದು. ಆದರೂ ಅವಿ ವೇಕಿಗಳ ದ್ವೇಷಪ್ರಯುಕ್ತವಾದ ಅಪಕಾರವು ವ್ಯಯವು, ವಿವೇಕಿಗಳ ಅನುರಾಗಪ್ರಯುಕ್ತವಾದ ಉಪಕಾರವು ಫಲವು, ಇವೆರಡೂ ಸಮವೇ. ಸಮವ್ಯಯ ಫಲವುಳ್ಳ ಶಾಸ್ತ್ರವನ್ನು ಮಾಡಲಿಕ್ಕೆ ಪಂಡಿತನು ಪ್ರವೃತ್ತಿಮಾಡಲಾರನು. 'ಅಸತ್ಯಾನಿ ದುರಂತಾನಿ ಸಮವ್ಯಯಫಲಾನಿ ಚ । ಅಶಕ್ಯಾನಿ ಚ ವಸ್ತೂನಿ ನಾರಭೇತ ವಿಚಕ್ಷಣಃ' ॥ (3) ಸಮವ್ಯಯ ಫಲತ್ವವನ್ನು, ಅಂಗೀಕರಿಸಿ ಹಿಂದೆ ಹೇಳಿದ್ದು. ವಸ್ತುತಃ ವಿಚಾರಮಾಡಿದರೆ 'ಅವಿವೇಕಿಗಳಾದ ಕೆಲವರಿಗೆ ದ್ವೇಷವಾಗಲಿ' ಇದು ಮೊದಲಾದ ಉಪನ್ಯಾಸಗಳು ವಿಷಮಗಳಾಗಿವೆ. ಏಕೆಂದರೆ— ರೋಗಿಗಳು ಅಪಥ್ಯಮಾಡಿ ದ್ದಕ್ಕೆ ವೈದ್ಯನು ಕಾರಣನಲ್ಲ. ಕಾರಣ ರೋಗಿಯು ವೈದ್ಯನಲ್ಲಿ ಏಕೆ ದ್ರೋಹಮಾಡುವನು? ಪ್ರಕೃತ ಹಿಂಸಾದಿಪ್ರಾಪ್ತಿಗೆ ಶಾಸ್ತ್ರವೇ ಕಾರಣವು. ಆದಕಾರಣ ವಿವೇಕಿಗಳಿಗೂ, ಅವಿವೇಕಿಗಳಿಗೂ ದ್ವೇಷವೇ ಹುಟ್ಟುವುದು. ಯಾರು ಇತರರನ್ನು ಸಂಹರಿಸಿ ಅವರ ದ್ರವ್ಯ ಸ್ತ್ರೀಯಾದಿಗಳನ್ನು ಹೊಂದುತ್ತಾರೋ, ಅವರೂ ಕೂಡ ತಮ್ಮಕ್ಕಿಂತಲೂ ಬಲಿಷ್ಠರಾದವರಿಂದ ಸಂಹೃತರೇ ಆಗುವರು. (4) ಹೀಗೆ ಪರಸ್ಪರ ಹಿಂಸಾದಿಗಳು ಕಾಣುವುದಿಲ್ಲವೆಂದರೆ ಸ್ವರ್ಗನರಕಾದಿಗಳಿವೆ ಎಂದು

ಪ್ರತಿಪಾದಿಸುವ ಶಾಸ್ತ್ರಗಳು ನಾಶವಾಗದೆ ಇದ್ದಪ್ರಯುಕ್ತ ಹೀಗೆ ಕಾಣುವುದಿಲ್ಲ. ಅಂತಹ ಶಾಸ್ತ್ರ ಗಳನ್ನು ನಾಶಮಾಡಲಿಕ್ಕಾಗಿ ಪರನ ಪ್ರಯತ್ನವು ॥ ೧೪ ॥

ಎಲ್ಲರೂ ಅಪಕಾರವನ್ನೇ ಮಾಡಲಿ, ಆದರೂ ಪರರಿಗೆ ಹಿತವಾಗಬೇಕೆಂಬುವ ಬುದ್ಧಿ ಯಿಂದ ಶಾಸ್ತ್ರವನು, ನಿರ್ಮಿಸಿದವನು ಉಪಕಾರಿಯೇ ಆಗುವನು. ಕೆಸರಲ್ಲಿ ಮುಳುಗಿದ ದನವನು, ಎತ್ತುವಾಗ ಗೋವಿನ ಕೋಡಿನಿಂದ ಕೊಲ್ಲಲ್ಪಟ್ಟರೆ ಗೋವಿಗೆ ಅಪಕಾರಿಯಾಗ ಲಾರನಷ್ಟೆ! ಎಂದು ಪುನಃ ಆಶಂಕಿಸಿದರೆ ಆಗ ಶಾಸ್ತ್ರವನ್ನು ನಿರ್ಮಿಸಿದವನಿಗೆ ಅಂತಹ ಉಪ ಕಾರವು (೧) ತಾನೇ ಪ್ರಯೋಜನರೂಪವೋ, (೨) ಅಥವಾ ಅದರಿಂದ ಬೇರೆ ಪ್ರಯೋಜನ ವಿದೆಯೋ, ಸುಖಪ್ರಾಪ್ತಿಮೊದಲಾದುದು ಅಲ್ಲದೆ ಇರುವುದರಿಂದ ೧ನೇದ್ದು ಕೂಡಲಾರದು. ೨ ಅದರಿಂದ ಬೇರೆ ಪ್ರಯೋಜನವು ಎಂಬುವ ಕಲ್ಪದಲ್ಲಿಯೂ ದೃಷ್ಟಪ್ರಯೋಜನವೋ, ಅದೃಷ್ಟಪ್ರಯೋಜನವೋ, ಎರಡನ್ನೂ ದೂಷಿಸುವರು.

ಮೂ ॥ ನಚೋಪಕಾರೇಣ ತಸ್ಯ ಪ್ರಯೋಜನಂ । ಅದೃಷ್ಟಾಭಾವಾತ್ ॥
ಅತೋ ಧರ್ಮಾದ್ಯಭಾವಂ ವದತಾ ಸ್ವಸಮಯಸ್ಯಾನರ್ಥಕ್ಯ-
ಮಂಗೀಕೃತಮೇವೇತಿ ನಾಸೌ ಸಮಯೀ ॥ ೧೫ ॥

ಅ ॥ ತಸ್ಯ=ಶಾಸ್ತ್ರವನ್ನು ನಿರ್ಮಿಸಿದವನಿಗೆ, (ಆತನು ಹಿಂದೆ ಹೇಳಿದ ಪ್ರಕಾರ ಸರ್ವರ ವಿದ್ವೇಷಕ್ಕೇನೇ ವಿಷಯನಾದ ಪ್ರಯುಕ್ತ) ಉಪಕಾರೇಣ=ಉಪಕಾರದಿಂದ, ಪ್ರಯೋಜನಂ= ದೃಷ್ಟಪ್ರಯೋಜನವು, ನ ಚ=ಇಲ್ಲ. ಅದೃಷ್ಟಾಭಾವಾತ್=ಅದೃಷ್ಟಗಳಾದ ಧರ್ಮಾದಿಗಳಿಲ್ಲದಿರು ವುದರಿಂದಲೇ, (ಸಂಕ್ಷೇಪಮಾಡಲಿಕ್ಕೆ ಕಾರಣವನ್ನು ಸೂಚಿಸುತ್ತಾ ಚಾರ್ವಾಕನು 'ಶಾಸ್ತ್ರಕರ್ತನೇ ಅಲ್ಲ' ಎಂಬುವುದನ್ನು ಉಪಸಂಹಾರಮಾಡುತ್ತಾರೆ.) ಅತಃ=ಆದಪ್ರಯುಕ್ತ, ಧರ್ಮಾದ್ಯಭಾವಂ= ಧರ್ಮಾದಿಗಳ ರಾಹಿತ್ಯವನ್ನು, ವದತಾ=ಹೇಳತಕ್ಕವನಿಂದ, ಸ್ವಸಮಯಸ್ಯ=ತನ್ನ ಸಿದ್ಧಾಂತಕ್ಕೆ, ಅನರ್ಥಕ್ಯಂ = ವಿಷಯ ಪ್ರಯೋಜನಾಭಾವವು, ಅಂಗೀಕೃತಮೇವ= ಅಂಗೀಕರಿಸಿದಂತೆಯೇ ಆಯಿತು, ಇತಿ=ಆದಪ್ರಯುಕ್ತ, ಅಸೌ=ಈಚಾರ್ವಾಕನು,ಸಮಯೀ=ಸಿದ್ಧಾಂತಿಯು,ನ=ಅಲ್ಲ.

ತಾ ॥ (1) 'ನ ವಿದ್ಯತೇ ಅರ್ಥಃ ಯಸ್ಯ' ಎಂಬುವ ವ್ಯುತ್ಪತ್ತಿಯಿಂದ ಯಾವುದಕ್ಕೆವಿಷಯ ಪ್ರಯೋಜನಗಳು ಇಲ್ಲವೋ ಅಂತಹುದು ಅನರ್ಥಕವು. (2) ಅದೃಷ್ಟವಿಷಯಾದಿಗಳು ಇಲ್ಲ ವೆಂದು ತಾನೇ ಅಂಗೀಕರಿಸಿರುವುದರಿಂದ ಅರ್ಥಭಾರವು ಕಮ್ಮಿಯಾಯಿತು. ದೃಷ್ಟವಾದ ವಿಷಯಾದಿಗಳನ್ನು ನಿರಾಕರಿಸಲಿಕ್ಕೆ ಪ್ರಯಾಸವಿಲ್ಲವು. ಕಾರಣ ಪ್ರತಿವಾದಿಗಳಿಗೆ ಈ ವಿಷಯದಲ್ಲಿ ಕೃತ್ಯವೇ ಇಲ್ಲ. ಆದಪ್ರಯುಕ್ತ ಉಪಸಂಹಾರಮಾಡುತ್ತೇವೆ. (3) ಈ ಚಾರ್ವಾಕನು ಧರ್ಮಾದಿ ಗಳಿಲ್ಲವೆಂದೇ ಅಂಗೀಕರಿಸಿದರೆ ಸಿದ್ಧಾಂತಿಯೇ ಆಗಲಾರನು. ಆದಪ್ರಯುಕ್ತ ಸಮಯಿಯಾಗ ಬೇಕಾದರೆ ಆತನೂ ಧರ್ಮಾದಿಗಳನ್ನೇ ವಿಷಯಗಳನ್ನಾಗಿ ಅಂಗೀಕರಿಸಬೇಕು. ಧರ್ಮಾದಿಗಳ ಸಿದ್ಧಿಯು ಬೇರೆಯಾವುದರಿಂದಲೂ ಕೂಡದಿರುವುದರಿಂದ ಅದಕ್ಕಾಗಿ ಅಪೌರುಷೇಯವಾಕ್ಯ ವನ್ನೂ ಅಂಗೀಕರಿಸಬೇಕು. ಹೀಗೆ ಚಾರ್ವಾಕಮತವನ್ನು ನಿರಾಕರಿಸಬೇಕು ॥ ೧೫ ॥

ಚಾರ್ವಾಕಮತ ನಿರಾಸವು ಸಮಾಪ್ತವಾಯಿತು.

ಆಗಲಿ, ಧರ್ಮಾದಿಗಳನ್ನಂಗೀಕರಿಸುವ. ಆದರೆ ಅವುಗಳು ಬುದ್ಧ, ಋಷಭ, ಈಶ್ವರ, ಕಪಿಲ ಮೊದಲಾದ ಪುರುಷರ ಮಾತಿನಿಂದಲೇ ಸಿದ್ಧಗಳಾಗುವುವು. ಅದಕ್ಕಾಗಿ ಅಪೌರುಷೇಯ ವಾಕ್ಯವನ್ನಂಗೀಕರಿಸುವುದು ಬೇಡ ಎಂದಾಶಂಕಿಸಿದರೆ —

ಮೂ ॥ ನ ಚ ಪೌರುಷೇಯೇಣ ವಾಕ್ಯೇನ ತತ್ಸಿದ್ಧಿಃ ।
ಅಜ್ಞಾನವಿಪ್ರಲಂಭಯೋಃ ಪ್ರಾಪ್ತೇಃ ॥ ೧೬ ॥

ಅ ॥ ತತ್ಸಿದ್ಧಿಃ=ಧರ್ಮಾದಿಗಳ ನಿಶ್ಚಯವು, ಪೌರುಷೇಯೇಣ ವಾಕ್ಯೇನ=ಪುರುಷರಿಂದ ಮಾಡಲ್ಪಟ್ಟ ವಾಕ್ಯದಿಂದ, ನ ಚ=ಆಗುವುದಿಲ್ಲ. ಅಜ್ಞಾನವಿಪ್ರಲಂಭಯೋಃ=ಹೇಳಲಿಕ್ಕೆ ಇಷ್ಟವಾದ ವಸ್ತುವಿನ ತತ್ತ್ವಜ್ಞಾನವಿಲ್ಲದಿರುವುದು ಅಜ್ಞಾನವು, ತಿಳಿದೂ ಪರರನ್ನು ವಂಚಿಸುವುದು ವಿಪ್ರಲಂಭವು, ಇವುಗಳಿಗೆ (ಮಿಥ್ಯಾಜ್ಞಾನ ಪ್ರಮಾದ ಇಂದ್ರಿಯಗಳಲ್ಲಿ ಪಾಟವವಿಲ್ಲದಿರುವಿಕೆ ಇವುಗಳನ್ನೂ ಇಟ್ಟುಕೊಳ್ಳಬೇಕು.) ಪ್ರಾಪ್ತೇಃ=ಪುರುಷರಲ್ಲಿ ಸಂಭವಿಸುವುದರಿಂದ.

ತಾ ॥ (1) ಪುರುಷರಿಗೆ ಬಹಳವಾಗಿ ಅಜ್ಞಾನ ವಿಪ್ರಲಂಭಾದಿಗಳು ಕಾಣುವುದರಿಂದ ಬುದ್ಧಋಷಭಾದಿಗಳಿಗೂ ಸಂಭವಿಸಬಹುದಾದುದರಿಂದ ವಿಶ್ವಾಸವು ಹುಟ್ಟಲಾರದು. ಆದಕಾರಣ ಅವರ ಮಾತಿನಿಂದ ಧರ್ಮಾದಿಗಳ ನಿಶ್ಚಯವು ಕೂಡಲಾರದು ॥ ೧೬ ॥

ಹಾಗಾದರೆ ಧರ್ಮಾದಿಗಳಿಗೆ ಉಪದೇಶಕನಾದ ಬುದ್ಧನನ್ನು ಸರ್ವಜ್ಞನೆಂದೇ ಅಂಗೀಕರಿಸುವೆವು. ಧರ್ಮಾದಿಗಳನ್ನ ಸಾಕ್ಷಾತ್ಕರಿಸಿದವನಿಗೆ ರಾಗದ್ವೇಷಾದಿ ದೋಷಗಳು ಕೂಡಲಾರವು. ಆ ದೋಷಗಳು ಅಜ್ಞಾನಮೂಲಕಗಳಷ್ಟೆ! ರಾಗಾದಿದೋಷರಹಿತನಾದವನಿಗೆ ವಿಪ್ರಲಂಭವು ಕೂಡಲಾರದು. ವಿಪ್ರಲಂಭವು ರಾಗಾದಿ ದೋಷಗಳ ಕಾರ್ಯವಾಗಿದೆ. ಇಂತಹ ಮಹಾತ್ಮನಿಗೆ ಇಂದ್ರಿಯಗಳಲ್ಲಿ ಪಟುತ್ವವಿಲ್ಲವೆಂದು ಸಂಭಾವಿಸಕೂಡದು. ಆದಕಾರಣ ಆತನಲ್ಲಿ ಅವಿಶ್ವಾಸಕ್ಕೆ ಕಾರಣವಿಲ್ಲದಿರುವುದರಿಂದ ಆತನ ಮಾತಿನಿಂದ ಧರ್ಮಾದಿಗಳ ನಿಶ್ಚಯವು ಆಗುವುದು ಎಂದು ಬೌದ್ಧರು ಹೇಳುವರು. ಹೀಗೆಯೇ ಆರ್ಹತಾದಿಗಳೂ ಕೂಡ ತಂತಮ್ಮ ಆಚಾರ್ಯರಿಗೆ ಸಾರ್ವಜ್ಞವನ್ನು ಅಂಗೀಕರಿಸುತ್ತಾ ಹೇಳುವರು. ಅವರನ್ನು ಕುರಿತು ಆಚಾರ್ಯರು ಹೇಳುವರು.

ಮೂ ॥ ನ ಚ ತದರ್ಥತ್ವೇನ ಸರ್ವಜ್ಞಃ ಕಲ್ಪ್ಯೇತ ॥ ೧೭ ॥

ಅ ॥ ತದರ್ಥತ್ವೇನ = ಸಃ = ಪೌರುಷೇಯವಾಕ್ಯದಿಂದ ಧರ್ಮಾದಿ ನಿಶ್ಚಯವೇ, ಅರ್ಥಃ=ಪ್ರಯೋಜನವು, ಯಸ್ಯ=ಯಾವ ಸಾರ್ವಜ್ಞಕಲ್ಪನೆಗೆ, ಎಂಬುವ ವ್ಯುತ್ಪತ್ತಿಯಿಂದ ಸಾರ್ವಜ್ಞಕಲ್ಪನಾತ್ವದಿಂದ ಅಂದರೆ ಯಾವ ಕಾರಣದಿಂದ ಸಾರ್ವಜ್ಞಕಲ್ಪನೆಗೆ ಪೌರುಷೇಯ ವಾಕ್ಯದಿಂದ ಧರ್ಮಾದಿನಿಶ್ಚಯವೇ ಪ್ರಯೋಜನವೋ, ಆದಕಾರಣ, ಅಥವಾ ಅರ್ಥಶಬ್ದಕ್ಕೆ ನಿವೃತ್ತಿಯೆಂದರ್ಥವು, ತತ್ = ಅಜ್ಞಾನಾದಿಪ್ರಾಪ್ತಿಯ, ಅರ್ಥ = ನಿವೃತ್ತಿಯೇ, ಅರ್ಥಃ= ಪ್ರಯೋಜನವು, ಯಸ್ಯ=ಯಾವ ಸಾರ್ವಜ್ಞಕಲ್ಪನೆಗೆ, ಅಂದರೆ ಸಾರ್ವಜ್ಞಕಲ್ಪನೆಗೆ ಅಜ್ಞಾನಾದಿ ಪ್ರಾಪ್ತಿಯ ನಿವೃತ್ತಿಯೇ ಪ್ರಯೋಜನವು, ಅದಕ್ಕಾಗಿ ಸರ್ವಜ್ಞಃ=ಸರ್ವಜ್ಞನು, ನಚ ಕಲ್ಪ್ಯೇತ= ಕಲ್ಪಿಸಲ್ಪಡಬಾರದು. ಹಿಂದೆ ಹೇಳಿದ ನ್ಯಾಯದಿಂದ ಸರ್ವಜ್ಞತ್ವವನ್ನು ಕಲ್ಪಿಸಲು ಅದರಿಂದಲೇ ವಿಪ್ರಲಂಭಾದಿಗಳು ಇಲ್ಲವೆಂದು ಸಿದ್ಧವಾಗುವವು ಎಂದು ಪೂರ್ವಪಕ್ಷಿಗಳಿಗೆ ಅಭಿಪ್ರೇತವಾದ ಪ್ರಯುಕ್ತ 'ಸರ್ವಜ್ಞಃ' ಎಂದಿಷ್ಟೇ ಹೇಳಿರುವರು ॥ ೧೭ ॥

ಏಕೆ ಕಲ್ಪಿಸಕೂಡದೆಂದರೆ —

ಮೂ ॥ ಅನ್ಯತ್ರಾದೃಷ್ಟಸ್ಯ ಸರ್ವಜ್ಞತ್ವಸ್ಯ ಕಲ್ಪನಂ ತಸ್ಯಾವಿಪ್ರಲಂಭಕತ್ವ-
ಕಲ್ಪನಂ ತಸ್ಯ ತತ್ಕೃತತ್ವಕಲ್ಪನಂ ಚೇತಿ ಕಲ್ಪನಾಗೌರವಪ್ರಾಪ್ತೇಃ
॥ ೧೮॥

ಅ || ಅನ್ಯತ್ರ=ಬೇರೆಕಡೆಯಲ್ಲಿ, ಅದೃಷ್ಟಸ್ಯ=ಕಾಣಲ್ಪಡದೆ ಇದ್ದ, ಸರ್ವಜ್ಞತ್ವಸ್ಯ=ಸಾರ್ವಜ್ಞವನ್ನು, ಕಲ್ಪನಂ=ಕಲ್ಪಿಸುವುದು, ತಸ್ಯ = ಆತನಿಗೆ, ಅವಿಪ್ರಲಂಭಕತ್ವಕಲ್ಪನಂ=ವಿಪ್ರಲಂಭಕತ್ವವಿಲ್ಲವೆಂದು ಕಲ್ಪಿಸುವುದು, ತಸ್ಯ = ಧರ್ಮಬೋಧಕವಾದ ಆ ವಾಕ್ಯಕ್ಕೆ, ತತ್ಕೃತತ್ವಕಲ್ಪನಂ ಚ = ಆತನಿಂದ ಮಾಡಲ್ಪಟ್ಟದ್ದೆಂದು ಕಲ್ಪಿಸುವುದೂ, ಇತಿ = ಹೀಗೆ, ಕಲ್ಪನಾಗೌರವಪ್ರಾಪ್ತೇಃ=ಕಲ್ಪನೆಗೆ ಗೌರವವು ಪ್ರಾಪ್ತವಾಗುವುದರಿಂದ.

ತಾ || (1) ಹೀಗೆ ಹೇಳುವವನು ಪ್ರಮಾಣವಿಲ್ಲದೇನೇ ಒಬ್ಬ ಪುರುಷನಲ್ಲಿ ಸಾರ್ವಜ್ಞವನ್ನು ಕಲ್ಪಿಸಬೇಕು. ಅವನು ಸರ್ವಜ್ಞನೆಂದು ನಮಗೆ ಪ್ರತ್ಯಕ್ಷವಿಲ್ಲ. ನಮ್ಮ ಪ್ರತ್ಯಕ್ಷದಿಂದ ಸಾರ್ವಜ್ಞ ಹೇಳುವುದಾದರೆ ನಮಗೂ ಸಾರ್ವಜ್ಞವು ಬರಬೇಕಾಗುವುದು. ತಾನು ಸರ್ವವನ್ನೂ ತಿಳಿದು ಆತನ ಜ್ಞಾನಕ್ಕೆ ಅವುಗಳೆಲ್ಲವೂ ವಿಷಯವಾಗಿವೆ ಎಂದು ಪ್ರತ್ಯಕ್ಷದಿಂದ ತಿಳಿಯಬೇಕು. ನಮಗೆ ಸಾರ್ವಜ್ಞವಿಲ್ಲವಷ್ಟೆ! ಇದ್ದರೆ ಬುದ್ಧಾದಿಗಳನ್ನು ಕಲ್ಪಿಸುವುದು ವ್ಯರ್ಥವಾಗಬೇಕಾಗುವುದು. ಈ ಅಭಿಪ್ರಾಯದಿಂದ ಉಕ್ತವಾಗಿದೆ. 'ಅನ್ಯತ್ರ=ಬೇರೆ ಕಡೆಯಲ್ಲಿ(ನಮ್ಮಲ್ಲಿ), ಅದೃಷ್ಟಸ್ಯ=ಕಾಣಲ್ಪಡದೆ ಇದ್ದ. ಎಂದು. (2) ನಮಗೆ ಪರರ ಮನಸ್ಸಿನಲ್ಲಿರುವುದನ್ನು ಪ್ರತ್ಯಕ್ಷೀಕರಿಸುವುದು ಅನುಭವವಿರುದ್ಧವೂ ಆಗಿದೆ. (3) ಅವನು ಸರ್ವಜ್ಞನೆಂಬುವ ವಿಷಯದಲ್ಲಿ ಅನುಮಾನವೂ ಇಲ್ಲ. ಯಾವ ಅನುಮಾನವು ಯಾವ ಧರ್ಮದಿಂದ ವ್ಯಾಪ್ತವಾಗಿ ಬೇರೆ ಕಡೆಯಲ್ಲಿ ಉಪಲಬ್ಧವಾಗಿಯದೋ, ಅಂತಹ ಅನುಮಾನವು ಅಂತಹ ಧರ್ಮವನ್ನೇ ತಿಳಿಸಿಕೊಡುವುದು. ಸರ್ವಜ್ಞತ್ವವು ಬೇರೆ ಎಲ್ಲಿಯೂ ದೃಷ್ಟವಾಗಲಿಲ್ಲ; ಕಾರಣ ಅನುಮಾನಕ್ಕೆ ವ್ಯಾಪ್ತಿಯು ಗೃಹೀತವಾಗಲಿಲ್ಲ. ಈ ಅಭಿಪ್ರಾಯದಿಂದಲೂ 'ಅನ್ಯತ್ರ ಅದೃಷ್ಟಸ್ಯ' ಎಂದು. (4) ಅಪೌರುಷೇಯವಾಗಮವನ್ನು ಪರನು ಅಂಗೀಕರಿಸದೆ ಇರುವುದರಿಂದ ಅದೂ ಪ್ರಮಾಣವಾಗಲಾರದು. ಪೌರುಷೇಯಾಗಮವೂ ಕೂಡ ಅಸರ್ವಜ್ಞಪ್ರಣೀತವಾಗಿದ್ದರೆ ನಂಬಲಿಕ್ಕೆ ಅನರ್ಹವಾದ ಪ್ರಯುಕ್ತ ಕೂಡಲಾರದು. ಸರ್ವಜ್ಞಪ್ರಣೀತವೆಂದರೆ ಯಾವ ಸರ್ವಜ್ಞನ ವಾಕ್ಯದಿಂದ ಧರ್ಮಾದಿಸಿದ್ಧಿಯನ್ನು ಅಂಗೀಕರಿಸಿರುವಿರೋ, ಆತನಿಂದ ಮಾಡಲ್ಪಟ್ಟದ್ದೆಂದರೆ ಅನ್ಯೋನ್ಯಾಶ್ರಯವು. ಆತನಿಗೆ ಸಾರ್ವಜ್ಞವು ಸಿದ್ಧವಾದರೆ ಅವನು ಮಾಡಿದ ಆಗಮಕ್ಕೆ ಪ್ರಾಮಾಣ್ಯವು ಸಿದ್ಧಿಸುವುದು. ಪ್ರಮಾಣಭೂತವಾದ ತತ್ಕೃತವಾದ ಆಗಮದಿಂದ ಆತನಿಗೆ ಸಾರ್ವಜ್ಞವು ಸಿದ್ಧಿಸುವುದು. ಇಲ್ಲವಾದರೆ ನಮ್ಮ ಮಾತಿನಿಂದಲೇ ನಮಗೆ ಸಾರ್ವಜ್ಞವು ಸಿದ್ಧಿಸುವುದು. ಅದು ಎಲ್ಲಿಯೂ ದೃಷ್ಟವಲ್ಲ. ಈ ಅಭಿಪ್ರಾಯದಿಂದಲೇ 'ಅನ್ಯತ್ರ ಅದೃಷ್ಟಸ್ಯ' ತಮ್ಮ ಮಾತಿನಿಂದ ಸಿದ್ಧವೆಂದು ಕಾಣಲ್ಪಡದೆ ಇದ್ದ, (5) ಮತ್ತೊಬ್ಬ ಸರ್ವಜ್ಞನಿಂದ ನಿರ್ಮಿಸಲ್ಪಟ್ಟದ್ದೆಂದರೆ ಬೇರೆ ಪುರುಷರಲ್ಲಿ ಸಾರ್ವಜ್ಞವೇ ದೃಷ್ಟವಾಗಲಿಲ್ಲ. ಆತನಿಗೆ ಸಾರ್ವಜ್ಞವನ್ನು ಮತ್ತೊಬ್ಬಸರ್ವಜ್ಞನ ಮಾತಿನಿಂದ ಕಲ್ಪಿಸುತ್ತೇವೆ ಎಂದರೆ ಅನವಸ್ಥೆಯು. ಈ ಅಭಿಪ್ರಾಯದಿಂದಲೂ ಉಕ್ತವಾಗಿದೆ. 'ಅನ್ಯತ್ರ ಅದೃಷ್ಟಸ್ಯ' ಎಂದು. (6) ಉಪಮಾನವೂ ಕೂಡಲಾರದು. ಅವನಂತೆ ಇವನು ಎಂದಾಗಲೀ, ಇವನು ಇವನಿಗೆ ಸಮಾನಿಕನೆಂದಾಗಲೀ ಉಪಮಾನವು ಕೂಡಬೇಕು. ಬೇರೆಯವರಲ್ಲಿ ಸಾರ್ವಜ್ಞವು ಪ್ರಮಿತವಲ್ಲ. ಈ ಅಭಿಪ್ರಾಯದಿಂದಲೂ ಉಕ್ತವಾಗಿದೆ 'ಅನ್ಯತ್ರ ಅದೃಷ್ಟಸ್ಯ' ಎಂದು. (7) ಅರ್ಥಾಪತ್ತಿಯೂ ಕೂಡಲಾರದು. ಅನುಪಪತ್ತಿಯು ಇರುವುದಿಲ್ಲವಷ್ಟೆ! ಬುದ್ಧನ ಧರ್ಮೋಪದೇಶವಾಗಲೀ ಮಹಾಜನ ಪರಿಗೃಹೀತತ್ವವಾಗಲೀ ಸಾರ್ವಜ್ಞವಿಲ್ಲದೆ ಕೂಡದಿರುವುದಾಗಿ ಸಾರ್ವಜ್ಞವನ್ನು ತಿಳಿಸಿಕೊಡುವುದೆಂದರೆ ಇದೇ ಅರ್ಥಾಪತ್ತಿಯಿಂದ ಜಿನನಿಗೂಸಾರ್ವಜ್ಞವು ಸಿದ್ಧಿಸುವುದು. ಸಿದ್ಧವಾಗಲಿ, ಎಂದರೆ ಬುದ್ಧ-ಜಿನರಿಬ್ಬರಿಗೂ ಸಾರ್ವಜ್ಞವಿದ್ದುದರಿಂದ ಅವರು ನಿರ್ಮಿಸಿದ ಶಾಸ್ತ್ರಗಳಿಗೆ ವಿವಾದವಿಲ್ಲವೆಂದಾಗಬೇಕಾಗುವುದು. ಈ ಅಭಿಪ್ರಾಯದಿಂದಲೂ'ಅನ್ಯತ್ರಅದೃಷ್ಟಸ್ಯ' ಎಂದು. (8) ಅನುಪಲಬ್ಧಿಯೂ ಕೂಡಲಾರದು.

ಏಕೆಂದರೆ— ಅನುಪಲಬ್ಧಿಯು ಅಭಾವ ವಿಷಯಕಜ್ಞಾನವನ್ನು ಮಾತ್ರ ಹುಟ್ಟಿಸುವುದು. ಭಾವವಿಷಯಕಜ್ಞಾನವನ್ನು ಹುಟ್ಟಿಸುತ್ತದೆ ಎಂದು ಎಲ್ಲಿಯೂ ದೃಷ್ಟವಾಗಲಿಲ್ಲ. ಕಾರಣ ಸಾರ್ವಜ್ಞರೂಪವಾದ ಭಾವಧರ್ಮದ ಜ್ಞಾನವನ್ನು ಹುಟ್ಟಿಸಲಾರದು. ಈ ಅಭಿಪ್ರಾಯದಿಂದಲೂ 'ಅನ್ಯತ್ರ ಅದೃಷ್ಟಸ್ಯ' ಭಾವರೂಪವಾದುದು, ಅಭಾವ ವಿಷಯಕವಾದ ಜ್ಞಾನವನ್ನು ಹುಟ್ಟಿಸತಕ್ಕ ಅನುಪಲಬ್ಧಿರೂಪವಾದ ಪ್ರಮಾಣಕ್ಕೆ ವಿಷಯವಾಗಿ ಕಾಣಲ್ಪಡಲಿಲ್ಲ' ॥ ೧೮ ॥

(1) ಧರ್ಮಾದಿಕಂ=ಧರ್ಮಮೊದಲಾದುದು, ಕಸ್ಯಚಿತ್ ಪ್ರತ್ಯಕ್ಷಂ=ಯಾರೋ ಒಬ್ಬನಿಗೆ ಪ್ರತ್ಯಕ್ಷವಾಗಿದೆ, ವಸ್ತುತ್ವಾತ್=ಪದಾರ್ಥವಾದ ಪ್ರಯುಕ್ತ, ಘಟವತ್=ಮಡಿಕೆಯಂತೆ. ಇದರಿಂದ ಸಾಮಾನ್ಯಾಕಾರವಾಗಿ ಸಾರ್ವಜ್ಞಾದಿಗಳು ಸಿದ್ಧಿಸುವವು, ಎಂದಾಶಂಕಿಸಿದರೆ ೧ ಧರ್ಮಾದಿಗಳು ಪ್ರತ್ಯಕ್ಷವೆಂದುಮಾತ್ರ ಸಾಧಿಸುತ್ತೀರೋ ಅಥವಾ ೨ ಒಬ್ಬ ಪುರುಷನಿಗೆ ಪ್ರತ್ಯಕ್ಷವೆಂದೋ, ೧ನೇದ್ದು ಅಯುಕ್ತವು. ಧರ್ಮವು ಒಬ್ಬನಿಗೆ ಪ್ರತ್ಯಕ್ಷವು, ಅಧರ್ಮವು ಮತ್ತೊಬ್ಬನಿಗೆ ಎಂದೂ ಪ್ರತಿಜ್ಞಾತಾರ್ಥವು ಕೂಡುವುದರಿಂದ ಒಬ್ಬನಿಗೇನೇ ಧರ್ಮಾದಿ ವಿಷಯಕ ಪ್ರತ್ಯಕ್ಷವೆಂದು ಸಿದ್ಧವಾಗಲಿಲ್ಲ. ಕಾರಣ ಅರ್ಥಾಂತರವು. (ಪ್ರಕೃತಕ್ಕೆ ಅನುಪಯುಕ್ತವಾದುದು ಉಚಿತವಾದ ಮಾತು) ೨ನೇದ್ದೂ ಅಯುಕ್ತವು, ದೃಷ್ಟಾಂತದಲ್ಲಿ ಸಿದ್ಧವಲ್ಲ, ಪಕ್ಷ ಹೊರತು ಎಲ್ಲವೂ ಒಬ್ಬ ಪುರುಷನಿಗೆ ಪ್ರತ್ಯಕ್ಷವೆಂದು ಸಮ್ಮತವಲ್ಲವಷ್ಟೆ! (2) ಒಂದು ಘಟವು ಒಬ್ಬನಿಗೆಪ್ರತ್ಯಕ್ಷವೆಂದರೆ ಒಂದು ಧರ್ಮವು ಒಬ್ಬನಿಗೆ ಪ್ರತ್ಯಕ್ಷವು. ಮತ್ತೊಬ್ಬನಿಗೆ ಅಧರ್ಮವು. ಹೀಗೆ ಪ್ರತಿಜ್ಞಾತಾರ್ಥವು ಕೂಡುವುದರಿಂದ ಅರ್ಥಾಂತರತ್ವವು ತಪ್ಪಲಾರದು. (3) ಧರ್ಮವನ್ನು ತಿಳಿಯುವವನು ಅಧರ್ಮವನ್ನು ಹೇಗೆ ತಿಳಿಯಲಾರನೆಂದರೆ— ಇದು ೧ ಸಂಭಾವನೆಯೋ, ೨ ಅನುಮಾನವೋ, ಅಯಂ = ಇವನು, ಅಧರ್ಮದ್ರಷ್ಟಾ = ಅಧರ್ಮವನ್ನು ನೋಡುವವನು, ಧರ್ಮದ್ರಷ್ಟೃತ್ವಾತ್ = ಧರ್ಮವನ್ನು ನೋಡತಕ್ಕವನಾದುದರಿಂದ, ೧ನೇದ್ದು ಅಯುಕ್ತವು, ಕೇವಲ ಸಂಭಾವನೆಯು ಸಾಧಕವಾಗಲಾರದು. ೨ನೇದ್ದೂ ಅಯುಕ್ತವು, ಯಃ ಧರ್ಮದ್ರಷ್ಟಾ ಸಃ ಅಧರ್ಮದ್ರಷ್ಟಾ=ಯಾರು ಧರ್ಮವನ್ನು ನೋಡತಕ್ಕವನೋ ಆತನು ಅಧರ್ಮದರ್ಶಿಯು, ಎಂಬುವಲ್ಲಿ ದೃಷ್ಟಾಂತವಿಲ್ಲದಿರುವುದರಿಂದ ವಿಶೇಷವ್ಯಾಪ್ತಿಯಿಲ್ಲ. (4) ಯಾರು ಅಶಕ್ಯವಾದ ಒಂದನ್ನು ಮಾಡುತ್ತಾನೋ ಆತನು ಮತ್ತೊಂದನ್ನು ಮಾಡುತ್ತಾನೆ. ತಥಾಚ ಅಶಕ್ಯಧರ್ಮವನ್ನು ನೋಡತಕ್ಕವನು ಅಶಕ್ಯವಾದ ಅಧರ್ಮವನ್ನು ನೋಡುವನು. ಎಂದು ಸಾಮಾನ್ಯವ್ಯಾಪ್ತಿಯುದೆ, ಎಂದರೆ— ವರಾಹಗೃಧ್ರಾದಿಗಳಿಗೆ ದೂರದಲ್ಲಿರುವ ಶಬ್ದರೂಪಗಳನ್ನು ಗ್ರಹಿಸುವ ಸಾಮರ್ಥ್ಯವಿದ್ದರೂ ಅಂತಹ ರಸಾದಿಗಳನ್ನ ಗ್ರಹಿಸುವ ಸಾಮರ್ಥ್ಯವು ಕಾಣಲಿಲ್ಲ. (5) ಅಥವಾ ವಿಪ್ರತಿಪನ್ನವಾದ ಧರ್ಮ, ಅಧರ್ಮ, ಸ್ವರ್ಗ, ನರಕ ಮೊದಲಾದುದು ಒಬ್ಬನಿಗೇನೇ ಪ್ರತ್ಯಕ್ಷವೆಂದು ಅಂಗೀಕರಿಸುವ; ಆದರೂ ಸಾರ್ವಜ್ಞವು ಹೇಗೆ ಸಿದ್ಧವಾಗುವುದು? ಧರ್ಮಾದಿಗಳನ್ನ ಕಂಡವನೇ ಘಟಾದಿಪದಾರ್ಥಗಳನ್ನ ನೋಡುತ್ತಾನೆ ಎಂಬುವ ವಿಷಯದಲ್ಲಿ ಪ್ರಮಾಣವಿಲ್ಲ. ಅಂತೂ ಸಾರ್ವಜ್ಞವು ಸಿದ್ಧಿಸುವುದಿಲ್ಲ. (6) ಸಂಪ್ರತಿಪನ್ನವಾದ ಘಟಾದಿದರ್ಶನವು ಕೈಮುತ್ಯನ್ಯಾಯಸಿದ್ಧವೆಂದರೆ ಕೈಮುತ್ಯಕ್ಕೆ ಕಾರಣವಾದ ವ್ಯಾಪ್ತಿಯಿಲ್ಲವಷ್ಟೇ! ಹಾಗಾದರೆ ಯಾರು ಅಶಕ್ಯವಾದ ಕಾರ್ಯವನ್ನು ಮಾಡುತ್ತಾನೋ, ಆತನು ಸುಕರವಾದುದನ್ನು ಮಾಡುತ್ತಾನೆ. ತಥಾಚ ಅಶಕ್ಯವಾದ ಧರ್ಮಾದಿ ದ್ರಷ್ಟೃತ್ವವಿದ್ದವನಿಗೆ ಸುಶಕ್ಯವಾದ ಘಟಮೊದಲಾದ ಜಗತ್ತಿನ ದರ್ಶನವು ಸುತರಾಂ ಸಿದ್ಧವು, ಎಂದೂ ಹೇಳಕೂಡದು. ಒಂಟೆಯು ಮುಳ್ಳನ್ನು ಭಕ್ಷಿಸಿದರೂ ಕದಳೀಫಲವನ್ನು ಭಕ್ಷಿಸುವುದಿಲ್ಲವಷ್ಟೇ! ಅಂತೂ ವ್ಯಭಿಚಾರವು ತಪ್ಪಲಾರದು. (7) ಹಾಗಾದರೆ

ಕ್ಷಿತ್ಯಾದಿಕಂ=ಭೂಮಿ ಮೊದಲಾದುದು, ಸಕರ್ತೃಕಂ=ಕರ್ತೃಸಹಿತವಾಗಿದೆ, ಕಾರ್ಯತ್ವಾತ್=ಜನ್ಯವಾದ ಪ್ರಯುಕ್ತ, ಘಟವತ್=ಮಡಿಕೆಯಂತೆ. ಎಂಬುವ ಅನುಮಾನದಿಂದ ಕ್ಷಿತ್ಯಾದಿಗಳಿಗೆ ಕರ್ತನು ಸಿದ್ಧನಾಗಲು ಆತನಿಗೆ ಸಾರ್ವಜ್ಞವೂ ಸಿದ್ಧವೇ ಆಗುವುದು. ಉಪಾದಾನಾದಿಗಳನ್ನ ಸಾಕ್ಷಾತ್ಕರಿಸಿದವನೇ ಕರ್ತನೆನ್ನಿಸುವನು. ಸರ್ವವೂ ಕ್ಷಿತ್ಯಾದ್ಯುಪಾದಾನ ಮೊದಲಾದುವುಗಳಲ್ಲಿ ಪ್ರವಿಷ್ಟವಾಗಿದೆ, ಎಂದು ಹೇಳಕೂಡದು. ಘಟಾದಿಗಳನ್ನ ಮಾಡಿದ ಕುಲಾಲಾದಿಗಳಿಗೆ ಉಪಾದಾನಾದಿ ವಿಷಯಕವಾದ ಸಾಕ್ಷಾತ್ಕಾರವಿಲ್ಲವಷ್ಟೇ! ಕುಲಾಲನು ಘಟವನ್ನು ಇಷ್ಟು ಭಾರವುಳ್ಳದ್ದು ಇಷ್ಟು ಪರಿಮಾಣವುಳ್ಳದ್ದೆಂದಾಗಲೀ, ಅದಕ್ಕೆ ಕಾರಣವಾದ ಕಾಲ ದೇಶ ಅದೃಷ್ಟವನ್ನಾಗಲೀ, ಅದಕ್ಕೆ ಆಶ್ರಯನಾದ ಪುರುಷನನ್ನು ಅದರ ಪ್ರಯೋಜನವಿಶೇಷವನ್ನಾಗಲೀ ಸಾಕ್ಷಾತ್ಕರಿಸುವುದಿಲ್ಲ. (8) ಮತ್ತು ಒಬ್ಬನೇ ಕರ್ತನೆಂಬುವುದು ಘಟಮೊದಲಾದ ಸಪಕ್ಷಗಳಲ್ಲಿ ಕಾಣದಿರುವುದರಿಂದ ಕ್ಷಿತ್ಯಾದಿಗಳಲ್ಲಿ ಹೇಗೆ ಸಿದ್ಧವಾಗುವುದು; ಆತನಿಗೆ ಸಾರ್ವಜ್ಞವೂ ಹೇಗೆ? ಎಂದಾಶಂಕಿಸಿದರೆ ಕ್ಷಿತ್ಯಾದಿಗಳನ್ನ ಒಬ್ಬನೇ ಮಾಡಿದ್ದೆಂದು ಕಲ್ಪಿಸಿದರೆ ಕಲ್ಪನಾಲಾಘವವು, ಅನೇಕರು ಮಾಡಿದ್ದೆಂದು ಕಲ್ಪಿಸಿದರೆ ಕಲ್ಪನಾಗೌರವವು. ಹೀಗೆ ಹೇಳಕೊಡದು. ಅತಿದೊಡ್ಡದಾದ ಪ್ರಾಸಾದಾದಿಗಳಿಂದ ಯುಕ್ತವಾದ ಮನೆ ಮೊದಲಾದುವುಗಳನ್ನು ಅನೇಕಜನರು ಮಾಡಿದ್ದನ್ನೇ ಕಂಡ ಪ್ರಯುಕ್ತ ಕ್ಷಿತ್ಯಾದಿಗಳಿಗೂ ಹಾಗೆ ಕಲ್ಪಿಸುವುದೇ ಯೋಗ್ಯವಾದ ಕಾರಣ, ಒಬ್ಬನೇ ಕರ್ತನೆಂದು ಸಿದ್ಧಿಸದೆ ಇದ್ದಪ್ರಯುಕ್ತ ಆತನಿಗೆ ಸಾರ್ವಜ್ಞವು ಸಿದ್ಧಿಸುವುದಿಲ್ಲ. ಹೀಗೆ ಸಾರ್ವಜ್ಞವು ಸಿದ್ಧಿಸದೆ ಇರಲು ಆತನು ಅವಿಪ್ರಲಂಭಕನೆಂದೂ ಅಪ್ರಾಮಾಣಿಕವಾಗಿಯೇ ಕಲ್ಪಿಸಬೇಕು. (9) ಸಾರ್ವಜ್ಞವಿದ್ದರೂ ವಂಚನೆಯಿಲ್ಲವೆಂದು ಹೇಗೆ ಸಿದ್ಧವಾಗುವುದು? ರಾಗಾದಿಗಳು ಇಲ್ಲದಿದ್ದಪ್ರಯುಕ್ತ ಎಂದನ್ನಕೂಡದು. ರಾಗಾದಿದೋಷರಹಿತರಾದಾಗ್ಯೂ ಧರ್ಮಾದಿಗಳನ್ನ ಉಪದೇಶಮಾಡಿರುವುದರಿಂದ ಸರ್ವಜ್ಞರೆಂದು ನೀನು ಅಂಗೀಕರಿಸಿದ ಈಶ್ವರಾವತಾರರಾದ ಬುದ್ಧಾದಿಗಳಲ್ಲಿ ವಂಚನೆಯೇ ದೃಷ್ಟವಾಗಿದೆ. ಅಂತೂ ಬಾಧವು. ರಾಗರಹಿತರೂ ಕೂಡ ಜ್ಞಾನಾಂಕುರವನ್ನು ರಕ್ಷಿಸುವುದಕ್ಕಾಗಿ ಛಲಾದಿಗಳಿಂದ ಪ್ರತಿವಾದಿಗಳನ್ನು ವಂಚಿಸುತ್ತಾರೆ ಎಂದು ಎಲ್ಲರೂ ಅಂಗೀಕರಿಸಿದ್ದಾರೆ. ಹೀಗೆ ಸಮರ್ಥಗಳಾದ ಇಂದ್ರಿಯಗಳಿವೆ ಇತ್ಯಾದಿಗಳನ್ನು ಪ್ರಮಾಣವಿಲ್ಲದೇನೇ ಕಲ್ಪಿಸಿಕೊಳ್ಳಬೇಕು. (10) ಅಥವಾ ಒಬ್ಬನು ಸರ್ವಜ್ಞನೂ ವಂಚಿಸದಿರುವವನೂ ಇದ್ದಾನೆಂದು ಅಂಗೀಕರಿಸುವ; ಆದಾಗ್ಯೂ ಧರ್ಮಾದಿಗಳನ್ನ ಪ್ರತಿಪಾದಿಸುವ ವಾಕ್ಯವಿಶೇಷವನ್ನು ಅವನು ಮಾಡಿದ್ದೆಂದು ಹೇಗೆ ನಿಶ್ಚಯಿಸುವುದು? ಸರ್ವಜ್ಞನೂ ವಂಚಿಸದಿರುವವನೂ ಆದವನು ತಂತಮ್ಮ ಹಿತಪ್ರಾಪ್ತಿಗೂ ಅಹಿತಪರಿಹಾರಕ್ಕೂ ಸಾಧನವನ್ನು ತಿಳಿಯದಿರುವ ಅನೇಕವಿಧಗಳಾದ ವ್ಯಸನಸಮುದ್ರಗಳಲ್ಲಿ ಮುಳುಗಿದ ಪ್ರಾಣಿಗಳನ್ನು ನೋಡುತ್ತಾ ಉಪದೇಶಿಸದೆ ಇರಲಾರನು, ಎಂದು ಹೇಳಕೂಡದು. ಇಂತಹ ಪ್ರಾಣಿಗಳನ್ನು ನೋಡಿಕೊಂಡೇ ಇರುವ ಅನೇಕ ಸಿದ್ಧರು ಉದಾಸೀನರೇ ಆಗಿರುತ್ತಾರೆ ಎಂದು ಸರ್ವರೂ ಅಂಗೀಕರಿಸಿರುವರು. ಹಾಗೆಯೇ ಬುದ್ಧನೂ ಉದಾಸೀನನೇ ಆಗಿರುತ್ತಾನೆ ಎಂದೇ ಕೂಡಬಹುದು. (11) ಅಥವಾ ಇವನು ಉಪದೇಶಿಸಲಿ;ಇದು ಅವನ ಉಪದೇಶವೆಂದು ಕಲ್ಪಿಸಿಕೊಳ್ಳಲೇಬೇಕು. ಆದಕಾರಣ ಹೀಗೆ ಕಲ್ಪನಾಗೌರವವು ಪ್ರಸಕ್ತವಾದುದರಿಂದ ಪೌರುಷೇಯವಾಕ್ಯದಿಂದ ಧರ್ಮಾದಿ ನಿಶ್ಚಯವನ್ನು ಶಂಕಿಸಕೂಡದು. ಜ್ಞಾನಿಗಳು ಲೋಕದಲ್ಲಿ ಪ್ರಮಾಣವಿಲ್ಲದೇನೇ ಒಬ್ಬ ಪುರುಷನಿಗೆ ಆಪ್ತತ್ವವನ್ನು ಕಲ್ಪಿಸಿ, ಕೆಲವು ವಾಕ್ಯಗಳನ್ನು ಅವನು ಮಾಡಿದ್ದೆಂದೂ ಕಲ್ಪಿಸಿ ಅವುಗಳ ಅರ್ಥನಿಶ್ಚಯವನ್ನು ಮಾಡಲಾರರು. ಮಾಡುವವರಾದರೆ ತಮ್ಮಲ್ಲಿಯೇ ಅವೆಲ್ಲವನ್ನೂ ಏಕೆ ಕಲ್ಪಿಸಿಕೊಳ್ಳಲಾರರು? ಆದಪ್ರಯುಕ್ತ ಪೌರುಷೇಯವಾಕ್ಯದಿಂದ ಧರ್ಮಾದಿಗಳು ಸಿದ್ಧವಾಗದಿರುವುದರಿಂದ ಅವುಗಳನ್ನ ಪ್ರತಿಪಾದಿಸುವ ಯಾವುದಾದರೊಂದು ಅಪೌರುಷೇಯ

ವಾಕ್ಯವನ್ನು ಅಂಗೀಕರಿಸಿ ಬುದ್ಧಋಷಭಾದಿಗಳು ಅವುಗಳ ಅರ್ಥವನ್ನು ಅನುವಾದಮಾಡಿರುತ್ತಾರೆ ಎಂದು ಆಯಾಯ ವಾದಿಗಳು ಧರ್ಮಾದಿನಿಶ್ಚಯವನ್ನು ಇಚ್ಛಿಸುವವರೂ ಅಂಗೀಕರಿಸಲೇಬೇಕು. "ಶೌದ್ಧೋದನಿಪ್ರಭೃತಯಸ್ಸಂಪ್ರದಾಯಪ್ರವರ್ತಕಾಃ ॥" ಬುದ್ಧನೇ ಮೊದಲಾದವರು ಇದ್ದ ಸಂಪ್ರದಾಯವನ್ನೇ ಹಬ್ಬಿಸಿದವರು ಎಂದು. (12) ಹಾಗಾದರೆ ಪ್ರಸಿದ್ಧಗಳಾದ ಬೌದ್ಧಾದಿ ವಾಕ್ಯಗಳನ್ನು ಬಿಟ್ಟು ಧರ್ಮಾದಿಗಳನ್ನ ಪ್ರತಿಪಾದಿಸುವ ಯಾವುದಾದರೊಂದು ಅಪೌರುಷೇಯ ವಾಕ್ಯವನ್ನು ನೀವೂ ಕೂಡ ಕಲ್ಪಿಸಿಕೊಳ್ಳಲೇಬೇಕು. ಅಂತೂ ಸಾಮ್ಯವೇ ಎಂದಾಶಂಕಿಸಿದರೆ—

**ಮೂ ॥ ಅಪೌರುಷೇಯವಾಕ್ಯಾಂಗೀಕಾರೇ ನ ಕಿಂಚಿತ್ಕಲ್ಪ್ಯಂ ॥ ೧೯ ॥**

ಅ ॥ (ಪೌರುಷೇಯ ವಾಕ್ಯದಿಂದ ಧರ್ಮಾದಿಗಳ ನಿಶ್ಚಯವನ್ನು ಇಚ್ಛಿಸುವವನು ಹೇಗೆ ಬಹಳವಾಗಿ ಸಾರ್ವಜ್ಞಾದಿಗಳನ್ನ ಕಲ್ಪಿಸಿಕೊಳ್ಳ ಬೇಕೋ, ಹಾಗೆ) ಅಪೌರುಷೇಯ ವಾಕ್ಯಾಂಗೀಕಾರೇ=ಅಪೌರುಷೇಯ ವಾಕ್ಯವನ್ನು ಅಂಗೀಕರಿಸಿದರೆ, ಕಿಂಚಿತ್=ಯಾವುದೊಂದು ಬಹಳವಾದುದು, ನ ಕಲ್ಪ್ಯಂ=ಕಲ್ಪಿಸಿ ಕೊಳ್ಳಬೇಕಾಗಿಲ್ಲ. (ಮತ್ತೆ ಅಪೌರುಷೇಯ ವಾಕ್ಯ ಒಂದನ್ನೇ ಕಲ್ಪಿಸಿದರೆ ಸಾಕು.)

ತಾ ॥ ಧರ್ಮಾದಿ ನಿಶ್ಚಯವನ್ನು ಅವಶ್ಯವಾಗಿ ಅಂಗೀಕರಿಸಬೇಕಾದರೆ ಬಹು ಕಲ್ಪನಾ ಪಕ್ಷವನ್ನು ಬಿಟ್ಟು ಅಲ್ಪಕಲ್ಪನಾಪಕ್ಷವನ್ನು ಆಶ್ರಯಿಸುವುದೇ ಶ್ರೇಷ್ಠವು. 'ಅತಏವ ಯತ್ರಾಲ್ಪೀಯಾಂಸೋ ದೋಷಾಸ್ಸ ಪಕ್ಷಃ' ಎಲ್ಲಿ ಅಲ್ಪದೋಷಗಳೋ ಅಂತಹ ಪಕ್ಷವನ್ನು ಸ್ವೀಕರಿಸಬೇಕು. ಆದಾಗ್ಯೂ ದುಷ್ಟವಾದುದನ್ನು ಹೇಗೆ ಅಂಗೀಕರಿಸುವುದು, ಎಾದರೆ ಧರ್ಮಾದಿಗಳನ್ನು ನಿಶ್ಚಯಿಸುವ ವಿಷಯದಲ್ಲಿ ಬೇರೆ ಗತಿಯಿಲ್ಲದಿರುವುದರಿಂದ ಅಂಗೀಕರಿಸಲೇ ಬೇಕು. ಈ ದೋಷವು ಪರರಿಗೆ ಮಾತ್ರ ತಗಲುವುದು. ನಮಗೆ ದೋಷವಲ್ಲವೆಂಬುದನ್ನು ಮುಂದಕ್ಕೆ ಹೇಳುವೆವು. ಈ ಪ್ರಕಾರ ಎಲ್ಲಾ ಸಿದ್ಧಾಂತಿಗಳೂ ಅಪೌರುಷೇಯವಾಕ್ಯವನ್ನು ಅವಶ್ಯವಾಗಿ ಅಂಗೀಕರಿಸ ಬೇಕಾದುದರಿಂದ 'ವೇದಃ ಅಪೌರುಷೇಯಃ' ಎಂಬುವ ವಾಕ್ಯವು ಅಸಂಭಾವಿತವಾದ ಅರ್ಥವುಳ್ಳದ್ದಲ್ಲ ಎಂದು ಸಿದ್ಧವಾಯಿತು ॥ ೧೯ ॥

ವೇದವು ಅಪೌರುಷೇಯವೆಂದು ಸಂಭಾವಿತವಾಗಲಿ, ನಿಶ್ಚಯವಾಗುವುದಿಲ್ಲ. ಅನಿಶ್ಚಿತವಾದದು ಹೇತುವಾಗಲಾರದು ಎಂದಾಶಂಕಿಸಿದರೆ —

**ಮೂ ॥ ಅಪೌರುಷೇಯತ್ವಂ ಚ ಸ್ವತ ಏವ ಸಿದ್ಧಂ। ವೇದಕರ್ತುರಪ್ರಸಿದ್ಧೇಃ॥ ॥ ೨೦ ॥**

ಅ ॥ (ವೇದಕ್ಕೆ) ಅಪೌರುಷೇಯತ್ವಂ ಚ=ಅಪೌರುಷೇಯತ್ವ (ಪುರುಷರಿಂದ ನಿರ್ಮಿಸಲ್ಪಡದಿರುವಿಕೆಯು) ವಾದರೂ (ಅಸಂಭಾವನೆಯಿಂದ ತಡೆಯಲ್ಪಟ್ಟದ್ದಾಗಿ ಸಾಧಿಸಲಿಕ್ಕೆ ಅಶಕ್ಯವಾಗಿದ್ದಿತು. ಈಗ ಅಸಂಭಾವನೆಯು ನಿರಾಸವಾಗೋಣ) ಸ್ವತ ಏವ=ಅನಾಯಾಸದಿಂದಲೇ, ಸಿದ್ಧಂ=ನಿಶ್ಚಿತವಾಯಿತು, (ಏಕೆಂದರೆ) ವೇದಕರ್ತುಃ=ವೇದವನ್ನು ಮಾಡಿದವನಿಗೆ, ಅಪ್ರಸಿದ್ಧೇಃ= ಪ್ರಸಿದ್ಧಿಯಿಲ್ಲದಿರುವುದರಿಂದ, ('ವೇದಃ'=ವೇದವು, ಅಪೌರುಷೇಯಃ=ಪುರುಷಕೃತವಲ್ಲ, ಅಪ್ರಮಿತಕರ್ತೃಕತ್ವಾತ್=ಕರ್ತೃಪ್ರಮಿತಿಯಿಲ್ಲದಿರುವುದರಿಂದ, ಗಗನವತ್=ಆಕಾಶದಂತೆ) ॥ ೨೦ ॥

ಪರ್ವತದ ಕಂದರದಲ್ಲಿರತಕ್ಕ ತೃಣಾಂಕುರವನ್ನು ಮಾಡಿದವನು ಯಾವ ಪ್ರಮಾಣದಿಂದಲೂ ಇಂತಹನೆಂದು ನಮಗೆ ತಿಳಿಯದಿದ್ದರೂ ಹೇಗೆ ನಿಶ್ಚಯವುಂಟೋ ಹಾಗೆ ವೇದವನ್ನು ಮಾಡಿದವನು ಇಂತಹನೆಂದು ನಮಗೆ ತಿಳಿಯದಿದ್ದರೂ ಇದ್ದಾನೆಂದು ಶಂಕಿಸುತ್ತೇವೆ. ಎಂದಾಶಂಕಿಸಿದರೆ —

ಮೂ || ಅಪ್ರಸಿದ್ಧ್ಯಾ ಚ ಕರ್ತುಃಸ್ತತ್ಕಲ್ಪನೇ ಕಲ್ಪನಾಗೌರವಂ || ೨೧ ||

ಅ || ಕರ್ತುಃ=ವೇದಕರ್ತನಿಗೆ, ಅಪ್ರಸಿದ್ಧ್ಯಾ ಚ=ಪ್ರಸಿದ್ಧಿಯಿಲ್ಲದಿರಲು, ತತ್ಕಲ್ಪನೇ=ಅವನನ್ನು ಶಂಕಿಸಿದರೆ, ಕಲ್ಪನಾಗೌರವಂ=ಕಲ್ಪನಾಗೌರವವು.

ತಾ || ವೇದಕರ್ತನು ಪ್ರಮಿತನಾಗದಿದ್ದರೂ ಆತನನ್ನು ಶಂಕಿಸುವವನು ಧರ್ಮಾದಿಗಳನ್ನು ಅಂಗೀಕರಿಸದಿದ್ದರೆ ಸಿದ್ಧಾಂತಿಯಾಗಲಾರನು. ಅಂಗೀಕರಿಸಿದರೆ ೧ ಬುದ್ಧ ಮೊದಲಾದವರ ಮಾತಿನಿಂದ ನಿಶ್ಚಯಿಸುವನೋ, ೨ ವೇದದಿಂದಲೋ, ೩ ಅಪೌರುಷೇಯವಾದ ಮತ್ತೊಂದು ವಾಕ್ಯವನ್ನು ಕಲ್ಪಿಸಿ ಅದರಿಂದಲೋ, ಬೇರೆ ಗತಿಯಿಲ್ಲ. ಅನುಮಾನಾದಿಗಳನ್ನು ನಿರಾಕರಿಸುವೆವು. ೧ನೇ ೨ನೇ ಕಲ್ಪಗಳಲ್ಲಿ ಬುದ್ಧಾದಿಗಳಿಗೆ ವೇದಕರ್ತನಿಗಾಗಲೀ ಸರ್ವಜ್ಞತ್ವಾದಿಗಳನ್ನು ಪ್ರಮಾಣವಿಲ್ಲದೇನೇ ಕಲ್ಪಿಸಬೇಕು, ಹೀಗೆ ಕಲ್ಪನಾಗೌರವವು. ೩ನೇ ಕಲ್ಪದಲ್ಲಿ ಅವನ ಮಾತು ಎಂದೂ ವಾಕ್ಯಕ್ಕೆ ಅಪೌರುಷೇಯತ್ವವನ್ನೂ ಕಲ್ಪಿಸಬೇಕು, ಹೀಗೆ ಕಲ್ಪನಾಗೌರವವೇ ಪ್ರಯೋಜನವನ್ನನುಸರಿಸಿ ಪ್ರಮಾಣವನ್ನು ಕಲ್ಪಿಸುವುದು ಯುಕ್ತವಲ್ಲ. ನಿಶ್ಚಿತವಾದ ಪ್ರಮಾಣದಿಂದ ಪ್ರಮೇಯವನ್ನಂಗೀಕರಿಸುವೆವು. ಪ್ರಕೃತ ಧರ್ಮಾದಿಗಳನ್ನು ನಿಶ್ಚಯಿಸತಕ್ಕ ಪ್ರಮಾಣವು ಯಾವುದೂ ಇರುವುದಿಲ್ಲ. ಆದಪ್ರಯುಕ್ತ ಕಲ್ಪನಾಗೌರವವು ಪ್ರಸಕ್ತವಾಗುವುದರಿಂದ ವೇದಗಳಿಗೆ ಕರ್ತನು ಪ್ರಮಿತನೇ ಆಗದಿರುವುದರಿಂದ ಆತನನ್ನು ಶಂಕಿಸಕೂಡದು || ೨೧ ||

ಅದರಿಂದ ಏನಾಯಿತೆಂದಾಶಂಕಿಸಿದರೆ —

ಮೂ || ಅಕಲ್ಪನೇ ಚಾಕರ್ತೃಕತ್ವಂ ಸಿದ್ಧಮೇವ || ೨೨ ||

ಅ || (ವೇದಕರ್ತನು ಪ್ರಮಿತನಾಗದಿರಲು ಕಲ್ಪನಾಗೌರವವು ಪ್ರಸಕ್ತವಾಗುವುದರಿಂದ) ಅಕಲ್ಪನೇ ಚ=ಸಂಶಯವೂ ಇಲ್ಲದಿರಲು, ಅಕರ್ತೃಕತ್ವಂ=ವೇದಕ್ಕೆ ಕರ್ತನಿಲ್ಲವೆಂದು, ಸಿದ್ಧಮೇವ=ನಿಶ್ಚಿತವೇ ಆಯಿತು || ೨೨ ||

'ವೇದಕ್ಕೆ ಕರ್ತನಿಲ್ಲ'ಎಂಬುವ ವಿಷಯದಲ್ಲಿ ಅನುಮಾನವನ್ನು ಹೇಳಿ ಅದನ್ನು ಸ್ಥಿರೀಕರಿಸುವುದಕ್ಕಾಗಿ ಅನುಕೂಲತರ್ಕವು ಹೇಳಲ್ಪಟ್ಟದೆ. ಅದರ ಮೇಲೆ ಆಕ್ಷೇಪವು. ವೇದಕ್ಕೆ 'ಕರ್ತನು ಪ್ರಮಿತನಲ್ಲ' ಎಂಬುವುದು ಸಿದ್ಧವಲ್ಲ. 'ವೇದಃ=ವೇದವು, ಸಕರ್ತೃಕಃ=ಕರ್ತೃಸಹಿತವಾಗಿದೆ, ವಾಕ್ಯತ್ವಾತ್=ವಾಕ್ಯವಾದ ಪ್ರಯುಕ್ತ, ಲೌಕಿಕವಾಕ್ಯವತ್= ಲೌಕಿಕವಾಕ್ಯದಂತೆ. ಇದು ಮೊದಲಾದ ಅನುಮಾನದಿಂದ ವೇದಕರ್ತನು ಪ್ರಮಿತನೇ ಆಗಿರುತ್ತಾನೆ. ಎಂದರೆ —

ಮೂ || ನ ಚ ಲೌಕಿಕವಾಕ್ಯವತ್ಸಕರ್ತೃಕತ್ವಂ । ತಸ್ಯಾಕರ್ತೃಕತ್ವಪ್ರಸಿದ್ಧ್ಯಭಾವಾತ್ || ೨೩ ||

ಅ || (ವೇದಕ್ಕೆ) ಸಕರ್ತೃಕತ್ವಂ=ಕರ್ತನಿದ್ದಾನೆಂಬುವುದು, ಲೌಕಿಕವಾಕ್ಯವತ್=ಲೌಕಿಕವಾದ ವಾಕ್ಯದಂತೆಯೇ, (ವಾಕ್ಯತ್ವಾದಿ ಹೇತುವಿನಿಂದ ಅನುಮೇಯಿಸಲಿಕ್ಕೆ ಯೋಗ್ಯವಾದುದು), ನ ಚ=ಅಲ್ಲ, (ಏಕೆಂದರೆ) ತಸ್ಯ=ಆ ಲೌಕಿಕವಾಕ್ಯಕ್ಕೆ, ಅಕರ್ತೃಕತ್ವಪ್ರಸಿದ್ಧ್ಯಭಾವಾತ್=ಕರ್ತನು ಇಲ್ಲವೆಂದು ಪ್ರಸಿದ್ಧಿಯಿಲ್ಲದಿರುವುದರಿಂದ, ಸಕರ್ತೃಕವೇ ಆಗಿಯದೆ. (ಪಕ್ಷೀಕೃತವಾದ ವೇದಕ್ಕಾದರೂ ಕರ್ತನಿಲ್ಲವೆಂದೇ ಪ್ರಸಿದ್ಧಿಯಿದ್ದುದರಿಂದ ಕರ್ತನಿಲ್ಲವೆಂದೇ ಸಿದ್ಧಿಸಲಿ.)

ತಾ || ವಾಕ್ಯತ್ವ ಮೊದಲಾದ ಹೇತುವು ಲೌಕಿಕ ವಾಕ್ಯ, ವೇದವಾಕ್ಯಗಳಲ್ಲಿ ಸಮಾನ ವಾದಾಗ್ಯೂ ಲೌಕಿಕ ವಾಕ್ಯವು ವೇದವಾಕ್ಯವಲ್ಲದಿರುವುದರಿಂದ ಸಕರ್ತೃಕವಾಗಲಿ, ಇದು ವೇದವಾದ ಪ್ರಯುಕ್ತ ಅಕರ್ತೃಕವಾಗಲಿ, ಎಂದು ಶಂಕಿಸಿದರೆ ಬಾಧಕವಿಲ್ಲದಿರುವುದರಿಂದ ವಾಕ್ಯತ್ವ ಮೊದಲಾದ ಹೇತುವು ಅಪ್ರಯೋಜಕವಾಯಿತು. ಆದಪ್ರಯುಕ್ತ ಹೀಗೆ ಅನುಮೇಯಿಸ ಕೂಡದು. ಕರ್ತನಿಲ್ಲವೆಂದು ಪ್ರಸಿದ್ಧಿಯಿರತಕ್ಕ ವಾಕ್ಯವು ವೇದವು. ಅದರ ಅಭಾವವೇ ಅವೇದವು. ಅಕರ್ತೃಕತ್ವಪ್ರಸಿದ್ಧಿಯುಳ್ಳದ್ದೆಂದರೆ ಪ್ರತ್ಯಕ್ಷ ಮೊದಲಾದ ಪ್ರಮಾಣಗಳಾಗಲೀ ವಿಪ್ರ ಲಂಭಾದಿಗಳಾಗಲೀ ಇದಕ್ಕೆ ಮೂಲವು ಉಪಲಬ್ಧವಾಗುವುದಿಲ್ಲವೆಂದು ಪ್ರಸಿದ್ಧಿವಿಷಯವಾದುದು. ವಿಪ್ರಲಂಭಾದಿ ಮೂಲಕವಾದ ವಾಕ್ಯವು ಮಹಾಜನರಿಂದ ಪರಿಗ್ರಹೀತವಾಗಲಾರದು. ಇದೇ ಅಭಿಪ್ರಾಯವನ್ನು ಉದಯನಾಚಾರ್ಯರೂ ನಿರೂಪಿಸಿರುವರು. "ಅನುಪಲಭ್ಯಮಾನ ಮೂಲತ್ವೇ ಸತಿ ಮಹಾಜನಪರಿಗೃಹೀತ ವಾಕ್ಯತ್ವಂ ವೇದತ್ವಂ' ಮೂಲವು ಉಪಲಬ್ಧವಾಗದಿದ್ದು ಮಹಾಜನ ರಿಂದ ಪರಿಗೃಹೀತವಾದ ವಾಕ್ಯವೇ ವೇದವೆಂದು. ಸರ್ವಜ್ಞನಾದ ಈಶ್ವರನು ಪ್ರತ್ಯಕ್ಷತಃ ಅರ್ಥ ವನ್ನು ಹೊಂದಿ ವೇದವನ್ನು ಮಾಡಿದ್ದಾನೆ ಎಂದಂಗೀಕರಿಸಿದ್ದರಿಂದ ಪ್ರಮಾಣಭೂತವಾದ ಈಶ್ವರ ಪ್ರತ್ಯಕ್ಷಮೂಲಕತ್ವವನ್ನೇ ಉದಯನನು ಅಂಗೀಕರಿಸಿರುತ್ತಾನೆ ಎಂದರೆ ಉದಯನನು ಈಶ್ವರ ಪ್ರತ್ಯಕ್ಷ ಮೂಲಕತ್ವವನ್ನು ಹೇಳಿದರೂ ಈಶ್ವರಜ್ಞಾನರೂಪವಾದ ಪ್ರತ್ಯಕ್ಷಕ್ಕೆ ಗುಣಜನ್ಯತ್ವವಿಲ್ಲ ದಿರುವುದರಿಂದ ಪ್ರಾಮಾಣ್ಯವಿಲ್ಲ. ಕಾರಣ ಹೀಗೆ ಹೇಳಲಿಕ್ಕೆ ಶಕ್ಯವೇ ಆಗುವುದು. ಅಂತೂ ವೇದಃ ಸಕರ್ತೃಕಃ ವಾಕ್ಯತ್ವಾತ್' ಎಂಬುವ ಅನುಮಾನವು ವೈಶೇಷಿಕಾದಿಗಳದ್ದು. ವಾಕ್ಯತ್ವ ವಿರಲಿ, ಸಕರ್ತೃಕತ್ವ ಬೇಡ, ಎಂದು ಅಪ್ರಯೋಜಕವು. ಸಕರ್ತೃಕತ್ವವಿಲ್ಲದಿದ್ದರೂ ವಾಕ್ಯತ್ವವು ಕೂಡುತ್ತದೆ ಹೀಗೆ ಅನ್ಯಥಾಸಿದ್ಧಿಯು. ವ್ಯಾಪ್ತಿಗ್ರಾಹಕ ಪ್ರಮಾಣವಿಲ್ಲದಿರುವುದರಿಂದಲೂ, ಉಪಾಧಿಯಿದ್ದಪ್ರಯುಕ್ತವೂ ವ್ಯಾಪ್ಯತ್ವಾಸಿದ್ಧವು || ೨೩ ||

ಕರ್ತನಿಲ್ಲವೆಂದು ಪ್ರಸಿದ್ಧಿಯಿರತಕ್ಕ ವಾಕ್ಯವು ವೇದವು ಎಂದು ವೇದಕ್ಕೆ ಹೇಳಿದ ಲಕ್ಷಣವು ಅಯುಕ್ತವು. ಗೂಢಕರ್ತೃಕವಾದ ವಾಕ್ಯಕ್ಕೂ ಕರ್ತನಿಲ್ಲವೆಂದು ಪ್ರಸಿದ್ಧಿಮಾಡಲ್ಪಟ್ಟ ವಾಕ್ಯಕ್ಕೂ ವೇದತ್ವವು ಬರಬೇಕಾಗುವುದು. ವೇದತ್ವವನ್ನಂಗೀಕರಿಸದಿದ್ದರೆ ಅತಿವ್ಯಾಪ್ತಿ ಬರುವುದು ಎಂದಾಶಂಕಿಸಿದರೆ—

**ಮೂ || ನ ಚ ಕೇನಚಿತ್ಕೃತ್ವಾ ವೇದ ಇತ್ಯುಕ್ತಂ ವೇದ ಸಮಂ ||**
**ಪರಂಪರಾಭಾವಾತ್ || ೨೪ ||**

ಅ || ಕೇನಚಿತ್=ಯಾರೊಬ್ಬನಿಂದ, ಕೃತ್ವಾ=ಮಾಡಿ, ವೇದ ಇತಿ ಉಕ್ತಂ=ವೇದ ವೆಂದು ಹೇಳಲ್ಪಟ್ಟದ್ದು, (ಕರ್ತನಿಲ್ಲವೆಂದು ಪ್ರಸಿದ್ಧಿಯನ್ನು ಹೊಂದಿದ ವಾಕ್ಯವು ) ವೇದಸಮಂ= ಪ್ರಸಿದ್ಧವಾದ ವೇದದಂತೆ ವೇದತ್ವದಿಂದ ಯುಕ್ತವಾದುದು, ನ ಚ (ಪ್ರಸಜ್ಯತೇ)=ಪ್ರಸಕ್ತ ವಾಗುವುದಿಲ್ಲ, ಪರಂಪರಾಭಾವಾತ್=ಪರಂಪರೆಯಿಲ್ಲದಿರುವುದರಿಂದ.

ತಾ || (1) ಅಕರ್ತೃಕತ್ವಪ್ರಸಿದ್ಧಿಯುಳ್ಳದ್ದೆಂದರೆ — ಪ್ರತ್ಯಕ್ಷಾದಿ ಮೂಲಕವೆಂದು ಉಪಲಬ್ಧವಾಗಲಿಲ್ಲವೆಂದುಕ್ತವಾಗಿಯದೆ. ಕರ್ತನಿಲ್ಲವೆಂದು ಪ್ರಸಿದ್ಧಿಯನ್ನು ಹೊಂದಿದ ವಾಕ್ಯಕ್ಕೆ ಅಧ್ಯೇತೃಪರಂಪರೆಯೇ ಇಲ್ಲದಿರುವುದರಿಂದ ಯಾರಲ್ಲಿ ವಿಚ್ಛೇದವು ಬಂದದೋ ಅವನ ಪ್ರತ್ಯಕ್ಷಾದಿ ಮೂಲಕವೆಂದು ಅನುಮಾನದಿಂದ ಸಿಗುವುದು. 'ವಿಮತಂ ವಾಕ್ಯಂ'=ವಿವಾದವಿಷಯವಾದ ವಾಕ್ಯವು, ಏತತ್ಪ್ರತ್ಯಕ್ಷಾದಿಮೂಲಂ=ಇವನ ಪ್ರತ್ಯಕ್ಷಾದಿ ಮೂಲಕವು, ಅಸ್ಮಿನ್ ವಿಚ್ಛಿನ್ನ

ಪರಂಪರಾತ್ವಾತ್=ಇವನಲ್ಲಿ ಪರಂಪರೆಯು ವಿಚ್ಛೇದ ಹೊಂದಿದ ಪ್ರಯುಕ್ತ, ಯತ್ ಯಸ್ಮಿನ್ ವಿಚ್ಛಿನ್ನ ಪರಂಪರಂ ವಾಕ್ಯಂ=ಯಾವುದು ಯಾರಲ್ಲಿ ವಿಚ್ಛೇದ ಹೊಂದಿದ ಪರಂಪರೆಯುಳ್ಳ ವಾಕ್ಯವೋ ಅದು ಆತನ ಪ್ರತ್ಯಕ್ಷಾದಿ ಮೂಲಕವು. ಯಥಾ ಸಂಪ್ರತಿಪನ್ನಂ=ಕುಮಾರ ಸಂಭ ವಾದಿಗಳು ಕಾಲಿದಾಸಾದಿಗಳಲ್ಲಿ ವಿಚ್ಛೇದ ಹೊಂದಿದ ಪರಂಪರೆಯುಳ್ಳದ್ದಾದುದರಿಂದ ಆತನ ಪ್ರತ್ಯಕ್ಷಾದಿ ಮೂಲಕವು, ಆದ ಕಾರಣ ವೇದಕ್ಕೆ ಹೇಳಿದ ಲಕ್ಷಣವು ಗೂಢ ಕರ್ತೃಕವಾದ ವಾಕ್ಯದಲ್ಲಿಲ್ಲ ॥ ೨೪ ॥

ಅಧ್ಯೇತೃಗಳ ಪಾರಂಪರ್ಯವಿಲ್ಲದಿರುವುದರಿಂದ ಗೂಢನು ಮಾಡಿದ ವಾಕ್ಯಕ್ಕೆ ವೇದ ಲಕ್ಷಣವಿಲ್ಲವೆಂದನುಮೇಯಿಸಲಿಕ್ಕೆ ಶಕ್ಯವಾಗುವುದಿಲ್ಲ. ಅಧ್ಯಯನವಿಲ್ಲದೇನೇ ವಸಿಷ್ಠಾದಿಗಳು ವೇದಗಳನ್ನು ನೋಡುತ್ತಾರೆ ಎಂದು ನೀವೇ ಅಂಗೀಕರಿಸಿರುವಿರಿ. ತಥಾ ಚ ಯಾರಿಗೆ ವೇದವು ತನ್ನಷ್ಟಕ್ಕೇನೇ ಪ್ರತಿಭಾತವಾಗಿದೆಯೋ ಅವರು ಕಂಡ ವಾಕ್ಯಕ್ಕೆ ಪರಂಪರೆಯಿಲ್ಲದಿರುವುದರಿಂದ ವೇದಕ್ಕೆ ಹೇಳಿದ ಲಕ್ಷಣವು ಇಲ್ಲವೆಂದಾಗುವುದು. ವೇದವೇ ಆಗದೆ ಹೋಗಬೇಕಾಗುವುದು. ಅದಕ್ಕೂ ವೇದತ್ವವನ್ನಂಗೀಕರಿಸಿದರೆ ನಿಮ್ಮ ಮತದಲ್ಲಿ ವ್ಯಭಿಚಾರವು. ವೈಶೇಷಿಕಾದಿಗಳು ವಸಿಷ್ಠಾದಿಗಳಿಗೆ ಸ್ವಯಂಪ್ರತಿಭಾತವೇದತ್ವವನ್ನಂಗೀಕರಿಸಲಿಲ್ಲ. ಹೇತುವಿದೆ, ಸಾಧ್ಯವಿಲ್ಲ. ಎಂದಾ ಶಂಕಿಸಿದರೆ —

**ಮೂ ॥ ನ ಚ ಸ್ವಯಂಪ್ರತಿಭಾತವೇದ್ಯೈರ್ದೃಷ್ಟಮವೇದವಾಕ್ಯಂ ಭವತಿ । ಪರಂಪರಾಸಿದ್ಧವೇದವಾಕ್ಯಾನುಸಾರಿತ್ವಾತ್ ॥ ೨೫ ॥**

ಅ ॥ ಸ್ವಯಂಪ್ರತಿಭಾತವೇದ್ಯೈಃ=ತನ್ನಷ್ಟಕ್ಕೇನೇ ತೋರಲ್ಪಟ್ಟ ವೇದವುಳ್ಳ ಋಷಿ ಮೊದ ಲಾದವರಿಂದ, ದೃಷ್ಟಂ=ಕಾಣಲ್ಪಟ್ಟದ್ದು, ಅವೇದವಾಕ್ಯಂ=ವೇದವಾಕ್ಯವಾಗದಿರುವುದು, ನ ಚ ಭವತಿ=ಆಗುವುದಿಲ್ಲ. ಪರಂಪರಾಸಿದ್ಧವೇದವಾಕ್ಯಾನುಸಾರಿತ್ವಾತ್, ಪರಂಪರಾ=ಅಧ್ಯಾಪಕರ ಪರಂಪರೆಯುಳ್ಳತನದಿಂದ, ಸಿದ್ಧ=ಪ್ರಸಿದ್ಧವಾದ, ವೇದವಾಕ್ಯ=ವೇದವಾಕ್ಯಕ್ಕೆ, ಅನುಸಾರಿ ತ್ವಾತ್=ಸಮಾನವಾದ ಪ್ರಯುಕ್ತ.

**ತಾ ॥** (1) ಪರಂಪರೆಯೆಂದರೆ ಅಧ್ಯಯನಮಾಡುವವರಿಗೂ, ಅಧ್ಯಾಪಕರಿಗೂ ಪೂರ್ವದಲ್ಲಿರತಕ್ಕುದನ್ನೇ ಅಧ್ಯಯನ ಮಾಡುತ್ತೇವೆ, ಅಧ್ಯಯನ ಮಾಡಿಸುತ್ತೇವೆ ಎಂದು ಜ್ಞಾನವು, ಅಧ್ಯಯನಕ್ಕೆ ವಿಚ್ಛೇದವಿಲ್ಲದಿರುವುದೆಂದಲ್ಲ. ಇಂತಹ ಪರಂಪರೆಯ ಅಭಾವವನ್ನು ಗೂಢಕರ್ತೃಕವಾದ ವಾಕ್ಯಕ್ಕೆ ವೇದಲಕ್ಷಣವಿಲ್ಲವೆನ್ನುವುದರಲ್ಲಿ ಹೇತುವನ್ನಾಗಿ ತೆಗೆದುಕೊಂಡಿರು ತ್ತೇವೆ. ಈ ಪರಂಪರೆಯ ಅಭಾವವು ಸ್ವಯಮೇವ ಪ್ರತಿಭಾತವಾದ ವೇದವುಳ್ಳವರಿಂದ ಕಾಣ ಲ್ಪಟ್ಟ ವಾಕ್ಯದಲ್ಲಿರುವುದಿಲ್ಲ. ಆ ವಾಕ್ಯವೂ ಪರಂಪರೆಯಿಂದ ಸಿದ್ಧವಾದ ಮತ್ತೊಂದು ವೇದ ವಾಕ್ಯದಂತೆಯೇ ಇದೂ ಪೂರ್ವದಲ್ಲಿದ್ದುದೇ ಸರಿ ಎಂದು ಜ್ಞಾನಕ್ಕೆ ವಿಷಯವಾಗಿದೆ. ಆದ ಕಾರಣ (ಪರಂಪರೆಯಿಂದ ಸಿದ್ಧವಾದ ಬೇರೆ ವೇದವಾಕ್ಯದಂತೆಯೇ ಇದೂ ಪೂರ್ವದಲ್ಲಿದ್ದುದೇ ಸರಿ ಎಂಬುವ ಜ್ಞಾನಕ್ಕೆ ವಿಷಯವಾದ ಪ್ರಯುಕ್ತ ಅನುಪಲಭ್ಯಮಾನವಾದ ಪ್ರತ್ಯಕ್ಷಾದಿ ಮೂಲಕತ್ವ ರೂಪವಾದ ವೇದ ಲಕ್ಷಣವಿದ್ದ ಪ್ರಯುಕ್ತ)ವೇದವಾಗದೆ ಹೋಗಬೇಕಾಗುವುದೆಂಬ ಪ್ರಸಂಗವಿಲ್ಲ. ಪರಂಪರಾಭಾವರೂಪವಾದ ಹೇತುವೇ ಇಲ್ಲದಿರುವುದರಿಂದ ಅನ್ಯತರಾನೈಕಾಂತ್ಯವೂ ಇಲ್ಲ ॥೨೫॥

**ಹೀಗಾದರೆ ಗೂಢಕರ್ತೃಕವಾದ ವಾಕ್ಯದಲ್ಲಿ ಪರಂಪರಾಭಾವರೂಪವಾದ ಹೇತುವಿಗೇನೇ ಅಸಿದ್ಧಿ ಬರಬೇಕಾಗುವುದು. ವಸಿಷ್ಠಾದಿಗಳಂತೆಯೇ ಗೂಢನಾದ ಕರ್ತನೂ ಕೂಡ ಪೂರ್ವದಲ್ಲಿ**

ಪ್ರಸಿದ್ಧವಾದುದೇ ನನ್ನಿಂದ ಕಾಣಲ್ಪಟ್ಟಿತು ಎಂದು ಹೇಳುತ್ತಾನೆ ಎಂದು ಹೇಳಕೂಡದು. ಆತನ ಮಾತು ಸುಳ್ಳು ಆಗಿರುತ್ತದೆ. (2) ವಸಿಷ್ಠಾದಿಗಳು ಪುರಾತನಗಳಾದ ವೇದಗಳನ್ನು ನೋಡಿಕೊಂಡೇ ಹಾಗೆ ಹೇಳುವರು. ಗೂಢಕರ್ತನು ನೋಡದೇನೇ ಸುಳ್ಳನ್ನು ಹೇಳುತ್ತಾನೆ ಎಂದು ಹೇಗೆ ನಿಶ್ಚಯವು? ಅಂತೂ ಸಂಧಿಗ್ಧವ್ಯಭಿಚಾರವು. ಸಂಧಿಗ್ಧ ಅಸಿದ್ಧಿಯಾಗಲೀ ಬರುವುದೆಂದರೆ —

**ಮೂ ॥ ವೇದದ್ರಷ್ಟೄಣಾಮುಕ್ತಗುಣವತ್ವಾಚ್ಚ ತೇಷಾಂ ॥ ೨೬ ॥**

ಅ ॥ ವೇದದ್ರಷ್ಟೄಣಾಂ = ವೇದದರ್ಶಿಗಳಿಗೆ, ಉಕ್ತಗುಣವತ್ವಾಚ್ಚ = ಆಗಮಗಳಲ್ಲಿ ಹೇಳಲ್ಪಟ್ಟ ಗುಣಗಳಿದ್ದುದರಿಂದ, ತೇಷಾಂ=ವಸಿಷ್ಠಾದಿಗಳಿಗೆ, (ಮುಂಚೆ ಇರತಕ್ಕ ವೇದಗಳ ನೋಡುವಿಕೆಯನ್ನು ನಿಶ್ಚಯಿಸಲಿಕ್ಕೆ ಶಕ್ಯವಾಗುತ್ತದೆ. ಸಂದಿಗ್ಧ ವ್ಯಭಿಚಾರವು ಇಲ್ಲ. ಗೂಢ ಕರ್ತನಿಗೆ ಆಗಮದಲ್ಲಿ ಹೇಳಿದ ವೇದದ್ರಷ್ಟೃಗುಣಗಳಿಲ್ಲದಿರುವುದರಿಂದ ಅನೃತತ್ವಾದಿಗಳು ನಿಶ್ಚಯಿಸಲ್ಪಡುತ್ತವೆ. ಸಂದಿಗ್ಧಾಸಿದ್ಧಿಯು ಇಲ್ಲ.) (3) ಅಥವಾ ವೇದದ್ರಷ್ಟೄಣಾಂ=ವೇದದ್ರಷ್ಟೃಗಳಿಂದಭಿಮತರಾದ, ತೇಷಾಂ=ವಸಿಷ್ಠಾದಿಗಳಿಗೆ, ಉಕ್ತಗುಣವತ್ವಾಚ್ಚ=ಆಗಮದಲ್ಲಿ ಹೇಳಿದ ವೇದದ್ರಷ್ಟೃ ಲಕ್ಷಣವಿದ್ದ ಪ್ರಯುಕ್ತ ॥ ೨೬ ॥

ಆ ಗುಣಗಳು ಯಾವುವು? ಎಲ್ಲಿ ವೇದದ್ರಷ್ಟೃಗಳ ಲಕ್ಷಣವಾಗಿ ಹೇಳಲ್ಪಟ್ಟವೆ? ಎಂದು ಶಂಕಿಸಿದರೆ —

**ಮೂ ॥ ಉಕ್ತಂ ಚ ಬ್ರಹ್ಮಾಂಡೇ ॥ ವಿಂಶಲ್ಲಕ್ಷಣತೋಽನೂನಸ್ತಪಸ್ವೀ ಬಹುವೇದವಿತ್ ॥ ವೇದ ಇತ್ಯೇವ ಯಂ ಪಶ್ಯೇತ್ಸ ವೇದೋ ಜ್ಞಾನದರ್ಶನಾತ್ ॥ ಇತಿ ॥ ೨೭ ॥**

ಅ ॥ ಬ್ರಹ್ಮಾಂಡೇ=ಬ್ರಹ್ಮಾಂಡ ಪುರಾಣದಲ್ಲಿ, (ಇಂತಹ ಲಕ್ಷಣವುಳ್ಳವರು ವೇದವನ್ನು ನೋಡುವವರು, ಎಂಬುವ ಪ್ರಮೇಯವು) ಉಕ್ತಂ ಚ=ಹೇಳಲ್ಪಟ್ಟದೆ. ವಿಂಶಲ್ಲಕ್ಷಣತಃ=(ಶಾಸ್ತ್ರದಲ್ಲಿ ಉತ್ತಮ ಪುರುಷನಿಗೆ ಯಾವ ೩೨ ಲಕ್ಷಣಗಳು ಹೇಳಲ್ಪಟ್ಟವೋ ಅವುಗಳ ಮಧ್ಯದಲ್ಲಿ)ಇಪ್ಪತ್ತು (೨೦) ಲಕ್ಷಣಗಳಿಂದ, ಅನೂನಃ=ಕಡಿಮೆ ಲಕ್ಷಣಗಳುಳ್ಳವನು, ತಪಸ್ವೀ=ತಪಸ್ಸುಗಳುಳ್ಳವನು, ಬಹುವೇದವಿತ್=ಅನೇಕ ವೇದಗಳನ್ನು ನೋಡಿದವನು, ವೇದ ಇತ್ಯೇವ=ಇದು ಪೂರ್ವದಲ್ಲಿರತಕ್ಕ ವೇದವೇ ಸರಿ ಎಂದೇ, ಯಂ=ಯಾವ ವಾಕ್ಯವಿಶೇಷವನ್ನು, ಜ್ಞಾನದರ್ಶನಾತ್=ದಿವ್ಯದೃಷ್ಟಿಯಿಂದ, ಪಶ್ಯೇತ್=ನೋಡುವನೋ, ಸಃ=ಆ ವಾಕ್ಯವಿಶೇಷವು, ವೇದಃ=ವೇದವೆನಿಸುವುದು.

**ತಾ ॥** (1) ಉತ್ತಮಸ್ತ್ರೀಯರಿಗೂ ವೇದದರ್ಶನವಿದ್ದ ಪ್ರಯುಕ್ತ 'ಅನೂನಃ ತಪಸ್ವೀ' ಇತ್ಯಾದಿ ಪುಲ್ಲಿಂಗವನ್ನು ವಿವಕ್ಷಿಸಬಾರದು. (2) ಇಂತಹ ಲಕ್ಷಣವುಳ್ಳ ಪುರುಷರು ಕಂಡ ವಾಕ್ಯವು ವೇದವೆಂದು ವಿಧಾನಮಾಡಿದರೂ ಇಂತಹ ಲಕ್ಷಣವುಳ್ಳವರು ವೇದದ್ರಷ್ಟೃಗಳೆಂದು ಸಿದ್ಧವೇ ಆಗುವುದು. (3) ಅಥವಾ 'ಅಕರ್ತೃಕತ್ವಪ್ರಸಿದ್ಧ್ಯಭಾವಾತ್' ಎನ್ನುವುದರಿಂದ 'ವೇದಃ ಸಕರ್ತೃಕಃ ವಾಕ್ಯತ್ವಾತ್ ಲೌಕಿಕವಾಕ್ಯವತ್' ಎಂಬುವ ಅನುಮಾನಕ್ಕೆ ವೇದತ್ವಾಭಾವವು ಉಪಾಧಿಯೆಂದುಕ್ತವಾಯಿತು. ಸಕರ್ತೃಕಗಳಾದ ಲೌಕಿಕವಾಕ್ಯಗಳಲ್ಲಿ ವೇದತ್ವಾಭಾವವಿದ್ದ ಪ್ರಯುಕ್ತ ಸಾಧ್ಯವ್ಯಾಪಕವಾಯಿತು. ವಾಕ್ಯತ್ವವತ್ತಾದ ವೇದದಲ್ಲಿ ವೇದತ್ವಾಭಾವವಿಲ್ಲದಿರುವುದರಿಂದ ಸಾಧನಾವ್ಯಾಪಕವಾಯಿತು. (4) ಯಾವ ವೇದತ್ವಾಭಾವವನ್ನು ಉಪಾಧಿಯೆಂದು

ಹೇಳುತ್ತೀರೋ ಅಂತಹ ವೇದತ್ವವು ಎಂತಹುದು? (೧)ವಾಕ್ಯತ್ವವು ಅಥವಾ (೨)ಅದೃಷ್ಟವಿಷಯ ವಾಕ್ಯತ್ವವು. ಎಂದು ಹೇಳಕೂಡದು. ಅಂತಹ ವೇದತ್ವಾಭಾವವು ಬೌದ್ಧವಾಕ್ಯದಲ್ಲಿ ಸಾಧ್ಯಾವ್ಯಾಪಕವಾಗುವುದು. (೩) ಅದೃಷ್ಟವಿಷಯಕಪ್ರಮಾಣವಾಕ್ಯತ್ವವೆಂದಂಗೀಕರಿಸಿದರೆ ತದಭಾವವು ಮನ್ವಾದಿವಾಕ್ಯಗಳಲ್ಲಿ ಸಾಧ್ಯಾವ್ಯಾಪಕವಾಗುವುದು. (೪) ವೇದತ್ವವೆಂದರೆ ಅಪೌರುಷೇಯತ್ವವು, ಅದರ ಅಭಾವವು ಪೌರುಷೇಯತ್ವವು, ಅದೇ ಸಾಧ್ಯವು (ಸಕರ್ತೃಕತ್ವರೂಪವಾದುದು) ಆದ ಕಾರಣ ತನ್ನಲ್ಲಿ ತಾನೇ ಉಪಾಧಿಯಾಗಲಾರದು. (೫) ವೈದಿಕಶಬ್ದಗಳ ಲಕ್ಷಣಗಳಿಂದೊಡಗೂಡಿದ್ದು ಎಂದರೆ— 'ವಿಶುದ್ಧತ್ವಪ್ರಸನ್ನತ್ವಾಕ್ಲಿಷ್ಟತ್ವಶ್ರಾವ್ಯತಾದಯಃ । ವೇದಧರ್ಮಾ ಹಿ ದೃಶ್ಯಂತೇ ವ್ಯಾಸಾದಿವಚನೇಷ್ವಪಿ'॥ ವ್ಯಾಸಾದಿಗಳ ವಾಕ್ಯಗಳಲ್ಲಿಯೂ ವೇದಧರ್ಮಗಳಾದ ವಿಶುದ್ಧತ್ವಾದಿಗಳು ಕಾಣಲ್ಪಡುತ್ತವೆ. ತದಭಾವವು ಭಾರತಾದಿಗಳಲ್ಲಿ ಸಾಧ್ಯಾವ್ಯಾಪಕವಾಗಿರುತ್ತದೆ. (೬) ಅಧ್ಯಯನನಿಯಮವಿಶೇಷವುಳ್ಳದ್ದೆಂದರೆ, ಶಾಖಾಭೇದದಿಂದ ಅವ್ಯವಸ್ಥಿತವೇ ಆಗಿದೆ. (೭) ಪ್ರಾಜ್ಞಮಾತ್ರತ್ವಾದಿರೂಪ ನಿಯಮಸಾಮಾನ್ಯವುಳ್ಳದ್ದೆಂದರೆ, ಭಾರತಾದಿಗಳಲ್ಲಿಯೂ ಇದ್ದ ಪ್ರಯುಕ್ತ ತದಭಾವವೂ ಸಾಧ್ಯಾವ್ಯಾಪಕವೇ ಆಗಿದೆ. (೮) ನಿಯತವಾದ ಕ್ರಮವುಳ್ಳದ್ದೆಂದರೆ, ಉತ್ಪತ್ತಿಯಾದಮೇಲೆ ವಿನಾಶವಿಲ್ಲದಿರುವ ಭಾರತದಲ್ಲಿಯೂ ನಿಯತಕ್ರಮವಿದ್ದ ಪ್ರಯುಕ್ತ ತದಭಾವವು ಸಾಧ್ಯಾವ್ಯಾಪಕವಾಗಲಾರದು. ಕ್ರಮವು ವ್ಯತ್ಯಸ್ತವಾದರೆ ಇದು ವೇದವೇ ಆಗುವುದಿಲ್ಲ ಎಂದು ಹೇಳುವಂತೆಯೇ ಭಾರತವೇ ಆಗುವುದಿಲ್ಲ. ಎಂದು ಮಹಾತ್ಮರಿಂದ ಹೇಳಲ್ಪಡುತ್ತದೆ. (೯) 'ವೇದಃ' ಇತ್ಯಾಕಾರಕವಾದ ವ್ಯವಹಾರಕ್ಕೆ ವಿಷಯವಾದುದೆಂದರೆ 'ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ' ವೇದಗಳ ಮಧ್ಯದಲ್ಲಿ ಇತಿಹಾಸ ಪುರಾಣಗಳು ಐದನೇ ವೇದವು ಎಂಬುವ ಶ್ರುತಿಯಿಂದ ಇತಿಹಾಸಪುರಾಣಾದಿಗಳಲ್ಲಿಯೂ ವೇದತ್ವವಿದೆ. (೧೦)ಮುಖ್ಯವಾಗಿ 'ವೇದಃ' ಇತ್ಯಾಕಾರಕವ್ಯವಹಾರವಿಷಯವಾದುದೆಂದರೆ,ತದಭಾವವೇ ಪಕ್ಷೇತರವಾಗಿದೆ. ಅಂತಹುದನ್ನೂ ಅಂಗೀಕರಿಸಿದರೆ— ಸರ್ವಾನುಮಾನಗಳಿಗೂ ಉಚ್ಛೇದಬರಬೇಕಾಗುವುದು. 'ವೇದಃ=ವೇದವು', ಸಕರ್ತೃಕೋ ನ ಭವತಿ=ಸಕರ್ತೃಕವಾಗುವುದಿಲ್ಲ, ವೇದತ್ವಾತ್=ವೇದವಾದಪ್ರಯುಕ್ತ, ಎಂದು ಸತ್ಪ್ರತಿಪಕ್ಷವನ್ನು ಹೇಳಿದರೆ ಸಾಧ್ಯವುಳ್ಳ ಗಗನಾದಿಗಳಲ್ಲಿ ವೇದತ್ವವಿಲ್ಲದಿರುವುದರಿಂದ ಅಸಾಧಾರಣ್ಯವು, ಎಂದಾಶಂಕಿಸಿ ಅವೇದತ್ವಾತ್ ಎಂದು ಹೇಳುವ ಬಗ್ಗೆ ಅದನ್ನು ನಿರ್ವಚನಮಾಡುವುದಕ್ಕಾಗಿಯೇ 'ಅಕರ್ತೃಕತ್ವಪ್ರಸಿದ್ಧಿರಹಿತತ್ವಾತ್' ಎಂದು ಹೇಳಿರುವರು. ತಥಾಚ ಕರ್ತನಿಲ್ಲವೆಂದು ಪ್ರಸಿದ್ಧಿಯುಳ್ಳದ್ದು ವೇದವು. ಅದಿಲ್ಲದಿರುವುದರಿಂದಲೇ ಲೌಕಿಕವಾಕ್ಯಕ್ಕೆ ಸಕರ್ತೃಕತ್ವವು. ವಾಕ್ಯತ್ವವಿದ್ದಪ್ರಯುಕ್ತವೆಂದಲ್ಲ ॥ ೨೭ ॥

ಈ ಲಕ್ಷಣವು ಗೂಢಕರ್ತೃಕವಾದ ವಾಕ್ಯದಲ್ಲಿಯೂ ಇದ್ದಪ್ರಯುಕ್ತ ಅದೂ ವೇದವಾಗಬೇಕಾಗುವುದು. ಅಂತೂ ಅದರ ಅಭಾವವು ಸಾಧ್ಯಾವ್ಯಾಪಕವಾಯಿತೆಂದರೆ—

**ಮೂ॥ ನ ಚ ಕೇನಚಿತ್ಕೃತ್ವಾ ವೇದ ಇತ್ಯುಕ್ತಂ ವೇದಸಮಂ ॥**
**ಪರಂಪರಾಭಾವಾತ್ ॥** [ಪು. ೧೩೦. ಮೂ. ೨೪]

ಟೀ ॥ (1)ಅಕರ್ತೃಕತ್ವಪ್ರಸಿದ್ಧಿಯುಳ್ಳದ್ದೆಂದರೆ,ಅಜ್ಞಾತವಾದ ಯೋಗ್ಯಕಾರಣವುಳ್ಳದ್ದು ಉಚಿತಕಾರಣವು ತಿಳಿಯದಿರುವುದು. ವಾಕ್ಯಕ್ಕೆ ಉಚಿತಕಾರಣವು ಪ್ರತ್ಯಕ್ಷಮೊದಲಾದ ಪ್ರಮಾಣವಾಗಲೀ ವಿಪ್ರಲಂಭಾದಿಗಳಾಗಲೀ ಹೇಳಬೇಕು. ಅಂತಹ ಕಾರಣವು ಗೂಢಕರ್ತೃಕವಾದ ವಾಕ್ಯದಲ್ಲಿ ವಿಚ್ಛಿನ್ನವಾದ ಪರಂಪರೆಯೇ ಇದ್ದುದರಿಂದ ಅನುಮಾನದಿಂದುಪಲಬ್ಧವೇ ಆಗುವುದು. ಆದಕಾರಣ ಗೂಢಕರ್ತೃಕವಾದ ವಾಕ್ಯಕ್ಕೆ ವೇದತ್ವವು ಪ್ರಾಪ್ತವಾಗುವುದಿಲ್ಲ.

(2) ಅಕರ್ತೃಕತ್ವಪ್ರಸಿದ್ಧಿಮತ್ತ್ವವೆಂದರೆ ಉಪಲಬ್ಧವಾಗದಿರುವ ಪ್ರತ್ಯಕ್ಷಾದಿ ಮೂಲವುಳ್ಳದ್ದೆಂದು ವ್ಯಾಖ್ಯಾನಮಾಡಿರುವುದರಿಂದ ವೇದಕ್ಕೆ ಕರ್ತನಿದ್ದಾನೆ ಎಂಬುವುದನ್ನು ನಿರಾಕರಣ ಮಾಡುವುದಕ್ಕಿಂತ ಮೊದಲು ಕರ್ತನಿಲ್ಲವೆಂಬುವ ಪ್ರಸಿದ್ಧಿಯೇ ಇಲ್ಲದಿರುವುದರಿಂದ ಅಕರ್ತೃಕತ್ವ ಪ್ರಸಿದ್ಧಿಮತ್ತ್ವಾಭಾವರೂಪವಾದ ಉಪಾಧಿಗೆ ಸಾಧನವತ್ತಾದ ಪಕ್ಷದಲ್ಲಿದ್ದುದರಿಂದ ಸಾಧನ ವ್ಯಾಪಕತ್ವವೆನ್ನುವುದು ನಿರಸ್ತವಾಯಿತು. ಅನುಪಲಭ್ಯಮಾನಪ್ರತ್ಯಕ್ಷಾದಿ ಪ್ರಮಾಣಮೂಲತ್ವವನ್ನು 'ವೇದಗಳಿಗೆ ಈಶ್ವರನು ಕರ್ತನು ಎಂದಂಗೀಕರಿಸುವ ನೈಯಾಯಿಕರೂ ಅಂಗೀಕರಿಸಿರುವರು.' ಪರಂಪರಾಭಾವರೂಪವಾದ ಹೇತುವಿಗೆ ವ್ಯಭಿಚಾರವನ್ನು ಪರಿಹರಿಸುವುದಕ್ಕಾಗಿ 'ಸ್ವಯಂಪ್ರತಿಭಾತೇತ್ಯಾದಿ ೩ ವಾಕ್ಯಗಳನ್ನು ಹಿಂದಿನಂತೆಯೇ ವ್ಯಾಖ್ಯಾನಮಾಡಬೇಕು. ವೇದವು ಪೌರುಷೇಯವಾದರೆ 'ಅನ್ಯತ್ರಅದೃಷ್ಟಸ್ಯ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಕಲ್ಪನಾಗೌರವವು ಪ್ರಸಕ್ತವಾಗುವುದರಿಂದ ವಾಕ್ಯತ್ವಾನುಮಾನವು ತರ್ಕದಿಂದ ಬಾಧಿತವಾಗಿಯದೆ. ಅಲ್ಲದೆ ಮೇಲೆ ಹೇಳಲ್ಪಡುವ 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಶ್ರುತಿ ಪುರಾಣಾದಿಗಳಿಂದಲೂ ವಿರುದ್ಧವಾಗಿದೆ. (3) ಇದರಿಂದಲೇ ವೇದಾಃ = ವೇದಗಳು, ಸರ್ವಜ್ಞಪ್ರಣೀತಾಃ = ಸರ್ವಜ್ಞನಿಂದ ನಿರ್ಮಿಸಲ್ಪಟ್ಟವುಗಳು, ವೇದತ್ವಾತ್=ವೇದವಾದುದರಿಂದ, ವ್ಯತಿರೇಕೇಣ ಲೌಕಿಕವಾಕ್ಯವತ್= ಸಾಧ್ಯಾಭಾವ ಹೇತ್ವಭಾವವಿದ್ದುದರಿಂದ ಪೌರುಷೇಯವಾಕ್ಯದಂತೆಯೇ, ಎಂಬೀ ಅನುಮಾನವು ವಿಪಕ್ಷದಲ್ಲಿ ಬಾಧಕವಿಲ್ಲದಿರುವುದರಿಂದ ಹೇತುವು ಸಾಧ್ಯಕ್ಕೆ ಪ್ರಯೋಜಕವಾಗಲಾರದು. (4) ವೇದವನ್ನು ಸರ್ವಜ್ಞನು ಮಾಡಿದ್ದೆಂದು ನಿಶ್ಚಯವಾದರೆ ಆಪ್ತೋಕ್ತತ್ವರೂಪಗುಣವು ಲಾಭವಾಗುವುದರಿಂದ ಪ್ರಮಾಣವೆಂದು ನಿಶ್ಚಯವಾಗುವುದು. ಪ್ರಮಾಣವೆಂದು ನಿಶ್ಚಯವಾದರೆ ಪ್ರಮಾಣಭೂತವಾದ 'ಯಸ್ಸರ್ವಜ್ಞಸ್ಸರ್ವವಿತ್' ಇತ್ಯಾದಿ ರೂಪವಾದ ವೇದದಿಂದ ವೇದಕರ್ತನಿಗೆ ಸಾರ್ವಜ್ಞವು ನಿಶ್ಚಯವಾಗುವುದು. ಅಂತೂ ಸರ್ವಜ್ಞಪ್ರಣೀತತ್ವರೂಪ ವಿಶೇಷಣವು ಪ್ರಸಿದ್ಧವಾಗಿ ಅನುಮಾನವು ಪ್ರವೃತ್ತಿಯಾಗುವುದಾದರೆ ವೇದವು ಪ್ರಮಾಣವೆಂದು ನಿಶ್ಚಯವಾಗುವುದು, ಹೀಗೆ ಚಕ್ರಕಾಶ್ರಯವು ಪ್ರಸಕ್ತವಾಗುವುದು. ರೀತ್ಯಂತರದಿಂದ ಸರ್ವಜ್ಞತ್ವಸಿದ್ಧಿಯು ನಿರಸ್ತವಾಗಿಯದೆ. ಬೇರೆ ಪ್ರಮಾಣಗಳನ್ನು ಅಲ್ಲಿ ಅಲ್ಲಿ ನಿರಾಕರಿಸುವೆವು ॥ ೨೪ ॥ ೨೫ ॥ ೨೬ ॥ ೨೭ ॥

**ಅಪೌರುಷೇಯತ್ವವಾದವು ಸಮಾಪ್ತವಾಯಿತು.**

ವಿಪಕ್ಷದಲ್ಲಿ ಬಾಧಕವಿಲ್ಲದಿರುವುದರಿಂದ ವಾಕ್ಯತ್ವ ಮೊದಲಾದ ಅನುಮಾನವು ಅಪ್ರಯೋಜಕವೆಂದು ಹೇಳಿರುವುದು ಅಸಂಗತವು. ಏಕೆಂದರೆ — ಪ್ರಮಾಣಗಳಿಗೆ ಪ್ರಾಮಾಣ್ಯವನ್ನು (೧) ಸಜಾತೀಯ ಸಂವಾದದಿಂದಾಗಲೀ (ಮುಖ್ಯವಾಗಿ ತನ್ನ ವಿಷಯವನ್ನೇ ಪ್ರತಿಪಾದಿಸುವ ಬೇರೆಯೊಂದು ಪ್ರಮಾಣವು), (೨)ವಿಜಾತೀಯ ಸಂವಾದದಿಂದಾಗಲೀ(ತನ್ನಲ್ಲಿರತಕ್ಕ ಪ್ರಾಮಾಣ್ಯವನ್ನು ವ್ಯವಸ್ಥಾಪಿಸುತ್ತಾ ತನ್ನ ವಿಷಯವನ್ನು ಪ್ರತಿಪಾದಿಸುವ ಪ್ರಮಾಣಾಂತರವು ಅನುಮಾನರೂಪವಾದುದು) ಅನುಮೇಯಿಸಬೇಕು. ೧. ಅವುಗಳಲ್ಲಿ ವೇದಕ್ಕೆ 'ಸದಾಗಮೈಕವಿಜ್ಞೇಯಂ' ಎಂದು ವೇದಪ್ರತಿಪಾದ್ಯರಾದ ಈಶ್ವರಾದಿಗಳು ಪ್ರಮಾಣಾಂತರದಿಂದ ಅಗೋಚರರು ಎಂದಂಗೀಕರಿಸಿರುವುದರಿಂದ ಸಜಾತೀಯ ಸಂವಾದವಿಲ್ಲವಷ್ಟೆ! ೨ ಮೋಕ್ಷಾದಿರೂಪವಾದ ಅರ್ಥವು ಪ್ರತ್ಯಕ್ಷಾದಿಗಳಿಂದ ಸಿದ್ಧವಾಗದಿರುವುದರಿಂದ ಫಲವನ್ನು ಹುಟ್ಟಿಸುವುದರಲ್ಲಿ ಸಾಮರ್ಥ್ಯವು, ಸಫಲವಾದ ಪ್ರವೃತ್ತಿಯನ್ನು ಹುಟ್ಟಿಸುವುದು ಇದುಮೊದಲಾದ ವಿಜಾತೀಯ ಸಂವಾದವೂ ವೇದಕ್ಕೆ ಇರುವುದಿಲ್ಲ. ಮೋಕ್ಷಾದಿಗಳು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಅವೇದ್ಯಗಳೇ ಆಗಿವೆ. ಆಗಮಗಳಿಂದಲೇ ವೇದ್ಯಗಳು. ತಥಾಚ ವೇದಗಳಿಗೆ ಪ್ರಾಮಾಣ್ಯವನ್ನು ಆಪ್ತೋಕ್ತತ್ವದಿಂದಲೇ ಅನುಮೇಯಿಸಬೇಕಾದಪ್ರಯುಕ್ತ, ವೇದಕ್ಕೆ ಕರ್ತನಿಲ್ಲವೆಂದಾದರೆ ಆಪ್ತೋಕ್ತತ್ವರೂಪ ಗುಣವು ಸಿಗದಿರುವುದರಿಂದ

ಪ್ರಾಮಾಣ್ಯವು ಸಿದ್ಧಿಯಾಗದಿರಲು ಪ್ರಮಾಣಜನ್ಯತ್ವವಿಲ್ಲದಿರುವುದರಿಂದ ವೇದದಿಂದ ಹುಟ್ಟಿದ ಜ್ಞಾನಕ್ಕೂ ಪ್ರಾಮಾಣ್ಯವು ಸಿದ್ಧಿಸದೆ ಹೋಗಬೇಕಾಗುವುದು. ಅದನ್ನಾದರೂ ಪ್ರಮಾಣ ಜನ್ಯತ್ವದಿಂದಲೇ ಅನುಮೇಯಿಸಬೇಕು. ಬೇರೆ ಉಪಾಯವಿಲ್ಲವು. ಹೀಗೆಯೇ ಕಣಾದ ಅಕ್ಷ ಪಾದರು ಉಪಪಾದಿಸಿರುವರು. 'ತದ್ವಚನಾದಾಮ್ನಾಯಪ್ರಾಮಾಣ್ಯಂ' 'ತತ್ಪ್ರಾಮಾಣ್ಯಮಾಪ್ತ ಪ್ರಾಮಾಣ್ಯಾತ್' ಎಂದು. ಅಂತೂ ವೇದಕ್ಕೆ ಕರ್ತನಿಲ್ಲವೆಂದಾದರೆ 'ಪ್ರಾಮಾಣ್ಯವು ಸಿದ್ಧಿಸದೆ ಹೋಗಬೇಕಾಗುವುದು ಎಂಬೀಬಾಧಕವು ಇದ್ದುದರಿಂದ ವಾಕ್ಯತ್ವಾದ್ಯನುಮಾನವು ಹೇಗೆ ಅಪ್ರಯೋಜಕವು? ಆದಪ್ರಯುಕ್ತವೇ ಅಕರ್ತೃಕತ್ವಾದ್ಯನುಮಾನವೂ ಕೂಡ ಪ್ರತಿಕೂಲ ತರ್ಕ ದಿಂದ ಬಾಧಿತವಾಗಿದೆ. ಅಕರ್ತೃಕತ್ವ ಪ್ರಸಿದ್ಧ್ಯಭಾವರೂಪಉಪಾಧಿಗೂ ಸಾಧ್ಯವ್ಯಾಪಕತ್ವವೂ ಭಗ್ನವಾಗುವುದು ಎಂದು ನೈಯಾಯಿಕರು ಆಶಂಕಿಸಿದರೆ —

**ಮೂ || ಪ್ರಾಮಾಣ್ಯಂ ಚ ಸ್ವತ ಏವ || ೨೮ ||**

**ಅ ||** (ಎಲ್ಲಾ ಜ್ಞಾನಗಳಿಗೂ) ಪ್ರಾಮಾಣ್ಯಂ ಚ=ಯಾಥಾರ್ಥ್ಯರೂಪವಾದ ಪ್ರಾಮಾ ಣ್ಯವು, ಸ್ವತ ಏವ=ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ, ಗೃಹ್ಯತೇ=ತಿಳಿಯಲ್ಪಡುತ್ತದೆ.

**ತಾ ||** (1) ಜ್ಞಾನವು ಮನಸ್ಸಿನಿಂದ ನಿಶ್ಚಯಿಸಿಕೊಳ್ಳುವುದಾದರೆ, ಜ್ಞಾನದ ಯಾಥಾ ರ್ಥ್ಯವು ಹಿಂದೆ ಹೇಳಿದ ಪ್ರಕಾರ ಸಂವಾದದಿಂದ ಅನುಮೇಯವು. ಕಾರಣ ಜ್ಞಾನಗ್ರಾಹಕದಿಂದ ಇತರವಾದುದರಿಂದಲೇ ಪ್ರಾಮಾಣ್ಯಗ್ರಹಣವೂ ಆಗುವುದಾದರೆ, 'ವೇದವು ಅಪೌರುಷೇಯವಾದರೆ ಪ್ರಾಮಾಣ್ಯವು ಸಿದ್ಧಿಸದೆ ಹೋಗಬೇಕಾಗುವುದು' ಎಂಬೀ ದೋಷವು ಸಂಭವಿಸಬಹುದು. ಹೀಗೆ ಅಲ್ಲವೇ ಅಲ್ಲ. ಮತ್ತೆ ಜ್ಞಾನವು ಸಾಕ್ಷಿಪ್ರತ್ಯಕ್ಷವೇದ್ಯವೆಂದು ಜ್ಞಾನಪ್ರಾಮಾಣ್ಯವೂ ಸಾಕ್ಷಿಪ್ರತ್ಯಕ್ಷವೇದ್ಯವೆಂದೇ ಮೇಲೆ ಸಮರ್ಥಿಸುವೆವು. (2) ಇಂದ್ರಿಯ ಲಿಂಗ ಶಬ್ದಗಳಿಗಾದರೂ ಯಥಾರ್ಥಜ್ಞಾನಸಾಧನತ್ವರೂಪವಾದ ಪ್ರಾಮಾಣ್ಯವು 'ನಿರ್ದುಷ್ಟಗಳಾದ ಇಂದ್ರಿಯಾದಿಗಳು ಇದ್ದರೆ ಯಥಾರ್ಥಜ್ಞಾನವು ಹುಟ್ಟುತ್ತದೆ, ಇಲ್ಲದಿದ್ದರೆ ಇಲ್ಲ' ಎಂಬೀ ಅನ್ವಯ ವ್ಯತಿರೇಕದಿಂದ ನಿಶ್ಚಯಿಸಬೇಕು. ತಥಾ ಚ ಎಲ್ಲಿಯೂ ಪ್ರಾಮಾಣ್ಯವನ್ನು ಗ್ರಹಿಸಲಿಕ್ಕೆ ಆಪ್ತೋಕ್ತತ್ವಾದಿಗಳಿಗೆ ಉಪಯೋಗವಿಲ್ಲವು ॥ ೨೮ ॥

ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ಜ್ಞಾನಕ್ಕೆ ಪ್ರಾಮಾಣ್ಯವು ಗೃಹೀತವಾಗುತ್ತದೆ ಎಂಬುವುದನ್ನು ಏಕೆ ಇಟ್ಟುಕೊಳ್ಳಬೇಕು ಎಂದರೆ —

**ಮೂ || ಅನ್ಯಥಾಽನವಸ್ಥಾನಾತ್ || ೨೯ ||**

**ಅ ||** ಇಲ್ಲವಾದರೆ ಅನವಸ್ಥಾದೋಷವು ಬರುವುದರಿಂದ.

**ತಾ ||** (1) ಪ್ರಾಮಾಣ್ಯವನ್ನಾದರೂ ಅವಶ್ಯವಾಗಿ ಯಾವುದಾದರೂ ಪ್ರಮಾಣದಿಂದ ತಿಳಿದುಕೊಳ್ಳಬೇಕು. ಇಲ್ಲದಿದ್ದರೆ ಪ್ರಾಮಾಣ್ಯವೇ ಇಲ್ಲವೆಂದಾಗುವುದು. ಜ್ಞಾನಗ್ರಾಹಕದಿಂದ ಬೇರೆಯಾದ ಅನುಮಾನಾದಿಗಳಿಂದ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ. ಏಕೆಂದರೆ, ತತ್ಪ್ರಾ ಮಾಣ್ಯವೂ ಮತ್ತೊಂದರಿಂದ ಗೃಹೀತವಾಗುವುದೆಂದರೆ — ಇತ್ಯಾದಿಗಳಿಂದ ಅನವಸ್ಥಾರೂಪ ದೋಷವು ಪ್ರಾಪ್ತವಾಗುವುದು. ಆದರ ಪ್ರಾಮಾಣ್ಯವು ಸ್ವತಏವ ಗೃಹೀತವಾಗುವುದೆಂದರೆ ಪ್ರಥಮದ್ದಕ್ಕೇನೇ ಹಾಗೆ ಅಂಗೀಕರಿಸುವುದು ಪ್ರಶಸ್ತವು. ಆದಕಾರಣ 'ಪರತಃ' ಎನ್ನುವುದು ಕೂಡದಿದ್ದಮೇಲೆ ಸ್ವತಸ್ತ್ವದಲ್ಲಿಯೇ ಪರ್ಯವಸಾನವನ್ನು ಹೊಂದುವುದರಿಂದ ಪರಿಶೇಷ ಪ್ರಮಾಣದಿಂದ ಜ್ಞಾನಗ್ರಾಹಕಮಾತ್ರ ಗ್ರಾಹ್ಯತ್ವರೂಪವಾದ ಸ್ವತಸ್ತ್ವವು ಸಿದ್ಧಿಸುವುದು. ಅಂತೂ

ಹೀಗೆ ಅನುಮಾನವು. (೧)ಜ್ಞಾನಗತಂ ಯಾಥಾರ್ಥ್ಯಂ=ಜ್ಞಾನದಲ್ಲಿರುವ ಪ್ರಾಮಾಣ್ಯವು, ತದ್ಗ್ರಾಹಕೇಣೈವ ಗ್ರಾಹ್ಯಂ=ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ಗ್ರಹಿಸಲ್ಪಡುವುದು, ಗ್ರಾಹಕಾಂತರಾನುಪಪತ್ತೌ ಸತ್ಯಾಂ ಗೃಹ್ಯಮಾಣತ್ವಾತ್=ಬೇರೆ ಗ್ರಾಹಕಗಳು ಕೂಡದೆ ಇದ್ದು ಗ್ರಹಿಸಲ್ಪಡುವುದರಿಂದ, ಯತ್ ಯತೋಽನ್ಯೇನ ಅನುಪಪದ್ಯಮಾನಗ್ರಹಣಂ ಸತ್ ಗೃಹ್ಯತೇ ತತ್ ತೇನೈವ ಗ್ರಾಹ್ಯಂ=ಯಾವುದು ಯಾವುದರಿಂದ ಇತರದಿಂದ ಕೂಡದಿರುವ ಗ್ರಹಣವುಳ್ಳದ್ದಾಗಿ ಗ್ರಹಿಸಲ್ಪಡುತ್ತದೋ ಅದು ಅದರಿಂದಲೇ ಗ್ರಾಹ್ಯವು, ಯಥಾ ಚಕ್ಷುಷಃ ಅನ್ಯೇನಾನುಪಪದ್ಯಮಾನಸಾಕ್ಷಾತ್ಕಾರಂ ಸಾಕ್ಷಾತ್ಕ್ರಿಯಮಾಣಂ ರೂಪಂ ಚಕ್ಷುಷೈವ ಸಾಕ್ಷಾತ್ಕ್ರಿಯತೇ=ಹೇಗೆಂದರೆ ರೂಪವು ಕಣ್ಣಿನಿಂದ ಬೇರೆಯಾದ ಇಂದ್ರಿಯದಿಂದ ಕೂಡದಿರುವ ಸಾಕ್ಷಾತ್ಕಾರವುಳ್ಳದ್ದಾದರೂ ಸಾಕ್ಷಾತ್ಕರಿಸಲ್ಪಡುವರೂಪವು ಕಣ್ಣಿನಿಂದಲೇ ಪ್ರತ್ಯಕ್ಷೀಕರಿಸಲ್ಪಡುತ್ತದೆ. (2) ಸಾಕ್ಷಿವೇದ್ಯವೆಂದಂಗೀಕರಿಸಿದರೆ ಅನವಸ್ಥೆಯು ಬರುವುದಿಲ್ಲ. ಏಕೆಂದರೆ— ಸಾಕ್ಷೀಂದ್ರಿಯವು ತಾನು ಪ್ರಕಾಶಸ್ವರೂಪವಾಗಿ ತನ್ನನ್ನೂ ತನ್ನ ಪ್ರಾಮಾಣ್ಯವನ್ನೂ ಸ್ವೀಕರಿಸುತ್ತದೆ ಎಂದಂಗೀಕರಿಸಿರುವೆವು. ಹಾಗಾದರೆ ಜ್ಞಾನಕ್ಕೇನೇ ಹಾಗೆ ಒಡಂಬಡಬಹುದಷ್ಟೇ, ಎಂದರೆ ಅಂತಃಕರಣ ಪರಿಣಾಮರೂಪವಾದ ಜ್ಞಾನವು ಜಡವಾದುದರಿಂದ ತಾನು ಸ್ವಪ್ರಕಾಶಸ್ವರೂಪವಾಗಲಾರದು. (3) ಪ್ರಾಮಾಣ್ಯಂ=ಪ್ರಾಮಾಣ್ಯವು, ಪರತಃ ಜ್ಞಾಯತೇ = ಜ್ಞಾನಗ್ರಾಹಕೇತರದಿಂದ ತಿಳಿಯಲ್ಪಡುತ್ತದೆ, ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ = ಅಭ್ಯಾಸವಿಲ್ಲದಿರುವಾಗ ಸಂಶಯಗ್ರಸ್ತವಾಗುವುದರಿಂದ, ಅಪ್ರಾಮಾಣ್ಯವತ್=ಅಪ್ರಾಮಾಣ್ಯದಂತೆಯೆ. ಅಪ್ರಾಮಾಣ್ಯವಾದರೆ ಜ್ಞಾನಗ್ರಾಹಕದಿಂದ ಅತಿರಿಕ್ತವಾದ ವಿಸಂವಾದ ದುಷ್ಟಕರಣಜನ್ಯತ್ವ ಮೊದಲಾದ ಲಿಂಗಗಳಿಂದ ಅನುಮೇಯವಾಗುವುದು ಎಂದು ಶಂಕಿಸಿದರೂ ಇದೇ ಮೂಲದಿಂದ ಸಮಾಧಾನಗೊಳಿಸುವರು

**ಮೂ ॥ ಅನ್ಯಥಾಽನವಸ್ಥಾನಾತ್ ॥**

ತಾ ॥ ಈ ಅನುಮಾನವು ಅನವಸ್ಥಾರೂಪವಾದ ಪ್ರತಿಕೂಲತರ್ಕದಿಂದ ಪರಾಹತವಾಗಿದೆ ॥ ೨೯ ॥

ಪೂರ್ವದಲ್ಲಿ 'ಅಪೌರುಷೇಯತ್ವಾದ್ವೇದಸ್ಯ' ಎನ್ನುವುದರಿಂದ ವೇದವು ಅಪೌರುಷೇಯವಾದ ಪ್ರಯುಕ್ತ ನಿರ್ದುಷ್ಟವಾಗಿದೆ, ನಿರ್ದೋಷವಾದ ವೇದದಿಂದ ಹುಟ್ಟಿದಪ್ರಯುಕ್ತವೇ ವೇದಜನ್ಯವಾದ ಜ್ಞಾನವೂ ಪ್ರಮಾಣವೆಂದೇ ಅನುಮೇಯಿಸಲ್ಪಟ್ಟದೆ. ಆದಪ್ರಯುಕ್ತ ಈಗ ಪ್ರಾಮಾಣ್ಯವು ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ಸ್ವೀಕರಿಸಲ್ಪಡುತ್ತದೆ ಎಂದು ಹೇಗೆ ಹೇಳಲ್ಪಡುತ್ತದೆ ಎಂದಾಶಂಕಿಸಿದರೆ —

**ಮೂ ॥ ನ ಚೋಕ್ತಯುಕ್ತ್ಯಧೀನತ್ವಂ ಪ್ರಾಮಾಣ್ಯಸ್ಯ ॥ ೩೦ ॥**

ಅ ॥ ಪ್ರಾಮಾಣ್ಯಸ್ಯ = ಪ್ರಾಮಾಣ್ಯ ಜ್ಞಾನಕ್ಕೆ, ಉಕ್ತಯುಕ್ತ್ಯಧೀನತ್ವಂ = ಹೇಳಿದ ಯುಕ್ತಿಯ ಅಧೀನತ್ವವು, ನ ಚ=ಇಲ್ಲವೇ ಇಲ್ಲ.

ತಾ ॥ 'ಪ್ರಾಮಾಣ್ಯಸ್ಯ' ಎಂಬೀವಿಷಯದಿಂದ ವಿಷಯಿಯಾದ ಜ್ಞಾನವನ್ನು ಇಟ್ಟುಕೊಳ್ಳಬೇಕು. ಅಪೌರುಷೇಯತ್ವಮೊದಲಾದ ಹಿಂದಿನ ಯುಕ್ತಿಗಳಿಂದ ಪೂರ್ವದಲ್ಲಿ ವೇದಗಳಿಗೆ ಪ್ರಾಮಾಣ್ಯವನ್ನು ತಿಳಿಸಿಕೊಡಲಿಲ್ಲ ॥ ೩೦ ॥

ಪ್ರಾಮಾಣ್ಯವನ್ನು ತಿಳಿಸಿಕೊಡುವುದಕ್ಕಾಗಿ ಯುಕ್ತಿಯನ್ನುಪನ್ಯಾಸಮಾಡಿದ್ದರಿಂದ ಪೂರ್ವದಲ್ಲಿ ತಿಳಿಸಿಕೊಡಲಿಲ್ಲವೆಂಬುವುದು ಹೇಗೆ ಕೂಡಬಹುದೆಂದಾಶಂಕಿಸಿದರೆ—

ಮೂ || ಬುದ್ಧಿದೋಷನಿರಾಸಮಾತ್ರಕಾರಣತ್ವಾದ್ಯುಕ್ತೀನಾಂ || ೩೧ ||

ಅ || ಯುಕ್ತೀನಾಂ = ಯುಕ್ತಿಗಳಿಗೆ, ಬುದ್ಧಿದೋಷನಿರಾಸಮಾತ್ರಕಾರಣತ್ವಾತ್ = ಅನೃತತ್ವ ವ್ಯಾಹತಿ ಮೊದಲಾದುದನ್ನು ಕಂಡು ವೇದವಿಷಯಕವಾದ ಯಾವುದೊಂದು ಅಪ್ರಾಮಾಣ್ಯಸಂಶಯುವದೆಯೋ, ಅದು ಬುದ್ಧಿದೋಷವೆನ್ನಿಸಿಕೊಳ್ಳುತ್ತದೆ, ಅಂತಹ ಬುದ್ಧಿದೋಷಗಳನ್ನು ನಿರಾಕರಿಸುವುದರಲ್ಲಿ ಮಾತ್ರ ಕಾರಣತ್ವವಿದ್ದಪ್ರಯುಕ್ತ.

ತಾ || (1)ಸಾಕ್ಷಿಯೇ ಜ್ಞಾನವನ್ನೂ ಜ್ಞಾನಪ್ರಾಮಾಣ್ಯವನ್ನೂ ವಿಷಯೀಕರಿಸಲಿಕ್ಕೆ ಸಮರ್ಥವಾದುದು. ಆದರೆ ಅನೃತತ್ವ ವ್ಯಾಹತಿ ಮೊದಲಾದ ದೋಷದರ್ಶನರೂಪವಾದ ಕಾರಣಾಂತರಗಳ ಸಂಪರ್ಕದಿಂದ ಹುಟ್ಟಿದ ಅಪ್ರಾಮಾಣ್ಯಸಂಶಯದಿಂದ ಪ್ರತಿಬದ್ಧವಾದುದಾಗಿ ಕೇವಲ ಜ್ಞಾನವನ್ನು ಸ್ವೀಕರಿಸಿ ಜ್ಞಾನದಲ್ಲಿರುವ ಪ್ರಾಮಾಣ್ಯವನ್ನು ಸ್ವೀಕರಿಸಲಿಕ್ಕೆ ಸಮರ್ಥವಾಗುವುದಿಲ್ಲ. ಹೇಗೆಂದರೆ—ಆನೆಯು ತಾನಾಗಿಯೇ ಹೋಗಲಿಕ್ಕೆ ಸಮರ್ಥವಾದಾಗ್ಯೂ ಗೋಕ್ಷುರಕ(ಮುಳ್ಳು ವಿಶೇಷವು)ಮೊದಲಾದವುಗಳಿಂದ ಪ್ರತಿಬದ್ಧವಾದುದಾಗಿ ಚಲಿಸಲಿಕ್ಕೆ ಸಮರ್ಥವಾಗುವುದಿಲ್ಲವೋ, ಅಂತಹ ಸ್ಥಳದಲ್ಲಿ ಯುಕ್ತ್ಯನುಸಂಧಾನರೂಪವಾದ ಪರೀಕ್ಷೆಗೆ ಅವಕಾಶವು ಆ ಯುಕ್ತಿಯಾದರೂ ಬುದ್ಧಿದೋಷವನ್ನು ಮಾತ್ರ ನಿರಾಕರಿಸುವುದು. ಅಂತಹ ದೋಷವು ನಿರಾಕರಿಸಲ್ಪಡೋಣ ಸಾಕ್ಷಿಯು ತನ್ನ ಮಹಿಮೆಯಿಂದಲೇ ಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ. ಹೇಗೆಂದರೆ — ಗೋಕ್ಷುರಕಾದಿಗಳನ್ನು ತೆಗೆದೊಡನೆಯೇ ಆನೆಯು ತಾನಾಗಿಯೇ ಹೋಗುವುದು. ಆದಕಾರಣ ಹಿಂದಿನ ಯುಕ್ತ್ಯುಪನ್ಯಾಸವು ಸಾಕ್ಷಿಗೆ ಪ್ರಾಮಾಣ್ಯಗ್ರಹಣಕ್ಕೆ ಪ್ರತಿಬಂಧಕವಾದ ಬುದ್ಧಿದೋಷವನ್ನು ನಿರಾಕರಿಸುವುದಕ್ಕಾಗಿಯೇ ಮಾಡಲ್ಪಟ್ಟದೆ. ಪ್ರಾಮಾಣ್ಯವನ್ನು ತಿಳಿಸಿಕೊಡುವುದಕ್ಕಾಗಿ ಅಲ್ಲ. ಆದಕಾರಣ ಪೂರ್ವೋತ್ತರವಿರೋಧವಿಲ್ಲವು. (2) ಇದೇ ವಿಷಯದಲ್ಲಿ ಉದಯನನು ಹೀಗೆ ಹೇಳುವನು— 'ಪ್ರಾಮಾಣ್ಯವು ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ತಿಳಿಯಲ್ಪಡುವುದಾದರೆ ಸರ್ವದಾ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹವೇ ಕೂಡಲಾರದು' ಜ್ಞಾನರೂಪವಾದ ಧರ್ಮಿಯು ಗೃಹೀತವಾಗೋಣ ಜ್ಞಾನತ್ವದಲ್ಲಿ ಹೇಗೆ ಸಂಶಯವಿಲ್ಲವೋ ಹಾಗೆಯೇ ಪ್ರಾಮಾಣ್ಯವು ನಿಶ್ಚಿತವಾದರೆ ಸಂಶಯಕ್ಕೆ ಅವಕಾಶವೇ ಇಲ್ಲವು. (3) ಜ್ಞಾನತ್ವಾದಿರೂಪವಾದ ಸಾಧಾರಣ ಧರ್ಮವನ್ನು ಕಂಡದ್ದರಿಂದಲೇ ಸಂಶಯವು ಹುಟ್ಟಬಹುದೆಂದರೆ ಸಾಧಕಪ್ರಮಾಣಾಭಾವವನ್ನೂ ಬಾಧಕಪ್ರಮಾಣಾಭಾವವನ್ನೂ ಹೊರತು ಊರ್ಧ್ವತ್ವಾದಿರೂಪವಾದ ಸಾಧಾರಣ ಧರ್ಮವನ್ನು ನೋಡಿಯೇ ಸಂಶಯವು ಲೋಕದಲ್ಲಿ ಕಾಣಲ್ಪಡುವುದಿಲ್ಲವಷ್ಟೆ! ಕೇವಲವಾಗಿ ಸಾಧಾರಣಧರ್ಮವನ್ನು ನೋಡಿದ್ದರಿಂದಲೇ ಸಂಶಯವು ಹುಟ್ಟುವುದಾದರೆ ಸಾಧಾರಣಧರ್ಮವು ಎಲ್ಲಾ ಕಡೆಗಳಲ್ಲಿಯೂ ಇದ್ದಪ್ರಯುಕ್ತ ಸರ್ವತ್ರ ಸಂಶಯವೇ ಆಗಬೇಕಾಗುವುದು. ಅಲ್ಲದೆ ವಿಶೇಷದರ್ಶನವಿದ್ದರೂ ಸಂಶಯವು ಬರುವುದಾದರೆ ಸಂಶಯವು ನಾಶವಾಗದೇನೇ ಹೋಗಬೇಕಾಗುವುದು. (4) ಹಾಗಾದರೆ 'ಇದು ಪುಸ್ತಕವು' ಇದು ಮೊದಲಾದ ಪ್ರಮಾಣಭೂತವಾದ ಜ್ಞಾನದಲ್ಲಿದ್ದಂತೆಯೇ ಅಪ್ರಮಾಣವಾದ ಮುತ್ತಿನಚಿಪ್ಪನ್ನು ನೋಡಿ ಇದು ಬೆಳ್ಳಿಯು ಇತ್ಯಾದಿ ಜ್ಞಾನದಲ್ಲಿಯೂ ಪ್ರಾಮಾಣ್ಯಜ್ಞಾನವು ತೋರುವುದರಿಂದ ವಿಶೇಷಧರ್ಮವು ತೋರದಿರುವುದರಿಂದ ಸಂಶಯವು ಹುಟ್ಟಬಹುದೆಂದಭಿಪ್ರಾಯವೆಂದರೆ — ಜಲಜ್ಞಾನದಲ್ಲಿರತಕ್ಕ ಪ್ರಾಮಾಣ್ಯಜ್ಞಾನದಲ್ಲಿಯೂ ಪ್ರಾಮಾಣ್ಯಸಂಶಯವನ್ನಂಗೀಕರಿಸತಕ್ಕ ನಿನ್ನ ಮತದಲ್ಲಿ 'ಇದು ಜಲವು' ಎಂಬೀ ಜ್ಞಾನದಲ್ಲಿರುವುದು ಯಾವುದು ಪ್ರಾಮಾಣ್ಯವೋ ಅಂತಹ ಜ್ಞಾನರೂಪವಾದ ಧರ್ಮಿಯು ತೋರಿದರೂ ಪ್ರಾಮಾಣ್ಯಜ್ಞಾನದಲ್ಲಿರತಕ್ಕ ಪ್ರಾಮಾಣ್ಯವು ಉಪಲಬ್ಧವಾಗಲಿಲ್ಲ. ಆ ಕಾರಣ ೧ ಸಂಶಯವು ಕೂಡುತ್ತದೆಯೆನ್ನುತ್ತೀಯೋ, ಅಥವಾ ೨ ಧರ್ಮಿಭೂತವಾದ ಪ್ರಾಮಾಣ್ಯಜ್ಞಾನವೇ ಉಪ

ಲಬ್ಧವಾಗಲಿಲ್ಲವೋ, ೧ನೇ ಕಲ್ಪದಲ್ಲಿ ಸಾಕ್ಷಿಯಿಂದ ಪ್ರಾಮಾಣ್ಯಜ್ಞಾನರೂಪವಾದ ಧರ್ಮಿಗೆ ಪ್ರತೀತಿಯಿದ್ದರೂ ಪ್ರಾಮಾಣ್ಯವು ತೋರದಿರುವುದರಿಂದ ಪ್ರಾಮಾಣ್ಯಜ್ಞಾನವು ಸ್ವತಏವ ಜ್ಞಾನ ಗ್ರಾಹಕದಿಂದಲೇ ಗ್ರಾಹ್ಯವೆನ್ನುವುದು ಹೇಗೆ ಸಂಗತವಾಗುವುದು? ೨ನೇ ಕಲ್ಪದಲ್ಲಿ ಧರ್ಮಿಗೇನೇ ಸಾಕ್ಷಾತ್ಕಾರವಿಲ್ಲದಿರುವುದರಿಂದ ಪ್ರಾಮಾಣ್ಯಜ್ಞಾನದಲ್ಲಿ ಸಂಶಯವೇ ಹೇಗೆ ಬರಬಹುದು? ಇವುಗಳೂ ಇದರಿಂದಲೇ ನಿರಸ್ತಗಳಾದುವು. ಹೇಗೆ ಅಂದರೆ, ಸಾಕ್ಷಿಯು ಪ್ರಾಮಾಣ್ಯಜ್ಞಾನರೂಪ ವಾದ ಧರ್ಮಿಯನ್ನು ಸಾಕ್ಷಾತ್ಕರಿಸಿಕೊಂಡರೂ ಅನೃತತ್ವವ್ಯಾಹತಿಮೊದಲಾದುದನ್ನು ಕಂಡು, ಶಕ್ತಿಯು ಕುಂಠಿತವಾಗಲು ಪ್ರಾಮಾಣ್ಯವಿಷಯಕಸಂಶಯಾದಿಗಳು ಮನಸ್ಸಿನಲ್ಲಿ ಸಂಗತ ಗಳಾಗಬಹುದು ॥ ೩೧ ॥

ಯುಕ್ತಿಗಳು ಬುದ್ಧಿಯಲ್ಲಿರತಕ್ಕ ದೋಷಗಳನ್ನು ನಿರಾಕರಿಸುವುದರಲ್ಲಿ ಮಾತ್ರ ಕಾರಣ ಗಳಾಗುತ್ತವೆ. ವೇದಗಳಿಗೆ ಪ್ರಾಮಾಣ್ಯವನ್ನು ತಿಳಿಸಿಕೊಡುವುದರಲ್ಲಿ ಕಾರಣಗಳಾಗಲಾರವು. ಎಂಬೀ ವಿಷಯವು ಯಾವಕಾರಣದಿಂದಂಗೀಕರಿಸಬೇಕೆಂದರೆ—

**ಮೂ ॥ ಅದುಷ್ಟಬುದ್ಧೀನಾಂ ಸ್ವತ ಏವ ಸಿದ್ಧತ್ವಾಚ್ಚ ಪ್ರಾಮಾಣ್ಯಸ್ಯ ॥ ೩೨ ॥**

ಅ ॥ ಅದುಷ್ಟಬುದ್ಧೀನಾಂ=ದೋಷರಹಿತರಾದ ಪುರುಷರಿಗೆ, ಪ್ರಾಮಾಣ್ಯಸ್ಯ=ಪ್ರಾಮಾ ಣ್ಯಕ್ಕೆ, ಸ್ವತ ಏವ=ಯುಕ್ತಿಯನ್ನಪೇಕ್ಷಿಸದೇನೇ, ಸಿದ್ಧತ್ವಾಚ್ಚ=ನಿಷ್ಪತ್ತಿಯಿದ್ದಪ್ರಯುಕ್ತವೂ.

ತಾ ॥ (1) ಯಾವುದಿದ್ದರೇನೇ ಯಾವುದಾಗುವುದೋ, ಇಲ್ಲದಿರಲು ಆಗುವುದಿಲ್ಲವೋ, ಅದೇ ಅದಕ್ಕೆ ಕಾರಣವಾಗುವುದು. ಯುಕ್ತಿಗಳು ಇದ್ದರೇನೇ ಬುದ್ಧಿಯ ದೋಷಗಳು ನಾಶ ಗಳಾಗುವುವು. ಯುಕ್ತಿಗಳು ಇಲ್ಲವಾದರೆ ಆಗಲಾರವು. ಪ್ರಾಮಾಣ್ಯವಾದರೆ ಅನೃತತ್ವ, ಪುನರುಕ್ತಿ, ವ್ಯಾಹತಿ ಇತ್ಯಾದ್ಯನುಸಂಧಾನರೂಪ ದೋಷರಹಿತರಾದ ಪುರುಷರಿಗೆ ಯುಕ್ತಿಯ ಅಪೇಕ್ಷೆ ಇಲ್ಲದೇನೇ ಅನುಭವಸಿದ್ಧವಾಗಿದೆ. ಆದಕಾರಣ ಹಿಂದಿನ ವ್ಯವಸ್ಥೆಯೇ (ಯುಕ್ತಿಗಳು ಬುದ್ಧಿ ದೋಷಗಳನ್ನು ಮಾತ್ರ ನಿರಾಕರಿಸಲಿಕ್ಕೆ ಕಾರಣಗಳಾಗುತ್ತವೆ ಇತ್ಯಾದಿ ರೂಪವಾದುದು) ಯುಕ್ತ ವಾಗುತ್ತದೆ. (2) ಸಂವಾದವಿದ್ದರೆ ಪ್ರಾಮಾಣ್ಯಜ್ಞಾನವು. ಸಂವಾದವಿಲ್ಲವಾದರೆ ಪ್ರಾಮಾಣ್ಯ ಜ್ಞಾನವಿಲ್ಲ. ಎಂದು ಅನ್ವಯವ್ಯತಿರೇಕಸಿದ್ಧವಾದ ಪ್ರಯುಕ್ತ ತತ್ಕಾರ್ಯವೆನ್ನುವುದೂ ಅಯು ಕ್ತವು. ಸಂವಾದವಿಲ್ಲದಿದ್ದರೂ (ಯುಕ್ತ್ಯಪೇಕ್ಷವಿಲ್ಲದೇನೇ) ಅದುಷ್ಟಬುದ್ಧಿಗಳಿಗೆ ಪ್ರಾಮಾಣ್ಯ ಜ್ಞಾನವು ಅನುಭವಸಿದ್ಧವಾದ ಪ್ರಯುಕ್ತ ವ್ಯತಿರೇಕವ್ಯಾಪ್ತಿಯಿಲ್ಲ. (3) ಬುದ್ಧಿದೋಷವಿಲ್ಲ ದಿದ್ದರೆ ಅನಭ್ಯಾಸದಶಾಪನ್ನ ಜ್ಞಾನಪ್ರಾಮಾಣ್ಯವೂ ತೋರುವುದರಿಂದ 'ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಎಂಬುವ ಅನುಮಾನಕ್ಕೆ ಅಸಿದ್ಧಿರೂಪ ದೋಷವು ಬರುತ್ತದೆ ಎಂದು ತಿಳಿಯ ಬೇಕು. ಕೆಲವು ಕಡೆ ಸಂಶಯವು ಮನೋದೋಷದಿಂದ ಬರಬಹುದು ॥ ೩೨ ॥

(1) ಪುನಃ ಶಂಕಿಸುತ್ತಾರೆ. — 'ಇದು ನೀರು' ಎಂಬೀ ಜ್ಞಾನವು ಹುಟ್ಟುತ್ತಿರಲು ಈ ಜ್ಞಾನವು ಪ್ರಮಾಣವೋ ಎಂಬೀ ಸಂಶಯವು ಬರಲು ಅದನ್ನು ನಿಶ್ಚೈಸುವುದಕ್ಕಾಗಿ ಪ್ರವೃತ್ತಿಗೆ ಸಫಲತ್ವವಾಗಲೀ, ಯಾವ ಜ್ಞಾನದಲ್ಲಿ ಪ್ರಾಮಾಣ್ಯವು ಗೃಹೀತವಾಗಿಯದೋ ತತ್ಸಮಾನ ವಿಷಯತ್ವವಾಗಲೀ, ಸಫಲ ಪ್ರವೃತ್ತಿಯನ್ನು ಹುಟ್ಟಿಸುವ ಜ್ಞಾನವಿಷಯಕತ್ವವಾಗಲೀ ಪ್ರಮಾ ಣಾಂತರವು ಅಪೇಕ್ಷಿಸಲ್ಪಡುತ್ತದೆ. ಪ್ರಮಾಣಾಂತರದ ಪ್ರಾಮಾಣ್ಯದಲ್ಲಿಯೂ ಸಂಶಯವು ಹುಟ್ಟಿದರೆ ಬೇರೆ ಪ್ರಮಾಣವು ಅಪೇಕ್ಷಿತವಾಗುತ್ತದೆ. ಯಾವುದರ ಪ್ರಾಮಾಣ್ಯದಲ್ಲಿ ಸಂಶಯವೇ ಹುಟ್ಟುವುದಿಲ್ಲವೋ ಅಂತಹ ಸ್ಥಳದಲ್ಲಿ ಪ್ರಮಾಣಾಂತರದ ಸಂವಾದವು ಅಪೇಕ್ಷಿತ ವಾಗುವುದಿಲ್ಲ. ಆದಕಾರಣ ಪ್ರಾಮಾಣ್ಯಕ್ಕೆ ಜ್ಞಾನಗ್ರಾಹಕದಿಂದ ಅತಿರಿಕ್ತದಿಂದ ಗ್ರಾಹ್ಯತ್ವ

ವಿದ್ದರೂ ಅನವಸ್ಥಾದೋಷವು ಬರುವುದಿಲ್ಲ. (2) ಸರ್ವಥಾ ಸಂಶಯಕ್ಕೆ ಆಸ್ಪದವಾಗದೇನೇ ಇರುವ ಅರ್ಥವಾದರೂ ಅದೆ. ಜಲಾರ್ಥಿಯು ಜಲಜ್ಞಾನದಿಂದ ಪ್ರವೃತ್ತಿಮಾಡುವನು. ಪ್ರವರ್ತಿ ಮಾಡಿದವನು ಜಲಸಮೀಪಕ್ಕೆ ಹೋಗುವನು, ನೀರನ್ನು ಕುಡಿಯುವನು. ಕುಡಿದ ಮೇಲೆ ಪಿಪಾಸಾನಿಮಿತ್ತಕವಾದ ದುಃಖವು ನಾಶವಾಗುವುದು. ಜಲಪಾನದಲ್ಲಿ ಅಲಂಬುದ್ಧಿಯೂ ಹುಟ್ಟುವುದು. ಆ ಮೇಲೆ ದುಃಖಾಭಾವವೂ, ಸುಖವೂ ಅನುಭೂತವಾಗುತ್ತದೆ. ಜಲಾದಿ ಜ್ಞಾನದ ಪ್ರಾಮಾಣ್ಯದಲ್ಲಿ ಹೇಗೆ ಸಂಶಯವು ಹುಟ್ಟುತ್ತದೆ, ಹಾಗೆಯೇ ದುಃಖಾಭಾವ ಸುಖಾದಿ ಜ್ಞಾನದ ಪ್ರಾಮಾಣ್ಯದಲ್ಲಿ ಯಾರಿಗೂ ಸಂಶಯವು ಹುಟ್ಟುವುದಿಲ್ಲ. ಜಲಾದಿ ಜ್ಞಾನಕ್ಕೆ ಮರು ಮರೀಚಿಕಾ(ಬಿಸಿಲು ಕುದುರೆ)ದಿಗಳಲ್ಲಿ ವ್ಯಭಿಚಾರಕಂಡದೆ. ಸುಖವು ಹುಟ್ಟುತ್ತಿದ್ದರೆ 'ನಾನು ಸುಖಿಯು' ಎಂಬ ಜ್ಞಾನವು ಬಾರದಿರುವುದರಿಂದ ಸುಖಾದಿ ಜ್ಞಾನಕ್ಕೆ ವ್ಯಭಿಚಾರವು ದೃಷ್ಟ ವಾಗಲಿಲ್ಲ. ಇದನ್ನು ಅವಶ್ಯವಾಗಿ ಸ್ವತಃ ಪ್ರಾಮಾಣ್ಯವನ್ನಂಗೀಕರಿಸುವವರೂ ಒಡಂಬಡಬೇಕು. ಒಡಂಬಡದಿದ್ದರೆ ಸಂಶಯವನ್ನು ನಿವೃತ್ತಿಪಡಿಸುವುದಕ್ಕಾಗಿ ಯುಕ್ತ್ಯನುಸಂಧಾನ ರೂಪ ಪರೀಕ್ಷೆಯನ್ನಪೇಕ್ಷಿಸಲು ಅಲ್ಲಿಯೂ ಪರೀಕ್ಷಾಂತರವನ್ನು ಅಪೇಕ್ಷಿಸ ಬೇಕಾಗುತ್ತದೆ. ಈ ರೀತಿ ಯಾಗಿ ಅಂಗೀಕರಿಸಿದರೆ ಅನವಸ್ಥಾರೂಪ ದೋಷವನ್ನು ನಿವಾರಿಸಲು ಸಾಧ್ಯವಿಲ್ಲ. ಅಂತೂ ಸಾಕ್ಷಿ ವೇದ್ಯಗಳಾದ ಸುಖಾದಿಗಳಲ್ಲಿ ಪರೀಕ್ಷಾಪೇಕ್ಷೆಯಿಲ್ಲ. ಇತರ ಕಡೆಯಲ್ಲಿಯೇ ಪರೀಕ್ಷಾಪೇಕ್ಷೆಯು. ಹೀಗೆ ಇಟ್ಟುಕೊಂಡು ಅನವಸ್ಥಾದೋಷವನ್ನು ಪರಿಹರಿಸಬೇಕು. ಇದು ನಮಗೂ ಸಮಾನವು, ಇದೇ ವಿಷಯವು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟದೆ. 'ನ ಪರೀಕ್ಷಾಽನವಸ್ಥಾಸ್ಯಾತ್ಸಾಕ್ಷಿಸಿದ್ಧೇ ತ್ವಸಂಶಯಾತ್' ಸಾಕ್ಷೀಂದ್ರಿಯದಿಂದ ಸಿದ್ಧಗಳಾದ ಸುಖಾದಿಗಳಲ್ಲಿ ಸಂಶಯವೇ ಇಲ್ಲದಿರುವುದ ರಿಂದ ಪರೀಕ್ಷಾನವಸ್ಥಾರೂಪ ದೋಷವು ಬರುವುದಿಲ್ಲ ಎಂದು ಶಂಕಿಸಿದರೆ—

**ಮೂ ॥ ನ ಚಾಕಾಂಕ್ಷಾಯಾಮೇವ ಪ್ರಮಾಣಾಂತರಾಪೇಕ್ಷತ್ವಾದನವಸ್ಥಾ-ಭಾವ ಇತಿ ವಾಚ್ಯಂ ॥ ೩೩ ॥**

ಅ ॥ ಆಕಾಂಕ್ಷಾಯಾಮೇವ=ಆಕಾಂಕ್ಷಾ ಇರುವಾಗಲೇ, (ಪ್ರಾಮಾಣ್ಯ ಸಂಶಯ ವಿರುವಾಗಲೇ) ಪ್ರಮಾಣಾಂತರಾಪೇಕ್ಷತ್ವಾತ್=(ಪ್ರಾಮಾಣ್ಯಜ್ಞಪ್ತಿಗೆ) ಇತರ ಪ್ರಮಾಣಾಪೇಕ್ಷೆ ಇದ್ದುದರಿಂದ, ಅನವಸ್ಥಾಭಾವಃ = ಅನವಸ್ಥಾರೂಪ ದೋಷವಿಲ್ಲವು, ಇತಿ = ಹೀಗೆ, ನ ಚ ವಾಚ್ಯಂ=ಹೇಳಕೂಡದು.

ಟಾ ॥ ಏಕೆ ಅನವಸ್ಥಾದೋಷವಿಲ್ಲವೆಂದು ಹೇಳಕೂಡದು ಎಂದರೆ — ಯಾವುದರ ಪ್ರಾಮಾಣ್ಯದಲ್ಲಿ ಸಂಶಯವೇ ಹುಟ್ಟುವುದಿಲ್ಲವೋ ಅಲ್ಲಿ ಪ್ರಮಾಣಾಂತರ ಸಂವಾದವೂ ಬೇಕಾಗಿಲ್ಲ, ಎಂದು ಹೇಳುವವರು ಪ್ರಾಮಾಣ್ಯ ಸಂಶಯದ ನಿವೃತ್ತಿಯಲ್ಲಿಯೇ ಪ್ರಮಾಣಾಂತರ ಸಂವಾದಕ್ಕೆ ಉಪಯೋಗವು, ಪ್ರಾಮಾಣ್ಯಜ್ಞಪ್ತಿಯಲ್ಲಿ ಉಪಯೋಗವಿಲ್ಲವು ಎಂದು ಹೇಳಬೇಕಾಯಿತು. ಇಲ್ಲ ವಾದರೆ ಸಂಶಯವಿದ್ದರೂ ಪ್ರಾಮಾಣ್ಯ ಜ್ಞಾನಕ್ಕಾಗಿ ಪ್ರಮಾಣಾಂತರ ಸಂವಾದವು ಅವಶ್ಯ ಬೇಕಾದುದರಿಂದ ಅನವಸ್ಥೆಯು ಬರಬೇಕಾಗುವುದು. ತಥಾ ಚ ನಮ್ಮ ಮತವನ್ನೇ ಅಂಗೀಕರಿಸಿದ ಹಾಗಾಯಿತು. ॥ ೩೩ ॥

ಅದು ಹೇಗೆ ಎಂದಾಶಂಕಿಸಿದರೆ —

**ಮೂ ॥ ಆಕಾಂಕ್ಷಾಯಾ ಏವ ಬುದ್ಧಿದೋಷಾತ್ಮಕತ್ವಾತ್ ॥ ೩೪ ॥**

ಅ || ಆಕಾಂಕ್ಷಾಯಾ ಏವ=ಆಕಾಂಕ್ಷಾಕ್ಕೇನೆ, ಬುದ್ಧಿದೋಷಾತ್ಮಕತ್ವಾತ್=ಬುದ್ಧಿಯ ದೋಷಸ್ವರೂಪತ್ವವಿದ್ದುದರಿಂದ.

ತಾ || (1) ಪರರು ಆಕಾಂಕ್ಷಾನಿವೃತ್ತಿಯಲ್ಲಿ ಪ್ರಮಾಣಾಂತರಕ್ಕೆ ಉಪಯೋಗವೆಂದರು. ನಾವಾದರೂ ಬುದ್ಧಿದೋಷ ನಿರಾಸಕ್ಕಾಗಿ ಎಂದೆವು. ಆಕಾಂಕ್ಷಾ, ಬುದ್ಧಿದೋಷ ಇವುಗಳು ಪರ್ಯಾಯಪದಗಳು. (2) ಅಪ್ರಾಮಾಣ್ಯ ಸಂಶಯವಿದ್ದರೂ ಪ್ರಾಮಾಣ್ಯಕ್ಕೆ ಅವಶ್ಯ ವೇದ್ಯತ್ವ ವಿಲ್ಲದಿರುವುದರಿಂದ ಅನವಸ್ಥಾರೂಪ ದೋಷವಿಲ್ಲವೆಂದಭಿಪ್ರಾಯವೆಂದು ಹೇಳಕೂಡದು. ನಿಶ್ಶಂಕ ಪ್ರವೃತ್ತಿಮಾಡುವುದಕ್ಕಾಗಿ ಪ್ರಾಮಾಣ್ಯವು ಅವಶ್ಯ ವೇದ್ಯವಾಗಿದೆ. ಮನಸ್ಸಿನಿಂದ ಜಲಜ್ಞಾನವು ಜ್ಞಾತವಾಗೋಣ, ಅದಕ್ಕೆ ಪ್ರಾಮಾಣ್ಯವು ಉಪಲಬ್ಧವಾಗದಿರಲು ಸಂಶಯವು ಹೇಗೆ ಬಾರದೆ ಹೊಗುವುದು? ಈ ಜಲಜ್ಞಾನವು ಪ್ರಮಾಣವೋ, ಅಲ್ಲವೋ? ಎಂದು ಪ್ರಾಮಾಣ್ಯದಲ್ಲಿ ಸಂಶಯ ವಿರಲು, ಇದು ಜಲವೋ, ಅಲ್ಲವೋ? ಎಂಬೀ ಸಂಶಯವೂ ಹೇಗೆ ಹುಟ್ಟದೆ ಹೋಗುವುದು? ಜಲಾದ್ಯರ್ಥದಲ್ಲಿಯೇ ಸಂಶಯವಿದ್ದುದರಿಂದ ಜಲಾದಿಗಳಲ್ಲಿ ಸಂಶಯವಿಲ್ಲದ ಪ್ರವೃತ್ತಿಯು ಹೇಗೆ ಕೂಡಬಹುದು? (3) ಯದ್ಯಪಿ ಲೋಕದಲ್ಲಿ ಧಾನ್ಯಾದಿರೂಪ ಅರ್ಥಸಂದೇಹದಿಂದಲೂ ಕೃಷ್ಯಾದಿಗಳಲ್ಲಿ ಪ್ರವೃತ್ತಿಯದೆ. ಆದರೂ ಅತ್ಯಧಿಕ ಶರೀರಾಯಾಸದಿಂದಲೂ, ಧನವ್ಯಯಾದಿ ಗಳಿಂದಲೂ ಸಾಧ್ಯವಾದ ಪರಲೋಕ ಸಾಧನೀಭೂತಗಳಾದ ಯಾಗಾದಿಗಳಲ್ಲಿ ಪ್ರವೃತ್ತಿಯು ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವಿಲ್ಲದೆ ಕೇವಲ ಸಂಶಯದಿಂದ ಕೂಡಲಾರದಷ್ಟೆ! (4) ಜ್ಞಾನವು ಸ್ವರೂಪದಿಂದಲೇ ಪ್ರವೃತ್ತಿಗೆ ಕಾರಣವಾಗುತ್ತದೆ. ಪ್ರವೃತ್ತಿಯನ್ನು ಹುಟ್ಟಿಸುವುದರಲ್ಲಿ ತನ್ನ ಜ್ಞಾನವನ್ನು ಅಪೇಕ್ಷಿಸುವುದಿಲ್ಲ. ಹೀಗೂ ಹೇಳಕೂಡದು. ಸಾಮಗ್ರೀ ಇರುವಾಗ ಸುಖಾದಿ ಗಳಂತೆಯೇ ವೇದ್ಯಗಳೇ ಆಗುವುವು. (5) ತಿಳಿಯಬೇಕೆಂದು ಇಚ್ಛೆಯಿಲ್ಲದಿರುವಾಗಲೂ ಸುಖಾದಿ ಗಳು ಗ್ರಾಹ್ಯಗಳಾಗುವುವು. ಜ್ಞಾನವು ಹಾಗಲ್ಲವು ತಿಳಿಯಬೇಕೆಂದಿಚ್ಛೆಯಿರುವಾಗಲೇ ಗೃಹೀತ ವಾಗುತ್ತದೆ. ಜ್ಞಾನವೂ ಅಬುಭುತ್ಸಿತ ಗ್ರಾಹ್ಯವೆಂದಂಗೀಕರಿಸಿದರೆ ಸರ್ವದಾ ಜ್ಞಾನ ಪರಂಪರೆಯೇ ಪ್ರಾಪ್ತವಾಗುವುದರಿಂದ ತದ್ಗ್ರಾಹಕವಾದ ಮನಸ್ಸಿಗೂ ಉಪರತಿಯೇ ಇಲ್ಲದಿರುವುದರಿಂದ ಸುಷುಪ್ತ್ಯಾದಿಗಳೇ ಇಲ್ಲದಿರಬೇಕಾಗುವುವು, ಎಂದು ಹೇಳಕೂಡದು. ಜ್ಞಾನವು ಅವೇದ್ಯವಾದರೆ ಅಪ್ರಾಮಾಣಿಕವಾದ ಜ್ಞಾನವೇ ಇಲ್ಲದೆ ಹೋಗಬೇಕಾಗುವುದು. ಜ್ಞಾನವು ಅಬುಭುತ್ಸಿತಗ್ರಾಹ್ಯ ವಾದರೂ ನಿಮ್ಮ ಮತದಲ್ಲಿ ಜ್ಞಾನವು ಮನೋವೇದ್ಯವಾದಪ್ರಯುಕ್ತ ಮನಸ್ಸಿಗೆ ಉಪರತಿಯಿಲ್ಲದಿರು ವುದರಿಂದ ಸುಷುಪ್ತ್ಯಾದಿಗಳು ಇಲ್ಲದೆ ಹೋಗಬೇಕಾಗುವುವು. ನಮ್ಮ ಮತದಲ್ಲಾದರೂ ಜ್ಞಾನಕ್ಕೆ ಅಬುಭುತ್ಸಿತ ಗ್ರಾಹ್ಯತ್ವವಿದ್ದರೂ ಸಾಕ್ಷಿವೇದ್ಯತ್ವವನ್ನೊಡಂಬಟ್ಟಪ್ರಯುಕ್ತ ಸುಖ ಕಾಲ ಆತ್ಮ ಸ್ವರೂಪ ಜ್ಞಾನಗಳುಸುಷುಪ್ತಿಯಲ್ಲಿದ್ದರೂ ಸಾಕ್ಷಿಯಿಂದಲೇ ಗೃಹೀತಗಳಾಗುವುದರಿಂದ, ಸುಷು ಪ್ತ್ಯುಚ್ಛೇದರೂಪ ದೋಷವಿಲ್ಲದಿರುವುದರಿಂದ, ಮನಸ್ಸಿಗೆ ಉಪರತಿಯಿದ್ದುದರಿಂದ ಸುಷುಪ್ತಿ ಕೂಡಬಹುದು. ಅಂದರೆ — ಜ್ಞಾನವು ಅಬುಭುತ್ಸಿತಗ್ರಾಹ್ಯವಾದರೂ ಅದು ಸಾಕ್ಷಿವೇದ್ಯ ವಾಗಿರುವುದರಿಂದ ಸುಷುಪ್ತ್ಯಾದ್ಯಭಾವರೂಪವಾದ ಅನಿಷ್ಟವು ನಮ್ಮ ಮತದಲ್ಲಿಲ್ಲ. (6) ಮತ್ತು ಪರಲೋಕಕ್ಕಾಗಿ ಪ್ರವೃತ್ತಿಮಾಡಿರುವವನಿಗೆ ಜ್ಞಾನದ ಜ್ಞಾನೇಚ್ಛೆಯೂ ಅಂಗೀಕರಿಸಲೇ ಬೇಕು. ಬುಭುತ್ಸಿತಗ್ರಾಹ್ಯವಲ್ಲದಿದ್ದರೆ ಎಲ್ಲಿಯೂ ತಿಳಿಯಬೇಕೆಂದಿಚ್ಛೆಯೇ ಇಲ್ಲದಿರುವುದರಿಂದ ಜ್ಞಾನವೇ ಇಲ್ಲವಾದಕಾರಣ ಆ ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯಕ್ಕಾಗಿ 'ಇದಂ ಜ್ಞಾನಂ ಪ್ರಮಾಣಂ ಸಮರ್ಥ ಪ್ರವೃತ್ತಿಜನಕಜಾತೀಯತ್ವಾತ್' ಇತ್ಯಾದಿ ರೂಪದಿಂದ ಹುಡುಕುವುದು ಹೇಗೆ ಕೂಡಬಹುದು? ಧರ್ಮಿಯ ಜ್ಞಾನವೇ ಇಲ್ಲವಾದಮೇಲೆ ಅನುಮಾನವೇ ಪ್ರವೃತ್ತಿಸದೆಹೋಗಬೇಕಾಗುವುದು ||೩೪||

ಹೀಗೆ ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ಪ್ರಾಮಾಣ್ಯವು ಗೃಹೀತವಾಗುವುದೆಂದು ಪ್ರಾಮಾಣ್ಯಕ್ಕೆ ಸ್ವತಸ್ತ್ವವೆಂದಂಗೀಕರಿಸಿದರೆ ಆಗ ಜ್ಞಾನಗ್ರಾಹಕವಾದ ಸಾಕ್ಷಿಗೆ ಪ್ರಾಮಾಣ್ಯ ಗ್ರಹಣವು ಸ್ವಭಾವವು ಎಂದು ಹೇಳಿದಂತೆ ಆಯಿತು ಪರಾಪೇಕ್ಷೆಯಿಲ್ಲದಿರುವುದು ಸ್ವಭಾವವು. ತಥಾಚ ಸಾಕ್ಷಿಯು ಬೌದ್ಧಾದಿಗಳ ವಾಕ್ಯಗಳಿಂದುಂಟಾದ ಜ್ಞಾನಕ್ಕೂ ಪ್ರಾಮಾಣ್ಯವನ್ನು ತಿಳಿಸ ಬೇಕಾದೀತು. ಪ್ರಾಮಾಣ್ಯಗ್ರಾಹಕತ್ವರೂಪವಾದ ಸ್ವಭಾವವು ತಪ್ಪಲಾರದು. ಬೌದ್ಧಾದಿಗಳ ವಾಕ್ಯಗಳಿಂದುಂಟಾದ ಜ್ಞಾನಕ್ಕೆ ಪ್ರಾಮಾಣ್ಯವನ್ನು ಗ್ರಹಿಸತಕ್ಕ ಸಾಕ್ಷಿಯು ದೋಷರಹಿತವೆಂದೇ ಅಂಗೀಕರಿಸಬೇಕು. ಇಲ್ಲವಾದರೆ ಸಾಕ್ಷಿಯಿಂದ ವೇದ್ಯಗಳಾದ ಸುಖಾದಿಗಳ ಜ್ಞಾನದಲ್ಲಿಯೂ ಅಪ್ರಾಮಾಣ್ಯಸಂಶಯವು ಹುಟ್ಟುವುದರಿಂದ ಅಲ್ಲಿಯೂ ಪರೀಕ್ಷಾಂತರವನ್ನು ಅಪೇಕ್ಷಿಸಬೇಕಾ ಗುತ್ತದೆ. 'ನ ಪರೀಕ್ಷಾಽನವಸ್ಥಾ ಸ್ಯಾತ್ಸಾಕ್ಷಿಸಿದ್ಧೇ ತ್ವಸಂಶಯಾತ್' ಎಂದು ಪರೀಕ್ಷಾಽನವಸ್ಥೆಯನ್ನು ನೀವು ಪರಿಹರಿಸುವುದು ಕೂಡದೆ ಹೋಗಬೇಕಾಗುವುದು. ಅಂತೂ ಬೌದ್ಧಾದಿವಾಕ್ಯಗಳಿಂದುಂ ಟಾದ ಜ್ಞಾನವೂ ಪ್ರಮಾಣವಾಗಬೇಕಾಗುವುದು ಎಂಬೀ ಪರರ ಶಂಕೆಯನ್ನು ಪರಿಹರಿಸುತ್ತಾರೆ.

**ಮೂ ॥ ದುಷ್ಟಬುದ್ಧೀನಾಮೇವಾಪ್ರಾಮಾಣ್ಯಶಂಕೇತಿ**
**ಪರತೋಽಪ್ರಾಮಾಣ್ಯಂ ॥ ೩೫ ॥**

ಅ ॥ ದುಷ್ಟಬುದ್ಧೀನಾಮೇವ = ಕೆಟ್ಟಬುದ್ಧಿಯುಳ್ಳವರಿಗೇನೆ, ಅಪ್ರಾಮಾಣ್ಯಶಂಕಾ= ಅಪ್ರಾಮಾಣ್ಯ ಸಂಶಯವು, ಇತಿ=ಆದಕಾರಣ, ಅಪ್ರಾಮಾಣ್ಯಂ=ಅಪ್ರಾಮಾಣ್ಯವು, ಪರತಃ= ಜ್ಞಾನಗ್ರಾಹಕೇತರದಿಂದ ಗ್ರಾಹ್ಯವು.

ತಾ ॥ (1) ಜ್ಞಾನಗ್ರಾಹಕವಾದ ಸಾಕ್ಷಿಯು ಪ್ರಮಾಣವಾಗಿಯೇ ವಿಷಯೀಕರಿಸುತ್ತದೆ, ಎಂದು ಸಾಪವಾದ ನಿಯಮವು. ವಿಸಂವಾದ ರೂಪವಾದ ಅಪವಾದದಿಂದ ವಿಪರೀತಶಕ್ತಿಯನ್ನು ಹೊಂದಿ ಅಪ್ರಾಮಾಣ್ಯವನ್ನು ತಿಳಿಸುತ್ತದೆ. ಸಹಕಾರಿಗಳು ಸ್ವಾಭಾವಿಕಶಕ್ತಿಯನ್ನು ತಡೆದು ವಿಪರೀತಶಕ್ತಿಯನ್ನು ಹುಟ್ಟಿಸುತ್ತವೆ ಎಂದು ಪ್ರಸಿದ್ಧವು. ಕಾಡುಕಿಚ್ಚಿಯಿಂದ ಸುಟ್ಟುಹೋದ ಬಿದಿರಿನ ಬೀಜಗಳು ಬಿದಿರಿನ ಅಂಕುರವನ್ನು ಹುಟ್ಟಿಸದೆ ಬಾಳೆಗಿಡವನ್ನು ಹುಟ್ಟಿಸುವುದು ದೃಷ್ಟ ವಾಗಿದೆ. ಬೌದ್ಧಾದಿವಾಕ್ಯಗಳಿಂದುಂಟಾದ ವಿಜ್ಞಾನಕ್ಕೆ ವಿಸಂವಾದವಿದೆ. ಆ ಕಾರಣ ಸಾಕ್ಷಿಯು ಅಪ್ರಮಾಣವೆಂದೇ ಗೃಹಿಸುತ್ತದೆ. (2) ದೋಷಯುಕ್ತವಾದ ಮನಸ್ಸುಳ್ಳವರಿಗೆ ವೇದಜನಿತವಾದ ವಿಜ್ಞಾನದಲ್ಲಿ ಅಪ್ರಾಮಾಣ್ಯಸಂಶಯವು ದೃಷ್ಟವಾದುದರಿಂದ ಪ್ರಕೃತದಲ್ಲಿಯೂ, ವಿಸಂವಾದ ರೂಪವಾದ ಅಪವಾದದಿಂದ ಯುಕ್ತವಾದ ಸಾಕ್ಷಿಯಿಂದ ಬೌದ್ಧಾದಿವಾಕ್ಯಗಳಿಂದುಂಟಾದ ಜ್ಞಾನ ದಲ್ಲಿಯೂ ಅಪ್ರಾಮಾಣ್ಯವು ನಿಶ್ಚಿತವಾಗಿದೆ. (3)'ಯತ್ಕ್ವಚಿದ್ವ್ಯಭಿಚಾರಿ ಸ್ಯಾದ್ದರ್ಶನಂ ಮಾನಸಂ ಹಿ ತತ್' ಎಂದು ಹೇಳಿರುವುದರಿಂದ ಅಪ್ರಾಮಾಣ್ಯಸಂಶಯವು ಸಾಕ್ಷಿಗೆ ಗೋಚರಿಸುವುದಿಲ್ಲ. ಮನಸ್ಸಿಗೇನೇ ಸರಿ. ಆದಕಾರಣ ಇದು('ದುಷ್ಟಬುದ್ಧೀನಾಮೇವಾಪ್ರಾಮಾಣ್ಯಶಂಕಾ' ಎನ್ನುವುದು) ವಿಸಂವಾದರೂಪವಾದ ದೋಷದರ್ಶನವು ಅಪ್ರಾಮಾಣ್ಯ ಗ್ರಹಣಕ್ಕೆ ಕಾರಣವಾಗಿದೆ ಎಂಬು ವಲ್ಲಿಯೇ ದೃಷ್ಟಾಂತವು. (4) ಅಥವಾ ಪ್ರಾಮಾಣ್ಯವು ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ಗ್ರಾಹ್ಯವಾಗುವುದಾದರೆ ಜ್ಞಾನ ಧರ್ಮತ್ವವು ಎರಡರಲ್ಲಿಯೂ ಸಮಾನವಾದುದರಿಂದ ಅಪ್ರಾ ಮಾಣ್ಯವೂ ಹಾಗೆಯೇ ಆಗಬೇಕಾಗುವುದು. ಅಂತೂ ವೇದದಿಂದುಂಟಾದ ಜ್ಞಾನಕ್ಕೆ ಪ್ರಾಮಾಣ್ಯದಂತೆಯೇ ಅಪ್ರಾಮಾಣ್ಯವೂ ಸಾಕ್ಷಿಗೃಹೀತವಾಗಬೇಕಾಗುವುದು ಎಂದಃ ಶಂಕಿ ಸಿದರೂ ಇದೇ ಮೂಲದಿಂದ ಸಮಾಧಾನವನ್ನು ಹೇಳುತ್ತಾರೆ.

**ಮೂ ॥ ದುಷ್ಟಬುದ್ಧೀನಾಮೇವಾಪ್ರಾಮಾಣ್ಯಶಂಕೇತಿ ಪರತೋಽಪ್ರಾಮಾಣ್ಯಂ ॥**

(5) ಪ್ರಾಮಾಣ್ಯದಂತೆಯೇ ಅಪ್ರಾಮಾಣ್ಯವೂ ಕೇವಲ ಜ್ಞಾನಗ್ರಾಹಕವಾದ ಸಾಕ್ಷಿಯಿಂದ ಗ್ರಾಹ್ಯವಲ್ಲ. ಮತ್ತೆ ವಿಸಂವಾದದಿಂದ ಸಂಪಾದಿಸಲ್ಪಟ್ಟ ಶಕ್ತಿಯುಳ್ಳ ಸಾಕ್ಷಿಯಿಂದ ಗೃಹೀತವಾಗುತ್ತದೆ. ವೇದದಿಂದುಂಟಾದ ಜ್ಞಾನಕ್ಕೆ ಯಥಾರ್ಥವಾಗಿ ವಿಸಂವಾದವಿಲ್ಲ. (6) ಪ್ರಾಮಾಣ್ಯ ಅಪ್ರಾಮಾಣ್ಯ ಈ ಎರಡರಲ್ಲಿಯೂ ಜ್ಞಾನಧರ್ಮತ್ವವು ಸಮಾನವಾದರೂ ಪ್ರಾಮಾಣ್ಯವು ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ಗ್ರಾಹ್ಯವು. ಅಪ್ರಾಮಾಣ್ಯವಾದರೂ ವಿಸಂವಾದದಿಂದ ಶಕ್ತಿಯನ್ನು ಹೊಂದಿದ ಸಾಕ್ಷಿಯಿಂದ ಗೃಹೀತವಾಗುತ್ತದೆ. ಎಂಬೀ ವಿಭಾಗಕ್ಕೆ ಏನು ಪ್ರಮಾಣವೆಂದರೆ— ಅನ್ಯತತ್ತ್ವ ವ್ಯಾಹತಿ ಮೊದಲಾದ ಅಸದ್ಯುಕ್ತಿಗಳ ಅನುಸಂಧಾನವಿರುವಾಗಲೇ ಅಪ್ರಾಮಾಣ್ಯವು ಗ್ರಹಿಸಲ್ಪಡುತ್ತದೆ, ಇಲ್ಲವಾದರೆ ಇಲ್ಲ, ಎಂಬೀ ಅನ್ವಯವ್ಯತಿರೇಕಗಳೇ ಪ್ರಮಾಣವೆಂದು ಉಕ್ತವಾಯಿತು. (7) ಯದ್ಯಪಿ ಬೌದ್ಧಾದಿವಾಕ್ಯಗಳಿಂದುಂಟಾದ ಜ್ಞಾನದಲ್ಲಿ ವಿಸಂವಾದದಿಂದ ಸಹಕೃತವಾದ ಸಾಕ್ಷಿಯಿಂದ ಅಪ್ರಾಮಾಣ್ಯವು ನಿಶ್ಚಿತವಾಗುತ್ತದೆ, ಎಂದು ಹೇಳಬೇಕಿಟ್ಟತು. ಆದರೂ ಅನ್ಯತತ್ತ್ವ ವ್ಯಾಹತಿ ಮೊದಲಾದ ದೋಷಗಳು ವೇದದಲ್ಲಿ ಆಪಾತತಃ ತೋರುವುದರಿಂದ ಅದನ್ನು ಅನುಸರಿಸಿ 'ದುಷ್ಟಬುದ್ಧೀನಾಂ ಶಂಕಾ' ಎಂದೂ ಉಕ್ತವಾಗಿದೆ. (8) ವಸ್ತುತಸ್ತು ವಿಸಂವಾದದ ಅನುಸಂಧಾನವುಳ್ಳವರಿಗೇನೇ ಅಪ್ರಾಮಾಣ್ಯಜ್ಞಾನವು, ಅದು ಇಲ್ಲದಿದ್ದವರಿಗೆ ಇಲ್ಲ. ಇಂತಹ ನಿರ್ದುಷ್ಟಗಳಾದ ಅನ್ವಯವ್ಯತಿರೇಕಗಳಿರುವುದರಿಂದ ಅಪ್ರಾಮಾಣ್ಯವು ಅನುಮೇಯವೇ. (ವಿಸಂವಾದರೂಪವಾದ ಹೇತುವಿನ ಅನುಸಂಧಾನ ಸಹಕೃತವಾದ ಸಾಕ್ಷಿವಿಷಯಕವೇ ಸರಿ. ಅಂತೂ ಸಾಕ್ಷಿಯು ಅಪ್ರಾಮಾಣ್ಯವನ್ನು ವಿಷಯೀಕರಿಸಬೇಕಾದರೆ ನಿಯಮದಿಂದ ವಿಸಂವಾದದ ಅಪೇಕ್ಷೆಯಿದೆ.) ಕೇವಲ ಜ್ಞಾನಗ್ರಾಹಕವಾದ ಸಾಕ್ಷಿಯಿಂದ ಗ್ರಾಹ್ಯವಲ್ಲ, ಎಂದು ಉಕ್ತವಾಯಿತು. ಅದುಷ್ಟಬುದ್ಧಿಗಳಿಗೆ ಪ್ರಾಮಾಣ್ಯವು ಸ್ವತಏವ ಸಿದ್ಧವಾದುದರಿಂದ ಪ್ರಾಮಾಣ್ಯಗ್ರಹಣಕ್ಕೆ ಯುಕ್ತ್ಯನುಸಂಧಾನಾಪೇಕ್ಷೆಯಿಲ್ಲ ॥ ೩೫ ॥

ವಿಸಂವಾದವು ಅಪ್ರಾಮಾಣ್ಯಗ್ರಹಣಕ್ಕೆ ಕಾರಣವಾದರೆ ವಿಸಂವಾದವು ಇಲ್ಲದಿರುವಾಗ ಪ್ರಾಮಾಣ್ಯವು ಪ್ರತೀತವಾಗುತ್ತದೆ ಎಂದರ್ಥವಾಗಬೇಕಾಯಿತು. ಆದ ಕಾರಣ ಪ್ರಾಮಾಣ್ಯವೂ ಜ್ಞಾನಗ್ರಾಹಕೇತರದಿಂದಲೇ ಗ್ರಾಹ್ಯವಾಗಬೇಕಾಯಿತು. ಸ್ವತಃ ಆಗದೆ ಹೋಗಬೇಕಾಯಿತು ಎಂದಾಶಂಕಿಸಿದರೆ —

**ಮೂ ॥ ಪ್ರಾಮಾಣ್ಯಂ ಚ ಸ್ವತ ಏವ ಸಿದ್ಧಂ ॥ ೩೬ ॥**

ಅ ॥ ಪ್ರಾಮಾಣ್ಯಂ ಚ = ಪ್ರಾಮಾಣ್ಯವಾದರೂ, ಸ್ವತ ಏವ=ಜ್ಞಾನಗ್ರಾಹಕದಿಂದಲೇ ಗ್ರಾಹ್ಯವೆಂದು, ಸಿದ್ಧಂ=ಸಿದ್ಧವಾಯಿತು.

ತಾ ॥ (1) ದಾಹವಿಲ್ಲದಿರುವಾಗಲೇ ಬಿದಿರಿನ ಬೀಜವು ಬಿದಿರಿನ ಮೊಳಕೆಯನ್ನು ಹುಟ್ಟಿಸುತ್ತದೆ, ಇಷ್ಟರಿಂದ ದಾಹಾಭಾವವು ವೇತ್ರಾಂಕುರಕ್ಕೆ ಕಾರಣವಲ್ಲವಷ್ಟೆ! ಆದರೆ ದಾಹವಿಲ್ಲದಿರುವುದರಿಂದ ವಿಪರೀತಕಾರ್ಯವು ಹುಟ್ಟದೆ ಇದ್ದು, ವೇತ್ರಬೀಜವು ತನ್ನ ಮಹಿಮೆಯಿಂದಲೇ ವೇತ್ರದ ಮೊಳಕೆಯನ್ನು ಹುಟ್ಟಿಸುತ್ತದೆ. (2) ಅಪ್ರಾಮಾಣ್ಯವನ್ನು ಗ್ರಹಿಸಲಿಕ್ಕೆ ಕಾರಣವಿಲ್ಲದಿರುವುದೂ ಪ್ರಾಮಾಣ್ಯವನ್ನು ಗ್ರಹಿಸಲಿಕ್ಕೆ ಉಪಯುಕ್ತವಾಗಿದೆ, ಎಂದಂಗೀಕರಿಸಿದರೂ ನಮಗೆ ಪ್ರಕೃತ ವೇದಾಪೌರುಷೇಯತ್ವಕ್ಕೆ ಬಾಧಕವಿಲ್ಲವು ॥ ೩೬ ॥

**ಪ್ರಾಮಾಣ್ಯವಾದವು ಸಮಾಪ್ತವಾಯಿತು.**

(1) ವರ್ಣಗಳಿಗೆ ಅನಿತ್ಯತ್ವವನ್ನು ಹೇಳುವ ವೈಶೇಷಿಕಾದಿಗಳು ಶಂಕಿಸುವರು. ವೇದಕ್ಕೆ ಅಪೌರುಷೇಯತ್ವವನ್ನು ಇಟ್ಟುಕೊಂಡರೆ ಪ್ರಾಮಾಣ್ಯಕ್ಕೆ ಹಾನಿಯಿಲ್ಲದಿದ್ದರೂ ವೇದಕ್ಕೆ ಅಪೌರುಷೇಯತ್ವವು ಕೂಡಲಾರದು. ವೇದವು ವರ್ಣಗಳ ಸಮುದಾಯರೂಪವಾಗಿದೆ. ವರ್ಣಗಳು ಉಚ್ಚಾರಣದಿಂದ ಹುಟ್ಟುತ್ತವೆ. ಉತ್ಪತ್ತಿಯುಳ್ಳ ಸಮುದಾಯಿಗಳ ಸಮುದಾಯಕ್ಕೆ ಉತ್ಪತ್ತಿಯಿಲ್ಲವೆನ್ನುವುದು ಕೂಡಲಾರದಷ್ಟೆ! (2) ಉಚ್ಚಾರಣಕ್ಕಿಂತ ಮೊದಲು ತಿಳಿಯಲ್ಪಡದಿರುವ ವರ್ಣಗಳು ಉಚ್ಚಾರಣವಾದೊಡನೆ ಉಪಲಬ್ಧಗಳಾಗಿ ಪುನಃ ಉಪಲಬ್ಧಗಳಾಗುವುದೇ ಇಲ್ಲ, ಹೀಗೆಯೇ ಅನುಭವವು. ಆ ವರ್ಣಗಳಿಗೆ ಉತ್ಪತ್ತಿಯಾಗಲೀ, ವಿನಾಶವಾಗಲೀ ಇಲ್ಲವೇ ಇಲ್ಲ. ಕೇವಲ ಉಪಲಬ್ಧಿ, ಅನುಪಲಬ್ಧಿಗಳಿಂದಲೇ ಉತ್ಪತ್ತಿ ನಾಶಗಳನ್ನು ನಿಶ್ಚಯಿಸಕೂಡದು. ಹಾಗೆ ಇಟ್ಟುಕೊಂಡರೆ ಪ್ರಥಮದಲ್ಲಿ ಪ್ರತ್ಯಕ್ಷವಾಗಿ ಆಮೇಲೆ ಪತ್ಯಕ್ಷವಾಗದಿರುವ ಘಟಾದಿಗಳಿಗೆ ತೋರಿದ ಸಮಯದಲ್ಲಿಯೇ ಉತ್ಪತ್ತಿಯು ತೋರದಿರುವಾಗಲೇ ನಾಶವು ಬರಬೇಕಾಗುವುದು. ಎಂದೂ ಸಿದ್ಧಾಂತಿಗಳು ಹೇಳಕೂಡದು. ಏಕೆಂದರೆ— ವರ್ಣಗಳು ಘಟಾದಿಗಳಂತೆಯೇ ಉಚ್ಚಾರಣಾನಂತರದಲ್ಲಿ ದೇಶಾಂತರದಿಂದ ಬಂದು ಉಚ್ಚಾರಣವು ಉಪರಮವಾದೊಡನೆಯೇ ದೇಶಾಂತರಕ್ಕೆ ಹೋಗತಕ್ಕವುಗಳು ಅಲ್ಲ. ವರ್ಣಗಳು ಅಮೂರ್ತಗಳಾದಪ್ರಯುಕ್ತ ಗಮನಾಗಮನಾದಿರೂಪಕ್ರಿಯೆಗಳು ಕೂಡಲಾರವು. (3) ಆ ಅಮೂರ್ತತ್ವವೂ ಕೂಡ 'ವರ್ಣಾಃ ಅಮೂರ್ತಾಃ ಗುಣತ್ವಾತ್ ರೂಪಾದಿವತ್' ಎಂಬೀ ಅನುಮಾನದಿಂದ ಸಿದ್ಧವಾಗಿದೆ. ಆಕಾಶಾದಿಗಳಂತೆಯೇ ವರ್ಣಗಳಿಗೆ ದ್ರವ್ಯತ್ವವನ್ನು ಅಂಗೀಕರಿಸಿದರೂ ಆಕಾಶಾದಿಗಳಂತೆಯೇ ಸರ್ವತ್ರವ್ಯಾಪ್ತಗಳಾದಪ್ರಯುಕ್ತ ದೇಶಾಂತರದಿಂದ ಬಂದು ದೇಶಾಂತರಕ್ಕೆ ಹೋಗುತ್ತವೆ ಎಂಬುವುದು ಕೂಡಲಾರವು. (4) ದ್ರವ್ಯತ್ವವನ್ನು ಇಟ್ಟುಕೊಂಡು ಪರಮಾಣುವಿನಂತೆಯೇ ಅಣುತ್ವವನ್ನಿಟ್ಟುಕೊಂಡರೆ ಅತೀಂದ್ರಿಯವಾಗಬೇಕಾಗುವುದು. ಅಂತೂ ವರ್ಣಗಳು ಶ್ರೋತ್ರೇಂದ್ರಿಯಗ್ರಾಹ್ಯಗಳೆಂದು ಅನುಭವಸಿದ್ಧಗಳಾದಪ್ರಯುಕ್ತ ಅದರಿಂದ ವಿರೋಧವು ಪ್ರಾಪ್ತವಾಗುವುದು. (5) ಘಟಾದಿಗಳಂತೆ ದ್ರವ್ಯತ್ವವನ್ನು ಇಟ್ಟುಕೊಂಡು ಮಧ್ಯಮಪರಿಮಾಣವೆಂದಂಗೀಕರಿಸಿದರೆ ನೀವು ಅಂಗೀಕರಿಸಿದ ನಿತ್ಯತ್ವವು ವಿರುದ್ಧವಾಗಬೇಕಾಯಿತು. (6) ಉಚ್ಚಾರಣಮಾಡುವುದಕ್ಕಿಂತ ಮೊದಲು ವರ್ಣಗಳು ಆವೃತಗಳಾದಪ್ರಯುಕ್ತ ತೋರದೆ ಇದ್ದುದಾಗಿ ಆವರಣವು ಹೋದೊಡನೆ ವರ್ಣಗಳನ್ನು ಹೊಂದಿ ಪುನಃ ಆವರಣವು ಬಂದುಬಿದ್ದಪ್ರಯುಕ್ತ ಉಪಲಬ್ಧವಾಗುವುದಿಲ್ಲ. ಎಂದೂ ಹೇಳಕೂಡದು. ಆವರಕವು ಉಪಲಬ್ಧವಾಗಲೇ ಇಲ್ಲ. (7) ಮತ್ತು ನಿಮ್ಮ ಮತದಲ್ಲಿ ವರ್ಣಗಳು ವ್ಯಾಪಿಸಿಕೊಂಡಿರುವ ದ್ರವ್ಯಗಳಾದಪ್ರಯುಕ್ತ ಆಕಾಶಾದಿಗಳಿಗೆ ಹೇಗೆ ಆವರಣವು ಕೂಡುವುದಿಲ್ಲವೋ ಹಾಗೆ ಆವರಣವು ಕೂಡಲಾರದು. ಇಂದ್ರಿಯ ದೋಷವೇ ಆವರಕವು ಎಂದು ಯುಕ್ತವಲ್ಲ. ಶ್ರೋತ್ರೇಂದ್ರಿಯವೇ ದುಷ್ಟವಾಗಿದ್ದರೆ ಯಾವ ವರ್ಣವೂ ಉಪಲಬ್ಧವಾಗದೆ ಹೋಗಬೇಕಿದ್ದಿತು. ಒಂದು ವರ್ಣವು ಉಪಲಬ್ಧವಾಗದಿದ್ದರೂ ವರ್ಣಾಂತರಾನುಭವವು ಎಲ್ಲಾ ಜನರಿಗೂ ಅದೆ. ಅಂತೂ ಯಾವುದೊಂದು ವರ್ಣವು ಉಪಲಬ್ಧವಾಗುವುದಿಲ್ಲವೋ ಅಲ್ಲಿ ಆವರಕವಾದುದು ಇಂದ್ರಿಯದೋಷದಿಂದ ಬೇರೆಯಿಲ್ಲ. (8) ಬೇರೆ ವರ್ಣವು ತೋರದಿರಲಿಕ್ಕೆ ಕೇಳತಕ್ಕವನ ವಿಷಯಾಂತರಗಳಲ್ಲಿ ಮನಸ್ಸಂಚಾರವೇ ನಿಮಿತ್ತವೆಂದೆನ್ನಕೂಡದು. ಮನೋವ್ಯಾಸಂಗವಿಲ್ಲದಿದ್ದರೂ ಒಂದು ವರ್ಣವು ಉಪಲಬ್ಧಿಯಾಗುವಕಾಲದಲ್ಲಿ ವರ್ಣಾಂತರವು ಉಪಲಬ್ಧಿಯಾಗುವುದಿಲ್ಲ. (9) ಉಚ್ಚಾರಣದಿಂದ ಮೊದಲು ಅತೀಂದ್ರಿಯಗಳಾದಪ್ರಯುಕ್ತ ಉಪಲಬ್ಧವಾಗುವುದಿಲ್ಲ ಎಂದು ಹೇಳಕೂಡದು. ಉಚ್ಚಾರಣಮಾಡಿದರೂ ಉಪಲಬ್ಧಿಯಾಗದೆ ಹೋಗಬೇಕಾಗುವುದು. ಅತೀಂದ್ರಿಯವಾದುದು ಯಾವಾಗಲೂ ಪ್ರತ್ಯಕ್ಷವಾಗುವುದೇ ಇಲ್ಲ.

(10) ಉಚ್ಚಾರಣದಿಂದ ಮೊದಲು ಸಹಕಾರಿಕಾರಣವಿಲ್ಲದಿರುವುದರಿಂದ ಉಪಲಬ್ಧವಾಗುವುದಿಲ್ಲ, ಎಂದರೆ ಅನ್ವಯವ್ಯತಿರೇಕವುಳ್ಳ ಸಹಕಾರಿಕಾರಣವೇ ಇಲ್ಲ. ಉಚ್ಚಾರಣವು ಸಹಕಾರಿಕಾರಣವೆಂದರೆ ಯಾವುದು, ಕಾರ್ಯವು ಹುಟ್ಟುವ ವಿಷಯದಲ್ಲಿ ಉಪಕಾರಿಯಾಗುವುದೋ ಅಂತಹುದೇ ಸಹಕಾರಿಯೆನ್ನಿಸುತ್ತದೆ. ಯಾವುದನ್ನೂ ಮಾಡದಿರುವ ಉಚ್ಚಾರಣವು ಸಹಕಾರಿಕಾರಣವು ಆಗಲಾರದು. (11) ಉಚ್ಚಾರಣವು ವ್ಯಂಜಕವೂ ಆಗಲಾರದು, ಏಕೆಂದರೆ—ಉಚ್ಚಾರಣವು ಹೇಳತಕ್ಕವನ ಮುಖದಲ್ಲಿದೆ. ವರ್ಣಗಳಾದರೂ ಕೇಳತಕ್ಕವನ ಶ್ರೋತ್ರಪ್ರದೇಶದಲ್ಲಿವೆ. ಘಟಪ್ರಕಾಶಗಳು ಬೇರೆಬೇರೆ ಕಡೆಗಳಲ್ಲಿದ್ದರೆ ವ್ಯಂಗ್ಯ ವ್ಯಂಜಕಭಾವವು ಕೂಡಲಾರದಷ್ಟೆ! (12) ಉಚ್ಚಾರಣಕ್ಕೆ ವ್ಯಂಜಕತ್ವವು ಕೂಡದಿರುವುದರಿಂದ ವರ್ಣಗಳಿಗೆ ಗಮನಾಗಮನಾದಿಗಳೂ ಕೂಡದಿರಲು ಉಚ್ಚಾರಣಮಾಡಿದಮೇಲೆಯೇ ವರ್ಣಗಳ ಸಾಕ್ಷಾತ್ಕಾರವು ಉಚ್ಚಾರಣದಿಂದ ಹುಟ್ಟಿದ್ದೆಂದರೆ ಕೂಡುತ್ತದೆ ಎಂದು ಹೇಳಬೇಕು. ಇಲ್ಲವಾದರೆ ಕುಂಬಾರನು ಮಾಡಿದಮೇಲೆ ತೋರುವ ಘಟವು ಅವನಿಂದ ಹುಟ್ಟಿದ್ದಲ್ಲವೆಂದು ಆಗಬೇಕಾಗುವುದು. (13) ಆದಕಾರಣ ನಿತ್ಯತ್ವವು ಕೂಡದಿರುವುದರಿಂದ ಪುರುಷವ್ಯಾಪಾರದಿಂದ ಹುಟ್ಟುವ ಸಮುದಾಯಿಗಳಾದ ವರ್ಣಗಳು 'ಸರೋವರದ ಮಧ್ಯದಲ್ಲಿ ಕಲ್ಲನ್ನು ಬಿಸಾಡಿದೊಡನೆ ಚಕ್ರಾಕಾರವಾಗಿ ಎಂಟು ದಿಕ್ಕುಗಳನ್ನೂ ಸಂಬಂಧಿಸಿ ಹುಟ್ಟಿದ ಅಲೆಗಳ ಪರಂಪರೆಯು ತೀರಕ್ಕೆ ಹೇಗೆ ಬರುವುದೋ ಹಾಗೆಯೇ ಹೇಳತಕ್ಕವನ ಮುಖದಲ್ಲಿ ಹುಟ್ಟಿದ ಶಬ್ದದಿಂದ ಬೇರೊಂದು ಶಬ್ದವು, ಅದರಿಂದ ಮತ್ತೊಂದು ಶಬ್ದವು ಈ ಪ್ರಕಾರವಾಗಿ ಬೇರೆ ವರ್ಣಗಳನ್ನು ಹುಟ್ಟಿಸುತ್ತವೆ.' ಶ್ರೋತ್ರದೇಶದಲ್ಲಿ ಹುಟ್ಟಿದ ವರ್ಣಾಂತರಗಳು ಪ್ರತ್ಯಕ್ಷಗಳಾಗುತ್ತವೆ. ಈ ಪ್ರಕಾರ ಸಮುದಾಯಿಗಳ ಸಮೂಹರೂಪವಾದ ವೇದವೂ ಪೌರುಷೇಯವೆಂದೇ ಹೇಳಬೇಕು. ಎಂದಾಶಂಕಿಸಿದರೆ—

**ಮೂ ॥ ನ ಚೋಚ್ಚಾರಣಕಾಲ ಏವ ವರ್ಣಾನಾಮುತ್ಪತ್ತಿರಿತಿ ವಾಚ್ಯಂ ॥೩೭॥**

ಅ ॥ ಉಚ್ಚಾರಣಕಾಲ ಏವ = ಉಚ್ಚಾರಣಾನಂತರ ಕಾಲದಲ್ಲಿಯೇ, ವರ್ಣಾನಾಂ= ವರ್ಣಗಳಿಗೆ, ಉತ್ಪತ್ತಿಃ = ಹುಟ್ಟುವಿಕೆಯು, (ಉಚ್ಚಾರಣವು ಉಪರತಿಯಾದೊಡನೆಯೇ, ವಿನಾಶವು) ಇತಿ=ಹೀಗೆ, ನ ಚ ವಾಚ್ಯಂ=ಹೇಳಕೂಡದು ॥ ೩೭ ॥

(1) ಏಕೆ ಹೇಳಕೂಡದೆಂದರೆ — ವ್ಯಂಜಕವಿದ್ದರೇನೇ ವರ್ಣಗಳ ಪ್ರತ್ಯಕ್ಷವು. ಇಲ್ಲವಾದರೆ ವರ್ಣವು ಸಾಕ್ಷಾತ್ಕೃತವಾಗುವುದಿಲ್ಲ. ಉಚ್ಚಾರಣವಾದರೂ ವ್ಯಂಜಕಗಳಾದ ಧ್ವನಿಗಳನ್ನು ಹುಟ್ಟಿಸುತ್ತದೆ. ಆ ಧ್ವನಿಗಳು ಭೂತಾಕಾಶದ ಗುಣಗಳು, ಅಂತೂ ಭೂತಾಕಾಶವೇ ಶ್ರೋತ್ರೇಂದ್ರಿಯವು, ಅದರ ಗುಣವೇ, ಧ್ವನಿಯು. ಆದಕಾರಣ ಶ್ರೋತ್ರಪ್ರದೇಶದಲ್ಲಿರುವ ಧ್ವನಿಯು ಶ್ರೋತ್ರಾವಚ್ಛಿನ್ನವೇ ಆದ ವರ್ಣವನ್ನು ವ್ಯಕ್ತೀಕರಿಸುತ್ತದೆ. ಆದಕಾರಣ ವ್ಯಂಗ್ಯ ವ್ಯಂಜಕಗಳಿಗೆ ಬೇರೆಬೇರೆ ದೇಶಗಳು ಆಗಲಿಲ್ಲ. ಇತ್ಯಾದಿ ವಿಷಯಗಳನ್ನು 'ಅತ ಆಕಾಶಗುಣೋ ಶಬ್ದೋ' ಇತ್ಯಾದಿಗಳಿಂದ ಹೇಳುವುದಕ್ಕೋಸ್ಕರ ಈ ಕಲ್ಪನೆಯು ವರ್ಣಗಳಿಗೆ ಅನಾದಿನಿತ್ಯತ್ವವಿದ್ದರೇನೇ ಕೂಡುವುದರಿಂದ ಅದನ್ನು ಸಾಧಿಸುವುದೂ ಉತ್ಪತ್ತಿನಾಶಗಳನ್ನು ಅಂಗೀಕರಿಸಿದರೆ ಬಾಧಕವೂ ಆದ ಪ್ರಮಾಣವನ್ನು 'ಉಚ್ಚಾರಣ ಕಾಲದಲ್ಲಿ ವರ್ಣಗಳಿಗೆ ಉತ್ಪತ್ತಿಯೆಂದು ಹೇಳಕೂಡದೆಂಬ ವಿಷಯದಲ್ಲಿ' ಹೇತುವಾಗಿ ಹೇಳುತ್ತಾರೆ.

**ಮೂ ॥ ತದೇವೇದಂ ವಚನಮಿತಿ ಪ್ರತ್ಯಭಿಜ್ಞಾವಿರೋಧಾತ್ ॥ ೩೮ ॥**

ಅ ॥ ಇದಂ ವಚನಂ=ಈ ವರ್ಣವು, ತದೇವ=ಮುಂಚೆ ಕೇಳಿದ್ದೇ, ಇತಿ=ಹೀಗೆ, ಪ್ರತ್ಯಭಿಜ್ಞಾವಿರೋಧಾತ್=ಪ್ರತ್ಯಭಿಜ್ಞೆಯಿಂದ ವಿರೋಧವಿದ್ದುದರಿಂದ,

ತಾ ॥ (1) ಪೂರ್ವದಲ್ಲಿ ಗಕಾರವನ್ನು ಕೇಳಿದವನಿಗೆ ಪುನಃ ಆ ಶಬ್ದವನ್ನು ಕೇಳಿದ ಮೇಲೆ ಅದೇ ಈ ಗಕಾರವು ಎಂಬೀ ಪ್ರತ್ಯಭಿಜ್ಞೆಯು ಹುಟ್ಟುತ್ತದೆ. ಆ ಪ್ರತ್ಯಭಿಜ್ಞೆಯು ಶ್ರುತ ಶ್ರೂಯಮಾಣಗಳಾದ ಗಕಾರಗಳಿಗೆ ಅಭೇದವನ್ನು ವಿಷಯೀಕರಿಸುತ್ತಾ ಉಚ್ಚಾರಣದಿಂದ ಹುಟ್ಟಿದ್ದಲ್ಲವೆಂದೇ ಸಾಧಿಸುತ್ತದೆ. ಹಿಂದೆ ಇದ್ದ ಗಕಾರಕ್ಕೆ ಈಗಿನ ಉಚ್ಚಾರಣದಿಂದ ಉತ್ಪತ್ತಿಯು ಕೂಡಲಾರದಷ್ಟೇ! ಇದೇ ರೀತಿಯಾಗಿ ಪೂರ್ವಕಾಲದಲ್ಲಿಯೂ, ತತ್ಪೂರ್ವಕಾಲದಲ್ಲಿಯೂ ಅದೇ ಈ ಗಕಾರವು ಎಂಬೀ ಪ್ರತ್ಯಭಿಜ್ಞೆಯು ಸರ್ವರಿಗೂ ಹುಟ್ಟುತ್ತದೆ. ಆದಕಾರಣ ಇಂತಹ ಪ್ರತ್ಯಭಿಜ್ಞೆಯಿಂದ ವರ್ಣಗಳಿಗೆ ಅನಾದಿ ನಿತ್ಯತ್ವವೇ ಸಿದ್ಧವಾಗುವುದು. (2) ಈ ವಿಷಯದಲ್ಲಿ 'ತಾನೇವ ಶಾಲೀನ್ ಭುಂಜ್ಮಹೇ' ಆ ಶಾಲ್ಯನ್ನವನ್ನೇ ಊಟಮಾಡುತ್ತೇವೆ ಇತ್ಯಾದಿಗಳಂತೆಯೇ 'ತ ಏವೇಮೇ ವರ್ಣಾಃ' ಅವುಗಳೇ ಈ ವರ್ಣಗಳು ಎಂಬುವುದೂ ಕೇವಲ ವ್ಯಪದೇಶವು. ಹೀಗೆ ಅನುಭವವಿಲ್ಲ ಎಂದು ಕೆಲವರು ಅನ್ನುತ್ತಾರೆ. ಅದು ಅಸಂಗತವು, ಪ್ರತ್ಯಭಿಜ್ಞಾನವು ಸಾಕ್ಷಿಸಿದ್ಧವಾಗಿದೆ. (3) ಇನ್ನು ಕೆಲವರು ಈ ಪ್ರತ್ಯಭಿಜ್ಞೆಯು ಗತ್ವವೊದಲಾದ ಜಾತಿಗಳನ್ನೇ ವಿಷಯೀಕರಿಸುತ್ತದೆ. ವರ್ಣವನ್ನು ವಿಷಯೀಕರಿಸುವುದಿಲ್ಲ ಎನ್ನುತ್ತಾರೆ. ಇದೂ ಅಸಂಗತವು. ಜಾತಿಯು ನಿತ್ಯವೆನ್ನುವುದು'ಮಾಸೇನ ಶೂದ್ರೋ ಭವತಿ ಬ್ರಾಹ್ಮಣೋ ರಸವಿಕ್ರಯಾತ್। ಜಾತೇರಪಾಯೋ ಭವತಿ ಮಹಾಪಾತಕಕಾರಣಃ' ಇತ್ಯಾದಿ ಪ್ರಮಾಣವಿರುದ್ಧವು. ಮತ್ತು ವರ್ಣವಿಷಯಕವೆಂದೇ ಸ್ಪಷ್ಟವಾಗಿ ತೋರುವುದು. (4) ಇನ್ನು ಕೆಲವರು ಹೀಗೆ ತಿಳಿಯುತ್ತಾರೆ. 'ಗೌಃ' ಎಂಬುವಲ್ಲಿ ಗಕಾರ, ಔಕಾರ, ವಿಸರ್ಗ ಎಂಬುವ ವರ್ಣಗಳಿಂದ ವ್ಯಂಗ್ಯವಾಗುವ ಪದಸ್ಫೋಟವೇ ಪ್ರತ್ಯಭಿಜ್ಞಾನಕ್ಕೆ ವಿಷಯವೆನ್ನುವುದೂ ಅಯುಕ್ತವು. ವರ್ಣಾತಿರಿಕ್ತವಾದ ಸ್ಫೋಟವಿಷಯದಲ್ಲಿ ಪ್ರಮಾಣವೇ ಇಲ್ಲವು. 'ವರ್ಣಗಳು ಪ್ರತ್ಯೇಕವಾಗಿ ಅರ್ಥವನ್ನು ಹೇಳುವುದಿಲ್ಲ, ಹಾಗಿದ್ದರೆ ಅನೇಕ ವರ್ಣಗಳ ಉಚ್ಚಾರಣವು ವ್ಯರ್ಥವಾಗಬೇಕಾಗುವುದು. ಮಿಳಿತಗಳಾಗಿಯೂ ಅರ್ಥವನ್ನು ಹೇಳುವುದಿಲ್ಲ. ಏಕೆಂದರೆ ಕ್ರಮವುಳ್ಳವುಗಳಿಗೆ(ಕ್ರಮದಿಂದ ಉತ್ಪತ್ತಿ ವಿನಾಶವುಳ್ಳವುಗಳಿಗೆ) ಸಮುದಾಯವು ಕೂಡಲಾರದು. ವರ್ಣಗಳು ನಿತ್ಯಗಳಾಗಿದ್ದಾಗ್ಯೂ ತಿಳಿಯಲ್ಪಟ್ಟವುಗಳಾಗಿಯೇ ಅರ್ಥವನ್ನು ಹೇಳುತ್ತವೆ. ಪ್ರತೀತಿಯು ಕ್ರಮದಿಂದಲೇ ಆಗುವುದು. ಆದಕಾರಣ ಸಮುದಾಯವು ಕೂಡಲಾರದು. ಆದ ಪ್ರಯುಕ್ತ ವರ್ಣಗಳಿಂದ ಅರ್ಥವನ್ನು ಹೇಳಲಿಕ್ಕೆ ಬಾರದಿರುವುದಾಗಿ ವರ್ಣಾತಿರಿಕ್ತವಾದ ಪದಸ್ಫೋಟವನ್ನು ಕಲ್ಪಿಸುವುದು, ಎಂದೂ ಹೇಳಕೂಡದು. ಒಂದೇ ಬುದ್ಧಿಯಲ್ಲಿ ವಿಷಯೀಕೃತವಾದುದರಿಂದ ವರ್ಣಗಳೇ ಅರ್ಥವನ್ನು ಹೇಳುತ್ತವೆ. (5) ಹೀಗೆಯೇ ಪದಾತಿರಿಕ್ತವಾದ ವಾಕ್ಯಸ್ಫೋಟವೂ ಅಪ್ರಾಮಾಣಿಕವು. 'ಇದು ಪದವು' ಎಂಬೀ ಬುದ್ಧಿಗೆ ವಿಷಯಗಳಾದ ವರ್ಣಗಳೇ ಯೋಗ್ಯವಾದ ಇತರಾರ್ಥದಿಂದೊಡಗೂಡಿದ ಸ್ವಾರ್ಥವನ್ನು ಹೇಳುವ ಪ್ರಯುಕ್ತ ಅದರಿಂದಲೇ ವಾಕ್ಯಾರ್ಥಜ್ಞಾನವು ಸಂಭವಿಸುವಾಗ ಪದಾತಿರಿಕ್ತವಾದ ವಾಕ್ಯಸ್ಫೋಟವನ್ನು ಕಲ್ಪಿಸಕೂಡದು. ಆದಕಾರಣ ಈ ಪ್ರತ್ಯಭಿಜ್ಞೆಯು ವರ್ಣವಿಷಯಕವೇ ಸರಿ. ಸ್ಫೋಟವಿಷಯಕವಲ್ಲ ॥೩೮॥

(1) ಆದರೂ ಈ ಪ್ರತ್ಯಭಿಜ್ಞೆಯಿಂದ ವರ್ಣಗಳಿಗೆ ನಿತ್ಯತ್ವವು ಸಿದ್ಧಿಸುವುದಿಲ್ಲ. ಏಕೆಂದರೆ- ಪೂರ್ವದಲ್ಲಿ ಉಚ್ಚರಿಸಿದ ಗಕಾರದಿಂದ ಈಗ ಉಚ್ಚರಿಸಲ್ಪಡತಕ್ಕ ಗಕಾರಕ್ಕೆ ಸಾದೃಶ್ಯವಿದ್ದುದರಿಂದ ತನ್ನಿಮಿತ್ತಕವಾದ ಭ್ರಾಂತಿಯೇ ಸರಿ. ಹೇಗೆ ಒಂದಾವರ್ತಿ ಛೇದಿಸಿ ಪುನಃ ಹುಟ್ಟಿದ ಕೂದಲುಗಳ ಸಮೂಹಗಳಿಗೆ ಸಾದೃಶ್ಯವಿದ್ದುದರಿಂದ 'ಅದೇ ಕೂದಲುಗಳ ಸಮುದಾಯವಿದು'

ಎಂಬೀ ಪ್ರತ್ಯಭಿಜ್ಞೆಯು ಭ್ರಾಂತಿಯೋ, ಹಾಗೆಯೇ ಪ್ರಕೃತದಲ್ಲೂ 'ಅದೇ ಗಕಾರವಿದು' ಎಂಬುವುದೂ ಭ್ರಾಂತಿಯೆಂದು ಶಂಕಿಸಿದರೆ —

**ಮೂ || ನ ಚ ಸಾದೃಶ್ಯಾತ್ಪ್ರತ್ಯಭಿಜ್ಞಾ ಭ್ರಾಂತಿರಿತಿ ವಾಚ್ಯಂ || ೩೯ ||**

ಅ || ಸಾದೃಶ್ಯಾತ್=ಸಾದೃಶ್ಯದಿಂ, ದಪ್ರತ್ಯಭಿಜ್ಞಾ=ಅದೇ ಇದು ಎಂಬೀ ಪ್ರತ್ಯಭಿಜ್ಞೆಯು, ಭ್ರಾಂತಿಃ=ಭ್ರಮೆಯು, ಇತಿ=ಹೀಗೆ, ನ ಚ ವಾಚ್ಯಂ=ಹೇಳಕೂಡದು.

ತಾ || (1) ಏತಕ್ಕೆ ಹೇಳಕೂಡದೆಂದರೆ— ದೃಷ್ಟಾಂತಕ್ಕೂ ದಾರ್ಷ್ಟಾಂತಿಕಕ್ಕೂ ವೈಷಮ್ಯವಿದೆ. 'ಸ ಏವಾಯಂ ಕುಂತಲಕಲಾಪಃ' ಅದೇ ಕೂದಲುಗಳ ಸಮುದಾಯವಿದು, ಎಂಬೀ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನು ಕಲ್ಪಿಸುವುದು ಯುಕ್ತವು. ಭಿನ್ನಗಳಾದ ಕೂದಲುಗಳ ಸಮುದಾಯವು ಭೂಮಿಯಲ್ಲಿ ಬಿದ್ದುದನ್ನು ಕಂಡಪ್ರಯುಕ್ತ 'ಇದು ಅದಲ್ಲ' ಎಂಬೀ ಬಾಧಕಪ್ರತ್ಯಯವು ಹುಟ್ಟುವುದು. ಅದೇ ಗಕಾರವಿದು ಇತ್ಯಾದಿ ವರ್ಣವಿಷಯದಲ್ಲಿ ಅಂತಹ ಬಾಧಕಪ್ರತ್ಯಯವು ಇರುವುದಿಲ್ಲ. ಬಾಧಕಪ್ರತ್ಯಯವಿಲ್ಲದಿದ್ದರೂ ಭ್ರಾಂತಿತ್ವವನ್ನು ಕಲ್ಪಿಸುವುದಾದರೆ 'ಸೋಽಯಂ ದೇವದತ್ತಃ' ಇದುಮೊದಲಾದ ಪ್ರತ್ಯಭಿಜ್ಞೆಗಳಿಗೂ ಭ್ರಾಂತಿತ್ವವು ಬರಬೇಕಾಗುವುದು || ೩೯ ||

(1) ಪುನಃ ತಾರ್ಕಿಕರು ಶಂಕಿಸುತ್ತಾರೆ. ವರ್ಣಗಳಲ್ಲಿಯೂ 'ಶ್ರುತಶ್ರೂಯಮಾಣೌ ತೀವ್ರಮಂದಗಕಾರೌ=ಮುಂಚೆ ಕೇಳಲ್ಪಟ್ಟ, ಈಗ ಕೇಳಲ್ಪಡುವ ಗಟ್ಟಿಯಾಗಿಯೂ ಮೆಲ್ಲಗೆಯಾಗಿಯೂ ಉಚ್ಚರಿಸಲ್ಪಟ್ಟಿರುವ ಗಕಾರಗಳು, ಭಿನ್ನೌ=ಭೇದವುಳ್ಳವುಗಳು, ತೀವ್ರತ್ವ ಮಂದತ್ವರೂಪ ವಿರುದ್ಧಧರ್ಮಾಧಿಕರಣತ್ವಾತ್ = ತೀವ್ರತ್ವ ಮಂದತ್ವರೂಪಗಳಾದ ವಿರುದ್ಧಧರ್ಮಗಳಿರುವುದರಿಂದ, ಯತ್ ಯದ್ವಿರುದ್ಧಧರ್ಮಾಧಿಕರಣಂ ತತ್ತತೋ ಭಿನ್ನಂ=ಯಾವುದು ಯಾವುದರಕ್ಕಿಂತ ವಿರುದ್ಧಗಳಾದ ಧರ್ಮಗಳಿಗೆ ಆಶ್ರಯವೋ ಅದು ಅದಕ್ಕಿಂತ ಭಿನ್ನವು. ಎಂಬೀ ಭೇದಸಾಧಕವಾದ ಅನುಮಾನವು ಪ್ರತ್ಯಭಿಜ್ಞೆಯನ್ನು ಬಾಧಿಸುತ್ತದೆ. (2) ವಿರುದ್ಧಧರ್ಮವಿರತಕ್ಕವುಗಳಿಗೂ ಅಭೇದ ಹೇಳುವುದಾದರೆ ಎಲ್ಲಿಯೂ ಭೇದವಿಲ್ಲವೆಂದಾಗುವುದರಿಂದ ನಿರವಕಾಶವಾದ ಅನುಮಾನವು ಪ್ರತ್ಯಭಿಜ್ಞಾಪ್ರತ್ಯಕ್ಷವನ್ನು ಬಾಧಿಸಲಿಕ್ಕೆ ಸಮರ್ಥವೇ ಆಗುವುದು, ಎಂದು ಹೇಳಿದರೆ (೧) ಅವಿಶೇಷಿತವಾದ (ದೇಶಕಾಲ ಪುರುಷಾವಸ್ಥಾದಿ ಭೇದವ್ಯವಸ್ಥಾಪಕದಿಂದೊಡಗೂಡಿದ) ವಿರುದ್ಧ ಧರ್ಮಕ್ಕೆ ಆಶ್ರಯವಾದುದು ಪದಾರ್ಥಗಳ ಭೇದಕ್ಕೆ ಕಾರಣವೆಂದಂಗೀಕರಿಸಲ್ಪಡುತ್ತದೋ,(೨) ಅಥವಾ ವಿಶಿಷ್ಟವಾದುದು,(ದೇಶಕಾಲ ಪುರುಷಾವಸ್ಥಾದಿ ಭೇದರೂಪಗಳಾದ ವ್ಯವಸ್ಥಾಪಕಗಳ ಅಭಾವದಿಂದ ಯುಕ್ತವಾದುದು,)ವಿರುದ್ಧಧರ್ಮಗಳಿಗೆ ಆಶ್ರಯವಾದುದು ಪದಾರ್ಥಗಳ ಭೇದಕ್ಕೆ ಕಾರಣವೆಂದಂಗೀಕರಿಸಲ್ಪಡುತ್ತದೋ, ಇವುಗಳಲ್ಲಿ ೧ನೇದ್ದು ಅಯುಕ್ತವೆನ್ನುತ್ತಾರೆ.

**ಮೂ || ಸೋಽಯಂ ದೇವದತ್ತ ಇತ್ಯಾದೇರಪಿ ತಥಾತ್ವಪ್ರಾಪ್ತೇಃ || ೪೦ ||**

ಅ || (ಹಾಗೆ ಹೇಳುವುದಾದರೆ ದೇವದತ್ತಾದಿಗಳಿಗೂ 'ಶಿಖೀ ಮುಂಡೀ ಜಟಿಲಃ' ಎಂದು ವಿರುದ್ಧಧರ್ಮಗಳಿರುವುದರಿಂದ ಭೇದವು ಪ್ರಾಪ್ತವಾಗುತ್ತದೆ. ಆದಪ್ರಯುಕ್ತ) 'ಸೋಽಯಂ ದೇವದತ್ತಃ' ಇತ್ಯಾದೇರಪಿ=ಇದುಮೊದಲಾದ ಪ್ರತ್ಯಭಿಜ್ಞೆಗಳಿಗೂ, ಭ್ರಾಂತಿತ್ವಪ್ರಾಪ್ತೇಃ = ಭ್ರಾಂತಿತ್ವವು ಪ್ರಾಪ್ತಿಯಾಗುವುದರಿಂದ,

ತಾ || (1) ಎಲ್ಲಿ ದೇಶಕಾಲಪುರುಷಾವಸ್ಥಾದಿ ಭೇದವ್ಯವಸ್ಥಾಪಕಗಳು ಇಲ್ಲವೋ ಅಂತಹ ಸ್ಥಳದಲ್ಲಿಯೇ ವಿರುದ್ಧಧರ್ಮವುಳ್ಳದ್ದು ಭೇದಕ್ಕೆ ಕಾರಣವಾಗುತ್ತದೆ, ಎಂದು ೨ನೇ ಪಕ್ಷವನ್ನೇ ಅಂಗೀಕರಿಸಬೇಕು. ಸರ್ವಜ್ಞತ್ವ ಅಲ್ಪಜ್ಞತ್ವಾದಿರೂಪವಾದುದು ಜೀವೇಶ್ವರರಿಗೆ ಭೇದಕ್ಕೆ

ಕಾರಣವಾಗುವುದು. ವರ್ಣಗಳಲ್ಲಿ ಅಂತಹ ವಿರೋಧವಿಲ್ಲವು. ಒಂದೇ ವರ್ಣಕ್ಕೆ ಒಬ್ಬನೇ ಚೈತ್ರನು. ಒಂದುಸಮಯದಲ್ಲಿ ಗಕಾರವನ್ನು ಗಟ್ಟಿಯಾಗಿಯೂ ಮತ್ತೊಂದು ವೇಳೆ ಮೆಲ್ಲಗೆಯಾಗಿಯೂ ಉಚ್ಚರಿಸಿದನು ಎಂಬೀ ಕಾಲಭೇದದಿಂದಲೂ, ಒಂದೇ ಗಕಾರವನ್ನು ಒಬ್ಬನು ಗಟ್ಟಿಯಾಗಿಯೂ, ಮತ್ತೊಬ್ಬನು ಮೆಲ್ಲಗೆಯೂ ಉಚ್ಚರಿಸಿದನು. ಹೀಗೆ ಉಚ್ಚರಿಸುವ ಪುರುಷರ ಭೇದದಿಂದಲೂ, ಮೂಗು ಮೊದಲಾದ ಸ್ಥಾನಭೇದಗಳಿಂದಲೂ ವಿರುದ್ಧಧರ್ಮಾಧಿಕರಣತ್ವವು ಸಂಗತವಾಗುವುದು. ಯಾವ ಪ್ರಮಾಣದಿಂದಲೂ ತಾರತ್ವ ಮಂದತ್ವರೂಪ ವಿರುದ್ಧಧರ್ಮಗಳನ್ನು ವಿಷಯೀಕರಿಸುವ ಎರಡುಜ್ಞಾನಗಳಿಗೆ ಪ್ರಾಮಾಣ್ಯವು ಕೂಡವಿದ್ದರೆ ಎರಡರಲ್ಲೊಂದಕ್ಕೆ ಅಪ್ರಾಮಾಣ್ಯವನ್ನಂಗೀಕರಿಸಬೇಕು. ಪ್ರಕೃತದಲ್ಲಿ ಹಿಂದೆ ಹೇಳಿದಪ್ರಕಾರ ಎರಡು ಜ್ಞಾನಗಳಿಗೂ ಪ್ರಾಮಾಣ್ಯವೇ ಯುಕ್ತವು. (2) ಆದರೆ ವೈಶೇಷಿಕಾದಿಗಳು ದೇವದತ್ತಮೊದಲಾದವರ ಶರೀರಕ್ಕೆ ಪಾಕದಿಂದ ಪ್ರತಿಕ್ಷಣದಲ್ಲಿಯೂ ಉತ್ಪತ್ತಿ ವಿನಾಶಗಳನ್ನು ಅಂಗೀಕರಿಸಿರುವುದರಿಂದ 'ಸೋಽಯಂ ದೇವದತ್ತಃ' ಇತ್ಯಾದಿ ಪ್ರತ್ಯಭಿಜ್ಞೆಗಳಿಗೆ ಭ್ರಾಂತಿತ್ವವನ್ನು ಅಂಗೀಕರಿಸುತ್ತಾರೆ. ಆದಕಾರಣ ವರ್ಣಗಳಿಗೆ ಅನಿತ್ಯತ್ವವನ್ನು ಹೇಳುವ ವೈಶೇಷಿಕಾದಿಗಳಿಗೆ ಅನಿಷ್ಟವೇ ಆಗಬರುವುದರಿಂದ ಹೀಗೆ ಆಪಾದನೆಮಾಡಲಿಕ್ಕೆ ಬರುವುದಿಲ್ಲ, ಎಂದು ಶಿಷ್ಯನು ಶಂಕಿಸಿದರೆ— ಅರ್ಧಾಂಗೀಕಾರದಿಂದ ಸಮಾಧಾನಗೊಳಿಸುವರು. 'ಸೋಽಯಂ ದೇವದತ್ತಃ' ಇತ್ಯಾದಿ ಬುದ್ಧಿಯು ಭ್ರಾಂತವಾದರೂ ಪಾರ್ಥಿವಪರಮಾಣುಗಳಲ್ಲಿರುವ ರೂಪಾದಿಗಳು ಪಾಕಜಗಳಾದಪ್ರಯುಕ್ತ, ರೂಪಾದಿಪರಿವರ್ತನೆ, 'ಆಕಾಶಾದಿಗಳಲ್ಲಿ ಶಬ್ದವಿರುವುದು, ಇಲ್ಲದಿರುವುದು,' ಇವೇ ಮೊದಲಾದ ವಿರುದ್ಧಧರ್ಮಾಧಿಕರಣತ್ವವು ಪರಮಾಣ್ವಾದಿಗಳಲ್ಲಿಯೂ ಇದ್ದುದರಿಂದ ವೈಶೇಷಿಕಮತದಲ್ಲಿಯೂ ಯೋಗೀಶ್ವರಂದ್ದಪ್ರಯುಕ್ತ ಅವರಿಗೆ ಬರುವ 'ಸೋಽಯಂ ಪರಮಾಣುಃ, ಸೋಽಯಮಾಕಾಶಃ' ಎಂಬೀ ಪ್ರತ್ಯಭಿಜ್ಞೆಗಳೂ ಭ್ರಾಂತಿಗಳೆಂದಾಗಬೇಕಾಗುವುವು. ಅದು ಅವರಿಗೂ ಇಷ್ಟವಲ್ಲ. ಇದನ್ನು ವಿಶದೀಕರಿಸುವುದಕ್ಕೋಸ್ಕರವೇ 'ಸೋಽಯಂ ದೇವದತ್ತಃ ಇತ್ಯಾದೇರಪಿ' ಎನ್ನುವಲ್ಲಿ ಆದಿಶಬ್ದವನ್ನೂ ಸ್ವೀಕರಿಸಿರುವರು. (3) ವಸ್ತುತಃ ಅವರ ಪ್ರಕ್ರಿಯೆಯೇ ಅಯುಕ್ತವು. ಜಾಠರಾಗ್ನಿಕೃತವಾದ ಪಾಕದಿಂದ ದೇವದತ್ತನ ಶರೀರಕ್ಕೂ ಪರಮಾಣುಪರ್ಯಂತ ನಾಶವಾಗಲೀ, ಪುನಃ ದ್ವ್ಯಣುಕತ್ರ್ಯಣುಕಾದಿಕ್ರಮದಿಂದ ಉತ್ಪತ್ತಿಯನ್ನು ಅಂಗೀಕರಿಸಿರುವುದರಿಂದ 'ಸೋಽಯಂ ದೇವದತ್ತಃ' ಎಂಬೀ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನು ವೈಶೇಷಿಕಾದಿಗಳು ಅಂಗೀಕರಿಸುವುದು ಅಸಂಗತವೇ. ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನಂಗೀಕರಿಸುವುದಾದರೆ ವೈಶೇಷಿಕಾದಿಗಳಿಗೂ ಬೌದ್ಧರಿಗೂ ವಿವಾದವಿಲ್ಲವೆಂದಾಗಬೇಕಾಗುವುದು. ಘಟಾದಿಪ್ರಪಂಚಕ್ಕೆ ಬೌದ್ಧರು ಕ್ಷಣಿಕತ್ವವನ್ನು ಪ್ರತಿಪಾದಿಸಿದಾಗ ವೈಶೇಷಿಕಾದಿಗಳು 'ಸೋಽಯಂ ದೇವದತ್ತಃ, ಸೋಽಯಂ ಘಟಃ' ಇತ್ಯಾದಿ ಪ್ರತ್ಯಭಿಜ್ಞೆಗಳಿಂದ ಬೌದ್ಧರನ್ನು ಕುರಿತು ಸ್ಥಿರತ್ವವನ್ನು ಪ್ರತಿಪಾದಿಸಬೇಕು. ದೇವದತ್ತಾದಿಗಳಿಗೂ ಪಾಕದಿಂದ ಪ್ರತಿಕ್ಷಣದಲ್ಲಿಯೂ ಉತ್ಪತ್ತಿ ವಿನಾಶಗಳನ್ನಂಗೀಕರಿಸಿ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನಂಗೀಕರಿಸಿದರೆ ಸ್ಥಾಯಿತ್ವವನ್ನು ಸಾಧಿಸತಕ್ಕುದೇ ಇಲ್ಲದಿರುವುದರಿಂದ ಬೌದ್ಧಮತವನ್ನೇ ಅಂಗೀಕರಿಸಿದಹಾಗಾಯಿತು. ಅಂತೂ ಬೌದ್ಧರಿಗೂ ವೈಶೇಷಿಕಾದಿಗಳಿಗೂ ವಿವಾದವಿಲ್ಲವೆಂದಾಗಬೇಕಾಗುವುದು. (4) ಪಾರ್ಥಿವಸರ್ವದ್ರವ್ಯಗಳೂ ದೇವದತ್ತನಿಗೆ ಸಮಾನವೇ, ಅಂದರೆ-ಪಾರ್ಥಿವದ್ರವ್ಯದಲ್ಲಿಯೂ ಪಾಕದಿಂದ ದೇವದತ್ತನ ಶರೀರದಂತೆಯೇ ಪ್ರತಿಕ್ಷಣದಲ್ಲಿಯೂ ಉತ್ಪತ್ತಿವಿನಾಶಗಳಿವೆ. ಅಂತೂ ಪ್ರತ್ಯಭಿಜ್ಞೆಯು ಭ್ರಾಂತಿಯೇ. (5)ಜಲೀಯ ತೈಜಸ ವಾಯವೀಯ ಪದಾರ್ಥಗಳಿಗೆ ಬೌದ್ಧರು ಕ್ಷಣಿಕತ್ವವನ್ನು ಹೇಳುತ್ತಾರೆ, ವೈಶೇಷಿಕಾದಿಗಳು ಪ್ರತ್ಯಭಿಜ್ಞೆಯಿಂದ ಸ್ಥಾಯಿತ್ವವನ್ನು ಹೇಳುತ್ತಾರೆ, ಎಂದರೆ — ಅವುಗಳಿಗೂ ವಾಯುವಿನ

ಉಪಘಾತಾದಿಗಳಿಂದಲೇ ಅವಯವನಾಶವು ಇದ್ದೇ ಇದೆ. ಅಂತೂ ಅಲ್ಲಿಯ ಪ್ರತ್ಯಭಿಜ್ಞೆಯೂ ಭ್ರಾಂತಿಯೇ. (6)'ಆಕಾಶೋ ದ್ವಾ ವಿನಾಶೌ ಚ ನಿತ್ಯಂ ತ್ರಯಮಸಂಸ್ಕೃತಂ' ಎಂದು ಬೌದ್ಧರು ಅಂಗೀಕರಿಸಿದ್ದರಿಂದ ಆಕಾಶದ ಸ್ಥಾಯಿತ್ವವು ವಾದಿಪ್ರತಿವಾದಿಗಳಿಬ್ಬರಿಗೂ ಸಮ್ಮತವು. (7) ಆತ್ಮನಾದರೂ ಆಕಾಶಾದಿಗಳಂತೆ ಪಂಚಸ್ಕಂಧಗಳಿಂದ ಅತಿರಿಕ್ತನೆಂದು ಅಂಗೀಕರಿಸಲ್ಪಡಲೇ ಇಲ್ಲ. ಹಾಗೆಯೇ ದ್ರವ್ಯಗಳಿಂದ ಅತಿರಿಕ್ತಗಳಾದ ಕರ್ಮ ಸಾಮಾನ್ಯ ವಿಶೇಷ ಸಮವಾಯ ಗುಣ ಇವುಗಳು ಇಲ್ಲವೇ ಇಲ್ಲ. ಆ ಕಾರಣ ಇವುಗಳಲ್ಲಿಯೂ ವಿವಾದವೇ ಕೂಡಲಾರದು. (8) ಆದಪ್ರಯುಕ್ತ ಪರಮಾಣುಗಳಲ್ಲಿ ಮಾತ್ರ ವಿವಾದವು ಅವಶಿಷ್ಟವಾಗುವುದು. ಅವುಗಳಾದರೂ ಅತೀಂದ್ರಿಯಗಳಾದುದರಿಂದ ನಮ್ಮ ಪ್ರತ್ಯಭಿಜ್ಞೆಗೆ ವಿಷಯಗಳಾಗಲಾರವು. ಆದುದರಿಂದ ಅವುಗಳಿಗೂ ಸ್ಥಾಯಿತ್ವವನ್ನು ಸಾಧಿಸಲಿಕ್ಕೆ ಉಪಾಯವಿಲ್ಲವು. (9) ನಿಬಿಡ ಅವಯವವುಳ್ಳ ಸ್ಫಟಿಕಾದಿಗಳು ವಿವಾದಕ್ಕೆ ವಿಷಯವು, ಅಂದರೆ — ಸ್ಫಟಿಕಾದಿಗಳಿಗೆ ಬೌದ್ಧರು ಕ್ಷಣಿಕತ್ವವನ್ನು ಹೇಳುವಾಗ ವೈಶೇಷಿಕಾದಿಗಳು ಪ್ರತ್ಯಭಿಜ್ಞೆಯಿಂದ ಸ್ಥಾಯಿತ್ವವನ್ನು ಸಾಧಿಸಬೇಕು. ಅದಕ್ಕೆ ನಿಬಿಡಾವಯವವಿದ್ದುದರಿಂದ ಅವಯವಗಳಿಗೆ ಅಪಚಯವಿಲ್ಲದಿರುವಕಾರಣ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವು ಕೂಡುವುದಿಲ್ಲ, ಎಂದೂ ಹೇಳಕೂಡದು. ಸ್ಫಟಿಕಾದಿಗಳಿಗೂ ಪ್ರಬಲಗಳಾದ ಗಾಳಿ ಬಿಸಿಲು ಇತ್ಯಾದಿಗಳ ಅಭಿಘಾತದಿಂದ ಅವಯವನಾಶವು ಇದೆ. ಅಲ್ಲಿಯೂ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವೇ ಸಂ. (10) ಆದಪ್ರಯುಕ್ತ ಪಾರ್ಥಿವದ್ರವ್ಯದಲ್ಲಿ ವಿವಾದವಿಲ್ಲದಿದ್ದರೂ ಕ್ಷಣಿಕತ್ವಲಕ್ಷಣದಲ್ಲಿ ವಿವಾದವದೆ, 'ಪೂರ್ವಮಧ್ಯಾಪರಕಲಾರಹಿತಃ ಕ್ಷಣ ಇಷ್ಯತೇ' ಇದು ಪೂರ್ವಭಾಗವು, ಇದು ಮೇಲಿನಭಾಗವು, ಇದು ಮಧ್ಯಭಾಗವು, ಎಂದು ವಿಭಾಗವು ಎಲ್ಲಿ ಮಾಡಲಿಕ್ಕೆ ಶಕ್ಯವಾಗುವುದಿಲ್ಲವೋ ಇದು ಪೂರ್ವಾಪರಕಲೆಗಳಿಂದ ರಹಿತವಾದ ಕಾಲವು. ಆ ಕಾಲದಲ್ಲಿರುವುದು ಕ್ಷಣಿಕವು ಎಂದು ಬೌದ್ಧರು ಹೇಳುವರು. ವೈಶೇಷಿಕಾದಿಗಳು ಕ್ಷಣತ್ರಯದಲ್ಲಿರುವುದು ಎನ್ನುತ್ತಾರೆ. ಈ ಪ್ರತ್ಯಭಿಜ್ಞೆಯಿಂದ ಬೌದ್ಧರಿಗೆ ಅಭಿಮತವಾದ ಕ್ಷಣಿಕತ್ವವು ನಿರಾಕರಿಸಲ್ಪಡುತ್ತದೆ. ಎಂದರೆ — ಈ ವಿವಾದವನ್ನು ಕೇವಲ ಪ್ರತ್ಯಭಿಜ್ಞೆಯಿಂದ ನಿರಾಕರಿಸಲು ಸಾಧ್ಯವಿಲ್ಲ. ಏಕೆಂದರೆ-ಈ ಪದಾರ್ಥವು ಕ್ಷಣಿಕವಲ್ಲ. ಕ್ಷಣತ್ರಯದಲ್ಲಿರುವುದು ಎಂಬುವ ಅರ್ಥದಲ್ಲಿ ಪ್ರತ್ಯಭಿಜ್ಞೆಯು ಪ್ರವೃತ್ತವಾಗುವುದಿಲ್ಲ. ಪ್ರತ್ಯಕ್ಷದಿಂದ ಅತಿಸೂಕ್ಷ್ಮವಾದ ಕಾಲಭೇದವನ್ನು ತಿಳಿಯಲು ಸಾಧ್ಯವಿಲ್ಲ. (11) ಶಿಷ್ಯನು ಶಂಕಿಸುವನು. ಅವಯವಗಳಿಗೆ ವೃದ್ಧಿ ಕ್ಷೀಣಗಳಿದ್ದುದರಿಂದ ಪ್ರತಿಕ್ಷಣದಲ್ಲಿಯೂ ದೇವದತ್ತಾದಿಗಳಿಗೂ ಉತ್ಪತ್ತಿ ವಿನಾಶಗಳಿವೆ ಎಂದು ಒಡಂಬಟ್ಟು ಭೇದವನ್ನು ಅಂಗೀಕರಿಸಿದ ಪ್ರಯುಕ್ತ ನಮ್ಮ ಮತದಲ್ಲಿಯೂ 'ಸೋಽಯಂ ದೇವದತ್ತಃ' ಎಂಬೀ ಪ್ರತ್ಯಭಿಜ್ಞೆಯು ಭ್ರಮರೂಪವೇ. ಅಂತೂ ವೈಶೇಷಿಕಾದಿಗಳಂತೆಯೇ ನಾವೂ (ಸಿದ್ಧಾಂತಿಗಳೂ) ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನಂಗೀಕರಿಸಿದ್ದರಿಂದ ಅವರನ್ನು ಕುರಿತು ನೀವು (ಸಿದ್ಧಾಂತಿಗಳು) ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನಾಪಾದಿಸುವುದು ಯುಕ್ತವಲ್ಲ. ಎಂದರೆ— ಅವಯವಗಳ ವೃದ್ಧಿ ಕ್ಷೀಣಗಳಿಂದ ಪರಿಣಾಮವದೆ ಎನ್ನುವ ವಾದದಲ್ಲಿ ಭೇದಾಭೇದವನ್ನಂಗೀಕರಿಸಿದ್ದರಿಂದ ಅಭೇದವೂ ಅದೆ. ಆದಪ್ರಯುಕ್ತ 'ಸೋಽಯಂ ದೇವದತ್ತಃ' ಎಂಬೀ ಅಭೇದಾವಗಾಹಿಯಾದ ಪ್ರತ್ಯಭಿಜ್ಞೆಯು ಭ್ರಾಂತಿಯಲ್ಲ. ಆದಪ್ರಯುಕ್ತವೇ 'ಸ ಏವಾಯಂ ದೇವದತ್ತಃ' ಅವನೇ ಈ ದೇವದತ್ತನು ಎಂದು ಅತ್ಯಂತಾಭೇದವನ್ನು ವಿಷಯೀಕರಿಸುವ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವಿದ್ದರೂ 'ಸೋಽಯಂ ದೇವದತ್ತಃ' ಎನ್ನುವುದು ಭ್ರಮವಲ್ಲ ಎಂದು ಬೇರೆಕಡೆಯಲ್ಲಿ ಉಪಪಾದಿತವಾಗಿದೆ. (12) ಅವಯವಗಳಿಗೆ ವೃದ್ಧಿ ಕ್ಷೀಣಗಳಿದ್ದ ಪ್ರಯುಕ್ತ ಪರಿಮಾಣದಲ್ಲಿಯೂ ಭೇದವು ಕಂಡದೆ. ಆದಪ್ರಯುಕ್ತ ದೇವದತ್ತಾದಿಗಳಿಗೆ ಪರಿಣಾಮವು ಅಂಗೀಕರಿಸಲ್ಪಡುತ್ತದೆ. ವರ್ಣಗಳಲ್ಲಿ ಪರಿಣಾಮಜ್ಞಾಪಕವಾದುದು ಯಾವುದೂ ಇಲ್ಲ.

ಆದುದರಿಂದ ಅತ್ಯಂತಾಭೇದವನ್ನೂ ಅತ್ಯಂತಶೂನ್ಯತ್ವವನ್ನೂ (ನಿರ್ವಿಕಾರ ನಿತ್ಯತ್ವವನ್ನೂ) ಒಡಂಬಡಬೇಕು. (13) ಯಾವ ಕಾರಣದಿಂದ ಪರಿಣಾಮವಾದಿಗಳ ಮತದಲ್ಲಿ ದೇವದತ್ತಾದಿಗಳಲ್ಲಿ ಭೇದವೂ ಅದೆ, ವರ್ಣಗಳಲ್ಲಿ ಅತ್ಯಂತಾಭೇದವೇ ಇರುವುದೋ ಆದಪ್ರಯುಕ್ತವೇ ದೇವದತ್ತಾದಿಗಳಲ್ಲಿ 'ಸೋಽಯಂ' ಎಂದು ಅವಧಾರಣರಹಿತವಾಗಿ ಹೇಳಲ್ಪಟ್ಟದೆ. ವರ್ಣವಿಷಯದಲ್ಲಿ 'ತದೇವೇದಂ' ಎಂದು ಅವಧಾರಣಸಹಿತವಾಗಿಯೇ ಪ್ರತ್ಯಭಿಜ್ಞೆಯು ಹೇಳಲ್ಪಟ್ಟದೆ. ಅಂತೂ ವಿರುದ್ಧಧರ್ಮವುಳ್ಳದ್ದು ಭೇದಕ್ಕೆ ಕಾರಣವೆಂದು ಅಂಗೀಕರಿಸಿ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನಂಗೀಕರಿಸಿದರೆ 'ಸೋಽಯಂ ದೇವದತ್ತಃ' ಇತ್ಯಾದಿಗಳಿಗೂ ಭ್ರಾಂತಿತ್ವವು ಬರಬೇಕಾಗುವುದು ॥ ೪೦ ॥

ವೈಶೇಷಿಕಾದಿಗಳು ಸ್ಥಾಯಿಯಾದ ಪದಾರ್ಥವನ್ನೊಡಂಬಡುವುದರಿಂದ ಅವರನ್ನು ಹೀಗೆ ಹೆದರಿಸಬಹುದು. ಬೌದ್ಧನು ಸರ್ವಪದಾರ್ಥಗಳಿಗೂ ಕ್ಷಣಿಕತ್ವವನ್ನಂಗೀಕರಿಸಿ ಎಲ್ಲಾ ಪ್ರತ್ಯಭಿಜ್ಞೆಗಳಿಗೂ ಭ್ರಾಂತಿತ್ವವನ್ನಂಗೀಕರಿಸಿರುತ್ತಾನೆ. ಆತನಿಗಾದರೂ ವಿರುದ್ಧ ಧರ್ಮಾಧಿಕರಣತ್ವಮಾತ್ರವೇ ಪದಾರ್ಥಗಳ ಭೇದಕ್ಕೆ ಕಾರಣವೆಂದಂಗೀಕರಿಸಿದರೂ ಯಾವುದೊಂದತಿಪ್ರಸಂಗವೂ ಇಲ್ಲ. ಎಂದಾಶಂಕಿಸಿದರೆ—

**ಮೂ ॥ ಸರ್ವಕ್ಷಣಿಕತ್ವಂ ವದತಾ ಬೌದ್ಧೇನ ಸೇಯಂ**
**ದಿಗಿತ್ಯಾದಿಪ್ರತ್ಯಭಿಜ್ಞಾಯಾಃ ಭ್ರಾಂತಿತ್ವಂ ನ ವಾಚ್ಯಂ ॥**
**ಪಂಚಸ್ಕಂಧೇಭ್ಯೋಽನ್ಯತ್ವಾತ್ ॥ ೪೧ ॥**

ಅ ॥ ಸರ್ವಕ್ಷಣಿಕತ್ವಂ=ಎಲ್ಲಾ ಪದಾರ್ಥಗಳಿಗೂ ಕ್ಷಣಿಕತ್ವವನ್ನು, ವದತಾ=ಹೇಳುವ, ಬೌದ್ಧೇನ=ಬೌದ್ಧನಿಂದ, ಸೇಯಂ ದಿಕ್=ಆ ಇದು, ಅವ್ಯಾಕೃತಾಕಾಶವು, ಇತ್ಯಾದಿ ಪ್ರತ್ಯಭಿಜ್ಞಾಯಾಃ=ಇದೇ ಮೊದಲಾದ (ಆದಿಪದದಿಂದ 'ಸೋಽಯಂ ವಿನಾಶಃ' ಆ ಇದು ವಿನಾಶವು) ಪ್ರತ್ಯಭಿಜ್ಞೆಗಳಿಗೆ, ಭ್ರಾಂತಿತ್ವಂ=ಭ್ರಮತ್ವವು, ನ ವಾಚ್ಯಂ=ಹೇಳಲ್ಪಡಬಾರದು, ಪಂಚಸ್ಕಂಧೇಭ್ಯಃ=ರೂಪ ಮೊದಲಾದ ೫ ಸ್ಕಂಧಗಳಿಂದ, ಅನ್ಯತ್ವಾತ್=ಬೇರೆಯಾದುದರಿಂದ,

ಕಾ ॥ (1) ರೂಪಸ್ಕಂಧ, ಸಂಜ್ಞಾಸ್ಕಂಧ, ವೇದನಾಸ್ಕಂಧ, ಸಂಸ್ಕಾರಸ್ಕಂಧ, ವಿಜ್ಞಾನಸ್ಕಂಧ ಎಂಬೀ ಪಂಚ ಸ್ಕಂಧಗಳಲ್ಲಿ (ಸಮುದಾಯಗಳಲ್ಲಿ) ಅರ್ಥಕ್ರಿಯಾಕಾರಿತ್ವರೂಪವಾದ ಸತ್ವವಿದ್ದುದರಿಂದ ಅವುಗಳೇ ಕ್ಷಣಿಕಗಳು. ಅವುಗಳಲ್ಲಿ (೧) ರೂಪ, ರಸ, ಗಂಧ, ಸ್ಪರ್ಶ, ಶಬ್ದಾತ್ಮಕಗಳಾದ ಪರಮಾಣುಗಳು ರೂಪಸ್ಕಂಧವು. (೨) ಸವಿಕಲ್ಪಕ ಜ್ಞಾನವು ಸಂಜ್ಞಾಸ್ಕಂಧವು. (೩) ಸುಖದುಃಖಗಳು ವೇದನಾಸ್ಕಂಧವು. (೪) ಸಮನಂತರ ಪ್ರತ್ಯಯವು (ಸಜಾತೀಯ ಪೂರ್ವವಿಜ್ಞಾನವು) ಸಂಸ್ಕಾರಸ್ಕಂಧವು. (೫) ನಿರ್ವಿಕಲ್ಪಕ ಜ್ಞಾನವು ವಿಜ್ಞಾನಸ್ಕಂಧವು. (2) 'ಆಕಾಶೋ ದ್ವೌ ವಿನಾಶೌ ಚ ನಿತ್ಯಂ ತ್ರಯಮಸಂಸ್ಕೃತಂ ॥' ಆಕಾಶವು, ಪ್ರತಿಸಂಖ್ಯಾನಿರೋಧ, ಅಪ್ರತಿಸಂಖ್ಯಾನಿರೋಧ ಎಂಬೀ ಎರಡು ವಿನಾಶಗಳೂ ಪಂಚಸ್ಕಂಧಗಳಿಂದ ಬೇರೆಯಾದ ಪ್ರಯುಕ್ತ ನಿತ್ಯಗಳು, ಎಂದು ಬೌದ್ಧರ ಸಿದ್ಧಾಂತವು. (೧) 'ಬುದ್ಧಿಪೂರ್ವವಿನಾಶೋ ಹಿ ಪ್ರತಿಸಂಖ್ಯಾನಿರೋಧಗೀಃ । ಅಬುದ್ಧಿಪೂರ್ವಕಸ್ತೇಷಾಂ ನಿರೋಧೋಽಪ್ರತಿಸಂಖ್ಯಯಾ ॥' ೧ ಬುದ್ಧಿಪೂರ್ವಕವಾಗಿ ಮುದ್ಗರಾದಿಗಳಿಂದ ಘಟಾದಿನಾಶಕ್ಕೆ, ಪ್ರತಿಸಂಖ್ಯಾನಿರೋಧವೆಂದು ಹೆಸರು. ಇದೇ ಸಸಂತಾನ ನಾಶವೆಂದೂ ಹೇಳಲ್ಪಡುತ್ತದೆ. (೨) ಪಂಚಸ್ಕಂಧಗಳಿಗೇನೇ ಅಬುದ್ಧಿಪೂರ್ವಕವಾಗಿ (ಮುದ್ಗರಪ್ರಹಾರಾದಿಗಳು ಹೊರತು) ಸಂತಾನವಿಲ್ಲದೆ ಪ್ರತಿಕ್ಷಣದಲ್ಲಿಯೂ ಹುಟ್ಟತಕ್ಕ ವಿನಾಶವು ಅಪ್ರತಿಸಂಖ್ಯಾನಿರೋಧವು. ಇದೇ ನಿಸ್ಸಂತಾನನಾಶವೆಂದೂ ಹೇಳಲ್ಪಡು

ತ್ತದೆ. (3) ಪಂಚಸ್ಕಂಧಗಳಿಂದ ಬೇರೆಯಾದಪ್ರಯುಕ್ತ ಆಕಾಶ ಮತ್ತು ಈ ಎರಡು ವಿನಾಶಗಳೂ ನಿತ್ಯಗಳೇ ಆಗಿವೆ. ಆದುದರಿಂದ ತದ್ವಿಷಯಕವಾದ ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನು ಬೌದ್ಧನೂ ಹೇಳಕೂಡದು. (4) ಆಕಾಶಾದಿಗಳಿಗೆ ಶಬ್ದಾಶ್ರಯತ್ವ ಶಬ್ದಾಭಾವಾಶ್ರಯತ್ವಾದಿ ರೂಪವಾದ ವಿರುದ್ಧಧರ್ಮಾಧಿಕರಣತ್ವವು ಇದೆ. ಆದಕಾರಣ ಕೇವಲ ವಿರುದ್ಧಧರ್ಮಾಧಿಕರಣತ್ವವು ಭೇದಕ್ಕೆ ಕಾರಣವೆಂದಂಗೀಕರಿಸಿದರೆ ಆಕಾಶಾದಿಗಳಿಗೂ ಭೇದವು ಬರಬೇಕಾಗಿರುವುದರಿಂದ ಆಕಾಶಾದಿ ವಿಷಯಕವಾದ ಪ್ರತ್ಯಭಿಜ್ಞೆಗೂ ಭ್ರಾಂತಿತ್ವವು ಬರಬೇಕಾಗುವುದು. ಆದಪ್ರಯುಕ್ತ ಬೌದ್ಧನಿಗೆ ಅತಿಪ್ರಸಂಗವನ್ನು ಹೇಳಿದ್ದು ಯುಕ್ತವೇ ಸರಿ. (5) ಯದ್ಯಪಿ ಇಲ್ಲಿ ಸರ್ವಪದಾರ್ಥಗಳಿಗೆ ಕ್ಷಣಿಕತ್ವವನ್ನು ನಿರಾಕರಿಸಿಯೂ ಉತ್ತರವನ್ನು ಹೇಳಬಹುದಿತ್ತು. ಆದಾಗ್ಯೂ ಅತಿಪ್ರಸಂಗವನ್ನು ಹೇಳುವ ಸಂದರ್ಭದಲ್ಲಿ ಅದನ್ನೇ ಹೇಳುವುದು ಉಚಿತವಾದ ಕಾರಣ ಹಾಗೆ ಉತ್ತರವನ್ನು ಹೇಳಲಿಲ್ಲ, ಆದರೆ ಅನುವ್ಯಾಖ್ಯಾನಾದಿಗಳಲ್ಲಿ ಸರ್ವಕ್ಷಣಿಕತ್ವವನ್ನು ನಿರಾಕರಿಸಿರುತ್ತಾರೆ ॥ ೪೧ ॥

ಇದೇ ವಿಷಯದಲ್ಲಿ ಬೌದ್ಧರಲ್ಲಿ ಏಕದೇಶಿಗಳಾದ ವಿಜ್ಞಾನವಾದಿ ಶೂನ್ಯವಾದಿಗಳು ಹೀಗೆ ಹೇಳುವರು. ಸೌತ್ರಾಂತಿಕರಿಗೂ ವೈಭಾಷಿಕರಿಗೂ ನೀವು ಹೇಳಿದ ಅತಿಪ್ರಸಂಗವು ಆಗಬಹುದು. ಅವರು ದಿಕ್ಕಿಗೆ (ಅವ್ಯಾಕೃತಾಕಾಶಕ್ಕೆ) ನಿತ್ಯತ್ವವನ್ನಂಗೀಕರಿಸಿರುವರು. ಆದರೆ ಅದು ನಮಗೆ ತಟ್ಟಲಾರದು. ವಿಜ್ಞಾನಾತಿರಿಕ್ತವಾದುದು ಅಥವಾ ಶೂನ್ಯಾತಿರಿಕ್ತವಾದುದು ಎಲ್ಲವೂ ಭ್ರಾಂತಿಕಲ್ಪಿತಗಳೆಂದು ಅಂಗೀಕರಿಸಿರುವೆವು. ಅವ್ಯಾಕೃತಾಕಾಶವೇ ಭ್ರಾಂತಿಪರಿಕಲ್ಪಿತವಾದುದರಿಂದ ಅದಕ್ಕೆ ನಿತ್ಯತ್ವವು ಹೇಗೆ ಇದ್ದೀತು? ಆ ಪ್ರತ್ಯಭಿಜ್ಞೆಗೂ ಅಭ್ರಾಂತಿತ್ವವು ಹೇಗೆ ಉಪಪನ್ನವಾಗಬಹುದು? ಆದ ಕಾರಣ ನಮಗೆ ಅಂತಹ ಅತಿಪ್ರಸಂಗವೂ ಕೂಡಲಾರದೆಂದಾಶಂಕಿಸಿದರೆ —

**ಮೂ ॥ ನ ಚ ದಿಶ ಏವ ಭ್ರಾಂತಿಕಲ್ಪಿತಾಃ ॥ ೪೨ ॥**

ಅ ॥ ದಿಶ ಏವ=ದಿಕ್ಕುಗಳೇ, ಭ್ರಾಂತಿಕಲ್ಪಿತಾಃ = ಭ್ರಮೆಯಿಂದ ಪರಿಕಲ್ಪಿತಗಳಾದವುಗಳು, ನ ಚ=ಅಲ್ಲ.

ತಾ ॥ (1) 'ದಿಕ್' ಎಂದು ಏಕವಚನ ಪ್ರಯೋಗಿಸಿದ್ದರೂ ಸಾಕಾಗುತ್ತಿತ್ತು. ಆದರೂ ದಿಕ್ಕುಗಳಿಗೆ ಬಹುತ್ವವು ಸ್ವಾಭಾವಿಕವೇ ಎಂದು ತಿಳಿಸುವುದಕ್ಕಾಗಿ 'ದಿಶಃ' ಎಂದು ಬಹುವಚನವು (2) ಒಂದೇ ದಿಕ್ಕು ಉಪಚಾರದಿಂದ '೧೦ ದಿಕ್ಕು' ಎಂಬುವ ವ್ಯವಹಾರವನ್ನು ಹೊಂದುತ್ತದೆ, ಎಂದು ಹೇಳುವ ವೈಶೇಷಿಕಾದಿಗಳು ನಿರಸ್ತರಾದರು. (೧೦) 'ಹತ್ತು ದಿಕ್ಕುಗಳು' ಎನ್ನುವುದು ಶ್ರುತಿ ಸ್ಮೃತಿ ಲೋಕವ್ಯಹಾರಗಳಲ್ಲಿ ಸಿದ್ಧವಾಗಿರುವುದರಿಂದ ಕಾರಣವಿಲ್ಲದೆ ಔಪಚಾರಿಕವೆನ್ನುವುದು ಅಸಂಗತವು ॥ ೪೨ ॥

ದಿಕ್ಕುಗಳು ಭ್ರಾಂತಿಕಲ್ಪಿತಗಳೆಂದು ಏತಕ್ಕೆ ಕೂಡುವುದಿಲ್ಲವೆಂದರೆ (೧) ದಿಕ್ಕುಗಳು ಭ್ರಾಂತಿಕಲ್ಪಿತಗಳೆಂದು ಯಾವುದಾದರೊಂದು ಪ್ರಮಾಣದಿಂದ ಹೇಳುತ್ತೀರೋ? (೨) ಪ್ರಮಾಣವಿಲ್ಲದೇನೇ ಹೇಳುತ್ತೀರೋ? ಇವುಗಳಲ್ಲಿ ೧ನೇದ್ದು ಅಯುಕ್ತವು. ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳುವ ಅನುಮಾನಗಳನ್ನು ಬೇರೆ ಕಡೆಯಲ್ಲಿಯೇ ನಿರಾಕರಿಸಿಯದೆ. ಬೇರೆ ಅಸಾಧಾರಣವಾದ ಪ್ರಮಾಣವು ತೋರುವುದಿಲ್ಲ. ೨ನೇದ್ದೂ ಅತಿಪ್ರಸಂಗ ಬರುವುದರಿಂದ ಅಯುಕ್ತವೆನ್ನುತ್ತಾರೆ.

**ಮೂ ॥ ವಿಜ್ಞಾನಶೂನ್ಯಯೋರಪಿ ಸಾಮ್ಯಾತ್ ॥ ೪೩ ॥**

ಅ ॥ ವಿಜ್ಞಾನಶೂನ್ಯಯೋರಪಿ=ವಿಜ್ಞಾನಶೂನ್ಯಗಳ ವಿಷಯದಲ್ಲಿಯೂ ಸಾಮ್ಯಾತ್=ಸಾಮ್ಯವಿರುವುದರಿಂದ.

ತಾ ॥ ಪ್ರಮಾಣವಿಲ್ಲದೇನೇ ಭ್ರಾಂತಿಪರಿಕಲ್ಪಿತಗಳೆಂದು ಕಲ್ಪಿಸುವುದಾದರೆ ಸತ್ಯಗಳೆಂದು ಒಡಂಬಟ್ಟ ವಿಜ್ಞಾನಶೂನ್ಯಗಳ ವಿಷಯದಲ್ಲಿಯೂ ಹಾಗೆ ಹೇಳಲು ಶಕ್ಯವಾದುದರಿಂದ ವಿಜ್ಞಾನಶೂನ್ಯಗಳೂ ಭ್ರಾಂತಿಪರಿಕಲ್ಪಿತಗಳಾಗಬೇಕಾಗುವುವು ॥ ೪೩ ॥

ಯಾವುದರ ಸ್ವರೂಪವು ಬೇರೆ ಉಪಾಧಿಯನ್ನು ನಿಮಿತ್ತೀಕರಿಸಿಕೊಂಡು ತೋರುವುದೋ ಅದು ಮಿಥ್ಯೆಯು. ಅಂಗುಲಿಯಿಂದ ಚುಚ್ಚಲ್ಪಟ್ಟ ನಯನವೆಂಬ ಉಪಾಧಿಯನ್ನು ನಿಮಿತ್ತೀಕರಿಸಿಕೊಂಡು ತೋರುವ ಮತ್ತೊಬ್ಬ ಚಂದ್ರನಂತೆ. ಸೂರ್ಯನ ಉದಯಾದಿಗಳಿಂದಲೇ ದಿಕ್ಕುಗಳನ್ನು ಕಲ್ಪಿಸುವುದರಿಂದ ದಿಕ್ಕುಗಳ ಸ್ವರೂಪವು ಮತ್ತೊಂದು ಉಪಾಧಿಯನ್ನು ನಿಮಿತ್ತೀಕರಿಸಿಯೇ ತೋರುವುದು. ಇದರಿಂದ 'ದಿಶಃ=ದಿಕ್ಕುಗಳು, ಭ್ರಾಂತಿಕಲ್ಪಿತಾಃ=ಭ್ರಮೆಯಿಂದ ನಿರ್ಮಿಸಲ್ಪಟ್ಟವುಗಳು, ಪರೋಪಾಧಿನಿಬಂಧನಸ್ವರೂಪವತ್ವಾತ್=ಮತ್ತೊಂದು ಉಪಾಧಿಯೇ ಕಾರಣವಾಗಿವುಳ್ಳ ಸ್ವರೂಪವಿರುವುದರಿಂದ, ಅಂಗುಲ್ಯವಷ್ಟಬ್ಧ ನಯನೋಪಾಧಿನಿಮಿತ್ತಾಪರ ಚಂದ್ರ ಇವ= ಅಂಗುಲಿಯಿಂದ ಚುಚ್ಚಲ್ಪಟ್ಟ ನಯನವೆಂಬ ಉಪಾಧಿಯನ್ನು ನಿಮಿತ್ತೀಕರಿಸಿಕೊಂಡುತೋರುವ ಮತ್ತೊಬ್ಬ ಚಂದ್ರನಂತೆ' ಎಂಬೀ ಅನುಮಾನವು ಉಕ್ತವಾಯಿತು. ಆದಕಾರಣ ದಿಕ್ಕುಗಳು ಭ್ರಾಂತಿಕಲ್ಪಿತಗಳೆಂಬುವ ವಿಷಯದಲ್ಲಿ ಪ್ರಮಾಣವಿಲ್ಲವೆನ್ನುವುದು ಹೇಗೆ ಸಂಗತವಾಗುವುದು? ಎಂದಾಶಂಕಿಸಿದರೆ—

**ಮೂ ॥ ನ ಚಾದಿತ್ಯೋದಯಾದಿನೈವ ದಿಕ್ಕಲ್ಪನಾ ॥ ೪೪ ॥**

ಅ ॥ ಆದಿತ್ಯೋದಯಾದಿನೈವ = ಸೂರ್ಯನ ಉದಯ ಅಸ್ತಮಯಾದಿಗಳಿಂದಲೇ, ದಿಕ್ಕಲ್ಪನಾ=ಪ್ರಾಚ್ಯಾದಿ ದಿಕ್ಕುಗಳ ಕಲ್ಪನೆಯು, ನ ಚ=ಕೂಡುವುದಿಲ್ಲ ॥ ೪೪ ॥

ಏಕೆ ಕೂಡುವುದಿಲ್ಲವೆಂದರೆ (೧) ದಿಕ್ಕಿನ ಸಾಮಾನ್ಯಸ್ವರೂಪವನ್ನೇ ಸೂರ್ಯೋದಯಾದಿಗಳಿಂದ ಕಲ್ಪಿಸುವುದೋ? ಅಥವಾ (೨) ಅದರ ವಿಶೇಷಸ್ವರೂಪವನ್ನೋ?(೧) ಸಾಮಾನ್ಯಸ್ವರೂಪವನ್ನು ಎಂದು ಹೇಳಕೂಡದು.

**ಮೂ ॥ ಅಂಧಕಾರೇಽಪಿ ದಿಙ್ಮಾತ್ರಪ್ರತೀತೇಃ ॥ ೪೫ ॥**

ಅ ॥ ಅಂಧಕಾರೇಽಪಿ=ಕಗ್ಗತ್ತಲೆಯಲ್ಲಿಯೂ (ಪರರಿಗೆ ಅಭಿಮತವಾದ ಉಪಾಧಿಯಿಲ್ಲದಿರುವಾಗಲೂ) ದಿಙ್ಮಾತ್ರಪ್ರತೀತೇಃ=ಕೇವಲ ದಿಕ್ಕು ಪ್ರತೀತವಾಗುವುದರಿಂದ,

ತಾ ॥ (1) ದಿಕ್ಸ್ವರೂಪವೇ ಔಪಾಧಿಕವಾದರೆ ಉಪಾಧಿಯಿಲ್ಲದೆ ತೋರಲಾರದು ಕಣ್ಣಿಗೆ ಅಂಗುಲಿಯಿಂದ ಚುಚ್ಚೋಣದರ ಹೊರತು ಮತ್ತೊಬ್ಬ ಚಂದ್ರನು ತೋರುವುದಿಲ್ಲ. ಪ್ರಕೃತ ಉಪಾಧಿಯೆಂದಭಿಮತಗಳಾದ ಆದಿತ್ಯೋದಯಾದಿಗಳಿಲ್ಲದಿದ್ದರೂ ದಿಕ್ಸ್ವರೂಪವು ಜ್ಞಾತವೇ ಆಗುವುದು. ಆದಕಾರಣ ಸೂರ್ಯೋದಯವು ಹೇಗೆ ಉಪಾಧಿಯಾಗುವುದು? ಅವಕಾಶವೇ ದಿಕ್ಕು ಎನ್ನಿಸುತ್ತದೆ. ಅದು ಪರಾಪೇಕ್ಷೆಯಿಲ್ಲದೇನೇ ಸಾಕ್ಷಿರೂಪ ಪ್ರಮಾಣದಿಂದ ಎಲ್ಲಾ ಅವಸ್ಥೆಗಳಲ್ಲಿಯೂ ಎಲ್ಲಾ ಪ್ರಾಣಿಗಳಿಗೂ ಸಿದ್ಧವು. ಇಲ್ಲವಾದರೆ ಕಗ್ಗತ್ತಲೆಯಲ್ಲಿ ಹಸ್ತಪ್ರಸಾರಣಾದಿಗಳನ್ನೂ ಹೇಗೆ ಮಾಡುವರು? (೨) ಎರಡನೇ ಕಲ್ಪದಲ್ಲಿಯೂ (೧)ದಿಗ್ವಿಶೇಷಸ್ವರೂಪವನ್ನು

ಮಾತ್ರ ಸೂರ್ಯೋದಯಾದಿಗಳಿಂದ ಕಲ್ಪಿಸುವುದೋ? ಅಥವಾ (೨) ವಿಶೇಷ ಸಂಬಂಧಿಯಾದ ಪ್ರಾಚೀತ್ವಾದಿಗಳನ್ನು ಕಲ್ಪಿಸುವುದೋ? ೧ನೇದ್ದಕ್ಕೆ ಇದೇ ಉತ್ತರವು.

**ಮೂ ॥ ಅಂಧಕಾರೇಽಪಿ ದಿಙ್ಮಾತ್ರಪ್ರತೀತೇಃ ॥**

ತಾ ॥ ಅವಕಾಶಭಾಗಗಳೇ ದಿಗ್ವಿಶೇಷಗಳು. ಅವುಗಳು ಸೂರ್ಯೋದಯಾದಿಗಳ ಅಪೇಕ್ಷೆಯಿಲ್ಲದೇನೇ ಸಾಕ್ಷಿಯಿಂದ ಪ್ರತೀತಗಳಾಗುವುವು. ಇಲ್ಲವಾದರೆ ಸೂರ್ಯೋದಯವಿಲ್ಲದಿದ್ದರೂ ಮುಹೂರ್ತಾಂತರದಿಂದ ಸಂಬದ್ಧವಾದ ಆಕಾಶಭಾಗವನ್ನು ಬಿಟ್ಟು ಬೇರೆ ಪ್ರದೇಶಗಳಲ್ಲಿ ಹಸ್ತಪ್ರಸಾರಣಾದಿಗಳನ್ನು ಹೇಗೆ ಮಾಡುವರು? ಭಾಗಗಳು ಔಪಾಧಿಕಗಳೂ ಅಲ್ಲ. ಸ್ವತಃ ಭಾಗವಿಲ್ಲದ್ದಕ್ಕೆ ಉಪಾಧಿಯಿಂದಲೂ ಸಂಬಂಧವು ಕೂಡಲಾರದು. (೨)ಪ್ರಾಚ್ಯಾದಿತ್ವವು ದಿಗ್ವಿಶೇಷ ಸ್ವರೂಪವಾದರೆ ಆವಾಗಲೂ ಇದೇ ಉತ್ತರವು.

**ಮೂ ॥ ಅಂಧಕಾರೇಽಪಿ ದಿಙ್ಮಾತ್ರಪ್ರತೀತೇಃ ॥**

ದಿಕ್ಕುಗಳ ವಿಶೇಷಸ್ವರೂಪವೂ ಕೂಡ ಆದಿತ್ಯೋದಯಾದಿಗಳನ್ನಪೇಕ್ಷಿಸದೆ ಸಾಕ್ಷಿಗೇನೇ ಪ್ರತೀತವಾಗುತ್ತದೆ. ಇಲ್ಲವಾದರೆ ಮುಹೂರ್ತಾಂತರದಿಂದ ಸಂಬದ್ಧವಾದ ಅವಕಾಶಭಾಗವನ್ನು ಬಿಟ್ಟು ಬೇರೆ ಪ್ರದೇಶಗಳಲ್ಲಿ ಹಸ್ತಪ್ರಸಾರಣಾದಿಗಳನ್ನು ಹೇಗೆ ಮಾಡುವರು? ಎಂದೇ ಉತ್ತರವು ॥ ೪೫ ॥

ಶಬ್ದಕ್ಕೂ ಅರ್ಥಕ್ಕೂ ಸಂಬಂಧವು ಸ್ವಾಭಾವಿಕವಾದುದರಿಂದ ಪ್ರಾಚ್ಯಾದಿಶಬ್ದವಾಚ್ಯತ್ವವೂ ಕಾಲ್ಪನಿಕವಲ್ಲ. ಹೀಗಾದರೆ ದಿಕ್ಕನ್ನು ತಿಳಿಯಬೇಕೆಂದಿಚ್ಛಿಸುವವರು ಸೂರ್ಯೋದಯಾದಿಗಳನ್ನು ಏಕೆ ನಿರೀಕ್ಷಿಸುತ್ತಾರೆ ಎಂದಾಶಂಕಿಸಿದರೆ —

**ಮೂ ॥ ಕಾದಾಚಿತ್ಕಭ್ರಾಂತಿರೇವಾದಿತ್ಯೋದಯಾದಿದರ್ಶನಾನ್ನಿವಾರ್ಯತೇ ॥ ೪೬ ॥**

ಅ ॥ ಕಾದಾಚಿತ್ಕಭ್ರಾಂತಿರೇವ = ಕೆಲವುವೇಳೆ ಹುಟ್ಟತಕ್ಕ ಭ್ರಮೆಯೇ, ಆದಿತ್ಯೋದಯಾದಿದರ್ಶನಾತ್ = ಸೂರ್ಯೋದಯಾದಿಗಳನ್ನ ನೋಡುವುದರಿಂದ, ನಿವಾರ್ಯತೇ = ನಾಶ ಮಾಡಲ್ಪಡುತ್ತದೆ.

ತಾ ॥ (1) ದಿಕ್ಸ್ವರೂಪ ದಿಗ್ವಿಶೇಷಗಳು ಸಿದ್ಧಗಳಾಗಿದ್ದರೂ ಮೂಡುದಿಕ್ಕಿನಲ್ಲಿ ಪಡುದಿಕ್ಕು ಎಂಬುವ ಭ್ರಾಂತಿಯನ್ನ ಹೋಗಲಾಡಿಸುವುದಕ್ಕೋಸ್ಕರವೇ ಸೂರ್ಯೋದಯವನ್ನು ನಿರೀಕ್ಷಿಸುವುದು. ಭ್ರಾಂತಿಯೂ ಸರ್ವದಾ ಇಲ್ಲ. ಆದಕಾರಣ ಸೂರ್ಯೋದಯದ ನಿರೀಕ್ಷಣೆಯೂ ಸರ್ವದಾ ಇಲ್ಲ, ಎಂದು ಸೂಚಿಸುವುದಕ್ಕಾಗಿ 'ಕಾದಾಚಿತ್ಕಭ್ರಾಂತಿಃ' ಎಂದು ಹೇಳಿರುವರು. ಆದ್ದರಿಂದ ದಿಕ್ಕಿನ ಜ್ಞಾನ ಬರಲಿಕ್ಕೆ ಸೂರ್ಯೋದಯಾದಿಗಳ ಅಪೇಕ್ಷೆಯಿಲ್ಲವೆನ್ನುವುದು ಸ್ಪಷ್ಟವಾಯಿತು. (2) ದಿಕ್ಕುಗಳು ವಾಸ್ತವಿಕಗಳಾದರೆ ಸ್ತಂಭಾದಿಗಳಂತೆಯೇ ವ್ಯವಸ್ಥಿತಗಳಾಗಿ ಏಕೆ ಕಾಣಲಾರವು? ಸ್ತಂಭವು ಸರ್ವರಿಗೂ ಸ್ತಂಭವೇ, ದಿಕ್ಕುಗಳು ಹೀಗೆ ಅಲ್ಲ. ನಮಗೆ ಪೂರ್ವಆದದ್ದು ಇತರರಿಗೆ ಪಶ್ಚಿಮ ದಿಕ್ಕಾಗುವುದು. ಎಂದು ಹೇಳಕೂಡದು. (೧) ದಿಕ್ಕಿನ ಸ್ವರೂಪವನ್ನಧಿಕರಿಸಿ ಹೀಗೆ ಹೇಳುವುದೋ, (೨) ಅಥವಾ ಪ್ರಾಚ್ಯಾದಿಶಬ್ದವಾಚ್ಯತ್ವವನ್ನಧಿಕರಿಸಿ ಹೇಳುವುದೋ, ೧ನೇದ್ದು ಕೂಡಲಾರದು. ಸ್ವರೂಪವು ವ್ಯವಸ್ಥಿತವೇ ಆಗಿರುತ್ತದೆ. ೨ನೇದ್ದೂ ಕೂಡಲಾರದು. ಸಂಬಂಧಿಶಬ್ದವಾಗಿದೆ. ಅಂತೂ ಪಿತೃಪುತ್ರಾದಿ ಶಬ್ದಗಳು ಅವ್ಯವಸ್ಥಿತಗಳು.

ಇಷ್ಟರಿಂದ ಪಿತ್ರಾದಿಸ್ವರೂಪವಾಗಲೀ ಪಿತ್ರಾದಿಶಬ್ದವಾಚ್ಯತ್ವವಾಗಲೀ ಅವಾಸ್ತವವಾಗಲಾರದು ॥ ೪೬ ॥

(1) ದಿಶೋ ಮಿಥ್ಯಾಭೂತಾಃ=ದಿಕ್ಕುಗಳು ಮಿಥ್ಯಾಭೂತಗಳು, ಭ್ರಾಂತಿವಿಷಯತ್ವಾತ್= ಭ್ರಮೆಗೆ ವಿಷಯಗಳಾದುದರಿಂದ, ಶುಕ್ತಿರಜತಾದಿವತ್=ಶುಕ್ತಿರಜತಾದಿಗಳಂತೆ, ಎಂಬೀ ಅನುಮಾನವು ದಿಕ್ಕುಗಳಿಗೆ ಮಿಥ್ಯಾತ್ವವಿಷಯದಲ್ಲಿ ಪ್ರಮಾಣವು ಎಂದು ಶಂಕಿಸುವರು. ದಿಕ್ಕುಗಳಿಗೆ ಭ್ರಾಂತಿವಿಷಯತ್ವವನ್ನಂಗೀಕರಿಸಿದರೆ ಶುಕ್ತಿರಜತಾದಿಗಳಂತೆ, ಮಿಥ್ಯಾತ್ವವು ಸಿದ್ಧವೇ: ಸರಿ. ಎಂದರೆ—(೧) ಭ್ರಾಂತಿವಿಷಯತ್ವವು ಆರೋಪ್ಯವಾಗಿ ಮಿಥ್ಯಾತ್ವಕ್ಕೆ ಕಾರಣವೋ. (೨) ಅಧಿಷ್ಠಾನವಾಗಿಯೋ, (೩) ಅಥವಾ ಆರೋಪ್ಯಾಧಿಷ್ಠಾನಸಾಧಾರಣವಾದ ಭ್ರಾಂತಿವಿಷಯತ್ವವೋ, ೧ನೇ ಕಲ್ಪದಲ್ಲಿ ಸಿದ್ಧಸಾಧನವು. ಆರೋಪ್ಯವಾದ ದಿಕ್ಕಿಗೆ ಮಿಥ್ಯಾತ್ವವನ್ನೇ ಅಂಗೀಕರಿಸಿರುವೆವು. ಆರೋಪ್ಯವಾದ ಬೆಳ್ಳಿಗೆ ಮಿಥ್ಯಾತ್ವವಿದ್ದರೂ ಪ್ರಧಾನಭೂತವಾದ, ಅಂಗಡಿಯಲ್ಲಿದ್ದ ಬೆಳ್ಳಿಗೆ ಸತ್ಯತ್ವವಿದ್ದಂತೆಯೇ ಆರೋಪ್ಯವಾದ ದಿಕ್ಸ್ವರೂಪಕ್ಕೆ ಮಿಥ್ಯಾತ್ವವಿದ್ದರೂ ಪ್ರಧಾನಭೂತವಾದ ದಿಕ್ಸ್ವರೂಪಕ್ಕೆ ಸತ್ಯತ್ವವೇ. ೨ನೇ ೩ನೇ ಕಲ್ಪಗಳನ್ನು ನಿರಾಕರಿಸುತ್ತಾರೆ.

**ಮೂ ॥ ಸಾ ಚ ವಿಜ್ಞಾನಶೂನ್ಯಯೋರಪಿ ಭವತೀತಿ ತೇಷಾಂ ಮತಂ ॥ ವಾದಿವಿಪ್ರತಿಪತ್ತೇಃ ॥ ೪೭ ॥**

ಅ ॥ ಸಾ ಚ=ಆ ಭ್ರಾಂತಿಯಾದರೂ, ವಿಜ್ಞಾನಶೂನ್ಯಯೋರಪಿ = ಸತ್ಯಗಳೆಂದು ಒಡಂಬಟ್ಟ ಅಧಿಷ್ಠಾನಗಳಾದ ವಿಜ್ಞಾನಶೂನ್ಯಗಳ ವಿಷಯದಲ್ಲಿಯೂ, ಭವತಿ=ಆಗುತ್ತದೆ. ಇತಿ=ಈ ಪ್ರಕಾರ, ತೇಷಾಂ=ವಿಜ್ಞಾನವಾದಿಗಳಿಗೂ ಮತ್ತು ಶೂನ್ಯವಾದಿಗಳಿಗೂ, ಮತಂ= ಸಂಮತವು. ಹೇಗೆಂದರೆ, ವಾದಿವಿಪ್ರತಿಪತ್ತೇಃ=ವಾದಿಗಳಿಗೆ ವಿಜ್ಞಾನವಿಷಯದಲ್ಲಿಯೂ ಶೂನ್ಯವಿಷಯದಲ್ಲಿಯೂ, ವಿವಾದವಿದ್ದುದರಿಂದ,

ತಾ ॥ (1) "ಜ್ಞಾನಮೇವೈಕಮಖಿಲಜ್ಞೇಯಾಕಾರಂ ಪ್ರಭಾಸತೇ । ತತ್ರ ಸಂತತಿಭೇದಶ್ಚ ಸ್ವಭೇದೋ ಭೇದ ಏವ ಚ । ಕಲ್ಪಿತಾಃ ಪ್ರತಿಭಾಸಂತೇ ॥ ಶೂನ್ಯಂ ಮನೋವಾಚಾಮಗೋಚರಂ" । ಇತ್ಯಾದಿಗಳಿಂದ ವಿಜ್ಞಾನವಾದಿ ಶೂನ್ಯವಾದಿಗಳು ಹೇಳಿದ ವಿಜ್ಞಾನವಾಗಲೀ ಶೂನ್ಯವಾಗಲೀ ತತ್ವವಲ್ಲವೆಂದು ವೈಶೇಷಿಕಾದಿಗಳು ಅಂಗೀಕರಿಸಿರುವರು. ಅವರ ಆ ವಿಪ್ರತಿಪತ್ತಿಯು ಭ್ರಾಂತಿಯೆಂದು ಪರರೂ ಅವಶ್ಯವಾಗಿ ಅಂಗೀಕರಿಸಬೇಕು. ಅಂತೂ ವಿಜ್ಞಾನವಾಗಲೀ ಶೂನ್ಯವಾಗಲೀ ತತ್ವವಲ್ಲ, ಎಂಬೀ ಅಯಾಥಾರ್ಥ್ಯವೇ ಪ್ರಕಾರವಾಗಿವುಳ್ಳ ಭ್ರಮಾಧಿಷ್ಠಾನತ್ವವು ವಿಜ್ಞಾನ, ಶೂನ್ಯಗಳಲ್ಲಿಯೂ ಇದ್ದುದರಿಂದ ಅಧಿಷ್ಠಾನತ್ವೇನ ಭ್ರಾಂತಿವಿಷಯತ್ವವು ವ್ಯಭಿಚರಿತವು ॥ ೪೭ ॥

**ಮೂ ॥ ಅತೋ ದಿಶಃ ಸ್ಥಿರಾ ಏವೇತಿ ಸಿದ್ಧ್ಯತಿ ಶೂನ್ಯವದೇವ ॥ ೪೮ ॥**

ಅ ॥ ಅತಃ = ಬಾಧಕಪ್ರಮಾಣವಿಲ್ಲದಿರುವುದರಿಂದಲೂ, ಸಾಧಕವಾದ ಸಾಕ್ಷಿಯಿದ್ದ ಪ್ರಯುಕ್ತವೂ, (ವಿಜ್ಞಾನಶೂನ್ಯಗಳಂತೆಯೇ) ದಿಶಃ=ದಿಕ್ಕುಗಳು, (ಸತ್ಯಾ ಏವ=ಯಥಾರ್ಥಗಳೇ ಸರಿ.) ಅತಃ='ಸ ಏವಾಯಂ ಗಕಾರಃ' ಎಂಬೀ ಪ್ರತ್ಯಭಿಜ್ಞೆಯು ಇದ್ದುದರಿಂದ, ವರ್ಣಾಃ= ವರ್ಣಗಳು, ಶೂನ್ಯವದೇವ = ಶೂನ್ಯತತ್ವದಂತೆಯೇ, ಸ್ಥಿರಾ ಏವ=ನಿತ್ಯಗಳೇ, ಇತಿ=ಹೀಗೆ, ಸಿದ್ಧ್ಯತಿ=ಸಿದ್ಧವಾಗುವುದು.

ತಾ ॥ ಕೆಲವರು ವಿಜ್ಞಾನವಾದಿಗಳು ವಿಜ್ಞಾನಕ್ಕೆ ಸ್ಥಿರತ್ವವನ್ನು ಅಂಗಿಕರಿಸಲಿಲ್ಲ. ಆದ ಪ್ರಯುಕ್ತ 'ವಿಜ್ಞಾನಶೂನ್ಯವತ್' ಎಂದು ಹೇಳದೆ 'ಶೂನ್ಯವದೇವ' ಎಂದು ಹೇಳಿರುವರು. ಇದರಿಂದ ಪ್ರಮಾಣವಿಲ್ಲದೇನೇ ದಿಕ್ಕುಗಳಿಗೆ ಭ್ರಾಂತಿಕಲ್ಪಿತತ್ವವನ್ನು ಹೇಳುವುದಾದರೆ ಸತ್ಯ ಗಳೆಂದಂಗೀಕರಿಸಿದ ವಿಜ್ಞಾನಶೂನ್ಯಗಳಿಗೂ ಭ್ರಾಂತಿಕಲ್ಪಿತತ್ವವು ಬರಬೇಕಾಗುವುದು. ಎಂಬೀ ಹಿಂದೆ ಹೇಳಿದ ಅತಿಪ್ರಸಂಗಕ್ಕೆ ವಿಜ್ಞಾನಶೂನ್ಯಗಳು ಕಲ್ಪಿತಗಳೆನ್ನುವುದು ನಿಮಗೆ ಸಮ್ಮತವಲ್ಲ ದಿರುವಕಾರಣ ದಿಕ್ಕುಗಳೂ ಭ್ರಾಂತಿಪರಿಕಲ್ಪಿತಗಳಲ್ಲ, ಎಂದು ವಿಪರ್ಯಯ ಪರ್ಯವಸಾನವು ಹೇಳಲ್ಪಟ್ಟಿತು ॥ ೪೮ ॥

ದಿಕ್ಕುಗಳಿಗೆ ಸ್ಥೈರ್ಯವಿರಲಿ, ಪ್ರಕೃತಕ್ಕೆ ಏನಾಯಿತೆಂದಾಶಂಕಿಸಿದರೆ —

**ಮೂ ॥ ಅತಸ್ತದ್ವದ್ವೇದಸ್ಯಾಪಿ ಸ್ಥೈರ್ಯಂ ಸಿದ್ಧಂ। ತದೇವೇದಂ ವಾಕ್ಯಮಿತಿ ಪ್ರತ್ಯಭಿಜ್ಞಾನಾತ್ ॥ ೪೯ ॥**

ಅ ॥ ಅತಃ=ಆದಪ್ರಯುಕ್ತ, ತದೇವೇದಂ ವಾಕ್ಯಂ=ಅದೇ ಇದು ವಾಕ್ಯವು (ವರ್ಣ ಗಳು). ಇತಿ=ಹೀಗೆ, ಪ್ರತ್ಯಭಿಜ್ಞಾನಾತ್=ಪ್ರತ್ಯಭಿಜ್ಞೆ ಇದ್ದುದರಿಂದ, ತದ್ವತ್=ದಿಕ್ಕುಗಳಂತೆ, ವೇದಸ್ಯಾಪಿ = ವೇದಕ್ಕೂ (ವರ್ಣಗಳಿಗೂ ಕೂಡ) ಸ್ಥೈರ್ಯಂ = ಸ್ಥಿರತ್ವವು, ಸಿದ್ಧಂ= ಸಿದವಾಯಿತು.

ತಾ ॥ (1)ಪದಾತಿರಿಕ್ತವಾದ ವಾಕ್ಯಸ್ಫೋಟವನ್ನು ನಿರಾಕರಿಸುವುದಕ್ಕೋಸ್ಕರ'ವೇದಶಬ್ದ' ವನ್ನೂ ವಾಕ್ಯಶಬ್ದವನ್ನೂ ಗ್ರಹಣಮಾಡಿರುವರು. (2) ಅಥವಾ ವರ್ಣಗಳಿಗೂ ವೇದಕ್ಕೂ ಸ್ಥಿರತ್ವವು ಸಿದ್ಧಿಸುವುದಕ್ಕಾಗಿ ವರ್ಣಗಳಿಗೆ ಸ್ಥಿರತ್ವವನ್ನು ಹೇಳಿರುವುದು. ವೇದಾಪೌರುಷೇಯ ತ್ವಕ್ಕೆ ಬಾಧಕವಾಗಿ ವರ್ಣಗಳಿಗೆ ಉತ್ಪತ್ತಿವಿನಾಶಗಳನ್ನು ಪರರು ಹೇಳಿರುವರು. ಅದನ್ನು ಪರಿಹರಿಸಿದುದರಿಂದ ನಿರಾತಂಕವಾಗಿ ವೇದಕ್ಕೆ ಸ್ಥಿರತ್ವವೂ ಅಪೌರುಷೇಯತ್ವವೂ ಸಿದ್ಧಿಸುವುದು. (3) ಅಪೌರುಷೇಯತ್ವವನ್ನಂಗೀಕರಿಸಿದರೆ ಬಾಧಕವಿಲ್ಲದಿರುವುದರಿಂದಲೂ 'ವೇದಕರ್ತುರಪ್ರ ಸಿದ್ಧೇಃ' ಎಂಬುವಲ್ಲಿ ಹೇಳಿದ 'ವೇದಃ ಅಪೌರುಷೇಯಃ ಅಪ್ರಮಿತಕರ್ತೃಕತ್ವಾತ್' ಎಂಬೀ ಅನುಮಾನದಿಂದಲೂ ಇವುಗಳಿಂದ ಮಾತ್ರ ಅಪೌರುಷೇಯತ್ವವು ಸಿದ್ಧಿಸುವುದಿಲ್ಲ. ಮತ್ತು 'ತದೇವೇದಂ ವಾಕ್ಯಂ' ಎಂಬೀ ಪ್ರತ್ಯಭಿಜ್ಞೆಯಿಂದಲೂ ವೇದಗಳಿಗೆ ಅಪೌರುಷೇಯತ್ವವು ಸಿದ್ಧಿ ಸುವುದು. (4) ಯಾವ ವರ್ಣಕ್ರಮಾದಿಗಳಿಂದೊಡಗೂಡಿದ ಯಾವ ವಾಕ್ಯವನ್ನು ನಾನು ಪೂರ್ವದಲ್ಲಿ ಕೇಳಿದೆನೋ, ಈಗ ಕೇಳತಕ್ಕ ಈ ವಾಕ್ಯವು ಆ ವರ್ಣಕ್ರಮಾದಿಗಳಿಂದೊಡಗೂಡಿರು ವುದು. ಎಂಬೀ ಪ್ರತ್ಯಭಿಜ್ಞೆಯಿರುವುದರಿಂದ ಈಗಿನ ಪುರುಷರಿಗೆ ಸ್ವಾತಂತ್ರ್ಯವಿಲ್ಲವೆಂದು (ಈಗಿನವರು ಮಾಡಿದ್ದಲ್ಲವೆಂದು) ಸ್ಪಷ್ಟವಾಗುತ್ತದೆ. ಹೀಗೆಯೇ ಪೂರ್ವಕಾಲದಲ್ಲಿಯೂ ತತ್ಪೂರ್ವಕಾಲದಲ್ಲಿಯೂ ಪ್ರತ್ಯಭಿಜ್ಞೆ ಇತ್ತು. ಆದಕಾರಣ ಯಾವಾಗಲೂ ವ್ಯತ್ಯಾಸವಿಲ್ಲವೆಂದು ಸಿದ್ಧವಾಯಿತು ॥ ೪೯ ॥

(1) ಮತ್ತು ಸಾಮಾನ್ಯಸಿದ್ಧಿ ಪರಿಶೇಷಾನುಮಾನಗಳಿಂದಲೂ ವೇದಕ್ಕೆ ಅಪೌರುಷೇಯ ತ್ವವು ಸಿದ್ಧಿಸುವುದು. ಹೇಗೆಂದರೆ — ಧರ್ಮ, ಅಧರ್ಮ, ಸ್ವರ್ಗ, ನರಕ ಇವು ಮೊದಲಾದವು ಗಳಿವೆ ಎನ್ನುವುದು ಎಲ್ಲಾ ವಾದಿಗಳಿಗೂ ನಿಶ್ಚಯವಿದೆ. ಯಾರು ಅವುಗಳನ್ನು ಅಂಗೀ ಕರಿಸುವುದಿಲ್ಲವೋ, ಅಂತಹರಿಗೆ 'ಯಸ್ಯ ತಾ ನಾಭಿಮತಾ ನಾಸೌ ಸಮಯಿಃ' ಇದು ಮೊದಲಾದ ರೀತಿಯಿಂದ ತಿಳಿಸಬೇಕು. ಎಲ್ಲಾ ವಾದಿಗಳಿಗೂ ನಿಶ್ಚಿತಗಳಾದ ಧರ್ಮ, ಅಧರ್ಮ ಮೊದಲಾದ

ಅತೀಂದ್ರಿಯ ಪದಾರ್ಥಗಳೂ ಘಟದಂತೆಯೇ ವಸ್ತುಗಳಾದುದರಿಂದ ಅಂದರೆ — ಸರ್ವರಿಗೂ ನಿಶ್ಚಿತಗಳಾದುದರಿಂದ, ಪ್ರಮಾಣದಿಂದ ಯುಕ್ತಗಳೇ ಆಗಿವೆ. ಪ್ರಮಾಣವಿಲ್ಲದಿರುವ ಅರ್ಥದಲ್ಲಿ ಸರ್ವರಿಗೆ ನಿಶ್ಚಯವು ಕೂಡಲಾರದು. ಅಂತಹ ಅರ್ಥದಲ್ಲಿಯೂ ನಿಶ್ಚಯವು ಕೂಡುವುದಾದರೆ ಶಶಶೃಂಗಾದಿಗಳು ಇವೆ; ಎಂಬೀ ನಿಶ್ಚಯವು ಸರ್ವರಿಗೂ ಬರಬೇಕಾಗುವುದು. (2) ಈ ಪ್ರಕಾರ ಸರ್ವವಾದಿಗಳಿಗೂ ಸಂಪ್ರತಿಪನ್ನಗಳಾದುದರಿಂದ ಧರ್ಮಾದಿಗಳನ್ನು ವಿಷಯೀಕರಿಸುವ ಪ್ರಮಾಣವು ಸಾಮಾನ್ಯತಃ ಸಿದ್ಧವಾಗಲು ಆ ಧರ್ಮಾದಿ ವಿಷಯಕ ಪ್ರಮಾಣವು ಪರಿಶೇಷ (ಪ್ರಸಕ್ತಗಳನ್ನು ನಿಷೇಧಿಸಲು ಅವಶಿಷ್ಟವಾದುದರಲ್ಲಿ ಬುದ್ಧಿಯು) ಪ್ರಮಾಣದಿಂದ ಅಪೌರುಷೇಯವೆಂದು ಸಾಧಿಸುವುದಕ್ಕೋಸ್ಕರ ಪ್ರಸಕ್ತಗಳನ್ನು ಪ್ರತಿಷೇಧಿಸುತ್ತಾರೆ.

ಮೂ ॥ ನ ಚಾನುಮಾನಾದೀನಾಮಾಗಮಂ ವಿನಾ ಪ್ರಾಮಾಣ್ಯಂ ಧರ್ಮಾದಿಷು ॥ ತದಗೋಚರತ್ವಾತ್ ॥ ೫೦ ॥

ಅ ॥ ಆಗಮಂ ವಿನಾ=ಅಪೌರುಷೇಯವಾಕ್ಯಹೊರತು ಇರುವ (ಅಂದರೆ ಆಗಮಾತಿರಿಕ್ತಗಳಾದ), ಅನುಮಾನಾದೀನಾಂ=ಅನುಮಾನ ಪ್ರತ್ಯಕ್ಷ ಪೌರುಷೇಯವಾಕ್ಯಗಳಿಗೆ, ಆಗಮಂ ವಿನಾ= ಅಪೌರುಷೇಯವಾಕ್ಯವನ್ನು ಹೊರತು, ಧರ್ಮಾದಿಷು = ಧರ್ಮಾಧರ್ಮಾದಿಗಳಲ್ಲಿ, ಪ್ರಾಮಾಣ್ಯಂ=ಪ್ರಮಾಣತ್ವವು, ನ ಚ=ಇಲ್ಲವೇ ಇಲ್ಲ. ತದಗೋಚರತ್ವಾತ್=ಧರ್ಮಾದಿಗಳು ಅನುಮಾನಾದಿಗಳಿಗೆ ವಿಷಯಗಳಾಗದಿರುವುದರಿಂದ.

ತಾ ॥ (1) ಧರ್ಮ, ಅಧರ್ಮ ಮೊದಲಾದುವುಗಳು ಪ್ರತ್ಯಕ್ಷ ಅನುಮಾನ ಮೊದಲಾದುವುಗಳಿಂದ ಸಿದ್ಧಗಳಾಗಲಾರವು. (2) ಪ್ರತ್ಯಕ್ಷವು ಧರ್ಮಾದಿಗಳನ್ನು ವಿಷಯೀಕರಿಸುತ್ತದೆ ಎನ್ನುವುದು ಅಸಂಭಾವಿತವೇ ಆಗಿದೆ. ಅಜ್ಞಾನವಿಪ್ರಲಂಭಗಳು ಪ್ರಾಪ್ತಗಳಾಗುವುದರಿಂದ ಪೌರುಷೇಯಾಗಮವೂ ಧರ್ಮಾದಿಗಳನ್ನು ಪ್ರತಿಪಾದಿಸುವುದಿಲ್ಲ. ಆದರೆ ಅವುಗಳಲ್ಲಿಯೂ ಪ್ರಾಮಾಣ್ಯವು ಇದ್ದುದರಿಂದ ಅವುಗಳೂ ಪ್ರಸಕ್ತಗಳಾಗಿವೆ. ಅನುಮಾನವು ಧರ್ಮಾದಿಗಳನ್ನು ವಿಷಯೀಕರಿಸುತ್ತದೆ ಎನ್ನುವುದಾದರೂ ಸಂಭಾವನಾ (ಪ್ರಬಲವಾದ ಒಂದು ಕೋಟಿಯುಳ್ಳ ಸಂಶಯ) ವಿಷಯವಾಗಿದೆ. ಆದಪ್ರಯುಕ್ತ ಅನುಮಾನವನ್ನು ಆದಿಯಾಗಿ ಸ್ವೀಕರಿಸಿರುವರು. (3) ಅನುಮಾನಾದಿಗಳಿಂದ ಧರ್ಮಾದಿಗಳು ಏಕೆ ವಿಷಯೀಕರಿಸಲ್ಪಡುವುದಿಲ್ಲ ಎಂದರೆ — ಬಾಹ್ಯಪ್ರತ್ಯಕ್ಷವು ಧರ್ಮಾದಿಗಳ ಜ್ಞಾನವನ್ನು ಹುಟ್ಟಿಸುವುದರಲ್ಲಿ ಸಮರ್ಥವಲ್ಲ. ಅದು ರೂಪ, ರಸ, ಗಂಧ ಸ್ಪರ್ಶವತ್ತಾದದ್ರವ್ಯಗಳನ್ನೂ, ತದಾಶ್ರಿತಗಳಾದ ಗುಣ, ಕರ್ಮ ಸಾಮಾನ್ಯ ಇವುಗಳನ್ನು ಮಾತ್ರ ವಿಷಯೀಕರಿಸುತ್ತದೆ. ಅಂತೂ ಧರ್ಮಾದಿಗಳಿಗೆ ರೂಪಾದಿಗಳಿಲ್ಲದಿರುವುದರಿಂದಲೂ ರೂಪಾದಿಮತ್ತಾದ ದ್ರವ್ಯಾಶ್ರಿತತ್ವವಿಲ್ಲದಿರುವುದರಿಂದಲೂ ಬಾಹ್ಯಪ್ರತ್ಯಕ್ಷವಿಷಯತ್ವವಿಲ್ಲವು. (4)ಧರ್ಮಾದಿಗಳು ಮನೋಜನ್ಯವಾದ ಅನುಭವಕ್ಕೂ ಗೋಚರವಾಗಲಾರವು. 'ನಾನು ಸುಖವನ್ನು ಅನುಭವಿಸುತ್ತೇನೆ' ಎನ್ನುವಂತೆ 'ಧರ್ಮವನ್ನು ಅನುಭವಿಸುತ್ತೇನೆ' ಎಂದು ಧರ್ಮಾದಿಗಳಲ್ಲಿ ಅನುಭವ ಅನುವ್ಯವಸಾಯಗಳಿರುವುದಿಲ್ಲ. ಪರಲೋಕದಲ್ಲಿ ಹುಟ್ಟುವ ಸುಖಾದಿಗಳು ವಿಪ್ರಕೃಷ್ಟಗಳಾದುದರಿಂದ ಈ ಶರೀರಾವಚ್ಛಿನ್ನವಾದ ಮನಸ್ಸಿನಿಂದ ಅನುಭವಿಸಲಿಕ್ಕೆ ಅಯೋಗ್ಯವಾದಪ್ರಯುಕ್ತ ಮಾನಸಪ್ರತ್ಯಕ್ಷಕ್ಕೆ ಗೋಚರಗಳಾಗಲಾರವು. (5)ಯೋಗಿಗಳ ಪ್ರತ್ಯಕ್ಷವು ನಮಗೆ ಗೋಚರವಾಗದಿರುವ(ಅತೀಂದ್ರಿಯವಾದ) ಅರ್ಥವನ್ನು ವಿಷಯೀಕರಿಸುತ್ತದೆ ಎಂದು ಹೇಳಕೂಡದು. ಯೋಗಿಗಳಿಗೆ ಧರ್ಮಾದಿಪ್ರತ್ಯಕ್ಷವದೆ ಎನ್ನುವುದೂ ಅಪೌರುಷೇಯವಾಕ್ಯವಿಲ್ಲದೆ ಸಿದ್ಧಿಸಲಾರದು. ಈ ಅಭಿಪ್ರಾಯದಿಂದಲೂ 'ಆಗಮಂ ವಿನಾ' ಎಂದು ಹೇಳಿರುವರು. (6) ಮತ್ತು ಯೋಗಿಗಳಿಗೆ ತಂತಮ್ಮ ಪ್ರತ್ಯಕ್ಷದಿಂದ

ಧರ್ಮಾದಿಗಳು ಸಿದ್ಧಗಳಾದಾಗ್ಯೂ ನಮಗೆ ಧರ್ಮಾದಿಗಳನ್ನು ನಿಶ್ಚಯಿಸುವ ಉಪಾಯವಿಲ್ಲ. ಒಬ್ಬನ ಪ್ರತ್ಯಕ್ಷದಿಂದ ಮತ್ತೊಬ್ಬನಿಗೆ ನಿಶ್ಚಯವಾಗಲೀ ಅನುಷ್ಠಾನವಾಗಲೀ ಕೂಡಲಾರದು. (7) ಧರ್ಮಾದಿವ್ಯಾಪ್ತವಾದ ಲಿಂಗವಿಲ್ಲದಿರುವುದರಿಂದ ಅನುಮಾನವೂ ಧರ್ಮಾದಿಗಳ ಜ್ಞಾನವನ್ನು ಹುಟ್ಟಿಸುವುದರಲ್ಲಿ ಶಕ್ತವಾಗಲಾರದು. ಹಾಗಾದರೆ ವಿಶೇಷಾಕಾರವಾಗಿ ಧರ್ಮಾದಿವ್ಯಾಪ್ತವಾದ ಲಿಂಗವಿಲ್ಲದಿದ್ದರೂ, 'ಜ್ಯೋತಿಷ್ಟೋಮಾದಿಕಂ, ಧರ್ಮಾದಿಸಾಧನಂ, ತದುದ್ದೇಶೇನ ಪ್ರೇಕ್ಷಾವದ್ಭಿಃ ಕ್ರಿಯಮಾಣತ್ವಾತ್, ಯತ್, ಯದುದ್ದೇಶೇನ ಪ್ರೇಕ್ಷಾವದ್ಭಿಃ ಕ್ರಿಯತೇ, ತತ್, ತತ್ಸಾಧನಂ, ಯಥಾ, ಕೃಷ್ಯಾದಿಕಂ ಧಾನ್ಯಾದಿಸಾಧನಂ,' ಜ್ಯೋತಿಷ್ಟೋಮ ಮೊದಲಾದುದು ಧರ್ಮಾದಿಗಳಿಗೆ ಸಾಧನವಾದುದು. ಧರ್ಮಾದಿಗಳನ್ನುದ್ದೇಶಿಸಿ ಜ್ಞಾನಿಗಳು ಮಾಡುವುದರಿಂದ, ಯಾವುದು ಯಾವುದನ್ನುದ್ದೇಶಿಸಿ ಜ್ಞಾನಿಗಳಿಂದ ಮಾಡಲ್ಪಡುತ್ತದೋ, ಅದು ಅದಕ್ಕೆ ಸಾಧನವು. ಕೃಷಿಮೊದಲಾದುದು ಧಾನ್ಯಾದಿಗಳಿಗೆ ಸಾಧನವು. ಹೀಗೆ ಸಾಮಾನ್ಯವ್ಯಾಪ್ತಿ ಮೂಲಕವಾದ ಅನುಮಾನದಿಂದ ಕಥಂಚಿತ್ ಧರ್ಮಾದಿಗಳ ಸ್ವರೂಪವು ಮಾತ್ರ ಸಿದ್ಧವಾದರೂ 'ಇದು ಸ್ವರ್ಗಕ್ಕೆ ಸಾಧನವು' 'ಇದು ಅಗ್ನಿಹೋತ್ರಕ್ಕೆ ಫಲವು' ಇತ್ಯಾದಿ ಸಾಧನಫಲಸಂಬಂಧ ರೂಪವಾದ ಧರ್ಮವಿಶೇಷವು ಅನುಮಾನದಿಂದ ನಿಶ್ಚಯಿಸಲಿಕ್ಕೆ ಸಾಧ್ಯವಿಲ್ಲ. ಅದು ನಿಶ್ಚಯವಾಗದಿದ್ದರೆ ಅನುಷ್ಠಾನವೇ ಕೂಡಲಾರದು. (8) ಅನುಮಾನವು ಧರ್ಮವಿಶೇಷವನ್ನು ಅನುಮೇಯಿಸಿಕೊಡದಿದ್ದರೆ ಧರ್ಮಾಧರ್ಮಗಳ ಸ್ವರೂಪವನ್ನು ನಿರ್ಣಯಿಸುವ ಧರ್ಮವಿಚಾರವು ಕೂಡದೆ ಹೋಗಬೇಕಾಯಿತು. ಮೀಮಾಂಸಾಶಾಸ್ತ್ರವು ಯುಕ್ತ್ಯನುಸಂಧಾನರೂಪವಾದುದರಿಂದ ಅನುಮಾನರೂಪವಾಗಿದೆ, ಎಂದು ಹೇಳಕೂಡದು. ಅಪೌರುಷೇಯವಾಕ್ಯದಿಂದ ಧರ್ಮಾದಿಗಳ ಜ್ಞಾನವಾಗೋಣ ವೇದದಿಂದ ಹುಟ್ಟತಕ್ಕ ಜ್ಞಾನವು ಅಪ್ರಮಾಣವೆಂಬುವ ಸಂಶಯರೂಪವಾದ ದೋಷವನ್ನು ನಿವರ್ತಿಸತಕ್ಕ ನ್ಯಾಯಾನುಸಂಧಾನರೂಪವಾದ ಉಪಕಾರವನ್ನು ಮಾಡುವುದರಿಂದ ಮೀಮಾಂಸಾಶಾಸ್ತ್ರವು ಉಪಯುಕ್ತವೆಂದಂಗೀಕರಿಸುತ್ತೇವೆ. ಈ ಅಭಿಪ್ರಾಯದಿಂದಲೂ 'ಆಗಮಂ ವಿನಾ' ಎಂಬ ಮೂಲವು, ಅನುಮಾನವು ಅಪೌರುಷೇಯಾಗಮವನ್ನು ಹೊರತು ಸ್ವತಂತ್ರವಾಗಿ ಧರ್ಮಾದಿಗಳಲ್ಲಿ ಪ್ರಾಮಾಣ್ಯವನ್ನು (ಧರ್ಮಾದಿಗಳ ಪ್ರಮಿತಿಯನ್ನು) ಹುಟ್ಟಿಸುವುದಿಲ್ಲ. (9) ಪೌರುಷೇಯವಾಕ್ಯವೂ ಧರ್ಮಾದಿಗಳ ಪ್ರಮಿತಿ (ಯಥಾರ್ಥಜ್ಞಾನ) ಯನ್ನು ಹುಟ್ಟಿಸುವುದರಲ್ಲಿ ಶಕ್ತವಲ್ಲ. ಪುರುಷರಿಗೆ ಅಜ್ಞಾನಾದಿಗಳು ಸಂಭವಿಸುವುದರಿಂದ ಧರ್ಮಾದಿಗಳನ್ನು ಉಪದೇಶಕೊಡತಕ್ಕವನಲ್ಲಿ ವಿಶ್ವಾಸವು ಹುಟ್ಟಲಾರದು. ಮನ್ವಾದಿಗಳಲ್ಲಿ ವಿಶ್ವಾಸವು ದೃಷ್ಟವಾಗಿದೆ ಎಂದು ಹೇಳಕೂಡದು. ಮನ್ವಾದಿವಾಕ್ಯಗಳೂ ಅಪೌರುಷೇಯವಾಕ್ಯವೇ ಮೂಲವಾಗಿ ಉಳ್ಳವುಗಳೆಂದು ನಿಶ್ಚಯವಾದರೇನೇ ವಿಶ್ವಾಸವು ಹುಟ್ಟುತ್ತದೆ. ಈ ಅಭಿಪ್ರಾಯದಿಂದಲೂ 'ನ ಚಾನುಮಾನಾದೀನಾಂ' ಎಂಬೀ ಮೂಲವು. ಪೌರುಷೇಯಾಗಮಕ್ಕೆ (ಮನ್ವಾದಿಗಳು ಮಾಡಿದ್ದ ಗ್ರಂಥಗಳಿಗೆ) ಧರ್ಮಾದಿಗಳ ವಿಷಯದಲ್ಲಿ ಯಥಾರ್ಥಜ್ಞಾನಜನಕತ್ವ(ಹುಟ್ಟಿಸುವಿಕೆ)ವು ಇಲ್ಲ. ಏಕೆಂದರೆ— ಆಗಮಂ ವಿನಾ=ಅಪೌರುಷೇಯವಾಕ್ಯಮೂಲಕತ್ವವನ್ನು ಹೊರತು, ತೇಷು=ಮನ್ವಾದಿ ವಾಕ್ಯಗಳಲ್ಲಿ, ಆಶ್ವಾಸಾಭಾವಾತ್=ವಿಶ್ವಾಸವು ಹುಟ್ಟದಿರುವುದರಿಂದ. ಅಂತೂ ಮನುಸ್ಮೃತ್ಯಾದಿಗಳೂ ಅಪೌರುಷೇಯವಾಕ್ಯವನ್ನು ಮೂಲೀಕರಿಸಿಕೊಂಡು ಇದ್ದರೇನೇ ಅವುಗಳಲ್ಲಿ ವಿಶ್ವಾಸವು ಹುಟ್ಟುತ್ತದೆ. ಇಲ್ಲದಿದ್ದರೆ ಅವುಗಳಲ್ಲಿ ಸಹ ವಿಶ್ವಾಸವು ಹುಟ್ಟುವುದಿಲ್ಲ ॥ ೫೦ ॥

ಈ ಪ್ರಕಾರ ಪ್ರಸಕ್ತಗಳಾದವುಗಳನ್ನು ಪ್ರತಿಷೇಧಿಸಿ ಈಗ 'ಧರ್ಮಾದಿಕಂ ಅಪೌರುಷೇಯವಾಕ್ಯೈಕಪ್ರಮಾಣಕಂ ಅನುಮಾನ ಪ್ರತ್ಯಕ್ಷ ಪೌರುಷೇಯವಾಕ್ಯಾಪ್ರಮಾಣಕತ್ವೇ ಸತಿ

ಸಪ್ರಮಾಣಕತ್ವಾತ್ ವ್ಯತಿರೇಕೇಣ ಘಟವತ್=ಧರ್ಮ ಮೊದಲಾದುವುಗಳು ಅಪೌರುಷೇಯ ವಾಕ್ಯ ಒಂದೇ ಪ್ರಮಾಣವಾಗಿ ಉಳ್ಳವುಗಳು, ಅನುಮಾನ ಪ್ರತ್ಯಕ್ಷ ಪೌರುಷೇಯವಾಕ್ಯಗಳು ಪ್ರಮಾಣಗಳಾಗದೆ ಇದ್ದು ಪ್ರಮಾಣವುಳ್ಳವುಗಳಾದುದರಿಂದ, ವ್ಯತಿರೇಕದಿಂದ (ಅಂದರೆ ಸಾಧ್ಯದ ಅಭಾವವೂ ಹೇತುವಿನ ಅಭಾವವೂ ಇರುವ) ಘಟದಂತೆ, ಎಂಬೀ ಪರಿಶೇಷಪ್ರಮಾಣದಿಂದ ಸಿದ್ಧವಾದ ಅರ್ಥವನ್ನು ಹೇಳುತ್ತಾರೆ.

ಮೂ ॥ ಅತೋಽಪೌರುಷೇಯವಾಕ್ಯೇನೈವ ಧರ್ಮಾದಿಸಿದ್ಧೇಃ ಸರ್ವವಾದಿನಾಮಪಿ ತದಂಗೀಕಾರ್ಯಂ ॥ ೫೧ ॥

ಅ ॥ ಅತಃ = ಆದಕಾರಣ, ಅಪೌರುಷೇಯವಾಕ್ಯೇನೈವ = ಅಪೌರುಷೇಯವಾಗವು ದಿಂದಲೇ, ಧರ್ಮಾದಿಸಿದ್ಧೇಃ=ಧರ್ಮ ಅಧರ್ಮ ಮೊದಲಾದವುಗಳು ಸಿದ್ಧಿಸುವುದರಿಂದ, ಸರ್ವವಾದಿನಾಮಪಿ=ಎಲ್ಲಾ ವಾದಿಗಳಿಗೂ, ತತ್=ಅಪೌರುಷೇಯವಾಕ್ಯವು, ಅಂಗೀಕಾರ್ಯಂ= ಅಂಗೀಕರಿಸಲಿಕ್ಕೆ ಯೋಗ್ಯವು.

ತಾ ॥ (1) ಇಲ್ಲಿ ಯದ್ಯಪಿ 'ಅನುಮಾನಾದಿಭಿರ್ಧರ್ಮಾದ್ಯಸಿದ್ಧೇಃ'=ಅನುಮಾನಾದಿ ಗಳಿಂದ ಧರ್ಮಾದಿಗಳು ಸಿದ್ಧಿಸದಿರುವುದರಿಂದ ಎಂದು ಹೇಳಬೇಕಿತ್ತು, ಆದಾಗ್ಯೂ 'ಅಪೌರುಷೇಯವಾಕ್ಯೇನೈವ ಧರ್ಮಾದಿಸಿದ್ಧೇಃ' = ಎನ್ನುವುದು ಅಪೌರುಷೇಯವಾಕ್ಯವನ್ನಂಗೀಕರಿ ಸಿದರೆ ಯಾವ ಅನುಪಪತ್ತಿಯೂ ಇಲ್ಲವೆಂದು ಸೂಚಿಸುವುದಕ್ಕಾಗಿ ಹೇಳಿದ್ದಾಗಿರುತ್ತದೆ. (2) ಆ ಅಪೌರುಷೇಯವಾಕ್ಯವು ಬೇರೆಯಾಗದಿರುವುದರಿಂದ ವೇದವೇ ಸರಿ. ವೇದದಿಂದ ಇತರಗಳಾದ ಗ್ರಂಥಗಳನ್ನು ಇಂತಹರು ಮಾಡಿದ್ದೆಂದು ಪ್ರಸಿದ್ಧಿಯೇ ಇರುತ್ತದೆ. ಅವುಗಳು ಧರ್ಮಾದಿ ಗಳನ್ನು ವ್ಯವಸ್ಥೆಮಾಡುವುದಿಲ್ಲ. ವೇದವನ್ನು ಇಂತಹರು ನಿರ್ಮಿಸಿದ್ದೆಂದು ಎಲ್ಲಿಯೂ ಪ್ರಸಿದ್ಧಿಯಿಲ್ಲ. ಆದಕಾರಣ ಧರ್ಮಾದಿಗಳನ್ನು ವ್ಯವಸ್ಥೆಮಾಡತಕ್ಕದ್ದು, ವೇದವೆಂದೇ ಹೇಳಬೇಕು. (3) ಹಾಗಾದರೆ ಧರ್ಮಾದಿಗಳು ವೇದವಲ್ಲದ ಪ್ರಮಾಣದಿಂದ ತಿಳಿಯಲ್ಪಡುವುದಿಲ್ಲ. ಅಪೌರು ಷೇಯವಾಕ್ಯದಿಂದಲೇ ಧರ್ಮಾದಿಗಳ ಸಿದ್ಧಿಯಾಗುತ್ತದೆ, ಎಂದಂಗೀಕರಿಸಿದರೆ, ವೇದದಿಂದಲೇ ಸರ್ವರಿಗೂ ಧರ್ಮಾದಿಗಳ ಜ್ಞಾನವು ಆಗುವುದೆಂದಾಯಿತು. ಹಾಗಾದರೆ ಧರ್ಮಾಧರ್ಮಾದಿ ಗಳಲ್ಲಿ ವಾದಿಗಳಿಗೆ ವಿವಾದವು ಹೇಗೆ ಕೂಡುವುದೆಂದರೆ - ಸತ್ಯವೇ, ಆದರೆ 'ಧರ್ಮಂ ಚರತ ಮಾಧರ್ಮಂ' ಇತ್ಯಾದಿ ವೇದಗಳಿಂದ ಧರ್ಮಾದಿಗಳ ಸ್ವರೂಪವು ಸಾಮಾನ್ಯವಾಗಿ ಸರ್ವವಾದಿ ಗಳಿಗೂ ಪ್ರತೀತವಾಗೋಣ, ಅಗ್ನೀಷೋಮೀಯ ಪಶ್ವಾಲಂಭನ ಮೊದಲಾದ ಧರ್ಮವಿಶೇಷಗಳಲ್ಲಿ 'ಅಗ್ನೀಷೋಮೀಯಂ ಪಶುಮಾಲಭೇತ' ಇತ್ಯಾದಿ ವೇದಗಳನ್ನು ಅತಿಕ್ರಮಿಸಿ, ಅಂದರೆ, 'ನ ಹಿಂಸ್ಯಾತ್ಸರ್ವಾ ಭೂತಾನಿ' ಇತ್ಯಾದಿಗಳು ಸಾಮಾನ್ಯವಾಗಿ ಪ್ರವೃತ್ತವಾದುವುಗಳೆಂದು ತಿಳಿಯದೆ ತಂತಮ್ಮ ಬುದ್ಧಿಯ ದೋಷದಿಂದ ವಾದಿಗಳಿಗೆ ಅಹಿಂಸೆಯೇ ಮುಖ್ಯ ಧರ್ಮವು, ಕೇಶೋಲ್ಲುಂಠ ನವು ಧರ್ಮವು, ಇದು ಮೊದಲಾದ ವಿವಾದಗಳು ಹುಟ್ಟುತ್ತವೆ. ಸಾಮಾನ್ಯವಾಗಿ ಧರ್ಮಾದಿಗಳ ಸ್ವರೂಪವೇ ವೇದದಿಂದ ತೋರದಿದ್ದರೆ ಧರ್ಮಾದಿಗಳು ಬುದ್ಧಿಯಲ್ಲಿ ಆರೂಢಗಳೇ ಆಗ ಲಾರವು. ಅಂತೂ ಧರ್ಮಾದಿಗಳಲ್ಲಿ ಅನುಮಾನಗಳ ಪ್ರವೃತ್ತಿಯೂ ಕೂಡಲಾರದು ॥ ೫೧ ॥

ಆಪ್ತೋಕ್ತತ್ವರೂಪವಾದ ಗುಣವಿದ್ದರೇನೇ, ಆ ವಾಕ್ಯಕ್ಕೆ ಯಥಾರ್ಥಜ್ಞಾನಸಾಧನತ್ವರೂಪ ವಾದ ಪ್ರಾಮಾಣ್ಯವು ಉಪಲಬ್ಧವಾದೀತು. (ಅಂದರೆ, ವೇದವನ್ನು ಆಪ್ತನು ಮಾಡಿದ್ದೆಂದರೇನೇ ವೇದವು ಯಥಾರ್ಥಜ್ಞಾನಕ್ಕೆ ಸಾಧನವಾದ ಪ್ರಮಾಣವಾದೀತು) ವೇದಕ್ಕೆ ಅಪೌರುಷೇಯತ್ವ

ವನ್ನಂಗೀಕರಿಸಿದರೆ ಆಪ್ತೋಕ್ತತ್ವರೂಪವಾದ ಗುಣವಿಲ್ಲದಿರುವುದರಿಂದ ಪ್ರಾಮಾಣ್ಯವು ಕೂಡ ಲಾರದು. (ಅಂದರೆ, ವೇದವನ್ನು ಯಾರೂ ಮಾಡಿದ್ದಲ್ಲವೆಂದಂಗೀಕರಿಸಿದರೆ ಆಪ್ತನು ಮಾಡಿದ್ದೆನ್ನುವ ಗುಣವಿಲ್ಲದಿರುವುದರಿಂದ ಪ್ರಮಾಣವೇ ಆಗಲಾರದು.) ಬೀಜಕ್ಕೆ ಕಲಮ (ಕಡಮೆ ಬೀಜ) ತ್ವವೇ ಇಲ್ಲವಾದರೆ ಕಡಮೆಯು ಅಂಕುರಕ್ಕೆ ಕಾರಣವಾಗಲಾರದಷ್ಟೆ! ವೇದವು ಅಪೌರುಷೇಯುವಾದ ಕಾರಣವೇ ವಾಕ್ಯದಲ್ಲಿರುವ ಆಪ್ತೋಕ್ತತ್ವರೂಪ ಗುಣದಿಂದ ಹುಟ್ಟದೆ ಇರುವಪ್ರಯುಕ್ತ ಜ್ಞಾನಕ್ಕೂ ಪ್ರಾಮಾಣ್ಯವು ಬರಲಾರದು ಎಂದಾಶಂಕಿಸಿದರೆ —

**ಮೂ || ತತ್ಪ್ರಾಮಾಣ್ಯಂ ಚ ಸ್ವತ ಏವ ಸಿದ್ಧಂ || ೫೨ ||**

ಅ || ತತ್ಪ್ರಾಮಾಣ್ಯಂ ಚ=ವೇದಕ್ಕೆ ಯಥಾರ್ಥಜ್ಞಾನ ಜನಕತ್ವ ರೂಪವಾದ ಪ್ರಾಮಾಣ್ಯವು, ಸ್ವತ ಏವ=ಆಪ್ತೋಕ್ತತ್ವರೂಪವಾದ ಗುಣವನ್ನಪೇಕ್ಷಿಸದೇನೇ, ಸಿದ್ಧಂ=ನಿಶ್ಚಿತವಾಗಿದೆ. (ಹಾಗೆಯೇ ಜ್ಞಾನಕ್ಕೂ ಕೂಡ ಯಾಥಾರ್ಥ್ಯರೂಪವಾದ ಪ್ರಾಮಾಣ್ಯವು ಗುಣವನ್ನಪೇಕ್ಷಿಸದ ವಾಕ್ಯದಿಂದಲೇ ಹುಟ್ಟುತ್ತದೆ, ಎಂದು ಸಿದ್ಧವಾಯಿತು.)

ತಾ || (1) ವೇದಕ್ಕೆ ಅಪೌರುಷೇಯುತ್ವವು ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ಅನೇಕ ಪ್ರಮಾಣಗಳಿಂದ ಸಿದ್ಧವಾಗುತ್ತದೆ. ಆಪ್ತೋಕ್ತತ್ವರೂಪವಾದ ಗುಣವು ಪೌರುಷೇಯು ವಾಕ್ಯಗಳಲ್ಲಿ ದೃಷ್ಟವಾಗಿಯುದೆ. (೧) ಹಾಗೆ ಪೌರುಷೇಯು ವಾಕ್ಯದಲ್ಲೇ ಆಪ್ತೋಕ್ತತ್ವರೂಪ ಗುಣವು ದೃಷ್ಟವಾಗಿಯುದೆಯೆಂದು ಪ್ರಾಮಾಣ್ಯಕ್ಕೆ ಆಪ್ತೋಕ್ತತ್ವರೂಪಗುಣವು ಕಾರಣವೆಂದಂಗೀಕರಿಸಿ ವೇದಗಳಿಗೆ ಅಪೌರುಷೇಯುತ್ವವನ್ನು ಬಿಡಬೇಕೋ? (೨) ಅಥವಾ ಪ್ರಮಾಣಗಳನ್ನನುಸರಿಸಿ ವೇದಗಳಿಗೆ ಅಪೌರುಷೇಯುತ್ವವನ್ನು ಒಡಂಬಟ್ಟು ಪೌರುಷೇಯು ವಾಕ್ಯದಲ್ಲಿ ಆಪ್ತೋಕ್ತತ್ವರೂಪಗುಣ ಸನ್ನಿಧಿಯು ಯಾದೃಚ್ಛಿಕವಾಗಿಯುದೆ ಎಂದು ಗ್ರಹಿಸಿ ಆಪ್ತೋಕ್ತತ್ವರೂಪಗಳಾದ ಗುಣಗಳು ಪ್ರಾಮಾಣ್ಯಕ್ಕೆ ಕಾರಣಗಳೆನ್ನುವುದನ್ನು ಬಿಡಬೇಕೋ? ಎಂದು ಸಂಶಯುವು ಬಂದರೆ ೨ನೇ ಪಕ್ಷವನ್ನೇ ಆಶ್ರಯಿಸುವುದು ಯೋಗ್ಯವು. ಸಾವಕಾಶವಾದ ಆಪ್ತೋಕ್ತತ್ವರೂಪವಾದ ಒಂದು ಗುಣದ ಸನ್ನಿಧಾನದಿಂದ ವೇದಗಳಿಗೆ ಅಪೌರುಷೇಯುತ್ವವನ್ನು ಪ್ರತಿಪಾದಿಸುವ ನಿರವಕಾಶಗಳಾದ ಅನೇಕಾಗಮಗಳಿಗೆ ಬಾಧಹೇಳುವುದು ಯೋಗ್ಯವಲ್ಲ. ನಿರವಕಾಶವಾದ ಒಂದರಿಂದ ಸಾವಕಾಶಗಳಾದ ಅನೇಕಗಳಿಗೆ ಬಾಧ ಹೇಳುವುದೇ ಯೋಗ್ಯವು. ಯಾದೃಚ್ಛಿಕ ಸಂವಾದಿಸ್ಥಳದಲ್ಲಿ ಆಪ್ತೋಕ್ತತ್ವರೂಪ (ಆಪ್ತನುಹೇಳಿದ್ದೆನ್ನುವ) ಗುಣವಿಲ್ಲದಿದ್ದರೂ ಭ್ರಾಂತ ಪ್ರತಾರಕ ವಾಕ್ಯವು ಯುಥಾರ್ಥಜ್ಞಾನವನ್ನು ಹುಟ್ಟಿಸುವುದಾಗಿ ದೃಷ್ಟವಾಗಿಯುದೆ. ಅಲ್ಲಿ ವಾಕ್ಯವು ಕಾರಣವಲ್ಲವೆಂದು ಹೇಳಕೂಡದು. ಬೇರೆಕಾರಣಗಳನ್ನು ಹೇಳದಿರುವುದರಿಂದ ಕಾರಣವಿಲ್ಲದೇನೇ ಕಾರ್ಯವು ಹುಟ್ಟಬೇಕಾಗುವುದು || ೫೨ ||

ಎಲ್ಲಾ ವಾಕ್ಯಗಳೂ ಯುಥಾರ್ಥಜ್ಞಾನವನ್ನು ಹುಟ್ಟಿಸುವುದೆಂದಾದರೆ, ಬೌದ್ಧಾದಿಗಳ ವಾಕ್ಯಗಳೂ, ಯುಥಾರ್ಥಜ್ಞಾನವನ್ನು ಹುಟ್ಟಿಸಬೇಕಾಗುವುದು. ಬೌದ್ಧಾದಿಗಳ ವಾಕ್ಯದಿಂದ ಹುಟ್ಟಿದ ಜ್ಞಾನವೂ ಯುಥಾರ್ಥವಾಗಬೇಕಾದೀತು, ಎಂದುಹೇಳಕೂಡದು. ಬೌದ್ಧಾದಿಗಳು ಹೇಳಿದ, ವಾಕ್ಯಗಳು ಅಜ್ಞಾನ, ವಿಪ್ರಲಂಭ, ಪ್ರಮಾದ, ಅಪಟುಕರಣತ್ವಗಳೆಂಬ ಪುರುಷದೋಷಗಳೇ ಮೂಲವಾಗಿ ಉಳ್ಳವುಗಳಾದುದರಿಂದ ಅವು ಅಯುಥಾರ್ಥಜ್ಞಾನವನ್ನು ಹುಟ್ಟಿಸುತ್ತವೆ. ವಾಕ್ಯದಲ್ಲಿರುವ ಅಜ್ಞಾನ, ವಿಪ್ರಲಂಭ, ಮೂಲಕತ್ವಮೊದಲಾದದೋಷಗಳು ಆ ವಾಕ್ಯಕ್ಕೆ ಯುಥಾರ್ಥಜ್ಞಾನವನ್ನು ಹುಟ್ಟಿಸುವ ಶಕ್ತಿಯನ್ನು ತಡೆದು, ವಿಪರೀತ ಜ್ಞಾನವನ್ನು ಹುಟ್ಟಿಸುವ ಶಕ್ತಿಯನ್ನು ಆವಿರ್ಭವಿಸಿಕೊಡುತ್ತವೆ.

ಅಪವಾದವಿಲ್ಲದಿದ್ದರೆ ಸ್ವತಃ ಪ್ರಾಮಾಣ್ಯವು, ಅಪವಾದದಿಂದ ಅಪ್ರಾಮಾಣ್ಯವು ಬರುತ್ತದೆ. ವಾಕ್ಯದಲ್ಲಿರುವ ಅಪ್ರಾಮಾಣ್ಯವು ದೋಷಾಧೀನವೆಂದು ಏತಕ್ಕೆ ಅಂಗೀಕರಿಸಬೇಕೆಂದರೆ, ಅದನ್ನು ಒಡಂಬಡದಿದ್ದರೆ ಬಾಧಕವನ್ನು ಹೇಳುತ್ತಾ ಉಪಪಾದಿಸುತ್ತಾರೆ.

ಮೂ ॥ ಅಪ್ರಾಮಾಣ್ಯಸ್ಯ ಚ ಪರತಸ್ತ್ವಾನಂಗೀಕಾರೇ ದುಷ್ಟೇಂದ್ರಿಯಾದೇರಪ್ಯಪ್ರಾಮಾಣ್ಯಹೇತುತ್ವಂ ನ ಸ್ಯಾತ್ ॥ ೫೩ ॥

ಅ ॥ ಅಪ್ರಾಮಾಣ್ಯಸ್ಯ ಚ=ವಾಕ್ಯದಲ್ಲಿರುವ ಅಯಥಾರ್ಥಜ್ಞಾನ ಜನಕತ್ವ (ಹುಟ್ಟಿಸುವಿಕೆ) ರೂಪವಾದ ಅಪ್ರಾಮಾಣ್ಯಕ್ಕೆ, ಪರತಸ್ತ್ವಾನಂಗೀಕಾರೇ = ಪುರುಷದೋಷಾಧೀನತ್ವವನ್ನಂಗೀಕರಿಸದಿದ್ದರೆ, ದುಷ್ಟೇಂದ್ರಿಯಾದೇರಪಿ=ಕಾಚಾ(ಕಣ್ಣಿನ ಜಡಿ)ದಿದೋಷಯುಕ್ತಗಳಾದ ಇಂದ್ರಿಯಗಳಿಗೂ, ವ್ಯಭಿಚಾರಾದಿ ದೋಷಯುಕ್ತಗಳಾದ ಲಿಂಗಗಳಿಗೂ, ಅಪ್ರಾಮಾಣ್ಯ ಹೇತುತ್ವಂ=ಜ್ಞಾನದಲ್ಲಿರುವ ಅಯಥಾರ್ಥ್ಯಕ್ಕೆ ಕಾರಣತ್ವವು, ನ ಸ್ಯಾತ್=ಆಗಲಾರದು.

ತಾ ॥ (1) ಪುರುಷರ ದೋಷಗಳು ವಾಕ್ಯಗಳ ಅಪ್ರಾಮಾಣ್ಯಕ್ಕೆ ಕಾರಣಗಳಲ್ಲವೆನ್ನುವುದು ಎರಡು ಪ್ರಕಾರವಾಗುವುದು. (೧) ವಾಕ್ಯಕ್ಕೆ ಅಪ್ರಾಮಾಣ್ಯವೇ ಇಲ್ಲದಿರುವುದರಿಂದ ಪುರುಷರ ದೋಷಗಳು ವಾಕ್ಯಗಳ ಅಪ್ರಾಮಾಣ್ಯಕ್ಕೆ ಕಾರಣಗಳಲ್ಲ ಎನ್ನುವುದೋ? (೨) ಅಥವಾ ವಾಕ್ಯಕ್ಕೆ ಅಪ್ರಾಮಾಣ್ಯವಿದ್ದರೂ ಅಪ್ರಾಮಾಣ್ಯಕ್ಕೆ ಸ್ವತಸ್ತ್ವವಿದ್ದುದರಿಂದ (ಅಂದರೆ, ಅಪ್ರಾಮಾಣ್ಯವು, ಜ್ಞಾನವು ಯಾವುದರಿಂದ ಹುಟ್ಟುತ್ತದೋ ಅದರಿಂದಲೇ ಹುಟ್ಟುವ ಪ್ರಯುಕ್ತ) ಪುರುಷರ ದೋಷಗಳು ವಾಕ್ಯಗಳ ಅಪ್ರಾಮಾಣ್ಯಕ್ಕೆ ಕಾರಣಗಳಲ್ಲವೆನ್ನುತ್ತೀರೊ? ೧ನೇ ಕಲ್ಪದಲ್ಲಿ ದುಷ್ಟೇಂದ್ರಿಯಾದಿಗಳೂ ಅಪ್ರಾಮಾಣ್ಯಗಳಾಗದೆ ಹೋಗುವುವು. ೨ನೇ ಕಲ್ಪದಲ್ಲಿ ಕಾಚಕಾಮಲಾದಿದೋಷಗಳೂ ಇಂದ್ರಿಯಾದಿಗಳಿಗೆ ಅಯಥಾರ್ಥಜ್ಞಾನಜನಕತ್ವ(ಹುಟ್ಟಿಸುವಿಕೆ)ರೂಪವಾದ ಅಪ್ರಾಮಾಣ್ಯದಲ್ಲಿ ಕಾರಣಗಳಾಗದೆ ಹೋಗುವುವು. ದುಷ್ಟೇಂದ್ರಿಯಾದಿಗಳು ಅಪ್ರಮಾಣಗಳೆನ್ನುವುದೂ ಕಾಚಾದಿಗಳು ಅವುಗಳಿಗೆ ನಿಮಿತ್ತಗಳೆನ್ನುವುದೂ ಅನುಭವಸಿದ್ಧವು ॥ ೫೩ ॥

ದುಷ್ಟೇಂದ್ರಿಯಾದಿಗಳಿಗೆ ಅಪ್ರಾಮಾಣ್ಯವನ್ನೂ ಕಾಚಾದಿದೋಷಗಳಿಗೆ ಇಂದ್ರಿಯಾದಿಗಳಲ್ಲಿರತಕ್ಕ ಅಯಥಾರ್ಥಜ್ಞಾನ ಜನಕತ್ವರೂಪವಾದ ಅಪ್ರಾಮಾಣ್ಯಕ್ಕೆ ಕಾರಣತ್ವವನ್ನೂ ಈ ಎರಡನ್ನೂ ಅಂಗೀಕರಿಸದಿದ್ದರೆ ಏನು ಬಾಧಕವೆಂದಾಶಂಕಿಸಿದರೆ —

ಮೂ ॥ ತದನಂಗೀಕಾರೇ ಚಾನುಭವವಿರೋಧಃ ॥ ೫೪ ॥

ಅ ॥ ತದನಂಗೀಕಾರೇ ಚ = ಹಿಂದೆ ಹೇಳಿದವುಗಳನ್ನಂಗೀಕರಿಸದಿದ್ದರೆ, ಅನುಭವ ವಿರೋಧಃ=ಅನುಭವವಿರೋಧವು.

ತಾ ॥ (1) ದುಷ್ಟೇಂದ್ರಿಯಾದಿಗಳಿಗೆ ಅಪ್ರಾಮಾಣ್ಯವನ್ನು ಅಂಗೀಕರಿಸದಿದ್ದರೆ ಆಗಲೂ ಎರಡು ರೀತಿಯು. (೧) ನೇರ್‍ದು ದುಷ್ಟೇಂದ್ರಿಯಾದಿಗಳು ಜ್ಞಾನಕ್ಕೆ ಮುಖ್ಯ ಕಾರಣಗಳಾಗದಿರುವುದರಿಂದಲೇ ಅವುಗಳಿಗೆ ಅಯಥಾರ್ಥಜ್ಞಾನಸಾಧನತ್ವರೂಪವಾದ ಅಪ್ರಾಮಾಣ್ಯವಿಲ್ಲವೆನ್ನುವುದೋ, ಅಥವಾ (೨) ದುಷ್ಟೇಂದ್ರಿಯಾದಿಗಳೂ ಯಥಾರ್ಥ ಜ್ಞಾನಕ್ಕೆ ಸಾಧನಗಳಾದ ಪ್ರಯುಕ್ತವೇ ಅವುಗಳಿಗೆ ಅಪ್ರಾಮಾಣ್ಯವಿಲ್ಲವೆನ್ನುವುದೋ? ೧ನೇ ಪಕ್ಷ (ದುಷ್ಟೇಂದ್ರಿಯಾದಿಗಳು ಜ್ಞಾನಕ್ಕೆ ಮುಖ್ಯ ಕಾರಣಗಳಲ್ಲ)ದಲ್ಲಿಯೂ (I) ಜ್ಞಾನವು ಹುಟ್ಟುತ್ತದೆ, ಆದರೆ ಇಂದ್ರಿಯಾದಿಗಳು ಜ್ಞಾನಕ್ಕೆ ಕಾರಣಗಳಾಗದಿರುವುದರಿಂದಲೇ ದುಷ್ಟೇಂದ್ರಿಯಾದಿಗಳು ಜ್ಞಾನಕ್ಕೆ

ಕಾರಣಗಳಲ್ಲ ಎಂದರ್ಥವೋ? (II) ಅಥವಾ ಜ್ಞಾನಸ್ವರೂಪವೇ ಇಲ್ಲವೆಂದು ಇಟ್ಟುಕೊಂಡು ದುಷ್ಟೇಂದ್ರಿಯಾದಿಗಳು ಜ್ಞಾನಕ್ಕೆಕಾರಣಗಳಲ್ಲ ಎಂದರ್ಥವೋ? ಎಂದು ಎರಡು ಪ್ರಕಾರ ವಿಕಲ್ಪಿಸಿಕೊಂಡು ಕ್ರಮೇಣ ದೂಷಿಸುವರು. Iನೇ ಕಲ್ಪದಲ್ಲಿ 'ಇದಂ ರಜತಂ' ಇತ್ಯಾದಿ ಜ್ಞಾನಗಳಿಗೆ ದುಷ್ಟೇಂದ್ರಿಯವಿರುವಾಗ ಚಿಪ್ಪನ್ನು ನೋಡಿ 'ಇದಂ ರಜತಂ' ಇದು ಬೆಳ್ಳಿಯು ಇದು ಮೊದಲಾದ ಜ್ಞಾನಗಳು ಹುಟ್ಟುತ್ತವೆ. ದುಷ್ಟೇಂದ್ರಿಯವಿಲ್ಲದಿದ್ದರೆ 'ಇದು ಬೆಳ್ಳಿ' ಇತ್ಯಾದಿ ಜ್ಞಾನಗಳು ಹುಟ್ಟುವುದಿಲ್ಲ. ಎಂಬೀ ನಿಯಮ (ಅನ್ವಯ ವ್ಯತಿರೇಕಗಳನ್ನನುಸರಿಸಿರುವ ಅನುಭವ) ವಿರೋಧವು. (II) ಜ್ಞಾನವನ್ನೇ ಅಂಗೀಕರಿಸದಿದ್ದರೆ, ಮುತ್ತಿನ ಚಿಪ್ಪನ್ನು ಬೆಳ್ಳಿಯನ್ನಾಗಿ ತಿಳಿಯುತ್ತೇನೆ ಎಂಬೀ ಭ್ರಮರೂಪವಾದ ಜ್ಞಾನಸ್ವರೂಪವನ್ನು ವಿಷಯೀಕರಿಸುವ ಸಾಕ್ಷಿರೂಪವಾದ ಅನುಭವದಿಂದ ವಿರೋಧವು. ೨ನೇ ಕಲ್ಪದಲ್ಲಿ ಮುತ್ತಿನ ಚಿಪ್ಪನ್ನು ನೋಡಿ 'ಇದು ಬೆಳ್ಳಿಯು' ಇತ್ಯಾದಿ ಜ್ಞಾನಗಳನ್ನು ಯಥಾರ್ಥಗಳೆಂದಂಗೀಕರಿಸಿ, ದುಷ್ಟೇಂದ್ರಿಯಾದಿಗಳು ಅಯಥಾರ್ಥಜ್ಞಾನಕ್ಕೆ ಕಾರಣಗಳೆಂದಂಗೀಕರಿಸದಿದ್ದರೆ, 'ನೇದಂ ರಜತಂ' 'ಇದು ಬೆಳ್ಳಿಯಲ್ಲ' ಎಂದು ರಜತದ ಅಭಾವವನ್ನವಗಾಹನಮಾಡುವ ಬಾಧಸ್ವರೂಪವಾದ ಅನುಭವದಿಂದ ವಿರೋಧವು. ೩ನೇ ಕಲ್ಪದಲ್ಲಿ, (ಅಂದರೆ, ಕಾಚಾದಿದೋಷಗಳು ಇಂದ್ರಿಯಾದಿಗಳ ಅಪ್ರಾಮಾಣ್ಯಕ್ಕೆ ನಿಮಿತ್ತವೆಂದಂಗೀಕರಿಸುವುದಿಲ್ಲ ಎಂಬುವ ಕಲ್ಪದಲ್ಲಿ)ಕಾಚಕಾಮಲಾದಿದೋಷಗಳಿದ್ದರೆ ಇಂದ್ರಿಯಾದಿಗಳು ಅಯಥಾರ್ಥಜ್ಞಾನಕ್ಕೆ ಕಾರಣಗಳಾಗುವುವು. ಆ ದೋಷಗಳಿಲ್ಲದಿದ್ದರೆ ಇಂದ್ರಿಯಾದಿಗಳು ಅಯಥಾರ್ಥಜ್ಞಾನಕ್ಕೆ ಕಾರಣಗಳಾಗುವುದಿಲ್ಲ. ಎಂಬುವ ನಿಯಮದಿಂದ ವಿರೋಧವು ॥ ೫೪ ॥

ಪುನಃ ಶಂಕಿಸುತ್ತಾರೆ. (1) ಯಾದೃಚ್ಛಿಕಸಂವಾದಿಸ್ಥಳದಲ್ಲಿ (ನದಿಯ ತೀರದಲ್ಲಿ ೫ ಫಲಗಳಿವೆ ಎಂಬೀ ವಂಚಕನ ಮಾತಿನಲ್ಲಿ) ದೋಷವಿದ್ದರೂ ಅಪ್ರಾಮಾಣ್ಯವಿಲ್ಲದಿರುವುದರಿಂದ (ಅಂದರೆ ನದೀತೀರಕ್ಕೆ ಹೋದವನಿಗೆ ಯದೃಚ್ಛೆಯಾ ಅಲ್ಲಿ ೫ ಫಲಗಳು ಲಭಿಸಿರುವುದರಿಂದ) 'ದೋಷವಿರುವಾಗ ಅಪ್ರಾಮಾಣ್ಯವು. ದೋಷವಿಲ್ಲದಿರುವಾಗ ಅಪ್ರಾಮಾಣ್ಯವಿಲ್ಲವು. ಎನ್ನುವುದು ಹೇಗೆ ಯುಕ್ತವಾಗುವುದು? ಎಂದರೆ — ಅಪ್ರಾಮಾಣ್ಯವು ಹುಟ್ಟುವುದಾದರೆ ದೋಷವಿದ್ದರೇನೇ ಹುಟ್ಟುತ್ತದೆ, ದೋಷವು ಇಲ್ಲದಿದ್ದರೆ ಅಪ್ರಾಮಾಣ್ಯವು ಹುಟ್ಟಲಾರದು, ಎಂದು ವಿವಕ್ಷಿತವಾದ ಪ್ರಯುಕ್ತ ಯಾದೃಚ್ಛಿಕಸಂವಾದಿಸ್ಥಳದಲ್ಲಿ ದೋಷವಿಲ್ಲವು. ಕಾರಣವಿದ್ದರೂ ಕಾರ್ಯವು ಹುಟ್ಟದಿರುವುದು ಬೇರೆ ಸಾಮಗ್ರಿಗಳಿಲ್ಲದಿರುವಪ್ರಯುಕ್ತವೆಂದಾಗಲೀ ಪ್ರತಿಬಂಧಕಗಳಿದ್ದಪ್ರಯುಕ್ತವೆಂದಾಗಲೀ ಇಟ್ಟುಕೊಳ್ಳಬೇಕು. (2) ಆದಪ್ರಯುಕ್ತವೇ ದೋಷಾಭಾವವೂ ಪ್ರಾಮಾಣ್ಯಕ್ಕೆ ಕಾರಣವಲ್ಲ. ಏಕೆಂದರೆ — ಯಾದೃಚ್ಛಿಕಸಂವಾದವಾಕ್ಯಗಳಲ್ಲಿ ದೋಷವಿದ್ದರೂ ಪ್ರಾಮಾಣ್ಯಜ್ಞಾನವು ಹುಟ್ಟುವುದಿಲ್ಲವಷ್ಟೆ! ಎಂದಭಿಪ್ರಾಯದಿಂದ ಉಪಸಂಹಾರಮಾಡುತ್ತಾರೆ.

**ಮೂ ॥ ಅತಃ ಪ್ರಾಮಾಣ್ಯಂ ಸ್ವತಃ ಪರತೋಽಪ್ರಾಮಾಣ್ಯಮಿತಿ ಸಿದ್ಧಂ ॥ ೫೫ ॥**

ಅ ॥ ಅತಃ=ಆದಪ್ರಯುಕ್ತ, ಪ್ರಾಮಾಣ್ಯಂ=ಯಾಥಾರ್ಥ್ಯವು, ಸ್ವತಃ=ಜ್ಞಾನಕಾರಣಮಾತ್ರದಿಂದಲೇ ಹುಟ್ಟುವುದು, (ಅಂದರೆ ಜ್ಞಾನವು ಯಾವುದರಿಂದ ಹುಟ್ಟುತ್ತದೋ, ಅದರಿಂದಲೇ ಅದರಲ್ಲಿರುವ ಪ್ರಾಮಾಣ್ಯವೂ ಹುಟ್ಟುತ್ತದೆ.) ಅಪ್ರಾಮಾಣ್ಯಂ=ಅಯಾಥಾರ್ಥ್ಯವು, ಪರತಃ=ಜ್ಞಾನಕ್ಕೆ ಯಾವುದು ಕಾರಣವೋ, ಅದರಿಂದ ಅತಿರಿಕ್ತಗಳಾದ ದೋಷಾದಿಗಳಿಂದ ಹುಟ್ಟುವುದು, ಇತಿ=ಹೀಗೆ, ಸಿದ್ಧಂ=ನಿಶ್ಚಿತವಾಯಿತು ॥ ೫೫ ॥

ಈ ಪ್ರಕಾರ ಅನುಮಾನಾದಿಗಳಿಂದ ಸಮರ್ಥಿಸಲ್ಪಟ್ಟ ವೇದಾಪೌರುಷೇಯತ್ವವನ್ನು ಶ್ರುತಿಪುರಾಣ ವಾಕ್ಯಗಳಿಂದಲೂ ಸಾಧಿಸುತ್ತಾರೆ.

**ಮೂ ॥ ವಾಚಾ ವಿರೂಪ! ನಿತ್ಯಯಾ ॥ ೫೬ ॥**

[ಋಗ್ವೇದ ಅಷ್ಟಕ ೬. ಅಧ್ಯಾಯಂ ೫. ವರ್ಗ ೨೫]

ಅ ॥ "ತಸ್ಮೈನೂನಮಭಿದ್ಯವೇ ವಾಚಾ ವಿರೂಪ! ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಿಂ" ॥ ಹೀಗೆ ವಿಶಿಷ್ಟಮಂತ್ರವು. ವಿರೂಪ=ವಿರೂಪನಾಮಕ ಋಷಿಯೇ!, ಅಭಿದ್ಯವೇ=ಸರ್ವತಃ ಪ್ರಕಾಶವುಳ್ಳ, (ಅಂದರೆ ವಿಶೇಷತಃ ಸೂರ್ಯಾದಿಗಳಿಗೆ ಪ್ರಕಾಶಕನೂ,) ವೃಷ್ಣೇ=ಭಕ್ತರಿಗೆ ಇಷ್ಟವಾದುದನ್ನು ಹೊಂದಿಸಿ ಕೊಡುವವನೂ ಆದ, ತಸ್ಮೈ=ಆ ಭಗವಂತನನ್ನುದ್ದೇಶಿಸಿ, ನೂನಂ=ನಿಶ್ಚಯವಾಗಿಯೂ, ನಿತ್ಯಯಾ ವಾಚಾ=ನಿತ್ಯವಾದ (ಉತ್ಪತ್ತಿನಾಶಗಳಿಲ್ಲದಿರುವ) ವೇದವಚನದಿಂದ, ಸುಷ್ಟುತಿಂ=ಚೆನ್ನಾಗಿ ಶೋಭನವಾದ ಸ್ತುತಿಯನ್ನು, ಚೋದಸ್ವ=ಪ್ರೇರಿಸು; ಮಾಡು, ಹೀಗೆ ಶ್ರುತಿಯಲ್ಲಿ, ವೇದಗಳಿಗೆ ನಿತ್ಯತ್ವವು ಸಾಧಿಸಲ್ಪಟ್ಟಿದೆ ॥ ೫೬ ॥

ವಾಕ್ ಶಬ್ದವು ವಾಗಿಂದ್ರಿಯದಲ್ಲಿಯೂ ಪ್ರಸಿದ್ಧವು. ಸ್ಪಷ್ಟವಾಗಿ ವೇದವಾಕ್ಯವೆಂದರ್ಥವುಳ್ಳದ್ದಲ್ಲ. ಆದಕಾರಣ ಸ್ಪಷ್ಟವಾಗಿ ವೇದವಿಷಯವಾದ ಶ್ರುತಿಯನ್ನು ಪಠನೆ ಮಾಡುತ್ತಾರೆ.

**ಮೂ ॥ ನಿತ್ಯಯಾಽನಿತ್ಯಯಾ ಸ್ತೌಮಿ ಬ್ರಹ್ಮ ತತ್ಪರಮಂ ಪದಮಿತಿ ॥ ೫೭ ॥**

ಅ ॥ ತತ್=ವ್ಯಾಪ್ತನೂ, ಪರಮಂ=ಸರ್ವೋತ್ತಮನೂ, ಪದಂ=ಮುಕ್ತಪ್ರಾಪ್ಯನೂ ಆದ, ಬ್ರಹ್ಮ=ಗುಣಪರಿಪೂರ್ಣನನ್ನು, ನಿತ್ಯಯಾ=ನಿತ್ಯವಾದ ಮಾತಿನಿಂದಲೂ, ಅನಿತ್ಯಯಾ=ಅನಿತ್ಯವಾದ ಮಾತಿನಿಂದಲೂ, ಸ್ತೌಮಿ=ಸ್ತುತಿಸುತ್ತೇನೆ ॥ ೫೭ ॥

'ನಿತ್ಯಯಾಽನಿತ್ಯಯಾ' ಎಂಬುವ ಮಂತ್ರವನ್ನುದಾಹರಿಸಿ ಬ್ರಾಹ್ಮಣದಲ್ಲಿ ನಿತ್ಯಾನಿತ್ಯಶಬ್ದ ಪ್ರತಿಪಾದ್ಯವಾದುದನ್ನು ನಿರ್ದೇಶಮಾಡಿರುವುದರಿಂದ ಅದನ್ನು ತೋರಿಸುವರು —

**ಮೂ ॥ ಶ್ರುತಿರ್ವಾವ ನಿತ್ಯಾ ಅನಿತ್ಯಾ ವಾವ ಸ್ಮೃತಯೋ ಯಾಶ್ಚಾನ್ಯಾ ವಾಚಃ ಇತಿ ಪೈಂಗೀಶ್ರುತಿಃ ॥ ೫೮ ॥**

ಅ ॥ ಶ್ರುತಿರ್ವಾವ=ಶ್ರುತಿಯು, ನಿತ್ಯಾ=ನಿತ್ಯವಾದುದೇ, ಸ್ಮೃತಯಃ=ಸ್ಮೃತಿಗಳು, ಅನಿತ್ಯಾ ವಾವ=ಅನಿತ್ಯಗಳೇ, ಯಾಶ್ಚ=ಯಾವವು, ಅನ್ಯಾ ವಾಚಃ=ಬೇರೆ ಮಾತುಗಳು ಇದ್ದಾವೋ, (ಅವುಗಳೂ ಅನಿತ್ಯಗಳು) ಇತಿ=ಹೀಗೆ, ಪೈಂಗೀಶ್ರುತಿಃ=ಪೈಂಗೀಶ್ರುತಿಯು ॥ ೫೮ ॥

ಈ ಎರಡು ಶ್ರುತಿಗಳಿಂದ ನಿತ್ಯತ್ವವೇ ಪ್ರತೀತವಾಗುತ್ತದೆ. ಅಪೌರುಷೇಯತ್ವವು ಪ್ರತೀತವಾಗುವುದಿಲ್ಲ. ಎಂದರೆ ಎರಡು ವಾಕ್ಯಗಳನ್ನುದಾಹರಿಸುತ್ತಾರೆ —

**ಮೂ ॥ ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾ ಶ್ರುತಿಃ । ಅನಾದಿ ನಿತ್ಯಾ ಸಾ ತಚ್ಚ ವಿನಾ ತಾಂ ನ ಸ ಗಮ್ಯತೇ ॥ ಇತಿ ಕಾತ್ಯಾಯನಶ್ರುತಿಃ ॥ ಸಹಸ್ರಧಾ ಮಹಿಮಾನಃ ಸಹಸ್ರಂ ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್ ॥ ಕಃ ಛಂದಸಾಂ ಯೋಗಮಾವೇದ ಧೀರಃ ಕೋ ಧಿಷ್ಣ್ಯಾಂ ಪ್ರತಿವಾಚಂ ಪಪಾದ ॥ ಇತ್ಯಾದಿ ಚ ॥ ೫೯ ॥**

[ಋ. ಅಷ್ಟ. ೮. ಅಧ್ಯಾ೬. ವ. ೧೬.]

ಅ ॥ (1) ಬ್ರಹ್ಮ=ಪರಬ್ರಹ್ಮನೇ, ಪರಮಂ ವಿಜ್ಞೇಯಂ=ಮುಖ್ಯಜ್ಞೇಯನು. (ಅಂದರೆ ಮುಮುಕ್ಷುಗಳಿಗೆ ತಿಳಿಯಲಿಕ್ಕೆ ಯೋಗ್ಯನಾದ ಮುಖ್ಯ ಪ್ರಮೇಯನು.) (ಲಕ್ಷ್ಮೀ ಬ್ರಹ್ಮಾದಿಗಳು ಅಪ್ರಧಾನ ಪ್ರಮೇಯರು ) ಶ್ರುತಿಃ=ಶ್ರುತಿಯು, ಪರಮಾ ಜ್ಞಾಪಿಕಾ=(ಅಂತಹ ಬ್ರಹ್ಮನನ್ನು ತಿಳಿಸಿ ಕೊಡತಕ್ಕ) ಪ್ರಧಾನ ಪ್ರಮಾಣವು (ಅಂದರೆ, ಶ್ರುತಿಯೇ ಮುಖ್ಯವಾಗಿ ಭಗವತ್ಸ್ವರೂಪ ಪ್ರತಿ ಪಾದಕವು ಇತಿಹಾಸಾದಿಗಳು ಅಪ್ರಧಾನಪ್ರಮಾಣಗಳು) ಸಾ=ಆ ಶ್ರುತಿಯು, ತಚ್ಚ=ಪ್ರಧಾನ ಪ್ರಮೇಯವೂ(ಬ್ರಹ್ಮನೂ)ಕೂಡ, ಅನಾದಿನಿತ್ಯಾ=ಅನಾದಿನಿತ್ಯವಾದುದು, ಸಃ=ಬ್ರಹ್ಮಶಬ್ದೋಕ್ತ ನಾದ ಪರಮಾತ್ಮನು,ತಾಂ ವಿನಾ=ಶ್ರುತಿಯನ್ನು ಹೊರತು, ನ ಗಮ್ಯತೇ=ತಿಳಿಯಲ್ಪಡುವುದಿಲ್ಲ. (ಅಂದರೆ ಶ್ರುತಿವ್ಯತಿರಿಕ್ತ ಪ್ರಮಾಣಗಳಿಂದ ಆ ಹರಿಯನ್ನು ತಿಳಿಯಲಸಾಧ್ಯವು.) ಇತಿ=ಹೀಗೆ, ಕಾತ್ಯಾಯನಶ್ರುತಿಃ=ಕಾತ್ಯಾಯನಶ್ರುತಿಯು. (2) ಯಸ್ಯ=ಯಾವ ಪರಮಾತ್ಮನ, ಸಹಸ್ರಂ= ಅಪರಿಮಿತಗಳಾದ, ಮಹಿಮಾನಃ=ಮಹಾತ್ಮೆಗಳು, ಸಹಸ್ರಧಾ=ಪ್ರತ್ಯೇಕವಾಗಿಯೂ ಅಪರಿಮಿತ ಗಳೋ, ತತ್ ಬ್ರಹ್ಮ=ಆ ಬ್ರಹ್ಮನು, ಯಾವತ್ ವಿಷ್ಠಿತಂ=ಯಾವ ದೇಶಕಾಲಗಳಲ್ಲಿ ವ್ಯಾಪಿಸಿ ಕೊಂಡು ವಿಶೇಷಾಕಾರವಾಗಿದ್ದಾನೋ, ವಾಕ್=ವೇದವಚನವೂ ಕೂಡ, ತಾವತೀ=ಅಷ್ಟು ದೇಶ ಕಾಲಗಳಲ್ಲಿ ವ್ಯಾಪಿಸಿಕೊಂಡಿದೆ. (ಪ್ರಾಜ್ಞನಾದ ಒಬ್ಬ ಪುರುಷನು ವೇದವನ್ನು ಮಾಡಿರುವುದರಿಂದ ಇದು ಹೇಗೆ ಸಂಗತವಾಗಬಹುದೆಂದರೆ) ಛಂದಸಾಂ=ವೇದಗಳ, ಯೋಗಂ=ಅರ್ಥಗಳಿಂದೊಡ ಗೂಡಿಕೊಂಡ ವಾಚ್ಯವಾಚಕಭಾವಸಂಬಂಧವನ್ನು,ಕೋ ಧೀರಃ=ಯಾವ ಪಂಡಿತನು,ಆವೇದ= ಚೆನ್ನಾಗಿ ತಿಳಿಯುತ್ತಾನೆ. (ಯಾರೂ ತಿಳಿಯುವುದಿಲ್ಲ) ಧಿಷ್ಣ್ಯಂ=ಬುದ್ಧಿಪೂರ್ವಕವಾದ, ವಾಚಂ=ವೇದವಚನವನ್ನು, ಕಃ=ಯಾವ ಜ್ಞಾನಿಯು, ಪ್ರತಿಪಪಾದ=ಪರರನ್ನು ಕುರಿತು ಪ್ರತಿಪಾದಿಸಿದನು. (ಯಾರೂ ಪ್ರತಿಪಾದಿಸಲಾರನು. ವೇದಾರ್ಥವನ್ನು ತಿಳಿದವನೂ ತಿಳಿದು ವ್ಯಾಖ್ಯಾನ ಮಾಡುವವನೂ ಕೂಡ ಸಿಗಲಾರನು. ಆದ್ದರಿಂದ ವೇದಕರ್ತನು ಇಲ್ಲವೆಂದು ಸುತರಾಂ ಸಿದ್ಧವು.) ಇತ್ಯಾದಿ ಚ=ಇದೇಮೊದಲಾದ ಶ್ರುತಿಯು.

ತಾ ॥ (1) ಬ್ರಹ್ಮನು ಅನಾದಿನಿತ್ಯನಾದ ಪ್ರಯುಕ್ತವೂ, ಧರ್ಮ ಮೊದಲಾದ ಪ್ರಮೇಯಗಳಿಂದ ವಿಲಕ್ಷಣನಾದುದರಿಂದಲೂ ಮುಖ್ಯ ವಿಜ್ಞೇಯನು. ಶ್ರುತಿಯು ಅನಾದಿ ನಿತ್ಯವಾದುದರಿಂದಲೂ, ಬೇರೆ ಪ್ರಮಾಣಗಳಿಂದ ವಿಲಕ್ಷಣವಾದುದರಿಂದಲೂ, ಪರಮ (ಮುಖ್ಯ) ಪ್ರಮಾಣವು. (2) 'ತಾಂ ವಿನಾ' ಎನ್ನುವುದರಿಂದ 'ಶ್ರುತಿಃ ಪರಮಾ ಜ್ಞಾಪಿಕಾ ಇತರಪ್ರಮಾಣಾ ವೇದ್ಯವಸ್ತುಪ್ರಮಾಪಕತ್ವಾತ್ ವ್ಯತಿರೇಕೇಣ ಪ್ರತ್ಯಕ್ಷಾದಿವತ್=ವೇದವು ಮುಖ್ಯಪ್ರಮಾಣವು. ಬೇರೆ ಪ್ರಮಾಣಗಳಿಂದ ತಿಳಿಯದಿರುವ ವಸ್ತುವಿನ ಪ್ರಮಿತಿಯನ್ನು ಹುಟ್ಟಿಸುವುದರಿಂದ' ಎಂಬೀ ಯುಕ್ತ್ಯಂತರವು ಹೇಳಲ್ಪಟ್ಟಿತು. 'ನೇಂದ್ರಿಯಾಣಿ ನಾನುಮಾನಂ' ಇತ್ಯಾದಿವಾಕ್ಯಗಳಿಂದ ಹೇತುವು ಸಿದ್ಧಿಸುವುದು. (3) ಇದೇ ಮೊದಲಾದ ಶ್ರುತಿಗಳು ಪ್ರತ್ಯೇಕವಾಗಿ ವೇದಗಳಿಗೆ ಅಪೌರುಷೇಯತ್ವರೂಪವಾದ ಇಷ್ಟಾರ್ಥವನ್ನು ಪ್ರತಿಪಾದಿಸುತ್ತವೆ. ಹೀಗೆ ವೇದಗಳಿಗೆ ಅಪೌರುಷೇ ಯತ್ವವೇ ಇರುವುದೆಂಬುವ ವಿಷಯದಲ್ಲಿ ಶ್ರುತ್ಯಾದಿಪ್ರಮಾಣಗಳನ್ನು ಉದಾಹರಿಸಿರುವರು ॥೫೯॥

ಪುನಃ ಶಂಕಿಸುತ್ತಾರೆ. (1) ವಿಧಿ, ನಿಯೋಗ, ಪ್ರೇರಣೆ ಇವುಗಳು ಪರ್ಯಾಯಪದ ಗಳು. (ಏಕಾರ್ಥಕಗಳು,) ಆ ವಿಧಿಯು ಪ್ರೇರಕನಾದ ಪುರುಷನ ಧರ್ಮವು. ಆದಪ್ರಯುಕ್ತ ವಿಧಿಯೇ ಪ್ರಯೋಜನವಾಗಿಯುಳ್ಳ, ವೇದದಲ್ಲಿರುವ 'ಪ್ರಾತಸ್ಸಂಧ್ಯಾಮುಪಾಸೀತ' ಇತ್ಯಾದಿ ವಾಕ್ಯಗಳನ್ನು 'ಇದನ್ನು ಮಾಡು' ಇತ್ಯಾದಿ ಲೌಕಿಕವಾಕ್ಯಗಳಂತೆ, ಸ್ವತಂತ್ರನಾದ ಪುರುಷನು

ಮಾಡಿದ್ದೆಂಬುವುದೇ ಯೋಗ್ಯವು. ಹಾಗೆಯೇ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದ್ಯರ್ಥ ವಾದಗಳಿಗೂ ಸ್ವತಂತ್ರಪುರುಷಕರ್ತೃಕತ್ವವೇ ಉಚಿತವು. ಹಾನೋಪಾದಾನ (ಪರಿತ್ಯಾಗಬುದ್ಧಿ ಸ್ವೀಕಾರಬುದ್ಧಿ)ಗಳ ಅಭಿಪ್ರಾಯದಿಂದ ಪ್ರವೃತ್ತವಾದಪ್ರಯುಕ್ತ. ತಥಾಚ, ವೈದಿಕಾನಿ ವಿಧ್ಯು ದ್ದೇಶವಾಕ್ಯಾನಿ ಸ್ವತಂತ್ರವಕ್ತೃಪೂರ್ವಕಾಣಿ ವಿಧ್ಯುದ್ದೇಶತ್ವಾತ್ 'ಲೌಕಿಕವಿಧ್ಯುದ್ದೇಶವಾಕ್ಯ ವತ್' ವೇದದಲ್ಲಿರುವ ಪ್ರೇರಣೆಯೇ ಪ್ರಯೋಜನವಾಗಿವುಳ್ಳ ವಾಕ್ಯಗಳು ಸ್ವತಂತ್ರವಾಗಿ ಹೇಳ ತಕ್ಕವನೇ ಪೂರ್ವವಾಗಿವುಳ್ಳವುಗಳು. ವಿಧ್ಯುದ್ದೇಶತ್ವವಿದ್ದುದರಿಂದ, ಲೌಕಿಕವಾದ ವಿಧಿಯನ್ನು ಉದ್ದೇಶಿಸಿರುವ ವಾಕ್ಯದಂತೆ. ಎಂದು ವೇದಕ್ಕೆ ಪೌರುಷೇಯತ್ವ ವಿಷಯದಲ್ಲಿ ಅನುಮಾನವು ಹೇಳಲ್ಪಟ್ಟಿತು. ಹಾಗೆಯೇ 'ನಿಂದಾ, ಸ್ತುತಿರೂಪ ಅರ್ಥವಾದವಾಕ್ಯಾನಿ ವಿಧಿಬೋಧ್ಯಾರ್ಥೇ ಹಾನೋಪಾದಾನಾಭಿಪ್ರಾಯಪೂರ್ವಕಾಣಿ ತಥಾವಿಧಾರ್ಥವಾದವಾಕ್ಯತ್ವಾತ್ ಲೌಕಿಕಾರ್ಥವಾದ ವಾಕ್ಯವತ್' 'ಅಶ್ರುಜಂ ಹಿ ಯೋ ಬರ್ಹಿಷಿ ದದಾತಿ ಪುರಾಸ್ಯ ಸಂವತ್ಸರಾದ್ಗೃಹೇ ರುದಂತಿ' 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇವು ಮೊದಲಾದ ನಿಂದಾ ಸ್ತುತಿಪರಗಳಾದ ಅರ್ಥವಾದ ವಾಕ್ಯಗಳು, ವಿಧಿವಾಕ್ಯದಿಂದ ತಿಳಿಸಲ್ಪಡುವ ಅರ್ಥದಲ್ಲಿ ಪರಿತ್ಯಾಗ ಸ್ವೀಕಾರಗಳೇ ಅಭಿಪ್ರಾಯ ವಾಗಿ ಉಳ್ಳವುಗಳು. ಅರ್ಥವಾದ ವಾಕ್ಯಗಳು ಅಂತಹವುಗಳಾದುದರಿಂದ ನಿಂದಾಸ್ತುತಿಗಳನ್ನು ಬೋಧಿಸುವ ಲೌಕಿಕ ವಾಕ್ಯಗಳಂತೆ, ಎಂದು ಅರ್ಥವಾದ ವಾಕ್ಯಗಳಿಗೆ ಪೌರುಷೇಯತ್ವವದೆ, ಎನ್ನುವ ವಿಷಯದಲ್ಲಿ ಅನುಮಾನವು ಹೇಳಲ್ಪಟ್ಟಿತು. ಅಭಿಪ್ರಾಯವು ಸ್ವತಂತ್ರವಾಗಿ ಪ್ರಯೋಗಿಸ ತಕ್ಕವನ ಧರ್ಮವಾಗಿದೆ. (2) ಮತ್ತು ವೇದದಲ್ಲಿ 'ಅಹಂ ರುದ್ರೇಭಿಃ' ಇತ್ಯಾದಿ ವಾಕ್ಯಗಳಲ್ಲಿ 'ಅಹಂ' ಎಂಬುವುದೇ ಮೊದಲಾದ ಪದಗಳು ಕೇಳಲ್ಪಡುತ್ತವೆ. ಅವುಗಳು ಲೌಕಿಕವಾಕ್ಯಗಳಂತೆ ಸ್ವತಂತ್ರನಾದವನೇ ಕರ್ತನಾಗಿ ಉಳ್ಳವುಗಳು. ಅಂತೂ 'ವೈದಿಕಾಹಮಾದಿಪದಾನಿ, ಸ್ವತಂತ್ರ ವಕ್ತೃಕಾಣಿ, ಅಹಮಾದಿ ಪದತ್ವಾತ್, ಲೌಕಿಕಾಹಮಾದಿ ಪದವತ್'ವೇದದಲ್ಲಿರುವ'ಅಹಂ'ಎಂಬು ವುದೇ ಮೊದಲಾದ ಪದಗಳು ಸ್ವತಂತ್ರವಾಗಿ ಹೇಳತಕ್ಕವನು ಇರುವವುಗಳು, 'ಅಹಂ' ಎಂಬು ವುದೇ ಮೊದಲಾದ ಪದಗಳಾದ ಪ್ರಯುಕ್ತ, ಲೋಕದಲ್ಲಿರುವ 'ಅಹಂ' ಎಂಬುವುದೇ ಮೊದಲಾದ ಪದಗಳಂತೆ, ಎಂಬೀ ಅನುಮಾನವು ಉಕ್ತವಾಯಿತು. ಆದುದರಿಂದ ಇಂತಹಗಳಿಗೆ ಪೌರು ಷೇಯತ್ವವನ್ನೇ ಹೇಳಬೇಕು, ಅಪೌರುಷೇಯತ್ವವನ್ನು ಹೇಳಕೂಡದೆಂದಾಶಂಕಿಸಿದರೆ —

**ಮೂ || ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ | ಸರ್ಗೇ ಸರ್ಗೇಽಮುನೈವೈತ ಉದ್ಗೀಯರ್ಂತೇ ತಥೈವ ಚ || ೬೦ ||**

ಅ || ಸಮಸ್ತಾಃ=ನಿಖಿಲಗಳಾದ (ಮಂತ್ರ, ಬ್ರಾಹ್ಮಣ, ಅರ್ಥವಾದಾದಿರೂಪಗಳಾದ) ವೇದಾಃ = ವೇದಗಳು, ನಿತ್ಯಾಃ = ನಿತ್ಯಗಳು, ಶಾಶ್ವತಾಃ = ಸರ್ವದಾ ಏಕಪ್ರಕಾರಗಳು, ವಿಷ್ಣುಬುದ್ಧಿಗಾಃ=ಪರಮಾತ್ಮನ ಬುದ್ಧಿಯಲ್ಲಿರುವವುಗಳು, ಅಮುನೈವ=ಈ ಪರಮಾತ್ಮನಿಂದಲೇ, ಸರ್ಗೇ ಸರ್ಗೇ=ಪ್ರತಿಸೃಷ್ಟಿಯಾಗುತ್ತಿರಲು, ಏತ ಏವ=ಪೂರ್ವಕಲ್ಪದಲ್ಲಿ ಪ್ರವೃತ್ತಗಳಾದವು ಗಳೇ, ತಥೈವ ಚ=ಹಾಗೆಯೇ, (ಸರ್ವಪ್ರಕಾರದಿಂದಲೂ) ಉದ್ಗೀಯರ್ಂತೇ=ಉಚ್ಚಂಸ ಲ್ಪಡುತ್ತವೆ.

**ತಾ ||** (1) ವೇದಗಳಲ್ಲಿ ನಾವು ಪುರುಷರ ಅಭಿಪ್ರಾಯಗಳಿಗೆ ಪ್ರವೇಶವೇ ಇಲ್ಲವೆಂದು ಹೇಳ[illegible]ಲ್ಲ. ಹಾಗೆ ಹೇಳಿದರೆ 'ಬಹು ಸ್ಯಾಂ ಪ್ರಜಾಯೇಯ ತನ್ಮಾಮವತು' ಇತ್ಯಾದಿ ಸಂಕಲ್ಪ ಪ್ರಾರ್ಥನಾದಿರೂಪಗಳಾದ ವಾಕ್ಯಗಳು ವ್ಯರ್ಥಗಳಾಗಬೇಕಾಗುವುವು. (2) ಹಾಗಾದರೆ ಅಪೌರು

ಷೇಯತ್ವವು ಕೂಡಲಿಕ್ಕಿಲ್ಲ ಎಂದರೆ ಶಾಶ್ವತಗಳು, ಅಂದರೆ ಪೂರ್ವದಲ್ಲಿರುವ ಕೆಲವು ವೇದ ವಾಕ್ಯಗಳನ್ನೇ ಕೆಲವು ಪುರುಷರು ತಂತಮ್ಮ ಅಭಿಪ್ರಾಯಗಳಿಂದ ಪ್ರಯೋಗಿಸುತ್ತಾರೆ. ಅಪೂರ್ವ (ಹಿಂದೆ ಇಲ್ಲದಿರುವವು) ಗಳನ್ನು ಮಾಡುವುದಲ್ಲ. (3) ವರ್ಣಗಳು ನಿತ್ಯಗಳಾದ ಪ್ರಯುಕ್ತವೂ, ಸರ್ವತ್ರ ವ್ಯಾಪ್ತಗಳಾದಪ್ರಯುಕ್ತವೂ ಸ್ವತಃ ಕ್ರಮರಹಿತಗಳು. ಅಂದರೆ, ನಿತ್ಯ ವಾದಪ್ರಯುಕ್ತ ಕಾಲಿಕಕ್ರಮವಿಲ್ಲ. ವ್ಯಾಪ್ತವಾದಪ್ರಯುಕ್ತ ದೈಶಿಕಕ್ರಮವಿಲ್ಲ. ಕ್ರಮವಿಲ್ಲದೆ ಪದ ವಾಕ್ಯಭಾವವು ಕೂಡಲಾರದು. ಜ್ಞಾನಕ್ಕೆ ಉಪಯುಕ್ತವಾದ ಕ್ರಮವುಳ್ಳ ವರ್ಣಗಳ ಸಮು ದಾಯವೇ ಪದವು. ಅಂತಹ ಪದಗಳ ಸಮುದಾಯವೇ ವಾಕ್ಯವು. ಪದ ವಾಕ್ಯಭಾವವಿಲ್ಲದಿದ್ದರೆ ಪ್ರಮಿತಿಕರಣತ್ವ (ಯಥಾರ್ಥಜ್ಞಾನಕ್ಕೆ ಮುಖ್ಯಕಾರಣತ್ವ) ವಿಲ್ಲದಿರುವುದರಿಂದ ಪ್ರಾಮಾಣ್ಯವೇ ಕೂಡಲಾರದು. ಆದಕಾರಣ ಕ್ರಮವನ್ನು ಕೃತಕವೆಂದೇ ನಿಶ್ಚಯಿಸಬೇಕು. ಆದುದರಿಂದ ಜನ್ಯ (ಹುಟ್ಟತಕ್ಕ) ಕ್ರಮವಿಶೇಷದಿಂದ ಕೂಡಿದ ವರ್ಣಸಮುದಾಯರೂಪವಾದ ವೇದಕ್ಕೆ ಅಪೌರು ಷೇಯತ್ವವು ಹೇಗೆ ಕೂಡಬಹುದೆಂದರೆ — ನಾವು ವೇದಗಳಿಗೆ ನಿರ್ವಿಕಾರ ನಿತ್ಯತ್ವವನ್ನು ಹೇಳುವುದಿಲ್ಲ. ಕ್ರಮವು ಹುಟ್ಟುವುದಾದಪ್ರಯುಕ್ತ ವಿಕಾರವಿದ್ದರೆ ಕ್ರಮವಿಶೇಷದಿಂದ ಕೂಡಿದ ವರ್ಣಸಮುದಾಯರೂಪವಾದ ವೇದವು ವಿಕಾರಿಯಾಗಿದೆ. ಮತ್ತೆ ಶಬ್ದದಿಂದಲೂ ಅರ್ಥದಿಂದಲೂ ಸರ್ವದಾ ಏಕಪ್ರಕಾರತ್ವವನ್ನು ಸಜಾತೀಯವಾದ ಆನುಪೂರ್ವಿಯು ಇರುತ್ತದೆಂದೇ ಹೇಳು ತ್ತೇವೆ. ಅಂತೂ ಕ್ರಮವು * ಪ್ರತ್ಯಧ್ಯಾಪಕರ ಉಚ್ಚಾರಣರೂಪ ಕ್ರಿಯೆಯಿಂದ ಹುಟ್ಟಿದರೂ ಪುರುಷರ ಅಭಿಪ್ರಾಯಗಳಿಗೆ ಪ್ರವೇಶವಿದ್ದರೂ ಸ್ವತಂತ್ರವಾಗಿ ಮಾಡಿದವನು, ಅಥವಾ ಹೇಳಿ ದವನು ಇಂತಹನು ಎನ್ನುವುದು ಎಲ್ಲಿಯೂ ಕಾಣದಿರುವುದರಿಂದ ಅಪೌರುಷೇಯತ್ವವೇ ಯುಕ್ತ ವಾಗುತ್ತದೆ. ಪ್ರಲಯದಲ್ಲಿ ನಾಶವಿದ್ದುದರಿಂದ ಶಾಶ್ವತಗಳು ಹೇಗೆ ಆಗುತ್ತವೆ? ಎಂದರೆ, ವಿಷ್ಣು ವಿನ ಬುದ್ಧಿಯಲ್ಲಿರುವವುಗಳು. ಇದರಿಂದ ಈಶ್ವರನು ಸರ್ವಜ್ಞನಾದ ಕಾರಣ ಈಶ್ವರನ ಬುದ್ಧಿ

---

* (1) ವರ್ಣದಲ್ಲಿರುವ ಕ್ರಮವು (೧) ಈಶ್ವರನ ಬುದ್ಧಿಯನ್ನು ನಿಮಿತ್ತೀಕರಿಸಿಕೊಂಡಿರುವುದು ಒಂದು ಕ್ರಮವು. (೨) ನಮ್ಮ ಬುದ್ಧಿಯನ್ನು ನಿಮಿತ್ತೀಕರಿಸಿಕೊಂಡಿರುವ ಕ್ರಮವು ಒಂದು. ಈ ಎರಡುವಿಧ ಕ್ರಮವೂ ಹುಟ್ಟತಕ್ಕದ್ದೇ, ಆದರೆ ಇಷ್ಟು ವಿಶೇಷವದೆ. (೨) ನಮ್ಮ ಬುದ್ಧಿಯನ್ನು ನಿಮಿತ್ತೀಕರಿಸಿಕೊಂಡಿರುವ ಕ್ರಮವು ನಮ್ಮ ಬುದ್ಧಿಗೆ ಉಪರತಿಯಾದಕೂಡಲೇ ನಷ್ಟವಾಗುವುದು. (೧) ಈಶ್ವರನ ಬುದ್ಧಿಗೆ ಉಪರತಿ ಯಿಲ್ಲದಿರುವುದರಿಂದ ಈಶ್ವರನ ಬುದ್ಧಿಯೇ ಉಪಾಧಿಯಾಗಿ ಉಳ್ಳ ಕ್ರಮವು ಜನ್ಯವಾದರೂ ನಾಶವಾಗುವುದಿಲ್ಲ. ಜನ್ಯವಾದುದಕ್ಕೂ ನಾಶವಿಲ್ಲವೆನ್ನುವುದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. 'ಈಶ್ವರೋಽಪ್ಯಸ್ಮನ್ಮತೇ ಮಹೋ ಪಾಧ್ಯಾಯ ಏವ' ಹೇಗೆ ಪ್ರತಿನಿತ್ಯವೂ ಉಪಾಧ್ಯಾಯರ ಬುದ್ಧಿಯನ್ನು ನಿಮಿತ್ತೀಕರಿಸಿಕೊಂಡು ಬಂದ ಕ್ರಮವು, ವರ್ಣಗಳಲ್ಲಿ ಹುಟ್ಟುತ್ತದೋ, ಹಾಗೆಯೇ ಈಶ್ವರನ ಬುದ್ಧಿಯನ್ನು ನಿಮಿತ್ತೀಕರಿಸಿಕೊಂಡು ಬಂದ ಕ್ರಮವೂ ವರ್ಣಗಳಲ್ಲಿ ಹುಟ್ಟುತ್ತದೆ, ಎಂದು ತರ್ಕ ತಾಂಡವದಲ್ಲಿ ಹೇಳಿಯದೆ. (2) ಈಶ್ವರನ ಬುದ್ಧಿಯೇ ಉಪಾಧಿ ಯಾಗಿ ಉಳ್ಳ ಕ್ರಮವು ಹುಟ್ಟಿದ್ದಲ್ಲವೆಂದಂಗೀಕರಿಸಿದರೆ ಯಾವದ್ದ್ರವ್ಯಭಾವಿಯಾಗಬೇಕಾಗುವುದು. "ಯಾವ ದ್ವಸ್ತು ನ ಭೇದವತ್" ಎಂದು ಹೇಳಿದರಿಂದ ವರ್ಣಗಳಿಗೂ ಕ್ರಮಕ್ಕೂ ಅತ್ಯಂತಾಭೇದ ಬರಬೇಕಾಗುವುದು. ಅಂತೂ 'ಯತ್ ಯದಭಿನ್ನಾಭಿನ್ನಂ ತತ್ತದಭಿನ್ನಂ' ರಾಮನಿಂದ ಅಭಿನ್ನನಾದವನು ನಾರಾಯಣನು, ಅವನಿಂದ ಅಭಿನ್ನನಾದ ಕೃಷ್ಣನು ರಾಮನಿಂದ ಅಭಿನ್ನನು, ಎಂಬುವ ವ್ಯಾಪ್ತಿಯ ಬಲದಿಂದ ಪೂರ್ವವರ್ಣದಿಂದ ಅಭಿನ್ನ ವಾದ ಕ್ರಮದಿಂದ ಅಭಿನ್ನವಾದ ಎರಡನೇ ವರ್ಣವು ಪೂರ್ವವರ್ಣದಿಂದ ಅಭಿನ್ನವಾದುದು, ಹೀಗೆ ವರ್ಣ ಗಳಿಗೆ ಪರಸ್ಪರವಾಗಿ ಅಭೇದವು ಬರಬೇಕಾಗುವುದು. (3) ಕ್ರಮವು ಹುಟ್ಟಿದ್ದೆಂದಂಗೀಕರಿಸಿದರೆ ಭೇದವೂ ಅಭೇದವೂ ಇದ್ದುದರಿಂದ ಹೀಗೆ ಆಪಾದಿಸಲಿಕ್ಕೆ ಅವಕಾಶವಿಲ್ಲ. ಅಂತೂ ಯಾವ ದೋಷಕ್ಕೂ ಅವಕಾಶವಿಲ್ಲವು.

ಯಲ್ಲಿ ಸರ್ವದಾ ತೋರುವವಪ್ರಯುಕ್ತ, ಇತ್ಯಾದಿ ಯುಕ್ತಿಗಳನ್ನೂ ಅಪೌರುಷೇಯತ್ವವಿಷಯದಲ್ಲಿ ಹೇಳಿರುವರು. (4)ಶ್ರೀಹರಿಯ ಬುದ್ಧಿಯಲ್ಲಿದ್ದುದರಿಂದ ಪ್ರಲಯದಲ್ಲಿ ನಾಶವಿಲ್ಲದಿದ್ದರೂ ಲೋಕದಲ್ಲಿ ಪುನಃ ಪ್ರವೃತ್ತಿಯು ಹೇಗೆ ಆಗುತ್ತದೆಂದರೆ, ಪ್ರತಿಸೃಷ್ಟಿಯಾಗುತ್ತಿರಲು ಶ್ರೀಹರಿಯು ಪೂರ್ವಕಲ್ಪದಲ್ಲಿದ್ದವುಗಳನ್ನೇ ಬ್ರಹ್ಮಾದಿಗಳಿಗೆ ಉಪದೇಶಕೊಡುತ್ತಾನೆ ॥ ೭೦ ॥

ಹಿಂದೆ ಹೇಳಿದ್ದನ್ನೇ ವಿವರಿಸುತ್ತಾರೆ ---

**ಮೂ ॥ ತತ್ಕ್ರಮೇಣೈವ ತೈರ್ವರ್ಣೈಸ್ತೈಃ ಸ್ವರೈರೇವ ನಾನ್ಯಥಾ । ಅತಃ ಶ್ರುತಿತ್ವಮೇತಾಸಾಂ ಶ್ರುತಾ ಏವ ಯತೋಽಖಿಲೈಃ ॥ ೭೧ ॥**

ಅ ॥ ತತ್ಕ್ರಮೇಣೈವ=ಆ ಕ್ರಮದಿಂದಲೇ, (ಅದೇ ಪದಾರ್ಥಗಳಿಂದ, ಅದೇ ವಾಕ್ಯಾರ್ಥಗಳಿಂದಲೂ) ತೈಃ ವರ್ಣೈಃ=ಆ ಅಕ್ಷರಗಳಿಂದಲೇ, ತೈಃ ಸ್ವರೈರೇವ=ಆ ಸ್ವರಗಳಿಂದಲೇ, ಉಚ್ಚಾರಣವಿಷಯತ್ವರೂಪ ಪ್ರಕಾರವನ್ನು ಹೊಂದಿದ ವೇದಗಳು, ಉದ್ಗೀರ್ಯಂತೇ=ಬ್ರಹ್ಮಾದಿಗಳನ್ನು ಕುರಿತು ಉಪದೇಶಿಸಲ್ಪಡುತ್ತವೆ, ಯತಃ=ಯಾವ ಕಾರಣದಿಂದ, ಅಖಿಲೈಃ=ಸಮಸ್ತರಿಂದಲೂ, ಶ್ರುತಾ ಏವ=ಕೇಳಲ್ಪಟ್ಟವುಗಳೇ ಆಗಿವೆಯೋ, ಏತಾಸಾಂ=ಈ ಶ್ರುತಿಗಳಿಗೆ, ಶ್ರುತಿತ್ವಂ=ಶ್ರುತಿಶಬ್ದವಾಚ್ಯತ್ವವು, ಅತಃ=ಅಪೌರುಷೇಯತ್ವವಿದ್ದುದರಿಂದಲೇ, (ಯುಕ್ತವಾಗುತ್ತದೆ) ಅನ್ಯಥಾ ನ=ಬೇರೆ ರೀತಿಯಾಗಿ ಅಲ್ಲ.

ತಾ ॥ (1) ವೇದವನ್ನು ವ್ಯಾಖ್ಯಾನಮಾಡದೆ ಯಾರಿಗೂ ಅರ್ಥಜ್ಞಾನವಾಗಲಾರದು. ಅರ್ಥಜ್ಞಾನವಾಗದೆ ಅನುಷ್ಠಾನವು ಕೂಡಲಾರದು. ಉಪದೇಶಪರಂಪರಾ ಪ್ರಾಪ್ತವಾಗದಿರುವುದರಿಂದ(ಸಂಪ್ರದಾಯಪ್ರಕಾರ ಬಾರದಿರುವುದರಿಂದ) ಈಗಿನ ಪುರುಷರು ಸ್ವತಂತ್ರವಾಗಿ ವ್ಯಾಖ್ಯಾನ ಮಾಡಿದರೆ ಅದರಲ್ಲಿ ವಿಶ್ವಾಸವು ಹುಟ್ಟಲಾರದು. ಆದ ಪ್ರಯುಕ್ತ ಸ್ವತಂತ್ರನಾದ ಕರ್ತೃ ಪುರುಷನ ವ್ಯಾಖ್ಯಾನವೆಂದಂಗೀಕರಿಸಬೇಕೆಂಬುವ ಪೂರ್ವಪಕ್ಷವು 'ಉದ್ಗೀರ್ಯಂತೇ' ಬ್ರಹ್ಮಾದಿಗಳನ್ನು ಕುರಿತು ಉಪದೇಶಿಸಲ್ಪಡುತ್ತವೆ. ಎಂಬುವ ಮೂಲದಿಂದ ನಿರಸ್ತವಾಯಿತು. ಹೇಗೆಂದರೆ — ಸರ್ವಜ್ಞನಾದ ಈಶ್ವರನು ವೇದಗಳನ್ನು ಮಾಡದಿದ್ದರೂ ವ್ಯಾಖ್ಯಾನರೂಪವಾಗಿ ಉಪದೇಶ ಮಾಡಿದವನೆಂಬುವುದು ಉಪಪನ್ನವಾಗುತ್ತದೆ. ಉತ್ತರಾರ್ಧದಿಂದ ಅಪೌರುಷೇಯತ್ವವಿಷಯದಲ್ಲಿ ಯುಕ್ತ್ಯಂತರವನ್ನು ಹೇಳುತ್ತಾರೆ. (2) ಶ್ರುತಗಳಾದ ಪ್ರಯುಕ್ತ ವೇದಗಳು ಶ್ರುತಿಗಳು. ಶ್ರುತತ್ವವು ಸರ್ವಶಬ್ದಗಳಲ್ಲಿಯೂ ಇದೆ. ಆದರೂ 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ=ಮುಖ್ಯವಾಗಿಯೇ ವ್ಯವಹಾರಗಳು ಆಗುತ್ತವೆ' ಎಂಬೀ ನ್ಯಾಯದಿಂದ 'ಅಬ್ಭಕ್ಷಃ, ವಾಯುಭಕ್ಷಃ=ಜಲವನ್ನು ಮಾತ್ರ ಭಕ್ಷಿಸುವುದು, ವಾಯುವನ್ನು ಮಾತ್ರ ಭಕ್ಷಿಸುವುದು, ಇದರಂತೆ ಅವಧಾರಣ ಸಹಿತವಾಗಿಯೇ ವ್ಯಾಖ್ಯಾನ ಮಾಡಬೇಕು. ಅಂತೂ ವೇದಗಳು ಸರ್ವರಿಂದಲೂ ಕೇಳಲ್ಪಟ್ಟವುಗಳೇ ಆಗಿವೆ. ಅಲ್ಲದೆ ಯಾರಿಂದಲೂ ಮಾಡಲ್ಪಟ್ಟವುಗಳಲ್ಲ. ಹೀಗೆ ಶ್ರುತಿ ಶಬ್ದವಾಚ್ಯತ್ವದಿಂದ ವೇದಗಳಿಗೆ ಅಪೌರುಷೇಯತ್ವವೇ ಸಿದ್ಧವಾಗುತ್ತದೆ ॥ ೭೧ ॥

ಹಾಗಾದರೆ ಮುನಿಗಳು ಅಧ್ಯಯನಮಾಡದಿದ್ದರೂ ಪಠನಮಾಡುತ್ತಾರೆ. ಆದಕಾರಣ ವೇದಗಳು ಸರ್ವರಿಂದಲೂ ಕೇಳಲ್ಪಟ್ಟವುಗಳೇ. ಮಾಡಲ್ಪಟ್ಟವುಗಳಲ್ಲ, ಎಂದು ಹೇಗೆ ಹೇಳಲ್ಪಡುತ್ತವೆ, ಎಂದರೆ —

ಮೂ ॥ ಜನ್ಮಾಂತರೇ ಶ್ರುತಾಸ್ತಾಸ್ತು ವಾಸುದೇವಪ್ರಸಾದತಃ । ಮುನೀನಾಂ ಪ್ರತಿಭಾಸ್ಯಂತಿ ಭಾಗೇನೈವ ನ ಸರ್ವಶಃ ॥ ಯತಸ್ತಾ ಹರಿಣಾ ದೃಷ್ಟಾಃ ಶ್ರುತಾ ಏವಾಪರೈರ್ಜನೈಃ ॥ ಶ್ರುತಯೋ ದೃಷ್ಟಯಶ್ಚೇತಿ ತೇನೋಚ್ಯಂತೇ ಪುರಾತನೈಃ ॥ ೬೨ ॥

ಅ ॥ ತಾಃ=ಆ ಶ್ರುತಿಗಳು, ಜನ್ಮಾಂತರೇ=ಬೇರೆ ಜನ್ಮದಲ್ಲಿ, ಶ್ರುತಾಸ್ತು=ಕೇಳಲ್ಪಟ್ಟವುಗಳೇ, ವಾಸುದೇವಪ್ರಸಾದತಃ=ಶ್ರೀ ಪರಮಾತ್ಮನ ಅನುಗ್ರಹದಿಂದ, ಮುನೀನಾಂ=ಋಷಿಗಳಿಗೆ, ಭಾಗೇನೈವ = ಒಂದಂಶದಿಂದಲೇ, ಪ್ರತಿಭಾಸ್ಯಂತಿ=ತೋರುತ್ತವೆ. ಸರ್ವಶಃ=ಸರ್ವಭಾಗಗಳು, ನ=ಅಲ್ಲ. (ತೋರುವುದಿಲ್ಲ.) ಯತಃ=ಯಾವ ಕಾರಣದಿಂದ, ತಾಃ=ಆ ಶ್ರುತಿಗಳು, ಹರಿಣಾ=ಶ್ರೀ ಪರಮಾತ್ಮನಿಂದ, ದೃಷ್ಟಾಃ=ಕಾಣಲ್ಪಟ್ಟವೆಯೋ, ಅಪರೈರ್ಜನೈಃ=ಬೇರೆ ಜನರಿಂದ, ಶ್ರುತಾ ಏವ=ಕೇಳಲ್ಪಟ್ಟವುಗಳೋ, ತೇನ=ಅದುದರಿಂದ, ಪುರಾತನೈಃ=ಮುಂಚಿನವರಿಂದ, ಶ್ರುತಯಃ=ಶ್ರುತಿಗಳು, ದೃಷ್ಟಯಶ್ಚೇತಿ=ದೃಷ್ಟಿಗಳೆಂದೂ, ಉಚ್ಯಂತೇ=ಹೇಳಲ್ಪಡುತ್ತವೆ.

ತಾ ॥ (1) 'ಶ್ರುತಾ ಏವ' ಎಂಬುವಲ್ಲಿದ್ದ ಅವಧಾರಣಕ್ಕೆ ವೇದವನ್ನು ಯಾರೂ ಮಾಡಿದ್ದಲ್ಲವೆಂದು ಹೇಳುವುದೇ ಪ್ರಯೋಜನವು. (2) 'ದೃಷ್ಟಯಶ್ಚ' ಎಂಬುವುದರಿಂದ ದೃಷ್ಟಿಶಬ್ದವಾಚ್ಯತ್ವವೂ ಅಪೌರುಷೇಯತ್ವದಲ್ಲಿ ಯುಕ್ತಿಯು ಎಂದು ಸೂಚಿತವಾಯಿತು. (3) ಕಾಠಕ, ಕಾಲಾಪಕ ಇವು ಮೊದಲಾದ ಸಂಜ್ಞಾವಿಶೇಷಗಳು ಶಾಖಾವಿಶೇಷಗಳಿಗಿವೆ. ಆ ಸಂಜ್ಞೆಗಳು ಅಧ್ಯಯನ ಪ್ರವಚನಗಳು ಮಾತ್ರ ನಿಮಿತ್ತವಾಗಿ ಉಳ್ಳವುಗಳಲ್ಲ. ಅಧ್ಯಯನಮಾಡುವವರೂ, ಉಪದೇಶಕರೂ ಬಹುಮಂದಿ ಇರುತ್ತಾರೆ. ಹಾಗಿದ್ದರೆ ಅವರವರ ಹೆಸರುಗಳಿಂದಲೂ ಶಾಖೆಗಳಿಗೆ ವ್ಯವಹಾರವು ಬರಬೇಕಾಗುವುದು. ಹಾಗಿಲ್ಲವಷ್ಟೆ! ಆದುದರಿಂದ ಕಠಾದಿಗಳು ಮಾಡಿರುವುದರಿಂದಲೇ ಆ ಸಂಜ್ಞಾವಿಶೇಷಗಳೆಂದಂಗೀಕರಿಸಬೇಕೆಂಬುವ ಪೂರ್ವಪಕ್ಷವು, 'ಜನ್ಮಾಂತರೇ ಶ್ರುತಾಸ್ತಾಸ್ತು ವಾಸುದೇವಪ್ರಸಾದತಃ । ಮುನೀನಾಂ ಪ್ರತಿಭಾಸ್ಯಂತಿ' ಎಂಬುವುದರಿಂದ ತಿರಸ್ಕೃತವಾಯಿತು. ಹೇಗೆಂದರೆ — ಅದಿಯಲ್ಲಿ ಸುಪ್ತರಾಗಿ ಮೇಲೆ ಎಚ್ಚತ್ತವಂಗೆ ಹೇಗೆ ಪದಾರ್ಥಗಳ ದರ್ಶನವು ತತ್ಕ್ಷಣವೇ ಆಗುವುದೋ, ಹಾಗೆಯೇ ಕಠ, ಕಲಾಪ ಮೊದಲಾದ ಋಷಿಗಳು ಆ ಜನ್ಮದಲ್ಲಿ ಅವುಗಳನ್ನು ಕೇಳದಿದ್ದಾಗ್ಯೂ ಅತೀತಜನ್ಮಗಳಲ್ಲಿ ಶ್ರವಣಾದಿಗಳನ್ನು ಮಾಡಿರುವುದರಿಂದ ಈಗ ಮನಸ್ಸಿನಿಂದ ಧ್ಯಾನಿಸುವಾಗ ಅವರಿಗೆ ಅವುಗಳು ವಿಷಯೀಕೃತಗಳಾದುವು. ಇದರಿಂದಲೇ ಕಾಠಕ, ಕಾಲಾಪಕ ಇವುಮೊದಲಾದ ಸಂಜ್ಞಾವಿಶೇಷಗಳು ಪ್ರಾಪ್ತಗಳಾದುವು, ಎಂದಂಗೀಕರಿಸಬೇಕು. ಕಠಾದಿಗಳು ಮಾಡಿರುವುದರಿಂದಲೇ ಕಾಠಕ ಮೊದಲಾದ ನಾಮಧೇಯಗಳು ಬಂದದ್ದೆನ್ನುವುದು ಶ್ರುತಿ ಸ್ಮೃತಿಗಳಿಂದ ವಿರುದ್ಧಗಳಾದ ಪ್ರಯುಕ್ತ ಹಾಗೆ ಅಂಗೀಕರಿಸಕೂಡದು ॥ ೬೨ ॥

'ಋಚಸ್ಸಾಮಾನಿ ಜಜ್ಞಿರೇ' ಋಕ್ಕುಗಳೂ, ಸಾಮಗಳೂ ಹುಟ್ಟಿದುವು, ಇವುಮೊದಲಾದ ವಾಕ್ಯಗಳಿಂದ ವೇದಗಳಿಗೆ ಉತ್ಪತ್ತಿಯು ಶ್ರುತವಾದುದರಿಂದ ವೇದಗಳಿಗೆ ಅಪೌರುಷೇಯತ್ವವು ಕೂಡಲಾರದೆಂದರೆ —

ಮೂ ॥ ತದುತ್ಪತ್ತಿವಚಶ್ಚೈವ ಭವೇದ್ವ್ಯಕ್ತಿಮಪೇಕ್ಷ್ಯತು । ಚೇತನಸ್ಯ ಜನಿರ್ಯದ್ವದುಚ್ಯತೇ ಸರ್ವಲೌಕಿಕೈಃ ॥ ೬೩ ॥

ಅ ॥ ತದುತ್ಪತ್ತಿವಚಶ್ಚ=ಆ ಶ್ರುತಿಗಳಿಗೆ ಉತ್ಪತ್ತಿಪ್ರತಿಪಾದಕವಾದ ವಚನವಾದರೂ, ವ್ಯಕ್ತಿಂ ತು=ಅದಿಕಾಲೀನವಾದ ವ್ಯಕ್ತಿಯನ್ನು ಅಪೇಕ್ಷ್ಯೈವ=ಅಪೇಕ್ಷಿಸಿಯೇ, ಭವೇತ್= ಆಗುವುದು. ಸರ್ವಲೌಕಿಕೈಃ=ಸಮಸ್ತ ಲೌಕಿಕರಿಂದಲೂ, ಚೇತನಸ್ಯ=ಜೀವನಿಗೆ, ಜನಿಃ= ಉತ್ಪತ್ತಿಯು, ಯದ್ವತ್=ಹೇಗೆ, (ವ್ಯಕ್ತಿಯನ್ನಪೇಕ್ಷಿಸಿಯೇ) ಉಚ್ಯತೇ=ಹೇಳಲ್ಪಡುತ್ತದೋ, ಹಾಗೆಯೇ (ಪ್ರಕೃತದಲ್ಲಿಯೂ ಅಂಗೀಕರಿಸಬೇಕು) ॥ ೬೩ ॥

'ಶ್ರೀ ಹರಿಯ ಬುದ್ಧಿಯಲ್ಲಿದ್ದುದರಿಂದ' ಎಂಬುವ ಯುಕ್ತಿಯಿಂದ ವೇದಗಳಿಗೆ ನಿತ್ಯತ್ವವನ್ನು ಹೇಳುವುದಾದರೆ ಪುರಾಣಾದಿಗಳೂ ಶ್ರೀ ಹರಿಯ ಬುದ್ಧಿಯಲ್ಲಿರುವುದಾದ್ದರಿಂದ ಅವುಗಳಿಗೂ ನಿತ್ಯತ್ವವನ್ನು ಏಕೆ ಹೇಳಬಾರದು? ಅಂತೂ 'ಶ್ರುತಿರ್ವರ್ಣಾ ನಿತ್ಯಾ ಅನಿತ್ಯಾ ಏವ ಸ್ಮೃತಯಃ' ಎಂಬೀ ವಿಭಾಗವು ಕೂಡಲಾರದು. ಎಂದಾಶಂಕಿಸಿದರೆ —

**ಮೂ ॥ ಪುರಾಣಾನಿ ತದರ್ಥಾನಿ ಸರ್ಗೇ ಸರ್ಗೇಽನ್ಯಥೈವ ತು ।**
**ಕ್ರಿಯಂತೇಽತಸ್ತ್ವನಿತ್ಯಾನಿ ತದರ್ಥಾಃ ಪೂರ್ವಸರ್ಗವತ್ ॥ ೬೪ ॥**

ಅ ॥ ಪುರಾಣಾನಿ=ಪುರಾಣಗಳು, ತದರ್ಥಾನಿ=ವೇದಗಳ ಅರ್ಥಗಳೇ ಅರ್ಥಗಳಾಗಿ (ವಿಷಯಪ್ರಯೋಜನಗಳಾಗಿ) ಉಳ್ಳವುಗಳು, ಸರ್ಗೇ ಸರ್ಗೇ = ಪ್ರತಿಸೃಷ್ಟಿಯಾಗುತ್ತಿರಲು, ಅನ್ಯಥೈವ = ಬೇರೆ ರೀತಿಯಾಗಿಯೇ, ಕ್ರಿಯಂತೇ = ಮಾಡಲ್ಪಡುತ್ತವೆ. (ಪೌರುಷೇಯತ್ವ ಪ್ರಯುಕ್ತವೇ ಅನಿತ್ಯತ್ವವ್ಯಪದೇಶವು, ವಿನಾಶಪ್ರಯುಕ್ತವಲ್ಲ.) ಅತ ಏವ ತು=ಆದುದರಿಂದಲೇ, ಅನಿತ್ಯಾನಿ=ಅನಿತ್ಯಗಳು. ತದರ್ಥಾಃ = ಪುರಾಣಾದಿಗಳ ಅರ್ಥಗಳು, ಪೂರ್ವಸರ್ಗವತ್= ಮೊದಲಿನ ಸೃಷ್ಟಿಯಂತೆ. (ಇರುವುವು.)

ತಾ ॥ (1) ವೇದಾನುಸಾರಿಗಳಾದ ಗ್ರಂಥಗಳಿಗೇನೇ (ಸಾತ್ವಿಕ ಪುರಾಣಗಳಿಗೆ) ಅರ್ಥ ವ್ಯತ್ಯಾಸವಿಲ್ಲವು. ಆದರೆ ಪದಾದಿಗಳ ಕ್ರಮದಲ್ಲಿ ವ್ಯತ್ಯಾಸವದೆ. ವೇದಾನನುಸಾರಿಗಳಾದ ರಾಜಸ ತಾಮಸ ಪುರಾಣಗಳಿಗೆ ಅರ್ಥವ್ಯತ್ಯಾಸವೂ ಉಂಟು. (2) ಹರಿಶ್ಚಂದ್ರ, ಜನಮೇಜಯಾದ್ಯನಿತ್ಯರ ಸಂಬಂಧವಿದ್ದುದರಿಂದ ವೇದಗಳಿಗೆ ಅನಾದಿನಿತ್ಯತ್ವವು ಸಂಭವಿಸಲಾರದು, ಎಂಬುವುದೂ 'ಪುರಾಣಾನಿ ತದರ್ಥಾನಿ' ಎಂಬುವುದರಿಂದಲೇ ತಿರಸ್ಕೃತವಾಯಿತು. ಅಂದರೆ ಹರಿಶ್ಚಂದ್ರ ಜನ ಮೇಜಯಾದಿಗಳೂ ಪ್ರವಾಹತಃ ಅನಾದಿನಿತ್ಯರೇ ಆಗಿರುತ್ತಾರೆ ॥ ೬೪ ॥

'ಋಚಸ್ಸಾಮಾನಿ ಜಜ್ಞಿರೆ' ಇತ್ಯಾದಿ ವಾಕ್ಯಗಳಿಗೆ ವ್ಯಾಖ್ಯಾನ ರೂಪವಾದ ಬ್ರಹ್ಮಾಂಡ ಪುರಾಣದಲ್ಲಿಯೂ ಸೇರಿಕೊಂಡಿರುವ ಬೇರೆ ಪ್ರದೇಶದಲ್ಲಿದ್ದ ವಾಕ್ಯವನ್ನು ಪಠನೆಮಾಡುತ್ತಾರೆ —

**ಮೂ ॥ ವೇದಾನಾಂ ಸೃಷ್ಟಿವಾಕ್ಯಾನಿ ಭವೇಯುರ್ವ್ಯಕ್ತ್ಯಪೇಕ್ಷಯಾ ।**
**ಅವಾಂತರಾಭಿಮಾನಾನಾಂ ದೇವಾನಾಂ ವಾ ವ್ಯಪೇಕ್ಷಯಾ ॥**
**ನಾನಿತ್ಯತ್ವಾತ್ಕಥಂಚಿತ್ತೇಷಾಮನಿತ್ಯತ್ವಂ ಸ್ಥಿರಾತ್ಮನಾಂ ॥**
**ಇತಿ ಬ್ರಹ್ಮಾಂಡೇ ॥ ೬೫ ॥**

ಅ ॥ ವೇದಾನಾಂ=ಋಗಾದಿ ವೇದಗಳಿಗೆ, ಸೃಷ್ಟಿವಾಕ್ಯಾನಿ=ಸೃಷ್ಟಿಪ್ರತಿಪಾದಕಗಳಾದ ವಾಕ್ಯಗಳು, (ಶರೀರೋತ್ಪತ್ತಿಯು ಮುಖ್ಯಾಭಿಮಾನಿಯಾದ ಲಕ್ಷ್ಮೀದೇವಿಗೆ ಇಲ್ಲದಿರುವು ದರಿಂದ) ವ್ಯಕ್ತ್ಯಪೇಕ್ಷಯಾ=ಅಭಿವ್ಯಕ್ತಿಯನ್ನಪೇಕ್ಷಿಸಿ, ಭವೇಯುಃ=ಆಗುವುವು. ಅವಾಂತರಾಭಿ ಮಾನಾನಾಂ = ಅಮುಖ್ಯವಾದ ಅಭಿಮಾನವುಳ್ಳ (ಪರಮೇಶ್ವರಾಧೀನವಾದ ಸ್ವಾಮಿತ್ವವುಳ್ಳ)

ದೇವಾನಾಂ = ದೇವತೆಗಳ, ವ್ಯಪೇಕ್ಷಯಾ = ಶರೀರೋತ್ಪತ್ತಿಯನ್ನಪೇಕ್ಷಿಸಿಕೊಂಡಾಗಲೀ, ಭವೇಯುಃ=ಆಗುವುವು. ಅನಿತ್ಯತ್ವಾತ್ ನ=ನಾಶವಿರುವುದರಿಂದಲ್ಲ. ಸ್ಥಿರಾತ್ಮನಾಂ=ಅನಾದಿ ನಿತ್ಯಗಳೆಂದೇ ಪ್ರಮಿತಗಳಾದ, ತೇಷಾಂ=ಆ ವೇದಗಳಿಗೆ, ಅನಿತ್ಯತ್ವಂ=ನಾಶವು. ಕುತಃ= ಯಾವುದರಿಂದ, ಸ್ಯಾತ್=ಆಗುವುದು. (ಇದರಿಂದ 'ವೇದಾಃ ನಿತ್ಯಾಃ ಸ್ಥಿರಾತ್ಮತ್ವಾತ್' ವೇದಗಳು ನಿತ್ಯಗಳು, ಅನಾದಿನಿತ್ಯಗಳೆಂದು ಪ್ರಮಿತಗಳಾದುದರಿಂದ, ಎಂಬ ಅನುಮಾನವು ಉಕ್ತ ವಾಯಿತು.) ಇತಿ=ಹೀಗೆ, ಬ್ರಹ್ಮಾಂಡೇ=ಬ್ರಹ್ಮಾಂಡಪುರಾಣದಲ್ಲಿದೆ.

ತಾ ॥ ಅಥವಾ ವೇದಗಳಿಗೆ ಸೃಷ್ಟಿಯನ್ನು ಪ್ರತಿಪಾದಿಸುವ ವಾಕ್ಯಗಳು ಅಭಿವ್ಯಕ್ತಿಯನ್ನ ಪೇಕ್ಷಿಸಿಕೊಂಡು ಎಂದಿಷ್ಟೇ ಅಲ್ಲ. ಅಮುಖ್ಯಾಭಿಮಾನಿಗಳಾದ ದೇವತೆಗಳ ಶರೀರೋತ್ಪತ್ತಿ ಯನ್ನು ಅಪೇಕ್ಷಿಸಿಕೊಂಡಾಗಲೀ ಆಗಬಹುದು; ಎಂದು ನರಹರಿತೀರ್ಥರು ಹೇಳುವರು. ಹಿಂದಿನ ವಾಕ್ಯವೂ ಈ ವಾಕ್ಯವೂ ಒಂದೇ ಅರ್ಥದಲ್ಲಿರುವುವು ॥ ೬೫ ॥

**ಮೂ ॥ ನ ಚಾನಿತ್ಯತ್ವೇ ಶ್ರುತಿರ್ವೇದ ಇತ್ಯಾದಿವಿಶೇಷಶಬ್ದ ಉಪಪದ್ಯತೇ ॥ ೬೬ ॥**

ಅ ॥ ಅನಿತ್ಯತ್ವೇ=(ವೇದಗಳಿಗೆ) ಅನಿತ್ಯತ್ವವಿದ್ದರೆ, 'ಶ್ರುತಿಃ, ವೇದಃ' ಇತ್ಯಾದಿ ವಿಶೇಷ, ಶಬ್ದಃ=ಶ್ರುತಿಯು, ವೇದವು, ಆಮ್ನಾಯವು ಇವೇ ಮೊದಲಾದ ಅಸಾಧಾರಣ ಶಬ್ದಗಳು, ನ ಚ ಉಪಪದ್ಯತೇ=ಕೂಡಲಾರವು.

ತಾ ॥ (1) ಶ್ರುತಿಶಬ್ದ ಪ್ರವೃತ್ತಿನಿಮಿತ್ತವಾದ ಶ್ರುತತ್ವವು ಅಂದರೆ, ಶ್ರವಣವಿಷಯ ತ್ವವು ಪೌರುಷೇಯ ಗ್ರಂಥ, ಅಪೌರುಷೇಯ ಗ್ರಂಥ ಉಭಯಸಾಧಾರಣವಾಗಿದ್ದರೂ ಈ ವೇದ ಗಳಿಗೇನೇ; ಶ್ರುತಿ, ವೇದ, ಆಮ್ನಾಯ, ಎಂಬೀ ಶಬ್ದಗಳಿಂದ ವಾಚ್ಯತ್ವವು ಯಾವುದೊಂದ ದೆಯೋ, ಅದು ಅನಾದಿನಿತ್ಯತ್ವವನ್ನು, ಅಂದರೆ ಅಪೌರುಷೇಯತ್ವವನ್ನೂ ನಿತ್ಯತ್ವವನ್ನೂ, ಹೊರತು ಕೂಡದಿರುವುದಾಗಿ ಅನಾದಿನಿತ್ಯತ್ವವನ್ನೇ ಪ್ರಾಪಿಸಿಕೊಡುತ್ತದೆ. (2) 'ಅತಃ ಶ್ರುತಿತ್ವ ಮೇತಾಸಾಂ' ಎನ್ನುವುದರಿಂದ ಶ್ರುತಿಶಬ್ದವು ಅಪೌರುಷೇಯತ್ವರೂಪವಾದ ಅನಾದಿತ್ವವನ್ನು ತೋರಿಸಿಕೊಡುತ್ತದೆಂದು ಉಕ್ತವಾಗಿದೆ. (3) ವೇದಶಬ್ದವು, ಸತ್ತಾರ್ಥಕವಾದ 'ವಿಧ' ಧಾತುವಿಗೆ ಕರ್ತ್ರರ್ಥದಲ್ಲಿ 'ನಂದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ' ಎಂಬುವ ಸೂತ್ರದಿಂದ 'ಅಚ್' ಪ್ರತ್ಯಯ ಬಂದು ಚಕಾರಕ್ಕೆ ಲೋಪವಾಗಿ ವಿದ್, ಅ, ಎಂದಿರಲು 'ವಿ' ಎನ್ನುವಲ್ಲಿದ್ದ ಇಕಾರಕ್ಕೆ 'ಏ' ಎನ್ನುವ ಗುಣವನ್ನು ಮಾಡಿದರೆ 'ವೇದ' ಎಂಬ ಶಬ್ದವು ಸಿದ್ಧಿಸುವುದು. 'ಸತ್ತಾ'(ಸ್ಥಿತಿ)ಎನ್ನುವುದು ಸರ್ವವಸ್ತುಗಳಲ್ಲಿಯೂ ಸಾಧಾರಣವಾಗಿದ್ದರೂ 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಎಂಬುವ ನ್ಯಾಯದಿಂದ ನಿತ್ಯದಲ್ಲಿಯೂ ಒಂದೇರೀತಿಯಾಗಿ ಇರುವುದೆಂದೇ ಅರ್ಥವು ಸಿಗುವುದು. (4) ಆಮ್ನಾಯಶಬ್ದವು 'ಆಙ್‌ಪೂರ್ವಕವಾದ ಮ್ನಾ ಅಭ್ಯಾಸ್ಯೇ' ಎನ್ನುವ ಧಾತುವಿಗೆ ಕರ್ಮಾರ್ಥ ದಲ್ಲಿ 'ಘಙ್' ಪ್ರತ್ಯಯಮಾಡಿ 'ಯುಕ್' ಎಂದು ಆಗಮವಾದರೆ ಅಂದರೆ ಪ್ರತ್ಯಯದ ಆದಿಗೆ ಸೇರಿದರೆ(ಆ, ಮ್ನಾ, ಯ್, ಅ,)'ಆಮ್ನಾಯ' ಎಂಬ ರೂಪವು ಸಿದ್ಧವಾಗುವುದು. ಆಮ್ನಾಯತೇ ಅಭ್ಯಸ್ಯತೇ ಇತಿ ಆಮ್ನಾಯಃ, ಅಭ್ಯಾಸವೆಂದರೆ ಏಕಪ್ರಕಾರವಾದ ಅನೇಕಾವರ್ತಿಯಾದ ಗಚನವು (ಅಂದರೆ ಒಂದೇರೀತಿಯಾಗಿ ಅನೇಕಾವರ್ತಿ ಹೇಳುವಿಕೆ.) ಅಂತಹ ಅಭ್ಯಾಸಕರ್ಮ ತ್ವವು ಲೌಕಿಕಶಬ್ದಗಳಲ್ಲಿಯೂ ಇದೆ. ಆದುದರಿಂದ ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿರುವ ಸರ್ವ ಪುರುಷರಿಂದಲೂ ಒಂದೇ ಪ್ರಕಾರದಿಂದ ಅಭ್ಯಾಸಮಾಡಲ್ಪಡತಕ್ಕ ಈ ವೇದಗಳು ಅನಾದಿ ನಿತ್ಯಗಳೆಂದು ಸಿದ್ಧಗಳಾಗುತ್ತವೆ ॥ ೬೬ ॥

ಶ್ರುತ್ಯಾದಿಶಬ್ದಗಳಿಗೆ ಇದೇ ನಿರ್ವಚನವಾಗಿದ್ದು ಇದೇ ಅಸಾಧಾರಣವಾದ ಅರ್ಥದಲ್ಲಿ ನಿಮಿತ್ತವಾಗಿದ್ದರೆ ನೀವು ಹೇಳಿದ್ದು ಉಪಪನ್ನವಾಗಬಹುದು. ಆದರೆ ಪ್ರಲಯಪರ್ಯಂತ ಇರುವಿಕೆಯೇ ಮೊದಲಾದ ಬೇರೆ ನಿಮಿತ್ತಗಳೂ ಕೂಡಬಹುದೆಂದರೆ — ಅಹುದು. ಆದರೂ ಪುರಾಣೋಕ್ತವಾದ ಈ ಅರ್ಥವೇ ವಿಶ್ವಾಸಾರ್ಹವಾಗಿರುತ್ತದೆ. ಎಂಬ ಅಭಿಪ್ರಾಯದಿಂದ ಪುರಾಣವಾಕ್ಯವನ್ನುದಾಹರಿಸುತ್ತಾರೆ.

ಮೂ ॥ ವೇದಾಸ್ತೇ ನಿತ್ಯವಿನ್ನತ್ವಾ ಚ್ಛ್ರುತಯಶ್ಚಾಖಿಲೈಃ ಶ್ರುತೇಃ ।
ಆಮ್ನಾಯೋಽನನ್ಯಥಾಪಾಠಾದೀಶಬುದ್ಧಿಸ್ಥಿತಾಃ ಸದಾ ॥
ಇತಿ ಮಹಾವಾರಾಹೇ ॥ ೬೭ ॥

ಅ ॥ ತೇ=ಪ್ರಸಿದ್ಧಗಳಾದ, 'ಅಗ್ನಿಮೀಳೇ' ಇತ್ಯಾದಿ ವಾಕ್ಯವಿಶೇಷಗಳು, ನಿತ್ಯವಿನ್ನತ್ವಾತ್=ಸರ್ವದಾ ಇದ್ದುದರಿಂದ. ವೇದಾಃ = ವೇದಗಳು, (ಎನ್ನಿಸಿಕೊಳ್ಳುತ್ತವೆ.) ಅಖಿಲೈಃ = ಸರ್ವರಿಂದಲೂ, ಶ್ರುತೇಃ=ಶ್ರುತವಾಗುವಪ್ರಯುಕ್ತವೇ, ಶ್ರುತಯಶ್ಚ=ಶ್ರುತಿಗಳು, (ಎನ್ನಿಸಿಕೊಳ್ಳುತ್ತವೆ.) ಅಖಿಲೈಃ=ಸರ್ವರಿಂದಲೂ, ಅನನ್ಯಥಾಪಾಠಾತ್=ಒಂದೇ ಪ್ರಕಾರವಾಗಿ ಅಭ್ಯಾಸಮಾಡಲ್ಪಡುವುದರಿಂದ, ಆಮ್ನಾಯಃ=ಆಮ್ನಾಯವೆಂದೂ ಹೇಳಿಸಿಕೊಳ್ಳುತ್ತವೆ. ಸದಾ=ಯಾವಾಗಲೂ, (ಪ್ರಲಯಕಾಲದಲ್ಲಿಯೂ ಸಹ.) ಈಶಬುದ್ಧಿಸ್ಥಿತಾಃ=ಶ್ರೀಪರಮಾತ್ಮನ ಬುದ್ಧಿಯಲ್ಲಿರುವವುಗಳು. (ಅಂತೂ ಪ್ರಲಯಕಾಲದಲ್ಲಿ ಸಹ ನಾಶವಿಲ್ಲದವುಗಳು.) ಇತಿ=ಹೀಗೆ, ಮಹಾವಾರಾಹೇ=ಮಹಾವರಾಹಪುರಾಣದಲ್ಲಿ (ಹೇಳಿಯದೆ.) ॥ ೬೭ ॥

'ಯತಸ್ತಾ ಹರಿಣಾ ದೃಷ್ಟಾಃ' ಎಂಬುವುದರಿಂದ ಸೂಚಿತವಾದ ಯುಕ್ತಿಯನ್ನು ವಿವರಣ ಮಾಡುತ್ತಾರೆ.

ಮೂ ॥ ನ ಚ ನಿತ್ಯತ್ವಂ ವಿನಾ ವೇದಾನಾಂ ದರ್ಶನವ್ಯವಹಾರೋ ಯುಜ್ಯತೇ ॥ ೬೮ ॥

ಅ ॥ ವೇದಾನಾಂ=ವೇದಗಳಿಗೆ, ನಿತ್ಯತ್ವಂ ವಿನಾ=ಅನಾದಿನಿತ್ಯತ್ವವನ್ನು ಹೊರತು, ದರ್ಶನವ್ಯವಹಾರಃ=ನೋಡುವಿಕೆ ಎಂಬ ವ್ಯವಹಾರವು, (ಆ ಋಷಿಗಳು ಆ ಮಂತ್ರವನ್ನು ಪ್ರತ್ಯಕ್ಷೀಕರಿಸಿಕೊಂಡರು. ಇದು ಮೊದಲಾದ ವ್ಯವಹಾರಗಳು) ನ ಯುಜ್ಯತೇ=ಕೂಡುವುದಿಲ್ಲ.

ತಾ ॥ (1) 'ಸ ಇಮಂ ಮಂತ್ರಮಪಶ್ಯತ್' ಇತ್ಯಾದಿ ಶ್ರುತಿಗಳಲ್ಲಿ ಈಶ್ವರಾದಿಗಳು ವೇದವನ್ನು ಪ್ರತ್ಯಕ್ಷೀಕರಿಸಿದರೆಂದು ಮಾತ್ರ ತೋರುತ್ತದೆ. ಪ್ರತ್ಯಕ್ಷೀಕರಣವು ಪೂರ್ವದಲ್ಲಿದ್ದುದಕ್ಕೇನೇ ಸಂಗತವಾಗುತ್ತದೆ. ಯಾರು ಯಾವುದನ್ನು ಮಾಡುತಾನೋ, ಆತನು ಅದನ್ನು ನೋಡುತ್ತಾನೆ ಎಂದು ಹೇಳಲಿಕ್ಕೆ ಬರುವುದಿಲ್ಲ. ಆದುದರಿಂದ ಪ್ರತ್ಯಕ್ಷೀಕರಣವು ಅನ್ಯಥಾನುಪಪನ್ನವಾದುದರಿಂದ (ಸರ್ವಥಾ ಬೇರೆ ರೀತಿಕೂಡದಿರುವುದರಿಂದಲೂ) ಅದು ವೇದಕ್ಕೆ ಅನಾದಿನಿತ್ಯತ್ವವನ್ನೇ ಸಾಧಿಸುತ್ತದೆ ॥ ೬೮ ॥

ಸದಾ ವಿದ್ಯಮಾನತ್ವ (ಇರುವಿಕೆ) ಶ್ರುತತ್ವಾದಿಗಳು ಇರಲಿ, ಚಿಂತಿಲ್ಲ. ಆದರೂ ಅವುಗಳು ಪ್ರಲಯಪರ್ಯಂತವಾಗಿಯೇ. ಅಷ್ಟರಿಂದಲೂ ಅಸಾಧಾರಣೋಕ್ತಿಯು ಸಂಭವಿಸಬಹುದು. ಆದುದರಿಂದ ವೇದಗಳು ಪ್ರಲಯಕಾಲದಲ್ಲಿ ನಾಶಹೊಂದುತ್ತವೆ. ಸೃಷ್ಟಿಕಾಲದಲ್ಲಿ ಪುನಃ ಬೇರೆ ಹುಟ್ಟುತ್ತವೆ. ಹೀಗೆ ಅಂಗೀಕರಿಸಿದರೆ ಯಾವ ವಿರೋಧವೂ ಇಲ್ಲ ಎಂದು ಶಂಕಿಸಿದರೆ—

ಮೂ ॥ ನ ಚ ವರ್ಣಪದಾದೀನಾಮನಿತ್ಯತ್ವಂ ವಕ್ತುಂ ಯುಕ್ತಂ ॥ ೬೯ ॥

ಅ ॥ ವರ್ಣಪದಾದೀನಾಂ=ವರ್ಣಗಳಿಗೂ, ಪದಗಳಿಗೂ, ವಾಕ್ಯಗಳಿಗೂ, ಅನಿತ್ಯತ್ವಂ=(ಪ್ರಲಯದಲ್ಲಿ) ನಾಶವನ್ನೂ(ಸೃಷ್ಟಿಕಾಲದಲ್ಲಿ ಉತ್ಪತ್ತಿಯನ್ನೂ,) ವಕ್ತುಂ=ಹೇಳಲಿಕ್ಕೆ, ನ ಚ ಯುಕ್ತಂ=ಯೋಗ್ಯವಾಗಲಾರದು.

ತಾ ॥ (1) 'ವರ್ಣಾದೀನಾಂ' ಎನ್ನುವುದರಿಂದಲೇ ಪದಾದಿಗಳಿಗೂ ನಿತ್ಯತ್ವವು ಸಿದ್ಧಿಸುವಾಗ ಪುನಃ 'ಪದಾದಿ' ಎಂದು ಹೇಳಿರುವುದೇಕೆಂದರೆ— ವರ್ಣಗಳಿಗೆ ನಿರ್ವಿಕಾರತ್ವಾಭಾವರೂಪವಾದ ವಿಕಾರಿತ್ವವೇ ಅನಿತ್ಯತ್ವವು, ಪದವಾಕ್ಯಗಳಿಗೆ ಕ್ರಮಾದಿವ್ಯತ್ಯಾಸವೇ ಅನಿತ್ಯತ್ವವು, ಎಂದು ಸೂಚಿಸುವುದಕ್ಕಾಗಿ (2) 'ನಿತ್ಯಾಃ ವೇದಾಃ' ಎಂದು ಹೇಳಿಯೂ 'ಸಮಸ್ತಾಶ್ಚ ಶಾಶ್ವತಾಃ' ಎಂದು ಹೇಳಿರುವುದೇಕೆಂದರೆ— ವರ್ಣಗಳಿಗೂ ಪದವಾಕ್ಯಗಳಿಗೂ ನಿತ್ಯತ್ವವು ಬೇರೆ ಬೇರೆ ವಿಧವೆಂದು ಸೂಚಿಸಿರುವ ಕಾರಣ ರೀತ್ಯಂತರವಾದ ವ್ಯಾಖ್ಯಾನಾಭಿಪ್ರಾಯದಿಂದ ಹೇಗೆಂದರೆ— ವರ್ಣಗಳು ಮಾತ್ರ (ನಿರ್ವಿಕಾರರೂಪಗಳಾದ) ಶಾಶ್ವತಗಳಲ್ಲ. ಪದ ವಾಕ್ಯಗಳು ಮಾತ್ರ (ಕ್ರಮವ್ಯತ್ಯಾಸಾಭಾವರೂಪಗಳಾದ) ಶಾಶ್ವತಗಳಲ್ಲ. ಎಲ್ಲವೂ ಯಥಾಯೋಗ್ಯವಾಗಿ ಶಾಶ್ವತಗಳು. ಸೃಷ್ಟಿಕಾಲದಲ್ಲಿ ಹುಟ್ಟುವುದೂ ಇಲ್ಲ. ಪ್ರಲಯಕಾಲದಲ್ಲಿ ನಾಶವನ್ನು ಹೊಂದುವುದೂ ಇಲ್ಲ. ಅಂತೂ ವರ್ಣ ಪದಾದಿಗಳಲ್ಲಿ ಅನುಗತವಾಗಿರುವ ಶಾಶ್ವತತ್ವವು ಸೃಷ್ಟಿಪ್ರಲಯಗಳಲ್ಲಿಯೂ ಉತ್ಪತ್ತಿ ವಿನಾಶಗಳಿಲ್ಲದೆ ಏಕರೀತಿಯಾಗಿರುವುದು ॥ ೬೯ ॥

ವರ್ಣಾದಿಗಳಿಗೆ ಅನಿತ್ಯತ್ವವು ಏತಕ್ಕೆ ಕೂಡುವುದಿಲ್ಲವೆಂದರೆ —

ಮೂ ॥ ಸರ್ವಜ್ಞತ್ವಾದೀಶ್ವರಸ್ಯ ತದ್ಬುದ್ಧೌ ಸರ್ವದಾ ಪ್ರತೀಯಮಾನತ್ವಾತ್ ॥ ೭೦ ॥

ಅ ॥ ಈಶ್ವರಸ್ಯ=ಪರಮಾತ್ಮನಿಗೆ, ಸರ್ವಜ್ಞತ್ವಾತ್=ಸಾರ್ವಜ್ಞ್ಯವಿದ್ದುದರಿಂದಲೂ, ತದ್ಬುದ್ಧೌ=ಈಶ್ವರನ ಮನಸ್ಸಿನಲ್ಲಿ, ಸರ್ವದಾ=ಪ್ರಲಯಕಾಲದಲ್ಲಿಯೂ, ಪ್ರತೀಯಮಾನತ್ವಾತ್= ಪ್ರತೀತಿಗೆ ವಿಷಯವಾದುದರಿಂದಲೂ. (ತೋರುವುದರಿಂದಲೂ, ವರ್ಣಾದಿಗಳು ನಿತ್ಯಗಳು.)

ತಾ ॥ (1) ಇದರಿಂದ, 'ವೇದಾಃ ನಾನಿತ್ಯಾಃ ಈಶ್ವರಬುದ್ಧೌ ಸರ್ವದಾ ಪ್ರತೀಯಮಾನತ್ವಾತ್ ಅವ್ಯಾಕೃತಾಕಾಶವತ್'=ವೇದಗಳು ಅನಿತ್ಯಗಳಲ್ಲ. ಈಶ್ವರನ ಮನಸ್ಸಿನಲ್ಲಿ ಸರ್ವದಾ ತೋರಿಕೊಂಡಿರುವುದರಿಂದ, ಅವ್ಯಾಕೃತವಾದ ಆಕಾಶದಂತೆ ಎಂಬುವ ಅನುಮಾನವು ಉಕ್ತವಾಯಿತು. (2) ಈಶ್ವರನ ಮನಸ್ಸಿನಲ್ಲಿ ಸರ್ವದಾ ಪ್ರತೀಯಮಾನತ್ವವೆಂದರೆ, ಈಶ್ವರನು ಸರ್ವದಾ ಈಗ ಉಂಟೆಂದನುಭವಿಸುವನೆಂದು ಅರ್ಥವು. ಅದೇ ಹಿಂದೆ ಹೇಳಿದ ಅರ್ಥವನ್ನು ಸಾಧಿಸಿಕೊಡುತ್ತದೆ. ಸರ್ವದಾ ಈಗ ಉಂಟೆಂದನುಭವಿಸಿಕೊಂಡಿರುತ್ತಾನೆ ಎನ್ನುವುದು ಸಿದ್ಧವಾಗಲಿಲ್ಲ. ಏಕೆಂದರೆ— (೧) 'ವಿಷ್ಣು ಬುದ್ಧಿಗಾಃ' 'ಈಶ ಬುದ್ಧಿಸ್ಥಿತಾಃ ಸದಾ' ಎಂಬುವ ಪುರಾಣವಾಕ್ಯಗಳಿಂದಾಗಲೀ ಸಿದ್ಧಿಸುತ್ತದೆಂದು ಹೇಳಬೇಕು. ಅಥವಾ (೨) 'ವೇದಾಃ ಈಶ್ವರೇಣ ಸರ್ವದಾ ವರ್ತಮಾನತಯಾ ಅನುಭೂಯಂತೇ ತಸ್ಯ ಸರ್ವಜ್ಞತ್ವಾತ್' ವೇದಗಳು ಪರಮಾತ್ಮನಿಂದ ಸರ್ವದಾ ಈಗ ಉಂಟೆಂದನುಭವಿಸಲ್ಪಡುತ್ತವೆ. ಈಶ್ವರನು ಸರ್ವಜ್ಞನಾದುದರಿಂದೆಂಬುವ ಯುಕ್ತಿಯಿಂದ ಸಿದ್ಧಿಸುತ್ತದೆ ಎಂದಾಗಲೀ ಹೇಳಬೇಕು. ಇವುಗಳಲ್ಲಿ (೧) ನೇದ್ದು ಕೂಡಲಾರದು. ಏಕೆಂದರೆ ಆ ಎರಡು ಪುರಾಣ ವಾಕ್ಯಗಳಿಗೂ ಈ ಅರ್ಥವನ್ನು ಇಟ್ಟುಕೊಳ್ಳದೆ ಬೇರೆ ರೀತಿಯಾಗಿ ಅರ್ಥವನ್ನು ಇಟ್ಟುಕೊಂಡರೂ ಅವುಗಳು ಉಪಪನ್ನಗಳಾಗುತ್ತವೆ.

ಹೇಗೆಂದರೆ– ಪ್ರಳಯಕಾಲಲ್ಲಿ ವೇದಗಳು ನಷ್ಟಗಳಾಗುವುವಾದರೂ ವೇದಗಳ ಅನುಭವದಿಂದುಂಟಾಗುವ ಸಂಸ್ಕಾರವು ಬುದ್ಧಿಯಲ್ಲಿದ್ದುದರಿಂದಲೇ 'ಬುದ್ಧಿಗಾಃ' ಎಂಬುವ ವಚನವು, ಹೀಗೆ ಸಂಭವಿಸುತ್ತದೆಂದು ಹೇಳಿದರೆ ಲಾಕ್ಷಣಿಕವೆಂದಂಗೀಕರಿಸಬೇಕಾಗುತ್ತದೆ ಎಂದರೆ, ಸಿದ್ಧಾಂತಿಗಳೂ 'ವೇದಸ್ಯ ನಿತ್ಯತ್ವಂ' ಎಂಬುವುದಕ್ಕೆ ವೇದಾನುಭವವು ನಿತ್ಯವೆಂದೂ 'ವೇದಸ್ಯ ಮನೋಗತತ್ವಂ' ಎಂಬುವುದಕ್ಕೆ ವೇದಾನುಭವವು ಈಶ್ವರನ ಮನಸ್ಸಿನಲ್ಲಿರುತ್ತದೆಂದೂ ಒಡಂಬಡಬೇಕು. ಹೀಗೆ ಅಂಗೀಕರಿಸಿದರೆ ಸಿದ್ಧಾಂತಿಗಳಿಗೂ ಲಾಕ್ಷಣಿಕಪ್ರಯೋಗವೆನ್ನುವುದು ಸಮಾನವೇ ಆಗಿರುತ್ತದೆ. ಲಕ್ಷಣಾ ಪ್ರಸಂಗರೂಪವಾದ ದೋಷವು ಇಬ್ಬರಿಗೂ ಸಮಾನವೇ. ಮತ್ತು ನಾವು (ಪೂರ್ವ ಪಕ್ಷಿಗಳು) ಹೇಳಿದ ಅರ್ಥವನ್ನಂಗೀಕರಿಸಿದರೆ 'ಋಚಃ ಸಾಮಾನಿ ಜಜ್ಞಿರೇ' ಇತ್ಯಾದಿ ವಾಕ್ಯಗಳಿಗೂ ಮುಖ್ಯವಾದ ಅರ್ಥವನ್ನೇ ಅಂಗೀಕರಿಸಿದಂತೆ ಆಯಿತು. ಅಂತೂ ೧ನೇ ಕಲ್ಪವು ಕೂಡಲಾರದು. (೨) ನೇದ್ದೂ ಕೂಡಲಾರದು. ಏಕೆಂದರೆ— ಈಶ್ವರನು ಸರ್ವಜ್ಞನಾದುದರಿಂದ ನಷ್ಟಗಳಾದ ಘಟಾದಿಗಳಿಗೂ ಸರ್ವದಾ ವರ್ತಮಾನಕಾಲವೃತ್ತಿಗಳೆಂದು ಅನುಭೂಯಮಾನತ್ವವು ಸಿದ್ಧವಾಗಿ ನಿತ್ಯತ್ವವು ಇರಬೇಕಾಗುವುದು. ಇರತಕ್ಕ ಪದಾರ್ಥಗಳನ್ನನುಭವಿಸದಿದ್ದರೆ ಸಾರ್ವಜ್ಞ್ಯವು ಇಲ್ಲವೆಂದಾಗುವುದು. ನಷ್ಟಗಳಾದ ಘಟಾದಿಗಳನ್ನು ಈಶ್ವರನು ಈಗ ಉಂಟೆಂದನುಭವಿಸುತ್ತಾನೆಂದರೆ, ಭ್ರಾಂತನಾಗಬೇಕಾಗುವನು. ಆದುದರಿಂದ ನಷ್ಟಗಳಾದ ಘಟಾದಿಗಳನ್ನತೀತಗಳೆಂದೇ ಅನುಭವಿಸುತ್ತಾನೆ, ಈಗ ಉಂಟೆಂದನುಭವಿಸುವುದಿಲ್ಲ. ಇದ್ದ ಪದಾರ್ಥಗಳನ್ನನುಭವಿಸದಿದ್ದರೆ ಮಾತ್ರ ಸಾರ್ವಜ್ಞ್ಯಕ್ಕೆ ಭಂಗವು ಬರುವುದು. ಹೀಗೆ ಸಿದ್ಧವಾದುದರಿಂದ ನಷ್ಟಗಳಾದ ಘಟಾದಿಗಳನ್ನು ಈಗ ಉಂಟೆಂದನುಭವಿಸಿದರೆ ಅದು ಅನಿಷ್ಟವಾದುದರಿಂದ ಹೀಗೆ ಆಪಾದಿಸಿದ್ದು ಯುಕ್ತವೇ ಸರಿ. (೩) ಅಂತೂ ಈಶ್ವರನು ಸರ್ವದಾ ಈಗ ಇರತಕ್ಕುದೆಂದೇ ಅನುಭವಿಸುತ್ತಾ ಇರುತ್ತಾನೆ. ಎನ್ನುವುದು ಪುರಾಣವಾಕ್ಯಗಳಿಂದಾಗಲೀ, ಸರ್ವಜ್ಞ್ಯತ್ವ ಯುಕ್ತಿಯಿಂದಾಗಲೀ ಸಿದ್ಧಿಸುವುದಿಲ್ಲವೆಂದಾಶಂಕಿಸಿದರೆ, ಇವುಗಳಲ್ಲಿ ೧ನೇ ಕಲ್ಪವನ್ನು (ಪುರಾಣ ವಾಕ್ಯಗಳಿಂದ ಸಿದ್ಧಿಸುತ್ತದೆ ಎನ್ನುವುದನ್ನು) ಅಂಗೀಕರಿಸುವೆವು. ಯಾವ ದೋಷವೂ ಬರುವುದಿಲ್ಲ ॥ ೨೦ ॥

ಪುರಾಣವಾಕ್ಯಗಳಿಗೆ ಬೇರೆ ರೀತಿಯಾಗಿಯೂ ಅರ್ಥವು ಸಿದ್ಧಿಸಬಹುದೆಂದು ಹೇಳಿದ್ದೇವೆ. ಎಂದರೆ —

**ಮೂ ॥ ನ ಚ ಘಟಾದಿವತ್ಸಂಸ್ಕಾರಮಾತ್ರತ್ವಂ ವಕ್ತುಂ ಯುಕ್ತಂ ॥**
**ಪ್ರತ್ಯಭಿಜ್ಞಾವಿರೋಧಸ್ಯೋಕ್ತತ್ವಾತ್ ॥ ೨೧ ॥**

ಅ ॥ ಘಟಾದಿವತ್=ಘಟಾದಿಗಳಂತೆ, ಸಂಸ್ಕಾರಮಾತ್ರತ್ವಂ=ವೇದಗಳಿಗೂ ಕೇವಲ ಸಂಸ್ಕಾರತ್ವವನ್ನು, (ಅಂದರೆ ವೇದಗಳ ಜ್ಞಾನದಿಂದುಂಟಾದ ಸಂಸ್ಕಾರವು ಬುದ್ಧಿಯಲ್ಲಿ ದೃಢವಾಗಿದೆ ಎಂದಿಷ್ಟುಮಾತ್ರ) ವಕ್ತುಂ= (ಪುರಾಣವಾಕ್ಯಗಳಿಗೆ ಅರ್ಥವೆಂದು) ಹೇಳಲಿಕ್ಕೆ, ನ ಚ ಯುಕ್ತಂ=ಕೂಡಲಾರದು. ಪ್ರತ್ಯಭಿಜ್ಞಾವಿರೋಧಸ್ಯ='ಸರ್ಗೇ ಸರ್ಗೇ ಅಮುನಾ ಉದ್ಗೀರ್ಯಂತೇ' ಎಂದು ಹೇಳಿದ ಪ್ರತ್ಯಭಿಜ್ಞೆಯಿಂದ ವಿರೋಧವು, ಉಕ್ತತ್ವಾತ್ = ಹೇಳಲ್ಪಟ್ಟಪ್ರಯುಕ್ತ, (ಅಂದರೆ 'ತದೇವೇದಂ ವಚನಂ' ಎಂಬೀ ಪ್ರತ್ಯಭಿಜ್ಞೆಯಿಂದ ವಿರೋಧವನ್ನು ಹೇಳಿದ್ದರೂ ಈ ಪ್ರತ್ಯಭಿಜ್ಞೆಯಿಂದ ವಿರೋಧವನ್ನು ಹೇಳದಿರುವುದರಿಂದ 'ಉಕ್ತತ್ವಾತ್' ಎಂದು ಹೇಳಿದ್ದು ಹೇಗೆ ಕೂಡಬಹುದೆಂದರೆ– 'ಸರ್ಗೇ ಸರ್ಗೇಽಮುನೈವೇತೆ' ಎಂಬೀ ವಾಕ್ಯವನ್ನು ಯಾವಾಗ ಉದಾಹರಿಸಿರುವರೋ ಆಗಲೇ ಪ್ರತ್ಯಭಿಜ್ಞೆಯಿಂದ ವಿರೋಧವನ್ನು ಹೇಳಿದಂತಾಯಿತು.)

ತಾ || (1) ಘಟವು ನಷ್ಟವಾದರೂ ಘಟದ ಜ್ಞಾನದಿಂದುಂಟಾದ ಸಂಸ್ಕಾರವು ದೇವದತ್ತನ ಬುದ್ಧಿಯಲ್ಲಿದ್ದುದರಿಂದ ಘಟವು ದೇವದತ್ತನ ಬುದ್ಧಿಯಲ್ಲಿದೆ ಎಂದು ಹೇಗೆ ವ್ಯವಹಾರವದೆಯೋ, ಹಾಗೆಯೇ ವೇದಗಳು ನಷ್ಟಗಳಾದರೂ ಅವುಗಳ ಜ್ಞಾನದಿಂದುಂಟಾದ ಸಂಸ್ಕಾರವು ಈಶ್ವರನ ಬುದ್ಧಿಯಲ್ಲಿದ್ದುದರಿಂದ 'ಬುದ್ಧಿಗಾಃ' ಇತ್ಯಾದಿ ಪುರಾಣವಾಕ್ಯಗಳು ಸಂಗತಗಳಾಗಬಹುದೆಂದರೆ, ಹೀಗೆ ಪುರಾಣವಾಕ್ಯಗಳಿಗೆ ಅರ್ಥವೆಂದು ಹೇಳುವುದು ಯುಕ್ತವಲ್ಲ. ಮತ್ತೆ ಈಶ್ವರನು ಸರ್ವದಾ ಸ್ವರೂಪತಃ ವರ್ತಮಾನಕಾಲದಲ್ಲಿರುವವುಗಳನ್ನಾಗಿ ಅನುಭವಿಸುತ್ತಾನೆಂದೇ ಹೇಳಬೇಕು. ಹೀಗೆ ಹೇಳದಿದ್ದರೆ ಪ್ರತ್ಯಭಿಜ್ಞೆಯಿಂದ ವಿರೋಧವು ಬರುವುದು. ವೇದಗಳು ಪ್ರಲಯಕಾಲದಲ್ಲಿ ವಿನಷ್ಟಗಳಾಗಿ ಅವುಗಳ ಸಂಸ್ಕಾರಮಾತ್ರ ಶ್ರೀಹರಿಯ ಬುದ್ಧಿಯಲ್ಲಿದೆ ಎಂದು 'ವಿಷ್ಣುಬುದ್ಧಿಗಾಃ' ಎನ್ನುವುದಕ್ಕೆ ಅರ್ಥವಾದರೆ ಉತ್ತರವಾಕ್ಯದಲ್ಲಿ ('ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ' ಎನ್ನುವುದರಿಂದ, ಉತ್ತರದಲ್ಲಿರುವ 'ಸರ್ಗೇ ಸರ್ಗೇಽಮುನೈವೇತ ಉದ್ಗೀರ್ಯಂತೇ ತಥೈವ ಚ' ಇದುಮೊದಲಾದ ವಾಕ್ಯಗಳಲ್ಲಿ) ಪೂರ್ವಕಲ್ಪದಲ್ಲಿದ್ದವುಗಳೇ ಪ್ರತಿಸೃಷ್ಟಿಯಾಗುತ್ತಿರಲು ಶ್ರೀ ಹರಿಯಿಂದ ಉಚ್ಚರಿಸಲ್ಪಡುತ್ತವೆ, ಎಂದು ಹೇಳಿದ ಪ್ರತ್ಯಭಿಜ್ಞೆಯಿಂದ ವಿರೋಧವು ಬರುವುದು (2) ಪೂರ್ವಕಲ್ಪದಲ್ಲಿ ಉಚ್ಚರಿಸಲ್ಪಟ್ಟ ವೇದಸದೃಶಗಳೇ ಆದ ವೇದಗಳು ಈ ಕಲ್ಪದಲ್ಲಿ ಶ್ರೀಹರಿಯಿಂದ ಉಚ್ಚರಿಸಲ್ಪಡುತ್ತವೆ ಎಂದಂಗೀಕರಿಸಿದರೆ ಅಪೌರುಷೇಯತ್ವವು ಸಿದ್ಧಿಸಲಾರದು. (3) ಮತ್ತು ಪ್ರತ್ಯಭಿಜ್ಞೆಗೆ ಭ್ರಾಂತಿತ್ವವನ್ನಂಗೀಕರಿಸಿ ಪ್ರಲಯಕಾಲದಲ್ಲಿ ವೇದಗಳಿಗೆ ನಾಶವು, ಸೃಷ್ಟಿಕಾಲದಲ್ಲಿ ಪುನಃ ಉತ್ಪತ್ತಿಯೆಂದಂಗೀಕರಿಸಿದರೆ ವೇದಗಳಿಗೆ ಉತ್ಪತ್ತಿಯನ್ನು ಪ್ರತಿಪಾದನೆಮಾಡುವ 'ಋಚಃ ಸಾಮಾನಿ ಜಜ್ಞಿರೆ' ಇತ್ಯಾದಿ ವಾಕ್ಯಗಳಿಗೆ 'ವೇದಾನಾಂ ಸೃಷ್ಟಿವಾಕ್ಯಾನಿ' (ವೇದಗಳಿಗೆ ಸೃಷ್ಟಿಪ್ರತಿಪಾದಕವಾಕ್ಯಗಳು ಅಭಿವ್ಯಕ್ತಿಯನ್ನಪೇಕ್ಷಿಸಿಕೊಂಡು) ಇತ್ಯಾದಿಗಳಿಂದ ಗತಿಯನ್ನು ಹೇಳಿದ್ದು ವಿರುದ್ಧವಾಗಬೇಕಾಯಿತು. (4) ಹೀಗಾದರೆ 'ಸರ್ವಜ್ಞತ್ವಾದೀಶ್ವರಸ್ಯ' = (ಮೂ. ೬೯) ಈಶ್ವರನು ಸರ್ವಜ್ಞನಾದುದರಿಂದ ಅವನ ಬುದ್ಧಿಗೆ ಯಾವಾಗಲೂ ತೋರುತ್ತದೆ, ಎಂಬುವ ಸರ್ವಜ್ಞತ್ವರೂಪವಾದ ಯುಕ್ತಿಯನ್ನು ಏತಕ್ಕೆ ಹೇಳಿದ್ದೆಂದರೆ — ಪುರಾಣವನ್ನು ನಿರ್ಮಿಸಿದವರು 'ವಿಷ್ಣುಬುದ್ಧಿಗಾಃ' ಎನ್ನುವ ಪದದಿಂದ ಈಶ್ವರನು ಸರ್ವದಾ ವರ್ತಮಾನಕಾಲದಲ್ಲಿ ಇರತಕ್ಕವುಗಳನ್ನಾಗಿಯೇ ಅನುಭವಿಸುತ್ತಿದ್ದಾನೆಂದುಪಪಾದಿಸಿದರು. ಆ ವಿಷಯದಲ್ಲಿ 'ಏನು ಪ್ರಮಾಣವು' ಎಂದು ಆಕಾಂಕ್ಷೆಬರಲು ಪುರಾಣಕರ್ತೃಗಳಿಗೆ ಅಭಿಪ್ರೇತವಾದ ಯುಕ್ತಿಯನ್ನು 'ಸರ್ವಜ್ಞತ್ವಾದೀಶ್ವರಸ್ಯ' ಎನ್ನುವ ಮೂಲದಿಂದ ಹೇಳಿರುವರು. ಹೇಗೆಂದರೆ — ಕ್ರಮವಿಶಿಷ್ಟಗಳಾದ ವರ್ಣಗಳ ಸಮೂಹವೇ ವೇದವು. ಘಟಾದಿಗಳಂತೆ ಅಖಂಡವಾದ ಪದಾರ್ಥಾಂತರವಲ್ಲ. ವರ್ಣದಲ್ಲಿರುವ ಕ್ರಮವು ಬುದ್ಧಿಯನ್ನು ನಿಮಿತ್ತೀಕರಿಸಿಕೊಂಡಿರುವುದು; ಸ್ವತಃ ಇರತಕ್ಕುದಲ್ಲ. ಅಂತೂ ಸರ್ವರಿಗೂ ಸರ್ವದಾ ವರ್ಣಗಳೇ ಧರ್ಮಿಯಾಗಿಯುಳ್ಳ ನಿಯತಾನುಪೂರ್ವೀರೂಪವಾದ ಕ್ರಮಕ್ಕೆ ಉಪಾಧಿಭೂತವಾದ ಬುದ್ಧಿಯ ಉಪರತಿಯೇ ವೇದಗಳ ವಿನಾಶವೆಂದು ಹೇಳಬೇಕು. ಘಟಾದಿಗಳಂತೆ ಅವಯವಗಳ ವಿಭಾಗದಿಂದ ಸ್ವರೂಪಧ್ವಂಸರೂಪವಾದುದಲ್ಲ. ಮತ್ತೆ ವರ್ಣವಿಷಯಕವಾದ ವಿವಕ್ಷಿತಕ್ರಮಕ್ಕೆ ಉಪಾಧಿಭೂತವಾದ ಈಶ್ವರನ ಬುದ್ಧಿಗೆ ಉಪರತಿಯೇ ಕೂಡುವುದಿಲ್ಲ. ಏಕೆಂದರೆ — ಆ ಬುದ್ಧಿಯ ಉಪರತಿಯು (೧) ವಿಷಯಾಂತರಗಳಲ್ಲಿ ಸಂಚಾರಪ್ರಯುಕ್ತವೆಂದು ಹೇಳಬೇಕು. ದೇವದತ್ತನ ಮನಸ್ಸು ಒಂದು ವಿಷಯವನ್ನು ವಿಷಯೀಕರಿಸಿಕೊಂಡಿದ್ದರೆ ಆಗ ಬೇರೆ ವಿಷಯಗಳು ತೋರಲಾರವು. ಹೀಗೆ ಬುದ್ಧಿಗೆ ಉಪರತಿಯೇ ಲೋಕದಲ್ಲಿ ದೃಷ್ಟವಾಗಿದೆ. ಹೀಗೆಯೇ ಪ್ರಕೃತದಲ್ಲೂ, ಎಂದಾಗಲೀ ಹೇಳಬೇಕು. ಅಥವಾ (೨) ವಿಸ್ಮರಣ (ದೇಹದಲ್ಲಿ ಅಭಿಮಾನ

ವಿಲ್ಲದಿರುವಿಕೆ) ವಿರುವಾಗ ಬುದ್ಧಿಗೆ ಉಪರತಿಯು ಅನುಭವಸಿದ್ಧವಾದುದರಿಂದ ವಿಸ್ಮರಣನಿಮಿತ್ತಕವೆಂದಾಗಲೀ ಹೇಳಬೇಕು. ಇವೆರಡುಪ್ರಕಾರವಾಗಿಯೂ ಈಶ್ವರನ ಬುದ್ಧಿಗೆ ಉಪರತಿಯು ಕೂಡುವುದಿಲ್ಲ. ಸರ್ವದಾ ಸರ್ವವಿಷಯಕಜ್ಞಾನವಿದ್ದುದರಿಂದ ಈಶ್ವರನ ಬುದ್ಧಿಗೆ ವಿಷಯಾಂತರ ಸಂಚಾರಪ್ರಯುಕ್ತವಾಗಲೀ ವಿಸ್ಮರಣಪ್ರಯುಕ್ತವಾಗಲೀ ಉಪರತಿಯು ಸಂಭವಿಸಲಾರದು. ಆದುದರಿಂದ ವೇದಗಳನ್ನು ಸರ್ವದಾ ಈಶ್ವರನು ಸ್ವರೂಪತಃ ವರ್ತಮಾನಕಾಲದಲ್ಲಿರತಕ್ಕವುಗಳನ್ನಾಗಿಯೇ ಅನುಭವಿಸುತ್ತಿರುತ್ತಾನೆನ್ನುವ ಅರ್ಥವು ಸಿದ್ಧವಾಗುವುದು ॥ ೭೧ ॥

ಈ ಯುಕ್ತಿಯು ಪುರಾಣಕರ್ತೃಗಳಿಗೆ ಅಭಿಪ್ರೇತವೆಂದು ಯಾವುದರಿಂದ ತಿಳಿಯುತ್ತದೆಂದರೆ- 'ಪುರಾಣಾನಿ ತದರ್ಥಾನಿ' ಎಂಬೀ ಉತ್ತರವಾಕ್ಯಗಳಲ್ಲಿ ಪುರಾಣಗಳಿಗೂ ನಿತ್ಯತ್ವವನ್ನು ಆಶಂಕಿಸಿ ಪರಿಹರಿಸಿರುತ್ತಾರೆ, ಈ ಯುಕ್ತಿಯು ವಿವಕ್ಷಿತವಾಗದಿದ್ದರೆ ಪುರಾಣಗಳಿಗೂ ನಿತ್ಯತ್ವವು ಬರಬೇಕಾಗುವುದು, ಎಂಬೀ ಸಂಶಯಕ್ಕೆ ಕಾರಣವೇ ಇರುವುದಿಲ್ಲ. ಆದಕಾರಣ ಪುರಾಣಕರ್ತೃಗಳಿಗೆ ಈ ಯುಕ್ತಿಯು ಅಭಿಪ್ರೇತವೆಂದು ಸ್ಪಷ್ಟವಾಗುತ್ತದೆ. ಎಂದಭಿಪ್ರಾಯವುಳ್ಳವರಾಗಿ ಉತ್ತರ (ಮೇಲಿನ) ವಾಕ್ಯಾರ್ಥವನ್ನನುವಾದಮಾಡುತ್ತಾರೆ —

**ಮೂ ॥ ಪುರಾಣಾನಾಮಪ್ಯನ್ಯಥಾ ಶಬ್ದರಚನಮೇವಾನಿತ್ಯತ್ವಂ ॥ ೭೨ ॥**

ಅ ॥ ಪುರಾಣಾನಾಮಪಿ=ಪುರಾಣಗಳಿಗೂ, ಅನ್ಯಥಾ=ಬೇರೆ ರೀತಿಯಾಗಿ, ಶಬ್ದರಚನಮೇವ=ಶಬ್ದಗಳ ನಿರ್ಮಾಣವೇ, ಅನಿತ್ಯತ್ವಂ=ವಿನಾಶವು.

ತಾ ॥ (1) ಈಶ್ವರನು ಯಾವಾಗಲೂ ವರ್ತಮಾನತಯಾ ಅನುಭವಿಸುತ್ತಿರುತ್ತಾನೆ ಎನ್ನುವ ಯುಕ್ತಿಯಿಂದ ವೇದಗಳಿಗೂ, ಪುರಾಣಗಳಿಗೂ ಎರಡಕ್ಕೂ ನಿತ್ಯತ್ವವು ಸಮಾನವಾಗಿದ್ದರೂ ಪುರಾಣಗಳನ್ನು ಪುನಃ ನಿರ್ಮಿಸುವರು. ವೇದವನ್ನು ಪುನಃ ನಿರ್ಮಿಸುವುದಲ್ಲ, ಎನ್ನುವುದು ಯಾವುದರಿಂದ ಸಿದ್ಧವಾಗುವುದೆಂದು ಶಂಕಿಸಿದರೆ (೧) ಪ್ರಮಾಣ ಯಾವುದೆಂದು ಪ್ರಶ್ನೆಮಾಡುತ್ತೀರೋ, (೨) ಸ್ವಪ್ರಯೋಜನವು ಯಾವುದೆಂದು ಪ್ರಶ್ನೆಮಾಡುತ್ತೀರೊ, (೩) ಪರಪ್ರಯೋಜನವನ್ನೋ, ಇವುಗಳಲ್ಲಿ (೧) ಪ್ರಮಾಣ ಪ್ರಶ್ನೆಯಾದರೆ 'ಪುರಾಣಾನಿ ತದರ್ಥಾನಿ' ಎಂಬುವ ಪುರಾಣ ವಾಕ್ಯದಿಂದಲೇ ಸಿದ್ಧವಾಗಿದೆ. (೨) ಪ್ರಯೋಜನ ಪ್ರಶ್ನೆಯೇ ಕೂಡಲಾರದು. ಏಕೆಂದರೆ— ಎಲ್ಲಾ ಕಡೆಗಳಲ್ಲಿಯೂ ಈಶ್ವರನು ತನ್ನ ಪ್ರಯೋಜನವನ್ನುದ್ದೇಶಿಸಿಕೊಂಡು ಪ್ರವೃತ್ತಿಯನ್ನು ಮಾಡುವುದೇ ಇಲ್ಲ. ಅವನಿಗೆ ಬೇಕಾದ್ದೆಲ್ಲವೂ ಇದೆ. ಆದ್ದರಿಂದ ತನಗೇನಾದರೂ ಫಲ ಸಿಗಬೇಕೆಂದು ಪ್ರವೃತ್ತಿಮಾಡಬೇಕಾಗಿಲ್ಲ. 'ಆಪ್ತಕಾಮಸ್ಯ ಕಾ ಸ್ಪೃಹಾ' ಆಪ್ತಕಾಮನಿಗೆ ಏನು ಇಚ್ಛೆಯಿದೆ. (೩) ಪರಪ್ರಯೋಜನಗಳು, ಸೂಕ್ಷ್ಮಗಳಾದುದರಿಂದ ಇಂಥಾದ್ದೆಂದು ನಮಗೆ ಹೇಳುವುದು ಅಸಾಧ್ಯವು. ಏಕೆಂದರೆ— ಒಬ್ಬೊಬ್ಬರ ಮನಸ್ಸಿನಲ್ಲಿ ಒಂದೊಂದು ಉದ್ದೇಶ ವಿರಬಹುದು. ಆದರೆ ಅದನ್ನೆಲ್ಲಾ ತಿಳಿಯುವುದೆಂದರೆ ನಮ್ಮಿಂದ ಅಸಾಧ್ಯವೇ ಸರಿ. ಶ್ರೀಮದಾಚಾರ್ಯರು ಸಮರ್ಥರಾದಾಗ್ಯೂ ಪ್ರಯೋಜನವಿಲ್ಲದಿರುವುದರಿಂದ ಈಗ ಹೇಳಲಿಲ್ಲ ॥ ೭೨ ॥

ಹೀಗೆ ಉಪಪಾದಿಸಿದ ಅರ್ಥವನ್ನು ಬೇರೆ ಸಂಶಯಗಳನ್ನು ಪರಿಹರಿಸಿಕೊಂಡು ಉಪಸಂಹಾರ ಮಾಡುತ್ತಾರೆ —

**ಮೂ ॥ ಅತ ಆಕಾಶಗುಣೇ ಶಬ್ದೇ ವ್ಯಜ್ಯಮಾನಾ ವರ್ಣಾದಯಸ್ತತ್ಕ್ರಮಾತ್ಮಕೋ ವೇದಶ್ಚ ನಿತ್ಯ ಏವೇತಿ ಸಿದ್ಧಂ ॥ ೭೩ ॥**

ಅ || ಅತಃ=ಪ್ರತ್ಯಭಿಜ್ಞೆಯ ಬಲದಿಂದ, ಆಕಾಶಗುಣೇ=ಆಕಾಶದ ವಿಶೇಷಗುಣವಾದ, ಶಬ್ದೇ=ಶಬ್ದದಲ್ಲಿ, ವ್ಯಜ್ಯಮಾನಾಃ=ಅಭಿವ್ಯಕ್ತಗಳಾಗುವ, ವರ್ಣಾದಯಃ=ಅಕ್ಷರಗಳೇ ಮೊದಲಾದವುಗಳು, ಆದಿ ಪದದಿಂದ ವರ್ಣಧರ್ಮಗಳಾದ ಹ್ರಸ್ವತ್ವ ದೀರ್ಘತ್ವಾದಿಗಳು (ನಿತ್ಯಗಳೆಂದೇ ಸಿದ್ಧಗಳಾಗುವುವು) ತತ್ಕ್ರಮಾತ್ಮಕಃ=ಕ್ರಮವಿಶೇಷಗಳಿಂದೊಡಗೂಡಿದ ವರ್ಣಸ್ವರೂಪವಾದ, ವೇದಶ್ಚ=ವೇದವೂ ಕೂಡ, ಅತಃ=ಕರ್ತನು (ವೇದವನ್ನು ಮಾಡಿದವನು ಇಂತಹನೆಂದು) ಪ್ರಮಿತನಾಗದಿರುವುದರಿಂದಲೂ ಶ್ರುತತ್ವ ದೃಷ್ಟತ್ವಾದ್ಯುಕ್ತಿಗಳು ಬೇರೆರೀತಿಯಾಗಿ ಉಪಪನ್ನಗಳಾಗದಿರುವುದರಿಂದಲೂ, ನಿತ್ಯ ಏವೇತಿ=ಅನಾದಿನಿತ್ಯವೆಂದೇ, ಸಿದ್ಧಂ=ಸಿದ್ಧವಾಗುವುದು.

ತಾ || (1) 'ವರ್ಣಾಃ ನಿತ್ಯಾಃ' ಎಂಬುವ ಉಪಸಂಹಾರದಿಂದಲೇ ಕ್ರಮವಿಶೇಷದಿಂದ ಕೂಡಿರುವ ವರ್ಣಗಳ ಸಮೂಹರೂಪಗಳಾದ ವೇದಗಳಿಗೂ ನಿತ್ಯತ್ವವು ಸಿಗುವಾಗ ಪುನಃ 'ವೇದಶ್ಚ ನಿತ್ಯ ಏವ' ಎಂದು ಪ್ರತ್ಯೇಕ ಉಪಸಂಹಾರ ಮಾಡಲು ಕಾರಣವೇನೆಂದರೆ — ವರ್ಣಗಳಿಗೆ ವಿಕಾರವಿಲ್ಲದಿರುವುದೇ ನಿತ್ಯತ್ವವು, ವೇದಗಳಿಗಾದರೂ ಕ್ರಮವ್ಯತ್ಯಾಸವಿಲ್ಲದಿರುವುದೇ ನಿತ್ಯತ್ವವು. ಹೀಗೆ ನಿತ್ಯತ್ವವು ಬೇರೆ ಬೇರೆಯಾದುದರಿಂದ ಪ್ರತ್ಯೇಕವಾಗಿ ಉಪಸಂಹಾರ ಮಾಡಿರುವರು. (2) ವರ್ಣಗಳು ನಿತ್ಯಗಳಾದರೆ ಸರ್ವದಾ ಉಪಲಬ್ಧಗಳಾಗಬೇಕಾಯಿತು. 'ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್' ಎನ್ನುವುದರಿಂದ ವರ್ಣಗಳು ವ್ಯಾಪಿಸಿಕೊಂಡಿವೆ ಎಂದು ಅಂಗೀಕರಿಸಿರುವುದರಿಂದ ವರ್ಣಗಳಿಗೆ ಸರ್ವದಾ ಶ್ರೋತ್ರೇಂದ್ರಿಯ ಸನ್ನಿಕರ್ಷವದೆ. (3) ಈ ವಿಷಯದಲ್ಲಿ ಕೆಲವರು ಹೀಗೆ ಸಮಾಧಾನಹೇಳುವರು— ಶ್ರೋತ್ರೇಂದ್ರಿಯವು ಸ್ತಿಮಿತವಾಯುವಿನಿಂದ ಪ್ರತಿಬದ್ಧವಾದಾಗ, ವರ್ಣವು ವ್ಯಾಪ್ತವಾದುದರಿಂದ ಸನ್ನಿಕೃಷ್ಟವಾದಾಗ್ಯೂ ವರ್ಣಾತ್ಮಕಶಬ್ದವನ್ನು ವಿಷಯೀಕರಿಸುವುದಿಲ್ಲ. ಯಾವಾಗ ಮಾತನಾಡತಕ್ಕವನ ಕೋಷ್ಠ್ಯವಾಯುವು ಪ್ರಯತ್ನವುಳ್ಳ ಆತ್ಮನ ಸಂಯೋಗದಿಂದ ಪ್ರೇರಿಸಲ್ಪಟ್ಟದ್ದಾಗಿ, ಮೇಲೆ ಹೊರಟು ಹೋಗುತ್ತಾ ಕಂಠ ತಾಲು ಮೊದಲಾದ ಎಂಟು ಸ್ಥಾನಗಳನ್ನು ಸಂಬಂಧಿಸಿ ಕೇಳತಕ್ಕವನ ಕಿವಿಯನ್ನು ಪ್ರವೇಶಮಾಡಿ ಸ್ತಿಮಿತವಾಯುವನ್ನು ಹೊರಡಿಸುತ್ತದೋ ಆಗ ವರ್ಣಗಳು ಉಪಲಬ್ಧಗಳಾಗುತ್ತವೆ. (4) ಇನ್ನೂ ಕೆಲವರು ಹೀಗೆ ಅನ್ನುವರು. ಕೋಷ್ಠ್ಯವಾಯುವಿನ ಸಂಯೋಗವೇ ಶ್ರೋತ್ರೇಂದ್ರಿಯಕ್ಕೆ ಸಂಸ್ಕಾರವು, ಬೇರೆಯಲ್ಲ. (5) ಇವೆರಡೂ ಅಸಂಗತವು. ವಾಯುವಿನ ಸಂಯೋಗವಾದಮೇಲೆ ಪ್ರತಿಬಂಧಕವಿಲ್ಲದಿರುವುದರಿಂದಲೂ ಶ್ರೋತ್ರೇಂದ್ರಿಯಕ್ಕೆ ಸಂಸ್ಕಾರವಿದ್ದುದರಿಂದಲೂ ಸರ್ವದಾ ಸರ್ವವರ್ಣಗಳೂ ಉಪಲಬ್ಧಗಳಾಗಬೇಕಾಗುವುವು. ಇನ್ನು ಉತ್ತರಕ್ಷಣದಲ್ಲಿಯೇ ವಾಯುವಿನ ವಿಭಾಗವಾಗಿ ವಾಯುವಿನ ಸಂಯೋಗವು ನಾಶವಾಗುವುದರಿಂದ ಸರ್ವದಾ ವರ್ಣಗಳು ಉಪಲಬ್ಧಗಳಾಗುವುದಿಲ್ಲ? ಎಂದು ಹೇಳಕೂಡದು. ಏಕೆಂದರೆ— ಅಪ್ರಾಮಾಣಿಕಗಳಾದವುಗಳನ್ನು ಕಲ್ಪಿಸಬೇಕಾಗುವುದು. ಮತ್ತು ಪ್ರತಿಬಂಧಕವಿಲ್ಲದಿರುವುದರಿಂದಲೂ ಶ್ರೋತ್ರೇಂದ್ರಿಯಕ್ಕೆ ಸಂಸ್ಕಾರವಿರುವುದರಿಂದಲೂ ವಾಯುವಿನ ಸಂಯೋಗವಾದಮೇಲೆ ಸರ್ವವರ್ಣಗಳೂ ಉಪಲಬ್ಧಗಳಾಗಬೇಕಾಗುವುವು, ಎಂಬುವ ದೋಷವು ನಿವಾರಿತವಾಗಲೇ ಇಲ್ಲ. (6) ಇನ್ನೂ ಕೆಲವರು, ವಾಯುವಿನ ಗುಣವಾದ ಧ್ವನ್ಯಾತ್ಮಕಶಬ್ದವು ವಾಯುವಿನಿಂದೊಡಗೂಡಿ ಕಿವಿಯನ್ನು ಪ್ರವೇಶಮಾಡಿ ವರ್ಣಗಳನ್ನು ವ್ಯಕ್ತೀಕರಿಸುತ್ತದೆ. ಅದರಿಂದ ವರ್ಣವು ಉಪಲಬ್ಧವಾಗುತ್ತದೆ. ಎಂದು ಹೇಳುವರು. ಇದೂ ಅಸಂಗತವು. ಏಕೆಂದರೆ — 'ಯೋ ವಾಯುವಿಶೇಷಗುಣಃ ಸಃ ಸ್ಪಾರ್ಶನಗ್ರಾಹ್ಯಃ ಯಥಾ ಸ್ಪರ್ಶಃ' ಯಾವುದು ವಾಯುವಿನ ವಿಶೇಷಗುಣವೋ ಅದು ತ್ವಗಿಂದ್ರಿಯದಿಂದ ಗ್ರಾಹ್ಯವು, ಸ್ಪರ್ಶದಂತೆ, ಎಂಬೀ ವ್ಯಾಪ್ತಿಯಿದ್ದುದರಿಂದ ಶಬ್ದವು ವಾಯುವಿನ ವಿಶೇಷಗುಣವಾದರೆ ತ್ವಗಿಂದ್ರಿಯವಿದ್ದುದರಿಂದ ಕಿವುಡರಿಗೂ ವಾಯುವಿನ ಗುಣವಾದ

ಶಬ್ದವು ಉಪಲಬ್ಧವಾಗಬೇಕಾಗುವುದು. ಮತ್ತು ಶ್ರೋತ್ರೇಂದ್ರಿಯದಿಂದ ಸ್ವೀಕರಿಸಲ್ಪಡದಿರುವ ಶಬ್ದವು ಶ್ರೋತ್ರೇಂದ್ರಿಯದಿಂದ ಸ್ವೀಕರಿಸಲ್ಪಡುವ ವರ್ಣಗಳನ್ನು ವ್ಯಕ್ತೀಕರಿಸುತ್ತದೆ ಎನ್ನುವುದೂ ಕೂಡಲಾರದು. ಏಕೆಂದರೆ— ವ್ಯಂಗ ವ್ಯಂಜಕಗಳು ಒಂದೇ ಇಂದ್ರಿಯದಿಂದ ಗ್ರಾಹ್ಯಗಳೆಂಬ ನಿಯಮವು ಘಟ ದೀಪವೊದಲಾದುವುಗಳಲ್ಲಿ ದೃಷ್ಟವಾಗಿದೆ. ಮತ್ತು ವರ್ಣಗಳೆಲ್ಲವೂ ವ್ಯಾಪ್ತಗಳಾದುದರಿಂದ ಒಂದು ವರ್ಣವು ಯಾವ ಪ್ರದೇಶದಲ್ಲಿದೆಯೋ, ಅದೇ ಪ್ರದೇಶದಲ್ಲಿ ಎಲ್ಲಾ ವರ್ಣಗಳೂ ಇರುವುದರಿಂದ, ವ್ಯಂಜಕವಾದ ವಾಯುವಿನಿಂದೊಡಗೂಡಿದ ಧ್ವನಿಯು ಶ್ರೋತ್ರೇಂದ್ರಿಯದಿಂದ ಸಂಬದ್ಧವಾಗಿ ಒಂದು ವರ್ಣವು ಉಪಲಬ್ಧವಾದಾಗ ಎಲ್ಲಾ ವರ್ಣಗಳೂ ಉಪಲಬ್ಧಗಳಾಗಬೇಕಾಗುವುವು. ಆದುದರಿಂದ ಅವೆಲ್ಲವೂ ಅಸಂಗತವೇ ಸರಿ. (7) ಯಾವ ವರ್ಣವು ದೇವದತ್ತನ ಶ್ರೋತ್ರೇಂದ್ರಿಯದಲ್ಲಿ ವ್ಯಕ್ತವಾಗಿಯದೋ, ಅದೇ ವರ್ಣವು ವ್ಯಾಪ್ತವಾದುದರಿಂದಲೂ, ಒಂದೇ ಆದುದರಿಂದಲೂ ಯಜ್ಞದತ್ತನ ಕಿವಿಯ ಸಮೀಪದಲ್ಲಿಯೂ ಅದೆ. ಆದುದರಿಂದ ತತ್ಕಾಲದಲ್ಲಿಯೇ ದೂರದಲ್ಲಿರುವ ಯಜ್ಞದತ್ತನಿಗೂ, ಅಲ್ಲದೆ ಸರ್ವಪುರುಷರಿಗೂ ಆ ವರ್ಣವು ಉಪಲಬ್ಧವಾಗಬೇಕಾಗುವುದು, ಎಂದಾಶಂಕಿಸಿದರೆ— 'ಆಕಾಶಗುಣೋ ಶಬ್ದೋ ವ್ಯಜ್ಯಮಾನಾಃ' ಆಕಾಶಗುಣವಾದ ಶಬ್ದನಿಮಿತ್ತಕವಾಗಿ ವ್ಯಕ್ತಗಳಾಗುವ ವರ್ಣಗಳು ಎಂದುಕ್ತವಾಯಿತು ಅಾದರೆ— ಹೇಳತಕ್ಕವನ ಪ್ರಯತ್ನದಿಂದ ಪ್ರೇರಿಸಲ್ಪಟ್ಟ ವಾಯುವು ಕಂಠ ತಾಲ್ವಾದಿ ತತ್ತದ್ಯೋಗ್ಯಸ್ಥಾನಗಳಿಂದ ಸಂಯುಕ್ತವಾಗಿ ಆ ಸ್ಥಾನಸಂಯುಕ್ತವಾದ ಆಕಾಶದಲ್ಲಿ ಧ್ವನಿರೂಪವಾದ ಶಬ್ದವನ್ನು ಹುಟ್ಟಿಸುತ್ತದೆ. ಆ ಶಬ್ದವು ದೇಶಾಂತರದಲ್ಲಿ ಪ್ರತಿಶಬ್ದವನ್ನು ಹುಟ್ಟಿಸುತ್ತದೆ. ಯಾವ ಗುಣವು ಕರ್ಣಶಷ್ಕುಲ್ಯವಚ್ಛಿನ್ನವಾದ ಆಕಾಶಪ್ರದೇಶದಲ್ಲಿ ಹುಟ್ಟುತ್ತದೋ, ಆ ಕರ್ಣಶಷ್ಕುಲ್ಯವಚ್ಛಿನ್ನವಾದ ಆಕಾಶಗುಣವು ಧ್ವನಿಯು. ಅಂತಹ ಧ್ವನಿಯಿರುವಾಗ ಕರ್ಣಶಷ್ಕುಲ್ಯವಚ್ಛಿನ್ನವಾದ ಆಕಾಶದ ಪ್ರದೇಶದಲ್ಲಿ ವ್ಯಕ್ತವಾಗುವ ವರ್ಣವು ಶ್ರೋತ್ರೇಂದ್ರಿಯದಿಂದ ಗೃಹೀತವಾಗುತ್ತದೆ. ಧ್ವನಿಯು ಅತಿಶೀಘ್ರದಲ್ಲಿ ನಾಶವಾಗುವ ಪ್ರಯುಕ್ತ ವ್ಯಂಜಕವೇ ಇಲ್ಲದಿರುವುದರಿಂದ ವರ್ಣಗಳು ಸರ್ವದಾ ಉಪಲಬ್ಧಗಳಾಗುವುದಿಲ್ಲ. ಆ ಧ್ವನಿಗಳು ಭಿನ್ನ ಭಿನ್ನಗಳಾಗಿಯೇ ವರ್ಣಗಳನ್ನು ವ್ಯಕ್ತೀಕರಿಸುತ್ತವೆ, ಅಂದರೆ – ಒಂದೊಂದು ವರ್ಣಗಳ ಅಭಿವ್ಯಕ್ತಿಗೆ ಒಂದೊಂದು ಧ್ವನಿಯು ಬೇರೆ ಬೇರೆಯಾಗಿ ಕಾರಣವಾಗಿರುತ್ತದೆ. ಆದುದರಿಂದ ಸರ್ವವರ್ಣಗಳು ಒಂದೇ. ಪ್ರದೇಶದಲ್ಲಿದ್ದರೂ ಎಲ್ಲಾ ವರ್ಣಗಳಿಗೂ ಅದೇ ಸಮಯದಲ್ಲಿ ಉಪಲಬ್ಧಿಯಾಗಬೇಕಾಗುವುದು ಎಂದು ಹೇಳಲು ಬರುವುದಿಲ್ಲ. ಏಕೆಂದರೆ – ೫೧ ವರ್ಣಗಳೂ ಒಂದೇ ಪ್ರದೇಶದಲ್ಲಿದ್ದುದರಿಂದ ಒಂದು ವರ್ಣವು ಉಪಲಬ್ಧವಾಗುವಾಗ ಎಲ್ಲಾ ವರ್ಣಗಳೂ ಕೇಳಬೇಕಾಗುವುವೆಂದು ಹೇಳಕೂಡದು. ವರ್ಣಗಳು ವ್ಯಾಪ್ತಗಳಾದ ಪ್ರಯುಕ್ತ ಒಂದೇ ಪ್ರದೇಶದಲ್ಲಿ ಎಲ್ಲಾ (೫೧) ವರ್ಣಗಳಿಷ್ಟರೂ ಆಯಾಯ ಅಕ್ಷರಗಳನ್ನಭಿವ್ಯಕ್ತೀಕರಿಸುವ ಧ್ವನಿಗಳು ಬೇರೆ ಬೇರೆಯಾದುದರಿಂದ ಏಕಕಾಲದಲ್ಲಿ ಅಷ್ಟು ಧ್ವನಿಗಳೂ ಇಲ್ಲದಿರುವುದರಿಂದ ಆಗ ಎಲ್ಲಾ ವರ್ಣಗಳು ಕೇಳಲ್ಪಡುವುದಿಲ್ಲವೆಂದು ಹೇಳಿದ್ದು ಯುಕ್ತವೇ. ಭೂತಾಕಾಶವೇ ಶ್ರೋತ್ರೇಂದ್ರಿಯವು. ಭೂತಾಕಾಶದ ಗುಣವೇ ಧ್ವನಿಯು. ವಾಯುವಿನ ಗುಣವಲ್ಲ. ಆ ಭೂತಾಕಾಶವು ಸ್ವಾಭಾವಿಕವಾಗಿ ಅವಯವ(ಅಂಶ)ಗಳಿಂದೊಡಗೂಡಿಯದೆ. ಆದುದರಿಂದ ಶ್ರೋತ್ರೇಂದ್ರಿಯಗಳಿಗೂ ಭೇದವಿದೆ. ಅಂಶಗಳಿಂದೊಡಗೂಡಿರುವುದರಿಂದ ಆ ಪ್ರದೇಶದಲ್ಲಿರುವ ಧ್ವನಿಯು ಆ ಪ್ರದೇಶಸಂಬದ್ಧವೇ ಆದ ವರ್ಣವನ್ನು ವ್ಯಕ್ತೀಕರಿಸುತ್ತದೆ ಆದುದರಿಂದ ಸರ್ವರಿಗೂ ಸರ್ವವರ್ಣಗಳ ಉಪಲಬ್ಧಿಯಾಗುವುದಿಲ್ಲ. (8) ಆ ಧ್ವನಿಗಳು ಭಿನ್ನ ಭಿನ್ನಗಳಾಗಿಯೇ ಅಕ್ಷರಗಳನ್ನು ವ್ಯಕ್ತಪಡಿಸುತ್ತವೆ. ಅದಕಾರಣ ಏಕದಾ ಸರ್ವವರ್ಣಗಳು ಉಪಲಬ್ಧಗಳಾಗುವುದಿಲ್ಲ, ಎಂದು ಹೇಳಿದ್ದು ಅಯುಕ್ತವು. ಏಕೆಂದರೆ —

'ವರ್ಣಾಃ'ನ ಪ್ರತಿನಿಯತವ್ಯಂಜಕವ್ಯಂಗ್ಯಾಃಸಮಾನೇಂದ್ರಿಯಗ್ರಾಹ್ಯತ್ವೇ ಸತಿ ಸಮಾನದೇಶಕಾಲಾಪನ್ನತ್ವಾತ್ ಘಟಗತಪರಿಮಾಣಪೃಥಕ್ತ್ವವತ್, ವರ್ಣಗಳು ಭಿನ್ನ ಭಿನ್ನಗಳಾದ ವ್ಯಂಜಕ (ಅಭಿವ್ಯಕ್ತಿಜನಕಧ್ವನಿ)ಗಳಿಂದ ವ್ಯಂಗ್ಯ(ವ್ಯಕ್ತ)ಗಳಾಗುವುದಿಲ್ಲ. ಒಂದೇ ಇಂದ್ರಿಯ(ಕಿವಿ)ದಿಂದ ಗ್ರಾಹ್ಯ (ಕೇಳಲ್ಪಡತಕ್ಕವು)ಗಳಾಗಿದ್ದು, ಒಂದೇ ದೇಶ ಕಾಲಗಳಿಂದೊಡಗೂಡಿರುವುದರಿಂದ, ಅಂದರೆ— ಒಂದೇ ದೇಶಕಾಲಗಳಲ್ಲಿರತಕ್ಕವುಗಳಾದುದರಿಂದ, ಘಟದಲ್ಲಿರುವ ಪರಿಮಾಣ ಪೃಥಕ್ತ್ವಗಳಂತೆಯೇ, ಅಂದರೆ ಘಟದಲ್ಲಿರುವ ಪರಿಮಾಣ ಪೃಥಕ್ತ್ವಗಳೆರಡೂ ಒಂದು ಇಂದ್ರಿಯ (ಕಣ್ಣು)ದಿಂದ ಗ್ರಾಹ್ಯ(ಕಾಣಲ್ಪಡತಕ್ಕವು)ಗಳು. ಘಟವೆಂಬುವ ಒಂದು ದೇಶದಲ್ಲಿರತಕ್ಕವುಗಳು, ಒಂದೇ ಕಾಲದಲ್ಲಿರತಕ್ಕವುಗಳು. ಆದಕಾರಣ ಬೇರೆ ಬೇರೆ ವ್ಯಂಜಕಗಳಿಂದ ವ್ಯಕ್ತಗಳಾಗುವುದಿಲ್ಲ. ಇವೆರಡೂ ಕಣ್ಣಿನಿಂದ ತಿಳಿಯಲ್ಪಡತಕ್ಕವುಗಳು. ಅಂತೂ ಒಂದೇ ಇಂದ್ರಿಯದಿಂದ ಗ್ರಾಹ್ಯಗಳಾಗಿದ್ದು ಒಂದೇ ದೇಶಕಾಲಗಳಲ್ಲಿರತಕ್ಕವುಗಳು. ಬೇರೆ ಬೇರೆ ವ್ಯಂಜಕಗಳಿಂದ ವ್ಯಕ್ತಗಳಾಗುತ್ತವೆ ಎನ್ನುವುದು ಎಲ್ಲಿಯೂ ತೋರಿಬರುವುದಿಲ್ಲ. ಎಂದರೆ. ಹೀಗೆ ಹೇಳಕೂಡದು. ಏಕೆಂದರೆ— ಈ ಅನುಮಾನಕ್ಕೆ ಗೋತ್ವ ಅಶ್ವತ್ವಮೊದಲಾದವುಗಳಲ್ಲಿ ವ್ಯಭಿಚಾರವು ಬರುವುದು. ಹೇತುವಿದೆ, ಸಾಧ್ಯವಿಲ್ಲವು. ಗೋತ್ವ ಅಶ್ವತ್ವಾದಿಗಳು ಒಂದು ಇಂದ್ರಿಯ(ಕಣ್ಣು)ಕ್ಕೆ ಗೋಚರಗಳೂ ಒಂದೇ ದೇಶಕಾಲಗಳಲ್ಲಿರುವವೂ ಆಗಿವೆ, ಕಾರಣ ಹೇತುವಿದೆ. ಗೋತ್ವವು ಸಾಸ್ನಾದಿಮತ್ವರೂಪವಾದ ಧರ್ಮದಿಂದ ವ್ಯಂಗ್ಯವು, ಅಶ್ವತ್ವವು ಏಕಶಫತ್ವದಿಂದಕೂಡಿದ ಕೇಸರವತ್ವರೂಪಧರ್ಮದಿಂದ ವ್ಯಂಗ್ಯವು. ಹೀಗೆಗೋತ್ವ ಅಶ್ವತ್ವಾದಿಗಳು ಬೇರೆ ಬೇರೆ ವ್ಯಂಜಕಗಳಿಂದ ವ್ಯಕ್ತಗಳಾಗುತ್ತವೆ ಎಂದು ತಾರ್ಕಿಕರು ಅಂಗೀಕರಿಸಿರುವುದರಿಂದ ಸಾಧ್ಯವಿಲ್ಲವು. (9) ಹಾಗಾದರೆ ಗೋತ್ವ ಅಶ್ವತ್ವಾದಿಗಳಲ್ಲಿ ಹೇತುವೇ ಇಲ್ಲದಿರುವುದರಿಂದ ವ್ಯಭಿಚಾರವಿಲ್ಲವು. ಹೇಗೆಂದರೆ— ಗೋತ್ವಮೊದಲಾದ ಧರ್ಮಗಳು ಸ್ವಾಶ್ರಯಗಳಾದ ಎಲ್ಲಾ ವಸ್ತುಗಳಲ್ಲಿಯೇ ಇರತಕ್ಕವುಗಳು, ವಿಜಾತೀಯವಸ್ತುಗಳಲ್ಲಿರುವುದಿಲ್ಲ. (ಅಂದರೆ ಗೋತ್ವವು ಸ್ವಾಶ್ರಯಗಳಾದ ಎಲ್ಲಾ ಗೋವುಗಳಲ್ಲಿಯೇ ಇರುತ್ತದೆ. ಅಶ್ವದಲ್ಲಿರುವುದಿಲ್ಲ, ಹೀಗೆಯೇ ಅಶ್ವತ್ವವೂ ಎಲ್ಲಾ ಅಶ್ವಗಳಲ್ಲಿಯೇ ಇರುತ್ತದೆ, ಗೋವಿನಲ್ಲಿಲ್ಲ.) ಆದುದರಿಂದ ಸಮಾನದೇಶತ್ವವಿಲ್ಲವು. (ಒಂದೇ ದೇಶದಲ್ಲಿರತಕ್ಕವುಗಳಲ್ಲ.) ಹೀಗೆ ಹೇಳಕೂಡದು. ಏಕೆಂದರೆ— ಸ್ವಾಶ್ರಯಸಂಯುಕ್ತಸಮವಾಯಸಂಬಂಧದಿಂದ ಸಮಾನದೇಶತ್ವ (ಏಕಾಧಿಕರಣತ್ವ)ವು ವಿವಕ್ಷಿತವಾಗಿದೆ. ಸ್ವ=ಅಶ್ವತ್ವಾಶ್ರಯ ಅಶ್ವದಿಂದ, ಸಂಯುಕ್ತವಾದ ಗೋವಿನಲ್ಲಿ ಗೋತ್ವವೂ ಗೋತ್ವಾಶ್ರಯ ಗೋವಿನಿಂದ ಸಂಯುಕ್ತವಾದ ಅಶ್ವದಲ್ಲಿ ಅಶ್ವತ್ವವೂ ಸಮವಾಯಸಂಬಂಧದಿಂದ ಇದೆ. ಹೀಗೆ ಸ್ವಾಶ್ರಯಸಂಯುಕ್ತಸಮವಾಯಸಂಬಂಧದಿಂದ. ಅಶ್ವತ್ವವು ಗೋವಿನಲ್ಲಿಯೂ ಗೋತ್ವವು ಅಶ್ವದಲ್ಲಿಯೂ ಇದ್ದುದರಿಂದ ಸಮಾನದೇಶತ್ವವು ಇದ್ದೇ ಇದೆ. ಆದಕಾರಣ ವ್ಯಭಿಚಾರವು ತಪ್ಪಲಾರದು. (10) ಸಾಕ್ಷಾತ್ ಸಂಬಂಧದಿಂದಲೇ ಸಮಾನದೇಶತ್ವವನ್ನು ಹೇಳುವುದು ಇಷ್ಟವಾಗಿದೆ. ಈಗ ಹೇಳಿದ ಪರಂಪರಾ ಸಂಬಂಧದಿಂದ ಇಷ್ಟವಲ್ಲ. ತಥಾಚ ಅಶ್ವತ್ವಕ್ಕೆ ಗೋವ್ಯಕ್ತಿಯಿಂದಲೂ ಗೋತ್ವಕ್ಕೆ ಅಶ್ವವ್ಯಕ್ತಿಯಿಂದಲೂ ಸಮವಾಯರೂಪವಾದ ಸಾಕ್ಷಾತ್ಸಂಬಂಧವಿಲ್ಲದಿರುವುದರಿಂದ ವ್ಯಭಿಚಾರವಿಲ್ಲವೆಂದರೆ ಸಮವಾಯರೂಪವಾದ ಸಾಕ್ಷಾತ್ಸಂಬಂಧವಿಲ್ಲವೆನ್ನುವುದು ವರ್ಣಕ್ಕೂ ಧ್ವನಿಗಳಲ್ಲಿಯೂ ಸಮಾನವೇ, ಅಂದರೆ ವರ್ಣಗಳು ದ್ರವ್ಯಗಳೂ ಸರ್ವತ್ರ ವ್ಯಾಪ್ತಗಳೂ ಆಗಿವೆ. ಆದಕಾರಣ ಸಮವಾಯಸಂಬಂಧದಿಂದ ಸಮಾನದೇಶತ್ವವೆನ್ನುವುದು ಪಕ್ಷದಲ್ಲಿ (ವರ್ಣಧ್ವನಿಗಳಲ್ಲಿ)ಯೂ ಇಲ್ಲದಿರುವುದರಿಂದ ಸ್ವರೂಪಾಸಿದ್ಧಿಯು. (11) ಹಾಗಾದರೆ ಗಕಾರವು ಶ್ರೋತ್ರದೇಶದಲ್ಲಿ ಯಾವ ಸಂಬಂಧದಿಂದ ಸಂಬದ್ಧವಾಗಿದೆಯೋ, ಅದೇ ಸಂಬಂಧದಿಂದ

ಕಕಾರಾದಿಗಳೂ ಸಂಬದ್ಧಗಳಾಗಿವೆ. ಗೋತ್ವವೊದಲಾದುವುಗಳು ಗೋ ಅಶ್ವ ಪಿಂಡಾದಿಗಳಲ್ಲಿ ಒಂದು ಸಂಬಂಧದಿಂದಲ್ಲ. ಹೀಗೆ ವೈಷಮ್ಯವಿದೆ ಎಂದರೆ, ಬ್ರಾಹ್ಮಣತ್ವ ದ್ರವ್ಯತ್ವಾದಿಗಳಲ್ಲಿ ವ್ಯಭಿಚಾರವು. ಸಮವಾಯಸಂಬಂಧದಿಂದಲೇ ಒಂದು ವ್ಯಕ್ತಿಯಲ್ಲಿರುವ (ಹೇತುವಿರುವ) ಬ್ರಾಹ್ಮಣತ್ವ ದ್ರವ್ಯತ್ವಾದಿಗಳಲ್ಲಿ ಬ್ರಾಹ್ಮಣತ್ವವು ಅಧ್ಯಯನ ಶಿಖಾ ಯಜ್ಞೋಪವೀತಾದಿಗಳಿಂದಲೂ, ದ್ರವ್ಯತ್ವವು ಗುಣಾಶ್ರಯತ್ವದಿಂದಲೂ ಹೀಗೆ ಬೇರೆ ಬೇರೆ ವ್ಯಂಜಕಗಳಿಂದ ವ್ಯಕ್ತಗಳಾಗುತ್ತವೆ, ಎಂದಂಗೀಕರಿಸಿರುವಪ್ರಯುಕ್ತ ಸಾಧ್ಯವಿಲ್ಲವು. ಅಂತೂ ವ್ಯಭಿಚಾರವೇ. (12) ಅಲ್ಲದೆ ರೂಪ ಪರಿಮಾಣಗಳಲ್ಲಿಯೂ ವ್ಯಭಿಚಾರವು. ಹೇಗೆಂದರೆ— ರೂಪವು ಮಹತ್ವಾಧಿಕರಣದಲ್ಲಿರುವ ಉದ್ಭೂತತ್ವರೂಪವಾದ ವ್ಯಂಜಕದಿಂದ ವ್ಯಂಗ್ಯವು. ಹಾಗೆಯೇ ಇಂದ್ರಿಯಾವಯವಗಳಿಂದ ಅರ್ಥಾವಯವಗಳಿಗೂ, ಅರ್ಥಾವಯವಗಳಿಂದ ಇಂದ್ರಿಯಾವಯವಿಗೂ, ಇಂದ್ರಿಯಾವಯವಗಳಿಂದ ಅರ್ಥಾವಯವಿಗೂ, ಅರ್ಥಾವಯವಿಯಿಂದ ಇಂದ್ರಿಯಾವಯವಿಗೂ ಹೀಗೆ ಪರಿಮಾಣಕ್ಕೆ ನಾಲ್ಕು ವಿಧ ಸನ್ನಿಕರ್ಷವು ಅಧಿಕವಾಗಿ ವ್ಯಂಜಕವೆಂದು ಸ್ವೀಕೃತವಾಗಿದೆ. (13) ಹಾಗೆಯೇ ಕ್ಷೀರ ನೀರ ಮೊದಲಾದುವುಗಳಿಗೆ ಪರಸ್ಪರವಾಗಿ ಜಲಾದಿಗಳಿಂದ ಮೇಲನಾಭಾವಾದಿಗಳು ವ್ಯಂಜಕಗಳು. ತಥಾಚ ಕ್ಷೀರ ನೀರಾದಿಗಳಲ್ಲಿ ಬೇರೆ ಬೇರೆ ವ್ಯಂಜಕಗಳಿಂದ ವ್ಯಂಗ್ಯತ್ವವೇ ಇದೆ, ವ್ಯಂಗ್ಯತ್ವಾಭಾವವಿಲ್ಲವು. ಆದಕಾರಣ ವ್ಯಭಿಚಾರವು. ಅಂತೂ ಅನುಮಾನವು ವ್ಯಭಿಚಾರಾದಿ ದೋಷಗಳಿಂದೊಡಗೂಡಿರುವುದರಿಂದ ಅಸಂಗತವು. (14)ವರ್ಣವೇ ಧ್ವನಿಯು. ವರ್ಣಗಳು ಹೊರತು ಬೇರೆ ಧ್ವನಿಯೇ ಇಲ್ಲವು. ಆದುದರಿಂದ ವರ್ಣಗಳಿಗೆ ವ್ಯಂಜಕವಾದುದು ಯಾವುದಿದೆ? ಯಾವುದೂ ಇಲ್ಲವು, ಎಂದಾಶಂಕಿಸಕೂಡದು. ದೂರಕ್ಕೆ ವರ್ಣವು ಕೇಳದಿದ್ದರೂ ಧ್ವನಿಮಾತ್ರ ಕೇಳುತ್ತದೆ. ಆದಪ್ರಯುಕ್ತ ವರ್ಣಾತಿರಿಕ್ತವಾದ ಧ್ವನಿಯು ಇಲ್ಲವೆಂದು ಹೇಳಕೂಡದು. (15) ವರ್ಣಗಳಿಗೆ ಅನಾದಿನಿತ್ಯತ್ವವನ್ನು ವಿಷಯೀಕರಿಸುವ * ಪ್ರತ್ಯಭಿಜ್ಞೆಯು ಪ್ರಮಾಣವಾಗಿರುವುದರಿಂದ ಇವೆಲ್ಲವೂ(ವರ್ಣಗಳು ಅನಾದಿನಿತ್ಯಗಳು, ಧ್ವನಿಗಳಿಂದ ವ್ಯಕ್ತಗಳಾಗುವುವು, ಭಿನ್ನ ಭಿನ್ನ ವ್ಯಂಜಕಗಳಿಂದ ವ್ಯಂಗ್ಯಗಳು, ಇವೇ ಮೊದಲಾದುವುಗಳು) ಅಪ್ರಾಮಾಣಿಕಗಳಲ್ಲ. (16) ಈ ವಿಷಯದಲ್ಲಿ ೧ 'ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್' ೨ ತತ್ಕ್ರಮೇಣೈವ ತ್ರೈವರ್ಣ್ಯೈಃ ೩ ನಭಃ ಶ್ರೋತ್ರಂ ತು ಶಬ್ದಗಂ, ೪ ಶಬ್ದೋ ವರ್ಣಾತ್ಮಕೋ ನಿತ್ಯೋ ಧ್ವನಿರಾಕಾಶಸಂಭವಃ। ಆಕಾಶ ಏವ ಸೂಕ್ಷ್ಮಸ್ತು ಧ್ವನಿರಿತ್ಯೇವ ಶಬ್ದ್ಯತೇ ॥ ಸ ಏವ ವ್ಯಜ್ಯಮಾನಸ್ತು ಭವೇತ್ಕರ್ಣೈಕಗೋಚರಃ । ಇವೇ ಮೊದಲಾದ ಆಗಮಗಳು ಸಾಕ್ಷಿ(ಸಂವಾದಿಪ್ರಮಾಣ)ಗಳಾಗಿವೆ. (17) ವರ್ಣಗಳು ಹೊರತು ವೇದವೇ ಇಲ್ಲವು. ವರ್ಣಗಳಿಂದ ಅತಿರಿಕ್ತವಾದ ವರ್ಣಗಳಿಂದ ವ್ಯಂಗ್ಯವಾಗುವ ಸ್ಫೋಟವೇ 'ವೇದವು' ಎನ್ನುತ್ತೇವೆ ಎಂದರೆ ಅಂತಹ ಪ್ರಮಾಣವಿಲ್ಲದಿರುವುದರಿಂದ ಸ್ಫೋಟವನ್ನೇ ಅಂಗೀಕರಿಸಲಾಗುವುದಿಲ್ಲ. ಆದುದರಿಂದ 'ವೇದಶ್ಚ' ಎಂದು ಪ್ರತ್ಯೇಕವಾಗಿ ಹೇಳಿದ್ದು ಹೇಗೆ ಕೂಡಬಹುದೆಂದರೆ, ಭೂತ ವರ್ತಮಾನ ಭವಿಷ್ಯತ್ಕಾಲಗಳಲ್ಲಿರುವ ಎಲ್ಲಾ ಪುರುಷರಿಂದಲೂ ಏಕಪ್ರಕಾರವಾಗಿ ಅಭ್ಯಾಸಮಾಡಲ್ಪಡತಕ್ಕದ್ದು, ಇಂತಹ ನಿಯತವಾದ ಕ್ರಮವುಳ್ಳ ವರ್ಣಾತ್ಮಕವಾದುದು ವೇದವು. ಅಂತೂ ವರ್ಣಗಳಿಗೇನೇ ವರ್ಣತ್ವ, ಕ್ರಮವಿಶೇಷ ವಿಶಿಷ್ಟತ್ವರೂಪ ಅವಸ್ಥೆಗಳ ಭೇದದಿಂದ 'ವರ್ಣಾಃ ವೇದಾಶ್ಚ' ಎಂದು ಪ್ರತ್ಯೇಕವಾಗಿ ಉಪಸಂಹಾರಮಾಡಿದ್ದು ಯುಕ್ತವೇ ಆಗಿರುತ್ತದೆ ॥ ೭೩ ॥

**ವರ್ಣನಿತ್ಯತ್ವವಾದವು ಸಮಾಪ್ತವಾಯಿತು.**

---

* ಸಂಸ್ಕಾರ ಸನ್ನಿಕರ್ಷಗಳಿಂದುಂಟಾದ ಜ್ಞಾನವು ಪ್ರತ್ಯಭಿಜ್ಞೆಯು ಉದಾ:— 'ಸ ಏವಾಯಂ ಗಕಾರಃ' ಅದೇ ಗಕಾರವಿದು. ಇತ್ಯಾದಿಗಳು.

(1) 'ಶ್ರೀಹರಿಯು ಆಗಮೈಕವೇದ್ಯನು' ಎಂಬುವ ವಿಷಯದಲ್ಲಿ ಪ್ರಾಭಾಕರರು ಅನುಪಪತ್ತಿಯನ್ನು ಹೇಳುತ್ತಾರೆ. ಹಿಂದೆ ಪ್ರತಿಪಾದಿಸಿದ ವೇದಪ್ರಾಮಾಣ್ಯ, ವೇದಾಪೌರುಷೇಯತ್ವ, ವರ್ಣನಿತ್ಯತ್ವ ಇವುಗಳೆಲ್ಲವೂ ಇರಲಿ. ಆದರೆ 'ಸದಾಗಮೈಕವಿಜ್ಞೇಯಂ' ಎನ್ನುವುದರಿಂದ ವೇದಗಳೆಲ್ಲವೂ ಶ್ರೀಹರಿಯನ್ನು ಪ್ರತಿಪಾದಿಸುತ್ತವೆ ಎಂದು ಹೇಳಿದ್ದು ಉಪಪನ್ನವಾಗುವುದಿಲ್ಲ. ಏಕೆಂದರೆ— ವಾಚ್ಯ (ಅರ್ಥ), ವಾಚಕ (ಶಬ್ದ), ಭಾವರೂಪವಾದ ಸಂಬಂಧಜ್ಞಾನಕ್ಕೆ ವ್ಯುತ್ಪತ್ತಿಯೆಂದು ಹೇಳುತ್ತಾರೆ. ಆ ವ್ಯುತ್ಪತ್ತಿಯನ್ನಪೇಕ್ಷಿಸಿಕೊಂಡೇ ಶಬ್ದವು ಅರ್ಥಜ್ಞಾನವನ್ನು ಹುಟ್ಟಿಸುತ್ತದೆ. ಬೇರೆ ರೀತಿಯಾಗಿ ಅಲ್ಲ. ವ್ಯುತ್ಪತ್ತಿಯಿದ್ದರೇನೇ ಶಬ್ದದಿಂದ ಅರ್ಥಜ್ಞಾನವಾಗುವುದು. ವ್ಯುತ್ಪತ್ತಿಯಿಲ್ಲದಿದ್ದರೆ ಶಬ್ದದಿಂದ ಅರ್ಥಜ್ಞಾನವಾಗುವುದಿಲ್ಲ, ಎಂಬೀ ನಿಯಮವು ಎಲ್ಲರಿಗೂ ತಿಳಿದುದೇ ಯಾಗಿದೆ. ವ್ಯುತ್ಪತ್ತಿಯಾದರೂ ವೃದ್ಧರ ವ್ಯವಹಾರವನ್ನು ನೋಡಿಯೇ ಹುಟ್ಟುವುದು. ವೃದ್ಧರ ವ್ಯವಹಾರವು ಕಾರ್ಯಜ್ಞಾನವನ್ನು ನಿಮಿತ್ತೀಕರಿಸಿಕೊಂಡಿರುವುದು. (ಅಂದರೆ ವೃದ್ಧರ ವ್ಯವಹಾರವನ್ನು ನೋಡಿ ಬಾಲನು ವ್ಯುತ್ಪತ್ತಿಯನ್ನು ಹೊಂದುವಪ್ರಯುಕ್ತ ವೃದ್ಧವ್ಯವಹಾರವು ಕಾರ್ಯಜ್ಞಾನದ್ವಾರಾ ವ್ಯುತ್ಪತ್ತಿಗೆ ಕಾರಣವಾಗುತ್ತದೆ.) ಆದುದರಿಂದ ಶಬ್ದವು ಕಾರ್ಯವನ್ನು ಪ್ರತಿಪಾದಿಸುತ್ತದೆನ್ನುವುದೇ ಯುಕ್ತವು. ಹೇಗೆಂದರೆ — ಚೈತ್ರನೇ ನೀರನ್ನು ತೆಗೆದುಕೊಂಡು ಬಾ ಎಂದು ಹೇಳುವ ಪ್ರಯೋಜಕವೃದ್ಧನ ಮಾತನ್ನು ಕೇಳಿದಮೇಲೆ ಮತ್ತೊಬ್ಬ ಪ್ರಯೋಜ್ಯವೃದ್ಧನು ನೀರನ್ನು ತರಲಿಕ್ಕೆ ಪ್ರವೃತ್ತಿಮಾಡುತ್ತಾನೆ. ಅದನ್ನು ನೋಡಿ ಸಮೀಪದಲ್ಲಿರತಕ್ಕ ಬಾಲಕನು, ಹೀಗೆ ಆಲೋಚಿಸುವನು— 'ಅಸ್ಯೇಯಂ ಪ್ರವೃತ್ತಿಃ ಬುದ್ಧಿಪೂರ್ವಾ, ಸ್ವತಂತ್ರಪ್ರವೃತ್ತಿತ್ವಾತ್, ಮದೀಯಸ್ತನಪಾನಾದಿಪ್ರವೃತ್ತಿವತ್' ನೀರನ್ನು ತರುವ ಈ ಪ್ರಯೋಜ್ಯವೃದ್ಧನ ಪ್ರವೃತ್ತಿಯು ಬುದ್ಧಿಪೂರ್ವಕವು, ಸ್ವತಂತ್ರಪ್ರವೃತ್ತಿಯಾದುದರಿಂದ, ನನ್ನ ಈ ಸ್ತನಪಾನಾದಿಗಳ ಪ್ರವೃತ್ತಿಯಂತೆ, ಎಂದು ಆಲೋಚಿಸುವನು. (2) ಮತ್ತು ಪ್ರಯೋಜ್ಯವೃದ್ಧನ ಪ್ರವೃತ್ತಿಗೆ ಕಾರಣವಾದ ಬುದ್ಧಿಗೆ ಯಾವುದು ವಿಷಯವು ಎಂದು ತಿಳಿಯಬೇಕೆಂದಿಚ್ಛಿಸುತ್ತಿರಲು ಸಮೀಪದಲ್ಲಿದ್ದ ಬಾಲಕನು ಹೀಗೆ ನಿಶ್ಚಯಿಸುತ್ತಾನೆ— 'ವೃದ್ಧಸ್ಯ ಪ್ರವೃತ್ತಿಹೇತುಭೂತಾ ಬುದ್ಧಿಃ=ಪ್ರಯೋಜ್ಯ ವೃದ್ಧನ ಪ್ರವೃತ್ತಿಗೆ ಕಾರಣವಾದ ಬುದ್ಧಿಯು, ಮಮ ಪ್ರವೃತ್ತಿಹೇತುಭೂತಾ ಬುದ್ಧಿಃ ಯದ್ವಿಷಯಿಣೀ ತದ್ವಿಷಯೈವ ಭವಿತುಮರ್ಹತಿ=ನನ್ನ ಪ್ರವೃತ್ತಿಗೆ ಕಾರಣವಾದ ಬುದ್ಧಿಯು ಯಾವುದನ್ನು ವಿಷಯೀಕರಿಸುತ್ತದೋ, ತದ್ವಿಷಯಕವೇ ಆಗಲಿಕ್ಕೆ ಯೋಗ್ಯವಾಗುತ್ತದೆ. ಪ್ರವೃತ್ತಿಹೇತುಭೂತಬುದ್ಧಿತ್ವಾತ್=ಪ್ರವೃತ್ತಿಗೆ ಕಾರಣವಾದ ಬುದ್ಧಿಯಾದುದರಿಂದ, ಮದೀಯ ಪ್ರವೃತ್ತಿಹೇತುಭೂತ ಬುದ್ಧಿವತ್=ನನ್ನ ಪ್ರವೃತ್ತಿಗೆ ಕಾರಣವಾದ ಬುದ್ಧಿಯಂತೆ,' ಹೀಗೆ ನಿಶ್ಚಯಿಸುತ್ತಾನೆ. (3) ಪುನಃ ಹೀಗೆ ನಿಶ್ಚಯಿಸುತ್ತಾನೆ — 'ಯದ್ವಿಷಯಾ ಸಾ ಬುದ್ಧಿಃ ಪ್ರವೃತ್ತಿಹೇತುಭೂತಾ ತದ್ವಸ್ತು ಅಸ್ಯ ಅನೇನ ಶಬ್ದೇನ ಬೋಧಿತಂ ತದ್ಭಾವಭಾವಿತ್ವಾತ್=ಯಾವ ವಸ್ತುವನ್ನು ವಿಷಯೀಕರಿಸಿಕೊಂಡು ಆ ಬುದ್ಧಿಯು ಪ್ರವೃತ್ತಿಗೆ ಕಾರಣವಾಗುತ್ತದೋ ಆ ವಸ್ತುವಿನ ಜ್ಞಾನವು ಪ್ರಯೋಜ್ಯ ವೃದ್ಧನಿಗೆ ಈ ಶಬ್ದದಿಂದ ಹುಟ್ಟಿರುವುದು, ಆ ಶಬ್ದವನ್ನು ಪ್ರಯೋಗ ಮಾಡಿದ ಮೇಲೆ ಹುಟ್ಟಿರುವುದರಿಂದ. ಅಂತೂ ಪ್ರಯೋಜ್ಯ ವೃದ್ಧನ ಪ್ರವೃತ್ತಿಯಾದರೂ ಶಬ್ದರೂಪ ಪ್ರಮಾಣದಿಂದ ಹುಟ್ಟಿರುವುದು. ಆದರೆ, ನನ್ನ ಸ್ತನಪಾನಾದಿಗಳ ಪ್ರವೃತ್ತಿಯಾದರೂ ಜನ್ಮಾಂತರಾನುಭವದಿಂದ ಹುಟ್ಟಿದ ಸಂಸ್ಕಾರದಿಂದ ಅಥವಾ ಅನುಮಾನದಿಂದ ಹುಟ್ಟಿದುವುದು. ಇಷ್ಟೇ ಪ್ರಯೋಜ್ಯ ವೃದ್ಧನ ಪ್ರವೃತ್ತಿಗೂ ನನ್ನ ಪ್ರವೃತ್ತಿಗೂ ವಿಶೇಷವು. ಆದುದರಿಂದ ಯಾವುದರ ಜ್ಞಾನದಿಂದ ನನಗೆ ಸ್ತನಪಾನಾದಿಗಳಲ್ಲಿ ಪ್ರವೃತ್ತಿಯೋ, ಅದು ಈ ಶಬ್ದದಿಂದ ತಿಳಿಸಲ್ಪಡುತ್ತದೆ. ಹೀಗೆ ಶಬ್ದವು ಪ್ರವೃತ್ತಿಗೆ ಕಾರಣವಾದ ಅರ್ಥವನ್ನು ತಿಳಿಸಿಕೊಡುತ್ತದೆ. (4) ಮತ್ತು

ಪ್ರಯೋಜ್ಯ ವೃದ್ಧನ ಪ್ರವೃತ್ತಿಗೆ ಕಾರಣವಾದ ಶಬ್ದಬೋಧ್ಯವಾದ (ಶಬ್ದದಿಂದ ತಿಳಿಯಲ್ಪಡುವ) 'ಅರ್ಥವು ಯಾವುದು' ಎಂದು ನಿಶ್ಚಯಿಸಲಿಕ್ಕೆ ತನ್ನಲ್ಲಿ ತಿಳಿಯಲ್ಪಡುವ ಸ್ತನಪಾನಾದಿಗಳ ಪ್ರವೃತ್ತಿಗೆ ಕಾರಣವಾದ ಅರ್ಥವನ್ನು ಅನುಸಂಧಾನ ಮಾಡಿಕೊಳ್ಳುತ್ತಾನೆ. ಅವುಗಳಲ್ಲಿ ನಾನು ಕೇವಲ ಸ್ತನಪಾನಾದಿರೂಪ ಕ್ರಿಯೆಯನ್ನಾಗಲೀ, ಕೇವಲ ತೃಪ್ತಿರೂಪ ಫಲವನ್ನಾಗಲೀ, ಕೇವಲ ಸಾಧ್ಯಸಾಧನಭಾವರೂಪ ಸಂಬಂಧವನ್ನಾಗಲೀ ತಿಳಿದು ಪ್ರವೃತ್ತಿ ಮಾಡಿದ್ದಲ್ಲ. ಮತ್ತೆ 'ಇದಂ ಮಯಾ ಕರ್ತವ್ಯಂ ಸ್ತನಪಾನತ್ವಾತ್=ಇದು ನನ್ನಿಂದ ಮಾಡತಕ್ಕದ್ದು ಸ್ತನಪಾನ ವಾದುದರಿಂದ' ಎಂದು ಸ್ತನಪಾನಾದಿಗಳಿಗೆ ಕಾರ್ಯತ್ವವನ್ನು ಅನುಮಾನದಿಂದ ತಿಳಿದೇ ನಾನು ಸ್ತನಪಾನಾದಿಗಳಲ್ಲಿ ಪ್ರವೃತ್ತಿಮಾಡಿದೆನು ಎಂದು ತನ್ನ ಪ್ರವೃತ್ತಿಗೆ ಕಾರ್ಯಜ್ಞಾನಪೂರ್ವಕತ್ವ ವನ್ನು ನಿಶ್ಚಯಿಸಿ, ಇವನೂ ಕೂಡ ಕಾರ್ಯಜ್ಞಾನದಿಂದಲೇ ಪ್ರವೃತ್ತಿಮಾಡಿದನೆಂದು ನಿಶ್ಚಯಿಸು ತ್ತಾನೆ. 'ಚೈತ್ರಸ್ಯ ಪ್ರವೃತ್ತಿಃ=ಚೈತ್ರನ ಪ್ರವೃತ್ತಿಯು, ಕಾರ್ಯಬೋಧ ಪೂರ್ವಿಕಾ=ಕಾರ್ಯ ಜ್ಞಾನವು ಪ್ರಾಥಮಿಕವಾಗಿ ಉಳ್ಳದ್ದು, (ಅಂದರೆ ಕಾರ್ಯಜ್ಞಾನದಿಂದ ಹುಟ್ಟಿದ್ದು) ಬುದ್ಧಿಪೂರ್ವ ಪ್ರವೃತ್ತಿತ್ವಾತ್=ಬುದ್ಧಿಪೂರ್ವಕವಾದ ಪ್ರವೃತ್ತಿಯಾದುದರಿಂದ, ಮದೀಯ ಸ್ತನಪಾನಾದಿ ಪ್ರವೃತ್ತಿವತ್=ನಾನು ಮಾಡತಕ್ಕ ಸ್ತನಪಾನಾದಿಗಳ ಪ್ರವೃತ್ತಿಯಂತೆ, ಎಂದನುಮೇಯಿಸಿ, ಪ್ರವೃತ್ತಿಗೆ ಕಾರಣವಾದ ಅರ್ಥವನ್ನು ತಿಳಿಸಿಕೊಡತಕ್ಕ ವಾಕ್ಯಗಳೆಲ್ಲವೂ ಕಾರ್ಯಪರಗಳೆಂದು ನಿಶ್ಚಯಿಸುತ್ತಾನೆ. (5) ಆ ಮೇಲೆ ಲಿಙ್, ಲೋಟ್, ತವ್ಯ, ಪ್ರತ್ಯಯಗಳ ಯೋಗ (ಸಂಬಂಧ) ವಿದ್ದರೆ 'ಇದನ್ನು ನಾನು ಮಾಡಬೇಕು' ಎಂದು ಕಾರ್ಯಜ್ಞಾನವು ಬರುವುದರಿಂದಲೂ, ಲಿಙಾದಿ ಗಳನ್ನು ತೆಗೆದು ಬಿಟ್ಟರೆ ಕಾರ್ಯಜ್ಞಾನವು ಬಾರದಿರುವುದರಿಂದಲೂ ಲಿಙ್, ಲೋಟ್, ತವ್ಯ, ಪ್ರತ್ಯಯಗಳೇ ಕಾರ್ಯಜ್ಞಾನಕ್ಕೆ ಕಾರಣಗಳಾಗುತ್ತವೆ. ಬೇರೆ ಶಬ್ದಗಳಾದರೂ ಕಾರ್ಯದಿಂ ದೊಡಗೂಡಿದ ಚೈತ್ರಾದಿ ಪದಾರ್ಥಗಳನ್ನು ತಿಳಿಸಿಕೊಡುತ್ತವೆ. ಹೀಗೆ ಶಬ್ದಪ್ರಕ್ಷೇಪ(ಸ್ಥಾಪನ) ನಿಷ್ಕಾಸನ(ಪರಿತ್ಯಾಗ)ಗಳಿಂದ ತಿಳಿಯುತ್ತಾನೆ. (6) ಹೀಗೆ ಲೋಕದಲ್ಲಿ ಕಾರ್ಯದಲ್ಲಿಯೇ ಶಬ್ದಗಳಿಗೆ ಸಂಬಂಧವನ್ನು ತಿಳಿದಮೇಲೆ ವೇದದಲ್ಲಿಯೂ ಕಾರ್ಯವನ್ನೇ ಶಬ್ದದಿಂದ ತಿಳಿಯು ತ್ತಾನೆ. (7) 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವೇದವಾಕ್ಯಗಳಲ್ಲಿ ಲಿಙಾದಿಪ್ರತ್ಯಯಗಳು (ಈತ ಪ್ರತ್ಯಯ) ಪ್ರಯತ್ನರೂಪವಾದ ಶಾಬ್ದೀಭಾವನೆಯನ್ನೂ (ಕಾರ್ಯ ಸ್ವರೂಪವನ್ನೂ) ಪ್ರಕೃತಿಯು (ಯಜ್ ಎಂಬುವ ಧಾತುವು) ಲಿಙ್ವಾಚ್ಯ ಪ್ರಯತ್ನವಿಷಯ ವಾದ ಯಾಗವನ್ನೂ 'ಇನ' ಎಂಬುವ ತೃತೀಯಾ ವಿಭಕ್ತಿಯು ಯಾಗಕ್ಕ ಕರಣತ್ವವನ್ನೂ, 'ಜ್ಯೋತಿಷ್ಟೋಮ' ಎನ್ನುವುದು ಪ್ರಕೃತ್ಯರ್ಥವಾದ ಯಾಗದಲ್ಲಿ ವಿಶೇಷಣೀಭೂತವಾದ ನಾಮ ಧೇಯವನ್ನೂ 'ಸ್ವರ್ಗಕಾಮಃ' ಎನ್ನುವುದು ನಿಯೋಜ್ಯನಾದ ಅಧಿಕಾರಿಯನ್ನೂ ಹೇಳುವುವುಗಳಾಗಿ ಕಾರ್ಯಜ್ಞಾನದಲ್ಲಿಯೇ ವ್ಯಾಪಾರವುಳ್ಳವುಗಳಾಗುತ್ತವೆ. ಅಂದರೆ, ಕಾರ್ಯಜ್ಞಾನವನ್ನೇ ಹುಟ್ಟಿ ಸುತ್ತವೆ. (8) ಅಂಗವಾಕ್ಯಗಳು, (೧) ಸನ್ನಿಪತ್ಯೋಪಕಾರಕಗಳು (೨) ಆರಾದುಪಕಾರಕಗಳು ಹೀಗೆ ೨ ವಿಧವು. ಇವುಗಳಲ್ಲಿ (೧) ಸನ್ನಿಪತ್ಯೋಪಕಾರಕಗಳು ದೃಷ್ಟಪ್ರಯೋಜನದ್ವಾರಾ ಸಾಕ್ಷಾತ್ ಉಪಕಾರಕಗಳು. ಉದಾ='ವ್ರೀಹೀನವಹಂತಿ' 'ವ್ರೀಹೀನ್ ಪ್ರೋಕ್ಷತಿ' ಇತ್ಯಾದಿಗಳು ಬತ್ತಗಳನ್ನು ಅವಹನನ (ಕುಟ್ಟುವುದು) ಮಾಡುವುದರಿಂದ ಒಟ್ಟು ಹೋಗಿ ಯಾಗಸ್ವರೂಪಕ್ಕೆ ಅವಹನನಾದಿಗಳು ಉಪಕಾರಕಗಳಾಗುತ್ತವೆ. (೨) ಆರಾದುಪಕಾರಕಗಳು ಅದೃಷ್ಟ (ಪುಣ್ಯ) ದ್ವಾರಾ ಉಪಕಾರಕಗಳು. ಉದಾ='ಇಡೋ ಯಜತಿ' ಇದುಮೊದಲಾದ ೫ ಪ್ರಯಾಜವಾಕ್ಯಗಳು. ಅದೃಷ್ಟಹುಟ್ಟಿಸಿ ಯಾಗಫಲದಲ್ಲಿ ಉಪಕಾರಕಗಳಾಗುತ್ತವೆ. ಆದಕಾರಣ ಯಾಗೋತ್ಪತ್ತ್ಯ ಪೂರ್ವ (ಪುಣ್ಯ) ವನ್ನು ಹುಟ್ಟಿಸುವ ಅವಹನನ (ಕುಟ್ಟುವುದು) ಪ್ರೋಕ್ಷಣ ಮೊದಲಾದ

ಅಂಗಗಳನ್ನು ಪ್ರತಿಪಾದಿಸುವ 'ವ್ರೀಹೀನವಹಂತಿ' 'ವ್ರೀಹೀನ್ ಪ್ರೋಕ್ಷತಿ' ಇವೇ ಮೊದಲಾದ ಸನ್ನಿಪತ್ಯೋಪಕಾರಕ ಅಂಗವಾಕ್ಯಗಳು ಯದ್ಯಪಿ ಸ್ವರ್ಗಾದಿಫಲಗಳನ್ನು ದೊರಕಿಸುವ ಪ್ರಧಾನಾಪೂರ್ವ (ಕಾರ್ಯ)ದಿಂದ ಬೇರೆ ಪ್ರಧಾನಕಾರ್ಯವನ್ನು ಬೋಧಿಸುವುದಿಲ್ಲ. ಅಂದರೆ 'ಯಜೇತ ಸ್ವರ್ಗಕಾಮಃ' ಇತ್ಯಾದಿಗಳಲ್ಲಿ ಯಾಗವಿಷಯಕವಾದ ಕಾರ್ಯವು ಎನ್ನುವಂತೆ ಅವಹನನ ವಿಷಯಕವಾದ ಕಾರ್ಯವು ಎಂದು ಅನ್ವಯಜ್ಞಾನವು ಬರುವುದಿಲ್ಲ. ಆದಾಗ್ಯೂ ಸ್ವರ್ಗಾದಿಫಲ ಗಳಿಗೆ ಮುಖ್ಯ ಸಾಧನವಾಗುದುದರಿಂದ ಪ್ರಧಾನಭೂತವಾದ ಯಾಗ (ಕಾರ್ಯ) ದಿಂದ ಅನ್ವಯವನ್ನು ಹೊಂದಿಯೇ ತನ್ನ ಅರ್ಥವನ್ನು ಪ್ರತಿಪಾದಿಸುವುದರಿಂದ ಪ್ರಧಾನಯಾಗರೂಪ ಕಾರ್ಯ ಜ್ಞಾನದಲ್ಲಿಯೇ ವ್ಯಾಪಾರವುಳ್ಳವುಗಳಾಗುತ್ತವೆ. (9) 'ವ್ರೀಹೀಣಾಂ ಮೇಧ ಸುಮನಸ್ಯಮಾನಃ' ಇತ್ಯಾದಿಮಂತ್ರಗಳೂ ಕೂಡ ಕಾರ್ಯ (ಪ್ರಧಾನಭೂತಯಾಗ)ಕ್ಕೆ ಅಂಗಭೂತಗಳಾದ ಪುರೋಡಾಶಾದಿದ್ರವ್ಯ, ದೇವತಾ ಇವುಗಳ ಸ್ಮೃತಿಯನ್ನು ಹುಟ್ಟಿಸುತ್ತಾ ಕಾರ್ಯ (ಪ್ರಧಾನಭೂತವಾದ ಯಾಗ)ದಲ್ಲಿಯೇ ವಿನಿಯುಕ್ತಗಳಾಗಿ ವ್ಯಾಪಾರವುಳ್ಳವುಗಳು. (10) 'ವಾಯುರ್ವೈ ಕ್ಷೇಪಿಷ್ಠಾ ದೇವತಾ'ಇತ್ಯಾದ್ಯರ್ಥವಾದಗಳೂ ವಿಧಿಬೋಧ್ಯವಾದ ಕಾರ್ಯದಲ್ಲಿಯೇ ಪ್ರಾಶಸ್ತ್ಯವನ್ನು ಬೋಧಿಸುವುದರಿಂದ, ಶೀಘ್ರದಲ್ಲಿ ಪ್ರವೃತ್ತಿಯನ್ನು ಹುಟ್ಟಿಸುತ್ತಾ ಉಪಯುಕ್ತಗಳಾಗುತ್ತವೆ. ಹೀಗೆಯೇ ಎಲ್ಲಾ ವೇದಗಳೂ ಕಾರ್ಯದಲ್ಲಿಯೇ ಪ್ರಮಾಣವು. (11) ಪ್ರಯತ್ನದಿಂದ ಸಾಧಿಸಲಿಕ್ಕೆ ಯೋಗ್ಯವಾಗಿದ್ದು ಪ್ರಯತ್ನಕ್ಕೆ ಉದ್ದೇಶ್ಯವಾದುದು ಕಾರ್ಯವು. ಆ ಕಾರ್ಯವು 'ಗಾಮಾನಯ' ಇದು ಮೊದಲಾದ ಪೌರುಷೇಯಪ್ರಯೋಗಗಳಲ್ಲಿ ಧಾತುವಿನ ಅರ್ಥವಾದ ಆನಯನವು (ತರೋಣವು) ಆಗುತ್ತದೆ. ವೇದದಲ್ಲಾದರೂ ಕಾರ್ಯವು ಅಪೂರ್ವ (ಅದೃಷ್ಟ)ವು. (12) ಎಲ್ಲಾ ವೇದಗಳೂ ಕಾರ್ಯಪರಗಳಾದುದರಿಂದಲೇ ವೇದಾಂತಗಳೂ ಅಂದರೆ 'ವಿಜ್ಞಾನಘನ ಏವೈತೇಭ್ಯೋ ಭೂತೇಭ್ಯಃ ಸಮುತ್ಥಾಯ' ಇತ್ಯಾದಿಗಳು ಕಾರ್ಯಕ್ಕೆ ಅಂಗಭೂತವಾದ ಕರ್ತೃಸ್ವರೂಪವನ್ನು ಪ್ರತಿಪಾದಿಸುತ್ತವೆ. 'ವಾಗ್ವಾವ ನಾಮ್ನೋ ಭೂಯಸೀ' ಇತ್ಯಾದಿಗಳು ಕಾರ್ಯಕ್ಕೆ ಅಂಗಭೂತವಾದ ದೇವತಾಸ್ವರೂಪವನ್ನು ಪ್ರತಿಪಾದಿಸುತ್ತವೆ. (13) ಬ್ರಹ್ಮಪ್ರಕರಣ-ಕರ್ಮಪ್ರಕರಣಗಳಿಗೆ ಭೇದವಿದ್ದುದರಿಂದ ವೇದಾಂತವಾಕ್ಯಗಳು ಕರ್ಮಕಾಂಡದಲ್ಲಿರತಕ್ಕ ಕಾರ್ಯಕ್ಕೆ ಅಂಗಭೂತಗಳಾದ ಕರ್ತ್ರಾದಿಗಳನ್ನು ಪ್ರತಿಪಾದಿಸುತ್ತವೆ. ಎಂಬುವುದನ್ನಂಗೀಕರಿಸದಿದ್ದರೂ ಬ್ರಹ್ಮಕಾಂಡದಲ್ಲಿಯೇ ಇರುವ 'ಆತ್ಮಾ ಜ್ಞಾತವ್ಯಃ' ಎಂಬೀ ವಿಧಿಯಿಂದ ಏಕವಾಕ್ಯತ್ವವನ್ನು ಒಡಂಬಟ್ಟು ಕಾರ್ಯಪರತ್ವವನ್ನೇ ಹೇಳಬೇಕು. ಈ ಪ್ರಕಾರ ಎಲ್ಲಾ ಶಬ್ದಗಳಿಗೂ ಕಾರ್ಯಾನ್ವಿತವಾದ ಅರ್ಥದಲ್ಲಿಯೇ ವ್ಯುತ್ಪತ್ತಿಯು ದೃಷ್ಟವಾಗಿದೆ. ಕೇವಲ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯು ದೃಷ್ಟವಾಗಲಿಲ್ಲ. ಆದುದರಿಂದ ಸಿದ್ಧಸ್ವರೂಪನಾದ ವಿಷ್ಣುವನ್ನು ವೇದವು ಪ್ರತಿಪಾದಿಸುತ್ತದೆ ಎಂದು ಹೇಳಿದ್ದು ಸಂಭವಿಸುವುದಿಲ್ಲ. ಆದುದರಿಂದ ಸದಾಗಮೈಕವಿಜ್ಞೇಯತ್ವವು ಶ್ರೀ ಹರಿಗೆ ಸರ್ವಥಾ ಅಯುಕ್ತವೆಂದು ಪ್ರಾಭಾಕರರು ಪೂರ್ವಪಕ್ಷಮಾಡಿದ್ದನ್ನು ಆಚಾರ್ಯರು ನಿರಾಕರಿಸುತ್ತಾರೆ —

**ಮೂ ॥ ನ ಚ ಕೇವಲಸಿದ್ಧೇಽರ್ಥೇ ವ್ಯುತ್ಪತ್ತ್ಯಭಾವಾದಪ್ರಾಮಾಣ್ಯಂ ।**
**ಸಿದ್ಧಾನ್ವಿತ ಏವ ವ್ಯುತ್ಪತ್ತಿಗೃಹೀತೇಃ ॥ ೭೪ ॥**

ಅ ॥ *ಕೇವಲಸಿದ್ಧೇ, ಕೇವಲ=ಕಾರ್ಯಾನ್ವಯರಹಿತವಾದ ತಾನೇ ಪ್ರಧಾನವಾದ, ಸಿದ್ಧೇ=ಕಾರ್ಯಾತಿರಿಕ್ತವಾದ, ಅರ್ಥೇ=ಅರ್ಥದಲ್ಲಿ, ವ್ಯುತ್ಪತ್ತ್ಯಭಾವಾತ್ = (ಶಬ್ದಗಳಿಗೆ) ವ್ಯುತ್ಪತ್ತಿಯಿಲ್ಲದಿರುವುದರಿಂದ ( * ಕೇವಲ ಸಿದ್ಧಾರ್ಥನಾದ ವಿಷ್ಣುವಿನಲ್ಲಿ ವೇದಕ್ಕೆ )

* ಕಾರ್ಯದಿಂದ ಅನ್ವಿತವಾಗದಿರುವುದು ಕಾರ್ಯಾತಿರಿಕ್ತವಾದುದು, ಅರ್ಥವು ಸಿದ್ಧಾರ್ಥವು.

ಅಪ್ರಾಮಾಣ್ಯಂ=ಅಪ್ರತಿಪಾದಕತ್ವವು. (ಅಂದರೆ ವೇದವು ಈಶ್ವರನನ್ನು ಪ್ರತಿಪಾದಿಸುವುದಿಲ್ಲ.)ಇತಿ ಚ=ಎನ್ನುವುದೂ, ನ=ಇಲ್ಲ. ಸಿದ್ಧಾನ್ವಿತ ಏವ=ಕಾರ್ಯಾನ್ವಯ ನಿಯಮವಿಲ್ಲದೆ ಯೋಗ್ಯವಾದ ಇತರದಿಂಗೊಡಗೂಡಿದ ಸ್ವಾರ್ಥದಲ್ಲಿಯೇ, ವ್ಯುತ್ಪತ್ತಿಗೃಹೀತೇಃ=ವ್ಯುತ್ಪತ್ತಿಯು ದೃಷ್ಟವಾದುದರಿಂದ,

ತಾ || (1) ಕಾರ್ಯದಿಂದ ಅನ್ವಿತನಾದುದರಿಂದಲೇ ಈಶ್ವರನಲ್ಲಿ ವೇದಗಳಿಗೆ ಪ್ರಾಮಾಣ್ಯವು ಕೂಡುವುದರಿಂದ ವೇದವು ಈಶ್ವರನನ್ನು ಪ್ರತಿಪಾದಿಸುವುದಿಲ್ಲ ಎನ್ನುವುದು ಯುಕ್ತವಲ್ಲ ಎಂದು ನಿರಾಕರಿಸಿದ್ದು ಅಸಂಗತವೆಂದು ಹೇಳಕೂಡದು. ಕಾರ್ಯಾನ್ವಯರಹಿತನಾದ ವಿಷ್ಣುವಿನಲ್ಲಿಯೇ ಸರ್ವವೇದಗಳಿಗೂ ಪ್ರಾಮಾಣ್ಯವು ಇಷ್ಟವಾದುದು. ಆದುದರಿಂದಲೇ ಸದಾಗಮಗಳಿಂದ ಭಗವಂತನೊಬ್ಬನೇ ಮುಖ್ಯವಿಜ್ಞೇಯನು ಎಂದೂ ಅರ್ಥವು ವಿವಕ್ಷಿತವಾಗಿದೆ. (2) ಇಷ್ಟಸಾಧನತ್ವದಿಂದ ಅತಿರಿಕ್ತವಾದ ಕೃತ್ಯುದ್ದೇಶ್ಯತ್ವವನ್ನೂ ಹೇಳಲಿಕ್ಕೆ ಬಾರದಿರುವುದರಿಂದ ಇಷ್ಟಸಾಧನತ್ವವೇ ಲಿಙ್, ಲೋಟ್, ತವ್ಯ ಪ್ರತ್ಯಯಗಳಿಗೆ ಅರ್ಥವೆಂದು ಅನುವ್ಯಾಖ್ಯಾನಾದಿಗಳಲ್ಲಿ ಉಪಪಾದಿಸಿದುದರಿಂದ ಪ್ರಾಭಾಕರರಿಗೆ ಅಭಿಮತವಾದ 'ಕೃತಿಸಾಧ್ಯತ್ವೇಸತಿ ಕೃತ್ಯುದ್ದೇಶ್ಯತ್ವ' ರೂಪವಾದ ಕಾರ್ಯತ್ವವು ವಿವಕ್ಷಿತವಲ್ಲವೆಂದು ಸೂಚಿಸುವುದಕ್ಕಾಗಿ 'ಸಿದ್ಧಾನ್ವಿತ ಏವ' ಎಂದು ಹೇಳಿದ್ದು. ಅಥವಾ ಕಾರ್ಯದಲ್ಲಿಯೇ ಅನ್ವಯವೆಂಬ ನಿಯಮವನ್ನು ನಿರಾಕರಿಸುವುದಕ್ಕಾಗಿ 'ಏವ' ಎಂದು ಹೇಳಿರುವುದು || ೭೪ ||

ಅದನ್ನೇ ವಿಶದೀಕರಿಸುತ್ತಾರೆ —

ಮೂ || ಇಯಂ ಮಾತಾಽಯಂ ಪಿತೇತ್ಯಾದಾವಂಗುಲಿಪ್ರಸಾರಣಾದಿ
ಪೂರ್ವಕ ನಿರ್ದೇಶೇನೈವ ಹಿ ತಜ್ಜಾನಾತಿ || ೭೫ ||

ಅ || ಇಯಂ=ಇವಳು, ಮಾತಾ=(ನಿನ್ನ) ತಾಯಿಯು, ಅಯಂ=ಇವನು, ಪಿತಾ=(ನಿನ್ನ)ತಂದೆಯು,ಇತ್ಯಾದೌ=ಇದೇ ಮೊದಲಾದ ವಾಕ್ಯಗಳು,(ಪ್ರಯೋಜಕ ವೃದ್ಧನಿಂದ ಪ್ರಯೋಗಿಸಲ್ಪಡುತ್ತಿರಲು) ಅಂಗುಲಿ ಪ್ರಸಾರಣಾದಿ ಪೂರ್ವಕ ನಿರ್ದೇಶೇನೈವ, ಅಂಗುಲಿ=ಬೆರಳುಗಳ, ಪ್ರಸಾರಣ=ಪ್ರಸಾರವೇ, (ಬೆರಳುಗಳಿಂದ ತೋರಿಸೋಣವೇ,) ಆದಿ=ಮೊದಲಾಗಿ ಉಳ್ಳ, ಭ್ರೂವಿಕ್ಷೇಪ (ಹುಬ್ಬುಗಳನ್ನ ಹಂದಾಡಿಸುವುದು,) ಛೋಟಿಕಾವಾದನ (ಬೆರಳುಗಳಿಂದ ಚಿಟಕಿ ಹಾಕೋಣ) ಇತ್ಯಾದಿಗಳೇ, ಪೂರ್ವಕ = ಪೂರ್ವವಾಗಿ ಉಳ್ಳ, ನಿರ್ದೇಶೇನೈವ = ಇವಳು ತಾಯಿಯು, ಇದು ಮೊದಲಾದ ನಿರ್ದೇಶದಿಂದಲೇ, ತತ್=ತಾಯಿ ತಂದೆ ಮೊದಲಾದವರನ್ನು ಮಾತ್ರಾದಿ ಶಬ್ದಗಳಿಂದ ವಾಚ್ಯರನ್ನಾಗಿ, (ಬಾಲಕನು) ಜಾನಾತಿ ಹಿ=ತಿಳಿಯುತ್ತಾನಷ್ಟೆ.

ತಾ || (1) ಮಕ್ಕಳು ಕೆಲವು ವೇಳೆಯಲ್ಲಿ ತಮ್ಮ ತಾಯಿ ತಂದೆಯರ ತೊಡೆಯ ಮೇಲೆ ಕುಳಿತಿರುವರು. ಆಗ ಮಕ್ಕಳ ಮನಸ್ಸು ಎಲ್ಲಿಯೋ ಬೇರೊಂದು ಲಕ್ಷ್ಯದಲ್ಲಿದ್ದರೆ ತಾಯಿ ತಂದೆಯವರು ಅವರಿಗೆ ಏನನ್ನಾದರೂ ಬೋಧಿಸಬೇಕೆಂದು ಇಚ್ಛಿಸುವಾಗ ಬೆರಳ ಚಿಟಕಿ ಇತ್ಯಾದಿಗಳಿಂದ ಅವರ ಮನಸ್ಸನ್ನು ಆ ಲಕ್ಷ್ಯದಿಂದ ತಿರುಗಿಸಿ ಹೀಗೆ ಬೋಧಿಸುವರು. 'ಬಾಲಕನೇ ಇವಳು ನಿನ್ನ ತಾಯಿಯು, ಇವನು ನಿನ್ನ ತಂದೆಯು, ಇವನು ನಿನ್ನ ಅಣ್ಣನು, ಅವನು ಬಾಳೆ ಹಣ್ಣನ್ನು ತಿನ್ನುತ್ತನೆ ಎಂದು. ಆಗ ವೃದ್ಧರ ವ್ಯವಹಾರವಿಲ್ಲದೇನೇ ಬಾಲಕರು ಆ ನಿರ್ದೇಶದಿಂದಲೇ ಆ ಶಬ್ದಗಳ ಸಮುದಾಯಕ್ಕೆ ಕಾರ್ಯದಲ್ಲಿ ಅನ್ವಯವಿಲ್ಲದಿದ್ದರೂ ಸಿದ್ಧವಾದ ಆ ಅರ್ಥ ಸಮುದಾಯದಲ್ಲಿ ಇವರು ಈ ಪದದಿಂದ ಈ ಅರ್ಥವನ್ನು ತಿಳಿಸಿಕೊಡುತ್ತಾರೆ ಎಂಬುದಾಗಿ

ಪ್ರತಿಪಾದ್ಯ ಪ್ರತಿಪಾದಕಭಾವಸಂಬಂಧವನ್ನು ತಿಳಿಯುತ್ತಾರೆ.(2) ಮತ್ತು ಇವಳು ನಿನ್ನ ತಂಗಿಯು, ಇವನು ನಿನ್ನ ಮಿತ್ರನು, ಅವನು ಅಪೂಪ(ಅಪ್ಪ) ವನ್ನು ತಿನ್ನುತ್ತಾನೆ, ಇದುಮೊದಲಾದ ಬೇರೆ ವಾಕ್ಯಗಳಲ್ಲಿ ಶಬ್ದಾರ್ಥಗಳ ಆವಾಪೋದ್ಧಾರ (ವಿವಕ್ಷಿತವಾದ ಅರ್ಥವನ್ನು ತಿಳಿಸುವುದಕ್ಕಾಗಿ ಅದಕ್ಕೆ ಯೋಗ್ಯವಾದ ಶಬ್ದವನ್ನು ಸ್ಥಾಪಿಸುವುದು ಆವಾಪವು. ಆ ಅರ್ಥವನ್ನು ಬಿಡುವುದಕ್ಕಾಗಿ ಆ ಶಬ್ದವನ್ನು ಪರಿತ್ಯಾಗಮಾಡುವುದು ಉದ್ಧಾರವು.) ಗಳಿಂದ ಶಬ್ದವಿಭಾಗಾದಿಗಳನ್ನು ತಿಳಿದು ಮಾತ್ರಾದಿಪದಗಳಿಗೆ ಯೋಗ್ಯವಾದ ಇತರದಿಂದೊಡಗೂಡಿದ ತಾಯಿ ತಂದೆ ಮೊದಲಾದ ಅರ್ಥಗಳ ವಾಚಕತ್ವವದೆ, ಎಂದು ನಿಶ್ಚಯಿಸುತ್ತಾನೆ. ಈ ಉಪಾಯವು ಅತಿ ಲಘುವಾದುದು. (3) ಯಾವಾಗಲೂ ಮರತು ಹೋಗುವ ಸ್ವಭಾವವುಳ್ಳ ಬಾಲಕರು ಶಬ್ದಗಳನ್ನನುಸಂಧಾನಮಾಡಿಕೊಂಡು ತಮಗೆ ಅಪೇಕ್ಷಿತವೇ ಆಗದಿರುವ ವೃದ್ಧನ ಆಗಮನಾದಿಗಳನ್ನು ನಿರೀಕ್ಷಿಸಿಕೊಂಡಿದ್ದಾರೆ. ಎಂದು ಕಲ್ಪಿಸುವುದು ಅತಿಗುರುವಾಗಿದೆ. ಇಷ್ಟಸಾಧನರೂ ಅಪೇಕ್ಷಿತರೂ ಆಗಿ, ಮುಂಭಾಗದಲ್ಲಿರುವ ಮಾತ್ರಾದಿಗಳಲ್ಲಿ ಶಬ್ದವು ಶ್ರುತವಾದೊಡನೆಯೇ ಆ ಶಬ್ದವು ಆ ಅರ್ಥದಲ್ಲಿ ಶಕ್ತಿಯುಳ್ಳದ್ದೆಂದು ತಿಳಿಯುತ್ತಾರೆಂದು ಕಲ್ಪಿಸುವುದು ಅತಿಲಘುವಾಗಿದೆ. (4) ವರ್ತಮಾನ ಪದಾರ್ಥಗಳಲ್ಲಿ ಇದೇರೀತಿಯಾಗಿ ವ್ಯುತ್ಪತ್ತಿಯಾದ ಬಳಿಕ ಭವಿಷ್ಯದ್ವಸ್ತುಗಳಲ್ಲಿ ವ್ಯುತ್ಪತ್ತಿಯನ್ನು ತಿಳಿಯಬೇಕೆಂಬ ಕುತೂಹಲಹುಟ್ಟಿದರೆ, ಆ ಮೇಲೆ ವ್ಯವಹಾರವನ್ನು ನೋಡಿ ಕಾರ್ಯಪರವಾದ ವಾಕ್ಯದಲ್ಲಿಯೂ ವ್ಯುತ್ಪತ್ತಿಯು ಆಗುವುದು. (5) ಸಿದ್ಧಾರ್ಥಪರವಾದ ವಾಕ್ಯದಿಂದಲೂ ಆಗತಕ್ಕ ವ್ಯುತ್ಪತ್ತಿಗಳೆಲ್ಲವೂ ಪ್ರಥಮತಃ ಕಾರ್ಯದಲ್ಲಿಯೇ ವ್ಯುತ್ಪತ್ತಿಯಾಗಿ ಆ ಮೇಲೆ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಬರುವುದರಿಂದ ಅದೂ ಕಾರ್ಯವ್ಯುತ್ಪತ್ತಿಯೇ ಆಗುವುದು, ಎನ್ನುವುದೂ ತಿರಸ್ಕೃತವಾಯಿತು. ಹೇಗೆಂದರೆ — ಪ್ರಥಮದಲ್ಲಿಯೇ ಸಿದ್ಧಾರ್ಥದಲ್ಲಿಯೂ ವ್ಯುತ್ಪತ್ತಿಯು ಬರುತ್ತದೆ ಎಂದು ಸಮರ್ಥಿಸಿರುವೆವು ॥ ೭೫ ॥

ಈ ಪ್ರಕಾರ ಕಾರ್ಯಾನ್ವಯಹೊರತೂ ವ್ಯುತ್ಪತ್ತಿಯು ದೃಷ್ಟವಾದುದರಿಂದ ಯೋಗ್ಯೇತರಾನ್ವಿತ ಸ್ವಾರ್ಥದಲ್ಲಿ ವ್ಯುತ್ಪತ್ತಿಯೆಂದು ಸಾಮಾನ್ಯಾಕಾರವಾಗಿಯೇ ಅಂಗೀಕರಿಸಬೇಕು. ಕಾರ್ಯಾನ್ವಿತದಲ್ಲಿಯೇ ವ್ಯುತ್ಪತ್ತಿಯು ಎಂಬುವ ವಿಶೇಷನಿರ್ಬಂಧವನ್ನು ಬಿಡಬೇಕು. ಎಂದು ಉಕ್ತವಾಯಿತು. ಕಾರಣಾಂತರದಿಂದಲೂ ಹೀಗೆಯೇ ಅಂಗೀಕರಿಸಬೇಕೆಂದು ಹೇಳುತ್ತಾರೆ —

**ಮೂ ॥ ಕಾರ್ಯಾನ್ವಿತ ಏವ ವ್ಯುತ್ಪತ್ತಿರಿತಿ ವದತಃ ಕಾರ್ಯಸ್ಯ ಕಾರ್ಯಾನ್ವಯಾಭಾವಾತ್ಕಲ್ಪನಾಗೌರವಂ ॥ ೭೬ ॥**

ಅ ॥ ಕಾರ್ಯಾನ್ವಿತ ಏವ=ಕಾರ್ಯಾನ್ವಿತವಾದ ಸ್ವಾರ್ಥದಲ್ಲಿಯೇ, ವ್ಯುತ್ಪತ್ತಿಃ=(ಶಬ್ದಗಳಿಗೆ) ಶಕ್ತಿಯು, ಇತಿ=ಹೀಗೆ, ವದತಃ=ಹೇಳತಕ್ಕ ಪ್ರಾಭಾಕರನಿಗೆ, ಕಾರ್ಯಸ್ಯ=ಕಾರ್ಯಕ್ಕೆ, ಕಾರ್ಯಾನ್ವಯಾಭಾವಾತ್=ಕಾರ್ಯದಲ್ಲಿ ಅನ್ವಯವಿಲ್ಲದಿರುವುದರಿಂದ, ಕಲ್ಪನಾಗೌರವಂ=ಕಲ್ಪಿಸುವುದು ಗುರುಭೂತವಾಗುವುದು.

ತಾ ॥ (1) ಎಲ್ಲಾ ಶಬ್ದಗಳಿಗೂ ಕಾರ್ಯಾನ್ವಿತವಾದ ಸ್ವಾರ್ಥದಲ್ಲಿ ಶಕ್ತಿಯು ಎಂದು ಒಂದೇ ಪ್ರಯೋಜಕವನ್ನು ಅಂಗೀಕರಿಸಲಿಕ್ಕೆ ಆಗುವುದಿಲ್ಲ. ಲಿಙಾದಿಗಳಿಗೆ ಕಾರ್ಯವೇ ಸ್ವಾರ್ಥವು. ಕಾರ್ಯಕ್ಕೆ ಮತ್ತೊಂದು ಕಾರ್ಯದಿಂದ ಅನ್ವಯವು ಕೂಡಲಾರದು. ಗುಣ (ಅಪ್ರಧಾನ) ಪ್ರಧಾನಭಾವದಿಂದಲೇ ಪದಾರ್ಥಗಳಿಗೆ ಅನ್ವಯವು ಹೇಳಬೇಕು. ಕಾರ್ಯವು ಪ್ರಧಾನನಾಗಿ ಶಬ್ದದಿಂದಲೇ ಜ್ಞಾತವಾಗುತ್ತದೆ. ಅಂತೂ ಎರಡು ಕಾರ್ಯಗಳಿಗೆ ಏಕಕಾಲದಲ್ಲಿ

ಗುಣಪ್ರಧಾನಭಾವವು ಕೂಡಲಾರದು. ಆದಪ್ರಯುಕ್ತ ಕಾರ್ಯಕ್ಕೆ ಕಾರ್ಯದಿಂದ ಅನ್ವಯವು ಕೂಡದಿರುವುದರಿಂದ ಲಿಙಾದಿಗಳಿಗೆ ಕೇವಲ ಕಾರ್ಯದಲ್ಲಿ ಅಥವಾ ಸಿದ್ಧಾರ್ಥದಿಂದೊಡಗೂಡಿದ ಕಾರ್ಯದಲ್ಲಿ ವ್ಯುತ್ಪತ್ತಿಯೆಂದು ಅಂಗೀಕರಿಸಬೇಕು. ಗವಾದಿಪದಗಳಿಗೆ ಕಾರ್ಯಾನ್ವಿತವಾದ ಸ್ವಾರ್ಥದಲ್ಲಿ ಶಕ್ತಿಯೆಂದಂಗೀಕರಿಸಬೇಕು. ಹೀಗೆ ಎರಡು ಪ್ರಯೋಜಕಗಳನ್ನು ಅಂಗೀಕರಿಸಿದರೆ ಕಲ್ಪನಾಗೌರವವು. ಯೋಗ್ಯೇತರಾನ್ವಿತಸ್ವಾರ್ಥದಲ್ಲಿ ವ್ಯುತ್ಪತ್ತಿಯೆಂದಂಗೀಕರಿಸಿದರೆ ಪ್ರಯೋಜಕವು ಒಂದೇ ಆದುದರಿಂದ ಲಾಘವವದೆ. ಆದಕಾರಣ ಪ್ರಾಜ್ಞರು ಈ ಪಕ್ಷವನ್ನೇ ಅಂಗೀಕರಿಸಬೇಕು ॥ ೭೬ ॥

ಆದರೂ ಕೇವಲ ಸಿದ್ಧಾರ್ಥದಲ್ಲಿ ವಾಕ್ಯಗಳಿಗೆ ಪ್ರಾಮಾಣ್ಯವು ಕೂಡುವುದಿಲ್ಲ. ಕಾರ್ಯಜ್ಞಾನವಾಗದೆ ನೈರಾಕಾಂಕ್ಷ್ಯರೂಪವಾದ ವಾಕ್ಯಪರ್ಯವಸಾನವು ಆಗುವುದಿಲ್ಲ. ಹೇಗೆಂದರೆ— ಪುರುಷನು, ಕುದುರೆಯು, ಆನೆಯು ಎಂದಾಗಲೀ, ದೇವದತ್ತನು ಅಡಿಗೆ ಮಾಡುತ್ತಾನೆ ಎಂದಾಗಲೀ ಈ ಪದಗಳ ಸಮುದಾಯವು ನಿರಾಕಾಂಕ್ಷಿತವಾಗುವುದಿಲ್ಲ. ಮತ್ತೆ ತೃಪ್ತಿಯಾಗಬೇಕೆಂದು ಇಚ್ಛಿಸುವವನೇ ಭೋಜನವನ್ನು ಮಾಡು, ಎಂಬುವುದು ನಿರಾಕಾಂಕ್ಷಿತವಾಗುವುದು. ಆಕಾಂಕ್ಷಾ ಪೂರ್ತಿಯಾಗದೆ ಇದ್ದರೆ ವಾಕ್ಯಾಭಾಸವಾಗುವುದು. ಆದುದರಿಂದ ಸರ್ವಥಾ ಕಾರ್ಯಪರತ್ವವನ್ನು ಅಂಗೀಕರಿಸಲೇಬೇಕು, ಎಂದಾಶಂಕಿಸಿದರೆ —

**ಮೂ ॥ ಇಯಂ ಮಾತಾಽಯಂ ಪಿತಾ ಸುರೂಪೋಽಸೀತ್ಯಾದೌ ಸಿದ್ಧಮಾತ್ರಜ್ಞಾಪನೇನೈವ ಪರ್ಯವಸಿತತ್ವಾದ್ವಾಕ್ಯಸ್ಯ ॥ ೭೭ ॥**

ಅ ॥ ಇಯಂ=ಇವಳು, ಮಾತಾ= ತಾಯಿಯು, ಅಯಂ=ಇವನು, ಪಿತಾ = ತಂದೆಯು, ಸುರೂಪಃ= (ನೀನು) ಸುಂದರನು, ಅಸಿ=ಆಗಿರುವಿ, ಇತ್ಯಾದೌ=ಇದೇ ಮೊದಲಾದ ಪ್ರಯೋಗಲ್ಲಿಗಳ, (ಕೇವಲ ಸಿದ್ಧಾರ್ಥದಲ್ಲಿ, ಅಪ್ರಾಮಾಣ್ಯಂ=ಅಪ್ರಾಮಾಣ್ಯವು, ನ= ಇರುವುದಿಲ್ಲ.) ವಾಕ್ಯಸ್ಯ=ವಾಕ್ಯಕ್ಕೆ, ಸಿದ್ಧಮಾತ್ರಜ್ಞಾಪನೇನೈವ=ಸಿದ್ಧಾರ್ಥವನ್ನು ಮಾತ್ರ ತಿಳಿಸಿಕೊಡೋಣದರಿಂದಲೇ, ಪರ್ಯವಸಿತತ್ವಾತ್=ಪರ್ಯವಸಾನವಿರುವುದರಿಂದ,

ತಾ ॥ (1)ಯಾರು ಬಾಲ್ಯದಲ್ಲಿಯೇ ಕಾರಣಾಂತರದಿಂದ ತಂದೆ ತಾಯಿಗಳಿಂದ ವಿಯೋಗವನ್ನು ಹೊಂದಿರುವನೋ, ಅಂತಹನು ಇತರ ಬಾಲಕರ ತಂದೆ ತಾಯಿಗಳನ್ನು ನೋಡಿ ತನಗೂ ತಂದೆ ತಾಯಿಗಳು ಇರಬಹುದೆಂದನುಮೇಯಿಸಿ, 'ನನ್ನ ತಾಯಿಯು ಯಾರು, ನನಗೆ ಯಾರು ತಂದೆಯು, ಎಂತಹರು, ಎಲ್ಲಿರುವರು' ಎಂದು ತಿಳಿಯಲಿಕ್ಕೆ ಉತ್ಸಾಹಪಡುವನು. ಆಗ ಅವನ ಹತ್ತಿರ ಒಬ್ಬನು ಹೇಳುತ್ತಾನೆ. 'ಪಾಟಲೀಪುತ್ರವೆಂಬುವ ಪತ್ತನದಲ್ಲಿ ಭದ್ರಸೇನನೆಂಬುವ ರಾಜನು ಇರುತ್ತಾನೆ. ಅವನು ನಿನ್ನ ತಂದೆಯು. ಭದ್ರಸೇನನ ಪತ್ನಿಯಾದ ಲೀಲಾವತಿಯು ನಿನ್ನ ತಾಯಿಯು, ಎಂದು '. ಆಗ ಕಾರ್ಯವನ್ನುಪದೇಶಿಸದೇನೇ ಸಿದ್ಧವಾದ ಅರ್ಥವನ್ನೇ ತಿಳಿಸಿಕೊಡೋಣದರಿಂದ ಕೇಳತಕ್ಕವನಿಗೆ ಆಕಾಂಕ್ಷಾನಿವೃತ್ತಿಯಾಗುವುದರಿಂದ ಆ ವಾಕ್ಯವು ಪರ್ಯವಸಾನ ಹೊಂದುವುದು.. (2) ಆಮೇಲೆ ಆತನು ತಂದೆ ತಾಯಿಗಳನ್ನು ಹೇಗೆ ನೋಡುವೆನು, ಎಂದು ವಿಚಾರಮಾಡುತ್ತಾನೆ. ಆಗ ತಂದೆ ತಾಯಿಗಳನ್ನು ನೋಡಲಿಚ್ಛಿಸುವ ನೀನು ಈ ದಾರಿಯಿಂದ ಪಾಟಲೀಪುತ್ರ ಪಟ್ಟಣಕ್ಕೆ ಹೋಗು, ಎಂದು ಕಾರ್ಯವನ್ನು ತಿಳಿಸುತ್ತಾನೆ. (3) ಹಾಗೆಯೇ ಯಾರು ತನ್ನ ಮುಖವನ್ನು ನೋಡದೆ ಬೇರೆ ಸುರೂಪಿಗಳನ್ನೂ, ಕುರೂಪಿಗಳನ್ನೂ ನೋಡಿ 'ತಾನೂ ಸುರೂಪನೋ, ವಿರೂಪನೋ' ಎಂದು ತನ್ನಲ್ಲಿಯೇ ಸಂಶಯಪಡುವನೋ, ಅಂತಹನನ್ನು ಕುರಿತು ನೀನು ಸುರೂಪಿಯಾಗಿರುವಿ, ಎಂದು ಹೇಳುತ್ತಾನೆ.

ಆ ವಾಕ್ಯವೂ ಸಿದ್ಧಾರ್ಥವನ್ನು ಮಾತ್ರ ತಿಳಿಸಿಕೊಡೋಣದರಿಂದ ಪರ್ಯವಸಾನವಾಗುವುದು. ಆಮೇಲೆ ಆಕಾಂಕ್ಷಾ ಬರುವುದಿಲ್ಲ. ಆದುದರಿಂದ ವಾಕ್ಯವು ಪರ್ಯವಸಾನವಾಗಲಿಕ್ಕೆ ಇಷ್ಟ ಸಾಧನವನ್ನು ತಿಳಿಸಿಕೊಡುವುದೇ ಕಾರಣವು. ಕಾರ್ಯವನ್ನು ತಿಳಿಸಿಕೊಡುವುದೇ ವಾಕ್ಯ ಪರ್ಯವಸಾನವಾಗಲಿಕ್ಕೆ ಕಾರಣವು ಎಂಬುವ ನಿಯಮವಿಲ್ಲ. ಕಾರ್ಯವನ್ನು ತಿಳಿಸಿಕೊಡು ವುದರಲ್ಲಿ ಪರ್ಯವಸಾನವಾಗುವ ವಾಕ್ಯಕ್ಕೂ ಇಷ್ಟಸಾಧನವನ್ನು ತಿಳಿಸಿಕೊಡುವುದೇ ನಿಮಿತ್ತವು. (4) ಸಿದ್ಧಾರ್ಥವನ್ನು ಮಾತ್ರ ತಿಳಿಸಿಕೊಡೋಣದರಿಂದ ವಾಕ್ಯವು ಪರ್ಯವಸಾನವಾಗುತ್ತದೆ. ಎಂದುಪಪಾದಿಸಿದುದರಿಂದ ವೇದವಾಕ್ಯಗಳಿಗೆ ಈ ಯೋಜನೆಯನ್ನು ಸೂಚಿಸುತ್ತಾರೆ. ಸಾತ್ವಿಕ ಸ್ವಭಾವವುಳ್ಳವನು ಲೋಕಪ್ರವಾದದಿಂದಾಗಲೀ ಕಾರ್ಯತ್ವ ಮೊದಲಾದ ಹೇತುಗಳ ಅನು ಸಂಧಾನದಿಂದಾಗಲೀ ಸಾಮಾನ್ಯಾಕಾರವಾಗಿ ತನ್ನ ಶರೀರಾದಿಗಳಿಗೆ ಸೃಷ್ಟಿಕರ್ತನಾದವನನ್ನು ತಿಳಿಯುತ್ತಾ ಸ್ನೇಹ ಮಹಾತ್ಮ್ಯಜ್ಞಾನಗಳಿಂದ ಆ ಸೃಷ್ಟಿಕರ್ತನನ್ನು ಇನ್ನೂ ವಿಶೇಷಾಕಾರವಾಗಿ ತಿಳಿಯಬೇಕೆಂದು ಆತುರಪಟ್ಟವನಾಗಿ ಆತನ ಮಹಾತ್ಮ್ಯಜ್ಞಾನದಿಂದುಂಟಾದ ಸಂಸ್ಕಾರದಿಂದ ಬೇರೆ ಯಾವುದನ್ನೂ ಗಣನೆ ಮಾಡದೇನೇ ಯಾವನು ಇರುತ್ತಾನೋ, ಆತನನ್ನು ಕುರಿತು ಆಪ್ತ ನಾದ ಬಂಧುವಿನಂತೆ ವೇದವು ('ವಿಜ್ಞಾನಮಾನಂದಂ ಬ್ರಹ್ಮ, ಸತ್ಯಜ್ಞಾನಮನಂತಂ ಬ್ರಹ್ಮ, ನಿರಂನಿಷ್ಠೋ ನಿರವದ್ಯಃ, ಸತ್ಯಕಾಮಃ, ಸತ್ಯಸಂಕಲ್ಪಃ' ಇವೇ ಮೊದಲಾದುವು) ಆ ಭಗವಂತನ ಸ್ವರೂಪವನ್ನು ಸರ್ವಾಪೇಕ್ಷಯಾ ಪ್ರಧಾನವನ್ನಾಗಿಯೇ ಬೋಧಿಸುತ್ತಿದೆ. (5) ಆಮೇಲೆ ವಾಕ್ಯಾರ್ಥಜ್ಞಾನದಿಂದ ಪರಮಾನಂದವನ್ನು ಹೊಂದಿದವನಾಗಿ ಭಗವಂತನ ಸಾಕ್ಷಾತ್ಕಾರವನ್ನು ಇಚ್ಛಿಸುತ್ತಾನೆ. ಆತನಿಗೆ 'ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ ಸೋಽನ್ವೇಷ್ಟವ್ಯಃ' ಇತ್ಯಾದಿ ಶ್ರುತಿಗಳಲ್ಲಿ ಉಪಾಸನೆಯು ವಿಹಿತವಾಗಿದೆ. ಆ ಉಪಾಸನೆಯು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬುವ ಷಡ್ವೈರಿಗಳು ಇಲ್ಲದಿದ್ದವರಿಗೇನೇ ಸಂಭವಿಸುತ್ತದೆ. ಅವಕ್ಕಾಗಿ 'ಅಹರಹಃ ಸಂಧ್ಯಾಮುಪಾಸೀತ' 'ಅರ್ಚತ ಪ್ರಾರ್ಚತ' 'ಜ್ಯೋತಿಷ್ಟೋಮೇನ ಸ್ವರ್ಗ ಕಾಮೋ ಯಜೇತ' ಇವು ಮೊದಲಾದ ಕರ್ಮಪ್ರತಿಪಾದಕಗಳಾದ ವಿಧಿಗಳು ಪ್ರವೃತ್ತ ಗಳಾಗುತ್ತವೆ. ಹೀಗೆ ಎಲ್ಲಾ ವೇದಗಳು ಪರಮೇಶ್ವರನ ಸ್ವರೂಪವನ್ನು ತಿಳಿಸಿಕೊಡುವುದರಲ್ಲಿಯೇ ಪರ್ಯವಸಾನವಾಗುವುವು. ಏಕಾಂತ ಭಕ್ತರನ್ನು ವಿವಕ್ಷಿಸಿಕೊಂಡು ಈ ಯೋಜನೆಯು ('ಇಯಂ ಮಾತಾಽಯಂ ಪಿತಾ' ಎಂಬುವ ಅಂಶದಿಂದ ಸೂಚಿತವಾದುದು) ಉಕ್ತವಾಯಿತು. (6) (ಮಧ್ಯಮ ಭಕ್ತರನ್ನು ವಿವಕ್ಷಿಸಿಕೊಂಡು 'ಸುರೂಪೋಽಸಿ' ಎಂಬುವುದರಿಂದ ಸೂಚಿತವಾದ ಯೋಜನೆಯು ಈರೀತಿಯಾಗಿದೆ.) ಅಥವಾ ಯಾರು ಶರೀರ, ಇಂದ್ರಿಯ, ಅಂತಃಕರಣಾದಿಗಳ ಸನ್ನಿಧಾನದಿಂದ ತಾನು ಅನೇಕ ದುಃಖಗಳನ್ನು ಅನುಭವಿಸುತ್ತಾ ದುಃಖ ಶಿರಸ್ಕವಾಗದಿರುವ ಸುಖವನ್ನು ಅನುಭವಿಸದೆ ಇರುವವನಾಗಿ 'ತನಗೆ ಈ ದುಃಖಾದಿಗಳು ಶರೀರಾದಿಗಳ ಸಂಪರ್ಕ ನಿಮಿತ್ತಕಗಳೋ ಅಥವಾ ಸ್ವಾಭಾವಿಕಗಳೋ ಎಂದು ಸಂಶಯಪಡುವರೋ, ಅವರನ್ನು ಕುರಿತು 'ತತ್ತ್ವಮಸಿ' ಇದು ಮೊದಲಾದ ವೇದಗಳು ಪ್ರವೃತ್ತಗಳಾಗಿರುತ್ತವೆ. ಅಂದರೆ- ಯದ್ಯಪಿ ನೀನು ಪರಮಾತ್ಮನಂತೆ ದುಃಖಲೇಶ ರಹಿತವಾದ ಪರಮಾನಂದಸ್ವಭಾವವುಳ್ಳವನೇ ಆಗಿರುವಿ. ಆದರೆ ಈಗ ಈಶ್ವರಾಧೀನವಾದ ಅವಿದ್ಯಾ ಕಾಮುಕರ್ಮಾದಿಗಳಿಂದ ಪ್ರಾಪ್ತವಾದ, ಶರೀರಾದಿ ನಿಮಿತ್ತಕ ವಾದ ಅನ್ಯಥಾರೂಪದಿಂದೊಡಗೂಡಿರುತ್ತಿ. (7) ಆಮೇಲೆ ಈತನು 'ಯಾವ ಉಪಾಯದಿಂದ ನಾನು ಈ ಅಸ್ವಾಭಾವಿಕವಾದ ರೂಪವನ್ನು ಬಿಟ್ಟು ನಿರ್ದುಃಖ ಪರಮಾನಂದ ಸ್ವರೂಪದಿಂದ ಯುಕ್ತನಾಗುವೆನು, ಎಂದು ವಿಚಾರಮಾಡುವನು. ಆತನಿಗೆ ಪ್ರಸನ್ನನಾದ ಪರಮೇಶ್ವರನೇ ಅಂತಹ ಸ್ವರೂಪಾನಂದಾವಿರ್ಭಾವವಾಗಲಿಕ್ಕೆ ಉಪಾಯಭೂತನು. ಆದುದರಿಂದ ಭಗವಂತನ

ಸ್ವರೂಪವು ನಿರೂಪಿಸಲ್ಪಡುತ್ತದೆ. (8) ಆಮೇಲೆ ಇಂತಹ ಭಗವಂತನು ಹೇಗೆ ಪ್ರಸನ್ನನಾಗುತ್ತಾನೆ ಎಂದಪೇಕ್ಷಿಸಿದರೆ — ಆತನ ಪ್ರಸಾದಕ್ಕಾಗಿ ಆತನ ಸಾಕ್ಷಾತ್ಕಾರವು, ಅದಕ್ಕಾಗಿ ಶ್ರವಣ ಮನನ ನಿದಿಧ್ಯಾಸನಾದಿಗಳು, ಅವುಗಳ ಅಂಗಗಳಾಗಿ ಕರ್ಮಗಳೂ ವಿಹಿತಗಳಾಗುತ್ತವೆ. ಈ ಪ್ರಕಾರ ಎಲ್ಲಾ ವೇದಗಳೂ ಪರಮೇಶ್ವರನ ಸ್ವರೂಪವನ್ನು ತಿಳಿಸಿಕೊಡುವುದರಲ್ಲಿಯೇ ಪರ್ಯವಸಾನವಾಗುವುವು. (9) ಪರಮೇಶ್ವರನ ಸ್ವರೂಪವನ್ನು ತಿಳಿಸಿಕೊಡುವುದರಲ್ಲಿಯೇ ಸರ್ವವೇದಗಳೂ ಪರ್ಯವಸಾನಗಳಾಗುತ್ತವೆ ಎಂಬೀ ವಿಷಯವು 'ಅನ್ಯಾರ್ಥಂ ತು ಜೈಮಿನಿಃ' ಇತ್ಯಾದಿಗಳಿಂದ ಸೂತ್ರಕಾರರೇ ನಿರೂಪಿಸಿರುವರು ॥ ೭೭ ॥

ಆದರೂ ವಾಕ್ಯವು ಕೇವಲಸಿದ್ಧಪರವಾದರೆ ಅನುವಾದಕವಾಗುವುದರಿಂದ ಅಪ್ರಮಾಣವಾಗಬೇಕಾಯಿತು. ಆದುದರಿಂದ ಸರ್ವಥಾ ಕಾರ್ಯಪರತ್ವವನ್ನೇ ಅಂಗೀಕರಿಸಬೇಕು. ಕಾರ್ಯವಾದರೂ ಪ್ರಮಾಣಾಂತರಕ್ಕೆ ಗೋಚರವಾಗದಿರುವುದರಿಂದ ಅನುವಾದಕವಾಗಲಾರದು, ಎಂದಾಶಂಕಿಸಿದರೆ —

**ಮೂ ॥ ತಸ್ಯ ತತ್ರ ಪ್ರಾಮಾಣ್ಯಾನುಭವಾಚ್ಚ ॥ ೭೮ ॥**

ಅ ॥ ತಸ್ಯ=ಇವಳು ತಾಯಿಯು, ಇತ್ಯಾದಿವಾಕ್ಯಗಳಿಗೆ, ತತ್ರ=ಕೇವಲಸಿದ್ಧಾರ್ಥದಲ್ಲಿ, ಪ್ರಾಮಾಣ್ಯಾನುಭವಾಚ್ಚ=ಪ್ರಾಮಾಣ್ಯವು ಅನುಭೂತವಾಗುವುದರಿಂದಲೂ,

ತಾ ॥ (1) ಪ್ರಾಮಾಣ್ಯವೆಂದರೆ, ಯಥಾವಸ್ಥಿತವಾದ ಅರ್ಥವನ್ನು ತಿಳಿಸಿಕೊಡುವಿಕೆಯು. ಬೇರೆಯಲ್ಲವು. ಅಂತಹ ಪ್ರಾಮಾಣ್ಯವು ಕೇವಲ ಸಿದ್ಧಾರ್ಥದಲ್ಲಿಯೂ ಪ್ರತ್ಯಕ್ಷಾದಿಗಳಂತೆಯೇ ವಾಕ್ಯಕ್ಕೂ ಅನುಭವಸಿದ್ಧವು. (2) ಸಿದ್ಧವಾದ ಅರ್ಥವೂ (ಕೃತ್ಯಸಾಧ್ಯವಾದ ಯಥಾವಸ್ಥಿತರೂಪವಾದ ಅರ್ಥವೂ) ಕೂಡ ಪ್ರಮಾಣಾಂತರದಿಂದ ಮೊದಲು ತಿಳಿಯಲ್ಪಡದಿರುವುದಾಗಿಯೇ ಇರುತ್ತದೆ. ಆದುದರಿಂದ 'ಇಯಂ ಮಾತಾ' ಇತ್ಯಾದಿ ವಾಕ್ಯವು ಸಿದ್ಧಾರ್ಥಪರವೇ ಆಗಿಯದೆ ಅನುವಾದಕವಲ್ಲವೆಂದೂ ಅನುಭವಸಿದ್ಧವು. ಆದಪ್ರಯುಕ್ತ ಕೇವಲ ಸಿದ್ಧಾರ್ಥದಲ್ಲಿಯೂ ವಾಕ್ಯವು ಅಪ್ರಮಾಣವಾಗುವುದಿಲ್ಲ. ಆದುದರಿಂದ ಕಾರ್ಯಪರವೇ ಎಂಬುವ ಆಗ್ರಹವನ್ನು ಬಿಟ್ಟು ಬಿಡಬೇಕು ॥ ೭೮ ॥

ಪುನಃ ಶಂಕಿಸುವರು:— ಯದ್ಯಪಿ, ಕರಣಪ್ರಮಾಣಗಳಿಗೆ ಯಥಾರ್ಥಜ್ಞಾನವನ್ನು ಹುಟ್ಟಿಸುವುದರಿಂದಲೇ ಪ್ರಾಮಾಣ್ಯವು. ಆದಾಗ್ಯೂ ವಾಕ್ಯಪ್ರಯೋಗವು ಪರಪ್ರಯೋಜನಾರ್ಥವಾದುದರಿಂದ ಪರಪ್ರಯೋಜನಕ್ಕೆ ಅಂಗವೇ ಆದ ವಾಕ್ಯವು ಪ್ರಾಮಾಣ್ಯವನ್ನು ಹೊಂದುವುದು. ಉದಾ — ಅಗ್ನಿಹೋತ್ರಂ ಜುಹುಯಾತ್ ಸ್ವರ್ಗಕಾಮಃ=ಸ್ವರ್ಗವನ್ನು ಪಡೆಯಬೇಕೆಂದಿಚ್ಛಿಸುವವನು, ಅಗ್ನಿಹೋತ್ರನಾಮಕಯಾಗದಿಂದ ಇಷ್ಟವನ್ನು ಹೊಂದಬೇಕು ಇದು ಮೊದಲಾದುದು. ಹಾಗೆಗೆ ೮ ಹಲ್ಲುಗಳು ಇತ್ಯಾದಿ ವಾಕ್ಯಗಳು ಸರ್ವಥಾ ಪ್ರಮಾಣಗಳಾಗಲಾರವು. ಕಾರ್ಯಪರವಾದುದೇ ಪರರ ಪ್ರಯೋಜನಕ್ಕೆ ಅಂಗವಾಗುವುದು. ಆದುದರಿಂದ ಕೇವಲ ಸಿದ್ಧಾರ್ಥದಲ್ಲಿ ವಾಕ್ಯಕ್ಕೆ ಪ್ರಾಮಾಣ್ಯವು ಸರ್ವಥಾ ಕೂಡಲಾರದೆಂದಾಶಂಕಿಸಿದರೆ —

**ಮೂ ॥ ನ ಚ ಕುತ್ರ ಚಿತ್ಸಿದ್ಧಜ್ಞಾಪನಾದನ್ಯದ್ವಾಕ್ಯಸ್ಯ ಪ್ರಯೋಜನಂ ದೃಷ್ಟಂ ॥ ೭೯ ॥**

ಅ ॥ ಕುತ್ರಚಿತ್=ಎಲ್ಲಿಯೂ, ವಾಕ್ಯಸ್ಯ=ವಾಕ್ಯಕ್ಕೆ, ಸಿದ್ಧಜ್ಞಾಪನಾತ್=ಸಿದ್ಧವನ್ನು (ಇಷ್ಟಸಾಧನವನ್ನು)ತಿಳಿಸಿಕೊಡೋಣದರಿಂದ, ಅನ್ಯತ್=ಬೇರೆ, ಪ್ರಯೋಜನಂ=ಪ್ರಯೋಜನವು, ನ ಚ ದೃಷ್ಟಂ=ಕಾಣಲ್ಪಡಲಿಲ್ಲ.

ತಾ ॥ (1) 'ಸಿದ್ಧ' ಎನ್ನುವುದು ಕಾರ್ಯಜ್ಞಾಪನವನ್ನು ವ್ಯಾವರ್ತಿಸಲಿಕ್ಕಾಗಿ ಅಲ್ಲ. (2) ವಾಕ್ಯವು ಪ್ರಮಾಣವು. ಪ್ರಮಾಣವೆಂದರೆ ಯಥಾರ್ಥಜ್ಞಾನಕ್ಕೆ ಸಾಧನವಾದುದು. ಆದು ದರಿಂದ ಯಥಾರ್ಥಜ್ಞಾನಸಾಧನವಾದ ವಾಕ್ಯಕ್ಕೆ ಪರರಿಗೆ ಯಥಾರ್ಥಜ್ಞಾನವನ್ನು ಹುಟ್ಟಿಸುವುದೇ ಪ್ರಯೋಜನವು. ಪರರಿಗೆ ಯಥಾರ್ಥಜ್ಞಾನವನ್ನು ಹುಟ್ಟಿಸುವಿಕೆ ಎಂಬುವ ಪ್ರಯೋಜನವು ಸಿದ್ಧಾರ್ಥಪ್ರತಿಪಾದಕವಾದ ವಾಕ್ಯಕ್ಕೂ ಅನುಭವಸಿದ್ಧವು, ಆದುದರಿಂದ ಪ್ರಾಮಾಣ್ಯವು ಉಪ ಪನ್ನವೇ ಆಗುವುದು. (3) ಅಥವಾ ಕಾರ್ಯವೂ ಕೂಡ ಇಷ್ಟಸಾಧನರೂಪವಾದ ಸಿದ್ಧ ವಿಶೇಷವೇ, ಎಂಬೀ ಅಭಿಪ್ರಾಯದಿಂದ 'ಸಿದ್ಧ' ಎಂದು ಉಕ್ತವಾಗಿದೆ. (4) ಅಥವಾ 'ಸಿದ್ಧ ಜ್ಞಾಪನಾತ್=ಯಥಾವಸ್ಥಿತವಾದ ಅರ್ಥವನ್ನು ತಿಳಿಸಿಕೊಡೋಣದರಿಂದ, ಎಂದರ್ಥವು ॥ ೭೯ ॥

ಪುನಃ ಶಂಕಿಸುತ್ತಾರೆ. (1) ಯದ್ಯಪಿ ಯಥಾವಸ್ಥಿತವಾದ ಅರ್ಥವನ್ನು ತಿಳಿಸಿಕೊಡುವುದೇ ಮುಖ್ಯವಾಗಿ ವಾಕ್ಯಕ್ಕೆ ಪ್ರಯೋಜನವು. ಆದಾಗ್ಯೂ ಯಾವುದರ ಜ್ಞಾನವು ಪರರಿಗೆ ಎಲ್ಲಿ ಯಾದರೂ ಪ್ರವೃತ್ತಿಯನ್ನಾಗಲೀ, ಯಾವುದರಿಂದಾದರೂ ನಿವೃತ್ತಿಯನ್ನಾಗಲೀ ಮಾಡುವುದೋ, ಅಂಥಹ ಅರ್ಥವನ್ನೇ ವಾಕ್ಯವು ತಿಳಿಸಿಕೊಡಬೇಕು. ಅದಕ್ಕಾಗಿಯೇ ವಾಕ್ಯಪ್ರಯೋಗವು. (2) ಕಾರ್ಯಜ್ಞಾನವೇ ಪ್ರವೃತ್ತ್ಯಾದಿಗಳಿಗೆ ಕಾರಣೀಭೂತವಾದುದು. ಕೇವಲ ಸಿದ್ಧಜ್ಞಾನವಲ್ಲ. (3) ಲಿಙಾದಿರೂಪ ಶಬ್ದಗಳಾಗಲೀ, ಪ್ರವರ್ತನಾರೂಪ ವ್ಯಾಪಾರವಾಗಲೀ ಪ್ರವರ್ತಕವೆಂದು ಹೇಳ ಕೂಡದು. ಹಾಗೆ ಆಗಿದ್ದರೆ ಆದನ್ನು ಕೇಳಿದವರಿಗೆಲ್ಲಾ ಪ್ರವೃತ್ತಿ ನಿವೃತ್ತಿಗಳು ಬರಬೇಕಾಗುವುದು. ಮತ್ತು ಶಬ್ದಾದಿಗಳಿಲ್ಲದಿರುವುದರಿಂದ ಬಾಲಕನಿಗೆ ಸ್ತನಪಾನಾದಿಗಳಲ್ಲಿ ಪ್ರವೃತ್ತ್ಯಾದಿಗಳು ಕೂಡದೆ ಹೋಗಬೇಕಾಗುವುದು. (5)ಶಂಖಾದಿ ಶಬ್ದಗಳನ್ನು ಕೇಳಿದ ಮೇಲೆ ಯಾವ ಪ್ರವೃತ್ತಿ ನಿವೃತ್ತಿಗಳು ಆಗುವುವೋ ಅವುಕೂಡ ಪುರುಷರ ಅಭಿಪ್ರಾಯವನ್ನು ಅನುಮೇಯಿಸಿಯೇ ಆಗುವುವು, ಸಾಕ್ಷಾತ್ ಅಲ್ಲ. ಅಯಂ=ಈತನು, ಯುದ್ಧಕರ್ತವ್ಯತ್ವಾಭಿಪ್ರಾಯವಾನ್=ಯುದ್ಧವನ್ನು ಮಾಡಬೇಕೆಂಬ ವಿಷಯದಲ್ಲಿ ಅಭಿಪ್ರಾಯವುಳ್ಳವನು, ತತ್ಸೂಚಕಶಂಖಾದಿ ಧ್ವನಿಕರ್ತೃತ್ವಾತ್=ಅದನ್ನು ಸೂಚಿಸ ತಕ್ಕ ಶಂಖಾದಿಗಳ ಧ್ವನಿಯನ್ನು ಮಾಡುವುದರಿಂದ. ಹೀಗೆ ಕಾರ್ಯತ್ವವನ್ನು ಅನುಮೇಯಿಸಿಯೇ ಪ್ರವರ್ತಿಸುತ್ತಾನೆ. (6)ಯದ್ಯಪಿ ರಾಗದ್ವೇಷಗಳು, ಪ್ರವರ್ತಕ(ಪ್ರವೃತ್ತಿಗೆ ಕಾರಣ)ಗಳಾಗುತ್ತವೆ. ಆದರೂ ಅವುಗಳು ಸ್ವರೂಪತಃ ಇರುವುದು ಪ್ರಯೋಜಕವು. ಜ್ಞಾತಗಳಾಗಬೇಕೆಂದಿಲ್ಲ. ಅಂದರೆ ಅನುರಾಗವೆಂದರೇನು? ಎಂಬೀ ಅನುರಾಗದ ಜ್ಞಾನ ಬಂದಮೇಲೆಯೇ ಅದು ಪ್ರವೃತ್ತಿಗೆ ಕಾರಣ ವಾಗುವುದಲ್ಲ. ಅದು ಇರುವುದೇ ಪ್ರಯೋಜಕವು. ಜ್ಞಾನವಾದರೂ ತಿಳಿಯಬೇಕೆಂದಿಚ್ಛೆಯಿಲ್ಲ ದಿದ್ದವರಿಗೂ ಬರುವುದರಿಂದ ಬಿಡಲು ಅಸಾಧ್ಯವು. ಆದುದರಿಂದ ವಾಕ್ಯದಿಂದ ತಿಳಿಯಲ್ಪಡುವು ದಾಗಿ ಪ್ರವೃತ್ತ್ಯಾದಿಗಳಿಗೆ ಕಾರಣವಾದುದು ಕಾರ್ಯವೇಸರಿ. ಅದನ್ನೇ ಎಲ್ಲಾ ಕಡೆಗಳಲ್ಲಿಯೂ ವಾಕ್ಯಾರ್ಥವೆಂದು ಅಂಗೀಕರಿಸಬೇಕು. ಅದ ಪ್ರಯುಕ್ತವೇ ಲಿಙಾದಿಗಳಿಲ್ಲದಿರುವ ವಾಕ್ಯದಲ್ಲಿ ಕಾರ್ಯವನ್ನು ಅಧ್ಯಾಹಾರಮಾಡಬೇಕು. ಅಥವಾ ಲಕ್ಷಣಾ ಎಂದು ಒಡಂಬಡಬೇಕು. ಆದುದ ರಿಂದ ವಾಕ್ಯವು ಕೇವಲ ಸಿದ್ಧಾರ್ಥವನ್ನು ತಿಳಿಸಿಕೊಡುತ್ತದೆ ಎನ್ನುವುದು ಹೇಗೆ ಕೂಡಬಹುದು, ಎಂದು ಪೂರ್ವಪಕ್ಷ ಮಾಡಿದರು. (7) ಅದಕ್ಕೆ ಸಮಾಧಾನವು ಹೇಳಲ್ಪಡುತ್ತದೆ. ಪ್ರವೃತ್ತ್ಯಾದಿ ಗಳಿಗೋಸ್ಕರವೇ ವಾಕ್ಯವನ್ನು ಪ್ರಯೋಗಿಸುವುದು ಎನ್ನುವ ನಿಯಮವಿಲ್ಲ. ಎಲ್ಲಿ ವಾಕ್ಯಾರ್ಥ

ಜ್ಞಾನದಿಂದಲೇ ಸುಖಪ್ರಾಪ್ತಿಯೂ, ದುಃಖಪರಿತ್ಯಾಗವೂ ಆಗುತ್ತದೋ ಅಲ್ಲಿ ಪ್ರವೃತ್ತಿ ನಿವೃತ್ತಿಗಳಾಗುವುದಿಲ್ಲ. ಮತ್ತೂ ಯಾವಕಡೆ ಪ್ರವೃತ್ತಿ ನಿವೃತ್ತ್ಯಾದಿಗಳ ಅಭಿಪ್ರಾಯದಿಂದಲೇ ವಾಕ್ಯಪ್ರಯೋಗವಿದೆಯೋ ಅಲ್ಲಿ ಆ ವಾಕ್ಯವೂ ಸಿದ್ಧಪರವೆನ್ನುವುದೇ ಯೋಗ್ಯವು ಎಂದು ಹೇಳುವುದಕ್ಕೋಸ್ಕರ ಹೇಳುತ್ತಾರೆ.

**ಮೂ || ಜ್ಞಾತ್ವೈವ ಹೀಷ್ಟಸಾಧನತಾಂ ಪ್ರವರ್ತತೇ ನಿವರ್ತತೇ ಚ ವಿಪರ್ಯಯೇಣ || ಅತಃ ಸಿದ್ಧ ಏವ ಸರ್ವವಾಕ್ಯಾನಾಂ ಪ್ರಾಮಾಣ್ಯಂ ಸಿದ್ಧಂ || ೮೦ ||**

ಅ || ಇಷ್ಟಸಾಧನತಾಮೇವ=ಇಷ್ಟಸಾಧನತ್ವವನ್ನೇ, ಜ್ಞಾತ್ವಾ=ತಿಳಿದು, ಪ್ರವರ್ತತೇ ಹಿ=ಪ್ರವರ್ತಿಸುತ್ತಾನಷ್ಟೆ. ವಿಪರ್ಯಯೇಣ=ಅನಿಷ್ಟಸಾಧನತ್ವ ಜ್ಞಾನದಿಂದ, ನಿವರ್ತತೇ ಚ= ನಿವೃತ್ತಿಯನ್ನು ಹೊಂದುತ್ತಾನೆ. ಅತಃ=ಆದುದರಿಂದ, ಸರ್ವವಾಕ್ಯಾನಾಂ=ಎಲ್ಲಾ ವಾಕ್ಯ ಗಳಿಗೂ, ಸಿದ್ಧ ಏವ = ಇಷ್ಟಸಾಧನದಲ್ಲಿಯೇ, ಪ್ರಾಮಾಣ್ಯಂ = ಪ್ರಾಮಾಣ್ಯವು, ಸಿದ್ಧಂ= ಸಿದ್ಧಿಸುವುದು.

ತಾ || (1) ಯದ್ಯಪಿ ಕೇವಲಸಿದ್ಧಜ್ಞಾನವು ಪ್ರವೃತ್ತ್ಯಾದಿಗಳಿಗೆ ಕಾರಣವಾಗಲಾರದು. ಆದರೂ ಸಿದ್ಧವಿಶೇಷವಾದ ಇಷ್ಟಸಾಧನತ್ವಜ್ಞಾನವು ಪ್ರವೃತ್ತಿಗೂ ಅನಿಷ್ಟಸಾಧನತ್ವಜ್ಞಾನವು ನಿವೃತ್ತಿಗೂ ಕಾರಣವಾಗುವುದು. ಹೇಗೆಂದರೆ — ಬಾಲಕರು ಸ್ತನಪಾನಾದಿಗಳು ಇಷ್ಟಸಾಧನ ಗಳೆಂದೇ ತಿಳಿದು ಪ್ರವೃತ್ತಿಮಾಡುವರು. ಕಂಟಕ (ಮುಳ್ಳು) ಮೊದಲಾದುವುಗಳು ಅನಿಷ್ಟಸಾಧನ ಗಳೇ ಆಗಿವೆ, ಎಂದು ತಿಳಿದು ನಿವೃತ್ತರಾಗುವರು. (2) ಆದರೂ ಬಾಲಕನೂ ಕೃತಿಸಾಧ್ಯತ್ವ ರೂಪಕಾರ್ಯತಾಜ್ಞಾನದಿಂದಲೇ ಪ್ರವೃತ್ತನಾಗುವನು. ಇಷ್ಟಸಾಧನತ್ವಜ್ಞಾನವಾದರೂ ಕಾರ್ಯ ತಾಜ್ಞಾನಕ್ಕೆ * ಕಾರಣವು. ಎಂದು ಹೇಳಕೂಡದು. ಇಷ್ಟಸಾಧನತ್ವವೇ ಕಾರ್ಯತ್ವವು. ಇಷ್ಟ ಸಾಧನತ್ವದಿಂದ ಅತಿರಿಕ್ತವಾದ ಕಾರ್ಯತಾ ಎನ್ನುವುದಿದೆ, ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲ. (3) ಹಾಗಾದರೆ ಚಂದ್ರಮಂಡಲ ಮೊದಲಾದುವುಗಳು ಇಷ್ಟಸಾಧನಗಳೆಂಬ ಬುದ್ಧಿಯಿದೆ. ಅವು ಗಳಲ್ಲಿ ಕಾರ್ಯತಾಬುದ್ಧಿಯಿಲ್ಲ. (ಅಂದರೆ 'ಯಾಗವು ಕಾರ್ಯವು' ಎಂದು ಯಾಗಾದಿಗಳಲ್ಲಿ ಕಾರ್ಯತಾ ಜ್ಞಾನವಿದ್ದಂತೆಯೇ ಚಂದ್ರಮಂಡಲವು ಕಾರ್ಯವು ಎಂದು ಚಂದ್ರಮಂಡಲಾದಿ ಗಳಲ್ಲಿ ಕಾರ್ಯತಾಜ್ಞಾನವಿಲ್ಲ.) ಆದುದರಿಂದ ಇಷ್ಟಸಾಧನತ್ವವೇ ಕಾರ್ಯತ್ವವೆಂದು ಹೇಳಲು ಸಾಧ್ಯವಿಲ್ಲವೆಂದು ಶಿಷ್ಯನು ಶಂಕಿಸಿದರೆ ನಾವು (ಸಿದ್ಧಾಂತಿಗಳು) ಇಷ್ಟಸಾಧನತ್ವ ಮಾತ್ರವೇ ಕಾರ್ಯತಾ ಎಂದೆನ್ನುವುದಿಲ್ಲ. ಮತ್ತೆ ಕೃತಿಸಾಧ್ಯ ಇಷ್ಟಸಾಧನತ್ವವು ಕಾರ್ಯತಾ ಎನ್ನುತ್ತೇವೆ ಅಂದರೆ, ಕೃತಿ(ಪ್ರಯತ್ನ)ಯಿಂದ ಸಾಧಿಸಲಿಕ್ಕೆ ಶಕ್ಯವಾಗಿದ್ದು ಇಷ್ಟಕ್ಕೆ ಸಾಧನವಾದುದೇ ಕಾರ್ಯತಾ ಎಂದಂಗೀಕರಿಸುತ್ತೇವೆ. ಚಂದ್ರಮಂಡಲಾದಿಗಳಲ್ಲಿ ಕೃತಿಸಾಧ್ಯವೆನ್ನುವ ಜ್ಞಾನ ವಿಲ್ಲದಿರುವುದರಿಂದ ಕಾರ್ಯತಾ ಬುದ್ಧಿಯಿಲ್ಲ. ಆದಕಾರಣ ಯಾವದೋಷಕ್ಕೂ ಅವಕಾಶವಿಲ್ಲ. (4) ಕೃತಿಸಾಧ್ಯವಾದ ಇಷ್ಟಸಾಧನತ್ವವೇ ಕಾರ್ಯತೆಯೆಂದಂಗೀಕರಿಸಿರುವುದರಿಂದ ಅತೀತ ಭೋಜನಾದಿಗಳು ಇಷ್ಟಸಾಧನಗಳಾಗಿದ್ದಾಗ್ಯೂ ಪ್ರಯತ್ನಕ್ಕೆ ಸಾಧ್ಯವಲ್ಲದಿರುವ ಕಾರಣ ಅವು ಗಳಲ್ಲಿ ಪ್ರವೃತ್ತಿಯು ಬರಬೇಕಾಗುವುದೆಂದು ಹೇಳಲಾಗುವುದಿಲ್ಲ. (5) ಇದರಿಂದಲೇ ವೃದ್ಧರ ವ್ಯವಹಾರವನ್ನು ನೋಡಿ ಬರತಕ್ಕ ಶಕ್ತಿಯೂ ಇಷ್ಟಸಾಧನವಿಷಯಕವೇ ಎಂದು ಸಿದ್ಧವಾಯಿತು.

---

* ಕಿಂತು ಸ್ವಯಂ ಕ್ಲೇಶರೂಪಂ ಕರ್ಮ ಯತ್ಕಾರ್ಯತಾಂ ವ್ರಜೇತ್ | ಫಲಸಾಧನತಾ ತತ್ರ ಕಾರಣಂ ತೇನ ಕಾರ್ಯತಾ || ಎಂದು ಅವರ ಪ್ರಕ್ರಿಯೆಯು.

ಬಾಲಕರಿಗೆ ಸ್ತನಪಾನವೊದಲಾದ ತನ್ನ ಪ್ರವೃತ್ತಿಗಳಲ್ಲಿ ಯಾವುದು ಪ್ರವರ್ತಕವೆಂದು ತಿಳಿಯಲ್ಪಟ್ಟದೋ ಅಂತಹುದೇ ಪ್ರಯೋಜ್ಯವೃದ್ಧರ ಪ್ರವೃತ್ತಿಯಲ್ಲಿಯೂ ಕಲ್ಪಿಸುವುದುತ್ತಮವು. ಸ್ತನಪಾನ ಮೊದಲಾದ ಪ್ರವೃತ್ತಿಗಳಲ್ಯಾದರೂ ಇಷ್ಟಸಾಧನತಾಜ್ಞಾನವೇ ಪ್ರವರ್ತಕವೆಂದು ನಿಶ್ಚಿತವಾಗಿದೆ. (6) ಆದುದರಿಂದ ಹೀಗೆ ಸಿದ್ಧ(ಇಷ್ಟಸಾಧನ)ಜ್ಞಾನವೇ ಎಲ್ಲಾ ಕಡೆಗಳಲ್ಲಿಯೂ ಪ್ರವರ್ತಕವು. ವ್ಯುತ್ಪತ್ತಿಯೂ ಕೂಡ ಸಿದ್ಧವಿಷಯಕವೇ ಆಗಿರುತ್ತದೆ. ಆದಪ್ರಯುಕ್ತ 'ಇಯಂ ಮಾತಾ' ಇತ್ಯಾದಿವಾಕ್ಯಗಳಿಗೆ ಮಾತ್ರ ಸಿದ್ಧಾರ್ಥದಲ್ಲಿ ಪ್ರಾಮಾಣ್ಯಹೇಳುವುದಲ್ಲ. ಮತ್ತೆ ಎಲ್ಲಾ ವಾಕ್ಯಗಳಿಗೂ, ಲಿಙಾದಿಯುಕ್ತಗಳಾದ ವಾಕ್ಯಗಳಿಗೂ ಸಿದ್ಧಾರ್ಥ(ಇಷ್ಟಸಾಧನ)ದಲ್ಲಿಯೇ ಪ್ರಾಮಾಣ್ಯವೆಂದು ಸಿದ್ಧವಾಯಿತು ॥ ೮೦ ॥

ವಾಕ್ಯಗಳಿಗೆಲ್ಲಾ ಸಿದ್ಧಾರ್ಥದಲ್ಲಿಯೇ ಪ್ರಾಮಾಣ್ಯವೆನ್ನುವ ವಿಷಯದಲ್ಲಿ ಸರ್ವವಾದಿಗಳಿಗೂ ಸಮ್ಮತವಾದ ದೃಷ್ಟಾಂತವನ್ನು ಹೇಳುತ್ತಾರೆ —

**ಮೂ ॥ ಪ್ರಸಿದ್ಧಂ ಚ ವ್ಯಾಕರಣ ನಿರುಕ್ತಾದೀನಾಂ ಸಿದ್ಧಮಾತ್ರೇ ಪ್ರಾಮಾಣ್ಯಂ ಸರ್ವವಾದಿನಾಂ ॥ ೮೧ ॥**

ಅ ॥ ವ್ಯಾಕರಣನಿರುಕ್ತಾದೀನಾಂ=ವ್ಯಾಕರಣ, ನಿರುಕ್ತ, ನಿಘಂಟು ಮೊದಲಾದುವುಗಳಿಗೆ, ಸಿದ್ಧಮಾತ್ರೇ=ಕೇವಲ ಶಬ್ದಾದಿ ಸ್ವರೂಪದಲ್ಲಿ, ಸರ್ವವಾದಿನಾಂ=ಎಲ್ಲಾ ವಾದಿಗಳಿಗೂ ಪ್ರಾಮಾಣ್ಯಂ=ಪ್ರಾಮಾಣ್ಯವು, ಪ್ರಸಿದ್ಧಂ ಚ=ಪ್ರಸಿದ್ಧವೇ ಆಗಿದೆ.

ತಾ ॥ (1) 'ಏಕಃ ಶಬ್ದಃ ಸಮ್ಯಕ್ ಜ್ಞಾತಃ ಸುಪ್ರಯುಕ್ತಃ ಶಾಸ್ತ್ರಾನ್ವಿತಃ ಸ್ವರ್ಗೇ ಲೋಕೇ ಕಾಮಧುಕ್ ಭವತಿ' ಒಂದು ಶಬ್ದವು ಚೆನ್ನಾಗಿ ತಿಳಿಯಲ್ಪಟ್ಟದ್ದಾಗಿ ಶಾಸ್ತ್ರಾನ್ವಿತವಾಗಿ ಪ್ರಯೋಗಿಸಲ್ಪಟ್ಟರೆ, ಸ್ವರ್ಗಲೋಕದಲ್ಲಿ ಇಚ್ಛಾನುಸಾರವಾದ ಭೋಗವುಳ್ಳವನು ಆಗುವನು. ಎಂಬೀ ಅರ್ಥವಾದದ ಸಾಮರ್ಥ್ಯದಿಂದ ಪ್ರವೃತ್ತಿಯು ತತ್ಸಾಮರ್ಥ್ಯದಿಂದಲೇ 'ಏಕಃ ಶಬ್ದಃ ಸಮ್ಯಕ್ ಜ್ಞಾತವ್ಯಃ' ಒಂದು ಶಬ್ದವು ಚೆನ್ನಾಗಿ ತಿಳಿಯಲ್ಪಡಬೇಕು, ಎಂಬೀ ವಿಧಿಯು ಕಲ್ಪಿಸಲ್ಪಡುತ್ತದೆ. ಅಂತೂ ಆ ವಿಧಿವಾಕ್ಯದಿಂದ ವ್ಯಾಕರಣಾದಿಗಳಿಗೆ ಏಕವಾಕ್ಯತ್ವವಿದ್ದುದರಿಂದ ಕಾರ್ಯಪರತ್ವವೇ ಇರುತ್ತದೆ. ಆದುದರಿಂದ ಕೇವಲ ಸಿದ್ಧವಾದ ಶಬ್ದಾದಿ ಸ್ವರೂಪದಲ್ಲಿ ಪ್ರಾಮಾಣ್ಯವಿಲ್ಲವು. ಎಂದು ಹೇಳಕೂಡದು. ಇಷ್ಟ ಸಾಧನತಾ ಜ್ಞಾನದಿಂದಲೇ ಪ್ರವೃತ್ತಿಯು ಉಪಪನ್ನವಾಗುವಾಗ ವಿಧಿಯನ್ನು ಕಲ್ಪಿಸತಕ್ಕ ಪ್ರಮಾಣವಿಲ್ಲ. ಅಂದರೆ ಪ್ರಮಾಣವಿರುದ್ಧಗಳಾದ ಅರ್ಥವಾದಗಳಿಗೇನೇ ಸ್ವಾರ್ಥದಲ್ಲಿ ಪ್ರಾಮಾಣ್ಯವಿಲ್ಲವು. ಆದ ಕಾರಣ ಪ್ರಮಾಣಭೂತವಾದ ಅರ್ಥವಾದದಿಂದ ಬೋಧಿತವಾದ ಅರ್ಥದಲ್ಲಿ ಇಷ್ಟಸಾಧನತಾ ಜ್ಞಾನವದೆ, ಅದರಿಂದಲೇ ವ್ಯಾಕರಣಾದಿಗಳಲ್ಲಿ ಪ್ರವೃತ್ತಿಯು ಕೂಡುವುದರಿಂದ ವಿಧಿಯನ್ನು ಕಲ್ಪಿಸತಕ್ಕ ಪ್ರಮಾಣವಿಲ್ಲವು ॥ ೮೧ ॥

(1) ಇನ್ನೊಬ್ಬನು ಪೂರ್ವಪಕ್ಷಮಾಡುವನು. ಮೂಲವೇ ಇಲ್ಲದಿರುವುದರಿಂದಲೂ, ಪ್ರಯೋಜನವಿಲ್ಲದಿರುವುದರಿಂದಲೂ, ವ್ಯಾಕರಣಾದಿಗಳಿಗೆ ಪ್ರಾಮಾಣ್ಯವೇ ಇಲ್ಲವು. ಸುಶಬ್ದ ಅಪಶಬ್ದಗಳ ವಿಭಾಗಜ್ಞಾನವಾದರೂ ಪ್ರಾಮಾಣಿಕರ ಪ್ರಯೋಗದಿಂದಲೇ ಸಿದ್ಧವಾಗುವುದು. (2) ಸಂದೇಹವನ್ನು ಪರಿಹರಿಸಿ ವೇದಪಾಠವನ್ನು ರಕ್ಷಿಸುವುದೇ ಪ್ರಯೋಜನವು ಎಂದೂ ಹೇಳಕೂಡದು. ಅಧ್ಯಾಪಕರ ಸಂಪ್ರದಾಯದಿಂದಲೇ ಉಪಪನ್ನವಾಗುವುದು. ಅಂದರೆ ಅಧ್ಯಾಪಕರು ಸಂಪ್ರದಾಯಾನುಸಾರವಾಗಿ ಹೇಗೆ ಪ್ರಯೋಗಿಸುವರೋ, ಹಾಗೆಯೇ ಪ್ರಯೋಗಿಸಬೇಕು. ಅವರು 'ಚಕ್ಷೋಃ ಸೂರ್ಯೋಽಜಾಯತ' ಇತ್ಯಾದಿ ಪ್ರಕಾರಗಳಿಂದಲೇ ಪ್ರಯೋಗಿಸುವರು. ಹಾಗೆಯೇ

ಪ್ರಯೋಗಿಸಬೇಕು. ಅದಕ್ಕಾಗಿ ವ್ಯಾಕರಣವು ಅಪೇಕ್ಷಿತವಲ್ಲವು. ಆದುದರಿಂದ ವಾಕ್ಯಗಳಿಗೆ ಸಿದ್ಧಾರ್ಥದಲ್ಲಿ ಪ್ರಾಮಾಣ್ಯವದೆ, ಎನ್ನುವ ವಿಷಯದಲ್ಲಿ ಅಪ್ರಮಾಣಭೂತವಾದ ವ್ಯಾಕರಣವನ್ನು ದೃಷ್ಟಾಂತವಾಗಿ ಹೇಳಿರುವುದು ಹೇಗೆ ಉಪಪನ್ನವಾಗಬಹುದೆಂದರೆ —

**ಮೂ ॥ ತದನಂಗೀಕಾರೇ ಚ ಸರ್ವಶಾಬ್ದವ್ಯವಹಾರಾಸಿದ್ಧಿಃ ॥ ೮೨ ॥**

ಅ ॥ ತದನಂಗೀಕಾರೇ ಚ=ವ್ಯಾಕರಣಾದಿಗಳಿಗೆ ಪ್ರಾಮಾಣ್ಯವನ್ನು ಒಡಂಬಡದಿದ್ದರೆ. ಸರ್ವಶಾಬ್ದ ವ್ಯವಹಾರಾಸಿದ್ಧಿಃ=ಎಲ್ಲಾ ಶಾಬ್ದ ವ್ಯವಹಾರಗಳಿಗೆ ಅಸಿದ್ಧಿಯೇ ಬರುವುದು.

ತಾ ॥ (1) ಅಪಶಬ್ದಗಳಿಂದ ಮಿಶ್ರವಾಗದಿರುವ ಶಬ್ದಗಳಿಂದ ಹುಟ್ಟುವ ವ್ಯವಹಾರವು ಶಾಬ್ದವ್ಯವಹಾರವು. ಲೋಕದಲ್ಲಿ ಸಾಸ್ನಾಸ್ನಂಗಗಳುಳ್ಳ ಪದಾರ್ಥದಲ್ಲಿ ಗೋ ಶಬ್ದದಂತೆಯೇ ಗಾವೀ, ಗಾಯಿ ಮೊದಲಾದ ಶಬ್ದಗಳೂ ಪ್ರಯೋಗಿಸಲ್ಪಡುತ್ತವೆ. ಆದುದರಿಂದ ಅವುಗಳಿಗೂ ಗೋಶಬ್ದದಂತೆಯೇ ಪ್ರಯೋಗವು ಬರಬೇಕಾಗುವುದು. ಹಾಗೆ ಪ್ರಯೋಗಿಸಿದರೆ * ಮಹಾಪ್ರತ್ಯವಾಯವು ಪ್ರಾಪ್ತವಾಗುತ್ತದೆ. (2) ಆದುದರಿಂದಲೇ ಸುಶಬ್ದ ಅಪಶಬ್ದಗಳ ವಿಭಾಗವಿಲ್ಲವೆನ್ನುವುದೂ ನಿರಸ್ತವಾಯಿತು. ಹೇಗೆಂದರೆ — ಸುಶಬ್ದ ಅಪಶಬ್ದವೆಂದು ವಿಭಾಗವಿಲ್ಲದಿದ್ದರೆ ಪ್ರತ್ಯೇಕವಾಗಿ ಫಲಗಳನ್ನು ಹೇಳಿದ್ದೂ ಅಸಂಗತವಾಗಬೇಕಾಯಿತು. ವ್ಯಾಕರಣದಿಂದ ಹೊರತು ಸುಶಬ್ದವಿದು, ಅಪಶಬ್ದವಿದು ಎಂಬೀ ವಿಭಾಗವನ್ನೂ ತಿಳಿಯಲಸಾಧ್ಯವು. ಆದುದರಿಂದ ವ್ಯಾಕರಣಕ್ಕೆ ಪ್ರಾಮಾಣ್ಯವನ್ನು ಅಂಗೀಕರಿಸದಿದ್ದರೆ ಶಾಬ್ದವ್ಯವಹಾರವೇ ಇಲ್ಲದೆ ಹೋಗಬೇಕಾಗುವುದು. (3) ಶಬ್ದವ್ಯವಹಾರಕ್ಕಾಗಿ ವ್ಯಾಕರಣಕ್ಕೆ ಪ್ರಾಮಾಣ್ಯವನ್ನು ಅಂಗೀಕರಿಸಬೇಕಾದುದರಿಂದಲೇ ಅಷ್ಟಕಾದಿ ಸ್ಮೃತಿಗಳಂತೆಯೇ ವ್ಯಾಕರಣಕ್ಕೂ ಮೂಲಪ್ರಮಾಣವನ್ನು ಕಲ್ಪಿಸಬೇಕು. ಅಧ್ಯಾಪಕರಿಗೂ ಕದಾಚಿತ್ ಪ್ರಮಾದವು (ಸಂದೇಹಾದಿಗಳು) ಉಂಟಾಗಬಹುದಾದುದರಿಂದ ಅದನ್ನು ಪರಿಹರಿಸುವುದಕ್ಕಾಗಿ ವೇದರಕ್ಷಾದಿಗಳೂ ಆವಶ್ಯಕಗಳು. ಆದಕಾರಣ ವೇದಗಳನ್ನು ರಕ್ಷಿಸುವುದಕ್ಕಾಗಿ ವ್ಯಾಕರಣವನ್ನು ಅಧ್ಯಯನಮಾಡಬೇಕು. ಇದೂ ವ್ಯಾಕರಣಕ್ಕೆ ಪ್ರಯೋಜನವೆಂದು ಸಿದ್ಧವಾಗುವುದು ॥ ೮೨ ॥

(1) ಆಗಲಿ. ಚಿಂತಿಲ್ಲ. ಇಷ್ಟರವರೇಗೆ ಹೇಳಿದಪ್ರಕಾರ ವಾಕ್ಯಗಳಿಗೆ ಸಿದ್ಧಾರ್ಥದಲ್ಲಿ ಪ್ರಾಮಾಣ್ಯವಿರಲಿ, ಆದಾಗ್ಯೂ ಕ್ಷರ (ಬ್ರಹ್ಮಾದಿಜೀವರು) ಮತ್ತು ಅಕ್ಷರ (ಲಕ್ಷ್ಮೀದೇವಿಯರು) ಜಡಪದಾರ್ಥಗಳೂ ಇವುಗಳಿಂದುತ್ತಮನು ಇತ್ಯಾದಿರೂಪನಾದ ನಾರಾಯಣನ ವಿಷಯದಲ್ಲಿ ಎಲ್ಲಾ ಸದಾಗಮಗಳಿಗೂ ಪ್ರಾಮಾಣ್ಯವೆನ್ನುವುದು ಯಾವುದರಿಂದ ಸಿದ್ಧವಾಗುವುದು? ಅದನ್ನು ನಿರ್ಣಯಿಸತಕ್ಕ ಇತರ ಪ್ರಮಾಣವಿಲ್ಲದೆ ಕೇವಲ ಊಹೆಯಿಂದ ಅರ್ಥವು ಸಿದ್ಧಿಸಲಾರದು. (2) ಕಾರ್ಯತಾಪರತ್ವವನ್ನು ನಿರಾಕರಿಸದುದೇ ಮೊದಲಾದ ಹಿಂದೆ ಹೇಳಲ್ಪಟ್ಟವುಗಳಿಂದ ಎಲ್ಲಾ ಸದಾಗಮಗಳೂ ಶ್ರೀ ನಾರಾಯಣನ ವಿಷಯದಲ್ಲಿ ಪ್ರಮಾಣಗಳಾಗಿವೆ, ಎನ್ನುವುದನ್ನು ಊಹಿಸ

---

* ಯಸ್ತು ಪ್ರಯುಂಕ್ತೇ ಕುಶಲೋ ವಿಶೇಷೇ ಶಬ್ದಾನ್ಯಥಾವದ್ವ್ಯವಹಾರಕಾಲೇ । ಸೋಽನಂತಮಾಪ್ನೋತಿ ಜಯಂ ಪರತ್ರ ವಾಗ್ಯೋಗಯುಗ್ದುಷ್ಯತಿ ಚಾಪಶಬ್ದೈಃ ॥ ಯಾವಾತನು ಶಬ್ದವಿಶೇಷವನ್ನು ಪ್ರಯೋಗಿಸುವಾಗ ಕುಶಲನಾಗಿ ವ್ಯವಹಾರಕಾಲದಲ್ಲಿ ಯೋಗ್ಯರೀತಿಯಾಗಿ ಸುಶಬ್ದಗಳನ್ನು ಪ್ರಯೋಗಿಸುವನೋ ಅಂತಹ ಪುರುಷನು ಈ ಲೋಕದಲ್ಲಿ ನಿಶ್ಚಯವಾಗಿ ಜಯವನ್ನು ಹೊಂದುತ್ತಾನೆ. ಜನ್ಮಾಂತರದಲ್ಲಿ ಅಪಶಬ್ದಗಳಿಂದ ಸಂಕೀರ್ಣವಾಗದಿರುವ ಪ್ರಶಸ್ತವಾದ ಮಾತನ್ನಾಡುವವನು ಆಗುವನು. ಅಪಶಬ್ದಗಳನ್ನು ಪ್ರಯೋಗಿಸುವವನು ದೋಷವುಳ್ಳವನಾಗುವನು. ಜಯವನ್ನು ಹೊಂದಲಾರನು. ಎಂದು ಮಹಾಭಾಷ್ಯದಲ್ಲಿದೆ.

ಬಹುದಲ್ಲದೆ ನಿರ್ಣಯಿಸಲು ಸಾಧ್ಯವಿಲ್ಲ. (3) 'ಎಲ್ಲಾ ಸದಾಗಮಗಳೂ ಸರ್ವೋತ್ತಮತ್ವ ಮೊದಲಾದ ವಿಶೇಷಣಗಳಿಂದ ವಿಶಿಷ್ಟವಾದ ಭಗವತ್ಸ್ವರೂಪವನ್ನು ಪ್ರತಿಪಾದಿಸುತ್ತವೆ' ಎಂದು 'ಜ್ಞೇಯ ಏತೈಃ' ಇತ್ಯಾದಿ ವಾಕ್ಯವೂ ಕೂಡ ಪ್ರತಿಪಾದಿಸುವುದಿಲ್ಲ. ಜನಾರ್ದನನು ಸರ್ವೋತ್ತಮತ್ವಾದಿ ವಿಶೇಷಣಗಳಿಂದಲೇ ಜ್ಞೇಯನು ಎಂದೇ ಹೇಳಲ್ಪಟ್ಟಿದೆ. (4) 'ಜ್ಞೇಯ ಏತೈಸ್ಸದಾಯುಕ್ತೈಃ' ಎನ್ನುವ (ಮೂ. ೩) ವಾಕ್ಯವು ಮೇಲೆ ಹೇಳಲ್ಪಡುವ ಸಂಶಯವನ್ನೂ ಕೂಡ (ಅಂದರೆ ಧರ್ಮಾದಿಗಳೂ ವೇದಾದಿಗಳಿಂದ ಪ್ರತಿಪಾದಿಸಲ್ಪಡುತ್ತವೆ, ಇಲ್ಲವಾದರೆ ಧರ್ಮಾದಿಗಳೇ ಸಿದ್ಧಿಸದೆ ಹೋಗಬೇಕಾಗುವುದು. ಆದುದರಿಂದ ವೇದಾದಿಗಳೆಲ್ಲವೂ ನಾರಾಯಣನನ್ನು ತಿಳಿಸಿಕೊಡುತ್ತವೆ ಎನ್ನುವುದು ಹೇಗೆ ಸಂಗತವಾಗುವುದು? ಎಂಬೀ ಸಂಶಯವನ್ನು) ಪರಿಹರಿಸುವುದೇ ಇಲ್ಲವೆಂದಾಶಂಕಿಸಿದರೆ ಆಚಾರ್ಯರು ಸಮಾಧಾನ ಹೇಳುವರು.—

**ಮೂ || ಉಕ್ತಂ ಚ ನಾರದೀಯೇ || ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಂ | ಸರ್ವೋತ್ತಮಂ ಜ್ಞಾಪಯಂತಿ ಮಹಾತಾತ್ಪರ್ಯಮತ್ರ ಹಿ || ಸರ್ವೇಷಾಮಪಿ ವೇದಾನಾಮಿತಿಹಾಸಪುರಾಣಯೋಃ | ಪ್ರಮಾಣಾನಾಂ ಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೇ || ಇತಿ || ೮೩ ||**

ಅ || ನಾರದೀಯೇ ಉಕ್ತಂ ಚ=(ಊಹಾಮಾತ್ರವಲ್ಲ,) ನಾರದೀಯ ಪುರಾಣದಲ್ಲಿಯೂ ಸ್ಪಷ್ಟವಾಗಿ ಹೇಳಿರುತ್ತದೆ. ಸರ್ವೇಽಪಿ ವೇದಾಃ=ಎಲ್ಲಾ ವೇದಗಳೂ, ಸರ್ವಜ್ಞಂ=ಸಮಸ್ತವನ್ನು ತಿಳಿದವನೂ, ಸರ್ವಕರ್ತಾರಂ=ಎಲ್ಲಾ ವಸ್ತುಗಳಿಗೆ ಸೃಷ್ಟಿಕರ್ತನೂ, ಅನಾಮಯಂ=ದೋಷಲೇಶರಹಿತನೂ, ಸರ್ವೋತ್ತಮಂ = ಕ್ಷರಾಕ್ಷರಪುರುಸ (ಬ್ರಹ್ಮಾದಿಜೀವರು ಮತ್ತು ಲಕ್ಷ್ಮಿ) ರಿಂದುತ್ತಮನೂ ಆದ, ನಾರಾಯಣಂ=ಶ್ರೀ ನಾರಾಯಣನನ್ನು, ಜ್ಞಾಪಯಂತಿ=ತಿಳಿಸಿಕೊಡುತ್ತವೆ. ಅತ್ರ ಹಿ=ಸರ್ವೋತ್ತಮತ್ವಾದಿಲಕ್ಷಣಗಳಿಂದ ವಿಶಿಷ್ಟನಾದ ನಾರಾಯಣನಲ್ಲಿಯೇ, ಸರ್ವೇಷಾಮಪಿ ವೇದಾನಾಂ=ಎಲ್ಲಾ ವೇದಗಳಿಗೂ, ಇತಿಹಾಸಪುರಾಣಯೋಃ=ಇತಿಹಾಸಪುರಾಣಗಳಿಗೂ, ಸರ್ವೇಷಾಂ ಪ್ರಮಾಣಾನಾಂ ಚ=ಪಂಚರಾತ್ರಮೊದಲಾದ ಎಲ್ಲಾ ಪ್ರಮಾಣಗಳಿಗೂ, ಮಹಾತಾತ್ಪರ್ಯಂ=ಮುಖ್ಯತಾತ್ಪರ್ಯವಿರುವುದು. ಅನ್ಯತ್=ನಾರಾಯಣನಿಂದ ಇತರಗಳಾದ ಧರ್ಮಾದಿಗಳು, ತದರ್ಥಂ ಚ=ಭಗವಂತನ ಜ್ಞಾನಕ್ಕಾಗಿಯೇ, ಉಚ್ಯತೇ=(ವೇದಾದಿಗಳಿಂದ) ಹೇಳಲ್ಪಡುತ್ತವೆ.

ತಾ || (1) 'ಸರ್ವಜ್ಞಂ ಸರ್ವಕರ್ತಾರಂ' ಎಂಬೀ ಎರಡು ವಿಶೇಷಣಗಳಿಂದ ಶ್ರೀಹರಿಯು ಅಶೇಷ ಸದ್ಗುಣಪರಿಪೂರ್ಣನು, ಎನ್ನುವುದನ್ನೂ ಇಟ್ಟುಕೊಳ್ಳಬೇಕು. (2) 'ಅನಾಮಯಂ' ಎನ್ನುವ ಪದದಿಂದ ನಿರ್ದೋಷತ್ವವನ್ನು ಅಂದರೆ ದೋಷಲೇಶರಹಿತನೆಂದೂ, 'ಸರ್ವೋತ್ತಮಂ' ಎನ್ನುವುದರಿಂದ ಸಮತೀತಕ್ಷರಾಕ್ಷರತ್ವವನ್ನೂ ಅಂದರೆ ಲಕ್ಷ್ಮೀ ಬ್ರಹ್ಮಾದಿ ಜೀವರಿಂದುತ್ತಮನೆಂದೂ ಇಟ್ಟುಕೊಳ್ಳಬೇಕು. (ತಿಳಿದುಕೊಳ್ಳಬೇಕು.) (3) ಧರ್ಮಾದಿಗಳೂ ವೇದಾದಿಗಳಿಂದ ಪ್ರತಿಪಾದಿಸಲ್ಪಡುತ್ತವೆ. ಇಲ್ಲದಿದ್ದರೆ ಧರ್ಮಾದಿಗಳೇ ಸಿದ್ಧಿಸದೆ ಹೋಗಬೇಕಾಗುವುದು. ಆದುದರಿಂದ ವೇದಾದಿಗಳೆಲ್ಲವೂ ನಾರಾಯಣನನ್ನೇ ತಿಳಿಸಿಕೊಡುತ್ತವೆ ಎನ್ನುವುದು ಹೇಗೆ ಸಂಗತವಾಗುವುದು ಎಂದು ಶಂಕಿಸಿದರೆ ಮುಖ್ಯತಾತ್ಪರ್ಯವು ಶ್ರೀ ನಾರಾಯಣನನ್ನು ಪ್ರತಿಪಾದಿಸುವುದರಲ್ಲಿಯೇ, ಧರ್ಮಾದಿಗಳನ್ನು ಪ್ರತಿಪಾದಿಸುವುದರಲ್ಲಿಯೂ

ಅವಾಂತರ ತಾತ್ಪರ್ಯವಿದೆ. ಧರ್ಮಾದಿಗಳು ಪರಮಾತ್ಮನ ಜ್ಞಾನಕ್ಕೆ ಅಂಗಗಳಾಗುತ್ತವೆ ಎಂಬೀರೀತಿಯು ಪೂರ್ವದಲ್ಲಿಯೇ ಹೇಳಲ್ಪಟ್ಟಿದೆ ॥ ೮೩ ॥

**ಕಾರ್ಯತಾಪ್ರಕರಣವು ಸಮಾಪ್ತವಾಯಿತು.**

ಸರ್ವೋತ್ತಮತ್ವಾದಿ ಲಕ್ಷಣಗಳುಳ್ಳ ಶ್ರೀಹರಿಯಲ್ಲಿ ಸರ್ವವೇದಗಳಿಗೂ ಮಹಾ ತಾತ್ಪರ್ಯವು ಎನ್ನುವ ವಿಷಯದಲ್ಲಿ ಅದ್ವೈತ(ಜೀವ ಬ್ರಹ್ಮರಿಗೆ ಐಕ್ಯ) ವಾದಿಗಳು ಹೀಗೆ ಹೇಳುತ್ತಾರೆ. ಮಂತ್ರ (ಅಗ್ನಿಮೀಳೇ ಪುರೋಹಿತಂ) ಬ್ರಾಹ್ಮಣ (ಉರು ಪ್ರಥಸ್ವೇತಿ ಪುರೋಡಾಶಂ ಪ್ರಥಯತಿ) ವಿಧಿ (ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ) ನಿಷೇಧ (ನಾನೃತಂ ವದೇತ್) ರೂಪಗಳಾದ ವೇದಗಳು ವಿಧಿನಿಷೇಧ ರೂಪಗಳಾದುದರಿಂದ ಕರ್ಮವನ್ನು ಪ್ರತಿಪಾದಿಸತಕ್ಕವುಗಳು. ಅವಿದ್ವದಧಿಕಾರಿಕವಾದುದರಿಂದ ಅಂದರೆ ತತ್ವಜ್ಞಾನ ರಹಿತರು ವೇದಗಳಿಗೆ ಅಧಿಕಾರಿಗಳಾದುದರಿಂದ ಅವುಗಳು ಅತತ್ವಾವೇದಕಗಳು (ಅಯಥಾರ್ಥವನ್ನೇ ಬೋಧಿಸಿ ಕೊಡುವವುಗಳು) ವೇದಾಂತಗಳು ತತ್ವ (ಯಥಾರ್ಥ) ವನ್ನು ತಿಳಿಸತಕ್ಕವುಗಳಾದಾಗ್ಯೂ ಜೀವೇಶ್ವರರಿಗೆ ಐಕ್ಯವನ್ನು ಪ್ರತಿಪಾದಿಸುವುದರಲ್ಲಿಯೇ ಅವುಗಳಿಗೆ ಮುಖ್ಯ ತಾತ್ಪರ್ಯವು. (2) ಯದ್ಯಪಿ ವೇದಾಂತಗಳಲ್ಲಿ 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಇದು ಮೊದಲಾದ ಉದ್ಗೀಥೋಪಾಸನಾ ವಾಕ್ಯಗಳಿಗೆ ಕರ್ಮದಿಂದುಂಟಾಗತಕ್ಕ ಸ್ವರ್ಗಾದಿರೂಪಸಮೃದ್ಧಿಯೇ ಫಲವಾಗಿರುವುದು. ಆದರೂ ವೇದಾಂತಗಳಲ್ಲಿ 'ಪ್ರಾಣಂ ಬ್ರಹ್ಮೇತ್ಯುಪಾಸೀತ' ಇತ್ಯಾದಿ ಪ್ರಾಣಾದ್ಯುಪಾಸನೆಗಳೂ ಸಗುಣೋಪಾಸನೆಗಳೂ ಹೇಗೆ ಹೇಳಲ್ಪಡುತ್ತವೋ ಹೀಗೆ ಉದ್ಗೀಥಾದ್ಯುಪಾಸನೆಗಳೂ ಹೇಳಲ್ಪಡುತ್ತವೆ. ಪ್ರಾಣಾದ್ಯುಪಾಸನೆಯಂತೆ ಉದ್ಗೀಥ ಮೊದಲಾದ ಉಪಾಸನೆಗಳೂ ಮನಸ್ಸಿನಲ್ಲಿರತಕ್ಕವುಗಳಾದುದರಿಂದ ಮನೋವೃತ್ತಿತ್ವವು ಸಮಾನವೇ. ಅಂದರೆ ಉಪಾಸನಾತ್ವವು ಎರಡರಲ್ಲಿಯೂ ಸಮಾನವೇ ಆಗಿದೆ. ಅಲ್ಲದೆ ಅವುಗಳಿಗೆ ಬುದ್ಧಿಯನ್ನು ಶುದ್ಧೀಕರಿಸುವುದು ಅಂದರೆ ಅಂತಃಕರಣದ ಬಾಹ್ಯವ್ಯಾಪಾರಗಳನ್ನು ಪ್ರತಿರೋಧಿಸುವುದೂ ಪ್ರಯೋಜನವು. ಆದುದರಿಂದ ಉದ್ಗೀಥಾದ್ಯುಪಾಸನೆಗಳನ್ನು ಹೇಳಿದ್ದು ವಿರುದ್ಧವಲ್ಲ. (3) ಆದರೂ ವೇದಾಂತಗಳಲ್ಲಿರತಕ್ಕ 'ಪ್ರಾಣಂ ಬ್ರಹ್ಮೇತ್ಯುಪಾಸೀತ' ಇದು ಮೊದಲಾದ ಪ್ರಾಣಾದಿ ಪ್ರತೀಕೋಪಾಸನಾ ವಾಕ್ಯಗಳಿಗೆ ಗತಿಯೇನು ಎಂದರೆ— ಪ್ರಾಣಾದಿಗಳು ಬ್ರಹ್ಮನ ಪ್ರತಿಬಿಂಬರು. ಆದುದರಿಂದ ಬಿಂಬ ಪ್ರತಿಬಿಂಬಗಳಿಗೆ ಐಕ್ಯವಿದೆ. ಪ್ರಾಣಾದಿಗಳನ್ನುಬ್ರಹ್ಮನ ಪ್ರತಿಬಿಂಬರೆಂದುಪಾಸನೆಮಾಡುವುದು ಅದ್ವೈತಜ್ಞಾನಕ್ಕೆ ಉಪಯುಕ್ತವಾಗಿದೆ. ಮತ್ತು ಪ್ರಾಣಾದಿಗಳನ್ನು ಉಪಾಸನಾ ಮಾಡಿದರೆ ಪ್ರಥಮತಃ ಪ್ರಾಣಾದಿಗಳ ಪ್ರಾಪ್ತಿಯಾಗುತ್ತದೆ. ಆ ಮೇಲೆ ಬ್ರಹ್ಮಪ್ರಾಪ್ತಿರೂಪವಾದ ಮುಕ್ತಿಯಾಗುವುದು. ಹೀಗೆ ವೇದಾಂತದಲ್ಲಿರತಕ್ಕ 'ಪ್ರಾಣಂ ಬ್ರಹ್ಮೇತ್ಯುಪಾಸೀತ' ಇದು ಮೊದಲಾದ ಪ್ರಾಣಾದಿ ಪ್ರತೀಕೋ (ವಿಗ್ರಹ)ಪಾಸನಾ ವಾಕ್ಯಗಳಿಗೂ ಕ್ರಮದಿಂದ ಮುಕ್ತಿರೂಪವಾದ ಫಲವಿರುವುದರಿಂದಲೂ ಪಾಠವು ವಿರುದ್ಧವಲ್ಲವು. (4) 'ಯಸ್ಸರ್ವಜ್ಞಸ್ಸರ್ವವಿತ್' ಇದು ಮೊದಲಾದ ಬ್ರಹ್ಮನು ಸರ್ವಜ್ಞನೆಂದು ಪ್ರತಿಪಾದಿಸತಕ್ಕ ವಚನಗಳೂ ಸಗುಣಬ್ರಹ್ಮಪ್ರಾಪ್ತ್ಯನಂತರದಲ್ಲಿ *

---

* ನಿರ್ವಿಶೇಷಂ ಪರಂ ಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾಃ । ಯೇ ಮಂದಾಸ್ತೇಽನುಕಂಪ್ಯಂತೇ ಸವಿಶೇಷಂ ನಿರೂಪಣೈಃ ॥ ನಿರ್ಗುಣಬ್ರಹ್ಮನನ್ನು ಪ್ರತ್ಯಕ್ಷೀಕರಿಸಲಿಕ್ಕೆ ಯಾರಿಗೆ ಸಾಮರ್ಥ್ಯವಿಲ್ಲವೋ? ಅಂತಹ ಮಂದರು ಆದಿಯಲ್ಲಿ ಸಗುಣನನ್ನುಪಾಸನಾಮಾಡುವರು. ಅಂದರೆ, ಆದಿಯಲ್ಲಿ ಸಗುಣನನ್ನುಪಾಸನೆಮಾಡದೆ ನಿರ್ಗುಣ ಬ್ರಹ್ಮನನ್ನುಪಾಸನೆಮಾಡುವುದರಲ್ಲಿ ಬುದ್ಧಿಯು ಆರೂಢವಾಗದಿರುವುದರಿಂದ ಸಗುಣೋಪಾಸನೆಯು ನಿರ್ಗುಣೋಪಾಸನೆಗೆ ಉಪಯುಕ್ತವು.

ನಿರ್ಗುಣ ಬ್ರಹ್ಮೈಕ್ಯವು ಪ್ರಾಪ್ತವಾಗುತ್ತದೆಂದು ಪ್ರತಿಪಾದಿಸುತ್ತಾ ಅದ್ವೈತಜ್ಞಾನಕ್ಕೆ ಅನುಕೂಲಗಳಾಗಿವೆ. ಹೀಗೆ ಕ್ರಮದಿಂದ ಮುಕ್ತಿಯೇ ಫಲವು. (5) ಅಥವಾ ಕ್ರಿಯಾ (ಯಾಗಾದಿರೂಪವಾದುದು) ಕಾರಕ (ಕರ್ತ್ರಾದಿಗಳು) ಫಲ (ಸ್ವರ್ಗಾದಿಗಳು) ರೂಪವಾದ ಭೇದಪ್ರಪಂಚವನ್ನು ಪ್ರತಿಪಾದಿಸತಕ್ಕ ಎಲ್ಲಾ ವೇದಗಳೂ ಜೀವಬ್ರಹ್ಮರಿಗೆ ನಿಷ್ಪ್ರಪಂಚತ್ವವನ್ನು ಪ್ರತಿಪಾದಿಸುತ್ತಾ ಐಕ್ಯವನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಅನುವಾದಪರಗಳೇ ಆಗಿವೆ. ಹೀಗೆ ಎಲ್ಲಾ ವೇದಗಳಿಗೂ ಜೀವೇಶ್ವರರಿಗೆ ಭೇದವಿಲ್ಲವೆಂಬೀ ವಿಷಯದಲ್ಲಿಯೇ ತಾತ್ಪರ್ಯವಿರುವುದು. ಆದುದರಿಂದ ಸರ್ವೋತ್ತಮತ್ವಾದಿ ಲಕ್ಷಣಗಳುಳ್ಳ ಶ್ರೀಹರಿಯಲ್ಲಿ ತಾತ್ಪರ್ಯವೆಂಬಮಾತು ಕೂಡಲಾರದು. ಸರ್ವೋತ್ತಮತ್ವಾದಿಗಳಿಗೆ ಭೇದದ ಅಪೇಕ್ಷೆ ಇದ್ದುದರಿಂದ ಅಂದರೆ ಅನೇಕರಲ್ಲಿ ಒಬ್ಬನು ಸರ್ವೋತ್ತಮನೆಂದಾಗಬೇಕಾದರೆ ಭೇದವನ್ನು ಅವಶ್ಯವಾಗಿ ಒಡಂಬಡಬೇಕಾದಕಾರಣ ಸರ್ವೋತ್ತಮತ್ವ ಮೊದಲಾದುವುಗಳು ಅಭೇದಕ್ಕೆ ವಿರೋಧಿಗಳಾಗಿವೆ, ಎಂಬುವ ಪೂರ್ವಪಕ್ಷವನ್ನು ಪ್ರತಿಷೇಧಮಾಡುತ್ತಾರೆ —

**ಮೂ ॥ ನ ಚ ಜೀವೇಶ್ವರಾಭೇದ ಏವ ತಾತ್ಪರ್ಯಮಾಗಮಸ್ಯ ॥**
**ತತ್ರ ಪ್ರಮಾಣಾಭಾವಾತ್ ॥ ೮೪ ॥**

ಅ ॥ ಜೀವೇಶ್ವರಾಭೇದ ಏವ=ಜೀವೇಶ್ವರರಿಗೆ ಐಕ್ಯವೆಂಬೀ ವಿಷಯದಲ್ಲಿಯೇ, ಆಗಮಸ್ಯ=ವೇದಕ್ಕೆ, ತಾತ್ಪರ್ಯಂ=ತಾತ್ಪರ್ಯವು, ನ ಚ=ಇಲ್ಲವು, ತತ್ರ=ಆ ವಿಷಯದಲ್ಲಿ, ಪ್ರಮಾಣಾಭಾವಾತ್=ಪ್ರಮಾಣವಿಲ್ಲದಿರುವುದರಿಂದ.

ತಾ ॥ (1) ಇಲ್ಲಿ ಈಶ್ವರಶಬ್ದದಿಂದ ಶುದ್ಧಬ್ರಹ್ಮನನ್ನೇ ಇಟ್ಟುಕೊಳ್ಳಬೇಕು. ಶುದ್ಧಬ್ರಹ್ಮನೇ ತನ್ನ ಅಧೀನವಾದ ಮಾಯೆಯಿಂದ ಯಾವಾಗ ಮರೆಯಾಗುವನೋ, ಆಗ ಅವನಿಗೆ 'ಈಶ್ವರ' ಎಂದು ಹೆಸರು. ಹೀಗೆ ಪರರು ಅಂಗೀಕರಿಸಿರುವರು. (2) ಜೀವೇಶ್ವರರಿಗೆ ಐಕ್ಯವನ್ನು ಪ್ರತಿಪಾದಿಸುವ ಪ್ರಧಾನವಾಕ್ಯವಿದ್ದರೆ ಇತರ ಅವಾಂತರವಾಕ್ಯಗಳು ಪ್ರಧಾನವಾಕ್ಯದೊಡನೆ ಕಲೆತು ಮಹಾವಾಕ್ಯವಾಗಬಹುದು. ಆಗ ಎಲ್ಲಾ ಆಗಮಗಳಿಗೂ ಜೀವೇಶ್ವರರ ಐಕ್ಯವಿಷಯದಲ್ಲಿ ತಾತ್ಪರ್ಯವಿದೆ, ಎಂದು ಹೇಳಬಹುದಾಗಿತ್ತು. ಆದರೆ ಜೀವೇಶ್ವರರ ಐಕ್ಯವಿಷಯದಲ್ಲಿ ಪ್ರಮಾಣಭೂತವಾದ ಪ್ರಧಾನವಾಕ್ಯವೇ ಇಲ್ಲ. ಆದುದರಿಂದ ಆಗಮಗಳಿಗೆ ಜೀವೇಶ್ವರರ ಐಕ್ಯವಿಷಯದಲ್ಲಿ ತಾತ್ಪರ್ಯವೆಂಬೀಮಾತು ಕೂಡಲಾರದು. (3) ಜೀವೇಶ್ವರರಿಗೆ ಐಕ್ಯವನ್ನು ಪ್ರತಿಪಾದಿಸುವ 'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಇವುಮೊದಲಾದ ವಾಕ್ಯಗಳು ಇದ್ದುದರಿಂದ ಪ್ರಮಾಣವಿಲ್ಲವೆನ್ನುವುದು ಕೂಡಲಾರದು, ಎಂದು ಹೇಳಕೂಡದು. ಏಕೆಂದರೆ — 'ದ್ವೇ ಬ್ರಹ್ಮಣೀ ವೇದಿತವ್ಯೇ' 'ದ್ವಾ ಸುಪರ್ಣಾ' ಇವುಮೊದಲಾದ ಜೀವೇಶ್ವರರಿಗೆ ಭೇದವನ್ನು ಪ್ರತಿಪಾದಿಸುವ ವಾಕ್ಯಗಳು ಜೀವೇಶ್ವರೈಕ್ಯಕ್ಕೆ ವಿರೋಧಿಗಳಾಗಿವೆ. ಆದುದರಿಂದ 'ತತ್ತ್ವಮಸಿ' ಇತ್ಯಾದಿ ವಾಕ್ಯಗಳಿಗೆ ಅಭೇದದಲ್ಲಿ ಪ್ರಾಮಾಣ್ಯವಿಲ್ಲವು ॥ ೮೪ ॥

ಪ್ರಬಲವಾದಂಥಾದ್ದು ವಿರೋಧಿಯಾಗಿದ್ದರೆ ದುರ್ಬಲವಾದುದನ್ನು ಬಾಧಿಸುತ್ತದೆ. ಸಮಬಲವಾದರೆ ಪ್ರತಿರೋಧಿಸುತ್ತದೆ. ಎರಡು ಪಕ್ಷದಲ್ಲಿಯೂ ವಿರುದ್ಧವಾದುದಕ್ಕೆ ಅಪ್ರಾಮಾಣ್ಯವೇ ಉಚಿತವು. ಅಭೇದವಾಕ್ಯಗಿಂತ ಭೇದವಾಕ್ಯಗಳು ಪ್ರಬಲಗಳೂ ಅಲ್ಲ. ಸಮಬಲಗಳೂ ಅಲ್ಲ. ಏಕೆಂದರೆ ಜೀವೇಶ್ವರರ ಭೇದವು ಪ್ರತ್ಯಕ್ಷಾನುಮಾನಗಳಿಂದ ಸಿದ್ಧವಾಗಿದೆ. ಅಸಿದ್ಧವಾದಭೇದವನ್ನೇ ಅನುವಾದಮಾಡುವ ಪ್ರಯುಕ್ತ ಭೇದವಾಕ್ಯಗಳು ಪ್ರಮಾಣಾಂತರ(ಪ್ರತ್ಯಕ್ಷ, ಅನುಮಾನ)ಗಳಿಂದ ಸಿದ್ಧವಾದ ಭೇದವನ್ನೇ ಪುನಃ ಸಾಧಿಸುವುದೆಂದಾಯಿತು. ಅಪೂರ್ವತಾ (ಬೇರೆ ಪ್ರಮಾಣಗಳಿಂದ

ಪ್ರಾಪ್ತವಾಗದಿರುವ ಅರ್ಥವನ್ನು ಪ್ರತಿಪಾದಿಸುವಿಕೆ)ರೂಪವಾದ ತಾತ್ಪರ್ಯನಿರ್ಣಾಯಕಲಿಂಗವು ಬರಲಿಲ್ಲ. ಆದಪ್ರಯುಕ್ತ ಭೇದಪ್ರತಿಪಾದಕವಾಕ್ಯಗಳೇ ದುರ್ಬಲಗಳು. ನಾವು (ಐಕ್ಯವಾದಿಗಳು) ಹೇಳುವ ಅಭೇದವಾದರೂ ಪ್ರತ್ಯಕ್ಷ ಮೊದಲಾದ ಯಾವ ಪ್ರಮಾಣಗಳಿಂದಲೂ ಸಿದ್ಧವಾಗಲಿಲ್ಲ. ಆದುದರಿಂದ ಅಭೇದವಾಕ್ಯಗಳು ಅನುವಾದಕಗಳಾಗುವುದಿಲ್ಲ.ಆದಪ್ರಯುಕ್ತ ಅಭೇದವಾಕ್ಯಗಳಿಗೆ ಭೇದವಾಕ್ಯಗಳಿಂದ ವಿರೋಧವಿರುವಪ್ರಯುಕ್ತ ಅಭೇದವನ್ನುಹೇಳುವ ವಾಕ್ಯಗಳಿಗೆ ಅಪ್ರಾಮಾಣ್ಯ ವನ್ನು ಹೇಳುವುದು ಅಯುಕ್ತವು. ಅದಕ್ಕೆ ಬದಲಾಗಿ ಅಭೇದವಾಕ್ಯಗಳಿಂದ ವಿರೋಧವಿದ್ದುದ ರಿಂದ ಭೇದವಾಕ್ಯಗಳಿಗೇನೇ ಅಪ್ರಾಮಾಣ್ಯವನ್ನು ಹೇಳುವುದು ಉಚಿತವೆಂದಾಶಂಕಿಸಿದರೆ —

**ಮೂ ॥ ನ ಚ ಜೀವೇಶ್ವರಭೇದಃ ಸಿದ್ಧ ಇತ್ಯನುವಾದಕತ್ವಂ ಭೇದವಾಕ್ಯಾನಾಂ ॥ ಆಗಮಂ ವಿನೇಶ್ವರಸ್ಯೈವಾಸಿದ್ಧೇಃ ॥ ೮೫ ॥**

ಅ ॥ ಜೀವೇಶ್ವರಭೇದಃ=ಜೀವೇಶ್ವರರ ಭೇದವು, ಸಿದ್ಧಃ=ಪ್ರತ್ಯಕ್ಷಾನುಮಾನಗಳಿಂದ ಸಿದ್ಧವಾಗಿದೆ, ಇತಿ=ಆದುದರಿಂದ, ಭೇದವಾಕ್ಯಾನಾಂ=ಭೇದವಾಕ್ಯಗಳಿಗೆ, ಅನುವಾದಕತ್ವಂ= ಅನುವಾದಕತ್ವವು, ದೌರ್ಬಲ್ಯವೂ ಕೂಡ, ನ ಚ=ಇಲ್ಲ. ಆಗಮಂ ವಿನಾ=ಆಗಮರೂಪ ಪ್ರಮಾಣವನ್ನುಹೊರತು, ಈಶ್ವರಸ್ಯೈವ=ಈಶ್ವರನಿಗೇನೇ, ಅಸಿದ್ಧೇಃ=ಸಿದ್ಧಿಯಿಲ್ಲದಿರುವುದರಿಂದ.

ತಾ ॥ (1) ಭೇದಜ್ಞಾನವು ಧರ್ಮಿಜ್ಞಾನವನ್ನೂ* ಪ್ರತಿಯೋಗಿಜ್ಞಾನವನ್ನೂ ಅಪೇಕ್ಷಿಸಿ ಕೊಂಡು ಇರುತ್ತದೆ. ಅಂದರೆ- ಭೇದಜ್ಞಾನಹುಟ್ಟಬೇಕಾದರೆ ಮೊದಲು ಎರಡು ಪದಾರ್ಥಗಳ ಜ್ಞಾನವೂ ಬೇಕು. ಅದರಲ್ಲಿ (೧) ಈಶ್ವರಧರ್ಮಿಕವಾದ ಜೀವಪ್ರತಿಯೋಗಿಕವಾದ ಭೇದವು ಪ್ರಮಾಣಾಂತರದಿಂದ ಸಿದ್ಧವಾಗಿದೆ ಎಂದಾಗಲೀ ಹೇಳಬೇಕು. (೨) ಈಶ್ವರಪ್ರತಿಯೋಗಿಕವಾದ ಜೀವಧರ್ಮಿಕವಾದ ಭೇದವು, ಪ್ರಮಾಣಾಂತರಸಿದ್ಧವು, ಎಂದಾಗಲೀ ಹೇಳಬೇಕು. ಎರಡು ಕಲ್ಪ ದಲ್ಲಿಯೂ ಜೀವೇಶ್ವರರು ಪ್ರತೀತಿ (ಜ್ಞಾನ) ವಿಷಯರೆಂದು ಅವಶ್ಯವಾಗಿ ಒಡಂಬಡಬೇಕು. ಅವ ರಲ್ಲಿ ಯದ್ಯಪಿ ಜೀವನು ಸಾಕ್ಷಿ (ಜೀವಸ್ವರೂಪವಾದ ಇಂದ್ರಿಯ) ಪ್ರತ್ಯಕ್ಷದಿಂದ ಸಿದ್ಧನು. ಆದಾಗ್ಯೂ (೧) ಈಶ್ವರನು ಆಗಮದಿಂದ ಸಿದ್ಧನಾಗುವನೋ? (೨)ಬೇರೆ ಪ್ರಮಾಣಗಳಿಂದಲೊ? (೧) ಆಗಮದಿಂದ ಈಶ್ವರನು ಸಿದ್ಧನಾಗುವನು ಎಂದು ಹೇಳಿದರೆ, 'ಯಃ ಸರ್ವಜ್ಞಃ ಸರ್ವವಿತ್' ಇತ್ಯಾದಿ ಯಾವ ಆಗಮದಿಂದ ಈಶ್ವರನು ಸಿದ್ಧನಾಗುವನೋ ಆ ಆಗಮದಿಂದಲೇ ಭಿನ್ನನು ಎಂದೂ ಸಿದ್ಧನಾಗಿರುವನು. ಆ ಆಗಮದಿಂದಲೇ ಅಭೇದಾಗಮಕ್ಕೆ ವಿರೋಧವಿದ್ದುದರಿಂದ ಅಪ್ರಾಮಾಣ್ಯವು ಬರುವುದು. (೨) ಪ್ರಮಾಣಾಂತರದಿಂದ ಈಶ್ವರನು ಸಿದ್ಧನಾಗುವನು ಎಂಬುವ ಕಲ್ಪದಲ್ಲಿ ಅದಕ್ಕೆ ಉತ್ತರವಾಗಿ ಈ ಮೂಲವಾಕ್ಯವು. ಆಗಮವಿಲ್ಲದೆ ಈಶ್ವರನೇ ಸಿದ್ಧನಾಗ ಲಾರನು. ಅಂತೂ ಧರ್ಮಿಜ್ಞಾನಪ್ರತಿಯೋಗಿಜ್ಞಾನಗಳೇ ಇಲ್ಲದಿರುವುದರಿಂದ ಧರ್ಮಿಪ್ರತಿ ಯೋಗಿಗಳ ಜ್ಞಾನಬಂದಮೇಲೆಯೇ ಸಿದ್ಧವಾಗುವ ಜೀವೇಶ್ವರರ ಭೇದವು ಪ್ರತ್ಯಕ್ಷಾದಿಗಳಿಂದ ಹೇಗೆ ಸಿದ್ಧವಾಗುವುದು? ಮತ್ತೂ ಭೇದವಾಕ್ಯಗಳಿಗೆ ಅನುವಾದಕತ್ವವಾಗಲೀ ದೌರ್ಬಲ್ಯ ವಾಗಲೀ ಹೇಗೆ ಬಂದೀತು? ಎಷ್ಟುಮಾತ್ರಕ್ಕೂ ಬರಲಾರದು ॥ ೮೫ ॥

---

* ಯಾವುದರಿಂದ ಭೇದವನ್ನು ಹೇಳುತ್ತೇವೋ, ಅದು ಆ ಭೇದಕ್ಕೆ ಪ್ರತಿಯೋಗಿಯು. ಇನ್ನೊಂದು (ಆಶ್ರಯವಾದುದು) ಧರ್ಮಿಯು. (ಅನುಯೋಗಿಯು) 'ಜೀವನಿಂದ ಈಶ್ವರನು ಭಿನ್ನನು' ಎಂಬೀ ವಚನದಲ್ಲಿ ಭೇದಕ್ಕೆ ಜೀವನು ಪ್ರತಿಯೋಗಿಯು. ಈಶ್ವರನು ಧರ್ಮಿಯು. ಈಶ್ವರನಿಂದ ಜೀವನು ಭಿನ್ನನೆಂಬುವಲ್ಲಿ ಈಶ್ವರನು ಪ್ರತಿಯೋಗಿಯು. ಜೀವನು ಅನುಯೋಗಿಯು. ಹೀಗೆಯೇ ಎಲ್ಲೆಡೆಯಲ್ಲಿಯೂ ಇಟ್ಟುಕೊಳ್ಳಬೇಕು.

ಈಶ್ವರನು ಸ್ವಭಾವತಃ ಅತಿದೂರದಲ್ಲಿರುವುದರಿಂದ ಪ್ರತ್ಯಕ್ಷದಿಂದ ಸಿದ್ಧನಾಗದಿದ್ದಾಗ್ಯೂ ಅನುಮಾನದಿಂದ ಸಿದ್ಧನಾಗುವನು. ಅಂತೂ ಪ್ರಮಾಣಾಂತರದಿಂದ ಭೇದವು ಸಿದ್ಧವಾಗುವುದರಿಂದ ಜೀವೇಶ್ವರರಿಗೆ ಭೇದವನ್ನು ಹೇಳುವ ವಾಕ್ಯಗಳು ಅನುವಾದಕಗಳೇ, ಎಂದರೆ— (೧) ಪ್ರತ್ಯಕ್ಷಾಗಮಸಾಹಾಯ್ಯವುಳ್ಳ ಅನುಮಾನದಿಂದ ಈಶ್ವರನು ಸಿದ್ಧಿಸುವನು ಎಂದು ಹೇಳುವಿರೋ? ಅಥವಾ (೨)ಅವುಗಳ ಸಾಹಾಯ್ಯವಿಲ್ಲದಿರುವ ಅನುಮಾನದಿಂದಲೋ? ೧ನೇ ಕಲ್ಪದಲ್ಲಿ ಪ್ರತ್ಯಕ್ಷಾಗಮಗಳ ಸಾಹಾಯ್ಯವುಳ್ಳ ಅನುಮಾನದಿಂದ ಈಶ್ವರನು ಸಿದ್ಧನಾಗುವಾಗ ಭಿನ್ನನೆಂದೇ ಸಿದ್ಧನಾಗುವನು. ಆದಕಾರಣ ಅಭೇದಾಗಮಕ್ಕೆ ಅಂತಹ ಅನುಮಾನದಿಂದ ವಿರೋಧವೇ, ಎಂದು ಮುಂದಕ್ಕೆ ಹೇಳುವರು. ೨ನೇ ಕಲ್ಪವನ್ನು (ಅವುಗಳ ಸಾಹಾಯ್ಯವಿಲ್ಲದಿರುವ ಅನುಮಾನದಿಂದ ಈಶ್ವರನು ಸಿದ್ಧನಾಗುವನು ಎಂಬುವ ಕಲ್ಪವನ್ನು) ಪ್ರತಿಷೇಧಿಸುತ್ತಾರೆ —

**ಮೂ ॥ ನ ಚಾನುಮಾನಾತ್ತತ್ಸಿದ್ಧಿಃ ॥ ವಿಪರ್ಯಯೇಣಾಪ್ಯನುಮಾತುಂ ಶಕ್ಯತ್ವಾತ್ ॥ ೮೬ ॥**

**ಅ ॥** ಅನುಮಾನಾತ್=ಅನುಮಾನದಿಂದ, ತತ್ಸಿದ್ಧಿಃ=ಈಶ್ವರನ ಸಿದ್ಧಿಯು, ನ ಚ= ಆಗುವುದಿಲ್ಲ. ವಿಪರ್ಯಯೇಣಾಪಿ=ವ್ಯತ್ಯಾಸದಿಂದಲೂ, ಅನುಮಾತುಂ=ಅನುಮೇಯಿಸಲಿಕ್ಕೆ, ಶಕ್ಯತ್ವಾತ್=ಶಕ್ಯವಾಗುವುದರಿಂದ.

**ತಾ ॥** ಪ್ರತ್ಯಕ್ಷ ಆಗಮಗಳ ಸಾಹಾಯ್ಯವಿಲ್ಲದಿರುವ ಅನುಮಾನವು (ಮಂಜಿನಂತೆಯೇ ವಸ್ತುವಾದ ಪ್ರಯುಕ್ತ ಬೆಂಕಿಯು ಬಿಸಿಯುಲ್ಲ, ಈಶ್ವರನು ಅಲ್ಪಜ್ಞನು, ದುಃಖವುಳ್ಳವನು, ಚೇತನನಾದುದರಿಂದ ಚೈತ್ರನಂತೆ, ಇತ್ಯಾದಿಯು) ಯಥಾರ್ಥವಾದ ಜ್ಞಾನವನ್ನು ಹುಟ್ಟಿಸಲಾರದು. ಏಕೆಂದರೆ — ಬೆಂಕಿಯು ಬಿಸಿಯು, ಉಷ್ಣವಾದ ಸ್ಪರ್ಶವಿದ್ದುದರಿಂದ, ಸರ್ವ ಜಗತ್ತನ್ನು ಸೃಷ್ಟಿಸತಕ್ಕವನಾದುದರಿಂದ ಈಶ್ವರನು ಸರ್ವಜ್ಞನು, ಆನಂದಪೂರ್ಣನು, ಇದುಮೊದಲಾದ ಪ್ರತ್ಯಕ್ಷಾಗಮಗಳ ಸಾಹಾಯ್ಯವುಳ್ಳ ವಿಪರೀತಾನುಮಾನಗಳಿಂದ ಪ್ರತಿರುದ್ಧವಾಗಿದೆ ॥ ೮೬ ॥

ಕೇವಲಾನುಮಾನಕ್ಕೆ ಪ್ರತಿಪಕ್ಷಾನುಮಾನಗಳಿಂದ ವಿರೋಧವದೆ ಎಂದು ಹೇಳಿದ್ದನ್ನು ವಿಸ್ತರಿಸುತ್ತಾರೆ —

**ಮೂ ॥ ವಿಮತಂ ಸಕರ್ತೃಕಂ ಕಾರ್ಯತ್ವಾದ್ಘಟವದಿತ್ಯುಕ್ತೇ ವಿಮತಂ ವಿಕರ್ತೃಕಮಸ್ಮತ್ಸಂಮತಕರ್ತೃರಹಿತತ್ವಾದಾತ್ಮವದಿತ್ಯನುಮಾನ-ವಿರೋಧಾತ್ ॥ ೮೭ ॥**

**ಅ ॥** ವಿಮತಂ=ವಿವಾದವಿಷಯವಾದುವುಗಳು, (ಆಕಾಶಾದಿಗಳಲ್ಲಿ ಕರ್ತನಿಲ್ಲವೆಂದೂ ಘಟಾದಿಗಳಲ್ಲಿ ಕರ್ತನಿದ್ದಾನೆಂಥೂ ವಾದಿಪ್ರತಿವಾದಿಗಳಿಗೆ ಸಮ್ಮತಿಯುದೆ, ಅದರಿಂದ ಇತರವಾದ ಅಂಕುರಾದಿಗಳು), ಸಕರ್ತೃಕಂ=ಉಪಾದಾನಕಾರಣಾದಿಗಳ ಪ್ರತ್ಯಕ್ಷಜ್ಞಾನ ಮಾಡಲಿಚ್ಛೆ, ಇವು ಮೊದಲಾದುವು ಇರುವ ಯಾವನೋ ಒಬ್ಬ ಕರ್ತನಿಂದ ಹುಟ್ಟಿದ್ದಾಗಿವೆ, ಕಾರ್ಯತ್ವಾತ್= ಹುಟ್ಟಿರುವುದರಿಂದ, ಘಟವತ್ = ಮಡಿಕೆಯಂತೆ, ಇತಿ = ಈ ಪ್ರಕಾರ, (ಈಶ್ವರೇ = ಶ್ರೀ ಪರಮಾತ್ಮನು) ಉಕ್ತೇ ಸತಿ = ಅನುಮಿತನಾಗುತ್ತಿರಲು, ವಿಮತಂ = ವಿವಾದವಿಷಯವಾದ ಜಗತ್ತು, ವಿಕರ್ತೃಕಂ=ಕರ್ತೃರಹಿತವಾದುದು, ಅಸ್ಮತ್ಸಂಮತಕರ್ತೃರಹಿತತ್ವಾತ್ = ನಮಗೆ ಸಂಮತನಾದ ಕರ್ತನಿಲ್ಲದಿರುವುದರಿಂದ ಅಂದರೆ ಜಗತ್ತಿಗೆ ಕರ್ತನಿದ್ದಾನೆಂದು ನಮಗೆ ಸಮ್ಮತವಾಗದಿರುವುದರಿಂದ, ಆತ್ಮವತ್ = ಆತ್ಮನಂತೆ, ಇತಿ = ಹೀಗೆ, ಅನುಮಾನವಿರೋಧಾತ್=

ಅನುಮಾನದಿಂದ ವಿರೋಧವು ಬರುವುದರಿಂದ, ಅನುಮಾನಾತ್=ಅನುಮಾನದಿಂದ, ತತ್ಸಿದ್ಧಿಃ= ಈಶ್ವರನ ಸಿದ್ಧಿಯು, ನ ಚ=ಆಗುವುದಿಲ್ಲ.

ತಾ || ಅಥವಾ ಅಸ್ಮತ್ಸಂಮತ ಕರ್ತೃರಹಿತತ್ವಾತ್ ಎನ್ನುವಲ್ಲಿದ್ದ 'ಕರ್ತೃರಹಿತತ್ವಾತ್' ಎನ್ನುವುದಕ್ಕೆ 'ಅಜನ್ಯತ್ವಾತ್'=ಹುಟ್ಟದಿರುವುದರಿಂದ, ಎಂದರ್ಥವು. 'ಅಸ್ಮತ್ಸಂಮತ' ಎನ್ನುವುದಕ್ಕೆ ಶರೀರ್ಯಾದಿಗಳೆಂದರ್ಥವು. ಅಂದರೆ ಶರೀರ ಸ್ವಪ್ರಯೋಜನ, ಅಜ್ಞಾನ, ಸಂಶಯ, ವಿಪರ್ಯಯ, ಅನಿತ್ಯಜ್ಞಾನ, ಅನಿತ್ಯೇಚ್ಛಾ, ಅನಿತ್ಯಪ್ರಯತ್ನ, ಸ್ಮೃತಿ, ಸಂಸ್ಕಾರ, ದ್ವೇಷ, ಸುಖ, ದುಃಖ, ಧರ್ಮ, ಅಧರ್ಮ, ಇವುಗಳುಳ್ಳವರಿಂದ ಹುಟ್ಟದಿರುವುದರಿಂದ, ಎಂದರ್ಥವು. ಹೀಗೆ ಅನೇಕ ಪ್ರತಿಪಕ್ಷಗಳನ್ನು ಸಂಗ್ರಹಿಸುವುದಕ್ಕಾಗಿ 'ಅಸ್ಮತ್ಸಂಮತ' ಎಂದು ಹೇಳಲ್ಪಟ್ಟಿದೆ. (2) 'ಅಸ್ಮತ್ಸಂಮತಕರ್ತೃರಹಿತತ್ವಾತ್' ಎನ್ನುವುದಕ್ಕೆ ಶರೀರವುಳ್ಳವನಿಂದ ಹುಟ್ಟದಿರುವ ಪ್ರಯುಕ್ತ, ಎಂದು ವ್ಯಾಖ್ಯಾನಮಾಡಿದರೂ 'ಶರೀರೀ=ಶರೀರವುಳ್ಳವನಿಂದ' ಎಂದು ವಿಶೇಷಣ ಕೊಟ್ಟದ್ದಕ್ಕೆ ಪ್ರಯೋಜನವಿಲ್ಲ. ಹುಟ್ಟದಿರುವಪ್ರಯುಕ್ತ ಎಂದಿಷ್ಟೇ ಸಾಕು, ಎಂದು ಹೇಳಕೂಡದು. ಅಜನ್ಯತ್ವಾತ್=ಹುಟ್ಟದಿರುವಪ್ರಯುಕ್ತ ಎಂದಿಷ್ಟುಮಾತ್ರ ಹೇಳಿದರೆ ಪಕ್ಷದಲ್ಲಿ ಹೇತುವಿಲ್ಲದಿರುವುದರಿಂದ ಸ್ವರೂಪಾಸಿದ್ಧಿಯು ಬರುತ್ತದೆ. ಆದುದರಿಂದ ಹೇತುವಿಗೆ ಪಕ್ಷವೃತ್ತಿತ್ವವು ಸಿದ್ಧಿಯಾಗುವುದಕ್ಕಾಗಿ 'ಶರೀರೀ' (ಶರೀರವುಳ್ಳವನಿಂದ) ಎನ್ನುವ ವಿಶೇಷಣವು ಆವಶ್ಯಕವು. (3) ಪರರೂ ಕೂಡ 'ಚಕ್ಷುಸ್ತೈಜಸಂ ರೂಪಾದಿಷು ಪಂಚಸು ಮಧ್ಯೇ ರೂಪಸ್ಯೈವ ಗ್ರಾಹಕತ್ವಾತ್ ಪ್ರಾಮಾಣ್ಯಂ ಪರತೋ ಜ್ಞಾಯತೇ ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಇತ್ಯಾದಿ ಸ್ಥಳಗಳಲ್ಲಿ ಹೇತುವಿಗೆ ಪಕ್ಷವೃತ್ತಿತ್ವವು ಸಿದ್ಧಿಯಾಗುವುದಕ್ಕಾಗಿಯೂ 'ರೂಪಾದಿಷು ಪಂಚಸು ಮಧ್ಯೇ, ಅನಭ್ಯಾಸದಶಾಯಾಂ' ಎಂದೂ ವಿಶೇಷಣವನ್ನು ಕೊಟ್ಟಿರುತ್ತಾರೆ. (4) ಹಾಗಾದರೆ ವ್ಯಾಪ್ತ್ಯಂಶದಲ್ಲಿ ಅಪೇಕ್ಷಿಸಲ್ಪಡದಿರುವ (ಅಂದರೆ ಅಸಿದ್ಧಿಯನ್ನು ಪರಿಹರಿಸುತ್ತಾ ಹೇತುವು ಪಕ್ಷದಲ್ಲಿದೆ ಎನ್ನುವುದು ಸಿದ್ಧಿಯಾಗುವುದಕ್ಕಾಗಿ ಆವಶ್ಯಕವಾಗಿದ್ದರೂ ವ್ಯಭಿಚಾರವಾರಕವಾಗದಿರುವುದರಿಂದ ವ್ಯಾಪ್ತಿಯ ಅಂಶದಲ್ಲಿ ಆವಶ್ಯಕವಾಗದಿರುವ) ವಿಶೇಷಣವನ್ನು ಕೊಟ್ಟು ಆ ವಿಶೇಷಣದಿಂದ ಹೇತುವು ಪಕ್ಷದಲ್ಲಿದೆಯೆಂದು ಸಾಧಿಸಿ, ಸಾಧ್ಯವನ್ನು ಸಾಧಿಸಿದ ಪಕ್ಷದಲ್ಲಿ ಪಕ್ಷಧರ್ಮತಾ ಸಿದ್ಧಿರೂಪವಾದ ಪ್ರಯೋಜನದ ಅಧೀನವಾಯಿತು ಪ್ರಮಾಣವು. ಪ್ರಯೋಜನವು ಪ್ರಮಾಣಾಧೀನವಲ್ಲವೆಂದಾಯಿತು. ತಥಾಚ ಅತಿಪ್ರಸಕ್ತಿ (ಅಂದರೆ ದೇವದತ್ತನು ನೀರನ್ನು ಕುಡಿಯಲಿಚ್ಛಿಸುತ್ತಾನೆ ಎನ್ನುವುದರಿಂದ ಮರುಪ್ರದೇಶದಲ್ಲಿಯೂ ನೀರನ್ನು ಸಾಧಿಸುವ ಪ್ರಮಾಣವು ಪ್ರವೃತ್ತವಾಗುವುದು ಇತ್ಯಾದ್ಯತಿಪ್ರಸಂಗವು) ಬರಬೇಕಾಗುವುದು, ಎಂದು ಶಂಕಿಸಿದರೆ ಈ ವಿಷಯದಲ್ಲಿ 'ವಿಶಿಷ್ಟಸ್ಯ ವ್ಯಾಪ್ತಿರಸ್ತ್ಯೇವ' ಇತ್ಯಾದಿ ಮೂಲಗಳಿಂದ ವ್ಯಾಪ್ತಿಗೋಸ್ಕರವೇ ವಿಶೇಷಣವನ್ನು ಕೊಟ್ಟದ್ದೆಂದು ಸಮಾಧಾನವನ್ನು ಹೇಳುವೆವು || ೮೭ ||

ಪ್ರತಿಪಕ್ಷಾನುಮಾನಕ್ಕೆ ಸೋಪಾಧಿಕತ್ವವನ್ನು ಆಶಂಕಿಸಿ ಈಶ್ವರಸಾಧಕವಾದ ಅನುಮಾನಕ್ಕೂ ಅದು ಸಮಾನವೆನ್ನುತ್ತಾರೆ —

**ಮೂ || ಅಕಾರ್ಯತ್ವಮುಪಾಧಿರಿತ್ಯುಕ್ತೇ ಶರೀರಿಜನ್ಯತ್ವಮಿತರತ್ರಾಪ್ಯುಪಾಧಿರಿತ್ಯುತ್ತರಂ || ೮೮ ||**

ಅ || (ಪ್ರತಿಪಕ್ಷಾನುಮಾನದಲ್ಲಿ) ಅಕಾರ್ಯತ್ವಂ=ಅಕಾರ್ಯತ್ವವು, ಉಪಾಧಿಃ= ಉಪಾಧಿಯು, (ಸಾಧ್ಯವ್ಯಾಪಕವಾಗಿದ್ದು ಸಾಧನಾವ್ಯಾಪಕವಾದುದು. ಯಾವುದು ವಿಕರ್ತೃ

ಕರ್ವೋ ಅದು ಅಕಾರ್ಯವು ಆತ್ಮನಂತೆ, ಹೀಗೆ ಸಾಧ್ಯವ್ಯಾಪಕವು. ಸಾಧನವತ್ತಾದ (ಅಸ್ಮತ್ಸಂಮತಕರ್ತೃರಹಿತತ್ವವಿರುವ) ಪಕ್ಷದಲ್ಲಿ ಅಕಾರ್ಯತ್ವವಿಲ್ಲದಿರುವುದರಿಂದ ಸಾಧನಾವ್ಯಾಪಕವಾಯಿತು.) ಇತಿ=ಈ ಪ್ರಕಾರವಾಗಿ, ಉಕ್ತೇ=(ಕೇವಲಾನುಮಾನದಿಂದ ಈಶ್ವರನನ್ನು ಸಾಧಿಸತಕ್ಕವನಿಂದ) ಹೇಳಲ್ಪಡುತ್ತಿರಲು, ಇತರತ್ರಾಪಿ=ಈಶ್ವರಾನುಮಾನದಲ್ಲಿಯೂ, ಶರೀರಿಜನ್ಯತ್ವಂ= ಶರೀರವುಳ್ಳವನಿಂದ ಹುಟ್ಟುವಿಕೆಯು, ಉಪಾಧಿಃ=ಉಪಾಧಿಯು, (ಎಲ್ಲಿ ಸಕರ್ತೃಕತ್ವವದೆಯೋ ಅಲ್ಲಿ ಶರೀರಿಜನ್ಯತ್ವವದೆ. ಘಟಾದಿಗಳಂತೆ, ಹೀಗೆ ಸಾಧ್ಯವ್ಯಾಪಕತ್ವವು. ಕಾರ್ಯತ್ವವುಳ್ಳ ಅಂಕುರಾದಿಗಳಲ್ಲಿ ಶರೀರಿಜನ್ಯತ್ವವಿಲ್ಲ. ಹೀಗೆ ಸಾಧನಾವ್ಯಾಪಕತ್ವವು) ಇತಿ=ಹೀಗೆ, (ಅನೀಶ್ವರವಾದಿಯಿಂದ) ಉತ್ತರಂ=ಪ್ರತ್ಯುತ್ತರವು, ವಕ್ತುಂ=ಹೇಳಲಿಕ್ಕೆ, ಶಕ್ಯತೇ=ಸಮರ್ಥವಾಗುತ್ತದೆ.

ತಾ ॥ (1) 'ಶರೀರಿಜನ್ಯತ್ವಂ' ಎನ್ನುವಲ್ಲಿ 'ಶರೀರಿ' ಎನ್ನುವ ವಿಶೇಷಣವು ವ್ಯರ್ಥವೆಂದರೆ:— 'ಅಕಾರ್ಯತ್ವಂ' ಎನ್ನುವ ಪದಕ್ಕೆ ಕಾರ್ಯದಿಂದ ಅನ್ಯತ್ವ(ಬೇರೆ)ವೆಂದಾಗಲೀ, ಕಾರ್ಯತ್ವವಿಲ್ಲದಿರುವುದೆಂದಾಗಲೀ ಅರ್ಥಮಾಡಬೇಕು. ಅಲ್ಲಿಯೂ ಅನ್ಯತ್ವಾದಿಗಳಿಗೇನೇ ಸಾಧ್ಯವ್ಯಾಪಕತ್ವವು ಸಂಭವಿಸುವುದರಿಂದ ಕಾರ್ಯತ್ವರೂಪವಿಶೇಷಣವು ವ್ಯರ್ಥವೇ, ಅಲ್ಲಿಯಾದರೆ ಪಕ್ಷದಲ್ಲಿ ಉಪಾಧಿಯನ್ನು ಹೋಗಲಾಡಿಸುವುದಕ್ಕಾಗಿ ,ಕಾರ್ಯತ್ವವೆಂಬುವ ವಿಶೇಷಣವನ್ನು ಕೊಟ್ಟದ್ದೆಂದರೆ ಶರೀರಿಜನ್ಯತ್ವೋಪಾಧಿಯಲ್ಲಿಯೂ ಪಕ್ಷವ್ಯಾವೃತ್ಯರ್ಥವಾಗಿಯೇ ಶರೀರಿ' ಎನ್ನುವ ವಿಶೇಷಣವನ್ನು ಹೇಳಿರುವುದು. (2) ವ್ಯರ್ಥವೆಂದರೆ ವ್ಯಭಿಚಾರನಿವಾರಣರೂಪ, ವಾದ ಪ್ರಯೋಜನವಿಲ್ಲದಿರುವುದೆಂದು ಹೇಳಕೂಡದು. ವ್ಯಾಪ್ಯದಲ್ಲಿರುವ ವಿಶೇಷಣವೇ ವ್ಯಭಿಚಾರವನ್ನು ಹೋಗಲಾಡಿಸುವುದರಿಂದ ವ್ಯಾಪಕದಲ್ಲಿರುವ ವಿಶೇಷಣವು ವ್ಯಭಿಚಾರನಿವಾರಕವಾಗಬೇಕೆಂಬುವ ನಿಯಮವಿಲ್ಲವು. (3) ವ್ಯರ್ಥವೆಂದರೆ ಯಾವ ಪ್ರಯೋಜನವೂ ಇಲ್ಲದಿರುವುದು, ಎಂದು ಹೇಳಕೂಡದು. ಸಾಧನಾವ್ಯಾಪಕತ್ವಸಿದ್ಧಿರೂಪಪ್ರಯೋಜನವಿದ್ದುದರಿಂದ ಪ್ರಯೋಜನವೇ ಇಲ್ಲವೆನ್ನುವುದು ಸಿದ್ಧವಲ್ಲವೆಂದರೆ ಇದೂ ಕೂಡ ಶರೀರಿಜನ್ಯತ್ವೋಪಾಧಿಯಲ್ಲಿಯೂ ಸಮಾನವೇ. (ಅಂದರೆ, ಶರೀರಿಜನ್ಯತ್ವೋಪಾಧಿಯಲ್ಲಿಯೂ 'ಶರೀರಿ' ಎಂಬೀ ವಿಶೇಷಣವು ವ್ಯರ್ಥವೆಂದರೆ ವ್ಯಭಿಚಾರನಿವಾರಣರೂಪ ಪ್ರಯೋಜನವಿಲ್ಲವೆಂದಲ್ಲ, ವ್ಯಾಪ್ಯದಲ್ಲಿದ್ದ ವಿಶೇಷಣವೇ ವ್ಯಭಿಚಾರವನ್ನು ನಿವಾರಿಸುತ್ತದೆ. ವ್ಯಾಪಕದಲ್ಲಿದ್ದುದಕ್ಕೆ ಹಾಗೆ ನಿಯಮವಿಲ್ಲ. ಉಪಾಧಿಯು ಸಾಧ್ಯವ್ಯಾಪಕವಾಗಿದೆ. ಪ್ರಯೋಜನವಿಲ್ಲವೆಂದು ಹೇಳಕೂಡದು. ಸಾಧನಾವ್ಯಾಪಕತ್ವವು ಸಿದ್ಧಿಸುವುದೇ ಪ್ರಯೋಜನವು. ಆದಕಾರಣ ಪ್ರಯೋಜನವೇ ಇಲ್ಲವೆನ್ನುವುದೂ ಸಿದ್ಧವಲ್ಲ. ಹೀಗೆ ಸಮಾನವೇ ಆಗಿರುತ್ತದೆ.) (4) ವ್ಯಾಪಕದಲ್ಲಿದ್ದ ವಿಶೇಷಣವು ವ್ಯಭಿಚಾರವಾರಕವಾಗಬೇಕೆಂಬುವ ನಿಯಮವಿಲ್ಲದಿರುವುದರಿಂದಲೇ ಉಪಾಧ್ಯಭಾವರೂಪ ಪ್ರತಿಪಕ್ಷಾನುಮಾನದಲ್ಲಿಯೂ ವಿಶೇಷಣವು ವ್ಯರ್ಥವೆನ್ನುವುದನ್ನು ಪರಿಹರಿಸಿದಂತಾಯಿತು. ಶರೀರಿವಿಶಿಷ್ಟವಾದ ಜನ್ಯತ್ವರೂಪ ಉಪಾಧಿಗೆ ಸಾಧ್ಯವ್ಯಾಪಕತ್ವವದೆ. ಸಾಧ್ಯವ್ಯಾಪಕೀಭೂತವಾದ ಉಪಾಧಿಯ ನಿವೃತ್ತಿಯು ಉಪಾಧಿಯಿಂದ ವ್ಯಾಪ್ಯವಾದ ಸಾಧ್ಯವನ್ನು ನಿವರ್ತಿಸುವುದು. ಸಾಧ್ಯವ್ಯಾಪಕೀಭೂತವಾದ ಉಪಾಧ್ಯಭಾವವೇ ಇಲ್ಲಿ ಪ್ರತಿಪಕ್ಷವೆಂದು ಹೇಳಲ್ಪಟ್ಟದೆ. (5) ಉಪಾಧ್ಯಭಾವವನ್ನೇ ಹೇತುವನ್ನಾಗಿಮಾಡಿ ಯಾವ ಅನುಮಾನವು ಪ್ರಯೋಗಿಸಲ್ಪಡುತ್ತದೋ ಅದರಿಂದ ಬೇರೆಯಾದ 'ಪರ್ವತೋಽಗ್ನಿಮಾನ್ ಪ್ರಮೇಯಧೂಮವತ್ವಾತ್' ಇತ್ಯಾದ್ಯನುಮಾನಗಳಲ್ಲಿಯೇ ವ್ಯಭಿಚಾರ ನಿವಾರಕವಾಗದಿರುವ ವಿಶೇಷಣವು ದೋಷವು, ಅಖಂಡವಾದ ಉಪಾಧ್ಯಭಾವವನ್ನೇ ಹೇತುವನ್ನಾಗಿಮಾಡಿ ಪ್ರಯೋಗಿಸಲ್ಪಡತಕ್ಕ ಸತ್ಪ್ರತಿಪಕ್ಷಾನುಮಾನದಲ್ಲಿ ದೋಷವಲ್ಲವು, ಹೀಗೆ ವ್ಯವಸ್ಥೆಯನ್ನು ಆಶ್ರಯಿಸಿದರೆ ಹಿಂದಿನ ಅತಿಪ್ರಸಂಗರೂಪವಾದ ದೋಷವಿಲ್ಲವು. (6) ದೇವದತ್ತಃ

'ಶರೀರಂ ಪ್ರೇರಯತಿ' ಎನ್ನುವ ಪ್ರತೀತಿಯಿಂದ ಶರೀರಪ್ರೇರಣೆಗೆ ಶರೀರವು ಕರ್ಮವೆನ್ನು ವುದು ಸಿದ್ಧವಾಯಿತು. ಅಂತಹ ಕರ್ಮಭೂತವಾದ ಶರೀರಕ್ಕೆ ಕರ್ತನಲ್ಲಿ ಪ್ರವೇಶ ಕೂಡಬರು ವುದರಿಂದ ಶರೀರಪ್ರೇರಣೆಗೆ ಒಬ್ಬ ಕರ್ತನಿದ್ದರೂ ಶರೀರಿಜನ್ಯತ್ವವಿಲ್ಲವು. ಅಂತೂ ಶರೀರದ ಪ್ರೇರ ಣೆಗೆ ಒಬ್ಬ ಕರ್ತನಿದ್ದರೂ ಅದು ಶರೀರಿಜನ್ಯವಲ್ಲದಿರುವುದರಿಂದ ಸಾಧ್ಯಾವ್ಯಾಪಕತ್ವವು. ಎಂದರೆ– ಶರೀರಪ್ರೇರಣೆಯೆಂದರೆ ಶರೀರದ ಕ್ರಿಯೆಗೆ ಅನುಗುಣವಾದ ಪ್ರಯತ್ನವುಳ್ಳತನವು ಶರೀರವೇ ಇಲ್ಲದಿರುವವನಿಗೆ ಪ್ರಯತ್ನವು ಹುಟ್ಟಲಾರದು. (7) ಮತ್ತು ಆಗಮವನ್ನು ಅಪೇಕ್ಷಿಸದ ಅನು ಮಾನವು ಎನ್ನುವ ಪಕ್ಷದಲ್ಲಿ ಉಪಲಬ್ಧವಾಗದ ಪ್ರಾಗಭಾವವುಳ್ಳ ಪರ್ವತಾದಿಗಳಲ್ಲಿ ಪ್ರಾಗಭಾವ ಪ್ರತಿಯೋಗಿತ್ವರೂಪವಾದ ಕಾರ್ಯತ್ವವು ಯಾವುದರಿಂದ ಸಿದ್ಧವಾಗುವುದು? ಸಾವಯವತ್ವದಿಂದ ಸಿದ್ಧಿಸುವುದೆಂದರೆ ಸಾವಯವತ್ವವನ್ನೇ ನಿರೂಪಿಸಲು ಸಾಧ್ಯವಿಲ್ಲವು. ಹೇಗೆಂದರೆ — ಅವಯವ ಸಂಬಂಧಿತ್ವವೆಂದರೆ ಪಟಾವಯವ ತಂತುಸಂಯುಕ್ತವಾದ ಆಕಾಶದಲ್ಲಿ ವ್ಯಭಿಚಾರವು. ಅವಯವ ಸಂಬಂಧಿತ್ವರೂಪವಾದ ಹೇತುವದೆ, ಕಾರ್ಯತ್ವರೂಪ ಸಾಧ್ಯವಿಲ್ಲವು. ಅವಯವ ಸಮವೇ ತತ್ವವೆಂದರೆ ಜಾತಿಯಲ್ಲಿ ವ್ಯಭಿಚಾರವು. ದ್ರವ್ಯಾಶ್ರಿತ ದ್ರವ್ಯತ್ವವೆಂದರೆ ಜಲದಲ್ಲಿರುವ ಪಾರ್ಥಿವ ಪರಮಾಣುವಿನಲ್ಲಿ ವ್ಯಭಿಚಾರವು. (8) ಆದಕಾರಣ ಹಿಂದೆ ಹೇಳಿದ ಪ್ರಕಾರ ಈಶ್ವರನೇ ಸಿದ್ಧನಾಗ ದಿರುವುದರಿಂದ ಈಶ್ವರಭೇದವೂ ಪ್ರತ್ಯಕ್ಷಾನುಮಾನಗಳಿಂದ ಸುತರಾಂ ಸಿದ್ಧವಾಗಲಾರದು. ಆದುದರಿಂದ ಭೇದವಾಕ್ಯಗಳು ಅನುವಾದಕಗಳಾಗಲಾರವು ॥ ೮೮ ॥

ಪರರು ಭೇದವಾಕ್ಯಗಳು ಅನುವಾದಕಗಳೆಂದು ಸಾಧಿಸುವುದಕ್ಕೆ ಬಹು ಪ್ರಯಾಸ ಪಟ್ಟಿರುವರು, ಅದೂ ವ್ಯರ್ಥವೇ ಎಂದು ನಿರೂಪಿಸುತ್ತಾರೆ —

**ಮೂ ॥ ಪ್ರತ್ಯಕ್ಷಾನುಮಾನಸಿದ್ಧತ್ವೇ ಚ ಭೇದಸ್ಯ ತದ್ವಿರೋಧಾದೇವಾ ಪ್ರಾಮಾಣ್ಯಮಭೇದಾಗಮಸ್ಯ ॥ ೮೯ ॥**

ಅ ॥ ಭೇದಸ್ಯ = ಭೇದಕ್ಕೆ, ಪ್ರತ್ಯಕ್ಷಾನುಮಾನ ಸಿದ್ಧತ್ವೇ ಚ = ಪ್ರತ್ಯಕ್ಷ ಪ್ರಮಾಣ ದಿಂದಲೂ, ಅನುಮಾನ ಪ್ರಮಾಣದಿಂದಲೂ ಸಿದ್ಧಿ ಇದ್ದರೆ, (ಅಂದರೆ ಭೇದವು ಪ್ರತ್ಯಕ್ಷ ಅನು ಮಾನಗಳಿಂದ ಸಿದ್ಧವಾಗಿದ್ದರೆ) ತದ್ವಿರೋಧಾದೇವ=ಭೇದವನ್ನು ತಿಳಿಸಿ ಕೊಡುವ ಪ್ರತ್ಯಕ್ಷಾದಿ ಗಳಿಂದ ವಿರೋಧವಿದ್ದುದರಿಂದಲೇ, ಅಭೇದಾಗಮಸ್ಯ=ಅಭೇದ ಪ್ರತಿಪಾದಕವಾದ ಆಗಮಕ್ಕೆ, ಅಪ್ರಾಮಾಣ್ಯಂ=ಅಪ್ರಾಮಾಣ್ಯವು.

ತಾ ॥ (1) ಭೇದವಾಕ್ಯಗಳು ಅನುವಾದಕಗಳೆಂದು ಹೇಳುವಾಗ ಅವಶ್ಯವಾಗಿ ಭೇದವು ಪ್ರತ್ಯಕ್ಷಾನುಮಾನಸಿದ್ಧವಾಗಿದೆ ಎಂದು ಹೇಳಬೇಕು. ಸಿದ್ಧವಾದುದನ್ನೇ ಅನುವಾದ ಮಾಡು ವುದಲ್ಲದೆ ಅಸಿದ್ಧವಾದುದನ್ನು ಅನುವಾದ ಮಾಡಲು ಶಕ್ಯವಲ್ಲ. ಅಂತೂ ಭೇದವಾಕ್ಯಗಳು ಬೇಕಾದಷ್ಟು ಇರಲಿ! ಭೇದವನ್ನು ತಿಳಿಸಿ ಕೊಡುವ ಪ್ರತ್ಯಕ್ಷಾದಿ ಪ್ರಮಾಣಗಳಿಂದ ವಿರೋಧ ವಿದ್ದುದರಿಂದಲೇ, ಅಭೇದಾಗಮಕ್ಕೆ ಅಪ್ರಾಮಾಣ್ಯವು ತಪ್ಪಲಾರದು. (2) ಭೇದವನ್ನು ತಿಳಿ ಸುವ ಪ್ರತ್ಯಕ್ಷಾದಿ ಪ್ರಮಾಣ ವಿರೋಧವಿರುವಾಗ ಅಭೇದಾಗಮಕ್ಕೆ ಪ್ರಾಮಾಣ್ಯವನ್ನು ರಕ್ಷಿಸು ವುದಕ್ಕಾಗಿ ಭೇದಾಗಮಗಳು ಅನುವಾದಕಗಳೆಂದು ಹೇಳಿದ ಮಾತು ಅಭೇದಾಗಮಕ್ಕೆ ಅಪ್ರಾ ಮಾಣ್ಯವನ್ನೇ ದೃಢೀಕರಿಸುತ್ತದೆ, ಆದುದರಿಂದ ವ್ಯರ್ಥವೇ ಸರಿ ॥ ೮೯ ॥

ಆಗಮವು ಅಪೌರುಷೇಯವಾದುದರಿಂದ ದೋಷ ಸಂಶಯವೇ ಇರುವುದಿಲ್ಲ. ಆದ ಕಾರಣ ಪ್ರಬಲವಾಗಿದೆ. ಪ್ರತ್ಯಕ್ಷಾನುಮಾನಗಳಲ್ಲಿ ದೋಷಸಂಶಯವಿದ್ದುದರಿಂದ ಅವುಗಳು

ದುರ್ಬಲಗಳು. ಆದಕಾರಣ ಪ್ರಬಲವಾದ ಅಭೇದಾಗಮಕ್ಕೆ ದುರ್ಬಲಗಳಾದ ಭೇದಗ್ರಾಹಕ ಪ್ರತ್ಯಕ್ಷಾದಿ ಪ್ರಮಾಣಗಳ ವಿರೋಧದಿಂದ ಅಪ್ರಾಮಾಣ್ಯವು ಪ್ರಾಪ್ತವಾಗುವುದು ಹೇಗೆ ಎಂದರೆ —

**ಮೂ ॥ ತೇನಾಭೇದಾಗಮಸ್ಯ ಪ್ರಾಮಾಣ್ಯಾಭಾವೇ ನಾನುವಾದಕತ್ವಂ ಭೇದವಾಕ್ಯಾನಾಂ ॥ ೯೦ ॥**

**ಅ ॥** ತೇನ=ಪ್ರತ್ಯಕ್ಷಾದಿ ಪ್ರಮಾಣಗಳ ವಿರೋಧದಿಂದ, ಅಭೇದಾಗಮಸ್ಯ=ಅಭೇದ ಪ್ರತಿಪಾದಕವಾದ ಆಗಮಕ್ಕೆ, ಪ್ರಾಮಾಣ್ಯಾಭಾವೇ = ಪ್ರಾಮಾಣ್ಯವಿಲ್ಲವಾದರೆ, ಭೇದವಾಕ್ಯಾನಾಂ=ಭೇದ ವಾಕ್ಯಗಳಿಗೆ, ತೇನ=ಪ್ರತ್ಯಕ್ಷಾದಿ ಪ್ರಮಾಣಸಿದ್ಧತ್ವವಿದ್ದುದರಿಂದ, ಅನುವಾದಕತ್ವಂ ನ=ಅನುವಾದಕತ್ವವು ಇಲ್ಲ.

**ತಾ ॥** ಅಭೇದಾಗಮವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ವಿರುದ್ಧವಾದ ಪ್ರಯುಕ್ತ ಪ್ರಮಾಣವಲ್ಲವೆಂದಾದರೆ ಭೇದವಾಕ್ಯಗಳು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾದ ಪ್ರಯುಕ್ತ ಅನುವಾದಕಗಳಲ್ಲ ॥ ೯೦ ॥

ಅನುವಾದಕತ್ವವು ಏಕೆ ಇಲ್ಲವೆಂದರೆ ಪರರು ಹೇಳಿದ ಯುಕ್ತಿಯಿಂದಲೇ, ಎಂದು ನಿರೂಪಿಸುತ್ತಾರೆ.

**ಮೂ ॥ ನ ಹಿ ಬಲವತೋಽನುವಾದಕತ್ವಂ ॥ ೯೧ ॥**

**ಅ ॥** ಬಲವತಃ =ಪ್ರಬಲವಾದುದಕ್ಕೆ, ಅನುವಾದಕತ್ವಂ = ಅನುವಾದಕತ್ವವು, ನ ಹಿ=ಇಲ್ಲವಷ್ಟೇ?

**ತಾ ॥** ಆಗಮವು ಪ್ರಬಲವಾದುದರಿಂದ. ದುರ್ಬಲಗಳಾದ ಪ್ರತ್ಯಕ್ಷಾದಿಗಳಿಂದ ವಿರೋಧವಿದ್ದರೂ ಅಪ್ರಾಮಾಣ್ಯವಿಲ್ಲವೆಂದು ಹೇಳುವುದಾದರೆ ಭೇದವಾಕ್ಯಗಳೂ ಅಪೌರುಷೇಯ ವಾಕ್ಯಗಳಾದುದರಿಂದ ಅವುಗಳಿಗೂ ಪ್ರಾಬಲ್ಯವಿದೆ. ಆದುದರಿಂದ ದುರ್ಬಲಗಳಾದ ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯಲ್ಪಡತಕ್ಕ ಭೇದವನ್ನು ಪ್ರತಿಪಾದಿಸುವುದಾದರೂ ಭೇದವಾಕ್ಯಗಳು ಅನುವಾದಕಗಳಲ್ಲ ॥ ೯೧ ॥

ಪ್ರಬಲವಾದುದಕ್ಕೂ ಏಕೆ ಅನುವಾದಕತ್ವವಿಲ್ಲವೆಂದರೆ —

**ಮೂ ॥ ದಾರ್ಢ್ಯಹೇತುತ್ವಾತ್ ॥ ೯೨ ॥**

**ಅ ॥** ದಾರ್ಢ್ಯವನ್ನು ಕುರಿತು ಕಾರಣತ್ವವಿದ್ದುದರಿಂದ,

**ತಾ ॥** (1) ಮೊದಲು ಪ್ರವೃತ್ತಗಳಾದ ಪ್ರಮಾಣಗಳಿಂದ ಪ್ರತಿಪಾದ್ಯಗಳಾದ ಅರ್ಥಗಳನ್ನು ಪ್ರತಿಪಾದಿಸುವಿಕೆಯು ಅನುವಾದಕತ್ವವೆನ್ನಬೇಕು. ಹೇಗೆಂದರೆ — ಲೋಕದಲ್ಲಿ 'ಪ್ರತ್ಯಕ್ಷ ಮೊದಲಾದ ಪ್ರಮಾಣಗಳು ಹೀಗೆ ಪ್ರತಿಪಾದಿಸುತ್ತವೆ' ಎಂಬೀ ಅನುವಾದಕವಾಕ್ಯವು ಪ್ರತ್ಯಕ್ಷಾದಿ ಪ್ರಮಾಣಗಳು ಪ್ರತಿಪಾದಿಸಿದ ಅರ್ಥವನ್ನೇ ಪ್ರತಿಪಾದಿಸುತ್ತದೆ. ಇಂತಹ ಅನುವಾದಕತ್ವವು 'ದ್ವಾ ಸುಪರ್ಣಾ' ಇತ್ಯಾದಿ ಭೇದ ವಾಕ್ಯಗಳಲ್ಲುಪಲಬ್ಧವಾಗದಿರುವುದರಿಂದ ಇಲ್ಲ. ಅಂತಹ ಅನುವಾದಕತ್ವವನ್ನು ಹೇಳಿದರೆ ಅದು ಭೇದರೂಪವಾದ ಅರ್ಥವದೆ ಎನ್ನುವಲ್ಲಿ ಉದಾಸೀನವಾದುದರಿಂದ ನಿಶ್ಚಯವನ್ನುಂಟುಮಾಡುವುದಿಲ್ಲ ಎಂದು ಪ್ರಾಪ್ತವಾಗುವುದು. ಆದಕಾರಣ ಭೇದವಾಕ್ಯಗಳು ದುರ್ಬಲಗಳಾದುದರಿಂದ ಅಪ್ರಮಾಣಗಳೆಂಬುವ ಸಂಶಯವು ಬರಬಹುದು.

ಹೀಗೆ ಇಲ್ಲವಷ್ಟೇ! (2) ಆದಕಾರಣ ಅನುವಾದಕವೆಂಬೀ ಪದಕ್ಕೆ ಮೊದಲು ತಿಳಿದಿದ್ದ ಅರ್ಥವನ್ನು ಪುನಃ ಪ್ರತಿಪಾದಿಸುವದೆಂದೇ ಅರ್ಥವೆನ್ನಬೇಕು. ಆಗಮವು ಪ್ರತ್ಯಕ್ಷ ಮೊದಲಾದ ಪೂರ್ವಪ್ರಮಾಣಗಳನ್ನುಪಜೀವಿಸಿಕೊಂಡು ತನ್ನ ಅರ್ಥವನ್ನು ಪ್ರತಿಪಾದಿಸುವ ವಿಷಯದಲ್ಲಿ ಪ್ರವೃತ್ತವಾಗುವುದಾದರೇನೇ ಅನುವಾದಕನಾಗಿ ದುರ್ಬಲವೆನ್ನುವ ಸಂಶಯವು ಹುಟ್ಟಬಹುದು. ಹೀಗೆ ಇಲ್ಲವಷ್ಟೇ! ಮತ್ತೆ ಆಗಮವು ಪ್ರತ್ಯಕ್ಷಾದಿಗಳನ್ನುಪಜೀವಿಸದೇನೇ (ಪ್ರತ್ಯಕ್ಷಾದಿಗಳ ಸಹಾಯವಿಲ್ಲದೇನೇ) ಶಕ್ತಿ (ಶಬ್ದಕ್ಕೂ, ಅರ್ಥಕ್ಕೂ ಇರುವ ಸ್ವಾಭಾವಿಕವಾದ ವಾಚ್ಯ ವಾಚಕ ಭಾವ ಸಂಬಂಧವು) ಮೊದಲಾದ ಸಹಕಾರಿಕಾರಣಗಳ ವಶದಿಂದ ತನ್ನ ಅರ್ಥವನ್ನು ಪ್ರತಿಪಾದಿಸುತ್ತದೆ. ಅಂದರೆ ಆಗಮವು ಕಣ್ಣಿನಿಂದ ನೋಡಿಯೋ ಊಹಿಸಿಯೋ ತಿಳಿದುಕೊಂಡ ವಿಷಯವನ್ನು ಬೋಧಿಸುವುದಿಲ್ಲ. ಅಲ್ಲದೆ ಅರ್ಥವನ್ನು ಬೋಧಿಸುವುದಕ್ಕಾಗಿ ಪ್ರತ್ಯಕ್ಷ ಅನುಮಾನಗಳ ಸಹಾಯವನ್ನು ಅಪೇಕ್ಷಿಸುವುದೂ ಇಲ್ಲ. ಆದ್ದರಿಂದ ವೇದವಾಕ್ಯವು ಅನುವಾದಕವೂ, ದುರ್ಬಲವೂ ಆಗುವುದಿಲ್ಲ. ವೇದವು ಸ್ವತಂತ್ರವಾಗಿ ಶಬ್ದಕ್ಕೂ, ಅರ್ಥಕ್ಕೂ ಇರುವ ಸ್ವಾಭಾವಿಕವಾದ ಸಂಬಂಧದ ಬಲದಿಂದಲೇ ಅರ್ಥವನ್ನು ಬೋಧಿಸುತ್ತದೆ. ವೇದವು ಬೋಧಿಸಿಕೊಡುವ ಆ ಅರ್ಥವಾದರೂ ವಸ್ತುತಃ ಬೇರೆ ಪ್ರಮಾಣಗಳಿಂದ ಪ್ರತಿಪಾದಿಸಲ್ಪಟ್ಟದ್ದೇಸರಿ. ಅಂತೂ ಇಂತಹ ವಾಕ್ಯವೂ ಅನುವಾದಕವಾಗುವುದಾದರೆ ಆ ಅರ್ಥವನ್ನು ಬೇರೆ ಪ್ರಮಾಣಗಳಿಂದ ಪ್ರತಿಪಾದಿಸಿದರಿಂದ ವ್ಯರ್ಥವು. ಹೀಗೆ ಪೂರ್ವ ಪ್ರವೃತ್ತಗಳಾದ ಪ್ರತ್ಯಕ್ಷಾದಿಪ್ರಮಾಣಗಳನ್ನಪೇಕ್ಷಿಸದೆ ತನ್ನ ಅರ್ಥವನ್ನು ತಿಳಿಸಿಕೊಡುವುದಕ್ಕೆ ಕಾರಣಗಳಾದ ಶಕ್ತಿ ಯೋಗ್ಯತಾದಿಗಳನ್ನು ಮಾತ್ರ ಅಪೇಕ್ಷಿಸಿ ಪ್ರವೃತ್ತವಾದ, ತಿಳಿದ ಅರ್ಥವನ್ನು ತಿಳಿಸಿಕೊಡುವ ಆಗಮದ ವೈಯರ್ಥ್ಯವೇ ಅನುವಾದಕತ್ವ ವಿಷಯದಲ್ಲಿ ಕಾರಣವೆಂದೆನ್ನಬೇಕು. ಅಂತಹ ವೈಯರ್ಥ್ಯರೂಪವಾದ ಕಾರಣವು ಪ್ರಕೃತದಲ್ಲಿಲ್ಲ. ಏಕೆಂದರೆ— ಭೇದವು ದುರ್ಬಲಗಳಾದ ಪ್ರತ್ಯಕ್ಷಾನುಮಾನಗಳಿಂದ ತಿಳಿಯಲ್ಪಡುತ್ತದೆ. (ಅಂದರೆ ಸಾಮಾನ್ಯವಾಗಿ ವಿಚಾರಮಾಡಿದರೆ 'ಅದು ಬೇರೆ ವಸ್ತು, ಇದು ಬೇರೆ ವಸ್ತು' ಎಂದು ವಸ್ತುಗಳಲ್ಲಿರುವ ಭೇದವನ್ನು ಕಣ್ಣಿನಿಂದ ಯಾ ಅನುಮಾನದಿಂದ ತಿಳಿಯಬಹುದು.) ಆದಾಗ್ಯೂ ಕೆಲವು ಸಮಯದಲ್ಲಿ ಹೀಗೆ ತಿಳಿದುಕೊಳ್ಳುವಾಗ ಇದು ಅದರಿಂದ ಬೇರೆವಸ್ತು ಹೌದೋ? ಅಲ್ಲವೋ? ಎಂದು ಸಂಶಯವಾಗಬಹುದು. ಆಗ್ಯೆ ಭೇದ ವಿಷಯದಲ್ಲಿಯೇ ಪ್ರವೃತ್ತಗಳಾದ ಪ್ರಬಲಗಳಾದ ಭೇದವಾಕ್ಯಗಳು ನಿಸ್ಸಂಶಯವಾಗಿ ಭೇದಜ್ಞಾನವನ್ನು ಹುಟ್ಟಿಸುತ್ತವೆ. ಆದ್ದರಿಂದ ಪ್ರತ್ಯಕ್ಷ ಅನುಮಾನಗಳಿಂದ ಆಗಮವೇ ಮಿಗಿಲಾದ ಪ್ರಮಾಣವೆಂದು ಒಡಂಬಡಲೇ ಬೇಕಾಗುವುದು. ಅಂತೂ 'ದ್ವಾ ಸುಪರ್ಣಾ' ಇದು ಮೊದಲಾದ ಭೇದಾಗಮಗಳಿಂದಲೇ ಭೇದಜ್ಞಾನವು ನಿಸ್ಸಂಶಯವಾಗಿ ಹುಟ್ಟುತ್ತದೆ. ಪ್ರತ್ಯಕ್ಷಾದಿಗಳಿಂದ ಹುಟ್ಟುವುದಿಲ್ಲ. ಆದಕಾರಣ ಅನುವಾದಕತ್ವ ವಿಷಯದಲ್ಲಿ ಕಾರಣವಾದ ವೈಯರ್ಥ್ಯವಿಲ್ಲ. ಆದುದರಿಂದ ಭೇದ ವಾಕ್ಯಗಳು ಸಾರ್ಥಕಗಳಾಗಿವೆ. ತಥಾ ಚ ಭೇದವಾಕ್ಯಗಳು ಅನುವಾದಕಗಳಾಗದಿರುವುದರಿಂದ ಅವುಗಳಿಗೆ ಪ್ರಾಮಾಣ್ಯವು ಸಿದ್ಧವಾಗುವುದು. ಅವುಗಳಿಂದ ವಿರುದ್ಧಗಳಾದ ಪ್ರಯುಕ್ತವೇ ಅಭೇದಾಗಮಗಳು ಪ್ರಮಾಣಗಳಲ್ಲವೆಂದೂ ಸಿದ್ಧವಾಯಿತು ॥ ೯೨ ॥

ಹೀಗೆ ಅಭೇದವಾಕ್ಯಗಳು ಭೇದವಾಕ್ಯಗಳಿಂದಾಗಲೀ ಅಥವಾ ಭೇದವಾಕ್ಯಗಳಿಗೆ ಅನುವಾದಕತ್ವವು ಸಿದ್ಧಿಯಾಗುವುದಕ್ಕಾಗಿ ಪರರು ಅಂಗೀಕರಿಸಿರುವ ಭೇದಪ್ರತಿಪಾದಕಗಳಾದ ಪ್ರತ್ಯಕ್ಷಾನುಮಾನಗಳಿಂದಾಗಲೀ ಪ್ರತಿರುದ್ಧ(ಬಾಧಿತ)ಗಳಾದುದರಿಂದ ಅವುಗಳಿಗೆ ಪ್ರಾಮಾಣ್ಯವಿಲ್ಲವೆಂದು ಹೇಳಲ್ಪಟ್ಟದೆ. ಈಗ ಸಮಬಲವುಳ್ಳ ಪ್ರಮಾಣಗಳಿಂದ ಪ್ರತಿರುದ್ಧಗಳಾದ ಪ್ರಯುಕ್ತ

ಮಾತ್ರ ಅಪ್ರಾಮಾಣ್ಯವಲ್ಲ. ಪ್ರಬಲವಾದ ಪ್ರಮಾಣದಿಂದ ಬಾಧಿತವಾದಪ್ರಯುಕ್ತವೂ ಅಪ್ರಾಮಾಣ್ಯವು ಸಿದ್ಧಿಸುವುದೆಂದು ಹೇಳುವುದಕ್ಕಾಗಿ ಸಾಮಾನ್ಯ ನ್ಯಾಯುವನ್ನು ತೋರಿಸುತ್ತಾರೆ —

**ಮೂ ॥ ಪ್ರತ್ಯಕ್ಷಾದೇರಾಗಮಸ್ಯ ಪ್ರಾಬಲ್ಯೇಽಪಿ ನೋಪಜೀವ್ಯಪ್ರಮಾಣ-ವಿರೋಧೇ ಪ್ರಾಮಾಣ್ಯಂ ॥ ೯೩ ॥**

ಅ ॥ ಪ್ರತ್ಯಕ್ಷಾದೇಃ = ಪ್ರತ್ಯಕ್ಷ ಅನುಮಾನಗಳಿಂದ, ಆಗಮಸ್ಯ = ಆಗಮಕ್ಕೆ, ಪ್ರಾಬಲ್ಯೇಽಪಿ=ಪ್ರಾಬಲ್ಯವಿದ್ದರೂ, ಉಪಜೀವ್ಯಪ್ರಮಾಣವಿರೋಧೇ=ಉಪಜೀವ್ಯವಾದ ಪ್ರತ್ಯಕ್ಷಾನುಮಾನಗಳ ವಿರೋಧವಿದ್ದರೆ, ಪ್ರಾಮಾಣ್ಯಂ=ಪ್ರಾಮಾಣ್ಯವು, ನ=ಇಲ್ಲವು.

ತಾ ॥ (1) ಯದ್ಯಪಿ ಅಪವಾದವಿಲ್ಲದಿದ್ದರೆ ಆಗಮಪ್ರಾಮಾಣ್ಯವು ಪ್ರತ್ಯಕ್ಷಾನುಮಾನ ಪ್ರಾಮಾಣ್ಯಗಳಿಂದ ಮಿಗಿಲಾಗಿದೆ. ಆದರೂ ಎಲ್ಲಿ ಆಗಮಕ್ಕೆ ಪ್ರತ್ಯಕ್ಷಾನುಮಾನಗಳು ಉಪಜೀವ್ಯಗಳೋ, ಅಲ್ಲಿ ಆಗಮದಿಂದಲೂ ಪತ್ಯಕ್ಷಾನುಮಾನಗಳೇ ಪ್ರಬಲಗಳು. ಅದುದರಿಂದಲೇ ಪ್ರತ್ಯಕ್ಷಾನುಮಾನಗಳ ವಿರೋಧವಿದ್ದರೆ ಆಗಮಕ್ಕೆ ಪ್ರಾಮಾಣ್ಯವೇ ಇಲ್ಲವೆಂದು ಅವಶ್ಯವಾಗಿ ಅಂಗೀಕರಿಸಬೇಕು. ಏಕೆಂದರೆ — ಉಪಜೀವ್ಯ, ಉಪಜೀವಕ(ಯಾವುದಿಲ್ಲದೆ ಯಾವುದು ಹುಟ್ಟಲಾರದೋ ಅದು ಉಪಜೀವ್ಯವು, ಉತ್ಪಾದಕವು, ಉತ್ಪಾದ್ಯವು ಉಪಜೀವಕವು,)ಗಳಿಗೆ ಪರಸ್ಪರ ವಿರೋಧಬಂದರೆ ಎರಡೂ ಪ್ರಮಾಣವಾಗಲಾರವು. ಎರಡೂ ಪ್ರಮಾಣವಾದರೆ ಒಂದು ವಸ್ತುವಿನಲ್ಲಿ ವಿರುದ್ಧಗಳಾದ ಎರಡು ಧರ್ಮಗಳು ಇರಬೇಕಾಗುವುವು. ಎರಡೂ ಅಪ್ರಮಾಣವೂ ಆಗಲಾರವು. ಹಾಗಿದ್ದರೆ ವಸ್ತುವಿಗೆ ಸ್ವಭಾವವೇ ಇಲ್ಲವೆಂದಾಗಬೇಕಾಗುವುದು. ಆದಕಾರಣ ಎರಡರಲ್ಲಿ ಒಂದಕ್ಕೆ ಅವಶ್ಯವಾಗಿ ಅಪ್ರಾಮಾಣ್ಯವನ್ನು ಅಂಗೀಕರಿಸಬೇಕಾದುದರಿಂದ ಉಪಜೀವಕದ ವಿರೋಧದಿಂದ ಉಪಜೀವ್ಯಕ್ಕೆ ಅಪ್ರಾಮಾಣ್ಯವನ್ನು ಅಂಗೀಕರಿಸುವುದು ಯೋಗ್ಯವಲ್ಲ ॥ ೯೩ ॥

ಏಕೆಂದು ಶಂಕಿಸಿದರೆ —

**ಮೂ ॥ ವಿಷಯಾಭಾವೇ ಸ್ವಸ್ಯೈವಾಪ್ರಾಮಾಣ್ಯಪ್ರಾಪ್ತೇಃ ॥ ೯೪ ॥**

ಅ ॥ ವಿಷಯಾಭಾವೇ=ವಿಷಯವೇ ಇಲ್ಲವೆಂದಾದರೆ, ಸ್ವಸ್ಯೈವ=ತನಗೇನೇ, ಅಪ್ರಾಮಾಣ್ಯಪ್ರಾಪ್ತೇಃ=ಅಬೋಧಕತ್ವ ರೂಪವಾದ ಅಪ್ರಾಮಾಣ್ಯವು ಪ್ರಾಪ್ತವಾಗುವುದರಿಂದ.

ತಾ ॥ (1) ಯಾವುದರಿಂದ ಯಾವುದಕ್ಕೆ ಧರ್ಮಿಯು ಸಿದ್ಧಿಸುವುದೋ ಅದು ಅದಕ್ಕೆ ಉಪಜೀವ್ಯವು. ಉದಾ–'ಪರ್ವತೋ ವಹ್ನಿಮಾನ್ ಧೂಮಾತ್' ಎಂಬುವ ಅನುಮಾನಕ್ಕೆ ಪರ್ವತವನ್ನು ಗ್ರಹಿಸತಕ್ಕ ಪ್ರತ್ಯಕ್ಷವು ಉಪಜೀವ್ಯವು. ಅಂತೂ ಉಪಜೀವಕ (ಅನುಮಾನ)ದ ವಿರೋಧದಿಂದ ಉಪಜೀವ್ಯ (ಪ್ರತ್ಯಕ್ಷ)ಕ್ಕೆ ಅಪ್ರಾಮಾಣ್ಯವಿದ್ದರೆ ಉಪಜೀವಕ (ಅನುಮಾನ)ಕ್ಕೆ ವಿಷಯವೇ (ಧರ್ಮಿಯೇ) ಸಿದ್ಧಿಸಲಾರದು. ಧರ್ಮಿಯೇ ಇಲ್ಲವೆಂದಾದರೆ ಉಪಜೀವಕಕ್ಕೆ ಉತ್ಪತ್ತಿಯೇ ಇಲ್ಲದಿರುವುದರಿಂದ ಅಬೋಧಕತ್ವರೂಪವಾದ ಅಪ್ರಾಮಾಣ್ಯವು ಪ್ರಾಪ್ತವಾಗುವುದು. ಧರ್ಮಿಯೇ ಸಿದ್ಧಿಸದೆ ಇದ್ದ ಮೇಲೆ ಆ ಧರ್ಮಿಯಲ್ಲಿ ಧರ್ಮವುಂಟೆಂಬುದನ್ನು ಅನುಮಾನದಿಂದಾಗಲೀ, ಆಗಮದಿಂದಾಗಲೀ ಸಾಧಿಸಲಿಕ್ಕೆ ಶಕ್ಯವಾಗುವುದಿಲ್ಲ. 'ಸಿದ್ಧಂ ಧರ್ಮಿಣಮುದ್ದಿಶ್ಯ ಸಾಧ್ಯಧರ್ಮೋ ವಿಧೀಯತೇ' ಎಂದಿರುವುದು. ಯಾವುದು ತಾನು ಹುಟ್ಟಲಿಕ್ಕೆ ಆಗಲೀ ಬೋಧಿಸಲಿಕ್ಕಾಗಲೀ ಸಮರ್ಥವಾಗಲಾರದೋ, ಅಂತಹುದು ಉಪಜೀವ್ಯವನ್ನು ಹೇಗೆ ಅಪ್ರಮಾಣೀಕರಿಸಬಹುದು? ಆದಕಾರಣ ಯಾವುದನ್ನೂ ಅಪೇಕ್ಷಿಸದಿರುವುದರಿಂದ ಪ್ರಬಲವಾದ ಉಪಜೀವ್ಯದ

ವಿರೋಧವಿದ್ದುದರಿಂದ ಇತರವನ್ನಪೇಕ್ಷಿಸುತ್ತಿರುವ ಪ್ರಯುಕ್ತ ದುರ್ಬಲವಾದ ಉಪಜೀವಕವೇ ಸಂಶೇಷ ಪ್ರಮಾಣದಿಂದ ಅಪ್ರಮಾಣವಾಗುತ್ತದೆ ಎಂದು ಸಿದ್ಧಿಸುವುದು ॥ ೯೪ ॥

ಹೀಗೆ ಉಪಜೀವ್ಯವಿರುದ್ಧವಾದ ಉಪಜೀವಕಕ್ಕೆ ಅಪ್ರಾಮಾಣ್ಯವಿರಲಿ, ಪ್ರಕೃತ ಏನಾಯಿತೆಂದರೆ —

**ಮೂ ॥ ತೇನೈವ ಹ್ಯನುಮಾನಾದಿನಾಗಮಸ್ಯ ವಿಷಯಸ್ಸಿದ್ಧ್ಯತಿ ತತ್ಪಕ್ಷೇಽಪಿ ॥ ೯೫ ॥**

ಅ ॥ ತೇನೈವ=ಭೇದವಾಕ್ಯಗಳಿಗೆ ಅನುವಾದಕತ್ವವು ಸಿದ್ಧಿಸುವುದಕ್ಕಾಗಿ ಪರರಿಂದುಪನ್ಯಾಸಮಾಡಲ್ಪಟ್ಟ, ಅನುಮಾನಾದಿನಾ=ಅನುಮಾನ ಮೊದಲಾದುವುಗಳಿಂದಲೇ, ಆಗಮಸ್ಯ= ಅಭೇದಾಗಮಕ್ಕೂ ತತ್ಪಕ್ಷೇಽಪಿ = ಅದ್ವೈತಿಗಳ ಪಕ್ಷದಲ್ಲಿಯೂ, ವಿಷಯಃ = ವಿಷಯವು, ಸಿದ್ಧ್ಯತಿ=ಸಿದ್ಧಿಸುತ್ತದೆ.

ತಾ ॥ (1) 'ತೇನೈವ' ಎನ್ನುವುದರಿಂದ, ಭೇದಜ್ಞಾನವನ್ನು ಹುಟ್ಟಿಸುವ ಪ್ರತ್ಯಕ್ಷಾನುಮಾನಗಳು ಅಭೇದಾಗಮಕ್ಕೆ ಉಪಜೀವ್ಯಗಳೆಂದು ನಾವು ಬಲಾತ್ಕಾರದಿಂದ ಹೇಳುತ್ತೇವೆಂದಲ್ಲ, ಪರರೂ ಇವನ್ನು ಅಂಗೀಕರಿಸಿರುವರು. ಎಂದು ಸೂಚಿಸಿದಹಾಗಾಯಿತು. (2) ಭೇದಾಗಮಕ್ಕೆ ಮಾತ್ರವಲ್ಲ, ಅವರ ಪಕ್ಷದಲ್ಲಿ ಅಭೇದಾಗಮಕ್ಕೂ ವಿಷಯವು ಸಿದ್ಧಿಸುತ್ತದೆ. (3) 'ತತ್ತ್ವಮಸಿ' ಎನ್ನುವುದರಿಂದ ಜೀವನನ್ನು ಧರ್ಮೀಕರಿಸಿಕೊಂಡು ಜೀವನಿಗೆ ಈಶ್ವರನಿಂದ ಅಭೇದವನ್ನಾಗಲೀ ಬೋಧಿಸಬೇಕು. ಈಶ್ವರನನ್ನು ಧರ್ಮೀಕರಿಸಿಕೊಂಡು ಈಶ್ವರನಿಗೆ 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಎನ್ನುವ ಗೀತಾವಾಕ್ಯದಿಂದ ಜೀವಾಭೇದವನ್ನಾಗಲೀ ಬೋಧಿಸಬೇಕು. ಅಥವಾ 'ನೇಹ ನಾನಾಸ್ತಿ ಕಿಂಚನ' ಎನ್ನುವುದರಿಂದ ಜೀವೇಶ್ವರರಿಬ್ಬರನ್ನೂ ಧರ್ಮೀಕರಿಸಿಕೊಂಡು ಕೇವಲ ಅಭೇದವನ್ನಾಗಲೀ ಬೋಧಿಸಬೇಕು. ಸರ್ವಥಾ ಜೀವೇಶ್ವರರು ಸಿದ್ಧರಾಗಲೇಬೇಕು. ಈ ಜೀವಬ್ರಹ್ಮರಲ್ಲಿ ಜೀವನು ಪ್ರತ್ಯಕ್ಷದಿಂದಲೇ ಸಿದ್ಧನಾಗಿರುವನು. ಈಶ್ವರನು ಕಾರ್ಯತ್ವಾದ್ಯನುಮಾನದಿಂದ ಸಿದ್ಧನಾಗಿರುವನು. ಆದಕಾರಣ ಪ್ರತ್ಯಕ್ಷಾನುಮಾನಗಳು 'ತತ್ತ್ವಮಸಿ' ಇತ್ಯಾದ್ಯಾಗಮಗಳಿಗೆ ಉಪಜೀವ್ಯಗಳಾಗಿವೆ ॥ ೯೫ ॥

**ಮೂ ॥ ಅನುಮಾನೇನ ಹ್ಯನುವಾದಿತ್ವಪಕ್ಷೇ ಈಶ್ವರೋ ಬೋದ್ಧವ್ಯಃ ಪ್ರತ್ಯಕ್ಷೇಣ ಚಾಗಮಃ ॥ ೯೬ ॥**

ಅ ॥ (ಪರರು ಭೇದವಾಕ್ಯಗಳಿಗೆ ಅನುವಾದಕತ್ವವು ಸಿದ್ಧಿಸುವುದಕ್ಕಾಗಿ ಈಶ್ವರನನ್ನು ಸಾಧಿಸಲಿಕ್ಕೆ ಅನುಮಾನವನ್ನುಪನ್ಯಾಸಮಾಡಿರುವುದರಿಂದ) ಅನುವಾದಿತ್ವಪಕ್ಷೇ=(ಭೇದವಾಕ್ಯಗಳಿಗೆ) ಅನುವಾದಕತ್ವವೆನ್ನುವ ಕಲ್ಪದಲ್ಲಿ, ಅನುಮಾನೇನ ಹಿ=ಅನುಮಾನದಿಂದಲೇ, ಈಶ್ವರಃ= ಈಶ್ವರನು, ಬೋದ್ಧವ್ಯಃ=ತಿಳಿಯಲು ಯೋಗ್ಯನಾಗಬೇಕು. ಪ್ರತ್ಯಕ್ಷೇಣ ಚ=ಪ್ರತ್ಯಕ್ಷಪ್ರಮಾಣದಿಂದ, ಆಗಮಃ=(ಆಗಚ್ಛತಿ ಅವಗಚ್ಛತೀತಿ ಎನ್ನುವ ವ್ಯುತ್ಪತ್ತಿಯಿಂದ) ತಿಳಿಯತಕ್ಕ ಜೀವನು, (ತಿಳಿಯಲಿಕ್ಕೆ ಯೋಗ್ಯನಾಗಬೇಕು.)

ತಾ ॥ (1) ಅಥವಾ ಜೀವನು ಪ್ರತ್ಯಕ್ಷಸಿದ್ಧನೆನ್ನುವುದು ಪ್ರಸಿದ್ಧವಾದುದರಿಂದ ಅದನ್ನು ಬಿಟ್ಟು 'ನೇಹ ನಾನಾಸ್ತಿ' ಇತ್ಯಾದ್ಯಭೇದಾಗಮ ಸ್ವರೂಪವನ್ನು ತೋರಿಸುವ ಶ್ರೋತ್ರಪ್ರತ್ಯಕ್ಷಕ್ಕೂ ಕೂಡ ಉಪಜೀವ್ಯತ್ವವು ಸಂಭವಿಸುತ್ತದೆ ಎಂದು ತಿಳಿಸುವುದಕ್ಕಾಗಿ 'ಪ್ರತ್ಯಕ್ಷೇಣ ಚಾಗಮಃ'

ಎಂದುಕ್ತವಾಗಿದೆ. (2) ಅಥವಾ 'ಚ' ಶಬ್ದದಿಂದ ಜೀವನನ್ನು ಸಂಗ್ರಹಿಸತಕ್ಕದು. ಅಂತೂ ಜೀವನಿಗೂ ಪ್ರತ್ಯಕ್ಷಸಿದ್ಧತ್ವವು ಉಕ್ತವಾಯಿತು ॥ ೯೬ ॥

**ಮೂ ॥ ಅತಸ್ತಯೋರ್ವಿರೋಧೇ ಪ್ರಾಮಾಣ್ಯಂ ನ ಸ್ಯಾತ್ ॥ ೯೭ ॥**

ಅ ॥ (ಉಪಜೀವಕದಿಂದ ಉಪಜೀವ್ಯವು ಪ್ರಬಲವೇ ಆಗಿದೆ. ಪ್ರತ್ಯಕ್ಷಾನುಮಾನಗಳು ಅಭೇದಾಗಮಕ್ಕೆ ಉಪಜೀವ್ಯಗಳು.) ಅತಃ=ಆದಕಾರಣ, ತಯೋಃ=ಪ್ರತ್ಯಕ್ಷಾನುಮಾನಗಳ ಸಕಾಶದಿಂದ, (ಅಭೇದಾಗಮಕ್ಕೆ) ವಿರೋಧೇ ಸತಿ=ವಿರೋಧವಿದ್ದರೆ, ಪ್ರಾಮಾಣ್ಯಂ=ಯಾಥಾರ್ಥ್ಯವು, ನ ಸ್ಯಾತ್=ಆಗಲಾರದು ॥ ೯೭ ॥

ಅಭೇದಾಗಮಕ್ಕೆ ಪ್ರತ್ಯಕ್ಷ ಅನುಮಾನಗಳು ಉಪಜೀವ್ಯಗಳಾಗಲಿ. ಆದರೆ ಪ್ರತ್ಯಕ್ಷ ಅನುಮಾನಗಳ ವಿರೋಧವಿಲ್ಲ. ಹೇಗೆಂದರೆ, ಜೀವರಿಗೂ ಈಶ್ವರನಿಗೂ ಭೇದ ಉಂಟೆಂಬುದನ್ನು ಕಣ್ಣಿನಿಂದ ನೋಡಿ ತಿಳಿಯಲು ಸಾಧ್ಯವಿಲ್ಲ. ಅಲ್ಲದೆ, ಅನುಮಾನದಿಂದ ಅಂದರೆ — ಅವರಿಗೆ ಭೇದ ಉಂಟೆಂಬುವುದನ್ನು ಕಾರಣಾಂತರದಿಂದಲೂ ಊಹಿಸಲಸಾಧ್ಯವು. ಆದರೆ, ಅವುಗಳಿಂದ ಜೀವೇಶ್ವರರ ಸ್ವರೂಪವನ್ನು ಮಾತ್ರ ತಿಳಿಯಬಹುದಾಗುತ್ತದೆ. ಯಾವ ಪ್ರತ್ಯಕ್ಷಾನುಮಾನಗಳಿಂದ ಜೀವೇಶ್ವರರ ಸ್ವರೂಪವನ್ನು ಮಾತ್ರ ಗ್ರಹಿಸಲು ಸಾಧ್ಯವೋ, ಆ ಪ್ರತ್ಯಕ್ಷಾನುಮಾನಗಳನ್ನೇ ಅಭೇದಾಗಮವು ಉಪಜೀವಿಸಿಕೊಂಡಿದೆ. ಆದಕಾರಣ ಅಭೇದಾಗಮವು ಹೇಗೆ ತಾನೆ ಪ್ರಮಾಣವಾಗದಿರುವುದು? ಎಂದರೆ —

**ಮೂ ॥ ಅನುಮಾನಸಿದ್ಧೇಶ್ವರಾಚ್ಚ ಭೇದೋಽನುಭವತ ಏವ ಸಿದ್ಧೋ ಜೀವಸ್ಯ । ಅಸರ್ವಕರ್ತೃತ್ವೇನಾನುಭವಾತ್ ॥ ೯೮ ॥**

ಅ ॥ ಅನುಮಾನಸಿದ್ಧೇಶ್ವರಾಚ್ಚ = ಅನುಮಾನದಿಂದ ಸಿದ್ಧನಾದ ಈಶ್ವರನಿಂದಲೂ, ಜೀವಸ್ಯ=ಜೀವನಿಗೆ, ಭೇದಃ=ಭೇದವು, ಅನುಭವತ ಏವ=ಸಾಕ್ಷ್ಯನುಭವದಿಂದಲೇ, ಸಿದ್ಧಃ= ನಿಶ್ಚಿತವಾಗಿದೆ. ಅಸರ್ವಕರ್ತೃತ್ವೇನ = ಸರ್ವಕರ್ತೃತ್ವಾಭಾವದಿಂದ, ಅನುಭವಾತ್ = ಸಾಕ್ಷಿಪ್ರತ್ಯಕ್ಷವಿದ್ದುದರಿಂದ —

ತಾ ॥ (1) ಯದ್ಯಪಿ ಪ್ರತ್ಯಕ್ಷ ಅನುಮಾನಗಳು ಪ್ರತಿಯೋಗಿಜ್ಞಾನವಿಲ್ಲದಿರುವುದರಿಂದ ಪರಸ್ಪರವಾಗಿ ಅಪೇಕ್ಷಿಸಿಕೊಳ್ಳದಿರುವವುಗಳು. ಆದಕಾರಣ ಜೀವೇಶ್ವರರ ಸ್ವರೂಪವನ್ನು ಮಾತ್ರ ಗ್ರಹಿಸುತ್ತವೆ. ಜೀವೇಶ್ವರರ ಭೇದವನ್ನು ವಿಷಯೀಕರಿಸಲಾರವು. (ಅಂದರೆ ಈಶ್ವರನು ಕಣ್ಣಿಗೆ ಕಾಣದಿರುವಪ್ರಯುಕ್ತ ಅವನಲ್ಲಿರುವ ವಿಶೇಷಗುಣಗಳು ತಿಳಿಯಲಾರವು. ಅವನಲ್ಲಿರುವ ವಿಶೇಷ ಗುಣಗಳು ತಿಳಿಯದೆ ಹೋದರೆ 'ಅವನು ಜೀವನಿಂದ ಬೇರೆ' ಎಂಬೀ ಭೇದಜ್ಞಾನವಾದರೂ ಹೇಗೆ ಹುಟ್ಟಬೇಕು? ಆದಕಾರಣ ಪ್ರತ್ಯಕ್ಷ ಅನುಮಾನಗಳಿಂದ ಸಾಮಾನ್ಯವಾಗಿ ಈಶ್ವರ ಎಂದರೆ-ಏನೋ ಒಂದುವಸ್ತುವು ಎಂದಿಷ್ಟೇ ಜ್ಞಾನಬರುವುದು.)ಆದಾಗ್ಯೂ ಕಾರ್ಯತ್ವಾದ್ಯನುಮಾನಗಳಿಂದ (ಅಂದರೆ ಕ್ಷಿತ್ಯಂಕುರಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್- ಇತ್ಯಾದ್ಯನುಮಾನಗಳಿಂದ) ಈಶ್ವರನು ಸರ್ವಜ್ಞನು, ಸರ್ವಕರ್ತನು, ಇವುಮೊದಲಾದ ಲಕ್ಷಣಗಳುಳ್ಳವನೆಂದು ತಿಳಿಯುವನು. ತಾನು ಅಲ್ಪಜ್ಞನು, ದುಃಖಿಯು, ಹೀಗೆ ಸಾಕ್ಷೀಂದ್ರಿಯಕ್ಕೆ ಅನುಭವವದೆ. ಆದಕಾರಣ ಪ್ರತಿಯೋಗಿಭೂತನಾದ ಈಶ್ವರನನ್ನು ತಿಳಿದಿರುವಪ್ರಯುಕ್ತ ಭೇದಜ್ಞಾನವದೆ ಎಂದು ಒಡಂಬಡಲೇಬೇಕು (ಅಂದರೆ ಹುಟ್ಟಿದ ಪದಾರ್ಥಕ್ಕೇನೇ ಮುಪ್ಪಿರುವುದಲ್ಲದೆ ಬೇರೆ ವಸ್ತುವಿಗಿಲ್ಲ. ಅಂತೆಯೇ ಈ ಪ್ರಪಂಚವು ಹುಟ್ಟುತ್ತಾ ಸಾಯುತ್ತಾ ಇರುವುದನ್ನು ನಾವು ನೋಡುವೆವು. ಹಾಗಾದರೆ ಈ ಇಡೀ

ಪ್ರಪಂಚವನ್ನು ಸೃಷ್ಟಿಮಾಡಿದವನಾರು? ದೇವದತ್ತನೋ ಅಥವಾ ಇನ್ನೊಬ್ಬನೋ ಸೃಷ್ಟಿಮಾಡಿದನೆಂದು ಹೇಳಲು ಬರುವುದಿಲ್ಲ. ಅಲ್ಲದೆ ಎಲ್ಲಾದನ್ನುಂಟುಮಾಡುವ ಶಕ್ತಿಯು ಈಶ್ವರನಿಗಲ್ಲದೆ ಮತ್ತೆ ಯಾರಿಗೂ ಇರುವುದಿಲ್ಲ. ಆದುದರಿಂದ ಇದನ್ನೆಲ್ಲಾ ಉಂಟುಮಾಡಿದ, ಯಾವಾಗಲೂ ಮುಪ್ಪಿಲ್ಲದಿರುವ ಈಶ್ವರನೊಬ್ಬನಿದ್ದಾನೆಂದು ಒಡಂಬಡಬೇಕಾಯಿತು, ಹೀಗೆ ತಿಳಕೊಳ್ಳಬೇಕು. ಹಾಗಾದರೆ ಎಲ್ಲವನ್ನು ಈಶ್ವರನೇ ಸೃಷ್ಟಿಮಾಡಿರುವ ಕಾರಣ ಎಲ್ಲಾದರ ಜ್ಞಾನವೂ ಅವನಿಗುಂಟೆಂದಾಯಿತು. ಆಗ್ಯೆ ಈಶ್ವರನು ಸರ್ವಜ್ಞನೆಂದಾಯಿತು. ಅಂತೂ ಈಶ್ವರನಿಗೇನೇ ಎಲ್ಲವನ್ನುಂಟುಮಾಡುವ ಶಕ್ತಿಯೂ, ಎಲ್ಲಾ ವಸ್ತುಗಳ ಜ್ಞಾನವಿರುವಪ್ರಯುಕ್ತವೂ, ಜೀವರಿಗೆ (ಬ್ರಹ್ಮಾದಿಗಳಿಗೆ) ಅದಿಲ್ಲದಿರುವ ಪ್ರಯುಕ್ತವೂ ಈಶ್ವರನು ಜೀವನಿಂದ ಬೇರೆ ಎಂಬುವುದು ಸಿದ್ಧವಾಗುವುದು. (2) ಆದುದರಿಂದ ಈಶ್ವರನನ್ನು ತಿಳಿಸಿಕೊಡತಕ್ಕ 'ಯಸ್ಸರ್ವಜ್ಞಸ್ಸರ್ವವಿತ್' ಇತ್ಯಾದ್ಯಾಗಮಗಳನ್ನೇ ಕಾರ್ಯತ್ವಾದ್ಯನುಮಾನಗಳು ಉಪಜೀವಿಸಿಕೊಂಡಿವೆಯೆಂದು ಹೇಳಬೇಕು. ಆದರೆ, ಹೀಗೆ ಹೇಳಕೂಡದು. ಏಕೆಂದರೆ — ಕಾರ್ಯತ್ವಾದ್ಯನುಮಾನಗಳಿಂದ 'ಈಶ್ವರನು ಸರ್ವಜ್ಞನು' ಮತ್ತು ಎಲ್ಲವನ್ನುಂಟುಮಾಡಿದವನೆಂದೆಷ್ಟು ಜ್ಞಾನ ಹುಟ್ಟುವುದೋ, 'ಯಸ್ಸರ್ವಜ್ಞಃ' ಇತ್ಯಾದ್ಯಾಗಮಗಳೂ ಈಶ್ವರನು ಸರ್ವಜ್ಞನು ಮತ್ತು ಸರ್ವಕರ್ತನೆಂದಷ್ಟೇ ಜ್ಞಾನವನ್ನು ಹುಟ್ಟಿಸುವುದು. ಆದ ಕಾರಣ ಆಗಮವೂ ಅನುಮಾನತುಲ್ಯವೇ ಆಗಿರುತ್ತದೆ. (3) ಹಿಂದೆ 'ಪ್ರತ್ಯಕ್ಷೇಣ ಚಾಗಮಃ' ಎನ್ನುವುದರಿಂದ ಪ್ರತ್ಯಕ್ಷವು ಆಗಮಸ್ವರೂಪವನ್ನು ಗ್ರಹಿಸುತ್ತದೆಂದುಕ್ತವಾಗಿದೆ. ಅದು ಪ್ರಕೃತಕ್ಕನುಪಯುಕ್ತವು. ಹಾಗಾದರೆ ಅನುಪಯುಕ್ತವಾದುದನ್ನು ಏಕೆ ಹೇಳಿದ್ದೆಂದರೆ, 'ಆಗಮವು ಪ್ರತ್ಯಕ್ಷವನ್ನುಪಜೀವಿಸಿಕೊಂಡಿದೆ' ಎಂದು ಹಿಂದೆ ಹೇಳಿದ್ದಕ್ಕೆ ಇದೇ ಪ್ರಯೋಜನವೆಂದು ಸೂಚಿಸುವುದಕ್ಕಾಗಿ 'ನೇಹ ನಾನಾಸ್ತಿ ಕಿಂಚನ' ಎಂಬೀ ಐಕ್ಯಾಗಮದಿಂದ ತಾನೇ ಮೊದಲಾದ ಭೇದಪ್ರಪಂಚಗಳಿಗೆ ಮಿಥ್ಯಾತ್ವವು ಹೇಳಲ್ಪಡುತ್ತದೆ. 'ನೇಹ ನಾನಾ' ಎನ್ನುವಲ್ಲಿ ಆಗಮಾದಿಗ್ರಾಹಕಗಳಾದ ಪ್ರತ್ಯಕ್ಷಾದಿಗಳು ಉಪಜೀವ್ಯವು. ಆದುದರಿಂದ ಆಗಮದ ಸ್ವರೂಪಸತ್ತಾವನ್ನು ಗ್ರಹಿಸತಕ್ಕ ಶ್ರೋತ್ರಪ್ರತ್ಯಕ್ಷ ವಿರೋಧದಿಂದ ಆ ಆಗಮಕ್ಕೇನೇ ಮಿಥ್ಯಾತ್ವವನ್ನು ಬೋಧಿಸಲು ಸಾಧ್ಯವಿಲ್ಲದಿರುವುದರಿಂದ ತನ್ನಲ್ಲಿಯೇ ಪ್ರಾಮಾಣ್ಯವು ಭಗ್ನವಾಯಿತು. ಆದುದರಿಂದಲೇ ಸ್ವವ್ಯತಿರಿಕ್ತವಾದ ಪ್ರಪಂಚಕ್ಕೆ ಸುತರಾಂ ಮಿಥ್ಯಾತ್ವವನ್ನು ಬೋಧಿಸಲಾರದು ॥ ೯೮ ॥

ಇದರಿಂದಲೂ ಅಭೇದಾಗಮಕ್ಕೆ ಪ್ರಾಮಾಣ್ಯವಿಲ್ಲವೆಂದುಪಪಾದಿಸುತ್ತಾರೆ.

**ಮೂ ॥ ನ ಚಾನುಭವವಿರೋಧೇ ಆಗಮಸ್ಯ ಪ್ರಾಮಾಣ್ಯಂ ॥ ೯೯ ॥**

**ಅ ॥** ಅನುಭವವಿರೋಧೇ = ಸಾಕ್ಷಿಪ್ರತ್ಯಕ್ಷವಿರೋಧವಿರುವಾಗ, ಆಗಮಸ್ಯ=ಐಕ್ಯಾಗಮಕ್ಕೆ, ಪ್ರಾಮಾಣ್ಯಂ=ಪ್ರಮಾಣತ್ವವು, ನ ಚ=ಇಲ್ಲ.

**ತಾ ॥** (1) 'ದ್ವಿವಿಧಂ ಬಲವತ್ವಂ ಚ ಬಹುತ್ವಾಚ್ಚ ಸ್ವಭಾವತಃ । ತಯೋಸ್ಸ್ವಭಾವೋ ಬಲವಾನುಪಜೀವ್ಯಾದಿಕಶ್ಚ ಸಃ ॥' ಎಂದು ಹೇಳಿರುವುದರಿಂದ ಸಾಕ್ಷಿಗೆ ಉಪಜೀವ್ಯತ್ವರೂಪವಾದ ಪ್ರಾಬಲ್ಯವದೆ. ಅದನ್ನಾಶ್ರಯಿಸಿ ಮೊದಲು ಐಕ್ಯಾಗಮಕ್ಕೆ ಸಾಕ್ಷ್ಯನುಭವವಿರೋಧದಿಂದ ಅಪ್ರಾಮಾಣ್ಯವು ಹೇಳೋಣವಾಯಿತು. ಈಗಲಾದರೂ ಸಾಕ್ಷಿಗೆ ಉಪಜೀವ್ಯತ್ವವನ್ನಪೇಕ್ಷಿಸದ ನಿರವಕಾಶತ್ವರೂಪವಾದ ಯಾವುದೊಂದು ಸ್ವಭಾವಪ್ರಾಬಲ್ಯವದೆಯೋ, ಅದನ್ನಾಶ್ರಯಿಸಿ ಐಕ್ಯಾಗಮಕ್ಕೆ ಸಾಕ್ಷ್ಯನುಭವವಿರೋಧವಿರುವುದರಿಂದ ಅಪ್ರಾಮಾಣ್ಯವು ಹೇಳಲ್ಪಡುತ್ತದೆ. ಹೀಗೆ ಭೇದವು. (2) ಸಾಕ್ಷ್ಯನುಭವವಿರೋಧದಿಂದ ಐಕ್ಯಾಗಮಕ್ಕೆ ಅಪ್ರಾಮಾಣ್ಯವು ಹೇಗೆಂದರೆ— ವಿರುದ್ಧಗಳಾದ ಎರಡಕ್ಕೂ ಪ್ರಾಮಾಣ್ಯವಾಗಲೀ ಅಪ್ರಾಮಾಣ್ಯವಾಗಲೀ ಕೂಡಲಾರದು.

ಆದಕಾರಣ ಎರಡರಲ್ಲೊಂದು ಅವಶ್ಯವಾಗಿ ಅಪ್ರಾಮಾಣವಾಗಿದೆಂದಂಗೀಕರಿಸಬೇಕಾಯಿತು. ಐಕ್ಯಾಗಮವಿರೋಧದಿಂದ ಭೇದಜ್ಞಾನವನ್ನು ತಿಳಿಸಿಕೊಡುವ ಸಾಕ್ಷ್ಯನುಭವಕ್ಕೆ ಅಪ್ರಾಮಾಣ್ಯವನ್ನು ಅಂಗೀಕರಿಸುವುದು ಉಚಿತವಲ್ಲ ॥ ೯೯ ॥

ಏಕೆಂದರೆ —

**ಮೂ ॥ ಆಗಮಪ್ರಾಮಾಣ್ಯಾನುಭವಸ್ಯಾಪ್ಯಪ್ರಾಮಾಣ್ಯಪ್ರಾಪ್ತೇಃ ॥ ೧೦೦ ॥**

ಅ ॥ ಆಗಮಪ್ರಾಮಾಣ್ಯಾನುಭವಸ್ಯಾಪಿ = ಐಕ್ಯಾಗಮದ ಪ್ರಾಮಾಣ್ಯಾನುಭವಕ್ಕೂ, ಅಪ್ರಾಮಾಣ್ಯಪ್ರಾಪ್ತೇಃ=ಅಪ್ರಾಮಾಣ್ಯವು ಬರುವುದರಿಂದ.

ತಾ ॥ (1) ಸಾಕ್ಷ್ಯನುಭವವು ಎಲ್ಲಾ ಪ್ರಮಾಣಗಳಿಗೂ ಪ್ರಾಮಾಣ್ಯವನ್ನು ನಿಶ್ಚಯಿಸುವುದು, ವಿಷಯೀಕರಿಸುವುದು. ಅಂತೂ ಸಾಕ್ಷಿಗೆ ಜೀವೇಶ್ವರರ ಭೇದವಿಷಯದಲ್ಲಿ ಅಪ್ರಾಮಾಣ್ಯವನ್ನಂಗೀಕರಿಸಿದರೆ ಅಭೇದಾಗಮದ ಪ್ರಾಮಾಣ್ಯವಿಷಯದಲ್ಲಿಯೂ ಪ್ರಾಮಾಣ್ಯವನ್ನು ನಂಬದೆ ಹೋಗಬೇಕಾಗುವುದು. ಆದಕಾರಣ ಐಕ್ಯಾಗಮಕ್ಕೂ ಪ್ರಾಮಾಣ್ಯವು ಸಿದ್ಧಿಸಲಾರದು. ತನಗೇನೆ ಪ್ರಾಮಾಣ್ಯವು ಸಿದ್ಧವಾಗದಿದ್ದಮೇಲೆ ಅಂತಹುದು ಇತರವಾದ ಸಾಕ್ಷ್ಯನುಭವವನ್ನು ಪ್ರಮಾಣವಲ್ಲವೆಂದು ಮಾಡಲಿಕ್ಕೆ ಸಮರ್ಥವಾಗಲಾರದು. ಆದಕಾರಣ ಪರಿಶೇಷಪ್ರಮಾಣದಿಂದ ಸಾಕ್ಷ್ಯನುಭವಕ್ಕೆ ವಿರೋಧಿಯಾದ ಅಭೇದಾಗಮಕ್ಕೇನೇ ಅಪ್ರಾಮಾಣ್ಯವನ್ನು ಹೇಳಬೇಕು. (2) ಆಗಮಪ್ರಾಮಾಣ್ಯಾನುಭವವೂ ಸಾಕ್ಷಿರೂಪವಾದುದರಿಂದ ಸಾಕ್ಷ್ಯನುಭವವು ಅಪ್ರಮಾಣವಾದರೆ ಆಗಮಪ್ರಾಮಾಣ್ಯಾನುಭವವೂ ಅಪ್ರಮಾಣವಾಗಬೇಕಾಯಿತು. ಎಂದಾಪಾದಿಸಿದ್ದು ಅಯುಕ್ತವೆಂದರೆ, ಜೀವೇಶ್ವರರಿಗೆ ಭೇದವನ್ನು ವಿಷಯೀಕರಿಸತಕ್ಕದು ಆಗಮಕ್ಕೆ ಪ್ರಾಮಾಣ್ಯವನ್ನು ವಿಷಯೀಕರಿಸತಕ್ಕದು ಎಂಬೀ ವಿಷಯಗಳ ಭೇದದಿಂದಲೇ ಭೇದೋಪಚಾರವು. (ಭೇದವನ್ನು ಹೇಳಿದ್ದಾಗಿರುತ್ತದೆ.) (3) ಇದರಿಂದ (ಸಾಕ್ಷ್ಯನುಭವವಿರೋಧದಿಂದ ಐಕ್ಯಾಗಮಕ್ಕೆ ಅಪ್ರಾಮಾಣ್ಯವನ್ನು ಹೇಳಿದ್ದರಿಂದ) ವಿಷಯಾವ್ಯಭಿಚರಿತತ್ವನಿಯಮವು ಸಾಕ್ಷ್ಯನುಭವದ ಪ್ರಾಬಲ್ಯಕ್ಕೆ ಕಾರಣವು ಎಂದುಕ್ತವಾಯಿತು. ಹೀಗೆಯೇ ಉಪಜೀವ್ಯತ್ವ, ನಿರವಕಾಶತ್ವರೂಪವಾದ ಸ್ವಭಾವತಃ ಬಲವತ್ತಾದ ಪ್ರಮಾಣದಿಂದ ಬಾಧಿಸಲ್ಪಟ್ಟಪ್ರಯುಕ್ತ ಐಕ್ಯಾಗಮಕ್ಕೆ ಅಪ್ರಾಮಾಣ್ಯವೆಂದುಕ್ತವಾಯಿತು. ಮತ್ತು ಬಹುತ್ವರೂಪಬಲವುಳ್ಳ ಇದೇ ಭೇದಗ್ರಾಹಕಗಳಾದ ಪ್ರತ್ಯಕ್ಷ ಅನುಮಾನ ಆಗಮಗಳಿಂದ ಬಾಧಿತವಾದ ಪ್ರಯುಕ್ತವೂ ಐಕ್ಯಾಗಮವು ಅಪ್ರಮಾಣವು ॥ ೧೦೦ ॥

ಬಹಳ ಪ್ರಮಾಣಗಳಿಗೆ (1) ಒಂದೇ ವಿಷಯವೋ? (2) ಬೇರೆ ಬೇರೆ ವಿಷಯಗಳೋ? (೧) ಒಂದೇ ವಿಷಯವಾದರೆ ಒಂದನೇ ಪ್ರಮಾಣದಿಂದ ತಿಳಿಯಲ್ಪಟ್ಟ ಅರ್ಥವನ್ನೇ ತಿಳಿಸಿಕೊಡುವ ಎರಡನೇ ಪ್ರಮಾಣ ಮೊದಲಾದವುಗಳಿಗೆ ವೈಯರ್ಥ್ಯರೂಪವಾದ ಅನುವಾದಕತ್ವದಿಂದ ಅಪ್ರಾಮಾಣ್ಯವು. (೨) ಬೇರೆ ಬೇರೆ ವಿಷಯವಾದರೆ ತಮ್ಮ ತಮ್ಮ ವಿಷಯದಲ್ಲಿ ಆ ಪ್ರಮಾಣಗಳು ಒಂದೊಂದೇ ಆದುದರಿಂದ ಅವುಗಳಿಗೆ ಬಹುತ್ವವು ಬರಲಿಲ್ಲ. ಆದ ಕಾರಣ ಬಹುಪ್ರಮಾಣಗಳಿಂದ ಬಾಧಿತವಾಗಿದೆ ಎನ್ನುವುದು, ಹೇಗೆ ಸಂಗತವಾಗುವುದು? ಪ್ರಮಾಣಗಳು ಬಹಳಗಳಾಗಿ ಒಂದನ್ನೇ ವಿಷಯೀಕರಿಸುವುದಾದರೆ 'ಬೇರೆ ಯಾವುದರಿಂದಲೂ ತಿಳಿಯದಿರುವ ಅರ್ಥವನ್ನು ತಿಳಿಸಿಕೊಡೋಣ' ಎನ್ನುವ ಪ್ರಾಮಾಣ್ಯವಿಲ್ಲವು. ಇತರರಿಂದ ತಿಳಿಸಲ್ಪಡದಿರುವ ಅರ್ಥವನ್ನು ತಿಳಿಸಿಕೊಡುವಿಕೆ ಎಂಬ ಪ್ರಾಮಾಣ್ಯವನ್ನು ಒಪ್ಪಿದರೆ ತಂತಮ್ಮ ವಿಷಯದಲ್ಲಿ ಪ್ರಮಾಣಗಳು ಒಂದೊಂದೇ ಆದುದರಿಂದ ಬಹುತ್ವವು ಬರಲಿಲ್ಲ ಎಂದಾಶಂಕಿಸಿದರೆ—

ಮೂ || ಬಹುಪ್ರಮಾಣಸಂವಾದಶ್ಚ ದಾರ್ಢ್ಯಹೇತುರೇವ || ೧೦೧ ||

ಅ || ಬಹುಪ್ರಮಾಣ ಸಂವಾದಶ್ಚ=ಅನೇಕ ಪ್ರಮಾಣಗಳ ಸಂವಾದವು, ದಾರ್ಢ್ಯ ಹೇತುರೇವ=ದಾರ್ಢ್ಯಕ್ಕೆ ಕಾರಣವೇ ಆಗಿರುತ್ತದೆ.

ತಾ || (1) ಸಮಾನವಿಷಯಕವಾದ ಜ್ಞಾನಾಂತರವು ಸಂವಾದವು. 'ಸಂವಾದ'ವೆಂದು ಪದವನ್ನು ತೆಗೆದು ಕೊಂಡದ್ದರಿಂದ ಒಂದೇ ವಿಷಯವು ಎನ್ನುವ ಪಕ್ಷವನ್ನು ಅಂಗೀಕರಿಸಿದರು. (2) 'ದಾರ್ಢ್ಯಹೇತುರೇವ' ಎನ್ನುವುದರಿಂದ ಪ್ರಯೋಜನವನ್ನು ಹೇಳಿದಪ್ರಯುಕ್ತ ತಿಳಿದ ಅರ್ಥ ವನ್ನೇ ತಿಳಿಸಿ ಕೊಡುವುದರಿಂದ ವೈಯರ್ಥ್ಯರೂಪವಾದ ಅನುವಾದಕತ್ವವನ್ನು ನಿರಾಕರಿಸಿದರು. (3) ಯದ್ಯಪಿ ಭೇದವಿಷಯಕಗಳಾದ ಪ್ರಮಾಣಗಳೆಲ್ಲವೂ ಏಕಾಕಾರಗಳಾಗಿವೆ. (ಅಂದರೆ ಪ್ರಥಮ ಪ್ರಮಾಣದಂತೆ ದ್ವಿತೀಯಾದಿಪ್ರಮಾಣಗಳೂ ನಿಸ್ಸಂಶಯ ಪ್ರತೀತಿಗೆ ಕಾರಣಗಳು, ಪ್ರಥಮ ಪ್ರಮಾಣದಿಂದ ತಿಳಿಯದೆ ಇದ್ದದ್ದನ್ನು ತಿಳಿಸಿಕೊಡುವುದಿಲ್ಲ.) ಆದಾಗ್ಯೂ ಪ್ರಥಮ ಪ್ರಮಾಣ ದಿಂದ ಭೇದವು ತಿಳಿಯಲ್ಪಡುತ್ತಿರಲು ವಿವಾದ ಮೊದಲಾದ ಕಾರಣಾಂತರಗಳಿಂದ ಪುನಃ ಸಂಶಯವು ಬರುತ್ತಿರಲು ಆ ಭೇದವಿಷಯದಲ್ಲಿಯೇ ಪ್ರವೃತ್ತವಾದ ಬೇರೆ ಪ್ರಮಾಣದಿಂದ ಸಂಶಯರಹಿತವಾದ ಪ್ರತೀತಿಯು ಹುಟ್ಟುತ್ತದೆ || ೧೦೧ ||

ಹಾಗಾದರೆ ದ್ವಿತೀಯಾದಿ ಪ್ರಮಾಣಗಳೂ ಪ್ರಥಮ ಪ್ರಮಾಣಕ್ಕೆ ಸಮಾನಗಳೇ ಆಗಿವೆ. ಆದಕಾರಣ ಪ್ರಥಮ ಪ್ರವೃತ್ತಿಯಲ್ಲಿ ಸಂಶಯವೂ ದ್ವಿತೀಯಾದಿ ಪ್ರವೃತ್ತಿಯಲ್ಲಿ ಸಂಶಯವಿಲ್ಲ ವೆನ್ನುವುದೂ ಹೇಗೆ ಸಂಗತವಾಗುವುದೆಂದು ಹೇಳಕೂಡದು. ಸಹಕಾರಿಯಿಂದ ವಸ್ತುಗಳಲ್ಲಿ ಸಾಮರ್ಥ್ಯಾತಿಶಯವುಂಟಾ ಎವುದು ಅನುಭವಸಿದ್ಧವಾಗಿದೆ ಎನ್ನುತ್ತಾರೆ.

ಮೂ || ಬಹೂನಾಂ ವಚನೇ ತಸ್ಯೈವ ದರ್ಶನೇ ದಾರ್ಢ್ಯಸ್ಯೈವ ದೃಷ್ಟೇಃ || ೧೦೨ ||

ಅ || ಬಹೂನಾಂ = ಅನೇಕಜನರ, ವಚನೇ = ವಾಕ್ಯವು, (ಕೇಳಲ್ಪಡುತ್ತಿರಲು) ತಸ್ಯೈವ=ಆ ವಸ್ತುವಿಗೇನೇ, ದರ್ಶನೇ=ಪ್ರತ್ಯಕ್ಷವಾಗಿ ದರ್ಶನವಾಗುತ್ತಿರಲು, ದಾರ್ಢ್ಯಸ್ಯೈವ= ದೃಢತ್ವಕ್ಕೇನೇ, ದೃಷ್ಟೇಃ=ದರ್ಶನವಿದ್ದಪ್ರಯುಕ್ತ.

ತಾ || (1) ಪರ್ವತವು ಬೆಂಕಿಯುಳ್ಳದ್ದೆಂದು ಒಬ್ಬನ ಮಾತನ್ನು ಕೇಳಿದಮೇಲೆ ಅವನ ಅಜ್ಞಾನಾದಿಗಳ ಸಂಶಯದಿಂದ ವಸ್ತುವಿನಲ್ಲಿ ವಿಶ್ವಾಸವು ಹುಟ್ಟದಿದ್ದರೆ ಎರಡನೆಯವನ ಮಾತನ್ನು ಕೇಳುತ್ತಾನೆ. ಅದರಲ್ಲಿಯೂ ಕಾರಣಾಂತರದಿಂದ ಸಂಶಯವು ಹುಟ್ಟದರೆ ಮೂರನೆಯವನ ಹತ್ತಿರ ಕೇಳುವನು. ಹೀಗೆ ಅನೇಕಮಂದಿಯರ ಮಾತನ್ನು ಕೇಳಿ ಪರ್ವತಸಮೀಪಕ್ಕೆ ಹೋದವ ನಿಗೆ ಮೂವರು ಪ್ರತಿಪಾದಿಸಿದ ಅಗ್ನಿಯೇ ಪ್ರತ್ಯಕ್ಷವಾಗುತ್ತಿರಲು ಅದರಲ್ಲಿ ವಿಶ್ವಾಸವೇ ಹುಟ್ಟು ತ್ತದೆ. ಎರಡನೆ, ಮೂರನೆಯವರ ಮಾತುಗಳಲ್ಲಿ ಅಪ್ರಾಮಾಣ್ಯ ಬುದ್ಧಿಯು ಹುಟ್ಟುವುದಿಲ್ಲ. (2) 'ಬಹೂನಾಂ ವಚನೇ' ಎನ್ನುವ ಮೂಲದಿಂದ ದೃಷ್ಟಾಂತದಲ್ಲಿ ಪರೋಕ್ಷತ್ವ, ಅಪರೋಕ್ಷತ್ವ ರೂಪ ವಿಶೇಷವನ್ನು ಹೇಳಿದ್ದರಿಂದ ಅಪೌರುಷೇಯತ್ವ, ಪೌರುಷೇಯತ್ವರೂಪ ಬೇರೆ ವಿಶೇಷವೂ ಸೂಚಿಸಲ್ಪಟ್ಟಿತು. ಅವುಗಳಲ್ಲಿ ಭೇದವನ್ನು ಗ್ರಹಿಸುವ ಪ್ರತ್ಯಕ್ಷ ಅನುಮಾನ ಆಗಮಗಳಲ್ಲಿ ಪ್ರತ್ಯಕ್ಷ ಅನುಮಾನಗಳಿಗೆ ಪೌರುಷೇಯತ್ವವೂ, ಆಗಮಕ್ಕೆ ಅಪೌರುಷೇಯತ್ವವೂ ಇಂತಹ ವಿಶೇಷವು ಸೂಚಿಸಲ್ಪಟ್ಟಿತು || ೧೦೨ ||

ಹೀಗೆ ದ್ವಿತೀಯಾದಿ ಪ್ರಮಾಣವು 'ನಿಶ್ಚಯವನ್ನು ಹುಟ್ಟಿಸುವಿಕೆ' ಎನ್ನುವ ಪ್ರಯೋಜನವುಳ್ಳದ್ದಾದುದರಿಂದ ಅನುವಾದಕವಲ್ಲವೆಂದಾದರೆ ಎಲ್ಲಾ ಸ್ಥಳಗಳಲ್ಲಿಯೂ ದಾರ್ಢ್ಯವು ಹುಟ್ಟುತ್ತದೆ ಎಂದು ಹೇಳಲು ಶಕ್ಯವಾಗುವುದರಿಂದ ಎಲ್ಲಿಯೂ ಅನುವಾದಕತ್ವವೇ ಕೂಡದೆ ಹೋಗಬೇಕಾಗುವುದು. ಅಂತೂ ಸಿದ್ಧಸಾಧನಾದಿಗಳು ದೂಷಣವಾಗದೆ ಹೋಗಬೇಕಾಗುವುದು. ಸಿದ್ಧಸಾಧನವು ಅನುವಾದಕವಾಗುವುದರಿಂದ ದೂಷಣವಾಗುವುದಾದರೆ ಪ್ರಕೃತ ಭೇದಾಗಮವೂ ಅನುವಾದಕವಾದುದರಿಂದ ದುಷ್ಟವಾಗಬೇಕಾಯಿತೆಂದರೆ —

**ಮೂ ॥ ಸರ್ವಾವಿವಾದಸ್ಥಲ ಏವ ಕಥಂಚಿದನುವಾದಕತ್ವಂ ॥ ೧೦೩ ॥**

ಅ ॥ ಸರ್ವಾವಿವಾದಸ್ಥಲ ಏವ = ಸರ್ವರಿಗೂ ವಿವಾದವಿಲ್ಲದಿರುವ ಸ್ಥಳದಲ್ಲಿಯೇ, ಕಥಂಚಿತ್=ಪ್ರಯಾಸದಿಂದ, ಅನುವಾದಕತ್ವಂ=ಅನುವಾದಕತ್ವವು.

ತಾ ॥ (1) ಅವಿವಾದ ಎನ್ನುವ ಪದದಿಂದ ಸಂಶಯಕಾರಣವಿಲ್ಲವೆಂದು ಲಕ್ಷಿಸತಕ್ಕದು. (2) 'ಕಥಂಚಿತ್' ಎನ್ನುವುದರಿಂದ ಸಂಶಯವಿಲ್ಲದೆ ಪ್ರಮಿತವಾದ ಅರ್ಥದಲ್ಲಿ ಪುನಃ ಪ್ರಯೋಗಿಸಲ್ಪಡತಕ್ಕ ಪರಾರ್ಥಾನುಮಾನಕ್ಕಾಗಲೀ ವಾಕ್ಯಕ್ಕಾಗಲೀ ವೈಯರ್ಥ್ಯರೂಪವಾದ ದೋಷವು ಬರಬಹುದು. ಸ್ವಾರ್ಥಾನುಮಾನ ಪ್ರತ್ಯಕ್ಷಗಳು ಪುರುಷಾನಧೀನಗಳಾದುದರಿಂದ ಅವುಗಳಿಗೆ ವೈಯರ್ಥ್ಯದೋಷವಿಲ್ಲವು, ಎಂದುಕ್ತವಾಯಿತು ॥ ೧೦೩ ॥

ಅದರಿಂದ ಪ್ರಕೃತಕ್ಕೆ ಏನಾಯಿತೆಂದಾಶಂಕಿಸಿದರೆ —

**ಮೂ ॥ ನ ಚಾತ್ರ ಸರ್ವಾವಿವಾದಃ ॥ ಏಕತ್ವವಾದಿನಾಮೇವ ವಿವಾದ ದರ್ಶನಾತ್ ॥ ೧೦೪ ॥**

ಅ ॥ ಅತ್ರ=ಜೀವೇಶ್ವರರ ಭೇದವಿಷಯದಲ್ಲಿ, ಸರ್ವಾವಿವಾದಃ=ಸರ್ವರಿಗೂ ವಿವಾದವಿಲ್ಲವೆನ್ನುವುದು, ನ ಚ=ಇಲ್ಲವು. (ಆದಕಾರಣ ಯಾವುದರಿಂದ ದ್ವಿತೀಯಾದಿ ಪ್ರಮಾಣಗಳಿಗೆ ವೈಯರ್ಥ್ಯವು ಬರುವುದು) (ಸರ್ವಾವಿವಾದವು ಏಕೆ ಇಲ್ಲವೆಂದಾಶಂಕಿಸಿದರೆ—) ಏಕತ್ವವಾದಿನಾಮೇನ=ಏಕತ್ವವಾದಿಗಳಿಗೇನೇ, ವಿವಾದದರ್ಶನಾತ್=ವಿವಾದವು ತೋರುವುದರಿಂದ,

ತಾ ॥ (1) 'ಏವ' ಶಬ್ದದಿಂದ ವಿವಾದವು ಸುಪ್ರಸಿದ್ಧವು ಎನ್ನುವುದನ್ನು ತೋರಿಸಿದರು. (2) 'ಶೌದ್ಧೋದನಿಪ್ರಭೃತಯಸ್ಸಂಪ್ರದಾಯಪ್ರವರ್ತಕಾಃ' ಎನ್ನುವ ವಾಕ್ಯದಿಂದ ಏಕತ್ವಾದಿವಾದಗಳು (ಜೀವೇಶ್ವರರಿಗೆ ಐಕ್ಯವನ್ನು ಹೇಳುವ ವಾದವೇ ಮೊದಲಾದ ವಾದಗಳು) ಪ್ರವಾಹತಃ ಅನಾದಿಗಳಾಗಿವೆ. (3) ಬಹುಪ್ರಮಾಣಗಳು ಏಕವಿಷಯಕಗಳಾಗಿವೆ ಎಂದಂಗೀಕರಿಸಿ ಅವುಗಳು ದಾರ್ಢ್ಯಕ್ಕೇನೇ ಕಾರಣಗಳಾಗಿವೆ, ಆದಕಾರಣ ವೈಯರ್ಥ್ಯವಿಲ್ಲವೆಂದು ಸಮರ್ಥಿಸಿದರಿಂದ ಬಹುತ್ವಕ್ಕೂ ಪ್ರಮಾಣತ್ವಕ್ಕೂ ಸಮಾವೇಶವು(ಅಂದರೆ ಒಂದರಲ್ಲಿ ಬಾಹುಳ್ಯವೂ ಪ್ರಾಮಾಣ್ಯವೂ ಇರಬಹುದೆಂದು) ಸಮರ್ಥಿಸಲ್ಪಟ್ಟಿತು ॥ ೧೦೪ ॥

ಆದರೂ ಬಹುಪ್ರಮಾಣಗಳಿಂದ ವಿರೋಧಬರುವಪ್ರಯುಕ್ತ ಐಕ್ಯಾಗಮಕ್ಕೆಅಪ್ರಾಮಾಣ್ಯವು ಹೇಗೆ? ಪ್ರಾಬಲ್ಯವು ನಿಶ್ಚಿತವಾಗದಿರುವಕಾರಣ ಐಕ್ಯಾಗಮದ ವಿರೋಧದಿಂದ ಅಪ್ರಾಮಾಣ್ಯವು ಸಂಭವಿಸಬಹುದು ಎಂದಾಶಂಕಿಸಿದರೆ —

**ಮೂ ॥ ಬಹುಪ್ರಮಾಣವಿರೋಧೇ ಚೈಕಸ್ಯಾಪ್ರಾಮಾಣ್ಯಂ ದೃಷ್ಟಂ ಶುಕ್ತಿರಜತಾದೌ ॥ ೧೦೫ ॥**

ಅ ॥ ಬಹುಪ್ರಮಾಣವಿರೋಧೇ ಚ=ಬಹುಪ್ರಮಾಣಗಳಿಂದ ವಿರೋಧವಿದ್ದರೆ, ಏಕಸ್ಯ= ಒಂದು ಜ್ಞಾನಕ್ಕೆ, ಅಪ್ರಾಮಾಣ್ಯಂ=ಅಯಾಥಾರ್ಥ್ಯವು, ಶುಕ್ತಿರಜತಾದೌ=ಶುಕ್ತಿರಜತವೊದಲಾದುವುಗಳಲ್ಲಿ, ದೃಷ್ಟಂ=ಕಾಣಲ್ಪಟ್ಟದೆ.

ಕಾ ॥ (1) ಮುತ್ತಿನ ಚಿಪ್ಪನ್ನು ಬೆಳ್ಳಿಯೆಂದು ದೂರದಿಂದ ತಿಳಿದವನು 'ಇದು ಬೆಳ್ಳಿಯಲ್ಲ, ಮುತ್ತಿನ ಚಿಪ್ಪೆ' ಎಂಬೀ ಆಪ್ತನ ಮಾತನ್ನು ಕೇಳುತ್ತಾನೆ. ಆಮೇಲೆ ಸಮೀಪಕ್ಕೆ ಹೋಗಿ ಪ್ರತ್ಯಕ್ಷವಾಗಿಯೂ 'ಮುತ್ತಿನ ಚಿಪ್ಪೇ' ಎಂದು ನೋಡುತ್ತಾನೆ. ದಾಹನಾದಿಲಿಂಗಗಳಿಂದ ('ಇಯಂ ಶುಕ್ತಿಃ ದಾಹಭೇದಾದಿಮತ್ತ್ವಾತ್' ಇದು ಮುತ್ತಿನ ಚಿಪ್ಪು, ದಾಹಭೇದನಾದಿಗಳು ಸಂಭವಿಸುವ ಪ್ರಯುಕ್ತ) ಹಾಗೆಯೇ ಅನುಮೇಯಿಸುತ್ತಾನೆ. ಆದಕಾರಣ ಬಹುಪ್ರಮಾಣಗಳ ವಿರೋಧದಿಂದ ಇದು ಬೆಳ್ಳಿಯೆಂಬ ಒಂದು ಜ್ಞಾನವು ಅಪ್ರಮಾಣವೆಂದೇ ನಿಶ್ಚಯಿಸುತ್ತಾನೆ, ಎಂದು ಪ್ರಸಿದ್ಧವಾಗಿದೆ. ಅನೇಕಪ್ರಮಾಣಗಳಿಂದ ಒಂದು ಪ್ರಮಾಣವು ದುರ್ಬಲವಾಗಿದೆ. (2) ಐಕ್ಯವಾಕ್ಯಂ=ಐಕ್ಯವಾಕ್ಯದಿಂದುಂಟಾದ ವಿಜ್ಞಾನವು, ಅಪ್ರಮಾಣಂ=ಪ್ರಮಾಣವಲ್ಲ. ಬಹುಪ್ರಮಾಣವಿರುದ್ಧತ್ವಾತ್ = ಬಹುಪ್ರಮಾಣಗಳಿಂದ ವಿರುದ್ಧವಾದ ಪ್ರಯುಕ್ತ, ಶುಕ್ತಿರಜತಜ್ಞಾನವತ್=ಶುಕ್ತಿರಜತಜ್ಞಾನನಂತೆ, ಎಂದು ಹೇಳಿದಹಾಗೆ ಆಯಿತು ॥ ೧೦೫ ॥

ಹಿಂದಿನ ಅನುಮಾನದಲ್ಲಿ ದೋಷಜನ್ಯತ್ವರೂಪವಾದ ಉಪಾಧಿಯನ್ನಾಶಂಕಿಸುತ್ತಾರೆ. ಮುತ್ತಿನ ಚಿಪ್ಪನ್ನು ನೋಡಿ ಇದು ಬೆಳ್ಳಿಯೆಂಬ ಜ್ಞಾನವು ದೋಷಜನ್ಯವಾದ ಪ್ರಯುಕ್ತವೇ ದುರ್ಬಲವೂ ಅಪ್ರಮಾಣವೂ ಆಗಿರುತ್ತದೆ. ಬಹು ಪ್ರಮಾಣಗಳಿಂದ ವಿರುದ್ಧವಾದ ಪ್ರಯುಕ್ತವಲ್ಲ. ಯಾವ್ಯಾವುದು ಅಪ್ರಮಾಣವೋ ಅದು ಅದು ದೋಷದಿಂದ ಹುಟ್ಟಿದ್ದು, ಹೀಗೆ ಪಕ್ಷದಲ್ಲಿ ಸಾಧ್ಯವ್ಯಾಪಕತ್ವವಿದೆ. ಪಕ್ಷದಲ್ಲಿ (ಐಕ್ಯವಾಕ್ಯದಲ್ಲಿ) ಬಹುತರ ಪ್ರಮಾಣವಿರುದ್ಧತ್ವರೂಪವಾದ ಹೇತುವಿದೆ. ಅಪೌರುಷೇಯವಾದುದರಿಂದ ದೋಷಸಂಶಯವೇ ಇಲ್ಲದಿದ್ದಪ್ರಯುಕ್ತ ದೋಷಜನ್ಯತ್ವವಿಲ್ಲ. ಹೀಗೆ ಸಾಧನಾವ್ಯಾಪಕತ್ವವು, ಎಂದಾಶಂಕಿಸಿದರೆ —

ಮೂ ॥ ನ ಚ ದೋಷಜನ್ಯತ್ವಾದೇವ ದುರ್ಬಲತ್ವಮಿತಿ ವಿರೋಧಃ ॥
ಬಹುಪ್ರಮಾಣವಿರುದ್ಧಾನಾಂ ದೋಷಜನ್ಯತ್ವನಿಯಮಾತ್ ॥
ದೋಷಜನ್ಯತ್ವಂ ಚ ಬಲವತ್ಪ್ರಮಾಣ ವಿರೋಧಾದೇವ ಜ್ಞಾಯತೇ
॥ ೧೦೬ ॥

ಅ ॥ ದೋಷಜನ್ಯತ್ವಾದೇವ=ದೋಷದಿಂದ ಹುಟ್ಟಿರುವುದರಿಂದಲೇ, ದುರ್ಬಲತ್ವಂ= ದೌರ್ಬಲ್ಯವು, ಇತಿ=ಹೀಗೆ, ವಿರೋಧಃ=ಅನುಮಾನಕ್ಕೆ ಸೋಪಾಧಿಕತ್ವರೂಪವಾದ ದೋಷವು, ನ ಚ=ಇಲ್ಲವು. (ಏಕೆಂದರೆ) ಬಹುಪ್ರಮಾಣವಿರುದ್ಧಾನಾಂ=ಅನೇಕ ಪ್ರಮಾಣಗಳಿಂದ ವಿರುದ್ಧಗಳಾದವುಗಳಿಗೆ, ದೋಷಜನ್ಯತ್ವನಿಯಮಾತ್ = ದೋಷಜನ್ಯತ್ವವು ನಿಯತವಾದುದರಿಂದ, (ಬಹುವಚನದಿಂದ 'ಯತ್ ಬಹುಪ್ರಮಾಣ ವಿರುದ್ಧಂ ತದ್ದೋಷಜನ್ಯಂ' ಎಂಬೀ ವ್ಯಾಪ್ತಿಯನ್ನೇ ಪ್ರಕಟೀಕರಿಸಿದರು. ಅಂತೂ ಸಾಧನವ್ಯಾಪಕತ್ವವೇ ಆದೆ. ಇಲ್ಲಿ ಪಕ್ಷವಾದ ಐಕ್ಯವಾಕ್ಯದಿಂದ ಹುಟ್ಟಿದ ಜ್ಞಾನವು ಉಪಕ್ರಮೋಪಸಂಹಾರರೂಪ ಪರಾಮರ್ಶವಿಲ್ಲದಿರುವಿಕೆ ಇತ್ಯಾದಿ ರೂಪಗಳಾದ ದೋಷಗಳಿಂದ ಹುಟ್ಟಿದ್ದು. ಆದಕಾರಣ ದೋಷಜನ್ಯತ್ವವು ಸಂಭವಿಸುತ್ತದೆ. ಹೀಗೆ ಸಾಧನವ್ಯಾಪಕತ್ವವಿದೆ ಎನ್ನುವುದನ್ನು ಅವಶ್ಯವಾಗಿ ಪರರೂ ಅಂಗೀಕರಿಸಲೇಬೇಕು ಎಂದು ನಿರೂಪಿಸುತ್ತಾರೆ.) ದೋಷಜನ್ಯತ್ವಂ ಚ = ದೋಷಗಳಿಂದ ಹುಟ್ಟಿದ್ದೆನ್ನುವುದಾದರೂ, ಬಲವತ್ಪ್ರಮಾಣ

ವಿರೋಧಾದೇವ = ಪ್ರಬಲವಾದ ಪ್ರಮಾಣದಿಂದ ವಿರುದ್ಧವಾದಪ್ರಯುಕ್ತವೇ, ಜ್ಞಾಯತೇ= ತಿಳಿಯಲ್ಪಡುತ್ತದೆ.

ತಾ || (1) ಉಪಾಧಿಗೆ ಸಾಧ್ಯವ್ಯಾಪಕತ್ವವು ಸಿದ್ಧಿಯಾಗುವುದಕ್ಕಾಗಿ ಶುಕ್ತಿರಜತ ಜ್ಞಾನವು ದೋಷಜನ್ಯವೆಂದು ಪರರೂ ಅವಶ್ಯವಾಗಿ ಅಂಗೀಕರಿಸಬೇಕು. ಅದು ಯಾವುದರಿಂದ ತಿಳಿಯುತ್ತದೆ ಎಂದರೆ ಪ್ರತ್ಯಕ್ಷಪ್ರಮಾಣದಿಂದಲ್ಲ. ಜನ್ಯಜನಕಭಾವವು ಕಾಲಾದಿಘಟಿತವಾದುದ ರಿಂದ ಅತೀಂದ್ರಿಯವಾಗಿದೆ. (2) ಶುಕ್ತಿರಜತಾದಿ ಜ್ಞಾನವು ದೋಷವಿದ್ದರೆ ಹುಟ್ಟುತ್ತದೆ. ದೋಷ ವಿಲ್ಲದಿದ್ದರೆ ಹುಟ್ಟುವುದಿಲ್ಲ ಎಂಬೀ ಅನ್ವಯವ್ಯತಿರೇಕಗಳಿಂದ ಶುಕ್ತಿರಜತಜ್ಞಾನವು ದೋಷಜನ್ಯ ವೆಂದನುಮೇಯಿಸಬೇಕೆಂದೂ ಕೂಡುವುದಿಲ್ಲ. ಇಂದ್ರಿಯಗಳು ಅತೀಂದ್ರಿಯಗಳಾದುದರಿಂದ ಅವುಗಳನ್ನಾಶ್ರಯಿಸಿರುವ ದೋಷಗಳೂ ಅತೀಂದ್ರಿಯಗಳಾಗಿವೆ. (3) 'ಶುಕ್ತಿರಜತಾದಿಜ್ಞಾನಂ ದೋಷಜನ್ಯಂ ಅಪ್ರಮಾಣತ್ವಾತ್' ಶುಕ್ತಿರಜತಾದಿಗಳ ಜ್ಞಾನವು ದೋಷಗಳಿಂದ ಹುಟ್ಟಿರುವುದು, ಅಪ್ರಮಾಣವಾದುದರಿಂದ ಎಂಬೀ ಅನುಮಾನದಿಂದಲೂ ದೋಷಜನ್ಯತ್ವವನ್ನು ಅನುಮೇಯಿಸ ಲಿಕ್ಕೆ ಆಗುವುದಿಲ್ಲ. ಶುಕ್ತಿರಜತಾದಿಗಳ ಜ್ಞಾನವು ಅಪ್ರಮಾಣವು ಎಂಬೀ ಜ್ಞಾನದಲ್ಲಿಯೂ ಉಪಾಯವಿಲ್ಲವು. (4) ಶುಕ್ತಿರಜತಾದಿಜ್ಞಾನವು ದೋಷಜನ್ಯವು ಎಂಬೀ ವಿಷಯದಲ್ಲಿ ಆಗಮವು ವಿಲ್ಲವು. ಆದಕಾರಣ ಪ್ರಬಲ ಪ್ರಮಾಣಗಳಿಂದ ವಿರುದ್ಧಗಳಾದಪ್ರಯುಕ್ತವೇ ದೋಷಜನ್ಯತ್ವ ವನ್ನು ಅನುಮೇಯಿಸಬೇಕು. ಆದಕಾರಣ ಯಾವುದು ಪ್ರಬಲಪ್ರಮಾಣವಿರುದ್ಧವೋ ಅದು ದೋಷಜನ್ಯವು ಎಂಬೀ ವ್ಯಾಪ್ತಿಯನ್ನು ಅಂಗೀಕರಿಸಬೇಕು. ಅಂತೂ ಸಾಧನವ್ಯಾಪಕವಾದುದ ರಿಂದ ಇದು ಉಪಾಧಿಯಾಗಲಾರದು. (5) ಬಾಧಕಪ್ರಮಾಣಕ್ಕೆ ಪ್ರಾಬಲ್ಯವನ್ನು ಉಪಜೀವ್ಯತ್ವ ನಿರವಕಾಶತ್ವಗಳಿಂದ ಇಟ್ಟುಕೊಂಡಂತೆಯೇ ಬಾಹುಲ್ಯದಿಂದಲೂ ಅಂಗೀಕರಿಸಲೇಬೇಕು. ಏಕೆಂದರೆ — ಎಲ್ಲಾಕಡೆಗಳಲ್ಲಿ ಉಪಜೀವ್ಯತ್ವ ನಿರವಕಾಶತ್ವಗಳು ಇರುವುದಿಲ್ಲ. ಆದಪ್ರಯುಕ್ತ ಬಹುಪ್ರಮಾಣವಿರುದ್ಧತ್ವಕ್ಕೆ ದೋಷಜನ್ಯತ್ವದಿಂದ ವ್ಯಾಪ್ತಿಯನ್ನು ಸರ್ವಥಾ ಸ್ವೀಕರಿಸಬೇಕಾದು ದರಿಂದ ಸಾಧನವ್ಯಾಪಕವೇ ಆಗುವುದು. ಅಂತೂ 'ಐಕ್ಯವಾಕ್ಯಜನಿತಂ ವಿಜ್ಞಾನಂ, ಅಪ್ರಮಾಣಂ, ಬಹುಪ್ರಮಾಣವಿರುದ್ಧತ್ವಾತ್ ಶುಕ್ತಿರಜತಜ್ಞಾನವತ್' ಎಂಬೀ ಅನುಮಾನದಲ್ಲಿ ದೋಷಜನ್ಯತ್ವವು ಉಪಾಧಿಯಾಗಲಾರದು || ೧೦೬ ||

ಇಷ್ಟರವರೆಗೆ ಹೇಳಿದ ಪ್ರಮೇಯಗಳು ಯುಕ್ತಿಸಿದ್ಧಗಳಾದಾಗ್ಯೂ ಬ್ರಹ್ಮತರ್ಕದ ಸಮ್ಮತಿ ಯಿಂದ ಅವುಗಳನ್ನು ದೃಢೀಕರಿಸುವುದಕ್ಕಾಗಿ ಆ ವಾಕ್ಯಗಳನ್ನು ಪ್ರತಿಪಾದಿಸುತ್ತಾರೆ —

**ಮೂ || ಅದುಷ್ಟಮಿಂದ್ರಿಯಂ ತ್ವಕ್ಷಂ ತರ್ಕೋಽದುಷ್ಟಸ್ತಥಾಽನುಮಾ ||**
**ಆಗಮೋಽದುಷ್ಟವಾಕ್ಯಂ ಚ ಸ್ವದೃಕ್ಚಾನುಭವಃ ಸ್ಮೃತಃ || ೧೦೭ ||**

ಅ || ಅದುಷ್ಟಂ = ದೋಷರಹಿತವಾದ, ಇಂದ್ರಿಯಂ ತು = ಜ್ಞಾನೇಂದ್ರಿಯವಾದರೂ, ಅಕ್ಷಂ = ಪ್ರತ್ಯಕ್ಷವೆನಿಸುತ್ತದೆ. ತಥಾ = ಹಾಗೆ (ಇಂದ್ರಿಯದಂತೆ), ಅದುಷ್ಟಃ = ಪ್ರಮಾಣ ವಿರೋಧಾದಿ ದೋಷರಹಿತವಾದ, ತರ್ಕಃ = ಉಪಪತ್ತಿ ಯುಕ್ತ್ಯಾದಿ ಶಬ್ದವಾಚ್ಯವಾದ ಲಿಂಗವು, ಅನುಮಾ = ಅನುಮಾನವು. ಅದುಷ್ಟವಾಕ್ಯಂ ಚ = ಅಬೋಧಕತ್ವ, ವಿಪರೀತಬೋಧಕತ್ವ ಮೊದಲಾದ ದೋಷಗಳಿಂದ ವಿರಹಿತವಾದ ವಾಕ್ಯವೇ, ಆಗಮಃ = ಆಗಮವೆನಿಸುತ್ತದೆ. ಸ್ವದೃಕ್ಚ = ಆತ್ಮಸ್ವರೂಪಭೂತವಾದ ಜ್ಞಾನವೇ, ಅನುಭವಃ = ಅನುಭವವೆಂದು, ಸ್ಮೃತಃ = ಸ್ಮರಿಸಲ್ಪಟ್ಟದೆ.

ಟೀ ॥ (1) ಪ್ರಮಾಣಗಳನ್ನು ನಿರೂಪಿಸುವುದಕ್ಕಾಗಿ ಈ ವಾಕ್ಯಗಳು ಬ್ರಹ್ಮತರ್ಕ ಗ್ರಂಥದಲ್ಲಿ ಪ್ರವೃತ್ತಗಳಾಗಿವೆ. ಪ್ರಮಾಣಸ್ವರೂಪವು ತಿಳಿಯಲ್ಪಟ್ಟರೇನೆ 'ಬಲವತ್ಪ್ರಮಾಣತಶ್ಚೈವ' ಇತ್ಯಾದಿಗಳಿಂದ ಬಲವತ್ವ ಮೊದಲಾದ ಧರ್ಮಜ್ಞಾನವು ಬರುವುದು. ಇತರ ವಸ್ತುಗಳಿಂದ ಬೇರೆಯಾಗಿ ಸ್ವರೂಪಜ್ಞಾನವಾದರೂ ಲಕ್ಷಣ(ಅಸಾಧಾರಣ ಧರ್ಮ)ದಿಂದಾಗುವುದು. ಯದ್ಯಪಿ ಸಾಮಾನ್ಯ ಲಕ್ಷಣವನ್ನು ಹೇಳಿದಮೇಲೆಯೇ ವಿಶೇಷಲಕ್ಷಣವನ್ನು ಹೇಳಬೇಕಾಗಿಯದೆ. ಆದಾಗ್ಯೂ ಸಾಮಾನ್ಯಲಕ್ಷಣವು ವಿಶೇಷ ವ್ಯವಹಾರಗಳಲ್ಲಿ ಉಪಯುಕ್ತವಾಗಲಾರದು. ವಿಶೇಷಲಕ್ಷಣಗಳೇ ಉಪಯುಕ್ತಗಳಾಗಿವೆ. ಆದಪ್ರಯುಕ್ತ ವಿಶೇಷ ಲಕ್ಷಣಗಳನ್ನೇ ಪ್ರಥಮತಃ ಹೇಳಿರುವರು. (2) ಇಂದ್ರಿಯಾದಿಗಳು ಯಾವುದರಿಂದ ಸಂಬಂಧಿಸಲ್ಪಟ್ಟವುಗಳಾಗಿ ಜ್ಞಾನವನ್ನೇ ಹುಟ್ಟಿಸುವುದಿಲ್ಲವೋ, ವಿಪರೀತ ಜ್ಞಾನವನ್ನು ಹುಟ್ಟಿಸುತ್ತವೋ ಅದು ದೋಷವು; ಅಂತಹ ದೋಷದಿಂದ ವಿರಹಿತವಾದುದು ಅದುಷ್ಟವು. (3)'ಯತ್ರ ವಹ್ನಿರ್ನಾಸ್ತಿ ತತ್ರ ಧೂಮಃ ನಾಸ್ತಿ'ಎಂಬೀ ವ್ಯತಿರೇಕ ವ್ಯಾಪ್ತಿಯಲ್ಲಿ ಸಾಧ್ಯಾಭಾವವು ವ್ಯಾಪ್ಯವಾದುದರಿಂದ, 'ಅಗ್ನಿಯನ್ನಂಗೀಕರಿಸುವುದು ಬೇಡ' ಎಂಬೀ ಅಗ್ನ್ಯಭಾವ ರೂಪವಾದ ವ್ಯಾಪ್ಯವನ್ನಂಗೀಕರಿಸಿದರೆ ಅನಿಷ್ಟವಾದ ಧೂಮಾಭಾವವನ್ನು ಆಪಾದಿಸುವುದು ತರ್ಕವು. (4) ತಥಾ ಶಬ್ದದಿಂದ ಆಪಾದನ ಸ್ವರೂಪವಲ್ಲದ ಸಾಧನಾನುಮಾನವನ್ನು ಇಟ್ಟುಕೊಳ್ಳಬೇಕು. ಅನುಮಾನವು ತರ್ಕ, ಸಾಧನ ಎಂಬೀ ಭೇದದಿಂದ ಎರಡು ವಿಧವು. (5) ನೈಯಾಯಿಕಾದಿಗಳು 'ತರ್ಕವು ಪ್ರಮಾಣವೇ ಅಲ್ಲವೆಂದೂ' ಜೈನರು 'ಪ್ರತ್ಯೇಕ ಪ್ರಮಾಣವೆಂದೂ' ಹೇಳುವರು. ಅವುಗಳನ್ನು ನಿರಾಕರಿಸುವುದಕ್ಕಾಗಿ ಹೀಗೆ ಹೇಳಲ್ಪಟ್ಟಿದೆ. (6) ಅಥವಾ 'ತರ್ಕ್ಯತೇ ಅನುಪೂಯತೇ ಅನೇನ' ಎಂಬೀ ವ್ಯುತ್ಪತ್ತಿಯಿಂದ ತರ್ಕಶಬ್ದದಿಂದ ಸಮಸ್ತ ಯುಕ್ತಿಯನ್ನೂ ಇಟ್ಟುಕೊಳ್ಳಬೇಕು. (7) ವಾಕ್ಯವೇ ಆಗಮವು; ಚೇಷ್ಟೆಯೂ ಆಗಮವೆಂದನ್ನಕೂಡದು. ಚೇಷ್ಟೆಯು ಅನುಮಾನದಲ್ಲಿ ಅಂತರ್ಭೂತವಾಗುತ್ತದೆ. (8) ಆತ್ಮಸ್ವರೂಪಭೂತವಾದ ಯಾವ ಸಾಕ್ಷಿರೂಪ ಜ್ಞಾನವದೆಯೋ, ಅದೇ ಈಗ ಅನುಭವಶಬ್ದದಿಂದ ವಿವಕ್ಷಿತವಾಗಿದೆ. ವೃತ್ತಿರೂಪ ಜ್ಞಾನವಲ್ಲ. ತಥಾಚ ಸಾಕ್ಷಿರೂಪವಾದ ಅನುಭವವೇ ಲಕ್ಷ್ಯವಾದುದರಿಂದ ವೃತ್ತಿರೂಪ ಜ್ಞಾನದಲ್ಲಿ ಲಕ್ಷಣವಿಲ್ಲವೆನ್ನುವುದು ದೋಷಾಧಾಯಕವಲ್ಲ. ಸ್ವರೂಪಭೂತ ಜ್ಞಾನವೇ ಅನುಭವವು. ಅದು ನಿರ್ದುಷ್ಟವೆಂದು ಹೇಳಬೇಕೆಂದಿಲ್ಲ. ಸಜ್ಜೀವರ ಸ್ವರೂಪ ಜ್ಞಾನವು ನಿರ್ದುಷ್ಟವೆಂದೇ ನಿಯಮವಿದೆ. ತಥಾಚ ಉತ್ತಮರಾದ ಜೀವರ ಸಂಬಂಧಿಯಾದ ಸ್ವರೂಪಜ್ಞಾನತ್ವವು ಸಾಕ್ಷಿಪ್ರತ್ಯಕ್ಷಕ್ಕೆ ಲಕ್ಷಣವೆಂದುಕ್ತವಾಯಿತು. (9) ಜ್ಞಾನವು ಆತ್ಮಸ್ವರೂಪವಾಗುವುದಿಲ್ಲವೆಂದು ಕೆಲವರು ಹೇಳುವುದರಿಂದ ಅದನ್ನು ನಿರಾಕರಿಸುವುದಕ್ಕಾಗಿ 'ಸ್ಮೃತಃ' ಎಂದು ಹೇಳಲ್ಪಟ್ಟಿದೆ. 'ವಿಜ್ಞಾನ ಘನ ಏವ' ಇತ್ಯಾದಿ ಶ್ರುತಿಸ್ಮೃತಿಗಳಿಂದ ಆತ್ಮಸ್ವರೂಪತ್ವವು ಸಿದ್ಧವಾಗಿದೆ. (10) ಐಕ್ಯವಾಕ್ಯವು ಪ್ರತ್ಯಕ್ಷ, ಅನುಮಾನ, ಆಗಮ, ಅನುಭವಗಳಿಂದ ವಿರುದ್ಧವಾಗಿದೆ ಎಂದು ಹೇಳಲ್ಪಟ್ಟದೆ. ಪ್ರತ್ಯಕ್ಷಾದಿಗಳ ಜ್ಞಾನವಾಗದೆ ಅದರ ಜ್ಞಾನವಾಗಲಾರದು. ಆದಕಾರಣ ಪ್ರತ್ಯಕ್ಷಾದಿಗಳ ಸ್ವರೂಪವನ್ನು ನಿರೂಪಿಸಿದರಿಂದ ಅದು ಸುಖದಿಂದ ತಿಳಿಯುವಹಾಗೆ ಆಯಿತು ॥ ೧೦೭ ॥

ದೋಷಗಳ ಜ್ಞಾನವಿದ್ದರೇನೇ ಇಂದ್ರಿಯಾದಿಗಳಲ್ಲಿ ದೋಷವಿಲ್ಲವೆನ್ನುವ ಜ್ಞಾನವು ಬರುವುದು. ದೋಷಗಳಾದರೂ ಯಾವುದರಿಂದ ತಿಳಿಯಲ್ಪಡಬೇಕೆಂದರೆ —

**ಮೂ ॥ ಬಲವತ್ಪ್ರಮಾಣತಶ್ಚೈವ ಜ್ಞೇಯಾ ದೋಷಾ ನ ಚಾನ್ಯಥಾ ॥ ೧೦೮ ॥**

ಅ ॥ (ಯದ್ಯಪಿ ಸ್ವರೂಪಾಸಿದ್ಧಿ ಮೊದಲಾದ ಕೆಲವು ಅನುಮಾನಮೊದಲಾದುವುಗಳ ದೋಷಗಳು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧಗಳಾಗಿವೆ. ಆದಾಗ್ಯೂ) ದೋಷಾಶ್ಚ=ಇಂದ್ರಿಯ ದೋಷಗಳಾದರೂ, ಬಲವತ್ಪ್ರಮಾಣತ ಏವ=ಪ್ರಬಲಪ್ರಮಾಣವಿರೋಧದಿಂದಲೇ, ಜ್ಞೇಯಾಃ= ತಿಳಿಯಲ್ಪಡಬೇಕು. ಅನ್ಯಥಾ=ಬೇರೆ ರೀತಿಯಾಗಿ, ನ ಚ=ಅಲ್ಲವೇ ಅಲ್ಲ.

ತಾ ॥ (1) ಬಲವತ್ಪ್ರಮಾಣವಿರೋಧವು ದೋಷಜ್ಞಾನದಲ್ಲಿ ಕಾರಣವಾಗಿದೆ ಎಂದು ಹೇಳಿದರಿಂದ 'ದೋಷಜನ್ಯತ್ವಂ ಚ' ಎಂದು ಹಿಂದೆ ಹೇಳಿದ್ದನ್ನು ದೃಢೀಕರಿಸಿದಹಾಗಾಯಿತು. (2) 'ನ ವಾ ಏಕೇನ ಅಕ್ಷರೇಣ ಛಂದಾಂಸಿ ವಿಯಂತಿ ನ ದ್ವಾಭ್ಯಾಂ' ಒಂದು ಅಕ್ಷರವು ಕಮ್ಮಿ ಯಾದರೂ ಹೆಚ್ಚಾದರೂ ಎರಡು ಅಕ್ಷರಗಳು ಕಮ್ಮಿಯಾದರೂ ಹೆಚ್ಚಾದರೂ ಛಂದೋ ಭಂಗವನ್ನು ಶಂಕಿಸಕೂಡದು. ಎಂಬುವ ಮಾತಿನಿಂದ ಅನುಷ್ಟುಪ್‌ಛಂದಸ್ಸಿನ ಪಾದಕ್ಕೆ ಎಂಟು ಅಕ್ಷರಗಳು ಇರಬೇಕೆಂದು ನಿಯಮವಿದ್ದರೂ ಪ್ರಕೃತ ಒಂಭತ್ತು ಅಕ್ಷರಗಳು ಇರುವುದು ದೋಷವಲ್ಲ ॥ ೧೦೮ ॥

ಬಲವತ್ವವೆಂದರೆ ಪ್ರಾಮಾಣ್ಯವು. ಆದಕಾರಣ ಪ್ರಾಮಾಣ್ಯದಿಂದ ಅತಿರಿಕ್ತವಾದ ಬಲ ವತ್ವವು ಎಂತಹುದು ಎಂದಾಶಂಕಿಸಿದರೆ ಅದನ್ನು ವಿಭಾಗಮಾಡಿತೋರಿಸುತ್ತಾರೆ —

ಮೂ ॥ ದ್ವಿವಿಧಂ ಬಲವತ್ವಂ ಚ ಬಹುತ್ವಾಚ್ಚ ಸ್ವಭಾವತಃ ।
ತಯೋಸ್ಸ್ವಭಾವೋ ಬಲವಾನುಪಜೀವ್ಯಾದಿಕಶ್ಚ ಸಃ ॥ ೧೦೯ ॥

ಅ ॥ ಬಹುತ್ವಾತ್=ಬಾಹುಲ್ಯದಿಂದಲೂ, ಸ್ವಭಾವತಶ್ಚ=ಸ್ವಭಾವದಿಂದಲೂ, ಬಲ ವತ್ವಂ ಚ=ಪ್ರಾಬಲ್ಯವಾದರೂ, ದ್ವಿವಿಧಂ=ಎರಡು ಪ್ರಕಾರವು, (ಬಹುಪ್ರಮಾಣಗಳಿಗೆ ಸ್ವಭಾ ವತಃ ಬಲವುಳ್ಳ ಪ್ರಮಾಣದಿಂದ ವಿರೋಧವಿದ್ದರೆ ಹೇಗೆ ನಿಶ್ಚಯಿಸಬೇಕೆಂದರೆ) ತಯೋಃ=ಆ ಎರಡರ ಮಧ್ಯದಲ್ಲಿ, ಸ್ವಭಾವಃ=ಸ್ವಭಾವಪ್ರಾಬಲ್ಯವು, ಬಲವಾನ್=ಬಲವುಳ್ಳದ್ದು, ಸಃ= ಆ ಸ್ವಭಾವಪ್ರಾಬಲ್ಯವು, ಉಪಜೀವ್ಯಾದಿಕಶ್ಚ=ಉಪಜೀವ್ಯತ್ವ ನಿರವಕಾಶತ್ವಾದಿ ರೂಪವಾದುದು.

ತಾ ॥ ಸ್ವಭಾವಕ್ಕೆ ಪ್ರಾಬಲ್ಯವಿದ್ದುದರಿಂದಲೇ ಉಪಜೀವ್ಯ ನಿರವಕಾಶಪ್ರಮಾಣ ವಿರೋಧ ವನ್ನು ಪ್ರಥಮತಃ ಹೇಳಿ ಮೇಲೆ ಬಹುಪ್ರಮಾಣವಿರೋಧವನ್ನು ಹೇಳಿರುವರು ॥ ೧೦೯ ॥

ಹೀಗೆ ಪರಸ್ಪರ ವಿಲಕ್ಷಣಗಳಾದ ಈ ಪ್ರತ್ಯಕ್ಷಾದಿ ಪ್ರಮಾಣಗಳಲ್ಲಿ ಪ್ರಮಾಣವೆಂಬೀ ಒಂದೇ ಶಬ್ದವು ಪ್ರವೃತ್ತಿಯಾಗುವುದು ಹೇಗೆ ಎಂದಾಶಂಕಿಸಿದರೆ — ಸಾಮಾನ್ಯಲಕ್ಷಣವು ಎಲ್ಲಾದರ ಲ್ಲಿಯೂ ಕೂಡುವುದರಿಂದ ಯುಕ್ತವಾಗುವುದೆಂದು ನಿರೂಪಿಸುತ್ತಾರೆ —

ಮೂ ॥ ಯಾಥಾರ್ಥ್ಯಮೇವ ಪ್ರಾಮಾಣ್ಯಂ ತನ್ಮುಖ್ಯಂ ಜ್ಞಾನಶಬ್ದಯೋಃ ॥ ೧೧೦ ॥

ಅ ॥ ಯಾಥಾರ್ಥ್ಯಮೇವ=ಯಥಾವಸ್ಥಿತಜ್ಞೇಯವಿಷಯೀಕಾರಿತ್ವವೇ, ಪ್ರಾಮಾಣ್ಯಂ= ಪ್ರಮಾಣಶಬ್ದಪ್ರವೃತ್ತಿನಿಮಿತ್ತವು, ತತ್=ಆ ಯಾಥಾರ್ಥ್ಯವೇ, ಜ್ಞಾನಶಬ್ದಯೋಃ = ಜ್ಞಾನ ಮತ್ತು ಶಬ್ದ ಇವುಗಳಲ್ಲಿ, ಮುಖ್ಯಂ=ಪ್ರಧಾನವಾದುದು.

ತಾ ॥ (1) 'ಯಾಥಾರ್ಥ್ಯಮೇವ' ಎನ್ನುವಲ್ಲಿದ್ದ 'ಏವ' ಶಬ್ದದಿಂದ ಅನಧಿಗತಾರ್ಥ ಗಂತೃತ್ವಮೊದಲಾದ ಪರರ ಪ್ರಮಾಣಲಕ್ಷಣವನ್ನು ತಿರಸ್ಕರಿಸಿದರು. (2) ಯಾಥಾರ್ಥ್ಯವು ಪ್ರಮಾಣಶಬ್ದಕ್ಕೆ ಪ್ರವೃತ್ತಿನಿಮಿತ್ತವೆಂದು ಹೇಳಿದರಿಂದಲೂ ಪರರ ಪ್ರಮಾಣಲಕ್ಷಣವನ್ನು

ನಿರಾಕರಿಸಿದರಿಂದಲೂ, 'ಬಹುಪ್ರಮಾಣಸಂವಾದಶ್ಚ' ಎಂದು ಹೇಳಲ್ಪಟ್ಟ ಪ್ರಮಾಣಗಳ ಸಮೂಹವನ್ನು ದೃಢೀಕರಿಸಿದಂತೆಯೇ ಆಯಿತು. (3) ಜ್ಞೇಯವಿಷಯೀಕಾರಿತ್ವವು ಜ್ಞಾನದ ಧರ್ಮವಾದುದರಿಂದ ಇಂದ್ರಿಯಾದಿಗಳಿಗೆ ಪ್ರಾಮಾಣ್ಯಹೇಳಿದ್ದು ಹೇಗೆ ಕೂಡಬಹುದೆಂದರೆ — ಪ್ರಮಾಣವು ೨ ವಿಧವು. (೧) ಜ್ಞಾನರೂಪ ಪ್ರಮಾಣವು, (೨) ಜ್ಞಾನಕರಣರೂಪವಾದ ಪ್ರಮಾಣವು, ಅವುಗಳಲ್ಲಿ ಜ್ಞಾನವು ಸಾಕ್ಷಾಜ್ಜ್ಞೇಯವಿಷಯೀಕಾರಿಯಾದುದರಿಂದ ಅದರಲ್ಲಿ ಈ ಲಕ್ಷಣವು ಮುಖ್ಯವಾಗಿದೆ. ಇಂದ್ರಿಯ, ಲಿಂಗ, ಶಬ್ದಗಳಾದರೂ ಜ್ಞಾನದ್ವಾರಾ ಜ್ಞೇಯವಿಷಯೀಕಾರಿಗಳಾದುದರಿಂದ ಅವುಗಳಲ್ಲಿ ಈ ಲಕ್ಷಣವು ಮುಖ್ಯವಾಗಿದೆ. ಆ ಕಾರಣ ಯಾವ ದೋಷವೂ ಇಲ್ಲ. (4) ಕರಣಗಳಲ್ಲಿಯೂ ಇಂದ್ರಿಯ ಲಿಂಗಗಳಿಗಿಂತ ಶಬ್ದವಿಶೇಷವಾದ ವೇದದಲ್ಲಿ ಯಾಥಾರ್ಥ್ಯವು ಮುಖ್ಯವಾಗಿದೆ. ಇಂದ್ರಿಯ ಲಿಂಗಗಳಿಗೆ ಕ್ವಚಿತ್ ಅಯಾಥಾರ್ಥ್ಯವೂ ಇರಬಹುದು. ವೇದಕ್ಕಾದರೂ ಸರ್ವಥಾ ಅಯಾಥಾರ್ಥ್ಯವಿಲ್ಲವು ಎಂದು ಸೂಚಿಸುವುದಕ್ಕಾಗಿ 'ಶಬ್ದ'ವೆಂದು ಗ್ರಹಣ ಮಾಡಿರುವರು. ಜ್ಞಾನಕ್ಕೆ ಸಮಾನವಾದುದು ಎಂದಭಿಪ್ರಾಯದಿಂದ ಹೇಳಿದ್ದಲ್ಲ ॥ ೧೧೦ ॥

ಜ್ಞಾನದಲ್ಲಿ ಮುಖ್ಯವಾಗಿ ಯಾಥಾರ್ಥ್ಯವಿದೆ ಎಂದುಕ್ತವಾಗಿದೆ. ಅದೂ ಸರ್ವತ್ರ ಏಕ ಪ್ರಕಾರವಲ್ಲ ಎಂದು ಹೇಳುವುದಕ್ಕಾಗಿ ಅದರ ವಿಭಾಗವನ್ನು ಹೇಳುತ್ತಾರೆ.

**ಮೂ ॥ ಜ್ಞಾನಂ ಚ ದ್ವಿವಿಧಂ ಬಾಹ್ಯಂ ತಥಾಽನುಭವರೂಪಕಂ ॥ ಬಲ್ಯೇ-**
**ವಾನುಭವಸ್ತತ್ರ ನಿರ್ದೋಷಂ ತ್ವಕ್ಷಜಾದಿಕಂ ॥ ಅನುಪ್ರಮಾಣತಾಂ**
**ಯಾತಿ ತಥಾಽಕ್ಷಾದಿತ್ರಯಂ ತತಃ ॥ ೧೧೧ ॥**

ಅ ॥ ಜ್ಞಾನಂ ಚ=ಜ್ಞಾನವಾದರೂ, ದ್ವಿವಿಧಂ=ಎರಡುಪ್ರಕಾರವು, (೧) ಬಾಹ್ಯಂ= ಆತ್ಮಸ್ವರೂಪದಿಂದ ಅತಿರಿಕ್ತವಾದುದು, (೨) ತಥಾ = ಹಾಗೆಯೇ, ಅನುಭವರೂಪಕಂ= ಅನುಭವಸ್ವರೂಪವಾದುದು, ತತ್ರ=ಅವುಗಳಲ್ಲಿ, ಅನುಭವ ಏವ=ಅನುಭವವೇ, ಬಲೀ=ಬಲಿಷ್ಠವಾದುದು, ಅಕ್ಷಜಾದಿಕಂ=ಪ್ರತ್ಯಕ್ಷಮೊದಲಾದುದು, ನಿರ್ದೋಷಂ ತು=ದೋಷರಹಿತವಾದರೇನೆ, (ಪ್ರಮಾಣವು) ತತಃ=ಪ್ರಾಮಾಣ್ಯವು ಅಮುಖ್ಯವಾದಪ್ರಯುಕ್ತವೇ, ಅಕ್ಷಾದಿತ್ರಯಂ= ಪ್ರತ್ಯಕ್ಷಮೊದಲಾದ ಮೂರು, ಅನುಪ್ರಮಾಣತಾಂ = ಅನುಪ್ರಮಾಣಶಬ್ದವಾಚ್ಯತ್ವವನ್ನು, ಯಾತಿ=ಹೊಂದುತ್ತದೆ, ತಥಾ=ಹಾಗೆಯೇ, ತತಃ=ಪ್ರಾಮಾಣ್ಯವು ಮುಖ್ಯವಾದಪ್ರಯುಕ್ತವೇ, (ಜ್ಞಾನವು ಕೇವಲ ಪ್ರಮಾಣಶಬ್ದವಾಚ್ಯತ್ವವನ್ನು, ಪ್ರಾಮಾಣಿಕ ಪ್ರಯೋಗಗಳಲ್ಲಿ ಹೊಂದುತ್ತದೆ. ಇಲ್ಲವಾದರೆ ಅದು ಕೂಡದೆ ಹೋಗುವುದು)

ತಾ ॥ ಬಾಹ್ಯಜ್ಞಾನದ ಸ್ವರೂಪವನ್ನು ನಿರೂಪಣಮಾಡುವುದಕ್ಕಾಗಿ 'ಬಾಹ್ಯಂ' ಎಂದು ಹೇಳುವ ಬದಲಿಗೆ 'ಅಕ್ಷಜಾದಿಕಂ' ಎಂದು ಹೇಳಿರುವರು. ಇಂದ್ರಿಯ ಲಿಂಗ ಶಬ್ದಗಳಿಂದ ಹುಟ್ಟುವ ಮನೋವೃತ್ತಿರೂಪವಾದ ಜ್ಞಾನವು ಬಾಹ್ಯಜ್ಞಾನವೆನ್ನಿಸಿಕೊಳ್ಳುತ್ತದೆ. ಅದು ದೋಷರಹಿತಗಳಾದ ಕರಣಗಳಿಂದ ಹುಟ್ಟಿದರೇನೇ ಪ್ರಮಾಣವು. ಬೇರೆಯಾದುದು ಅಪ್ರಮಾಣವು. ಹೀಗೆ ಎರಡು ಪ್ರಕಾರವು ಸಂಭವಿಸುವುದರಿಂದ ಕೆಲವು ವೇಳೆ ಸಂಶಯಕ್ಕೆ ವಿಷಯವಾಗುವುದರಿಂದ ಬಾಹ್ಯಜ್ಞಾನದಲ್ಲಿರತಕ್ಕ ಯಾಥಾರ್ಥ್ಯವು ಅಮುಖ್ಯವು. ಅನುಭವವು ನಿರ್ದುಷ್ಟವೇ ಸರಿ, ಎಂದು ಪೂರ್ವದಲ್ಲಿಯೇ ಉಕ್ತವಾಗಿದೆ. ಸರ್ವಕ್ಕಿಂತಲೂ ಅನುಭವವು ಪ್ರಬಲವು ಎಂದು ಹೇಳಿದ್ದರಿಂದ 'ನ ಚಾನುಭವವಿರೋಧೇ ಆಗಮಸ್ಯ ಪ್ರಾಮಾಣ್ಯಂ' ಎಂದುಕ್ತವಾದುದನ್ನು ದೃಢೀಕರಿಸಿದಹಾಗಾಯಿತು. ಅಂತೂ ಜ್ಞಾನದಲ್ಲಿ ಯಾಥಾರ್ಥ್ಯವು ಮುಖ್ಯವಾದುದು. ಕರಣಗಳಲ್ಲಿ

ಅಮುಖ್ಯವಾದುದು. ಜ್ಞಾನಪ್ರಾಮಾಣ್ಯವು ಮುಖ್ಯವು. ಅನುಪ್ರಮಾಣ ಪ್ರಾಮಾಣ್ಯವು ಅಮುಖ್ಯವು. ಇಲ್ಲವಾದರೆ ಪ್ರತ್ಯಕ್ಷಾದಿಗಳಿಗೆ ಅನುಪ್ರಮಾಣವೆಂದೂ,ಜ್ಞಾನಕ್ಕೆ ಕೇವಲ ಪ್ರಮಾಣವೆಂದೂ ವ್ಯವಹಾರವು ಇಲ್ಲದೆ ಹೋಗುವುದು ॥ ೧೧೧ ॥

'ತನ್ಮುಖ್ಯಂ ಜ್ಞಾನಶಬ್ದಯೋಃ' ಎನ್ನುವಲ್ಲಿ ಪ್ರಾಮಾಣ್ಯವು ಜ್ಞಾನಶಬ್ದಗಳಲ್ಲಿ ಮುಖ್ಯವೆಂದುಕ್ತವಾಗಿದೆ. ಅವುಗಳಲ್ಲಿ ಶಬ್ದವು ಪ್ರಾಬಲ್ಯವಿಷಯದಲ್ಲಿಯೂ ಸಾಕ್ಷಿರೂಪವಾದ ಜ್ಞಾನಕ್ಕ ಸಮಕಕ್ಷವೆಂಬೀ ಪ್ರತೀತಿಯನ್ನು ನಿವಾರಿಸುತ್ತಾ ಅದಕ್ಕೆ ಅಪವಾದವನ್ನು ಹೇಳುತ್ತಾರೆ —

ಮೂ ॥ ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಂ ।
ಉಪಜೀವ್ಯವಿರೋಧೇ ತು ನ ಪ್ರಾಮಾಣ್ಯಮಮುಷ್ಯ ಚ ॥ ೧೧೨ ॥

ಅ ॥ ತೇಷು ತ್ರಿಷು=ಆ ಪ್ರತ್ಯಕ್ಷ ಮೊದಲಾದ ಮೂರು ಕರಣಗಳ ಮಧ್ಯದಲ್ಲಿ, ಆಗಮಸ್ಯ=ವೇದದ, ಪ್ರಾಬಲ್ಯಂ=ಪ್ರಬಲತನವು, ಜಾತ್ಯೈವ=ಉತ್ಸರ್ಗದಿಂದಲೇ, (ಅಪವಾದವಿಲ್ಲದಿದ್ದರೇನೆ,) ಸ್ಮೃತಂ=ಸ್ಮರಿಸಲ್ಪಟ್ಟದೆ. (ನಿಯತವಲ್ಲ.) ಉಪಜೀವ್ಯವಿರೋಧೇ ತು=ಉಪಜೀವ್ಯ ನಿರವಕಾಶಾದಿಗ್ಳಳ ವಿರೋಧವಿದ್ದರೆ, ಅಮುಷ್ಯ ಚ = ವೇದಕ್ಕೂ ಕೂಡ, ಪ್ರಾಮಾಣ್ಯಂ= ಯಥಾರ್ಥ್ಯವು, ನ=ಇರುವುದಿಲ್ಲ ॥ ೧೧೨ ॥

(1) ಹೀಗೆ ಪ್ರತ್ಯಕ್ಷಾದಿಗಳಿಗೆ ಲಕ್ಷಣವು ನಿರೂಪಿಸಲ್ಪಟ್ಟಿತು. ಇನ್ನು ವಿಭಾಗವನ್ನು ನಿರೂಪಿಸಬೇಕು. ಅವುಗಳಲ್ಲಿ ಅನುಮಾನ ವಿಭಾಗವನ್ನು ನಿರೂಪಿಸುವುದು ಹೆಚ್ಚು ಇದೆ. ಆದುದರಿಂದ ಅದನ್ನೇ ಪ್ರಥಮದಲ್ಲಿ ನಿರೂಪಿಸುತ್ತಾರೆ. ಅನುಮಾನವು ಸ್ವಾರ್ಥ, ಪರಾರ್ಥವೆಂದು ೨ ವಿಧವು. ಅವುಗಳಲ್ಲಿ ಪರೋಪದೇಶವನ್ನು ಅಪೇಕ್ಷಿಸದೆ ತಾನೇ ವ್ಯಾಪ್ತಿಯನ್ನು ತಿಳಿದು ವ್ಯಾಪ್ತಿಯನ್ನನುಸರಿಸಿ ವಿವಕ್ಷಿತ ಸ್ಥಳದಲ್ಲಿ ವ್ಯಾಪ್ಯ(ಹೇತು)ವನ್ನು ತಿಳಿದು ವ್ಯಾಪ್ತಿಯನ್ನು ಸ್ಮರಿಸಿ ವ್ಯಾಪ್ಯವನ್ನು ಅನುಸಂಧಾನಮಾಡಿಕೊಳ್ಳುತ್ತಾನೋ, ಅಂದರೆ- ಪರ್ವತದಲ್ಲಿ ವಹ್ನಿವ್ಯಾಪ್ತವಾದ ಧೂಮವು ಇದೆ, ಎಂದು ಲಿಂಗಪರಾಮರ್ಶವು ಆಗುವುದೋ, ಅದು ಸ್ವಾರ್ಥಾನುಮಾನವು. ಲಿಂಗಪರಾಮರ್ಶದಿಂದ ಇವನಿಗೆ ವಿವಕ್ಷಿತ ಸ್ಥಳದಲ್ಲಿ ವ್ಯಾಪಕ(ಸಾಧ್ಯ)ದ ಜ್ಞಾನವು ಹುಟ್ಟುತ್ತದೆ. (2) ಈ ವ್ಯಾಪ್ತ್ಯಾದಿಗಳ ಜ್ಞಾನವೇ ಪರೋಪದೇಶವನ್ನು ಅಪೇಕ್ಷಿಸಿ ಹುಟ್ಟಿದರೆ ಆಗ ಅದು ಪರಾರ್ಥಾನುಮಾನವೆಂದು ಹೇಳಲ್ಪಡುತ್ತದೆ. ಅದರ ಸಂಬಂಧದಿಂದಲೇ ಪರೋಪದೇಶವೂ ಪರಾರ್ಥಾನುಮಾನವೆಂದು ಹೇಳಲ್ಪಡುತ್ತದೆ. ಪರೋಪದೇಶ ವಿಷಯದಲ್ಲಿ ವಾದಿಗಳಿಗೆ ವಿವಾದವದೆ. ಪ್ರತಿಜ್ಞಾ ಹೇತು ಉದಾಹರಣಗಳು, ಉದಾಹರಣ ಉಪನಯ ನಿಗಮನಗಳಾಗಲೀ ಈ ಮೂರು ಅವಯವಗಳಿಂದ (ಅವಾಂತರ ವಾಕ್ಯಗಳಿಂದ) ಯುಕ್ತವಾದ ಮಹಾವಾಕ್ಯವು ಪರೋಪದೇಶವೆಂದು ಕೆಲವರು (ಮೀಮಾಂಸಕರು) ಹೇಳುವರು. ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನ ಎಂಬೀ ಐದು ಅವಯವಗಳೂ ಸರ್ವಥಾ ಆವಶ್ಯಕಗಳೆಂದು ತಾರ್ಕಿಕರು ಹೇಳುವರು. ಉದಾಹರಣ ಉಪನಯಗಳೆಂಬೀ ಎರಡೇ ಅವಯವಗಳೆಂದು ಬೌದ್ಧರು ಹೇಳುವರು. ಆ ಈ ನಿಯಮಪಕ್ಷಗಳನ್ನು ಅನುವಾದಮಾಡಿ ದೂಷಿಸುತ್ತಾರೆ —

ಮೂ ॥ ಯಾಮಾಹುರನುಮಾಂ ಕೇಚಿತ್ತ್ರಿಯಾದ್ಯವಯವಾತ್ಮಿಕಾಂ ।
ಸಾ ವ್ಯರ್ಥಾ ನೋಪಪತ್ತ್ಯಾ ಹಿ ವಿನಾ ಸಾಽಪಿ ಪ್ರಮಾಣತಾಂ ॥
ಯಾತ್ಯತೋ ಯುಕ್ತಿರೇವೈಕಾ ಪ್ರಮಾಣಮನುಮಾತ್ಮಕಂ ॥ ೧೧೩ ॥

ಅ ॥ ಕೇಚಿತ್=ಕೆಲವರು, ಯಾಂ ಅನುಮಾಂ=ಯಾವ ಅನುಮಾನಕ್ಕೆ ಉಪಯುಕ್ತವಾದ ಪರೋಪದೇಶವಾಕ್ಯವನ್ನು, ತ್ರಿಯಾದ್ಯವಯವಾತ್ಮಿಕಾಂ =ಮೂರೇ ಮೊದಲಾದ ಅವಯವಗಳ ಸ್ವರೂಪವಾದುದನ್ನಾಗಿ, (ನಿಯಮದಿಂದ) ಹೇಳುತ್ತಾರೋ, ಸಾ=ಆ ಅವಯವ ನಿಯಮವು, ವ್ಯರ್ಥಾ= ನಿಷ್ಪ್ರಯೋಜನವು, ಹಿ = ಯಾವ ಕಾರಣದಿಂದ, ಉಪಪತ್ತ್ಯಾ= ವ್ಯಾಪ್ತ್ಯಾದಿಗಳುಳ್ಳ ಲಿಂಗದಿಂದಲೂ, (ಆ ಲಿಂಗದ ಸ್ಮೃತಿ ಜಿಜ್ಞಾಸಾಗಳಿಂದ) ವಿನಾ=ಹೊರತು, ಸಾಪಿ=ನಿಯತವಾದ ಅವಯವವುಳ್ಳತನದಿಂದ ಅಂಗೀಕೃತವಾದ ವಾಕ್ಯವು, ಪ್ರಮಾಣತಾಂ= ಉಪಯುಕ್ತತ್ವವನ್ನು, ನ ಯಾತಿ=ಹೊಂದುವುದಿಲ್ಲ. ಅತಃ=ಆದುದರಿಂದ, ಯುಕ್ತಿರೇವೈಕಾ= ಯುಕ್ತಿಯೊಂದೇ, ಅಂದರೆ ವ್ಯಾಪ್ತ್ಯಾದಿಗಳುಳ್ಳ ಲಿಂಗಸ್ಮೃತ್ಯಾದಿಗಳು (ಎಷ್ಟರಿಂದಾಗುವುದೋ ಅಷ್ಟೇ) ಅನುಮಾತ್ಮಕಂ= ಅನುಮಾನಸ್ವರೂಪವಾದ, ಪ್ರಮಾಣಂ=ಪರೋಪದೇಶರೂಪವಾದ ವಾಕ್ಯವು.

ತಾ ॥ (1) ಐದು ಅವಯವನಿಯಮವು ಆವಶ್ಯಕವೆಂದು ತಾರ್ಕಿಕರು ಶಂಕಿಸುತ್ತಾರೆ. ಪ್ರಮಾಣಾಕಾಂಕ್ಷಾ ಹುಟ್ಟುವುದಕ್ಕಾಗಿ ಆದಿಯಲ್ಲಿ ಸಾಧ್ಯನಿರ್ದೇಶರೂಪವಾದ ಪ್ರತಿಜ್ಞೆಯು ಸರ್ವಥಾ ಆವಶ್ಯಕವು. ಆ ಮೇಲೆ ಅದರಲ್ಲಿ ಪ್ರಮಾಣಾಕಾಂಕ್ಷಾ ಬರಲು ಸಾಧನತ್ವವನ್ನು ಪ್ರಕಟೀಕರಿಸತಕ್ಕ ಹೇತುವನ್ನು ಅವಶ್ಯವಾಗಿ ಹೇಳಬೇಕು. ಆ ಮೇಲೆ ವ್ಯಾಪ್ತಿಪಕ್ಷಧರ್ಮತಾ ರೂಪವಾದ ಸಾಮರ್ಥ್ಯವನ್ನು ವಿಚಾರಿಸಲು ವ್ಯಾಪ್ತಿಯು ಪ್ರಾಥಮಿಕವಾದುದರಿಂದ ವ್ಯಾಪ್ತಿಯನ್ನು ತೋರಿಸತಕ್ಕ ಶಬ್ದಪೂರ್ವಕವಾದ ವ್ಯಾಪ್ತಿಗ್ರಹಣಸ್ಥಳವಾದ ದೃಷ್ಟಾಂತದ ವಚನವೆಂಬ ಉದಾಹರಣವು ಆವಶ್ಯಕವಾಯಿತು. ಆಮೇಲೆ ಹೇತುವಿಗೆ ಪಕ್ಷವೃತ್ತಿತ್ವವನ್ನು ತಿಳಿಸುವುದಕ್ಕಾಗಿ ಉಪನಯವನ್ನು ಹೇಳಲೇಬೇಕು. ಅನಂತರ ಇವುಗಳಿಗೆ ಐಕಾರ್ಥ್ಯಬರುವುದಕ್ಕೋಸ್ಕರ ನಿಗಮನವೆಂಬ ಉಪಸಂಹಾರವಾಕ್ಯವೂ ಸರ್ವಥಾ ಆವಶ್ಯಕವು. (2) ಅಥವಾ ಹೇತುವಾಕ್ಯದಿಂದಲೇ ಅರ್ಥಾತ್ ಪಕ್ಷವೃತ್ತಿತ್ವವೂ ಲಭಿಸುವುದು. ಆದುದರಿಂದ ಕಾಲವ್ಯವಧಾನವಿರುವುದಿಲ್ಲ. ಆದಕಾರಣ ಉಪಸಂಹಾರವೂ ಅನಾವಶ್ಯಕವಾಯಿತು. ಆದಪ್ರಯುಕ್ತ ಆದಿಯಲ್ಲಿರುವ ಮೂರೇ ಅವಯವಗಳು ಸರ್ವಥಾ ಆವಶ್ಯಕಗಳು. ಅಥವಾ ಉಪೋದ್ಘಾತಸಂಗತಿಯಿಂದ ವ್ಯಾಪ್ತಿಪಕ್ಷಧರ್ಮತೆಗಳನ್ನು ಹೇಳುವಾಗ ಹೇತುವು ಸಿಗುತ್ತದೆ. ಆದಕಾರಣ ನಿಗಮನದಿಂದಲೇ ಸಾಧ್ಯವು ತೋರುತ್ತದೆ. ಆದುದರಿಂದ ಮೇಲಿನ ಮೂರೇ ಅವಯವಗಳು ಆವಶ್ಯಕಗಳು. (3) ಅಥವಾ ವಿವಾದದಿಂದಲೇ ಸಾಧ್ಯವಿಶಿಷ್ಟವಾದ ಧರ್ಮಜ್ಞಾನವು ಹುಟ್ಟುವಾಗ ವ್ಯಾಪ್ತಿಪಕ್ಷಧರ್ಮತಾವಚನಗಳಿಂದಲೇ ಹೇತುವು ಲಭಿಸುತ್ತದೆ. ಆದುದರಿಂದ, ಹಿಂದಿನಂತೆ ನಿಗಮನವು ವ್ಯರ್ಥವಾದಪ್ರಯುಕ್ತ ಉದಾಹರಣ-ಉಪನಯ, ಹೀಗೆ ಎರಡೇ ಅವಯವಗಳು ಆವಶ್ಯಕಗಳು. ಆದಕಾರಣ ಅವಯವ ನಿಯಮಕ್ಕೆ ವೈಯರ್ಥ್ಯವು ಹೇಗೆ ಕೂಡುವುದೆಂದರೆ — ಪರೋಪದೇಶವು ವ್ಯಾಪ್ತ್ಯಾದಿಗಳನ್ನು ಗ್ರಹಿಸಿದವನಿಗೆ ಸ್ಮಾರಕವಾಗುವುದು. ಇತರರಿಗೆ ಅವನ್ನು ತಿಳಿಯಬೇಕೆಂಬ ಇಚ್ಛೆಯನ್ನು ಹುಟ್ಟಿಸುವುದು. ಹೀಗೆ ಉಪಯುಕ್ತವಾಗುವುದು. ಆಪ್ತವಾಕ್ಯವಾಗಿ ಯಥಾರ್ಥಜ್ಞಾನವನ್ನು ಹುಟ್ಟಿಸಲಿಕ್ಕೆ ಪ್ರಯೋಗಿಸಲ್ಪಡತಕ್ಕದಲ್ಲ. ಪ್ರತಿವಾದಿಯಲ್ಲಿ ಆಪ್ತಿನಿಶ್ಚಯವಿರಲಾರದು. ಆಪ್ತಿನಿಶ್ಚಯವಿದ್ದರೆ ಪ್ರತಿಜ್ಞೆಯಿಂದಲೇ ಆಕಾಂಕ್ಷೆಯು ಪೂರ್ತಿಯಾಗುವುದರಿಂದ ಹೇತ್ವಾದ್ಯವಯವಗಳಿಗೆ ವೈಯರ್ಥ್ಯವು ಬರುವುದು. ಅಂತೂ ವ್ಯಾಪ್ತ್ಯಾದಿಗಳುಳ್ಳ ಲಿಂಗದ ಸ್ಮೃತ್ಯಾದಿಗಳು ಎಷ್ಟರಿಂದ ಆಗುವುದೋ ಅಷ್ಟೇ ಪರೋಪದೇಶರೂಪವಾದ ವಾಕ್ಯವು ಆವಶ್ಯಕವಾಗಿದೆ ॥ ೧೧೩ ॥

**ವ್ಯಾಪ್ತ್ಯಾದಿಗಳುಳ್ಳ ಲಿಂಗದ ಸ್ಮರಣಾದಿಗಳು ಈ ಅವಯವಗಳಿಲ್ಲದೆ ಆಗದಿರುವುದರಿಂದ ಆ ಲಿಂಗಸ್ಮೃತ್ಯಾದಿಗಳಿಗಾಗಿ ಪಂಚಾವಯವಾದಿ ನಿಯಮವು ಉಪನ್ಯಾಸಮಾಡಲ್ಪಡುತ್ತದೆ,**

ಎಂದು ಹೇಳಕೂಡದು. ಪಂಚಾವಯವಾದಿ ನಿಯಮವನ್ನು ಬಿಟ್ಟೂ ವ್ಯಾಪ್ತ್ಯಾದಿಗಳುಳ್ಳ ಲಿಂಗದ ಸ್ಮೃತ್ಯಾದಿಗಳು ಹುಟ್ಟುತ್ತವೆ, ಎಂದು ನಿರೂಪಿಸುತ್ತಾರೆ—

**ಮೂ ॥ ಯುಕ್ತಿಃ ಪ್ರತಿಜ್ಞಾರೂಪಾ ಚ ಹೇತುದೃಷ್ಟಾಂತರೂಪಿಕಾ ।**
**ತಥೋಪನಯನರೂಪಾ ಚ ಪರಾ ನಿಗಮನಾತ್ಮಿಕಾ ॥ ೧೧೪ ॥**

ಅ ॥ ಯುಕ್ತಿಃ=ವ್ಯಾಪ್ತ್ಯಾದಿಗಳುಳ್ಳ ಲಿಂಗವು, ಪ್ರತಿಜ್ಞಾರೂಪಾ ಚ=ಪ್ರತಿಜ್ಞಾಸ್ವರೂಪವೂ ಆಗುವುದು. ಅಂದರೆ ಪ್ರತಿಜ್ಞೆಯೇ ಅಂತಹ ಲಿಂಗದ ಸ್ಮೃತ್ಯಾದಿಗಳನ್ನು ಹುಟ್ಟಿಸುತ್ತದೆ. ತಥಾ=ಹಾಗೆಯೇ, ಹೇತುದೃಷ್ಟಾಂತರೂಪಿಕಾ=ವ್ಯಾಪ್ತ್ಯಾದಿಗಳುಳ್ಳ ಲಿಂಗವಚನರೂಪವಾದ ಹೇತುವು ಅಂತಹ ಲಿಂಗದ ಸ್ಮೃತಿ ಜಿಜ್ಞಾಸೆಗಳನ್ನು ಹುಟ್ಟಿಸುತ್ತದೆ. ದೃಷ್ಟಾಂತ ವಚನವು ಲಿಂಗದ ಸ್ಮೃತ್ಯಾದಿಗಳನ್ನು ಹುಟ್ಟಿಸುತ್ತದೆ. ತಥಾ=ಹಾಗೆಯೇ, ಉಪನಯರೂಪಾ ಚ=ಉಪನಯವೂ ಲಿಂಗದ ಸ್ಮೃತ್ಯಾದಿಗಳನ್ನು ಹುಟ್ಟಿಸುತ್ತದೆ. ಪರಾ=ಇತರವಾದದ್ದು, ನಿಗಮನಾತ್ಮಿಕಾ=ಕೆಲವುವೇಳೆ ನಿಗಮನವೇ ಅನುಮಾನದ ಸ್ಮೃತ್ಯಾದಿಗಳಿಗೆ ಕಾರಣವಾಗುವುದು. ಅಥವಾ ಸರ್ವತ್ರ ರೂಪ ಆತ್ಮಶಬ್ದಗಳಿಗೆ ಸ್ವರೂಪವೆಂದು ಅರ್ಥವು. 'ಯುಕ್ತಿಃ' ಎನ್ನುವುದಕ್ಕೆ, ಆ ಲಿಂಗದ ಸ್ಮೃತ್ಯಾದಿಗಳಿಗೆ ಕಾರಣವೆಂದರ್ಥವು. ಅಂತೂ ಪ್ರತಿಜ್ಞಾರೂಪಾ ಚ=ಪ್ರತಿಜ್ಞಾಸ್ವರೂಪವಾದುದೂ, ಯುಕ್ತಿಃ=ಲಿಂಗಸ್ಮೃತ್ಯಾದಿಗಳಿಗೆ ಕಾರಣವು. ಹೀಗೆ ಎಲ್ಲಾ ಕಡೆಗಳಲ್ಲಿಯೂ ಇಟ್ಟುಕೊಳ್ಳಬೇಕು ॥ ೧೧೪ ॥

**ಮೂ ॥ ಪೃಥಕ್ಪೃಥಕ್ಪ್ರಮಾಣತ್ವಂ ಯಾತಿ ಯುಕ್ತಿತಯೈವ ತು ॥ ೧೧೫ ॥**

ಅ ॥ (ಪ್ರತಿಜ್ಞಾಮೊದಲಾದುದು) ಪೃಥಕ್ ಪೃಥಗೇವ=ಪ್ರತ್ಯೇಕ ಪ್ರತ್ಯೇಕವಾಗಿಯೇ, ಯುಕ್ತಿತಯಾ ತು=ಯುಕ್ತಿಸ್ಮರಣಾದಿಗಳಿಗೆ ಕಾರಣವಾಗಿಯೇ, ಪ್ರಮಾಣತ್ವಂ=ಉಪಯುಕ್ತತ್ವವನ್ನು, ಯಾತಿ=ಹೊಂದುತ್ತದೆ. ಮೇಲೆ ಹೇಳುವ ವಿಶೇಷವನ್ನು ತೋರಿಸುವುದಕ್ಕಾಗಿ ತು ಶಬ್ದವು.

ತಾ ॥ ಪರೋಪದೇಶರೂಪವಾದ ವಾಕ್ಯವು ಆಪ್ತವಾಕ್ಯವಾಗಿ ವ್ಯಾಪ್ತ್ಯಾದಿಮತ್ತಾದ ಲಿಂಗದ ಅನುಭವವನ್ನು ಹುಟ್ಟಿಸುವುದಾದರೆ ಅವಯವನಿಯಮವೂ ನಿಯತಾವಯವಗಳ ಕ್ರಮವೂ ಆಗಬಹುದು. ಇದಾದರೂ ಸ್ಮರಣಾದಿಗಳಿಗೆ ಕಾರಣವಾಗಿ ಉಪಯುಕ್ತವಾಗುವುದು. ಸ್ಮೃತಿಯು ಏಕದೇಶದಿಂದಲೇ ದೃಷ್ಟವಾದುದರಿಂದ ಪ್ರತಿಜ್ಞಾದಿಗಳು ಅನಾವಶ್ಯಕಗಳು. ಆದಕಾರಣ ಈ ನಿಯಮವು ವ್ಯರ್ಥವು ॥ ೧೧೫ ॥

ಪ್ರತಿಜ್ಞೆಯಲ್ಲಿ ಲಿಂಗವಾಗಲೀ ತದ್ಧರ್ಮಗಳಾದ ವ್ಯಾಪ್ತಿ ಪಕ್ಷಧರ್ಮತೆಗಳ ಪೈಕಿ ಯಾವುದಾದರೊಂದಾಗಲೀ ತೋರುವುದಿಲ್ಲ. ಆದಕಾರಣ ಪ್ರತಿಜ್ಞೆಯು ಅನುಮಾನದ ಸ್ಮೃತ್ಯಾದಿಗಳಿಗೆ ಕಾರಣವಾಗುವುದು ಹೇಗೆ ಎಂದಾಶಂಕಿಸಿದರೆ —

**ಮೂ ॥ ಪ್ರತಿಜ್ಞಾ ಹೇತುಗರ್ಭೈವ ಪೃಥಕ್ಪ್ರಾಮಾಣ್ಯಮೃಚ್ಛತಿ ॥ ೧೧೬ ॥**

ಅ ॥ ಹೇತುಗರ್ಭೈವ=ಹೇತ್ವರ್ಥವಾದ ಲಿಂಗವು (ಧೂಮವು) ವಿಶೇಷಣವಾಗಿ ಉಳ್ಳ ಧರ್ಮಿ (ಪರ್ವತ) ಯುಳ್ಳದ್ದೇ, ಪ್ರತಿಜ್ಞಾ=ಪ್ರತಿಜ್ಞೆಯು, (ಕೇವಲ ಪ್ರತಿಜ್ಞೆಯಲ್ಲ) ಪೃಥಕ್=ಬೇರೆ ಅವಯವಗಳನ್ನಪೇಕ್ಷಿಸದೆ, ಪ್ರಾಮಾಣ್ಯಂ=ಅನುಮಾನದ ಸ್ಮೃತ್ಯಾದಿಗಳ ಕಾರಣತ್ವವನ್ನು, ಋಚ್ಛತಿ=ಹೊಂದುವುದು.

ಕಾ ॥ (1) 'ಧೂಮವಾನ್ ಪರ್ವತೋಽಗ್ನಿಮಾನ್' ಇತ್ಯಾಕಾರವಾದ ಪ್ರತಿಜ್ಞೆಯೇ ವ್ಯಾಪ್ತ್ಯಾದಿಗಳುಳ್ಳ ಲಿಂಗದ ಸ್ಮೃತ್ಯಾದಿಗಳಿಗೆ ಕಾರಣವಾಗುವುದು. ಬರೀ 'ಪರ್ವತೋಽಗ್ನಿಮಾನ್' ಎಂಬೀ ಪ್ರತಿಜ್ಞೆಯು ಕಾರಣವಾಗಲಾರದು. (2) 'ಧೂಮವಾನ್ ಪರ್ವತೋಽಗ್ನಿಮಾನ್' ಧೂಮವುಳ್ಳ ಪರ್ವತವು ಬೆಂಕಿಯುಳ್ಳದ್ದು ಎಂದು ಹೇಳಲು ಕೇಳತಕ್ಕವನಿಗೆ ವಿಚಾರವು ಹುಟ್ಟುವುದು. ನಾನು 'ಪರ್ವತವು ಬೆಂಕಿಯುಳ್ಳದ್ದು' ಎನ್ನುವಲ್ಲಿ ಪ್ರಮಾಣಯಾವುದು ಎಂದು ಪ್ರಶ್ನಿಸಲು ಇವನು 'ಧೂಮವಾನ್ ಪರ್ವತೋ ವಹ್ನಿಮಾನ್' ಎಂದು ಹೇಳಿರುವನು. ಅದರಲ್ಲಿ 'ಪರ್ವತೋ ವಹ್ನಿಮಾನ್' ಎನ್ನುವುದು ಸಾಧ್ಯವಿಶಿಷ್ಟವಾದ ಧರ್ಮಿಯನ್ನು ಪ್ರತಿಪಾದಿಸುವುದು. ಅದಕಾರಣ ನಿಶ್ಚಯವಾಗಿಯೂ 'ಧೂಮವಾನ್' ಎನ್ನುವುದು ಪ್ರಮಾಣೋಕ್ತಿಯೇ ಸರಿ. ಇದು ಪ್ರತ್ಯಕ್ಷವಾಗಲೀ ಆಗಮವಾಗಲೀ ಅಲ್ಲ. ಆದುದರಿಂದ ಇದು ಲಿಂಗವೇ ಸರಿ, ಎಂದು ನಿಶ್ಚಯಿಸಿ ಅದರ ವ್ಯಾಪ್ತಿಪಕ್ಷಧರ್ಮತೆಗಳನ್ನು ಸ್ಮರಿಸುತ್ತಾನೆ; ಪಕ್ಷವೃತ್ತಿಯಾದ ಲಿಂಗದಲ್ಲಿರತಕ್ಕದ್ದೆಂದು ಅನುಸಂಧಾನಮಾಡಿಕೊಳ್ಳುತ್ತಾನೆ; ವ್ಯಾಪ್ತಿಯನ್ನು ಗೃಹಿಸದೆ ಇರುವವನಾದರೆ ತಿಳಿಯಲಿಚ್ಛಿಸುತ್ತಾನೆ. ಯಾವ ಬಾಧಕವೂ ಇರುವುದಿಲ್ಲ ॥ ೧೧೬ ॥

ಕೇವಲ ಲಿಂಗವು ಅನುಮಾನದ ಸ್ಮೃತ್ಯಾದಿಗಳಿಗೆ ಕಾರಣವು ಹೇಗೆ ಆಗುವುದು? ಸಾಧ್ಯಧರ್ಮವು ತೋರದಿರುವುದರಿಂದ ವ್ಯಾಪ್ತಿಯ ಸ್ಮರಣಾದಿಗಳು ಹುಟ್ಟಲಾರವು. ಧರ್ಮಿಯು ತೋರದಿರುವುದರಿಂದ ಪಕ್ಷಧರ್ಮತೆಯ ಸ್ಮರಣಾದಿಗಳು ಹುಟ್ಟಲಾರವು. ಎಂದಾಶಂಕಿಸಿದರೆ—

**ಮೂ ॥ ಸಿದ್ಧತ್ವೇನ ಪ್ರತಿಜ್ಞಾಯಾ ಹೇತುರ್ಮಾನಂ ಪೃಥಗ್ಭವೇತ್ ॥ ೧೧೭ ॥**

ಅ ॥ ಪ್ರತಿಜ್ಞಾಯಾಃ = ಪ್ರತಿಜ್ಞಾರ್ಥವಾದ ಸಾಧ್ಯದಿಂದೊಡಗೂಡಿದ ಧರ್ಮಿಗೆ, (ವಿವಾದದಿಂದಾಗಲೀ, ಪರ್ವತಕ್ಕೆ ಅಗ್ನಿಮತ್ವವು ಯಾವ ಪ್ರಮಾಣದಿಂದ? ಇವುಮೊದಲಾದ ಪ್ರಶ್ನವಾಕ್ಯಗಳಿಂದಾಗಲೀ) ಸಿದ್ಧತ್ವೇನ = ಸಿದ್ಧಿಯಿದ್ದುದರಿಂದ, ಅಂದರೆ ಅಂತಹ ಧರ್ಮಿಯು ಬುದ್ಧಿಯಲ್ಲಿದ್ದಕಾರಣ, ಹೇತುಃ = ಲಿಂಗವು, ಪೃಥಕ್ = ಬೇರೆಯಾಗಿಯೇ, ಮಾನಂ = ಅನುಮಾನದ ಸ್ಮೃತ್ಯಾದಿಗಳಿಗೆ ಕಾರಣವು, ಭವೇತ್ = ಆಗುವುದು, ಅಂದರೆ ವ್ಯಾಪ್ತ್ಯಾದಿಗಳುಳ್ಳ ಲಿಂಗದ ಸ್ಮೃತ್ಯಾದಿಗಳನ್ನು ಹುಟ್ಟಿಸುವುದರಿಂದ ಉಪಯುಕ್ತವಾಗುವುದು ॥ ೧೧೭ ॥

ಲಿಂಗ ಧರ್ಮಿ ಮೊದಲಾದುವುಗಳಲ್ಲಿ ಒಂದೂ ತೋರದಿರುವುದರಿಂದ ಕೇವಲ ದೃಷ್ಟಾಂತವಚನವು ಅನುಮಾನದ ಸ್ಮೃತ್ಯಾದಿಗಳಿಗೆ ಕಾರಣವಾಗುವುದು ಹೇಗೆ? ಎಂದಾಶಂಕಿಸಿದರೆ —

**ಮೂ ॥ ಪ್ರತಿಜ್ಞಾವಯವತ್ವಾತ್ತು ಸ್ವಾತಂತ್ರ್ಯೇಣೈವ ಮಾನತಾಂ ।**
**ದೃಷ್ಟಾಂತೋ ಯಾತಿ ॥ ೧೧೮ ॥**

ಅ ॥ ಪ್ರತಿಜ್ಞಾವಯವತ್ವಾತ್ತು = ಪ್ರತಿಜ್ಞೆಯೇ ಸಹಕಾರಿಕಾರಣವಾಗಿ ಉಳ್ಳದ್ದರಿಂದ, ದೃಷ್ಟಾಂತಃ = ದೃಷ್ಟಾಂತವು, ಸ್ವಾತಂತ್ರ್ಯೇಣೈವ = ಪರಾಪೇಕ್ಷೆಯಿಲ್ಲದೇನೇ, ಮಾನತಾಂ = ಲಿಂಗಸ್ಮೃತ್ಯಾದಿ ಕಾರಣತ್ವವನ್ನು, ಯಾತಿ = ಹೊಂದುತ್ತದೆ. (ಪ್ರತಿಜ್ಞಾರ್ಥವು ವಿವಾದಾದಿಗಳಿಂದಾಗಲೀ, 'ಪರ್ವತೋಽಗ್ನಿಮಾನ್' ಎಂಬೀ ವಚನದಿಂದಾಗಲೀ ಸಿದ್ಧವಾಗಿದೆ. 'ತು' ಶಬ್ದಕ್ಕೆ 'ಚ' ಶಬ್ದಾರ್ಥವು. ಇದರಿಂದ ಹೇತುವು ಗರ್ಭೀಕೃತವಾಗಿರಬೇಕು ಎಂದು ಸಿದ್ಧವಾಯಿತು. 'ಧೂಮವನ್ಮಹಾನಸವತ್' ಎಂದು ಅದರ ಆಕಾರವು. ಇಲ್ಲದಿದ್ದರೆ, ಹೇತುವೇ ತೋರದಿದ್ದರೆ ಪ್ರತಿಜ್ಞೆಯೇ ವ್ಯರ್ಥವಾಗುವುದು ॥ ೧೧೮ ॥

ಲಿಂಗವು ಪಕ್ಷಧರ್ಮತೆಯೂ (ಹೇತುವು ಪಕ್ಷದಲ್ಲಿರುವುದು) ಪ್ರತೀತವಾದರೂ ಸಾಧ್ಯವು ತೋರದಿರುವುದರಿಂದ ವ್ಯಾಪ್ತಿಸ್ಮೃತ್ಯಾದಿಗಳು ಕೂಡಲಾರವು. ಆದಕಾರಣ ಕೇವಲ ಉಪನಯವು ಅನುಮಾನದ ಸ್ಮೃತ್ಯಾದಿಗಳಿಗೆ ಕಾರಣವಾಗುವುದು ಹೇಗೆ? ಎಂದಾಶಂಕಿಸಿದರೆ —

**ಮೂ || ಉಪನಯೋ ವ್ಯಾಪ್ತಿಮಾಶ್ರಿತ್ಯ ಕೇವಲಂ || ೧೧೯ ||**

ಅ || ಉಪನಯಃ=ಉಪನಯವು, ವ್ಯಾಪ್ತಿಂ=ವ್ಯಾಪ್ತಿವಚನವನ್ನು, ಕೇವಲಂ ಆಶ್ರಿತ್ಯ= ಕೇವಲವಾಗಿ ಆಶ್ರಯಿಸಿ, (ದೃಷ್ಟಾಂತೋಕ್ತಿಯನ್ನಪೇಕ್ಷಿಸದೆ) ಮಾನತಾಂ=ಪ್ರಾಮಾಣ್ಯವನ್ನು, ಯಾತಿ=ಹೊಂದುತ್ತದೆ. ('ಯೋ ಧೂಮವಾನ್ ಅಸೌ ಅಗ್ನಿಮಾನ್ ಧೂಮವಾಂಶ್ಚಾಯಂ ಪರ್ವತಃ' ಎಂದು ಆಕಾರವು.) || ೧೧೯ ||

**ಮೂ || ವ್ಯಾಪ್ತಿಸ್ತು ಕೇವಲಾಽಪಿ ಸ್ಯಾತ್ಪ್ರಮಾಣಂ ನಿಯಮಾಶ್ರಯಾತ್ ||೧೨೦||**

ಅ || ತು=ಪರ್ವತವು ಅಗ್ನಿಯುಳ್ಳದ್ದೆನ್ನುವುದು ಯಾವ ಪ್ರಮಾಣದಿಂದ ಎಂಬೀ ಪ್ರಶ್ನವಾಕ್ಯದಿಂದ ಪ್ರತಿಜ್ಞಾರ್ಥವು ಸಿದ್ಧಿಯಾಗುವಾಗ, ಕೇವಲಾಽಪಿ ವ್ಯಾಪ್ತಿಃ = ಕೇವಲ ವ್ಯಾಪ್ತಿಯೇ, ನಿಯಮಾಶ್ರಯಾತ್='ಯೋ ಧೂಮವಾನ್ ಅಸೌ ಅಗ್ನಿಮಾನ್' ಎಂಬೀ ನಿಯಮ ದಿಂದ, ಇವು ಮೊದಲಾದ ವಚನಗಳನ್ನು ಆಶ್ರಯಿಸಿರುವ ಪ್ರಯುಕ್ತ, ಪ್ರಮಾಣಂ=ಪ್ರಮಾಣವು, (ವ್ಯಾಪ್ತ್ಯಾದಿಗಳುಳ್ಳ ಲಿಂಗಕ್ಕೆ ಸ್ಮಾರಕವಾಗಿ ಇತ್ಯಾದಿಗಳಿಂದ ಉಪಯುಕ್ತವು.) ಸ್ಯಾತ್= ಆಗುವುದು || ೧೨೦ ||

ನಿಗಮವು ವ್ಯಾಪ್ತ್ಯಾದಿಗಳುಳ್ಳ ಲಿಂಗದ ಸ್ಮೃತಿಯನ್ನೂ, ಜಿಜ್ಞಾಸವನ್ನೂ ಹುಟ್ಟಿಸುತ್ತದೆ. ಇವುಮೊದಲಾದುವು ಸ್ಪಷ್ಟವಾಗಿಯೇ ತೋರುತ್ತವೆ. ಎಂದು ನಿರೂಪಿಸುತ್ತಾರೆ.

**ಮೂ || ತಥಾ ನಿಗಮನಂ ಚೋಪಸಂಹಾರೈಕಸ್ವರೂಪತಃ | ಪ್ರಾಮಾಣ್ಯಂ ಯಾತಿ || ೧೨೧ ||**

ಅ || ತಥಾ=ಹಾಗೆಯೇ, (ಐದು ಅವಯವಗಳುಳ್ಳ ವಾಕ್ಯವನ್ನು ಪ್ರಯೋಗಿಸಿದರೆ ಹೇಗೆ ವ್ಯಾಪ್ತ್ಯಾದಿಗಳುಳ್ಳ ಲಿಂಗದ ಸ್ಮೃತ್ಯಾದಿಗಳು ಆಗುತ್ತವೋ, ಹಾಗೆಯೇ) ನಿಗಮನಂ= ಅಗ್ನಿಯಿಂದ ವ್ಯಾಪ್ತವಾದ ಧೂಮವು ಪರ್ವತದಲ್ಲಿದ್ದುದರಿಂದ ಪರ್ವತವು ಅಗ್ನಿಯುಳ್ಳದ್ದು ಇದು ಮೊದಲಾದ ಸ್ವರೂಪವುಳ್ಳ ವಾಕ್ಯವು, ಉಪಸಂಹಾರೈಕಸ್ವರೂಪತಃ=ಉಪಸಂಹಾರವೇ ಮುಖ್ಯ ಸ್ವರೂಪವಾಗಿದ್ದುದರಿಂದ, (ಐದು ಅವಯವಗಳ ಅರ್ಥವನ್ನು ಸಂಗ್ರಹಿಸುವುದರಿಂದ) ಪ್ರಾಮಾ ಣ್ಯಂ=ಯಾಥಾರ್ಥ್ಯವನ್ನು, ಯಾತಿ=ಹೊಂದುತ್ತದೆ || ೧೨೧ ||

ಹಿಂದೆ ಹೇಳಿದ ಕೇವಲ ಪ್ರತಿಜ್ಞಾದಿಗಳು ಸ್ಮೃತ್ಯಾದಿಗಳಿಗೆ ಕಾರಣವಾಗುವುದೆಂದು ಯಾವ ಪ್ರಮಾಣದಿಂದ ಸಿದ್ಧವಾಗುವುದೆಂದು ಶಂಕಿಸಿದರೆ — ಪಂಚಾವಯವವುಳ್ಳ ಮಹಾವಾಕ್ಯಕ್ಕೂ ಯಾವ ಪ್ರಮಾಣದಿಂದ ಎಂದು ಹೇಳುವೆವು. ಸ್ಮರಣಾದಿಗಳು ಪಂಚಾವಯವಪ್ರಯೋಗಾ ನಂತರದಲ್ಲಿ ಹುಟ್ಟುವುದು ಅನುಭೂತವಾಗಿರುವಪ್ರಯುಕ್ತ ಎಂದರೆ, ಇದು ಇಲ್ಲಿಯೂ ಸಮಾ ನವೇ ಆಗಿದೆ ಎಂದು ನಿರೂಪಿಸುತ್ತಾರೆ—

**ಮೂ || ಅನುಭವೋ ಜ್ಞಾಪಯತ್ಯುಪಪತ್ತಿತಾಂ || ೧೨೨ ||**

ಅ ॥ ಅನುಭವಃ=ಅನುಭವವು, (ಹೇತುಗರ್ಭ ಪ್ರತಿಜ್ಞಾದಿಗಳಿಗೆ) ಉಪಪತ್ತಿತಾಂ=ವ್ಯಾಪ್ತ್ಯಾದಿಗಳುಳ್ಳ ಲಿಂಗದ ಸ್ಮೃತಿಯನ್ನು ಹುಟ್ಟಿಸುವಿಕೆ, ತಿಳಿಯಬೇಕೆಂದು ಇಚ್ಛೆಯನ್ನು ಹುಟ್ಟಿಸುವಿಕೆ ಇತ್ಯಾದಿಗಳನ್ನು, ಜ್ಞಾಪಯತಿ=ತಿಳಿಸಿಕೊಡುತ್ತದೆ ॥ ೧೨೨ ॥

ಅನುಮಾನ ನಿರೂಪಣವು ಸಮಾಪ್ತವಾಯಿತು.

---

ಹೀಗೆ ನಿರ್ದೋಷೋಪಪತ್ತಿರೂಪವಾದ ಅನುಮಾನವನ್ನು ನಿರೂಪಿಸಿದರು. ಆದರೆ ನಿರ್ದೋಷತ್ವಜ್ಞಾನ ಬರಬೇಕಾದರೆ ದೋಷಗಳ ನಿರೂಪಣವು ಆವಶ್ಯಕವಾದ ಕಾರಣ ಆ ಉಪಪತ್ತಿದೋಷಗಳನ್ನು ನಿರೂಪಿಸುತ್ತಾರೆ —

ಮೂ ॥ ವಿರೋಧಶ್ಚ ತಥಾಽಧಿಕ್ಯಂ ನ್ಯೂನತಾಽಸಂಗತಿಸ್ತಥಾ । ಉಪಪತ್ತಿದೋಷಾ ವಿಜ್ಞೇಯಾಃ ವಿರೋಧಶ್ಚ ಸ್ವತೋಽನ್ಯತಃ ॥ ೧೨೩ ॥

ಅ ॥ ವಿರೋಧಶ್ಚ=ಯೋಗ್ಯತೆ(ಪರಸ್ಪರ ಅನ್ವಯ)ಇಲ್ಲದಿರುವುದು, ತಥಾ=ಹಾಗೆಯೇ, ಆಧಿಕ್ಯಂ=ಆಕಾಂಕ್ಷಾ ಪೂರ್ತಿಯಿರುವಾಗ ಹೆಚ್ಚು ಇರುವುದು, ನ್ಯೂನತಾ=ವಿವಕ್ಷಿತವಾದ ಅರ್ಥವು ಸಂಪೂರ್ತಿಯಿಲ್ಲದಿರುವುದು, ತಥಾ=ಹಾಗೆಯೇ, ಅಸಂಗತಿಃ=ಪದಗಳಿಗೆ ಪರಸ್ಪರವಾಗಿ ಆಕಾಂಕ್ಷೆಯಿಲ್ಲದಿರುವುದು, ಹೀಗೆ, ಉಪಪತ್ತಿದೋಷಾಃ=ಉಪಪತ್ತಿದೋಷಗಳು, ವಿಜ್ಞೇಯಾಃ=ತಿಳಿಯಲ್ಪಡಬೇಕು, ವಿರೋಧಶ್ಚ=ವಿರೋಧವಾದರೂ, ಸ್ವತಃ=ಸ್ವತಃ ವಿರೋಧವು, ಅನ್ಯತಃ=ಇತರದಿಂದ, (ಪ್ರಮಾಣಾಂತರದಿಂದ) ವಿರೋಧವು, ಹೀಗೆ ೨ ವಿಧವು

ತಾ ॥ ಅವುಗಳಲ್ಲಿ ವಿರೋಧ, ಅಸಂಗತಿಗಳು ಅರ್ಥದೋಷಗಳು, ಅರ್ಥವು ದುಷ್ಟವಾದರೆ ಅದನ್ನು ಪ್ರತಿಪಾದಿಸುವ ಶಬ್ದವೂ ದುಷ್ಟವಾದುದರಿಂದ ಶಬ್ದದೋಷಗಳೂ ಆಗುವುವು. (2) ನ್ಯೂನತಾ ಆಧಿಕ್ಯಗಳು ವಚನದೋಷಗಳು. ತದ್ವಾರಾ ವಚನವು ದುಷ್ಟವಾದರೆ ಅದರಿಂದ ಪ್ರತಿಪಾದಿಸಲ್ಪಟ್ಟ ಅರ್ಥವೂ ದುಷ್ಟವಾದಪ್ರಯುಕ್ತ ಅರ್ಥದೋಷಗಳೂ ಆಗುವುವು. (3) ವಚನದ್ವಾರಾ ಅರ್ಥವೂ ದುಷ್ಟವಾದ ಪ್ರಯುಕ್ತವೇ 'ಯುಕ್ತಿಃ ಪ್ರತಿಜ್ಞಾರೂಪಾ ಚ' 'ತ್ರಿಯಾದ್ಯವಯವಾತ್ಮಿಕಾಂ' ಇತ್ಯಾದಿಗಳಿಂದ ವ್ಯಾಪ್ತ್ಯಾದಿಗಳುಳ್ಳ ಲಿಂಗ ಪರೋಪದೇಶರೂಪ ಅರ್ಥಶಬ್ದ ಸ್ವರೂಪದಿಂದ ಪರಾರ್ಥಾನುಮಾನವನ್ನು ವಿಭಾಗಮಾಡುವ ಪ್ರಸ್ತಾವದಲ್ಲಿ ಅರ್ಥಶಬ್ದ ಸ್ವರೂಪವಾದ ಅನುಮಾನದ ದೋಷವನ್ನು ಹೇಳುವುದು ಸಂಗತವೇ ಸರಿ. (4) ಪರರು ಹೇಳುವ ಬಾಧ ಮೊದಲಾದ ಅನುಮಾನ ದೋಷಗಳೂ ಈ ವಿರೋಧಾದಿಗಳಲ್ಲಿಯೇ ಅಂತರ್ಭೂತಗಳಾಗುತ್ತವೆ (5) ಸ್ವತಃ ವಿರೋಧವು, (೧) ಸ್ವವಚನವಿರೋಧ, (೨) ಸ್ವಕ್ರಿಯಾವಿರೋಧ, (೩) ಸ್ವನ್ಯಾಯ ವಿರೋಧ, (೪) ಸ್ವಾಭ್ಯುಪಗಮವಿರೋಧ ಎಂದು (೪) ನಾಲ್ಕು ವಿಧವು. ಹೀಗೆಯೇ ಹೇತು ವಿಭಾಗಾದಿಗಳನ್ನೂ ಊಹಿಸಬೇಕು. ಇವುಗಳ ಲಕ್ಷಣ ವಿಭಾಗಾದಿಗಳನ್ನು ಪ್ರಮಾಣಲಕ್ಷಣ ಪುಟ ೪೩-೪೪ರಲ್ಲಿ ತಿಳಿಯಬೇಕು ॥ ೧೨೩ ॥

ಹೀಗೆ ವಿಭಾಗಮಾಡೋಣ ಪ್ರತಿಜ್ಞಾವಿರೋಧದ ಪ್ರಭೇದವಾದ ಸ್ವವಾಕ್ಯ ವಿರೋಧದಲ್ಲಿ ಜಾತಿಗೆ ಅಂತರ್ಭಾವವು ಸಿದ್ಧವಾಯಿತೆಂದು ಸೂಚಿಸುವುದಕ್ಕೋಸ್ಕರ ಜಾತಿಸ್ವರೂಪವನ್ನು ನಿರೂಪಿಸುತ್ತಾರೆ —

ಮೂ ॥ ಜನಕಸ್ಯಾತ್ಮಯೋ ಜಾತಿಃ ಸ್ವಸ್ಯ ವಾಽನ್ಯಸ್ಯ ವಾ ಭವೇತ್ । ಜನಕಂ ಪ್ರಮಾಣಮುದ್ದಿಷ್ಟಂ ಸ್ವಸ್ಯಾರ್ಥಸ್ಯ ಪ್ರಕಾಶನಾತ್ ॥ ೧೨೪ ॥

ಅ || ಸ್ವಸ್ಯ ವಾ ಜನಕಸ್ಯ=ಸ್ವಾಖ್ಯವಾದ ಜನಕ (ತಿಳಿಸತಕ್ಕದು)ಕ್ಕೆ, ಅನ್ಯಸ್ಯ ವಾ ಜನಕಸ್ಯ=ಅನ್ಯರೂಪವಾದ ಜನಕ (ತಿಳಿಸತಕ್ಕದು)ಕ್ಕೆ, ಅತ್ಯಯಃ=ಅತಿಕ್ರಮವು (ವಿರೋಧವು) ಜಾತಿಃ=ಜಾತಿಯು, ಭವೇತ್=ಆಗುವುದು, ಸ್ವಸ್ಯ ಅರ್ಥಸ್ಯ ಪ್ರಕಾಶನಾತ್=ಯಾವ ವಾಕ್ಯಕ್ಕೆ ವಿರೋಧವು ಹೇಳಲ್ಪಡುತ್ತದೋ, ಅಂತಹ ವಾಕ್ಯದ ವಿಷಯವನ್ನು ಪ್ರತಿಪಾದಿಸುವುದರಿಂದ, ಜನಕಂ=ಜ್ಞಾಪಕವಾದ ವಾಕ್ಯವು, ಪ್ರಮಾಣಂ=ಪ್ರಮಾಣವೆಂದು, ಉದ್ದಿಷ್ಟಂ=ಔಪಚಾರಿಕವಾಗಿ ಹೇಳಲ್ಪಡುತ್ತದೆ.

ತಾ || ಜ=ಜ್ಞಾಪಕವಾದ ಸ್ವಾಖ್ಯವಾದ ಸ್ವವಚನದಿಂದ, ಸ್ವಕ್ರಿಯಾ ಸ್ವನ್ಯಾಯರೂಪ ಗಳಾದ ಅನ್ಯರೂಪ ಜ್ಞಾಪಕಗಳಿಂದಾಗಲೀ, (ವಾಕ್ಯಕ್ಕೆ) ಅತಿಃ—ಅತಿಕ್ರಮವು, (ವಿರೋಧವು) ಜಾತಿಯು ಎಂದುಕ್ತವಾಯಿತು. ಅಂತೂ ಸ್ವವ್ಯಾಹತಿಯು ಜಾತಿಯು. ಆ ಜಾತಿಯು ಸ್ವವಚನ ವಿರೋಧ, ಸ್ವಕ್ರಿಯಾವಿರೋಧ, ಸ್ವನ್ಯಾಯವಿರೋಧ ಹೀಗೆ ೩ ವಿಧವು. ಪ್ರತಿಜ್ಞಾವಿರೋಧ ಪ್ರಭೇದರೂಪವಾದ ಸ್ವವಾಕ್ಯವಿರೋಧದಲ್ಲಿ ಜಾತಿಗೆ ಅಂತರ್ಭಾವವು ಸೂಚಿಸಲ್ಪಟ್ಟಿತು. ಹೀಗೆಯೇ ಹೇತ್ವಾಭಾಸಗಳಿಗೂ ಅಂತರ್ಭಾವವನ್ನು ತಿಳಿದುಕೊಳ್ಳಬೇಕು. ಈ ವಿಷಯ ಗಳೆಲ್ಲವೂ ಪ್ರಮಾಣಲಕ್ಷಣ ಪು. ೪೩–೪೪–೪೫ರಲ್ಲಿ ವಿಶದೀಕರಿಸಲ್ಪಟ್ಟಿದೆ || ೧೨೪ ||

ಅನುಮಾನ ದೋಷಗಳು ಮಾತ್ರ ವಿರೋಧಾದಿಗಳಲ್ಲಿ ಸೇರುವುದಲ್ಲ. ಪರರು ಹೇಳಿರುವ ಎಲ್ಲಾ ನಿಗ್ರಹ ಸ್ಥಾನಗಳೂ ಇವುಗಳಲ್ಲಿಯೇ ಸೇರುತ್ತವೆ ಎಂದು ನಿರೂಪಿಸುತ್ತಾರೆ —

**ಮೂ || ನಿಗ್ರಹಾ ಏತ ಏವ ಸ್ಯುಃ ಸಂವಾದಾನುಕ್ತಿಸಂಯುತಾಃ || ೧೨೫ ||**

ಅ || ಸಂವಾದಾನುಕ್ತಿಸಂಯುತಾಃ=ಸಂವಾದ ಅನುಕ್ತಿಗಳಿಂದೊಡಗೂಡಿದ, ಏತ ಏವ= ಈ ವಿರೋಧಾದಿಗಳೇ, ನಿಗ್ರಹಾಃ=ನಿಗ್ರಹಸ್ಥಾನಗಳು, (ಪರರ ಪರಾಜಯಕ್ಕೆ ಕಾರಣಗಳು,) ಸ್ಯುಃ=ಆಗುವುವು.

ತಾ || ವಿಪ್ರತಿಪನ್ನವಾದ ಪ್ರಮೇಯವನ್ನು ಅಂಗೀಕರಿಸುವುದು ಸಂವಾದವು. ಸುಮ್ಮನೆ ಕೂತುಕೊಳ್ಳುವುದು ಅನುಕ್ತಿಯು. ಪ್ರತಿಜ್ಞಾಹಾನಿ ಮೊದಲಾದ ವಕ್ತೃದೋಷಗಳಿಗೆ ವಕ್ತೃ (ಪುರುಷ) ದೋಷಗಳಾದ ಸಂವಾದ ಅನುಕ್ತಿಗಳಲ್ಲಿ ಅಂತರ್ಭಾವವು. ಅಂತೂ ೨ ಅರ್ಥ ದೋಷಗಳು, ೨ ಶಬ್ದದೋಷಗಳು, ೨ ಪುರುಷದೋಷಗಳು ಹೀಗೆ ೬ ದೋಷಗಳು. ಪರೋಕ್ತ ಗಳಾದ ಎಲ್ಲಾ ಶಬ್ದ ಅರ್ಥಪುರುಷದೋಷಗಳಿಗೆ ಈ ೬ ದೋಷಗಳಲ್ಲಿಯೇ ಅಂತರ್ಭಾವವು||೧೨೫||

**ಯುಕ್ತಿದೋಷಗಳು ನಿರೂಪಿಸಲ್ಪಟ್ಟವು**

---

ಅರ್ಥಾಪತ್ತಿ ಮೊದಲಾದ ಅನೇಕ ಪ್ರಮಾಣಗಳು ಇದ್ದುದರಿಂದ ಅವುಗಳನ್ನು ಏಕೆ ನಿರೂಪಿಸಲಿಲ್ಲವೆಂದರೆ — ಅವುಗಳು ನಾವು ಹೇಳಿದ ಮೂರು ಪ್ರಮಾಣಗಳಲ್ಲಿಯೇ ಅಂತರ್ಭೂತ ಗಳಾಗಿವೆ ಎಂದು ಹೇಳಲಿಕ್ಕೆ ಸ್ವರೂಪವನ್ನು ತಿಳಿಯದೆ ಅಂತರ್ಭಾವವನ್ನು ತಿಳಿಯಲು ಸಾಧ್ಯವಿಲ್ಲ. ಆದಕಾರಣ ಆ ಅರ್ಥಾಪತ್ತ್ಯಾದಿಗಳ ಸ್ವರೂಪವನ್ನು ತೋರಿಸುತ್ತಾರೆ —

**ಮೂ || ಅರ್ಥತಃ ಪ್ರಾಪ್ತಿರೇವಾರ್ಥಾಪತ್ತಿರಿತ್ಯಭಿಧೀಯತೇ || ೧೨೬ ||**

ಅ || ಅರ್ಥತಃ = ಅನುಪಪದ್ಯಮಾನವಾದ ಅರ್ಥವನ್ನು ನೋಡಿ, ಪ್ರಾಪ್ತಿರೇವ = ಅದನ್ನುಪಪಾದಿಸುವ ಅರ್ಥಾಂತರದ ಪ್ರಮಿತಿಯೇ, ಅರ್ಥಾಪತ್ತಿರಿತಿ=ಅರ್ಥಾಪತ್ತಿಯೆಂದು, ಅಭಿಧೀಯತೇ=ಹೇಳಲ್ಪಡುತ್ತದೆ.

ತಾ ॥ (1) ಅರ್ಥಾಪತ್ತಿಗೆ ಇದೇ ಲಕ್ಷಣವು. ಬೇರೆ ಲಕ್ಷಣವಲ್ಲವೆಂದು ಸೂಚಿಸುವುದಕ್ಕಾಗಿ 'ಏವ'ಶಬ್ದವು. (2) ಇದಕ್ಕೆ ಉದಾ- ಜೀವಿಸುತ್ತಿರುವ ಚೈತ್ರನು ಮನೆಯಲ್ಲಿಲ್ಲವೆಂದು ತಿಳಿಯಲು ಹೊರಗೆ ಇದ್ದಾನೆನ್ನುವ ಜ್ಞಾನವು ॥ ೧೨೬ ॥

ಮೂ ॥ ದೃಷ್ಟ್ವಾ ಸದೃಶಮೇವಾನ್ಯಂ ಪೂರ್ವದೃಷ್ಟೇ ತು ವಸ್ತುನಿ ।
ಏತತ್ಸದೃಶತಾಜ್ಞಾನಮುಪಮಾನಂ ಪ್ರಕೀರ್ತಿತಂ ॥ ೧೨೭ ॥

ಅ ॥ (ಪಟ್ಟಣದಲ್ಲಿ ಗೋವನ್ನು ಕಂಡ ಪುರುಷನಿಗೆ ಕಾಡಿನಲ್ಲಿ) ಸದೃಶಮೇವ=ಅದಕ್ಕೆ ಸಮಾನವೇ ಆದ, ಅನ್ಯಂ=ಬೇರೆ ಗವಯುವನ್ನು, ದೃಷ್ಟ್ವಾ=ನೋಡಿ, ಪೂರ್ವದೃಷ್ಟೇ ತು=ಮೊದಲು ಕಾಣಲ್ಪಟ್ಟ ಈಗ ಸ್ಮೃತಿ ವಿಷಯವಾದ, ವಸ್ತುನಿ=ಪಟ್ಟಣದಲ್ಲಿದ್ದ ಗೋವಿನಲ್ಲಿ, ಏತತ್ಸದೃಶತಾಜ್ಞಾನಂ=ಯಾವುದು ಈ ಗವಯು ಸಾದೃಶ್ಯಜ್ಞಾನವು, (ಹುಟ್ಟುತ್ತದೋ, ಅದೇ) ಉಪಮಾನಂ=ಉಪಮಾನವೆಂದು, ಪ್ರಕೀರ್ತಿತಂ=ಜ್ಞಾನಿಗಳಿಂದ ಹೇಳಲ್ಪಡುತ್ತದೆ.

ತಾ ॥ ಅಂತರ್ಭಾವ ಹೇಳುವುದು ಸುಕರವಾಗಿದೆ ಎಂದು ಸೂಚಿಸುವುದಕ್ಕಾಗಿ 'ಏವ' ಶಬ್ದವು. ಇವುಗಳು ಸದೃಶಗಳು. ಗೋವಿಗೆ ಸಮಾನವು ಗವಯುವು ಎಂದಾಗಲೀ ಸಾದೃಶ್ಯ ಜ್ಞಾನವು ಹುಟ್ಟಿದರೆ ಇದು ಪ್ರತ್ಯಕ್ಷವೇ. 'ಗೋವಿಗೆ ಸಮಾನವು ಗವಯುವವು' ಎಂದು ವಾಕ್ಯವನ್ನು ಕೇಳಿದ ಮೇಲೆ ಸಾದೃಶ್ಯಜ್ಞಾನ ಬಂದರೆ ಇದು ಆಗಮಜನ್ಯವಾಯಿತು. ಇವುಗಳು ಪ್ರತ್ಯಕ್ಷಾದಿಗಳು, ಎಂಬುವ ವಿಷಯದಲ್ಲಿ ಸಂಶಯವೇ ಇಲ್ಲದಿರುವುದರಿಂದ ಇವುಗಳನ್ನು ವ್ಯಾವರ್ತಿಸುವುದಕ್ಕಾಗಿ 'ಏವ'ಶಬ್ದವು ॥ ೧೨೭ ॥

ಅಭಾವ ಪ್ರಮಿತಿಗೆ ಸಾಧನವಾದುದು ಅಭಾವಪ್ರಮಾಣವು. ಅದಕ್ಕೆ ಅಂತರ್ಭಾವವನ್ನು ಹೇಳಲಿಕ್ಕೆ ಸುಲಭವಾಗುವುದಕ್ಕಾಗಿ ವಿಭಾಗದಿಂದ ನಿರೂಪಿಸುತ್ತಾರೆ —

ಮೂ ॥ ಅಭಾವಸ್ಯ ಪರಿಜ್ಞಾನಂ ದ್ವಿವಿಧಂ ಸಮುದಾಹೃತಂ । ಏಕಂ ತತ್ರಾನುಭವತೋ ಯೋಗ್ಯಸ್ಯಾನುಪಲಬ್ಧಿತಃ ॥ ದ್ವಿತೀಯಮಪಿ ವಿಜ್ಞೇಯಂ ಸುಖಾದ್ಯೇ ಚ ಘಟಾದಿಕೇ ॥ ೧೨೮ ॥

ಅ ॥ ಅಭಾವಸ್ಯ=ಅಭಾವದ, ಪರಿಜ್ಞಾನಂ=ಜ್ಞಾನವು, ದ್ವಿವಿಧಂ=ಎರಡುಪ್ರಕಾರವುಳ್ಳ ಸಾಧನಗಳಿಂದ ಜನ್ಯವಾಗಿ, ಸಮುದಾಹೃತಂ=ಹೇಳಲ್ಪಟ್ಟಿದೆ. ತತ್ರ=ಅವುಗಳಲ್ಲಿ, ಏಕಂ=ಸುಖಾದ್ಯಭಾವಜ್ಞಾನವು,ಅನುಭವತಃ=ಅನುಭವಾಖ್ಯವಾದ ಸ್ವರೂಪೇಂದ್ರಿಯದಿಂದ,(ಜಾಯತೇ=ಅಭಿವ್ಯಕ್ತವಾಗುತ್ತದೆ.) ದ್ವಿತೀಯಮಪಿ=ಘಟಾದ್ಯಭಾವ ಜ್ಞಾನವು, ಯೋಗ್ಯಸ್ಯ=ಸಾಕ್ಷಾತ್ಕಾರ ಯೋಗ್ಯವಾದುದಕ್ಕೆ, ಅನುಪಲಬ್ಧಿತಃ=ಅನುಪಲಬ್ಧಿರೂಪವಾದ ಕರಣದಿಂದ, (ಜಾಯತೇ=ಹುಟ್ಟುತ್ತದೆ ಎಂದು,) ವಿಜ್ಞೇಯಂ=ತಿಳಿಯತಕ್ಕದು. (ಉದಾ-) ಸುಖಾದ್ಯೇ ಚ=ಸುಖವೇ ಮೊದಲಾದ ಸಾಕ್ಷಿವೇದ್ಯವಾದ ವಸ್ತುವು, (ಪ್ರತಿಯೋಗಿಯಾಗಿರಲು ಈಗ ನನಗೆ ಸುಖವಿಲ್ಲ ಇದು ಮೊದಲಾದ ಯಾವುದೊಂದು ಅಭಾವಜ್ಞಾನವು ಹುಟ್ಟುತ್ತದೋ, ಅದು ಸಾಕ್ಷಿವಿಷಯವು, ಅಂದರೆ— ಸಾಕ್ಷಿರೂಪವು.) ಘಟಾದಿಕೇ=ಘಟ ಪಟ ಮೊದಲಾದ ಚಕ್ಷುರಾದಿಗಳಿಂದ ವೇದ್ಯವಾದ ವಸ್ತುವು, (ಪ್ರತಿಯೋಗಿಯಾಗಿರುವಾಗ ಇಲ್ಲಿ ಘಟವಿಲ್ಲವು. ಇದು ಮೊದಲಾದ ಯಾವುದೊಂದು ಅಭಾವಜ್ಞಾನವು ಹುಟ್ಟುತ್ತದೋ, ಅದು ಯೋಗ್ಯಾನುಪಲಬ್ಧಿಯಿಂದ ಹುಟ್ಟಿದ್ದು.)

ತಾ ॥ ರೂಪಜ್ಞಾನವಿದ್ದುದರಿಂದ ಇವನಿಗೆ ಕಣ್ಣು ಇದೆ, ಇದುಮೊದಲಾದ ಅನುಮಾನ ಸಿದ್ಧವಾದ ಚಕ್ಷುರಾದೀಂದ್ರಿಯಗಳ ಅಭಾವಜ್ಞಾನವು, ಭಾರತಾದ್ಯಾಗಮಗಳಿಂದ ಸಿದ್ಧವಾದ

ಕೌರವಾದಿಗಳ ಅಭಾವಜ್ಞಾನವೂ ಕ್ರಮವಾಗಿ 'ಇವನಿಗೆ ರೂಪಜ್ಞಾನವಿಲ್ಲದಿರುವುದರಿಂದ ಕಣ್ಣು ಇಲ್ಲ' ಎಂಬೀ ಅನುಮಾನದಿಂದಲೂ, ಭಾರತಾದ್ಯಾಗಮಗಳಿಂದಲೂ ಹುಟ್ಟುತ್ತದೆ, ಎನ್ನುವ ವಿಷಯದಲ್ಲಿ ವಿವಾದವೇ ಇಲ್ಲದಿರುವುದರಿಂದ ಅದನ್ನು ಹೇಳಲಿಲ್ಲ ॥ ೧೨೮ ॥

ಹೀಗೆ ಅರ್ಥಾಪತ್ತ್ಯಾದಿಗಳ ಸ್ವರೂಪವನ್ನು ನಿರೂಪಿಸಿದ ಮೇಲೆ ಅವುಗಳಿಗೆ ಅಂತರ್ಭಾವವನ್ನು ಹೇಳುವುದು ಆವಶ್ಯಕವಾದಪ್ರಯುಕ್ತ ಲಾಘವವಿದ್ದುದರಿಂದ ಕ್ರಮವನ್ನು ತಪ್ಪಿಸಿ ಕೊನೆಗೆ ನಿರೂಪಿಸಿದ ಅಭಾವಪ್ರಮಾಣಕ್ಕೆ ಅಂತರ್ಭಾವವನ್ನು ಹೇಳುತ್ತಾರೆ —

**ಮೂ ॥ ಏಕಂ ಪ್ರತ್ಯಕ್ಷರೂಪಂ ಸ್ಯಾದ್ದ್ವಿತೀಯಮನುಮಾತ್ಮಕಂ ।**
**ಕ್ವಚಿದ್ಘಟಾದ್ಯಭಾವೋಽಪಿ ಪ್ರತ್ಯಕ್ಷೇಣಾವಗಮ್ಯತೇ ॥ ೧೨೯ ॥**

ಅ ॥ ಏಕಂ=ಸುಖಾದ್ಯಭಾವಜ್ಞಾನವು (ಸಾಕ್ಷಿ. ೭ ಇಂದ್ರಿಯಗಳು ಹೀಗೆ ಪ್ರತ್ಯಕ್ಷವು ೭ ವಿಧವೆಂದು ಹೇಳಿದಪ್ರಯುಕ್ತ ಸಾಕ್ಷಿಯು ಪ್ರತ್ಯಕ್ಷದಲ್ಲಿ ಅಂತರ್ಭೂತವಾಗುವುದರಿಂದ), ಪ್ರತ್ಯಕ್ಷರೂಪಂ = ಪ್ರತ್ಯಕ್ಷಸ್ವರೂಪವಾದುದು, ಸ್ಯಾತ್=ಆಗುವುದು. ದ್ವಿತೀಯಂ=ಘಟಾದ್ಯಭಾವಜ್ಞಾನವು, ಅನುಮಾತ್ಮಕಂ=ಅನುಮಾನಸ್ವರೂಪವಾದುದು. ಅಂದರೆ ಅನುಮಾನಜನ್ಯವು, (ಯೋಗ್ಯಾನುಪಲಬ್ಧಿಯು ಲಿಂಗವಾಗಿಯದೆ. 'ಘಟೋಽತ್ರ ಇದಾನೀಂ ನಾಸ್ತಿ ಯೋಗ್ಯತ್ವೇ ಸತ್ಯನುಪಲಭ್ಯಮಾನತ್ವಾತ್ ಗಜವತ್' ಘಟವು ಇಲ್ಲಿ ಈಗ ಇಲ್ಲ. ಯೋಗ್ಯವಾಗಿದ್ದು ತೋರದಿರುವುದರಿಂದ ಆನೆಯಂತೆ. ಇತ್ಯಾದಿ ಪ್ರಯೋಗವು ಕೂಡುತ್ತದೆ.) ಕ್ವಚಿತ್=ಕೆಲವು ವೇಳೆ, ಘಟಾದ್ಯಭಾವೋಽಪಿ=(ಸುಖಾದ್ಯಭಾವಮಾತ್ರವಲ್ಲ) ಘಟ ಪಟ ಮೊದಲಾದುವುಗಳ ಅಭಾವವೂ ಕೂಡ, ಪ್ರತ್ಯಕ್ಷೇಣ=ಪ್ರತ್ಯಕ್ಷ ಪ್ರಮಾಣದಿಂದ, ಅವಗಮ್ಯತೇ=ತಿಳಿಯಲ್ಪಡುತ್ತದೆ.

ತಾ ॥ (1) ಯಾವಾಗ ಕಗ್ಗತ್ತಲೆಯಲ್ಲಿ ಇಲ್ಲಿ ಘಟವುಂಟೋ ಇಲ್ಲವೋ ಎಂದು ವಿಚಾರಮಾಡಿ ಹಸ್ತಪ್ರಸಾರಣಾದಿಗಳನ್ನು ಮಾಡಿದರೂ ಘಟವನ್ನೂ ತಿಳಿಯದೆ (ಹೊಂದದೆ) 'ಇಲ್ಲಿ ಘಟವಿಲ್ಲವೆಂದು' ತಿಳಿಯುತ್ತಾನೋ, ಅಲ್ಲಿ ಯೋಗ್ಯಾನುಪಲಬ್ಧಿಯೇ ಲಿಂಗವಾಗಿ ಉಳ್ಳ ಅನುಮಾನವು. (2) ಯಾವಾಗ ರಾಜನ ಅರಮನೆಗೆ ಹೋಗಿ ಆನೆಯ ಸ್ಮೃತಿಯಿಲ್ಲದಿರುವುದರಿಂದ ಗಜಾಭಾವವನ್ನು ಅನುಭವಿಸದೆ ಬೇರೆಕಡೆ ಹೋದವನಾಗಿ ಪುನಃ ವಿಚಾರಬರಲು ಇಂದ್ರಿಯಗಳ ವ್ಯಾಪಾರವಿಲ್ಲದಿದ್ದರೂ ಅಲ್ಲಿ ಗಜವಿರಲಿಲ್ಲವೆಂದು ತಿಳಿಯುತ್ತಾನೋ, ಹೀಗೆಯೇ ಬೆಳಗ್ಗೆ ಇಲ್ಲಿ ಆನೆಯಿರಲಿಲ್ಲ, ಎಂಬೀ ಅಭಾವಜ್ಞಾನವದೆಯೋ, ಅಲ್ಲಿಯೂ ಸ್ಮರಣಕ್ಕೆ ಯೋಗ್ಯವಾಗಿದ್ದು ಸ್ಮರಿಸಲ್ಪಡದಿರುವುದೇ ಲಿಂಗವು. 'ತತ್ರ ರಾಜಗೃಹೇ ಗಜಃ ನಾಭೂತ್, ಅಥವಾ ಪ್ರಾತರತ್ರ ಗಜೋ ನಾಭೂತ್ ಸ್ಮರಣಯೋಗ್ಯತ್ವೇ ಸತ್ಯಸ್ಮರ್ಯಮಾಣತ್ವಾತ್ ಸಮ್ಮತವತ್' ಆ ರಾಜನ ಮಂದಿರದಲ್ಲಿ ಆನೆಯಿರಲಿಲ್ಲ, ಅಥವಾ ಇಲ್ಲಿ ಬೆಳಗ್ಗೆ ಆನೆಯಿರಲಿಲ್ಲ, ಸ್ಮರಣಕ್ಕೆ ಯೋಗ್ಯವಾಗಿದ್ದು ಸ್ಮರಿಸಲ್ಪಡದಿರುವುದರಿಂದ, ಸಮ್ಮತದಂತೆ, ಎಂದನುಮಾನಾಕಾರವು. (3) ಹೆಚ್ಚು ಪ್ರಕಾಶದಲ್ಲಿ ಘಟಸ್ಮೃತಿಯಿದ್ದವನಿಗೆ ಪುರೋವರ್ತಿಯಾದ ಭೂತಲದಲ್ಲಿ ವಿಚಾರವಿಲ್ಲದೆ ಚಕ್ಷುಸ್ಸನ್ನಿಕರ್ಷವಾದೊಡನೆಯೇ 'ಇಲ್ಲಿ ಘಟವಿಲ್ಲ' ಎಂದು ಜ್ಞಾನಹುಟ್ಟುತ್ತದೋ ಅದು ಪ್ರತ್ಯಕ್ಷದಿಂದ ಹುಟ್ಟತಕ್ಕುದು ॥ ೧೨೯ ॥

ಪ್ರತ್ಯಕ್ಷಸಿದ್ಧಗಳಾದ ವಸ್ತುಗಳ ಅಭಾವಜ್ಞಾನವೆಲ್ಲವೂ ಲಿಂಗದಿಂದಲೇ ಹುಟ್ಟತಕ್ಕುದೆಂದು ಹೇಳುವ ಬೌದ್ಧರನ್ನು ನಿರಾಕರಿಸುತ್ತಾರೆ —

**ಮೂ ॥ ಝಟಿತ್ಯೇವ ಪರಿಜ್ಞಾನಾನ್ನ ಲಿಂಗೋದ್ಭವತಾ ಮತಾ ॥ ೧೩೦ ॥**

ಅ ॥ ಝಟಿತ್ಯೇವ=ಶೀಘ್ರದಲ್ಲಿಯೇ, ಅಂದರೆ ಪಕ್ಷದರ್ಶನ, ಲಿಂಗಜ್ಞಾನ, ವ್ಯಾಪ್ತಿ ಸ್ಮರಣೆ, ಲಿಂಗಾನುಸಂಧಾನರೂಪವಿಲಂಬಗಳಿಲ್ಲದೆ, ಪರಿಜ್ಞಾನಾತ್=ಘಟಾದ್ಯಭಾವಕ್ಕೆ ಪ್ರತ್ಯಕ್ಷ ವಾಗಿ ಜ್ಞಾನವಿದ್ದುದರಿಂದ (ಅಭಾವಜ್ಞಾನಕ್ಕೆಲ್ಲಾ), ಲಿಂಗೋದ್ಭವತಾ=ಅನುಮಾನದಿಂದ ಹುಟ್ಟಿ ದ್ದೆಂದು, ಮತಾ ನ=(ಅನುಭವವನ್ನು ಅನುಸರಿಸುವವರಿಗೆ) ಸಮ್ಮತವಲ್ಲ.

ತಾ ॥ (1) ವಿಚಾರ ಮಾಡಿದಮೇಲೆ ಹುಟ್ಟತಕ್ಕಂಥ ಅಭಾವಜ್ಞಾನವು ಪ್ರತ್ಯಕ್ಷಫಲವೆಂದು ನೈಯಾಯಿಕಾದಿಗಳು ಹೇಳುವರು. ಅದೂ ಅಸಂಗತವು. ಅಂತಹ ಅಭಾವಜ್ಞಾನವು ಯೋಗ್ಯಾ ನುಪಲಬ್ಧಿಯೇ ಲಿಂಗವಾಗಿವುಳ್ಳ ಅನುಮಿತಿಜನ್ಯವಾದುದರಿಂದ ಅದರಲ್ಲಿ ಪರೋಕ್ಷತ್ವವೇ ಅನು ಭವಸಿದ್ಧವಾಗಿದೆ. ಪರೋಕ್ಷವಲ್ಲವೆಂದು ಹೇಳಿದರೆ 'ಪರ್ವತೋ ವಹ್ನಿಮಾನ್ ಧೂಮಾತ್' ಎನುವಲ್ಲಿದ್ದ ಅಗ್ನಿಜ್ಞಾನವೂ ಪರೋಕ್ಷವಾಗದೆ ಹೋಗುವುದು. (2) ಇಂದ್ರಿಯಕ್ಕೆ ಅಭಾವದಿಂದ ಸನ್ನಿಕರ್ಷವಿಲ್ಲವೆಂದರೆ ಘಟದಲ್ಲಿ ಉಂಟೆನ್ನುವುದೂ ಯಾವುದರಿಂದ ಸಿದ್ಧವಾಗುವುದು? ಪ್ರತ್ಯಕ್ಷ ಪ್ರತೀತಿರೂಪವಾದ ಕಾರ್ಯದಿಂದ ಇಂದ್ರಿಯಕ್ಕೆ ಘಟದಿಂದ ಸನ್ನಿಕರ್ಷವುಂಟೆಂದು ಕಲ್ಪಿಸಲ್ಪಡು ತ್ತದೆಂದರೆ, ಆ ಘಟಾದಿಪ್ರತೀತಿಗೂ ಪ್ರತ್ಯಕ್ಷತ್ವವು ಯಾವುದರಿಂದ ಸಿದ್ಧವಾಗುವುದು? ಘಟ ವನ್ನು ಪ್ರತ್ಯಕ್ಷವಾಗಿ ತಿಳಿಯುತ್ತೇನೆಂದು ಪ್ರತೀತಿಗ್ರಾಹಕವಾದ ಅನುವ್ಯವಸಾಯರೂಪಪ್ರಮಾಣ ದಿಂದ ಸಿದ್ಧವಾಗುವುದೆಂದರೆ ಇದೆಲ್ಲವೂ ಇಲ್ಲಿಯೂ ಸಮಾನವೇ. ಅಂದರೆ ಅಭಾವವನ್ನು ಪ್ರತ್ಯ ಕ್ಷವಾಗಿ ತಿಳಿಯುತ್ತೇನೆಂದು ಪ್ರತೀತಿಗ್ರಾಹಕಪ್ರಮಾಣದಿಂದ ಅಭಾವಪ್ರತೀತಿಯು ಪ್ರತ್ಯಕ್ಷವೆಂದು ಸಿದ್ಧವಾಗಿರುವುದರಿಂದ ತದ್ರೂಪವಾದ ಕಾರ್ಯದಿಂದ ಇಂದ್ರಿಯಾಭಾವಗಳಿಗೂ ಸಂಯೋಗ ರೂಪವಾದ ಸನ್ನಿಕರ್ಷವನ್ನು ಕಲ್ಪಿಸಬೇಕು. ವೈಶೇಷಿಕಾದಿಗಳ ಪ್ರಕ್ರಿಯೆಯು ಅಪ್ರಾಮಾಣಿಕ ವಾಗಿಯದೆ. (3) ಮತ್ತು ತಂತುಪಟಗಳಿಗೆ ಆಶ್ರಯಾಶ್ರಯಿಭಾವದಿಂದ ಅವಸ್ಥಿತಿರೂಪವಾದ ಕಾರ್ಯವನ್ನು ನೋಡಿ ಸಂಯೋಗದಿಂದ ಅತಿರಿಕ್ತವಾದ ಸಮವಾಯವು ಅಂಗೀಕರಿಸ ಲ್ಪಟ್ಟದೋ, ಹಾಗೆಯೇ ಇಂದ್ರಿಯಾಭಾವಗಳಿಗೂ ಸಂಯೋಗಸಮವಾಯಗಳಿಂದ ಅತಿರಿಕ್ತ ವಾದ ಮೂರನೇ ಸಂಬಂಧವು ಕಲ್ಪಿಸಲ್ಪಡಲಿ. (4) ಅನುಪಲಬ್ಧಿಯು ಲಿಂಗವಾದರೆ ಅದರ ಜ್ಞಾನವೂ ಆವಶ್ಯಕವಾಗಿರುವಪ್ರಯುಕ್ತ ಅನುಪಲಬ್ಧಿಯೂ ಉಪಲಬ್ಧ್ಯಭಾವಸ್ವರೂಪವಾದುದ ರಿಂದ ಉಪಲಬ್ಧಿವಿಷಯಕವಾದ ಅನುಪಲಬ್ಧ್ಯಂತರವನ್ನಪೇಕ್ಷಿಸಿದರೆ ಅನವಸ್ಥೆಯು ಬರುವು ದೆಂದು ಹೇಳಕೂಡದು. ಈಗ ನನಗೆ ಘಟಾದಿಗಳ ಉಪಲಬ್ಧಿಯಿಲ್ಲವೆಂಬೀ ಜ್ಞಾನವು ಸಾಕ್ಷಿ ವೇದ್ಯವು (ಸಾಕ್ಷಿರೂಪವು). ಸಾಕ್ಷಿಯು ಸ್ವಪ್ರಕಾಶಸ್ವರೂಪನಾದುದರಿಂದ ಅನವಸ್ಥೆಯಿಲ್ಲ ॥ ೧೩೦ ॥

ಅರ್ಥಾಪತ್ತಿ ಉಪಮಾನಗಳಿಗೂ ಅಂತರ್ಭಾವವನ್ನು ಹೇಳುತ್ತಾರೆ —

**ಮೂ ॥ ಅರ್ಥಾಪತ್ತಿಶ್ಚೋಪಮಾ ಚ ಹ್ಯನುಮಾಭೇದ ಏವ ತು ॥ ೧೩೧ ॥**

ಅ ॥ ಅರ್ಥಾಪತ್ತಿಶ್ಚ=ಅರ್ಥಾಪತ್ತಿಯೂ, ಉಪಮಾ ಚ = ಉಪಮಾನವೂ ಕೂಡ, ಅನುಮಾಭೇದ ಏವ=ಅನುಮಾನದ ಪ್ರಭೇದವೇ, (ಪ್ರತ್ಯೇಕ ಪ್ರಮಾಣವಲ್ಲ.) ಹಿ=ವ್ಯಾಪ್ತಿ ಪಕ್ಷ ಧರ್ಮತಾ ಮೊದಲಾದ ಅನುಮಾನದ ಸಾಮಗ್ರಿಯು ಸ್ಪಷ್ಟವು. ತು=ಅಭಾವಬೋಧಕವಾದ ಪ್ರಮಾಣದಿಂದ ಅರ್ಥಾಪತ್ತಿ ಉಪಮಾನಗಳಿಗೆ ವೈಲಕ್ಷಣ್ಯವು (ವಿಶೇಷವು) ಅದೆ. ಅದು ಪ್ರತ್ಯ ಕ್ಷದಲ್ಲಿಯೂ ಅನುಮಾನದಲ್ಲಿಯೂ ಅಂತರ್ಭೂತವಾಗುತ್ತದೆ. ಇವುಗಳು ಅನುಮಾನದಲ್ಲಿಯೇ.

ತಾ ॥ (1) ಚೈತ್ರನು ಜೀವಿಸುತ್ತಿದ್ದಾನೆಂದೂ ಪ್ರತ್ಯಕ್ಷದಿಂದ ಮನೆಯಲ್ಲಿಲ್ಲವೆಂದೂ ಸಿದ್ಧವಾಗೋಣ, ಹೊರಗೆ ಇದ್ದಾನೆನ್ನುವಲ್ಲಿ ಬುದ್ಧಿಯು ಹುಟ್ಟುತ್ತದೆ. ಇದು ಅನುಮಾನದಿಂದ

ಹುಟ್ಟಿದ್ದು. 'ಚೈತ್ರೋ ಬಹಿರಸ್ತಿ ಜೀವನವತ್ತ್ವೇ ಸತಿ ಗೃಹೇಽಸತ್ತ್ವಾತ್ ಯೋ ಜೀವನ್ ಯತ್ರ ನಾಸ್ತಿ ಸಃ ತತಃ ಅನ್ಯತ್ರಾಸ್ತಿ ಯಥಾಽಹಂ' ಚೈತ್ರನು ಹೊರಗೆ ಇದ್ದಾನೆ, ಬದುಕುತ್ತಾ ಇದ್ದು ಮನೆಯಲ್ಲಿಲ್ಲದಿರುವುದರಿಂದ, ಯಾರು ಬದುಕುತ್ತಿದ್ದು ಎಲ್ಲಿ ಇಲ್ಲವೋ ಆತನು ಅದಕ್ಕಿಂತ ಬೇರೆ ಕಡೆಯಲ್ಲಿದ್ದಾನೆ. ಹೇಗೆಂದರೆ- ನಾನು ಬದುಕುತ್ತಿದ್ದು ಮನೆಯಲ್ಲಿ ಇಲ್ಲ, ಹೊರಗೆ ಇದ್ದೇನೆ. ಹೀಗೆ ಅನುಮಾನಪ್ರಯೋಗವು. ಆದಕಾರಣ ಅರ್ಥಾಪತ್ತಿಯು ಅನುಮಾನದ ಪ್ರಭೇದವೇ. (2) ಉಪಮಾನವೂ ಅನುಮಾನದ ಪ್ರಭೇದವೇ. 'ಗೌಃ ಗವಯಸದೃಶೀ ಗವಯಸ್ಯ ಗೋಸದೃಶತ್ವಾತ್ ಯಃ ಯತ್ಸದೃಶಃ ಸಃ ತತ್ಸದೃಶಃ ಯಥಾ ಯಮಃ ಯಮಾಂತರೇಣ' ಗೋವು ಗವಯ ಸದೃಶವು, ಗವಯವು ಗೋವಿಗೆ ಸದೃಶವಾದುದರಿಂದ, ಯಾರು ಯಾರಿಗೆ ಸದೃಶನೋ ಅವನು ಅವನಿಗೆ ಸಮಾನಿಕನು. ಹೇಗೆಂದರೆ — ಯಮನು ಮತ್ತೊಬ್ಬ ಯಮನಿಂದ ಸಮಾನಿಕನು. ವ್ಯಾಪ್ತಿಯು ಕೂಡುವುದರಿಂದ ವೈಯಧಿಕರಣ್ಯವು ದೋಷವಲ್ಲ. ಅಥವಾ ಗವಯಗತಸಾದೃಶ್ಯಪ್ರತಿಯೋಗಿತ್ವಾತ್=ಗೋವು ಗವಯದಲ್ಲಿದ್ದ ಸಾದೃಶ್ಯಕ್ಕೆ ಪ್ರತಿಯೋಗಿಯಾದುದರಿಂದ, ಎಂದು ಹೇತುವು. ಈಗ ಸಾಮಾನಾಧಿಕರಣ್ಯವೇ ಅದೆ. (3) ನೈಯಾಯಿಕರು ನಿರೂಪಿಸಿದ ಸಾದೃಶ್ಯಜ್ಞಾನರೂಪವಾದ ಉಪಮಾನವು ಅನುಮಾನದಲ್ಲಿ ಅಂತರ್ಭೂತವಾಗಿದೆ ಎನ್ನುವುದು ಸ್ಫುಟವೇ ಆಗಿಯದೆ. 'ಅಯಂ ಗವಯಶಬ್ದವಾಚ್ಯಃ ಅಗೋತ್ವೇ ಸತಿ ಗೋಸದೃಶತ್ವಾತ್ ವ್ಯತಿರೇಕೇಣ ಘಟವತ್' ಇದು ಗವಯಶಬ್ದದಿಂದ ಹೇಳಲ್ಪಡುತ್ತದೆ. ಗೋವಲ್ಲದೆ ಇದ್ದು ಗೋವಿಗೆ ಸಮಾನವಾದುದರಿಂದ ವ್ಯತಿರೇಕದಿಂದ ಘಟದಂತೆಯೇ. ಹೀಗೆ ಆಕಾರವು. ತಥಾಚ ಅರ್ಥಾಪತ್ತ್ಯಾದಿಗಳು ಪ್ರತ್ಯೇಕಪ್ರಮಾಣಗಳಲ್ಲ. ಅನುಮಾನಾದಿಗಳಲ್ಲಿಯೇ ಅಂತರ್ಭೂತವಾಗುತ್ತವೆ ॥ ೧೩೧ ॥

**ಅನುಮಾನನಿರೂಪಣವು ಸಮಾಪ್ತವಾಯಿತು.**

---

ಅನುಮಾನಾನಂತರದಲ್ಲಿ ಕ್ರಮಪ್ರಾಪ್ತವಾದ ಆಗಮದ ವಿಭಾಗವನ್ನು ಹೇಳುತ್ತಾರೆ —

**ಮೂ ॥ ಆಗಮೋ ದ್ವಿವಿಧೋ ಜ್ಞೇಯೋ ನಿತ್ಯೋಽನಿತ್ಯಸ್ತಥೈವ ಚ ॥ ೧೩೨ ॥**

**ಅ ॥** ಆಗಮಃ=ಆಗಮವು, ನಿತ್ಯಃ = ಅಪೌರುಷೇಯವು (ಸ್ವತಂತ್ರ ಪುರುಷನಿಂದ ಮಾಡಲ್ಪಡದಿರುವುದು), ಅನಿತ್ಯಃ=ಪೌರುಷೇಯವು (ಪುರುಷನಿಂದ ನಿರ್ಮಿಸಲ್ಪಟ್ಟದ್ದು), ಹೀಗೆ ದ್ವಿವಿಧಃ=ಎರಡುಪ್ರಕಾರ, ಜ್ಞೇಯಃ = ತಿಳಿಯಲ್ಪಡಬೇಕು, ತಥೈವ ಚ=(ಹೇಗೆ ಪ್ರತ್ಯಕ್ಷವೂ ಅನುಮಾನವೂ ಎರಡೂ ಸ್ವತಂತ್ರವಾಗಿಯೇ ಪ್ರಮಾಣವೋ) ಹಾಗೆಯೇ ಆಗಮವೂ ಸ್ವತಂತ್ರವೇ ಪ್ರಮಾಣವು.

**ತಾ ॥** (1) ಆಗಮವು ಬೋಧಕವಲ್ಲವೆಂದಲ್ಲ. 'ಶಬ್ದದಿಂದ ಅರ್ಥವನ್ನು ತಿಳಿಯುತ್ತೇನೆ' ಎಂಬೀ ಅನುಭವವಿರೋಧವು ಬರುವುದು. ವಾಕ್ಯವು ಅಬೋಧಕವಾದರೆ ಪ್ರಯೋಜಕವೃದ್ಧನ ಮಾತನ್ನ ಕೇಳಿದಮೇಲೆ ಪ್ರಯೋಜ್ಯವೃದ್ಧನ ಪ್ರವೃತ್ತಿಯೇ ಕೂಡದೆ ಹೋಗಬೇಕಾಗುವುದು. (2) ಬಾಧಕವಿಲ್ಲದಿರುವುದರಿಂದ ವಿಪರೀತಬೋಧಕವೂ ಅಲ್ಲ. ಆಗಮವು ಬೇರೆ ಪ್ರಮಾಣದಲ್ಲಿ ಅಂತರ್ಭೂತವಾಗುತ್ತದೆಂದರೆ (೧) ಮಾಡಲಿಕ್ಕೆ ಶಕ್ಯವಾಗುತ್ತದೆಂದೇ ಮಾಡಬೇಕೆಂದು ಹೇಳುತ್ತೀರೋ, (೨) ಪ್ರತ್ಯೇಕ ಪ್ರಮಾಣವೆಂದು ಹೇಳಿದರೆ ಬಾಧಕವಿದ್ದುದರಿಂದಲೋ (೩) ಅಥವಾ ಪ್ರತ್ಯೇಕ ಪ್ರಮಾಣವೆಂದು ಹೇಳಲಿಕ್ಕೆ ಸಾಧಕವಿಲ್ಲದಿರುವುದರಿಂದಲೋ, ೧ನೇದ್ದು ಕೂಡಲಾರದು. ಏಕೆಂದರೆ — ಪ್ರತ್ಯಕ್ಷಕ್ಕೂ ಅನುಮಾನದಲ್ಲಿ ಅಂತರ್ಭಾವಹೇಳಲಿಕ್ಕೆ

ಶಕ್ಯವಾಗುವುದು. ಎನೇದ್ದೂ ಕೂಡಲಾರದು. ಪ್ರತ್ಯೇಕವೆಂದು ಒಡಂಬಟ್ಟರೆ ಬಾಧಕವಿಲ್ಲ. ಆಗಮದಲ್ಲಿ ಪ್ರತ್ಯೇಕ ಪ್ರಾಮಾಣ್ಯಸಾಧಕವಾದ ಸಾಮಗ್ರೀಭೇದಾದಿಗಳು ಇದ್ದಪ್ರಯುಕ್ತವೇ ಇನೇದ್ದೂ ಅಯುಕ್ತವು. (3) ಅಪೌರುಷೇಯವು ಪ್ರತ್ಯೇಕ ಪ್ರಮಾಣವಾದಾಗ್ಯೂ ಪೌರುಷೇಯವು ಅನುಮಾನವೇ ಎಂದು ಪ್ರಾಭಾಕರರು. ಅವರನ್ನು ನಿರಾಕರಿಸುವುದಕ್ಕೋಸ್ಕರ 'ತಥೈವ' ಎಂದು. ಹೇಗೆ ನಿತ್ಯವು (ಅಪೌರುಷೇಯವು) ಪ್ರತ್ಯೇಕ ಪ್ರಮಾಣವೋ, ಹಾಗೆಯೇ ಅನಿತ್ಯವೂ (ಪೌರುಷೇಯವೂ) ಪ್ರತ್ಯೇಕ ಪ್ರಮಾಣವು. ಪೌರುಷೇಯ ವಾಕ್ಯದಲ್ಲಿದ್ದ ಪದಗಳಿಗೂ ಅನ್ವಿತಾಭಿಧಾನ ಶಕ್ತಿಯಿದ್ದರೆ ಆಗಮತ್ವವೇ ಇದೆ. ಇಲ್ಲವಾದರೆ ವೇದಕ್ಕೂ ಆಗಮತ್ವವಿರಲಾರದು. ಲೌಕಿಕಪದಗಳಿಗೂ ವೈದಿಕಪದಗಳಿಗೂ ವೈಲಕ್ಷಣ್ಯವಿಲ್ಲ. (4) ಯದ್ಯಪಿ ಲೌಕಿಕಪದಗಳಿಗೆ ಅನ್ವಿತಾಭಿಧಾನ ಸಾಮರ್ಥ್ಯವಿದೆ. ಆದರೂ ಪುರುಷರ ಮಾತುಗಳಲ್ಲಿ ಸುಳ್ಳು ಜಾಸ್ತಿಯಿದ್ದಪ್ರಯುಕ್ತ ಅನ್ವಿತವಾಗುವುದಿಲ್ಲವೆಂಬ ಸಂಶಯದಿಂದ ಅನ್ವಯವು ನಿಶ್ಚಿತವಾಗುವುದಿಲ್ಲವೆಂದರೆ ಅರ್ಥವು ವ್ಯಭಿಚರಿತವಾಗುವುದರಿಂದ ವೇದದಲ್ಲಿಯೂ ಸಂಶಯವು ಹುಟ್ಟಬಹುದು. ಕಾರಣ ಅನ್ವಯವು ನಿಶ್ಚಿತವಾಗಲಾರದು. (5) ವೇದವು ಅಪೌರುಷೇಯವಾದಪ್ರಯುಕ್ತ ಅದರಲ್ಲಿ ಸಂಶಯವು ನಿವೃತ್ತಿಯಾಗುತ್ತದೆ. ಎಂದರೆ ಇಲ್ಲಿಯೂ (ಪೌರುಷೇಯದಲ್ಲಿಯೂ) ಆಪ್ತೋಕ್ತತ್ವಾದಿಗಳಿಂದ ಸಂಶಯವು ನಿವೃತ್ತಿಯಾಗುವುದು. ಶಬ್ದದಿಂದಲೇ ಅನ್ವಯವು ನಿಶ್ಚಿತವಾಗುವುದು. ಇದು ಅಪ್ರಮಾಣವೆಂಬೀ ಸಂಶಯದ ಕೇವಲ ನಿವೃತ್ತಿಯು ಅಪೌರುಷೇಯತ್ವ ಆಪ್ತೋಕ್ತತ್ವರೂಪ ಉಪಾಯಾಂತರದಿಂದ ಆಗುವುದು. ಹೀಗೆ ಇದು ಪೌರುಷೇಯ ಅಪೌರುಷೇಯಗಳಲ್ಲಿ ಸಮಾನವೇ॥೧೩೨॥

**ಹೀಗೆ ಆಗಮವು ಸಮಾಪ್ತವಾಯಿತು.**

---

ಇನ್ನು ಪರಿಶೇಷತಃ ಪ್ರಾಪ್ತವಾದ ಪ್ರತ್ಯಕ್ಷದ ವಿಭಾಗವನ್ನು ಹೇಳುತ್ತಾರೆ —

**ಮೂ ॥ ಪ್ರತ್ಯಕ್ಷಂ ತ್ರಿವಿಧಂ ಜ್ಞೇಯಮೈಶ್ವರಂ ಯೌಗಿಕಂ ತಥಾ। ಅಯೌಗಿಕಂ ಚೇತಿ ತಥಾ ಸರ್ವಮಕ್ಷಾತ್ಮಕಂ ಮತಂ ॥ ಅಕ್ಷಾಣಿ ಚ ಸ್ವರೂಪಾಣಿ ನಿತ್ಯಜ್ಞಾನಾತ್ಮಕಾನಿ ಚ। ವಿಷ್ಣೋಃ ಶ್ರಿಯಸ್ತಥೈವೋಕ್ತಾನ್ಯನ್ಯೇಷಾಂ ದ್ವಿವಿಧಾನಿ ತು ॥ ಸ್ವರೂಪಾಣಿ ಚ ಭಿನ್ನಾನಿ ಭಿನ್ನಾನಿ ತ್ರಿವಿಧಾನಿ ಚ। ದೈವಾಸುರಾಣಿ ಮಧ್ಯಾನೀತ್ಯೇತತ್ಪ್ರತ್ಯಕ್ಷವಿಚಾರಿತಂ ॥ ೧೩೩ ॥**

ಅ ॥ ಪ್ರತ್ಯಕ್ಷಂ=ಪ್ರತ್ಯಕ್ಷವು, ಐಶ್ವರಂ=ಲಕ್ಷ್ಮೀನಾರಾಯಣರ ಸಂಬಂಧಿಯಾದುದು, ಯೌಗಿಕಂ=ಸಮಾಧಿ ಪರಿಪಾಕವುಳ್ಳವರು ಯೋಗಿಗಳು, ಅವರ ಸಂಬಂಧಿಯಾದ ಪ್ರತ್ಯಕ್ಷವು, ತಥಾ=ಹಾಗೆಯೇ, ಅಯೌಗಿಕಂ ಚ=ಸಮಾಧಿ ಪರಿಪಾಕರಹಿತರಾದವರ ಸಂಬಂಧಿಯಾದ(ನಮ್ಮ) ಪ್ರತ್ಯಕ್ಷವು, ಇತಿ=ಹೀಗೆ, ತ್ರಿವಿಧಂ = ಮೂರುಪ್ರಕಾರವೆಂದು, ಜ್ಞೇಯಂ = ತಿಳಿಯತಕ್ಕದು, ತಥಾ=ಹಾಗೆಯೇ (ಅಂದರೆ ಹೇಗೆ ಅಯೋಗಿಗಳ ಪ್ರತ್ಯಕ್ಷವು ದುಷ್ಟವಲ್ಲದ ಇಂದ್ರಿಯಸ್ವರೂಪವಾದುದರಿಂದ ಅಕ್ಷಾತ್ಮಕವೋ, ಹಾಗೆಯೇ), ಸರ್ವಂ=ಐಶ್ವರಪ್ರತ್ಯಕ್ಷವೂ, ಅಕ್ಷಾತ್ಮಕಂ= ಅದುಷ್ಟವಾದ ಇಂದ್ರಿಯಸ್ವರೂಪವಾದುದರಿಂದ ಅಕ್ಷಸ್ವರೂಪವಾಗಿ, ಮತಂ = ಸಮ್ಮತವು. (ಅಂತೂ ಈಶ್ವರನಿಗೆ ಶರೀರೇಂದ್ರಿಯಗಳಿಲ್ಲದಿರುವುದರಿಂದ ಪ್ರತ್ಯಕ್ಷವನ್ನು ಹೇಳಿದ್ದು ಔಪಚಾರಿಕವೆಂದು ಹೇಳಕೂಡದು.) ವಿಷ್ಣೋಃ=ಶ್ರೀಪರಮಾತ್ಮನ, ತಥೈವ=ಹಾಗೆಯೇ, ಶ್ರಿಯಃ=ಲಕ್ಷ್ಮೀದೇವಿಯ, ಅಕ್ಷಾಣಿ ಚ=ಪ್ರತ್ಯಕ್ಷಗಳು, ಸ್ವರೂಪಾಣಿ=ಅವರ ಸ್ವರೂಪಗಳೇ ಆಗಿವೆ, ನಿತ್ಯಜ್ಞಾನಾತ್ಮಕಾನಿ ಚ = ನಿತ್ಯಜ್ಞಾನಸ್ವರೂಪಗಳೇ ಆಗಿವೆ, ಇತಿ = ಹೀಗೆ, ಉಕ್ತಾನಿ='ಯದಾತ್ಮಕೋ

ಭಗವಾನ್ ತದಾತ್ಮಿಕಾ ವ್ಯಕ್ತಿಃ ಕಿಮಾತ್ಮಕೋ ಭಗವಾನ್ ಜ್ಞಾನಾತ್ಮಕಃ ಐಶ್ವರ್ಯಾತ್ಮಕಃ' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟಿವೆ, ಅನ್ಯೇಷಾಂ=ಇತರರ (ಯೋಗಿ ಅಯೋಗಿಗಳ) ಪ್ರತ್ಯಕ್ಷಗಳು, ಸ್ವರೂಪಾಣಿ=ಅವರ ಸ್ವರೂಪಗಳು, ಭಿನ್ನಾನಿ ಚ=ಭೇದವುಳ್ಳವುಗಳು, ಭಿನ್ನಾನಿ=ಭಿನ್ನಗಳು, ದೈವಾಸುರಾಣಿ=ದೈವ=ಸಮ್ಯಕ್ ಜ್ಞಾನಪ್ರಚುರಗಳು, ಅಸುರಾಣಿ=ಮಿಥ್ಯಾಜ್ಞಾನಪ್ರಚುರಗಳು, ಮಧ್ಯಾನಿ=ಎರಡನ್ನೂ ಸಮವಾಗಿ ಹುಟ್ಟಿಸತಕ್ಕವುಗಳು, ಇತಿ=ಹೀಗೆ, ತ್ರಿವಿಧಾನಿ ಚ=ಮೂರು ಪ್ರಕಾರಗಳು, ಏತತ್=ಇದು, ಪ್ರತ್ಯಕ್ಷಂ=ಪ್ರತ್ಯಕ್ಷವೆಂದು, ಈರಿತಂ=ಹೇಳಲ್ಪಟ್ಟಿತು ॥ ೧೩೩ ॥

ಪ್ರತ್ಯಕ್ಷವು ಮೂರುವಿಧವೆಂದು ಹೇಳಿದ್ದು ಅಸಂಗತವು. 'ಅದುಷ್ಟಮಿಂದ್ರಿಯಂ ತ್ವಕ್ಷಂ' ಎನ್ನುವುದರಿಂದ ಅಕ್ಷವೇ ಪ್ರಸ್ತುತವಾದುದು. 'ಸರ್ವಮಕ್ಷಾತ್ಮಕಂ ಮತಂ' ಎಂದು ಹೇಳಿರುವುದರಿಂದ ಅದುಷ್ಟೇಂದ್ರಿಯರೂಪವಾದ ಅಕ್ಷವೇ ನಿರೂಪಿಸಲ್ಪಟ್ಟದೆ. ಪ್ರಕೃತ ವಿರೋಧವಿದ್ದುದರಿಂದಲೇ 'ಏತತ್ಪ್ರತ್ಯಕ್ಷಮೀರಿತಂ' ಎಂದು ಉಪಸಂಹಾರಮಾಡಿದ್ದೂ ಅಯುಕ್ತವು ಎಂದಾಶಂಕಿಸಿದರೆ —

ಮೂ ॥ ವಿಷಯಾನ್ಪ್ರತಿ ಸ್ಥಿತಂ ಹ್ಯಕ್ಷಂ ಪ್ರತ್ಯಕ್ಷಮಿತಿ ಕೀರ್ತಿತಂ । ಅಕ್ಷಯಂ ಪುರುಷಸ್ಯಾಕ್ಷಂ ಸ್ವರೂಪೇ ಮುಖ್ಯಮೇವ ತು । ಉಪಚಾರಸ್ತದನ್ಯತ್ರ ಸೃಷ್ಟಾವುಪಚಯೋ ಯತಃ ॥ ೧೩೪ ॥

ಅ ॥ ವಿಷಯಾನ್=ಅತಿದೂರತ್ವ ಅತಿಸಾಮೀಪ್ಯ ಮೊದಲಾದ ದೋಷರಹಿತಗಳಾದ ತಂತಮ್ಮ ವಿಷಯಗಳನ್ನು, ಪ್ರತಿ=ಕುರಿತು, ಸ್ಥಿತಂ=ಇರತಕ್ಕ, (ಅಂದರೆ ಅವುಗಳಿಂದ ಸನ್ನಿಕೃಷ್ಟವಾದ), ಅಕ್ಷಂ=ಇಂದ್ರಿಯವು, ಪ್ರತ್ಯಕ್ಷಮಿತಿ=ಪ್ರತ್ಯಕ್ಷವೆಂದು, ಕೀರ್ತಿತಂ=ಹೇಳಲ್ಪಡುತ್ತದೆ. ಹಿ=ಪ್ರಸಿದ್ಧವು. ಅಂದರೆ— ಇಂದ್ರಿಯವೇ ನಿರ್ದೋಷಗಳಾದ ತನ್ನ ವಿಷಯಗಳಿಂದ ಸನ್ನಿಕೃಷ್ಟವಾಗಿ ಪ್ರತ್ಯಕ್ಷವೆಂದು ವೈಯಾಕರಣರಿಂದ ಹೇಳಲ್ಪಡುತ್ತದೆ; ಆದಕಾರಣ ವಿರೋಧವಿಲ್ಲ. ಅಕ್ಷಯಂ=ಅವಿನಾಶಿಯಾದ, ಅಕ್ಷಂ=ಇಂದ್ರಿಯವು, ಪುರುಷಸ್ಯ=ಈಶ್ವರಾದಿಗಳ, ಸ್ವರೂಪೇ=ಸ್ವರೂಪೇಂದ್ರಿಯದಲ್ಲಿ, ಮುಖ್ಯಮೇವ=ಯುಕ್ತವಾದ ಅರ್ಥವುಳ್ಳದ್ದೇ, (ನಿರ್ವಚನ ಲಭ್ಯವಾದ ಅರ್ಥವು ಅಲ್ಲಿದೆ.) ತದನ್ಯತ್ರ=ಭಿನ್ನವಾದ ಇಂದ್ರಿಯದಲ್ಲಿ, ಉಪಚಾರಃ=ಅಕ್ಷಶಬ್ದವು ಅಮುಖ್ಯವು, ಯತಃ=ಯಾವಕಾರಣದಿಂದ, (ಸ್ವರೂಪತಃ ನಿತ್ಯವಾದಾಗ್ಯೂ ಭಿನ್ನೇಂದ್ರಿಯಕ್ಕೆ) ಸೃಷ್ಟೌ=ಸೃಷ್ಟಿಕಾಲದಲ್ಲಿ, ಉಪಚಯಃ=ಭೂತ ತೈಜಸಾಹಂಕಾರ ಸಂಬಂಧಿಗಳಾದ ಅಂಶಗಳಿಂದ ಉಪಚಯರೂಪವಾದ ಉತ್ಪತ್ತಿಯದೆ. (ಪ್ರಲಯದಲ್ಲಿ ಅವಯವ ಅಪಚಯರೂಪವಾದ ನಾಶವೂ ಆದೆ.)

ತಾ ॥ ಸರ್ವಪ್ರಕಾರದಿಂದಲೂ ಕ್ಷಯಾಭಾವರೂಪವಾದ ಅಕ್ಷಶಬ್ದ ಮುಖ್ಯಾರ್ಥವು ಭಿನ್ನೇಂದ್ರಿಯಗಳಲ್ಲಿ ಕೂಡುವುದಿಲ್ಲ. ಆದುದರಿಂದ ಏಕದೇಶದಲ್ಲಿ ಧರ್ಮ್ಯಂಶದಲ್ಲಿ ನಾಶಾಭಾವ ರೂಪ ಮುಖ್ಯಾರ್ಥವಾದ, ಗುಣವಿದ್ದುದರಿಂದ ಅಕ್ಷಶಬ್ದಕ್ಕೆ ಅಮುಖ್ಯವೃತ್ತಿಯು. ಸ್ವರೂಪೇಂದ್ರಿಯದಿಂದ ಅಭಿವ್ಯಕ್ತವಾದ ಅನುಭವವು ಪ್ರತ್ಯಕ್ಷದಲ್ಲಿ ಅಂತರ್ಭೂತವಾಗುವುದು ॥ ೧೩೪ ॥

ಪ್ರಮಾಣವು ಮೂರೇ ವಿಧವೆಂದು ಸಿದ್ಧಿಸುವುದಕ್ಕಾಗಿ ಸಂಭವ ಪರಿಶೇಷಾದಿಗಳಿಗೆ ಅಂತರ್ಭಾವವನ್ನು ಹೇಳುತ್ತಾರೆ —

ಮೂ ॥ ಉಪಪತ್ತಿಸ್ಸ್ವರೂಪತ್ವಾದನುಮಾ ಸಂಭವಾದಿಕಂ ॥ ೧೩೫ ॥

ಅ ॥ ಉಪಪತ್ತಿಸ್ವರೂಪತ್ವಾತ್ = ವ್ಯಾಪ್ತಿಸ್ಮೃತಿಯನ್ನಪೇಕ್ಷಿಸಿ ಅರ್ಥಜ್ಞಾನವನ್ನು ಹುಟ್ಟಿಸುವುದರಿಂದ, ಸಂಭವಾದಿಕಂ=ಸಂಭವ ಮೊದಲಾದುದು, ಅನುಮಾ=ಅನುಮಾನವೇ.

ತಾ ॥ (1) ಬಹುಲಜ್ಞಾನವಿರಲು ಹುಟ್ಟುವ ಅಲ್ಪಜ್ಞಾನಕ್ಕೆ ಸಂಭವವೆಂದು ಹೆಸರು· ಉದಾ=೧೦೦ ರೂಪಾಯಿ ಅದೆ ಎಂದು ಜ್ಞಾನಬರಲು ೫೦ ರೂಪಾಯಿ ಅದೆ ಎಂದು ಹುಟ್ಟುವ ಜ್ಞಾನವು. 'ಅಯಂ ಪಂಚಾಶದ್ವಾನ್ ಶತವತ್ವಾತ್' ಈತನು ೫೦ ರೂಪಾಯಿ ಉಳ್ಳವನು. ೧೦೦ ರೂಪಾಯಿ ಇದ್ದುದರಿಂದ, ಹೀಗೆ ಅನುಮಾನಾಕಾರವು. (2) ವಕ್ತೃನಿರ್ದೇಶವಿಲ್ಲ ದಿರುವ ಪ್ರವಾದಪಾರಂಪರ್ಯವು ಐತಿಹ್ಯವು. ಇದು 'ವಟೇ ವಟೇ ವೈಶ್ರವಣಃ' ಇತ್ಯಾದಿ ಆಗಮಗಳಲ್ಲಿ ಅಂತರ್ಭೂತವಾಗುವುದು ॥ ೧೩೫ ॥

**ಮೂ ॥ ಪ್ರತ್ಯಕ್ಷಾಗಮಮಾಹಾತ್ಮ್ಯಾದನುಮಾನಂ ಪ್ರಮಾಣತಾಂ ।**
**ಯಾತಿ ನೈವಾನ್ಯಥಾ ತಸ್ಯ ನಿಯತತ್ವಂ ಕ್ವಚಿದ್ಭವೇತ್ ॥**
**ಇತ್ಯಾದಿ ಬ್ರಹ್ಮತರ್ಕೇ ॥ ೧೩೬ ॥**

ಅ ॥ ಅನುಮಾನಂ= ಅನುಮಾನವು (ಪ್ರತ್ಯಕ್ಷಾಗಮಗಳನ್ನು ಅನುಸರಿಸತಕ್ಕ ಪ್ರಮಾಣವು) ಪ್ರತ್ಯಕ್ಷಾಗಮಮಾಹಾತ್ಮ್ಯಾತ್=ಪ್ರತ್ಯಕ್ಷಾಗಮಗಳ ಮಹಿಮೆಯಿಂದ, (ಅನುಕೂಲ ಗಳಾದ ಪ್ರತ್ಯಕ್ಷಾಗಮಗಳಿಂದ ಉಪಾಧಿಪ್ರತಿಪಕ್ಷಗಳ ನಿರಾಸದಿಂದ) ಪ್ರಮಾಣತಾಂ=ಅರ್ಥ ನಿಶ್ಚಾಯಕತ್ವವನ್ನು, ಯಾತಿ=ಹೊಂದುತ್ತದೆ. ಅನ್ಯಥಾ=ಉಪಾಧ್ಯಾದಿಗಳಿಂದ ಸಂಬದ್ಧ ವಾದರೆ, ತಸ್ಯ=ಅನುಮಾನಕ್ಕೆ, ಕ್ವಚಿತ್=ಎಲ್ಲಿಯೂ, ನಿಯತತ್ವಂ=ನಿಶ್ಚಯಕಾರಣತ್ವವು, ನೈವ ಭವೇತ್=ಆಗಲಾರದು. ಇತ್ಯಾದಿ=ಇದೇ ಮೊದಲಾದುದು, ಬ್ರಹ್ಮತರ್ಕೇ=ಬ್ರಹ್ಮತರ್ಕ ದಲ್ಲಿದೆ ॥ ೧೩೬ ॥

ಉಪಜೀವ್ಯಪ್ರಮಾಣಗಳ ವಿರೋಧವಿದ್ದುದರಿಂದಲೇ ಐಕ್ಯಾಗಮಕ್ಕೆ ಅಪ್ರಾಮಾಣ್ಯವೆಂದು ಯಾವುದುಕ್ತವಾಗಿದೆಯೋ, ಅದು ಅಸಂಗತವು. ಅಪೌರುಷೇಯವಾದ ಪ್ರಯುಕ್ತ ದೋಷ ರಹಿತವಾದ ಐಕ್ಯಾಗಮಕ್ಕೆ ಅಪ್ರಾಮಾಣ್ಯವು ಕೂಡಲಾರದು, ಎಂದಾಶಂಕಿಸಿದರೆ—

**ಮೂ ॥ ಅತ್ರ ಚೋಪಜೀವ್ಯತ್ವೇನ ಪ್ರಮಾಣಪ್ರಾಬಲ್ಯಾದ್ಭೇದ ಏವ**
**ತಾತ್ಪರ್ಯಂ ಯುಕ್ತಂ ॥ ೧೩೭ ॥**

ಅ ॥ ಅತ್ರ ಚ=ಈ ಬ್ರಹ್ಮತರ್ಕವಾಕ್ಯದಲ್ಲಿ, ಉಪಜೀವ್ಯತ್ವೇನ=ಉಪಜೀವ್ಯವಾದುದ ರಿಂದ (ಯಾವುದಿಲ್ಲದೆ ಯಾವುದು ಹೊರಡಲಾರದೋ ಅದು ಅದಕ್ಕೆ ಉಪಜೀವ್ಯವು), ಪ್ರಮಾಣ ಪ್ರಾಬಲ್ಯಾತ್='ಉಪಜೀವ್ಯವಿರೋಧೇ ತು ನ ಪ್ರಾಮಾಣ್ಯಮಮುಷ್ಯ ಚ' ಎನ್ನುವಲ್ಲಿ ಪ್ರಮಾಣ ಗಳಿಗೆ ಪ್ರಾಬಲ್ಯವನ್ನು ಹೇಳಿರುವುದರಿಂದಲೇ, ('ವಿಷಯಾಭಾವೇ ಸ್ವಸ್ಯೈವಾಪ್ರಾಮಾಣ್ಯಪ್ರಾಪ್ತೇಃ' ಎನ್ನುವಲ್ಲಿ ಹೇಳಿದ ಯುಕ್ತಿಸಿದ್ಧವಾದುದರಿಂದಲೂ ಪ್ರಕೃತದಲ್ಲಿಯೂ ಉಪಜೀವ್ಯವಾದುದರಿಂದ ಭೇದಪ್ರಮಾಣಕ್ಕೆ ಪ್ರಾಬಲ್ಯವಿದ್ದುದರಿಂದಲೇ ತದ್ವಿರುದ್ಧವಾದ ಐಕ್ಯಾಗಮಕ್ಕೂ ಉಪಜೀವ್ಯ ವನ್ನನುಸರಿಸಿ), ಭೇದ ಏವ=ಭೇದದಲ್ಲಿಯೇ, (ಜೀವೇಶ್ವರರ ಭೇದದಲ್ಲಿಯೇ) ತಾತ್ಪರ್ಯಂ= ತಾತ್ಪರ್ಯವು, ಯುಕ್ತಂ=ಕೂಡುತ್ತದೆ. (ಜೀವೇಶ್ವರಾಭೇದದಲ್ಲಿ ತಾತ್ಪರ್ಯಕೂಡಲಾರದು. ಹೀಗೆ ಪ್ರತೀತವಾದ ಅರ್ಥದ ಪರಿತ್ಯಾಗವೇ ಅಪ್ರಾಮಾಣ್ಯಪದದಿಂದುಕ್ತವಾಗುತ್ತದೆ. ಸರ್ವಥಾ ಅಪ್ರಾಮಾಣ್ಯವಿಲ್ಲ) ॥ ೧೩೭ ॥

ಭೇದಾಗಮದ ವಿರೋಧದಿಂದ ಐಕ್ಯಾಗಮಕ್ಕೆ ಅಪ್ರಾಮಾಣ್ಯವೆಂದು ಹೇಳಿದ್ದು ಅಯುಕ್ತವು. ಭೇದವಾಕ್ಯಗಳು ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಭೇದವನ್ನನುವಾದಮಾಡುವುದರಿಂದ ದುರ್ಬಲಗಳಾಗಿವೆ. ಐಕ್ಯಾಗಮದಲ್ಲಿ ಪ್ರಮಾಣಾಂತರದಿಂದ ಅಪ್ರಾಪ್ತವಾದ ಅರ್ಥಪ್ರತಿಪಾದಕತ್ವವಿದ್ದುದರಿಂದ ಅದು ಪ್ರಬಲವಾಗಿದೆ. ಹೀಗಾದರೆ ಈಶ್ವರನೇ ಸಿದ್ಧನಾಗಲಾರನು. ಎಂದು ಹೇಳಕೂಡದು. ಕೇವಲಾನುಮಾನದಿಂದ ಈಶ್ವರನು ಸಿದ್ಧನಾಗದೆ ಇದ್ದರೂ ಆಗಮಾನುಕೂಲವಾದ ಅನುಮಾನದಿಂದ ಆಗಲೀ ಆಗಮದಿಂದಲೇ ಆಗಲೀ ಈಶ್ವರನು ಸಿದ್ಧಿಸುವನು, ಎಂದಾಶಂಕಿಸಿದರೆ—

**ಮೂ ॥ ಕಥಂ ಚಾನುವಾದಕತ್ವಂ ಭೇದಸ್ಯ ಪ್ರಮಾಣೇನಾಸಿದ್ಧೌ ॥ ೧೩೮ ॥**

**ಅ ॥** ಭೇದಸ್ಯ=ಭೇದಕ್ಕೆ, ಪ್ರಮಾಣೇನ=ಪ್ರಮಾಣದಿಂದ, ಅಸಿದ್ಧೌ=ಸಿದ್ಧಿಯಾಗದಿರಲು, (ಭೇದವಾಕ್ಯಗಳಿಗೆ) ಅನುವಾದಕತ್ವಂ = ಅನುವಾದಕತ್ವವು, ಕಥಂ ಚ = ಹೇಗೆ ಕೂಡುವುದು?

**ತಾ ॥** ಜೀವೇಶ್ವರರು ಪ್ರಮಾಣಾಂತರದಿಂದ ಸಿದ್ಧಿಸಲಿ. ಅಷ್ಟರಿಂದ ಭೇದವಾಕ್ಯಗಳಿಗೆ ಅನುವಾದಕತ್ವವಿಲ್ಲ. ಸಾಕ್ಷಿಯು ಜೀವನನ್ನೂ, ಅನುಮಾನವು ಈಶ್ವರನನ್ನೂ, 'ದ್ವಾ ಸುಪರ್ಣಾ' ಇತ್ಯಾದಿ ವಾಕ್ಯವು ಭೇದವನ್ನೂ ಹೀಗೆ ಬೇರೆ ಬೇರೆಯಾಗಿಯೇ ವಿಷಯೀಕರಿಸುತ್ತದೆ. ಆದರೆ ಭೇದವೂ ಪ್ರಮಾಣಾಂತರದಿಂದ ಸಿದ್ಧವಾದರೆ ಅನುವಾದಕತ್ವವು ಕೂಡಬಹುದು. ಭೇದವು ಪ್ರಮಾಣಾಂತರದಿಂದ ಸಿದ್ಧಿಸುತ್ತದೆ ಎನ್ನುವುದು ಪರರಿಗೆ ಅಂಗೀಕರಿಸಲಿಕ್ಕೆ ಆಗುವುದಿಲ್ಲ. ಆದಕಾರಣ ಜೀವೇಶ್ವರರ ಭೇದವು ಪ್ರಮಾಣಾಂತರದಿಂದ ಸಿದ್ಧಿಸದಿರಲು ಭೇದವಾಕ್ಯಗಳಿಗೆ ಅನುವಾದಕತ್ವವು ಹೇಗೆ ಕೂಡಬಹುದು? ॥ ೧೩೮ ॥

ಜೀವೇಶ್ವರರು ಮಾತ್ರವಲ್ಲ. ಜೀವೇಶ್ವರರ ಭೇದವೂ ಪ್ರಮಾಣಾಂತರದಿಂದ ಸಿದ್ಧವೇ ಆಗಿರುತ್ತದೆ. ಆದಕಾರಣ ಭೇದವಾಕ್ಯಗಳಿಗೆ ಅನುವಾದಕತ್ವವಿದೆ ಎಂದಾಶಂಕಿಸಿದರೆ —

**ಮೂ ॥ ಸಿದ್ಧೌ ಚ ಕಥಮಭೇದವಾಕ್ಯಸ್ಯಾಬಾಧಃ ॥ ೧೩೯ ॥**

**ಅ ॥** ಸಿದ್ಧೌ ಚ=(ಭೇದಕ್ಕೆ ಪ್ರಮಾಣಾಂತರದಿಂದ) ಸಿದ್ಧಿಯು, (ಅಂಗೀಕರಿಸಲ್ಪಡುತ್ತಿರಲು) ಅಭೇದ ವಾಕ್ಯಸ್ಯ=ಐಕ್ಯ ವಾಕ್ಯಕ್ಕೆ, (ಆ ಪ್ರಮಾಣದಿಂದ) ಅಬಾಧಃ=ಬಾಧವಿಲ್ಲವೆನ್ನುವುದು, ಕಥಂ=ಹೇಗೆ, ಸ್ಯಾತ್=ಆಗುವುದು. ಹೇಗೂ ಬಾಧವೇ ಇದೆ. ಆದಕಾರಣ ಭೇದವಾಕ್ಯಗಳಿಗೆ ಅನುವಾದಕತ್ವವು ಸಿದ್ಧಿಯಾಗುವುದಕ್ಕಾಗಿ ಯಾವ ಪ್ರಮಾಣದಿಂದ ಭೇದವು ಸಿದ್ಧಿಸುತ್ತದೆ ಎಂದು ಅಂಗೀಕರಿಸಲ್ಪಡುತ್ತದೋ, ಐಕ್ಯಾಗಮಕ್ಕೆ ಆ ಪ್ರಮಾಣದಿಂದ ಬಾಧವು ಬರುವುದರಿಂದ ಭೇದವು ಪ್ರಮಾಣಾಂತರದಿಂದ ಸಿದ್ಧಿಸುತ್ತದೆ ಎಂದು ಅಂಗೀಕರಿಸಲಿಕ್ಕೆ ಅಶಕ್ಯವಾದುದರಿಂದ ಭೇದವಾಕ್ಯಗಳಿಗೆ ಅನುವಾದಕತ್ವವು ಹೇಳಲಿಕ್ಕೆ ಆಗುವುದಿಲ್ಲ. ಭೇದವಾಕ್ಯಗಳಿಗೆ ಅನುವಾದಕತ್ವವನ್ನು ಹೇಳಿದರೂ ಅವುಗಳು ಪ್ರಬಲಗಳಾದುದರಿಂದ ಅಭೇದವಾಕ್ಯಗಳಿಗ ಭೇದವಾಕ್ಯವಿರೋಧವು ಬರುವುದೆಂದರೆ ಬಲಭುಜ, ಎಡಭುಜ ಎರಡನ್ನೂ ಹಗ್ಗದಿಂದ ಚೆನ್ನಾಗಿ ಕಟ್ಟಿ ಹಾಕಿದರೆ ಬಲಭಾಗದಲ್ಲಾಗಲೀ ಎಡಭಾಗದಲ್ಲಾಗಲೀ, ಹೇಗೆ ಚಲಿಸಲಿಕ್ಕೆ ಶಕ್ಯವಾಗುವುದಿಲ್ಲವೋ ಹಾಗೆಯೇ ಇಲ್ಲಿಯೂ ಅನುವಾದಕತ್ವವನ್ನಂಗೀಕರಿಸಿದರೆ ಎದುರುನಲ್ಲಿರುವ ಬಾಧಕ ಪ್ರಮಾಣದಿಂದ ವಿರೋಧವು. ಅನುವಾದಕತ್ವವನ್ನಂಗೀಕರಿಸಿದರೆ ಆ ವಾಕ್ಯವಿರೋಧವು.

ಆದರ ಭೀತಿಯಿಂದ ತತ್ತ್ವಮಸ್ಯಾದಿ ವಾಕ್ಯಗಳಿಗೆ ಭೇದದಲ್ಲಿಯೇ ತಾತ್ಪರ್ಯವನ್ನಂಗೀಕರಿಸ ಬೇಕು ॥ ೧೩೯ ॥

ಜೀವೇಶ್ವರರ ಭೇದವು ಪ್ರತ್ಯಕ್ಷಾದಿಸಿದ್ಧವೇ. ಅದರಿಂದ ಭೇದವಾಕ್ಯಗಳಿಗೆ ಅನುವಾದಿತ್ವವು ಸಿದ್ಧಿಸುವುದು. ಆದರೆ ಆ ಪ್ರತ್ಯಕ್ಷಾದಿಗಳು ಅಪ್ರಮಾಣಗಳೇ. ವ್ಯಾವಹಾರಿಕಾರ್ಥವನ್ನು ವಿಷಯೀ ಕರಿಸುವುದರಿಂದಲೇ ಪ್ರತ್ಯಕ್ಷಾದಿಗಳಲ್ಲಿ ಪ್ರಮಾಣತ್ವ ವ್ಯವಹಾರವು. ಪಾರಮಾರ್ಥಿಕವನ್ನು ವಿಷಯೀಕರಿಸುವುದರಿಂದಲ್ಲ. ಐಕ್ಯವಾಕ್ಯವಾದರೂ ತತ್ತ್ವಾವೇದಕವು ಪ್ರಮಾಣವು. ಆದಕಾರಣ ಆ ಐಕ್ಯವಾಕ್ಯವು ಭೇದದಲ್ಲಿ ಪ್ರಮಾಣಭೂತಗಳಾದ ಪ್ರತ್ಯಕ್ಷಾದಿಗಳಿಂದ ತಡೆಯಲ್ಪಡುತ್ತದೆಂದರೆ ಭೇದವಾಕ್ಯವೂ (೧) ಪ್ರಮಾಣವೋ, (೨) ಅಪ್ರಮಾಣವೋ, ೧ ಪ್ರಮಾಣವೆಂಬೀಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.

**ಮೂ ॥ ನ ಚಾಪ್ರಮಾಣಸಿದ್ಧೇನಾನುವಾದಕತ್ವಂ ಪ್ರಮಾಣಸ್ಯ ಭವತಿ ॥**
**॥ ೧೪೦ ॥**

**ಅ ॥** ಅಪ್ರಮಾಣಸಿದ್ಧೇನ=ಅಪ್ರಮಾಣಭೂತಗಳಾದ ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಭೇದವನ್ನು ಪ್ರತಿಪಾದಿಸುವುದರಿಂದ, ಪ್ರಮಾಣಸ್ಯ = ಭೇದವಾಕ್ಯಕ್ಕೆ, ಅನುವಾದಕತ್ವಂ= ಅನುವಾದಕತ್ವವು, ನ ಚ ಭವತಿ=ಆಗುವುದಿಲ್ಲ.

**ತಾ ॥** (1) ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವನ್ನೂ, ಭೇದವಾಕ್ಯಗಳಿಗೆ ಪ್ರಾಮಾಣ್ಯ ವನ್ನೂ ಅಂಗೀಕರಿಸಿದರೆ ಭಿನ್ನಭಿನ್ನವಾದ ಅರ್ಥವನ್ನು ವಿಷಯೀಕರಿಸತಕ್ಕದ್ದಾಗುವುದು. ಸಮಾನ ವಿಷಯಕವಾದರೆ ಎರಡೂ ಪ್ರಮಾಣವಾಗಲೀ, ಅಪ್ರಮಾಣವಾಗಲೀ ಆಗುವುದು. ಪತ್ಯಕ್ಷಾದಿ ಗಳು ಅಪ್ರಮಾಣಗಳು, ಭೇದವಾಕ್ಯವು ಪ್ರಮಾಣವು, ಎಂಬೀ ವಿಭಾಗವು ಕೂಡಲಾರದು. ವಿಷಯ ಗಳು ಬೇರೆ ಬೇರೆಯಾದರೆ ಅನುವಾದಕತ್ವವು ಕೂಡಲಾರದು. ಆದಕಾರಣ ಪ್ರಾಮಾಣ್ಯಾಪ್ರಾ ಮಾಣ್ಯವಿಭಾಗವು, ಅನುವಾದಕತ್ವವೆನ್ನುವುದು ಪರಸ್ಪರವಾಗಿ ವ್ಯಾಹತವು. ಅಂದರೆ ಪ್ರತ್ಯಕ್ಷಾದಿ ಗಳು ಅಪ್ರಮಾಣಗಳು, ಭೇದವಾಕ್ಯವು ಪ್ರಮಾಣವು ಎಂದು ವಿಭಾಗವಮಾಡುವಾಗ ಭಿನ್ನವಿಷಯಕ ತ್ವವು ಪ್ರಾಪ್ತವಾಗುವುದರಿಂದ ಅನುವಾದಕವೆಂದು ಹೇಳಿದ್ದು ವ್ಯಾಹತವು. ಅನುವಾದಕವೆಂದು ಹೇಳಿದರೆ ಸಮಾನವಿಷಯಕತ್ವವು ಪ್ರಾಪ್ತವಾಗುವುದರಿಂದ ಪ್ರಾಮಾಣ್ಯಾಪ್ರಾಮಾಣ್ಯವಿಭಾಗ ಕಥ ನವು ವ್ಯಾಹತವು. ಮತ್ತು ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವು ಯಾವುದರಿಂದ? ಐಕ್ಯವಾಕ್ಯ ವಿರೋ ಧದಿಂದ ಎಂದು ಹೇಳಕೂಡದು. ಅನ್ಯೋನ್ಯಾಶ್ರಯವು ಬರುವುದು. ಐಕ್ಯವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧವಾದರೆ ತದ್ವಿರೋಧದಿಂದ ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವು ಸಿದ್ಧಿಸುವುದು. ಅಪ್ರಾ ಮಾಣ್ಯವು ಸಿದ್ಧಿಸಿದರೆ ವಿರೋಧಿಪ್ರಮಾಣವಿಲ್ಲದಿರುವುದರಿಂದ ಐಕ್ಯವಾಕ್ಯಕ್ಕೆ ಪ್ರಾಮಾಣ್ಯವು ಸಿದ್ಧಿಸುವುದು ॥ ೧೪೦ ॥

ಐಕ್ಯವಾಕ್ಯವೂ, ಭೇದವನ್ನು ವಿಷಯೀಕರಿಸುವ ಪ್ರತ್ಯಕ್ಷಾದಿಗಳೂ ಸಮಾನ ಬಲವುಳ್ಳದ್ದಾ ದರೆ ಈ ಅನ್ಯೋನ್ಯಾಶ್ರಯವು ಕೂಡಬಹುದು. ಇದಾದರೂ ಇಲ್ಲ. ಐಕ್ಯಶ್ರುತಿಯು ಅಪೌರು ಷೇಯವಾದುದರಿಂದ ದೋಷಸಂಶಯವೇ ಇರುವುದಿಲ್ಲ. ಆದುದರಿಂದ ಪ್ರಬಲವಾಗಿದೆ. ಪ್ರತ್ಯಕ್ಷಾದಿಗಳಲ್ಲಿ ದೋಷವು ಸಂಭಾವಿತವಾಗಿರುವುದರಿಂದ ಶ್ರುತಿಯಿಂದ ಪ್ರತ್ಯಕ್ಷವು ದುರ್ಬಲವು. ಪ್ರಬಲವಾದ ಐಕ್ಯವಾಕ್ಯಪ್ರಾಮಾಣ್ಯವು ದುರ್ಬಲಗಳಾದ ಪ್ರತ್ಯಕ್ಷಾದಿಗಳ ವಿರೋಧಾಭಾವವನ್ನು ಅಪೇಕ್ಷಿಸುವುದಿಲ್ಲ. ಸಿಂಹವು ನರಿಯ ಮರಿಯಿಲ್ಲವೆಂದಪೇಕ್ಷಿಸಿ ವನವನ್ನು ಪ್ರವೇಶಿಸುವುದಿಲ್ಲ. ಆದ ಕಾರಣ ಎನೇ ಕೋಟಿಯನ್ನಂಗೀಕರಿಸದಿದ್ದುದರಿಂದ ಅನ್ಯೋನ್ಯಾಶ್ರಯವಿಲ್ಲವೆಂದಾಶಂಕಿಸಿದರೆ—

**ಮೂ || ದುರ್ಬಲತ್ವೇ ಚ ಭೇದಪ್ರಮಾಣಸ್ಯಾಭಾಸತ್ವಾನ್ನ ಭೇದವಾಕ್ಯಾನಾಮನುವಾದಿತ್ವಂ || ೧೪೧ ||**

ಅ || ಭೇದಪ್ರಮಾಣಸ್ಯ=ಭೇದವಿಷಯದಲ್ಲಿ ಪ್ರಮಾಣಭೂತಗಳಾದ ಪ್ರತ್ಯಕ್ಷಾದಿಗಳಿಗೆ, ದುರ್ಬಲತ್ವೇ ಚ=ದೌರ್ಬಲ್ಯವಿದ್ದರೆ, ಆಭಾಸತ್ವಾತ್ = ಅಕಿಂಚಿತ್ಕರವಾದುದರಿಂದ, ಭೇದ ವಾಕ್ಯಾನಾಂ=ಭೇದವಾಕ್ಯಗಳಿಗೆ, ಅನುವಾದಿತ್ವಂ=ಅನುವಾದಕತ್ವವು, ನ=ಇರುವುದಿಲ್ಲ.

ತಾ || ಭೇದಪ್ರಮಾಣಗಳಾದ ಪ್ರತ್ಯಕ್ಷಾದಿಗಳಿಗೆ ಐಕ್ಯಶ್ರುತಿಗಿಂತ ದೌರ್ಬಲ್ಯವನ್ನಾಶ್ರಯಿಸಿ ಅನ್ಯೋನ್ಯಾಶ್ರಯತ್ವವನ್ನು ಪರಿಹರಿಸುವುದಾದರೆ ಭೇದವಾಕ್ಯಗಳಿಗೆ ಹೇಳಲ್ಪಡುವ ಅನುವಾದಕತ್ವವೇ ಆಗದೇ ಹೋಗುವುದು. ಏಕೆಂದರೆ— ಅನುವಾದಕಕ್ಕಾಗಿ ವಿಷಯವನ್ನೇ ಸಮರ್ಪಿಸುವುದಿಲ್ಲ. ಹೇಗೆ ದುರ್ಬಲಗಳಾದುದರಿಂದ ಪ್ರತ್ಯಕ್ಷಾದಿಗಳು ಐಕ್ಯಶ್ರುತಿಯ ವಿಷಯಗಳನ್ನಪಹರಿಸುವುದಿಲ್ಲವೋ, ಹಾಗೆಯೇ ಭೇದಶ್ರುತಿಗೂ, ವಿಷಯವನ್ನು ಪ್ರಾಪಿಸಿಕೊಡುವುದಿಲ್ಲ. ಅಂತೂ ಸ್ವತಂತ್ರವಾಗಿ (ಪ್ರತ್ಯಕ್ಷಾದಿಗಳನ್ನಪೇಕ್ಷಿಸದೆ) ಭೇದವನ್ನು ಪ್ರತಿಪಾದಿಸುವುದರಲ್ಲಿ ಪ್ರವೃತ್ತವಾದ ಭೇದಶ್ರುತಿಯು ಅನುವಾದಕವು ಹೇಗೆ ಆಗುವುದು? || ೧೪೧ ||

ಅನನುವಾದಕತ್ವವು ಸಮಾನವಾದ ಪ್ರಯುಕ್ತ ಮಾತ್ರ ಭೇದಾಭೇದವಾಕ್ಯಗಳು ಸಮಬಲವುಳ್ಳವುಗಳಲ್ಲ. ಮತ್ತೆ ಸ್ವತಂತ್ರವಾಗಿ (ಪ್ರತ್ಯಕ್ಷಾದಿಗಳನ್ನಪೇಕ್ಷಿಸದೆ) ಪ್ರವೃತ್ತಗಳಾದ ಭೇದ ವಾಕ್ಯಗಳು ದೈವಾತ್ ಪ್ರಾಪ್ತವಾದ ಪ್ರತ್ಯಕ್ಷಾದಿಗಳ ಸಂವಾದದಿಂದ ಐಕ್ಯವಾಕ್ಯಕ್ಕಿಂತ ಪ್ರಬಲಗಳೇ ಆಗಿವೆ. ಐಕ್ಯವಾಕ್ಯಕ್ಕೆ ಸಂವಾದವಿಲ್ಲವೆನ್ನುತ್ತಾರೆ—

**ಮೂ || ಅತಶ್ಚ ಭೇದವಾಕ್ಯಾನಾಮೇವ ಪ್ರಾಬಲ್ಯಂ || ೧೪೨ ||**

ಅ || ಅತಶ್ಚ=ಆದಕಾರಣ, ಭೇದವಾಕ್ಯಾನಾಮೇವ=ಭೇದವಾಕ್ಯಗಳಿಗೇನೇ, ಪ್ರಾಬಲ್ಯಂ= ಪ್ರಬಲತ್ವವು, ಅಂತೂ ಭೇದವಾಕ್ಯವಿರೋಧದಿಂದಲೇ ಐಕ್ಯವಾಕ್ಯಕ್ಕೆ ಅಪ್ರಾಮಾಣ್ಯವು || ೧೪೨ ||

ಪ್ರಮಾಣಾಂತರಸಂವಾದವುಳ್ಳ ಭೇದವಾಕ್ಯಗಳಿಗೆ ಪ್ರಾಬಲ್ಯವೆನ್ನುವುದೂ ಸಂವಾದವಿಲ್ಲದಿರುವ ಐಕ್ಯವಾಕ್ಯಗಳಿಗೆ ದೌರ್ಬಲ್ಯವೆನ್ನುವುದೂ ವಿಪರೀತವಾಗಿ ಹೇಳಲ್ಪಡುತ್ತದೆ. ಏಕೆಂದರೆ— ಸಂವಾದವು ಅಪೂರ್ವತ್ವಕ್ಕೆ (ಪ್ರಮಾಣಾಂತರದಿಂದ ಪ್ರಾಪ್ತವಾಗದಿರುವ ಅರ್ಥವನ್ನು ಪ್ರತಿಪಾದಿಸುವಿಕೆಯು ಅಪೂರ್ವತ್ವವು) ವಿರೋಧಿಯಾಗಿದೆ. ಸಂವಾದವಿಲ್ಲದಿರುವುದೇ ಅಪೂರ್ವತ್ವಕ್ಕೆ ಕಾರಣವು. ಅಪೂರ್ವತ್ವವು ಪ್ರಾಬಲ್ಯಕ್ಕೆ ಹೇತುವೆನ್ನುವುದು ಸರ್ವತ್ರ ಪ್ರಸಿದ್ಧವಾಗಿಯದೆ. ಆದ ಕಾರಣ ಪ್ರಮಾಣಾಂತರದಿಂದ ಅಪ್ರಾಪ್ತವಾದ ಅರ್ಥವನ್ನು ಪ್ರತಿಪಾದಿಸತಕ್ಕ ಐಕ್ಯವಾಕ್ಯಗಳಿಗೇನೆ ಪ್ರಾಬಲ್ಯವು. ಇತರ ಭೇದವಾಕ್ಯಗಳಿಗೆ ಐಕ್ಯವಾಕ್ಯದಿಂದ ಏಕವಾಕ್ಯತ್ವವಿದ್ದಪ್ರಯುಕ್ತ ಜೀವೇಶ್ವರರ ಐಕ್ಯದಲ್ಲಿಯೇ ಎಲ್ಲಾ ಆಗಮಗಳಿಗೂ ಮಹಾತಾತ್ಪರ್ಯವು. ಎಂದು ಹೇಳಿದರೆ (೧) ಪ್ರಮಾಣಾಂತರ ವಿರೋಧವಿದ್ದರೂ ಅಪೂರ್ವತ್ವವನ್ನಾಶ್ರಯಿಸಿ ಹೀಗೆ ಹೇಳುವುದೋ (೨) ಅಥವಾ ವಿರೋಧವಿಲ್ಲದಿದ್ದು ಹೀಗೆ ಹೇಳುವುದೋ, ಹೀಗೆ ಕೇಳಬೇಕು. ೧ನೇ ಕಲ್ಪದಲ್ಲಿ ಅತಿ ಪ್ರಸಂಗವನ್ನು ಹೇಳುತ್ತಾರೆ —

**ಮೂ|| ಸರ್ವಪ್ರಮಾಣವಿರುದ್ಧವಚನಾನಾಮೇವ ಪ್ರಾಬಲ್ಯಾಂಗೀಕಾರೇ ಇದಂ ವಾ ಅಗ್ರೇ ನೈವ ಕಿಂಚನಾಸೀದಸತಃ ಸದಜಾಯತೇತ್ಯಾದೀನಾಮೇವಾ ವಿಚಾರೇಣ ಪ್ರತೀಯಮಾನಸ್ಯಾರ್ಥಸ್ಯ ಸರ್ವಪ್ರಮಾಣವಿರುದ್ಧತ್ವಾತ್ತತ್ರ ಸರ್ವಾಗಮಾನಾಂ ಮಹಾತಾತ್ಪರ್ಯಂ ಪ್ರಸಜ್ಯೇತ || ೧೪೩ ||**

ಅ ॥ ಸರ್ವಪ್ರಮಾಣವಿರುದ್ಧವಚನಾನಾಮೇವ=ಎಲ್ಲಾ ಪ್ರಮಾಣಗಳಿಂದಲೂ ವಿರುದ್ಧಗಳಾದ ಐಕ್ಯವಚನಗಳಿಗೇನೆ, ಪ್ರಾಬಲ್ಯಾಂಗೀಕಾರೇ=(ಕೇವಲ ಅಪೂರ್ವತ್ವದಿಂದ) ಪ್ರಾಬಲ್ಯವನ್ನಂಗೀಕರಿಸಿದರೆ (ಹಾಗೆಯೇ ಇತರ ವಾಕ್ಯಗಳಿಗೂ ಐಕ್ಯವಾಕ್ಯಗಳಿಂದ ಏಕವಾಕ್ಯತ್ವವನ್ನು ವ್ಯಾಖ್ಯಾನಮಾಡಿ ಎಲ್ಲಾ ಆಗಮಗಳಿಗೂ ಜೀವೇಶ್ವರರ ಐಕ್ಯದಲ್ಲಿ ಮಹಾತಾತ್ಪರ್ಯವನ್ನಂಗೀಕರಿಸಿದರೆ) ಇದಂ ವಾ ಅಗ್ರೇ=ಈ ಜಗತ್ತಿನ ಆದಿಯಲ್ಲಿ (ಪ್ರಳಯಕಾಲದಲ್ಲಿ), ಕಿಂಚನ=ಯಾವುದೂ, ನೈವ ಆಸೀತ್=ಇರಲೇ ಇಲ್ಲ, 'ಅಸತಃ=ಅಸತ್ತಿನಿಂದ, ಸತ್=ಸತ್ಪದಾರ್ಥವು, ಅಜಾಯತ=ಹುಟ್ಟಿತು,' ಇತ್ಯಾದೀನಾಮೇವ=ಇದು ಮೊದಲಾದ ವಾಕ್ಯಗಳಿಗೇನೇ, (ಪ್ರಾಬಲ್ಯವನ್ನಂಗೀಕರಿಸಲು ಯೋಗ್ಯವು. (ಏಕೆಂದರೆ — ಅವಿಚಾರೇಣ ಪ್ರತೀಯಮಾನಸ್ಯ=ಆಪಾತತಃ ತೋರುವ, ಅರ್ಥಸ್ಯ=ಆ ವಾಕ್ಯಗಳ ಅರ್ಥವಾದ ಶೂನ್ಯಜಗತ್ಕಾರಣತ್ವಕ್ಕೆ, ಸರ್ವಪ್ರಮಾಣವಿರುದ್ಧತ್ವಾತ್=ಎಲ್ಲಾ ಪ್ರಮಾಣಗಳಿಂದಲೂ ಸಿದ್ಧಿಯಿಲ್ಲದಿರುವುದರಿಂದ, (ಅಂದರೆ ಅಪೂರ್ವತ್ವವು ಲಭಿಸುವುದರಿಂದ) (ಹಾಗೆಯೇ 'ಸದೇವ ಸೌಮ್ಯ' ಇತ್ಯಾದಿ ವಾಕ್ಯಗಳಿಗೂ 'ಇದಂ ವಾ ಅಗ್ರೇ ಇದುಮೊದಲಾದ ಶೂನ್ಯಜಗತ್ಕಾರಣತ್ವಪ್ರತಿಪಾದಕವಾಕ್ಯಗಳಿಂದ ಏಕವಾಕ್ಯತ್ವವನ್ನು ಇಟ್ಟುಕೊಂಡು) ತತ್ರ=ಶೂನ್ಯಕ್ಕೇನೆ ಜಗತ್ಕಾರಣತ್ವದಲ್ಲಿ, ಸರ್ವಾಗಮಾನಾಂ=ಎಲ್ಲಾ ಆಗಮಗಳಿಗೂ, ಮಹಾತಾತ್ಪರ್ಯಂ = ಮುಖ್ಯತಾತ್ಪರ್ಯವು, ಪ್ರಸಜ್ಯೇತ = ಅಂಗೀಕರಿಸಬೇಕಾಗುವುದು. (ಪ್ರಮಾಣಾಂತರ ವಿರೋಧವಿದ್ದರೂ ಪ್ರಾಬಲ್ಯಕಾರಣವಾದ ಅಪೂರ್ವತ್ವಕ್ಕೆ ವಿಶೇಷವಿಲ್ಲದಿರುವುದರಿಂದ).

ತಾ ॥ ಆಪಾತತಃ ತೋರುತ್ತದೆ ಎಂದು ಹೇಳಿದ್ದುದರಿಂದ 'ತತ್ತ್ವಮಸ್ಯಾದಿವಾಕ್ಯಗಳಿಗೂ ಜೀವಬ್ರಹ್ಮೈಕ್ಯವು ವಿಚಾರವಿಲ್ಲದೇನೇ ಅರ್ಥವಾಗಿ ತೋರುತ್ತದೆ ಎಂದು ಸೂಚಿಸಿದರು. ಅಂತೂ 'ಇದಂ ವಾ' ಇತ್ಯಾದಿ ವಾಕ್ಯಗಳಂತೆ ಐಕ್ಯವಾಕ್ಯಕ್ಕೂ ಸರ್ವಪ್ರಮಾಣವಿರುದ್ಧತ್ವವಿದ್ದುದರಿಂದ ಕೇವಲ ಅಪೂರ್ವತ್ವದಿಂದ ಪ್ರಾಬಲ್ಯವಿಲ್ಲ ॥ ೧೪೩ ॥

ಅಪೂರ್ವತ್ವವು ಪ್ರಮಾಣಾಂತರದಿಂದ ವಿರೋಧವಿಲ್ಲದಿದ್ದರೆ ಪ್ರಾಬಲ್ಯಕ್ಕೆ ಕಾರಣವು. ವಿರೋಧವಿದ್ದರೆ ಕಾರಣವಾಗಲಾರದು. ಶೂನ್ಯಕ್ಕೆ ಜಗತ್ಕಾರಣತ್ವದಲ್ಲಿ ಪ್ರಮಾಣವಿರೋಧವದೆ. 'ವಿಮತಃ ವಿನಾಶಃ'=ಪ್ರಲಯಕಾಲೀನವಾದ ನಾಶವು, ಸಶ್ಶೇಷಃ=ಸದ್ರೂಪವಾದ ವಸ್ತುವಿನ ಶೇಷವುಳ್ಳದ್ದು, ವಿನಾಶತ್ವಾತ್=ವಿನಾಶವಾದುದರಿಂದ, ಯುದ್ಧಾದಿವಿನಾಶವತ್=ಯುದ್ಧಮೊದಲಾದವುಗಳ ವಿನಾಶದಂತೆ. (೨) ಆದಿಕಾರ್ಯಂ=ಪ್ರಥಮಕಾರ್ಯವು, ಸತ್ಕಾರಣಕಂ=ಸತ್ತೇ ಕಾರಣವಾಗುಳ್ಳದ್ದು, ಕಾರ್ಯತ್ವಾತ್=ಕಾರ್ಯವಾದುದರಿಂದ, ಪಟವತ್=ವಸ್ತ್ರದಂತೆ, ಇದು ಮೊದಲಾದ ಯುಕ್ತಿಗಳಿಂದ ವಿರೋಧವದೆ. ಆದಕಾರಣ ಅತಿಪ್ರಸಂಗವಿಲ್ಲವೆಂಬೀ ಎರಡನೇ ಪಕ್ಷವನ್ನು ಆಶಂಕಿಸಿ ಹೇಳುತ್ತಾರೆ.

**ಮೂ ॥ ನ ಚ ತತ್ರ ಯುಕ್ತಿವಿರೋಧ ಇತಿ ವಾಚ್ಯಂ । ತಸ್ಮಿನ್ಪಕ್ಷೇ ಯುಕ್ತಿ ವಿರುದ್ಧತ್ವೇನಾನನುವಾದಿತ್ವಮಿತಿ ಗುಣ ಏವ ಸ್ಯಾತ್ ॥ ೧೪೪ ॥**

ಅ ॥ ತತ್ರ=ಅದರಲ್ಲಿ, ಯುಕ್ತಿವಿರೋಧ ಇತಿ=ಯುಕ್ತಿವಿರೋಧವೆಂದು, ನ ಚ ವಾಚ್ಯಂ=ಹೇಳಕೂಡದು, ('ಇದಂ ವಾ ಅಗ್ರೇ' ಇತ್ಯಾದಿ ವಾಕ್ಯಗಳಂತೆ ಐಕ್ಯವಾಕ್ಯಗಳಿಗೂ ಸರ್ವ ಪ್ರಮಾಣಗಳಿಂದಲೂ ವಿರೋಧವಿದ್ದುದರಿಂದ ಕೇವಲ ಅಪೂರ್ವತ್ವದಿಂದ ಪ್ರಾಬಲ್ಯವು ಬರಲಾರದು ಎಂಬೀ ಪರಿಹಾರವು ಸ್ಫುಟವಾದಪ್ರಯುಕ್ತ ಪರಿಹಾರಾಂತರವನ್ನು ಹೇಳುತ್ತಾರೆ) —

ತಸ್ಮಿನ್ ಪಕ್ಷೇ=ಅನನುವಾದಿತ್ವವು ಪ್ರಾಬಲ್ಯಕ್ಕೆ ಕಾರಣ ಎಂಬೀ ಕಲ್ಪದಲ್ಲಿ, ಯುಕ್ತಿವಿರುದ್ಧತ್ವೇನ=ಯುಕ್ತಿವಿರೋಧವಿದ್ದುದರಿಂದ, ಅನನುವಾದಿತ್ವಮಿತಿ=ಅನುವಾದಕತ್ವಾಭಾವವು, ಆಗುತ್ತದೆ ಎಂದು, ಗುಣ ಏವ=ಗುಣವೇ, ಸ್ಯಾತ್=ಆಗುವುದು.

ತಾ ॥ ಅನುವಾದಕತ್ವಾಭಾವವು ಪ್ರಾಬಲ್ಯಕ್ಕೆ ಕಾರಣವು ಎಂಬೀ ಕಲ್ಪದಲ್ಲಿ ಯುಕ್ತಿವಿರೋಧವಿದ್ದುದರಿಂದ 'ಇದಂ ವಾ' ಇತ್ಯಾದಿಗಳಿಗೆ ಪ್ರಾಬಲ್ಯವಿಲ್ಲವು ಎಂದು ಹೇಳಲಿಕ್ಕೆ ಶಕ್ಯವಾಗುವುದಿಲ್ಲ. ಯುಕ್ತಿವಿರೋಧದಿಂದ ಅನುವಾದಕತ್ವಾಭಾವವು ಆಗುತ್ತದೆ ಎಂದು ಯುಕ್ತಿವಿರೋಧವು ಗುಣವೇ ಆಗುವುದು. ಪ್ರಾಬಲ್ಯಕ್ಕೆ ಕಾರಣವಾದ ಅನನುವಾದಕತ್ವಕ್ಕೆ ಕಾರಣವಾದ ಯುಕ್ತಿವಿರೋಧವು ಪ್ರಾಬಲ್ಯಕ್ಕೆ ವಿಘಾತಕವು ಹೇಗೆ ಆಗುವುದು? ॥ ೧೪೪ ॥

ಯುಕ್ತಿವಿರೋಧವು ಅನನುವಾದಕತ್ವಕ್ಕೆ ಹೇತುವು ಹೇಗೆ ಆಗುವುದೆಂದಾಶಂಕಿಸಿದರೆ—

**ಮೂ ॥ ಯುಕ್ತಿಸಿದ್ಧತ್ವೇ ಹ್ಯನುವಾದಿತ್ವಂ ಸ್ಯಾತ್ ॥ ೧೪೫ ॥**

ಅ ॥ ಯುಕ್ತಿಸಿದ್ಧತ್ವೇ ಹಿ=(ಶೂನ್ಯವು ಜಗತ್ಕಾರಣವೆನ್ನುವುದು)ಯುಕ್ತಿಸಿದ್ಧವಾಗಿದ್ದರೆ, ಅನುವಾದಿತ್ವಂ=('ಇದಂ ವಾ' ಇತ್ಯಾದಿ ವಾಕ್ಯಗಳಿಗೆ) ಅನುವಾದಕತ್ವವು, ಸ್ಯಾತ್=ಆಗುವುದು.

ತಾ ॥ ಯುಕ್ತಿಸಿದ್ಧವಾದರೆ ಅನುವಾದಕತ್ವವು ಪ್ರಸಕ್ತವಾಗುವುದರಿಂದ ಹಿಂದೆ ಹೇಳಿದ ವಿನಾಶತ್ವಾದಿರೂಪವಾದ ವಿರೋಧಿಯಾದ ಯುಕ್ತಿಯು, 'ಇದಂ ವಾ' ಇತ್ಯಾದಿ ವಾಕ್ಯಗಳಿಗೆ ಅನುವಾದಕತ್ವವು ಸಿದ್ಧಿಯಾಗುವುದಕ್ಕಾಗಿ ಶೂನ್ಯಕ್ಕೆ ಜಗತ್ಕಾರಣತ್ವವನ್ನು ಸಾಧಿಸುವ ಯುಕ್ತಿಯನ್ನು ದುಷ್ಟವಾದುದನ್ನಾಗಿ ಮಾಡುವುದಾಗಿ ಅನನುವಾದಕತ್ವಕ್ಕೆ ಕಾರಣವು ಆಗುತ್ತದೆಯೋ ಸರಿ ॥ ೧೪೫ ॥

'ಇದಂ ವಾ' ಇತ್ಯಾದಿ ವಾಕ್ಯಗಳಂತೆಯೇ ಐಕ್ಯವಾಕ್ಯಕ್ಕೂ ಪ್ರಮಾಣವಿರೋಧವಿದ್ದ ಪ್ರಯುಕ್ತ ಕೇವಲ ಅಪೂರ್ವತ್ವದಿಂದ ಪ್ರಾಬಲ್ಯವಿಲ್ಲವೆಂದು ಯಾವುದು ಅಭಿಪ್ರೇತವೋ, ಅದು ಅಸಂಗತವು, ಭೇದವಾಕ್ಯಗಳು ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಅರ್ಥವನ್ನು ವಿಷಯೀಕರಿಸುವುದರಿಂದ ಅನುವಾದಕಪ್ರಯುಕ್ತ ದುರ್ಬಲಗಳು. ಐಕ್ಯಾಗಮವು ಅನುವಾದಕವಲ್ಲದಿರುವುದರಿಂದ ಪ್ರಬಲವು. ಪ್ರತ್ಯಕ್ಷಾದಿಗಳು ಅಪ್ರಮಾಣಗಳು. ಪ್ರಬಲವಾದ ಪ್ರಮಾಣಕ್ಕೆ ದುರ್ಬಲದಿಂದಲೂ ಅಪ್ರಮಾಣದಿಂದಲೂ ವಿರೋಧವು ವಿಷಯಾಪಹಾರಕವು ಆಗಲಾರದು. ಎಂದಾಶಂಕಿಸಿ ಉಪಸಂಹಾರವೆಂಬೀ ನ್ಯಾಯದಿಂದ 'ನ ಚಾಪ್ರಮಾಣಸಿದ್ಧೇನ' ಎಂದು ಹಿಂದೆಹೇಳಿದ ಉತ್ತರವನ್ನೇ ಹೇಳುತ್ತಾರೆ.

**ಮೂ ॥ ಅತಃ ಪ್ರಮಾಣಸಿದ್ಧತ್ವೇ ತದಪಲಾಪಾಯುಕ್ತೇರಪ್ರಮಾಣಸಿದ್ಧತ್ವೇ ಚ ಭೇದಪ್ರಮಾಣಸ್ಯಾನುವಾದಿತ್ವಾಭಾವಾಚ್ಚ ನ ಭೇದವಾಕ್ಯಾನಾಂ ದೌರ್ಬಲ್ಯಂ ॥ ೧೪೬ ॥**

ಅ ॥ ಅತಃ=ಭೇದವಾಕ್ಯಗಳಿಗೆ ಅನುವಾದಕತ್ವವು ಸಿದ್ಧಿಸುವುದಕ್ಕಾಗಿ, ಪ್ರಮಾಣಸಿದ್ಧತ್ವೇ=ಭೇದಕ್ಕೆ ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧಿಯು ಅಂಗೀಕರಿಸಲ್ಪಟ್ಟರೆ, ತದಲಾಪಾಯುಕ್ತೇಃ=ಪ್ರತ್ಯಕ್ಷಾದಿಪ್ರಮಾಣಗಳಿಂದ ಪ್ರತಿರುದ್ಧವಾದ ಐಕ್ಯವಾಕ್ಯದಿಂದ ಭೇದನಿರಾಕರಣವು ಅನುಪಪನ್ನವಾಗುವಪ್ರಯುಕ್ತವೂ, (ಅದನ್ನು ಪರಿಹರಿಸುವುದಕ್ಕಾಗಿ ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವನ್ನೂ ಭೇದವಾಕ್ಯಗಳಿಗೆ ಪ್ರಾಮಾಣ್ಯವನ್ನೂ ಅಂಗೀಕರಿಸಿದರೆ ಆಗ), ಅಪ್ರಮಾಣಸಿದ್ಧತ್ವೇ

ಚ= ಭೇದವು ಅಪ್ರಮಾಣಭೂತಗಳಾದ ಪ್ರತ್ಯಕ್ಷಾದಿಗಳಿಂದ ಸಿದ್ಧವೆಂದಂಗೀಕರಿಸಿದರೆ, ಅಂದರೆ ಭೇದವನ್ನು ವಿಷಯೀಕರಿಸುವ ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವಿದ್ದರೆ (ಪ್ರಮಾಣ ಅಪ್ರಮಾಣ ಗಳಿಗೆ ಸಮಾನವಿಷಯತ್ವವು ಕೂಡದಿರುವುದರಿಂದ), ಭೇದಪ್ರಮಾಣಸ್ಯ=ಭೇದದಲ್ಲಿ ಪ್ರಮಾಣ ಭೂತವಾದ ಆಗಮಕ್ಕೆ, ಅನುವಾದಿತ್ವಾಭಾವಾಚ್ಚ = ಅನುವಾದಕತ್ವವಿಲ್ಲದಿರುವುದರಿಂದಲೂ ಭೇದವಾಕ್ಯಾನಾಂ=ಭೇದವಾಕ್ಯಗಳಿಗೇನೆ, ದೌರ್ಬಲ್ಯಂ=ದುರ್ಬಲತ್ವವು, (ಅಭೇದವಾಕ್ಯಗಳಿಗೆ ಅಲ್ಲ, ಹೀಗೆ ಹೇಳಲ್ಪಟ್ಟದ್ದು) ನ=ಅಲ್ಲ ॥ ೧೪೬ ॥

'ಅತಶ್ಚ ಭೇದವಾಕ್ಯಾನಾಮೇವ ಪ್ರಾಬಲ್ಯಂ' ಎನ್ನುವ ಮೂಲದಲ್ಲಿ ಪ್ರತ್ಯಕ್ಷಾದಿಗಳ ಸಂವಾದದಿಂದ ಅಭೇದವಾಕ್ಯಕ್ಕಿಂತ ಯಾವುದು ಭೇದವಾಕ್ಯಗಳಿಗೆ ಪ್ರಾಬಲ್ಯವು ಹೇಳಲ್ಪಟ್ಟದೋ, ಅದು ಅಸಂಗತವು, ಮತ್ತೆ ಸಂವಾದವು ವ್ಯರ್ಥವಾಗುವುದರಿಂದ ದೌರ್ಬಲ್ಯಕ್ಕೇನೇ ಕಾರಣವಾಗು ವುದು, ಎಂಬ ಆಶಂಕೆಯನ್ನು 'ಬಹುಪ್ರಮಾಣ ಸಂವಾದಶ್ಚ' ಇತ್ಯಾದಿಗಳಿಂದ ಪರಿಹಂಸಿ ದಾಗ್ಯೂ ಪುನಃ ಅಧಿಕವನ್ನು ಹೇಳುವುದಕ್ಕಾಗಿ ಪರಿಹರಿಸುತ್ತಾರೆ —

**ಮೂ ॥ ನ ಚ ಪ್ರಮಾಣಬಹುತ್ವೇ ದೌರ್ಬಲ್ಯಂ । ದಾರ್ಢ್ಯಮೇವ ಹಿ ಬಹುವಾಕ್ಯಸಂವಾದೇ ದೃಷ್ಟಂ ॥ ೧೪೭ ॥**

ಅ ॥ ಪ್ರಮಾಣಬಹುತ್ವೇ=(ಒಂದೇ ಅರ್ಥದಲ್ಲಿ) ಅನೇಕ ಪ್ರಮಾಣಗಳು, (ಪ್ರವೃತ್ತ ಗಳಾದರೆ), ದೌರ್ಬಲ್ಯಂ=(ದ್ವಿತೀಯಾದಿ ಪ್ರಮಾಣಗಳಿಗೆ) ದುರ್ಬಲತ್ವವು ಎನ್ನುವುದೂ ಕೂಡ, ನ ಚ=ಇಲ್ಲ. ಬಹುವಾಕ್ಯ ಸಂವಾದೇ=ಬಹುವಾಕ್ಯಗಳ ಸಂವಾದವಿದ್ದರೆ, ದಾರ್ಢ್ಯಮೇವ= ಸಂಶಯ ರಹಿತವಾದ ಯಥಾರ್ಥಜ್ಞಾನವೇ, ದೃಷ್ಟಂ ಹಿ=ಕಾಣಲ್ಪಟ್ಟದೆ ॥ ೧೪೭ ॥

**ಮೂ ॥ ತಥಾ ಸತ್ಯಭ್ಯಾಸಾದೇರಪ್ಯಪ್ರಾಮಾಣ್ಯಹೇತುತ್ವಂ ಸ್ಯಾತ್ । ಅಭ್ಯಾಸಸ್ಯ ಚ ತಾತ್ಪರ್ಯಲಿಂಗತ್ವಂ ಸರ್ವೇಷಾಂ ಸಿದ್ಧಂ ॥ ತದನಂಗೀಕಾರೇ ತತ್ಪಕ್ಷೇಽಪಿ ನವಕೃತ್ವಸ್ತತ್ತ್ವಮಸೀತ್ಯಭ್ಯಾಸಸ್ಯಾ- ನುವಾದಕತ್ವೇನಾಪ್ರಾಮಾಣ್ಯಂ ಸ್ಯಾತ್ ॥ ಪ್ರಥಮವಾಕ್ಯೇನೈವ ಯಸ್ಮಾತ್ಸಿದ್ಧಂ ತದರ್ಥಮಪರಮಿತ್ಯುಕ್ತೇ ಪ್ರತ್ಯಕ್ಷಾದಿನಾ ಭೇದೋ ಯೇನಾನಿಶ್ಚಿತಸ್ತದರ್ಥಂ ಅಪರಂ ವಾಕ್ಯಮಿತ್ಯುತ್ತರಂ ॥ ತಸ್ಮಾದ್ಬಹು ಪ್ರಮಾಣಸಂವಾದಿತ್ವೇ ಪ್ರಾಬಲ್ಯಮೇವ ॥ ಅತಃ ಸರ್ವ ಪ್ರಮಾಣ- ವಿರುದ್ಧತ್ವಾನ್ನಾಭೇದೇ ತಾತ್ಪರ್ಯಂ ವಾಕ್ಯಸ್ಯ ॥ ೧೪೮ ॥**

ಅ ॥ ತಥಾಸತಿ = ಸಂವಾದಕ ವಾಕ್ಯಕ್ಕೆ ವೈಯರ್ಥ್ಯದಿಂದ ಅದು ಉಪೇಕ್ಷಿಸಲಿಕ್ಕೆ ಯೋಗ್ಯವಾದರೆ, ಅಭ್ಯಾಸಾದೇರಪಿ=ಅಭ್ಯಾಸ ನಿಗಮನಗಳಿಗೂ, ಅಪ್ರಾಮಾಣ್ಯ ಹೇತುತ್ವಂ= ಉಪೇಕ್ಷಣೀಯತ್ವಕ್ಕೆ ಕಾರಣತ್ವವು, ಸ್ಯಾತ್=ಬರಬೇಕಾಗುವುದು. (ಅಂದರೆ ಅಭ್ಯಾಸಾದಿ ಗಳನ್ನು ಉಪೇಕ್ಷಿಸಬೇಕಾದೀತು.) ಅಭ್ಯಾಸಸ್ಯ ಚ=ಪುನಃ ಪುನರುಚ್ಚಾರಣಕ್ಕೆ, (ನಿಗಮನಕ್ಕೂ) ತಾತ್ಪರ್ಯಲಿಂಗತ್ವಂ=ತಾತ್ಪರ್ಯಕಾರಣತ್ವವು, ಸರ್ವೇಷಾಂ=ಎಲ್ಲರಿಗೂ, ಸಿದ್ಧಂ=ಸಮ್ಮತವು. ತದನಂಗೀಕಾರೇ=ಅದನ್ನು ಒಡಂಬಡದಿದ್ದರೆ, ತತ್ಪಕ್ಷೇಽಪಿ=ಅದ್ವೈತಿಗಳ ಪಕ್ಷದಲ್ಲಿಯೂ, ನವಕೃತ್ವಃ = ಒಂಭತ್ತಾವರ್ತಿ, ತತ್ತ್ವಮಸೀತ್ಯಭ್ಯಾಸಸ್ಯ='ತತ್ತ್ವಮಸಿ' ಎಂದು ಪುನಃ ಪುನಃ ಉಚ್ಚಾರಣೆಗೆ, ಅನುವಾದಕತ್ವೇನ = ಅನುವಾದಕತ್ವವಿದ್ದುದರಿಂದ, ('ತತ್ತ್ವಮಸಿ' ಇತ್ಯಾದಿ

ವಾಕ್ಯಗಳಿಗೆ)ಅಪ್ರಾಮಾಣ್ಯಂ=ಅಯಾಥಾರ್ಥ್ಯವು, ಸ್ಯಾತ್=ಬರುವುದು. ಪ್ರಥಮವಾಕ್ಯೇನೈವ= ಪ್ರಾಥಮಿಕ ವಾಕ್ಯದಿಂದಲೇ, ಯಸ್ಯ=ಯಾರಿಗೆ, ಅಸಿದ್ಧಂ=(ಜೀವೇಶ್ವರೈಕ್ಯವು) ತಿಳಿಯಲ್ಪಡ ಲಿಲ್ಲವೋ, ತದರ್ಥಂ = ಅವನಿಗೋಸ್ಕರ, ಅಪರಂ = ಮತ್ತೊಂದು ವಾಕ್ಯವು, ಇತಿ = ಹೀಗೆ, ಉಕ್ತೇ = ಹೇಳುತ್ತಿರಲು, ಪ್ರತ್ಯಕ್ಷಾದಿನಾ= ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ, (ಪ್ರತ್ಯಕ್ಷ ಮೊದಲಾದುದು ದೋಷಸಂಶಯದಿಂದ ಕಲಂಕಿತವಾದ ಪ್ರಯುಕ್ತ) ಭೇದಃ=ಭೇದವು, ಯೇನ= ಯಾರಿಂದ, ಅನಿಶ್ಚಿತಃ=ನಿಶ್ಚಯಿಸಲ್ಪಡಲಿಲ್ಲವೋ, ತದರ್ಥಂ=ಅವನಿಗೋಸ್ಕರ, ಅಪರಂ ವಾಕ್ಯಂ= ಬೇರೊಂದು ವಾಕ್ಯವು, ಇತಿ=ಹೀಗೆ, ಉತ್ತರಂ=ಪ್ರತ್ಯುತ್ತರವು, (ಐಕ್ಯವನ್ನು ಬೋಧಿಸಲು ಸಾಧ್ಯ ವಿಲ್ಲವು. ಪುರುಷರು ಮೃದು ಮಧ್ಯ ಮೊದಲಾದ ಭೇದಗಳಿಂದ ಅನೇಕವಿಧರಿರುತ್ತಾರೆ. ಅಂದರೆ- ಪ್ರಥಮವಾಕ್ಯದಿಂದ ಬೋಧವು ಮೃದುಬುದ್ಧಿಗಳಿಗೇನೇ ಆಗುವುದು. ಮಧ್ಯಮಾದಿ ಬುದ್ಧಿಯುಳ್ಳ ವರಿಗೆ ಆಗಲಾರದು. ಆದಕಾರಣ ಅದಕ್ಕಾಗಿ ೨ನೇ ಮೊದಲಾದ ವಾಕ್ಯಗಳು ಆವಶ್ಯಕಗಳು.)('ನ ಚ ಪ್ರಮಾಣಬಹುತ್ವೇ' ಇತ್ಯಾದಿಗಳಿಂದ ಹೇಳಲ್ಪಟ್ಟದ್ದನ್ನು ಉಪಸಂಹಾರಮಾಡುತ್ತಾರೆ.) ತಸ್ಮಾತ್= ಆದಕಾರಣ, ಬಹುಪ್ರಮಾಣಸಂವಾದಿತ್ವೇ=ಅನೇಕ ಪ್ರಮಾಣಗಳ ಸಂವಾದವಿದ್ದರೆ, ಪ್ರಾಬಲ್ಯ-ಮೇವ = ಪ್ರಬಲತನವೇ ಅದೆ. ಅತಃ = ಆದಕಾರಣ, ಸರ್ವಪ್ರಮಾಣವಿರುದ್ಧತ್ವಾತ್ = ಎಲ್ಲಾ ಪ್ರಮಾಣಗಳಿಂದಲೂ ವಿರೋಧವಿದ್ದುದರಿಂದ, ವಾಕ್ಯಸ್ಯ='ತತ್ತ್ವಮಸಿ' ಇತ್ಯಾದಿ ವಾಕ್ಯಗಳಿಗೆ, ಅಭೇದೇ=ಐಕ್ಯವಿಷಯದಲ್ಲಿ, ತಾತ್ಪರ್ಯಂ=ತಾತ್ಪರ್ಯವು, ನ=ಇಲ್ಲ.

ತಾ ॥ ಮಹಾವಾಕ್ಯವಿಲ್ಲದಿರುವುದರಿಂದ ಅದರಿಂದ ಏಕವಾಕ್ಯವಾಗಿ ಎಲ್ಲಾ ವಾಕ್ಯ ಗಳಿಗೆ ಐಕ್ಯದಲ್ಲಿ ಮಹಾತಾತ್ಪರ್ಯವಿಲ್ಲ ॥ ೧೪೮ ॥

ಅಭೇದದಲ್ಲಿ ತಾತ್ಪರ್ಯವಿಲ್ಲದಿದ್ದರೆ ಎಲ್ಲಾ ಆಗಮಗಳಿಗೆ ಪ್ರತಿಪಾದ್ಯವಾದ ಅರ್ಥವು ಇಲ್ಲದಿರುವುದರಿಂದ ಏಕವಾಕ್ಯತ್ವವು ಆಗಲಾರದೆಂದರೆ —

**ಮೂ ॥ ಕಿಂತು ವಿಷ್ಣೋಸ್ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಂ ॥ ೧೪೯ ॥**

ಅ ॥ ಕಿಂತು=ಆದರೆ, ವಿಷ್ಣೋಃ=ಶ್ರೀ ಪರಮಾತ್ಮನಿಗೆ, ಸರ್ವೋತ್ತಮತ್ವ ಏವ= ಸರ್ವೋತ್ಕೃಷ್ಟತ್ವ ವಿಷಯದಲ್ಲಿಯೇ, ಸರ್ವಾಗಮಾನಾಂ=ಎಲ್ಲಾ ಆಗಮಗಳಿಗೆ, ಮಹಾ ತಾತ್ಪರ್ಯಂ=ಮುಖ್ಯತಾತ್ಪರ್ಯವು ॥ ೧೪೯ ॥

'ಸದಾಗಮೈಕವಿಜ್ಞೇಯಂ' ಎನ್ನುವುದರಿಂದ ಕ್ಷರಾಕ್ಷರ ಪುರುಷರನ್ನತಿಕ್ರಮಿಸುವಿಕೆ, ಇತ್ಯಾದಿ ವಿಶೇಷಣಗಳಿಂದ ವಿಶಿಷ್ಟನಾದ ಶ್ರೀ ಹರಿಯಲ್ಲಿ ಎಲ್ಲಾ ಸದಾಗಮಗಳಿಗೆ ಮಹಾತಾತ್ಪ ರ್ಯವೆಂದು ಹೇಳುವಾಗ ಸರ್ವೋತ್ತಮತ್ವದಲ್ಲಿಯೇ ತಾತ್ಪರ್ಯವನ್ನು ಹೇಳಿದಂತೆ ಆಯಿತು. ಆದಕಾರಣ ಪೂರ್ವೋತ್ತರ ಗ್ರಂಥಗಳಿಗೆ ವಿರೋಧವಿಲ್ಲವು. ಅಂತೂ ಸರ್ವಜ್ಞಂ 'ಸರ್ವಕರ್ತಾರಂ' ಎನ್ನುವುದರಿಂದ ಅಶೇಷ ಸದ್ಗುಣತ್ವವೂ, 'ಅನಾಮಯಂ' ಎನ್ನುವುದರಿಂದ ನಿರ್ದೋಷ ತ್ವವೂ, 'ಸರ್ವೋತ್ತಮಂ' ಎನ್ನುವುದರಿಂದ ಕ್ಷರಾಕ್ಷರಾತೀತತ್ವವೂ, ಪ್ರಮಾಣದಿಂದುಕ್ತ ವಾಗಿದೆ. ಈಗ ಪರಮಾಪ್ತನಾದ ಶ್ರೀ ಕೃಷ್ಣಪರಮಾತ್ಮನೂ ಹಾಗೆಯೇ ಉಪದೇಶಿಸಿರುವನು ಎಂದು ನಿರೂಪಿಸುತ್ತಾರೆ.

ಮೂ || ತಥಾ ಚೋಕ್ತಂ ಭಗವತಾ || ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ | ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ || ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ | ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ || ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ| ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ || ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ | ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ || ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ | ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ || ಇತಿ || ೧೫೦ ||[ಗೀ. ಅಧ್ಯಾ. ೧೫. ಶ್ಲೋ. ೧೬. ೧೭. ೧೮. ೧೯. ೨೦]

ಅ || ತಥಾ ಚ=ಹಾಗೆಯೇ, ಭಗವತಾ=ಶ್ರೀಕೃಷ್ಣಪರಮಾತ್ಮನಿಂದ, ಉಕ್ತಂ=ಹೇಳಲ್ಪಟ್ಟದೆ. ಲೋಕೇ=ಪರ್ಯಾಲೋಚಿಸುವಾಗ, ಅಥವಾ ನಿಯಮ್ಯವರ್ಗದಲ್ಲಿ, ಕ್ಷರಶ್ಚ=ಕ್ಷರರೆಂತೆಂದೂ, ಅಕ್ಷರಶ್ಚ = ಅಕ್ಷರಳೆಂತೆಂದೂ, ಇಮೌ = ಪ್ರಮಿತರಾದ, ಪುರುಷೌ=ಚೇತನರು, ದ್ವಾವೇವ=ಇಬ್ಬರೇ. ಸರ್ವಾಣಿ ಭೂತಾನಿ=ಬ್ರಹ್ಮರುದ್ರಮೊದಲಾದ ಜೀವರೆಲ್ಲರೂ, ಕ್ಷರಃ=ಶರೀರನಾಶವಿರುವುದರಿಂದ ಕ್ಷರರೆನ್ನಿಸುತ್ತಾರೆ, ಕೂಟಸ್ಥಃ=ಮಹಾಲಕ್ಷ್ಮಿಯು, ಅಕ್ಷರಃ=ಅವಿನಾಶಿಯಾದ ಶರೀರವಿರುವುರಿಂದ ಅಕ್ಷರಳೆಂದು, ಉಚ್ಯತೇ=ಹೇಳಲ್ಪಡುತ್ತಾಳೆ, ಅನ್ಯಃ=ಕ್ಷರಾಕ್ಷರಪುರುಷರಿಂದ ಇತರನು, ಉತ್ತಮಃ ಪುರುಷಃ=ಸರ್ವೋತ್ತಮನಾದ ಪುರುಷನು, (ಕ್ಷರಾಕ್ಷರರ ಮಧ್ಯದಲ್ಲಿಯೇ ಒಬ್ಬನನ್ನು ಸರ್ವೋತ್ತಮನೆಂದು ಕಲ್ಪಿಸಕೂಡದು) ಪರಮಾತ್ಮೇತಿ=ಪರಮಾತ್ಮನೆಂದು, ಉದಾಹೃತಃ=ಶ್ರುತ್ಯಾದಿಗಳಲ್ಲಿ ಹೇಳಲ್ಪಟ್ಟದ್ದಾನೆ. ಯಃ=ಯಾವಾತನು, ಲೋಕತ್ರಯಂ=ಮೂರುಲೋಕಗಳನ್ನು, (೧೪ ಲೋಕಗಳನ್ನು ಮಹತ್ತತ್ತ್ವ ಮೊದಲಾದವುಗಳನ್ನು) ಆವಿಶ್ಯ=ಪ್ರವೇಶಿಸಿ, ಬಿಭರ್ತಿ=ಧರಿಸುತ್ತಾನೋ, (ಇದರಿಂದ 'ಯಾರು ಯಾರ ಧಾರಣ ಪೋಷಣಾದಿಗಳನ್ನು ಮಾಡುವನೋ ಅವನು ಅವರಿಂದುತ್ತಮನು' ಎಂಬೀ ಯುಕ್ತಿಯು ಉಕ್ತವಾಯಿತು. ಈಶ್ವರಃ=ಸರ್ವ ನಿಯಾಮಕನು. ಅವ್ಯಯಃ=ನಾಶರಹಿತನು. (ಇದರಿಂದ ಜಗತ್ತಿಗೆ ನಾಶವಾದಾಗ್ಯೂ ಜಗತ್ತನ್ನ ಪ್ರವೇಶಿಸಿದ ಶ್ರೀಹರಿಗೆ ನಾಶವಿಲ್ಲವೆಂದುಕ್ತವಾಯಿತು) ಯಸ್ಮಾತ್=ಯಾವ ಕಾರಣದಿಂದ, ಕ್ಷರಂ ಚ=ಸರ್ವಬ್ರಹ್ಮಾದಿ ಜೀವರನ್ನು, ಅತೀತಃ=ಅತಿಕ್ರಮಿಸಿದವನೋ, ಅಕ್ಷರಾದಪಿ=ಮಹಾಲಕ್ಷ್ಮಿಯಿಂದಲೂ, ಉತ್ತಮಃ=ಶ್ರೇಷ್ಠನೋ, ಅತಃ=ಆದ ಕಾರಣ, ಲೋಕೇ=ಪೌರುಷೇಯಾಗಮದಲ್ಲಿಯೂ, ವೇದೇ ಚ = ಅಪೌರುಷೇಯಾಗಮದಲ್ಲಿಯೂ, ಪುರುಷೋತ್ತಮಃ=ಕ್ಷರಾಕ್ಷರ ಪುರುಷರಿಂದ ಅತ್ಯುತ್ತಮನೆಂದು, ಪ್ರಥಿತಃ=ಪ್ರಸಿದ್ಧಪಟ್ಟವನು, ಅಸ್ಮಿ=ಆಗಿರುತ್ತೇನೆ. ಯಃ=ಯಾವಾತನು, ಅಸಂಮೂಢಃ=ಪುರುಷೋತ್ತಮತ್ವವು ಪಾರಮಾರ್ಥಿಕವಲ್ಲ ಎಂಬೀ ಸಮ್ಮೋಹ(ಮಿಥ್ಯಾಜ್ಞಾನ) ರಹಿತನಾಗಿ, ಮಾಂ=ನನ್ನನ್ನು, ಏವಂ=ಪೂರ್ವೋಕ್ತಪ್ರಕಾರ, ಪುರುಷೋತ್ತಮಂ=ಕ್ಷರಾಕ್ಷರ ಪುರುಷರಿಂದುತ್ತಮನನ್ನಾಗಿ, ಜಾನಾತಿ=ತಿಳಿಯುತ್ತಾನೋ, ಸರ್ವವಿತ್=ಸರ್ವಶಾಸ್ತ್ರಾರ್ಥವನ್ನು ತಿಳಿದವನಾದುದರಿಂದ ಸರ್ವಜ್ಞನಾದ, ಸಃ=ಆತನೇ, ಸರ್ವಭಾವೇನ=ಸರ್ವಪ್ರಕಾರದಿಂದಲೂ, ಭಾರತ=ಭರತಕುಲೋತ್ಪನ್ನನಾದ ಅರ್ಜುನನೇ, ಮಾಂ=ನನ್ನನ್ನು, ಭಜತಿ=ಹೊಂದುತ್ತಾನೆ. ಇತಿ=ಈ ಪ್ರಕಾರ, ಗುಹ್ಯತಮಂ=ಅತಿಗೋಪ್ಯವಾದ, ಇದಂ ಶಾಸ್ತ್ರಂ = ಈ ಶಾಸ್ತ್ರವು, ಅನಘ = ನಿರ್ದೋಷಿಯಾದ ಅರ್ಜುನನೇ, ಮಯಾ=ನನ್ನಿಂದ,

ಉಕ್ತಂ=ಹೇಳಲ್ಪಟ್ಟಿತು. ಭಾರತ=ಎಲೈ ಅರ್ಜುನನೇ, ಏತತ್=ಇದನ್ನು, ಬುದ್ಧ್ವಾ = ತಿಳಿದು, ಬುದ್ಧಿಮಾನ್=ಅಪರೋಕ್ಷಜ್ಞಾನಿಯು, ಕೃತಕೃತ್ಯಶ್ಚ=ಮುಕ್ತನೂ ಕೂಡ, ಸ್ಯಾತ್=ಆಗಬೇಕು.

ತಾ || ಈ ಗೀತಾವಾಕ್ಯದಲ್ಲಿ 'ಸರ್ವವಿತ್' ಎಂದು ಹೇಳಿರುವುದರಿಂದ ಪೌರುಷೇಯಾ ಪೌರುಷೇಯ ಆಗಮಗಳಿಗೆಲ್ಲಾ ವಿಷ್ಣುವಿನ ಸರ್ವೋತ್ತಮತ್ವವಿಷಯದಲ್ಲಿಯೇ ಮಹಾತಾತ್ಪರ್ಯ ವೆಂದು ಸ್ಪಷ್ಟವಾಗಿ ಪ್ರತೀತವಾಗುತ್ತದೆ || ೧೫೦ ||

ಶ್ರುತಿಯೂ ಹೀಗೆಯೇ ಪ್ರತಿಪಾದಿಸುತ್ತದೆ ಎಂದು ನಿರೂಪಿಸುತ್ತಾರೆ.—

ಮೂ || ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಂ । ಅವಾಂತರಂ ತತ್ಪರತ್ವಂ ತದನ್ಯತ್ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ || ಇತಿ ಪೈಂಗಿಶ್ರುತಿಃ || ೧೫೧ ||

ಅ || ದೇವದೇವಸ್ಯ=ಬ್ರಹ್ಮಾದಿಗಳಿಂದ ಸ್ತುತ್ಯನಾದ, ವಿಷ್ಣೋಃ = ಶ್ರೀ ಹರಿಯ, ಸರ್ವೋತ್ಕರ್ಷೇ=ಸರ್ವೋತ್ತಮತ್ವದಲ್ಲಿಯೇ, ಸರ್ವಾಗಮಾನಾಂ ಮಹಾತಾತ್ಪರ್ಯಂ=ಎಲ್ಲಾ ಆಗಮಗಳಿಗೂ ಮುಖ್ಯತಾತ್ಪರ್ಯವು, ಅನ್ಯತ್ರ=ಧರ್ಮಾದಿಗಳಲ್ಲಿ, ನೈವ ಚ=ಮುಖ್ಯತಾತ್ಪರ್ಯ ವಿಲ್ಲ. ತದನ್ಯತ್=ತದಿತರವಾದ ಕರ್ಮದೇವತಾಕಾಂಡಾದಿರೂಪ ಆಗಮದ ಏಕದೇಶಕ್ಕೆ, ಅವಾಂತರಂ=ಶ್ರೀಹರಿಯು ಸರ್ವೋತ್ತಮನೆಂದು ತಿಳಿಯಲಿಕ್ಕೆ ಅಂಗವಾದುದರಿಂದ ಅಮುಖ್ಯ ವಾದ, ತತ್ಪರತ್ವಂ=ತಾತ್ಪರ್ಯವು, ಯತಃ=ಯಾವ ಕಾರಣದಿಂದ, ಸರ್ವಾಗಮಾನಾಂ= ಎಲ್ಲಾ ಆಗಮಜ್ಞಾನಸಾಧ್ಯವಾದ, ಪುರುಷಾರ್ಥಃ=ಮೋಕ್ಷವು, ತತಃ=ವಿಷ್ಣುವಿನ ಸರ್ವೋತ್ತ ಮತ್ವಜ್ಞಾನದಿಂದಲೇ, (ಆಗುತ್ತದೋ) ಅತಃ=ಆದಕಾರಣ, ಸತ್ಯಂ=ಹೇಳಿದ್ದು ಸತ್ಯವು ||೧೫೧||

ಪುರಾಣದಲ್ಲಿಯೂ ಹೀಗೆಯೇ ಉಕ್ತವಾಗಿದೆ ಎಂದು ನಿರೂಪಿಸುತ್ತಾರೆ —

ಮೂ || ಮುಖ್ಯಂ ಚ ಸರ್ವವೇದಾನಾಂ ತಾತ್ಪರ್ಯಂ ಶ್ರೀಪತೇಃ ಪರಂ ।
ಉತ್ಕರ್ಷೇ ತು ತದನ್ಯತ್ರ ತಾತ್ಪರ್ಯಂ ಸ್ಯಾದವಾಂತರಂ ||
ಇತಿ ಮಹಾವಾರಾಹೇ || ೧೫೨ ||

ಅ || ಸರ್ವವೇದಾನಾಂ = ಎಲ್ಲಾ ವೇದಗಳಿಗೆ, ಶ್ರೀಪತೇಃ=ಶ್ರೀ ಪರಮಾತ್ಮನ, ಉತ್ಕರ್ಷೇ ತು=ಸರ್ವೋತ್ತಮತ್ವದಲ್ಲಿಯೇ, ಪರಂ ಮುಖ್ಯಂ ಚ ತಾತ್ಪರ್ಯಂ=ಪರಮ ಮುಖ್ಯ ತಾತ್ಪರ್ಯವು. ತದನ್ಯತ್ರ ತು=ಬೇರೆ ಕಡೆಯಲ್ಲಿ, ಪರಂ=ಕೇವಲವಾಗಿ, ಅವಾಂತರಂ ತಾತ್ಪರ್ಯಂ ಸ್ಯಾತ್=ಅಮುಖ್ಯತಾತ್ಪರ್ಯವಾಗುವುದು, ಇತಿ=ಹೀಗೆ, ಮಹಾವಾರಾಹೇ= ಮಹಾವಾರಾಹ ಪುರಾಣದಲ್ಲಿ ಹೇಳಿಯದೆ || ೧೫೨ ||

ಮೂ || ಯುಕ್ತಂ ಚ ವಿಷ್ಣೋಸ್ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಂ || ೧೫೩ ||

ಅ || ಸರ್ವಾಗಮಾನಾಂ=ಎಲ್ಲಾ ಸದಾಗಮಗಳಿಗೂ, ವಿಷ್ಣೋಃ=ಶ್ರೀ ಹರಿಯ, ಸರ್ವೋತ್ತಮತ್ವೇ ಏವ=ಸರ್ವೋತ್ತಮತ್ವವಿಷಯದಲ್ಲಿಯೇ, ಮಹಾತಾತ್ಪರ್ಯಂ=ಮುಖ್ಯ ತಾತ್ಪರ್ಯವು ಎನ್ನುವುದು, ಯುಕ್ತಂ ಚ=ಯುಕ್ತಿಸಿದ್ಧವೂ ಆಗಿರುತ್ತದೆ. ('ಪುರುಷಾರ್ಥ ಸ್ತತೋಽತಃ' ಎಂಬೀ ಶ್ರುತ್ಯುಕ್ತವಾದ ಯುಕ್ತಿಯನ್ನು ವಿಸ್ತರಿಸುವುದಕ್ಕಾಗಿ ಈ ಪ್ರತಿಜ್ಞೆಯು) || ೧೫೩ ||

(೧) ಯುಕ್ತಿಸಿದ್ಧವು ಹೇಗೆ ಅಂದರೆ, ಶ್ರುತಿಸ್ಮೃತಿರೂಪಗಳಾದ ಸರ್ವವೇದಗಳೂ ಒಂದೇ ಶಾಸ್ತ್ರವು. ಶಾಸ್ತ್ರಗಳ ಭೇದದಲ್ಲಿ ಪ್ರಮಾಣವಿಲ್ಲವು. ವಿಷಯಪ್ರಯೋಜನಗಳು ಒಂದೊಂದೇ ಆದುದರಿಂದ ಶಾಸ್ತ್ರಕ್ಕೆ ಐಕ್ಯವು ಬೇರೆ ಕಾರಣವಿಲ್ಲವು. 'ವೇದಶಾಸ್ತ್ರಾತ್ಪರಂ ನಾಸ್ತಿ' ಎಂಬೀ ವಚನದಿಂದ ಶ್ರುತಿಸ್ಮೃತಿರೂಪವಾದ ಈ ಶಾಸ್ತ್ರವೇ ಸರ್ವೋತ್ತಮವೆಂದು ಪ್ರಸಿದ್ಧವು. ಸರ್ವೋತ್ಕೃಷ್ಟವಾದ ಪ್ರಯೋಜನವಿದ್ದರೆನೇ ಈ ಶಾಸ್ತ್ರಕ್ಕೆ ಸರ್ವೋತ್ತಮತ್ವವು ಕೂಡಬಹುದು. ಸರ್ವೋತ್ಕೃಷ್ಟವಾದ ಪ್ರಯೋಜನವು ಮುಕ್ತಿಯೇ ಸರಿ, ಬೇರೆಯಿಲ್ಲವು. ಹೀಗೆ ಎಲ್ಲಾ ಶಾಸ್ತ್ರಗಳಿಗೂ ಮುಕ್ತಿಯೇ ಪ್ರಯೋಜನವೆಂದು ಸಿದ್ಧವಾಯಿತು. (೨) ಪ್ರತಿವಾಕ್ಯದಲ್ಲಿ ವಾಕ್ಯಾರ್ಥಗಳಿಗೆ ಅನೇಕತ್ವವಿದ್ದರೂ ಅವುಗಳಿಂದ ಈ ಶಾಸ್ತ್ರಕ್ಕೆ ವಿಷಯವು ಕೂಡಲಾರದು. ಅರ್ಥಕ್ಕೆ ಐಕ್ಯವಿಲ್ಲದಿರುವುದರಿಂದ ವಾಕ್ಯಕ್ಕೆ ಭೇದವು ಬರಬೇಕಾಗುವುದು. ಆದಕಾರಣ ಯಾರ ಜ್ಞಾನಕ್ಕಾಗಿ ಅವಾಂತರ ವಾಕ್ಯಾರ್ಥಗಳನ್ನು ಪ್ರತಿಪಾದಿಸುವುದೋ ಅಂತಹುದು ಒಂದೇ (ಮಹಾತಾತ್ಪರ್ಯಕ್ಕೆ ವಿಷಯವಾದುದೇ) ವಿಷಯವಾಗಬೇಕು. ಮತ್ತು ಯಾರನ್ನು ತಿಳಿದರೆ ಇಷ್ಟವಾದ ಪ್ರಯೋಜನವು ಸಿಗುವುದೋ, ಅವನೇ ಮಹಾತಾತ್ಪರ್ಯಕ್ಕೆ ವಿಷಯನಾಗುವನು. ಇಷ್ಟಕ್ಕೆ ಕಾರಣವಾದುದೇ ವಿಷಯವೆಂದು ಒಡಂಬಡವಿದ್ದರೆ ವಿಷಯಪ್ರಯೋಜನಗಳಿಗೆ ಸಂಬಂಧವೇ ಇಲ್ಲದಿರುವುದರಿಂದ ಶಾಸ್ತ್ರವೇ ಅನುಪಾದೇಯವಾಗಬೇಕಾಗುವುದು. ಸರ್ವೋತ್ತಮನೆಂದು ತಿಳಿಯಲ್ಪಟ್ಟ ಶ್ರೀ ಹರಿಯೇ ಪ್ರಸನ್ನನಾಗಿ ಇಷ್ಟಪ್ರಯೋಜನವಾದ ಮುಕ್ತಿಯನ್ನು ಕೊಡುವನು. ಮುಕ್ತಿಗೆ ಕಾರಣನಾದುದರಿಂದ ಸರ್ವೋತ್ತಮನಾದ ಶ್ರೀ ಹರಿಯೇ ಸರ್ವ ಸಚ್ಛಾಸ್ತ್ರಗಳಿಗೂ ಮುಖ್ಯತಾತ್ಪರ್ಯವಿಷಯನೆಂದಂಗೀಕರಿಸಬೇಕೆಂದಭಿಪ್ರಾಯಪಟ್ಟವರಾಗಿ ಸ್ವರ್ಗಾದಿಗಳೇ ಪರಮಪುರುಷಾರ್ಥಗಳೆಂದು ತಿಳಿಯುವವರನ್ನು ತಿರಸ್ಕರಿಸುವುದಕ್ಕಾಗಿ ಮೋಕ್ಷವೇ ಸರ್ವ ಪುರುಷಾರ್ಥಗಳಿಗಿಂತಲೂ ಉತ್ತಮವೆಂದು ಸಾಧಿಸುತ್ತಾರೆ —

**ಮೂ ॥ ಮೋಕ್ಷೋ ಹಿ ಸರ್ವಪುರುಷಾರ್ಥೋತ್ತಮಃ ॥ ೧೫೪ ॥**

ಅ ॥ ಮೋಕ್ಷೋ ಹಿ=ಮುಕ್ತಿಯೇ, ಸರ್ವಪುರುಷಾರ್ಥೋತ್ತಮಃ=ಎಲ್ಲಾ ಪುರುಷಾರ್ಥಗಳಿಗಿಂತಲೂ ಶ್ರೇಷ್ಠವಾದುದು ॥ ೧೫೪ ॥

ಆ ವಿಷಯದಲ್ಲಿ ಶ್ರುತಿಸ್ಮೃತಿಗಳನ್ನು ಪಠನೆಮಾಡುತ್ತಾರೆ —

**ಮೂ ॥ ಧರ್ಮಾರ್ಥಕಾಮಾಸ್ಸರ್ವೇಽಪಿ ನ ನಿತ್ಯಾ ಮೋಕ್ಷ ಏವ ಹಿ । ನಿತ್ಯಸ್ತಸ್ಮಾತ್ತದರ್ಥಾಯ ಯತೇತ ಮತಿಮಾನ್ನರಃ ॥ ಇತಿ ಭಾಲ್ಲವೇಯಶ್ರುತಿಃ ॥ ಅನಿತ್ಯತ್ವಾತ್ಸದುಃಖತ್ವಾನ್ನ ಧರ್ಮಾದ್ಯಾಃ ಪರಂ ಸುಖಂ । ಮೋಕ್ಷ ಏವ ಪರಾನಂದಃ ಸಂಸಾರೇ ಪರಿವರ್ತತಾಂ ॥ ಇತಿ ಭಾರತೇ ॥ ೧೫೫ ॥**

ಅ ॥ ಧರ್ಮಾರ್ಥಕಾಮಾಃ ಸರ್ವೇಽಪಿ = ಧರ್ಮಾರ್ಥಕಾಮಗಳಿಂದ ಸಾಧ್ಯಗಳಾದ ಸ್ವರ್ಗಾದಿಗಳೆಲ್ಲವೂ, ನ ನಿತ್ಯಾಃ=ಶಾಶ್ವತಗಳು ಅಲ್ಲ, ಮೋಕ್ಷ ಏವ ಹಿ=ಮುಕ್ತಿಯೇ, ನಿತ್ಯಃ=ಶಾಶ್ವತವು, ತಸ್ಮಾತ್ = ಆದಕಾರಣ, ಮತಿಮಾನ್ = ಬುದ್ಧಿಯುಳ್ಳ, ನರಃ=ಮನುಷ್ಯನು, ತದರ್ಥಾಯ = ನಿತ್ಯಭೂತಮೋಕ್ಷರೂಪಪ್ರಯೋಜನಕ್ಕಾಗಿ, ಯತೇತ=ಪ್ರಯತ್ನಿಸತಕ್ಕದು, ಇತಿ=ಹೀಗೆ, ಭಾಲ್ಲವೇಯಶ್ರುತಿಃ = ಭಾಲ್ಲವೇಯಶ್ರುತಿಯು, ಅನಿತ್ಯತ್ವಾತ್ = ಅನಿತ್ಯಗಳಾದ

ಪ್ರಯುಕ್ತವೂ, ಸದುಃಖತ್ವಾತ್=ದುಃಖಸಹಿತಗಳಾದಪ್ರಯುಕ್ತವೂ, ಧರ್ಮಾದ್ಯಾಃ=ಧರ್ಮವೇ ಮೊದಲಾದುವುಗಳು, ಪರಂ ಸುಖಂ=ಉತ್ಕೃಷ್ಟ ಸುಖಸಾಧನವಾದುದು, ನ=ಅಲ್ಲ, ಪರಾನಂದಃ= ಉತ್ಕೃಷ್ಟ ಆನಂದವುಳ್ಳ, ಮೋಕ್ಷ ಏವ=ಮುಕ್ತಿಯೇ, ಸಂಸಾರೇ=ಸಂಸಾರದಲ್ಲಿ, ಪರಿವರ್ತತಾಂ= ತಿರುಗಾಡುವವರಿಗೆ, (ಉದ್ದೇಶ್ಯವಾಗಿದೆ. ಅಂದರೆ ಸಂಸಾರಿಗಳಿಂದ ಪರಾನಂದರೂಪವಾದ ಮೋಕ್ಷವೇ ಪ್ರಾರ್ಥ್ಯವಾಗಿದೆ.) ॥ ೧೫೫ ॥

ಮುಕ್ತಿಯು ಸರ್ವಪುರುಷಾರ್ಥಗಳಿಂದುತ್ತಮವೆಂದೂ ಸರ್ವೋತ್ತಮ ಶಾಸ್ತ್ರಕ್ಕೆ ಪ್ರಯೋಜನವೆಂದೂ ಸಿದ್ಧವಾಯಿತು. ಆಗಲಿ, ಆದರೆ ಮುಕ್ತಿಯು ಬ್ರಹ್ಮಾತ್ಮೈಕ್ಯಜ್ಞಾನದಿಂದ ಸಿಗುವುದೆಂದು ಕೆಲವರು ಅನ್ನುವರು. ಇನ್ನು ಕೆಲವರು 'ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' । ಎಂಬೀ ವಚನದಿಂದ ಕರ್ಮದಿಂದ ಸಾಧ್ಯವೆನ್ನುವರು. ಅಂತಹರನ್ನು ನಿರಾಕರಿಸುವುದಕ್ಕಾಗಿ ಮೋಕ್ಷವು ವಿಷ್ಣುಪ್ರಸಾದದಿಂದ ಮಾತ್ರ ಸಾಧ್ಯವಾಗಿದೆ, ಎಂದು ಸಾಧಿಸುತ್ತಾರೆ —

**ಮೂ ॥ ಮೋಕ್ಷಶ್ಚ ವಿಷ್ಣುಪ್ರಸಾದೇನ ವಿನಾ ನ ಲಭ್ಯತೇ । ಯಸ್ಯ ಪ್ರಸಾದಾತ್ಪರಮಾರ್ತಿರೂಪಾದಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ । ನಾರಾಯಣೋಽಸೌ ಪರಮೋ ವಿಚಿಂತ್ಯೋ ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ॥ ಇತಿ ನಾರಾಯಣಶ್ರುತಿಃ ॥ ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥ ಇತಿ ಕಠಶ್ರುತಿಃ ॥** [ಕಾಠ. ಅಧ್ಯಾ. ೧ ವ. ೨. ಮಂ. ೨೩. ಪು. ೫೧.] **ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ । ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಂ ॥ ಇತಿ ಭಗವದ್ವಚನಂ ॥ ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ । ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ಸ ಹರಿರೇಕರಾಟ್ ॥ ಇತಿ ಸ್ಕಾಂದೇ ॥ ಅಜ್ಞಾನಾಂ ಜ್ಞಾನದೋ ವಿಷ್ಣುರ್ಜ್ಞಾನಿನಾಂ ಮೋಕ್ಷದಶ್ಚ ಸಃ । ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥ ಇತಿ ಚ ॥ ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ । ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ ॥ ಇತಿ ಚ ॥ ೧೫೬ ॥**

ಅ ॥ (1) ಮೋಕ್ಷಶ್ಚ = ಮುಕ್ತಿಯು, ವಿಷ್ಣುಪ್ರಸಾದೇನ = ಶ್ರೀ ಹರಿಯ ಅನುಗ್ರಹದಿಂದ, ಲಭ್ಯತೇ = ಹೊಂದಲ್ಪಡುತ್ತದೆ. ವಿನಾ = (ವಿಷ್ಣುವಿನ ಅನುಗ್ರಹವನ್ನು)ಹೊರತು, ನ ಲಭ್ಯತೇ = ಇತರರಿಂದ ಹೊಂದಲ್ಪಡುವುದಿಲ್ಲ. (2) ಯಸ್ಯ = ಯಾವ ಶ್ರೀ ಹರಿಯ, ಪ್ರಸಾದಾತ್ = ಅನುಗ್ರಹದಿಂದ, ಪರಮಾರ್ತಿರೂಪಾತ್ = ಅತ್ಯಂತ ದುಃಖಸ್ವರೂಪವಾದ, ಅಸ್ಮಾತ್ ಸಂಸಾರಾತ್ = ಈ ಸಂಸಾರದಿಂದ, ಮುಚ್ಯತೇ = ಬಿಡಲ್ಪಡುತ್ತಾನೆ. ಅಪರೇಣ = ಬೇರೆ ಯಾವುದರಿಂದಲೂ, ನ ಮುಚ್ಯತೇ = ಬಿಡಲ್ಪಡುವುದಿಲ್ಲ. ( ಮುಕ್ತಿಯಾಗುವುದಿಲ್ಲ ) ಅಮುಷ್ಮಾತ್ ಕರ್ಮಪಾಶಾತ್=ಈ ಕರ್ಮವೆಂಬುವ ಹಗ್ಗದಿಂದ, ಅಂದರೆ ಈ ಜನನ ಮರಣಾದಿ

ರೂಪವಾದ ಸಂಸಾರದಿಂದ, ಮುಮುಕ್ಷುಭಿಃ = ಬಿಡುಗಡೆಯನ್ನು ಹೊಂದಲಿಚ್ಛಿಸುವವರಿಂದ, (ಮೋಕ್ಷೇಚ್ಛುಗಳಿಂದ,) ಅಸೌ ನಾರಾಯಣಃ = ಈ ನಾರಾಯಣನು, ಪರಮೋ ವಿಚಿಂತ್ಯಃ = ಅವನ ಪ್ರೀತಿಗಾಗಿ ಸರ್ವೋತ್ಕೃಷ್ಟನೆಂದು ತಿಳಿಯಬೇಕು, ಇತಿ = ಹೀಗೆ, ನಾರಾಯಣಶ್ರುತಿಃ = ನಾರಾಯಣಶ್ರುತಿಯು (3) ಅಯಂ ಆತ್ಮಾ = ಈ ಪರಮಾತ್ಮನು, ಪ್ರವಚನೇನ = ವ್ಯಾಖ್ಯಾನ ದಿಂದ, ನ ಲಭ್ಯಃ = ಪ್ರಾಪ್ಯನಲ್ಲ. ಮೇಧಯಾ = ಪ್ರಜ್ಞಾಬಲದಿಂದ, ನ ಲಭ್ಯಃ = ಪ್ರಾಪ್ಯನಲ್ಲ. ಬಹುನಾ ಶ್ರುತೇನ = ಬಹುಶಾಸ್ತ್ರ ಶ್ರವಣದಿಂದಲೂ, ನ ಲಭ್ಯಃ = ಪ್ರಾಪ್ಯನಲ್ಲ. ಏಷಃ = ಈ ಪರಮಾತ್ಮನು, ಯಮೇವ = ಯಾರನ್ನೇ. ವೃಣುತೇ = ಭಕ್ತನೆಂದು ಸ್ವೀಕರಿಸುತ್ತಾನೋ, ಅಂದರೆ - ಯಾರಿಗೆ ಪ್ರಸನ್ನನಾಗುತ್ತಾನೋ, ತೇನೈವ = ಆ ಭಕ್ತನಿಂದಲೇ. ಲಭ್ಯಃ = ಪ್ರಾಪ್ಯನು. ತಸ್ಯ = ಆ ಭಕ್ತನಿಗೆ, ಏಷಃ ಆತ್ಮಾ = ಈ ಪರಮಾತ್ಮನು. ಸ್ವಾಂ ತನೂಂ = ಅವಿದ್ಯಾವೃತವಾದ ಜೀವ ಸ್ವರೂಪವನ್ನು, ವಿವೃಣುತೇ = ಆವಿರ್ಭವಿಸಿಕೊಡುತ್ತಾನೆ. ಅಂದರೆ — ಅಪರೋಕ್ಷಜ್ಞಾನಕ್ಕೆ ವಿಷಯನಾಗುತ್ತಾನೆ. ಇತಿ = ಹೀಗೆ, ಕಠಶ್ರುತಿಃ = ಕಾಠಕೋಪನಿಷತ್ತು. (ತಾ || ಶಿಷ್ಯರಿಗೆ ತತ್ವೋಪದೇಶ ಮಾಡುವುದರಿಂದಾಗಲೀ, ಪ್ರಜ್ಞಾಬಲದಿಂದಾಗಲೀ, ಬಹಳಾವರ್ತಿ ಶಾಸ್ತ್ರಶ್ರವಣ ಮಾಡುವುದರಿಂದಾಗಲೀ ತನ್ನ ಕಣ್ಣಿಗೆ ಶ್ರೀ ಪರಮಾತ್ಮನು ಗೋಚರನಾಗುವವನಲ್ಲ. ಯಾವನನ್ನು ತನ್ನ ಭಕ್ತನನ್ನಾಗಿ ಅಂಗೀಕರಿಸಿ ಆತನಲ್ಲಿ ಪ್ರಸನ್ನನಾಗುವನೋ, ಆತನಿಗೇನೇ ಶ್ರೀ ಹರಿಯು ತನ್ನ ಚಿದಾನಂದಾದ್ಯಾತ್ಮಕವಾದ ಶರೀರವನು, ಸ್ಪಷ್ಟವಾಗಿ ತೋರಿಸುತ್ತಾನೆ.) (4) ಪಾರ್ಥ = ಎಲೈ ಅರ್ಜುನನೇ, ಮಯಿ = ನನ್ನಲ್ಲಿ, ಆವೇಶಿತಚೇತಸಾಂ = ಮನಸ್ಸನ್ನ ಇಟ್ಟ. ತೇಷಾಂ = ಆ ಜ್ಞಾನಿಗಳಿಗೆ, ಮೃತ್ಯುಸಂಸಾರಸಾಗರಾತ್ = ಮರಣವೆಂಬುವ ಸಂಸಾರಸಮುದ್ರದಿಂದ. ನ ಚಿರಾತ್ = ಶೀಘ್ರದಲ್ಲಿ, ಅಹಂ = ನಾನು, ಸಮುದ್ಧರ್ತಾ = ಉದ್ಧಾರಕನು, ಭವಾಮಿ = ಆಗುತ್ತೇನೆ. ಇತಿ = ಹೀಗೆ, ಭಗವದ್ವಚನಂ = ಶ್ರೀ ಕೃಷ್ಣನ ಗೀತಾರೂಪವಾದ ನುಡಿಯು. (5) ಯಸ್ಮಾತ್ ಪುರುಷಾತ್ = ಯಾವ ಗುಣಪೂರ್ಣನಾದ ಶ್ರೀಹರಿಯಿಂದ (ಅಂದರೆ ಶ್ರೀಹರಿಯ ಪ್ರಸಾದದಿಂದ), ಉತ್ಪತ್ತಿಸ್ಥಿತಿ ಸಂಹಾರಾಃ = ಸೃಷ್ಟಿ ಸ್ಥಿತಿ ಸಂಹಾರಗಳು, ನಿಯತಿಃ = ಪ್ರೇರಣೆಯು, ಜ್ಞಾನಂ = ಜ್ಞಾನವು, ಆವೃತಿಃ = ಅಜ್ಞಾನವು, ಬಂಧಮೋಕ್ಷೌ ಚ = ಸಂಸಾರ ಬಂಧ ಮುಕ್ತಿಗಳು, ಭವಂತಿ = ಆಗುತ್ತವೋ, ಸಃ ಹರಿಃ = ಅಂತಹ ಹರಿಯು, ಏಕರಾಟ್ = ಸ್ವತಂತ್ರನು, (ಸೃಷ್ಟಿಕರ್ತೃತ್ವಾದಿರೂಪವಾದ ಒಂದೊಂದು ಲಕ್ಷಣವು ಚತುರ್ಮುಖಾದಿಗಳಲ್ಲಿಯೂ ಉಂಟೆಂದು ಶಂಕಿಸಬಾರದೆಂಬ ಅಭಿಪ್ರಾಯದಿಂದ 'ಏಕರಾಟ್' ಎಂದು ಹೇಳಿರುವರು. ಚತುರ್ಮುಖಾದಿಗಳಲ್ಲಿ ಶ್ರೀಹರಿಯ ಅಧೀನಗಳಾದ ಸೃಷ್ಟಿ ಕರ್ತೃತ್ವಾದಿಗಳೇ ಇರುತ್ತವೆ. ಅಂತೂ ಸ್ವತಂತ್ರವಾಗಿ ಸೃಷ್ಟಿಯನ್ನು ಮಾಡುವಿಕೆ, ಸ್ವತಂತ್ರವಾಗಿ ಸಂಹಾರವನ್ನು ಮಾಡುವಿಕೆ, ಇವು ಮೊದಲಾದ ಒಂದೊಂದು ಲಕ್ಷಣಗಳೇ ಹೇಳಲ್ಪಟ್ಟಿರುತ್ತವೆ.) ಇತಿ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿದೆ. (6) ವಿಷ್ಣುಃ = ಶ್ರೀಹರಿಯು, ಅಜ್ಞಾನಾಂ = ಅಜ್ಞಾನಿಗಳಿಗೆ, ಜ್ಞಾನದಃ = ಜ್ಞಾನದಾಯಕನು, ಸಃ = ಆ ಹರಿಯು, ಜ್ಞಾನಿನಾಂ = ಜ್ಞಾನಿಗಳಿಗೆ, ಮೋಕ್ಷದಶ್ಚ = ಲಿಂಗಶರೀರಕ್ಕೆ ನಾಶ(ಭಂಗ)ಮಾಡುವವನು, ಸ ಏವ ಏಕಃ ಜನಾರ್ದನಃ = ಆ ಒಬ್ಬ ಶ್ರೀ ಹರಿಯೇ, ಮುಕ್ತಾನಾಂ = ಮುಕ್ತರಿಗೆ, ಆನಂದದಶ್ಚ = ಸ್ವರೂಪಾನಂದವನ್ನನುಭವಿಸತಕ್ಕ ಶಕ್ತಿ ಪ್ರದನು. ಇತಿ ಚ = ಹೀಗೂ ಅದೆ. (7) ವಿಷ್ಣುರೇವ = ಶ್ರೀ ಹರಿಯೇ, ಭವಪಾಶೇನ = ಸಂಸಾರವೆಂಬ ಹಗ್ಗದಿಂದ, ಬಂಧಕಃ = ಬಂಧಿಸುವವನು, ಭವ ಪಾಶಾಚ್ಚ = ಸಂಸಾರವೆಂಬ ಹಗ್ಗದಿಂದ, ಮೋಚಕಃ = ಬಿಡಿಸುವವನು, ಅಂದರೆ ಅವಿದ್ಯೆಯನ್ನು ನಿವರ್ತಿಸುವವನು, ಲಿಂಗ ಶರೀರಕ್ಕೆ ಭಂಗವನ್ನುಂಟುಮಾಡುವವನು. ಕೈವಲ್ಯದಃ = ಸ್ವರೂಪಾನಂದಾನುಭವಶಕ್ತಿಪ್ರದನು,

ಪರಂ=ಸರ್ವೋತ್ತಮನು,ಬ್ರಹ್ಮ=ಗುಣಪೂರ್ಣನು, ಸಂಶಯಃ=ಸಂದೇಹವು, ನ=ಇರುವುದಿಲ್ಲ. ಇತಿ ಚ=ಹೀಗೂ ಉಕ್ತವಾಗಿದೆ ॥ ೧೫೬ ॥

ವಿಷ್ಣುವಿನ ಪ್ರೀತಿಯೇ ಮೋಕ್ಷಕ್ಕೆ ಸಾಧನವಾಗಲಿ. ಆದರೆ ಆ ವಿಷ್ಣು ಪ್ರೀತಿಯು ಕರ್ಮಾದಿಗಳಿಂದಲೂ ಲಭಿಸುವುದೆಂದರೆ —

**ಮೂ ॥ ಪ್ರೀತಿಶ್ಚ ಗುಣೋತ್ಕರ್ಷಜ್ಞಾನಾದೇವ ವಿಶೇಷತೋ ದೃಷ್ಟಾ ॥ ೧೫೭ ॥**

ಅ ॥ ಪ್ರೀತಿಶ್ಚ=ಭಗವತ್ಪ್ರೀತಿಯು,ಗುಣೋತ್ಕರ್ಷಜ್ಞಾನಾದೇವ=ಸರ್ವೋತ್ಕೃಷ್ಟಗಳಾದ ಗುಣಗಳುಳ್ಳವನೆಂಬ ಜ್ಞಾನದಿಂದಲೇ, ವಿಶೇಷತಃ=ವಿಶೇಷಾಕಾರವಾಗಿ, ದೃಷ್ಟಾ=ಕಾಣಲ್ಪಟ್ಟಿದೆ.

ತಾ ॥ ಯದ್ಯಪಿ ಕರ್ಮಾದಿಗಳಿಂದಲೂ ಶ್ರೀಹರಿಗೆ ಪ್ರೀತಿಯು ಆಗುವುದು. ಆದರೆ ಇದು ಮುಕ್ತಿಗೆ ಸಾಧನವಾಗಲಾರದು. ಪರಮಪ್ರೀತಿಯೇ ಮುಕ್ತಿಸಾಧನವು. ವಿಶೇಷತಃ ಪ್ರೀತಿಯು ಗುಣೋತ್ಕರ್ಷಜ್ಞಾನದಿಂದಲೇ ಆಗುವುದು, ಕರ್ಮಾದಿಗಳಿಂದ ಆಗಲಾರದು. ಹಾಗೆಯೇ ಲೋಕದಲ್ಲಿಯೂ ದೃಷ್ಟವಾಗಿಯದೆ ॥ ೧೫೭ ॥

ರಾಜನು ಭೃತ್ಯನ ಹತ್ತಿರ, ಗುರುಗಳು ಶಿಷ್ಯನ ಹತ್ತಿರ ನಾನೇ ನೀನು ಎಂದು ಹೇಳಿದರೆ ಭೃತ್ಯ ಶಿಷ್ಯರು ತಮಗೂ ಅವರಿಗೂ ಅಭೇದವು ಎಂದು ತಿಳಿದು ಪರಮಪ್ರೀತಿಯುಳ್ಳವರಾಗುತ್ತಾರೆ. ಆದಕಾರಣ ಗುಣೋತ್ಕರ್ಷಜ್ಞಾನದಿಂದಲೇ ಪರಮಪ್ರೀತಿಯೆಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದಾಶಂಕಿಸಿದರೆ —

**ಮೂ ॥ ನಾಭೇದಜ್ಞಾನಾತ್ ॥ ೧೫೮ ॥**

ಅ ॥ ಅಭೇದಜ್ಞಾನಾತ್=ಅಭೇದವೆಂದು ತಿಳಿದುದರಿಂದ, ನ=ಪ್ರೀತಿಯುಂಟಾಗುವುದಿಲ್ಲ.

ತಾ ॥ ಉತ್ತಮನು ಅಧಮನ ಹತ್ತಿರ ನಿನಗೂ ನನಗೂ ಅಭೇದವೆಂದು ಹೇಳಿದರೂ ಅಧಮನು ಉತ್ತಮನಿಂದ ಬಹುಮಾನಿಸಿಕೊಳ್ಳಲ್ಪಟ್ಟೆನೆಂದು ತಿಳಿದು ಉತ್ತಮನಲ್ಲಿ ಪ್ರೀತನಾಗುತ್ತಾನೆ. ಅಧಮನು ಉತ್ತಮನ ಹತ್ತಿರ ನಿಮಗೂ ನನಗೂ ಭೇದವಿಲ್ಲವೆಂದು ಹೇಳಿದರೆ ಉತ್ತಮನಿಗೆ ಅಧಮನಲ್ಲಿ ಪ್ರೀತಿಯುಂಟಾಗುವುದಿಲ್ಲ. ಆದಕಾರಣ ಅಧಮನಾದ ಜೀವನು ಅತ್ಯುತ್ತಮೋತ್ತಮನಾದ ಶ್ರೀ ಹರಿಯು ಹತ್ತಿರ ಆತನಿಗೆ ಪ್ರೀತಿಯಾಗಬೇಕೆಂದು ಇಚ್ಛಿಸುತ್ತಾ ಅವಿದ್ಯಮಾನವಾದ ಅಭೇದವನ್ನು ಹೇಗೆ ಆರೋಪಿಸಿಕೊಂಡಾನು? ಅಲ್ಲದೆ ವೇದವು ಜೀವನಿಗೆ ಅಭೇದವನ್ನು ಹೇಗೆ ತಾನೇ ಉಪದೇಶಿಸಿತು ॥ ೧೫೮ ॥

**ಮೂ ॥ ಅಭೇದಜ್ಞಾನಾದಪ್ರೀತಿರೇವೋತ್ತಮಾನಾಂ ಭವತಿ ॥ ೧೫೯ ॥**

ಅ ॥ (ಐಕ್ಯಜ್ಞಾನದಿಂದ ಆತನಿಗೆ ಪ್ರೀತಿಯುಂಟಾಗುವುದಿಲ್ಲವೆಂದು ಮಾತ್ರವಲ್ಲ. ಮತ್ತೆ) ಅಭೇದಜ್ಞಾನಾತ್=ಅಭೇದಪ್ರತಿಪತ್ತಿ (ಅವಿದ್ಯಮಾನವಿಷಯಭಾವನೆ)ಯಿಂದ (ಅಧಮತ್ವವನ್ನಾರೋಪಿಸಿದುದರಿಂದ) ಅಪ್ರೀತಿರೇವ=ಅಸಂತೋಷವೇ, ಉತ್ತಮಾನಾಂ=ಉತ್ತಮರಿಗೆ, ಭವತಿ=ಆಗುತ್ತದೆ ॥ ೧೫೯ ॥

ಇದನ್ನೇ ದೃಷ್ಟಾಂತದಿಂದ ತೋರಿಸುತ್ತಾರೆ —

**ಮೂ ॥ ಘಾತಯಂತಿ ಹಿ ರಾಜಾನೋ ರಾಜಾಽಹಮಿತಿ ವದಂತಂ ॥ ೧೬೦ ॥**

ಅ ॥ ರಾಜಾನಃ=ರಾಜರು, ರಾಜಾ=ರಾಜನು, ಅಹಂ=(ಈಗ) ನಾನೇ, ಇತಿ=ಹೀಗೆ, ವದಂತಂ=ಹೇಳುವವನನ್ನು, ಘಾತಯಂತಿ=ಕೊಲ್ಲಿಸುತ್ತಾರೆ. ಹಿ=ನಿಶ್ಚಯವು. (ಅವರಿಗೆ ಆತನಲ್ಲಿ ಅಪ್ರೀತಿಯೇ ಹುಟ್ಟುತ್ತದೆ.)

ತಾ || (1) ಲೋಕದಲ್ಲಿದ್ದವರು ಭಯ ಮತ್ಸರಾದಿಗಳಿಂದ ಯುಕ್ತರಾದಪಯುಕ್ತ ಅವರಿಗೆ ಹೀಗೆ ಅಪ್ರೀತಿಯು ಹುಟ್ಟಬಹುದು. ಮಾತ್ಸರ್ಯಾದಿದೋಷರಹಿತನಾದ ಈಶ್ವರನಿಗೆ ಹೀಗೆ ಇಲ್ಲವು ಎಂದಾಶಂಕಿಸಕೂಡದು. ಈಶ್ವರನಿಗೆ ಅಪ್ರೀತಿಯಾಗದೆ ಇದ್ದರೆ 'ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ । ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಮಧುಸೂದನ ॥' ಇತ್ಯಾದಿಗಳಿಂದ ಅಪರಾಧಪರಿಹಾರವೂ ಮಾಡದೆ ಹೋಗಬೇಕಾಗುವುದು. (2) ಅಸತ್ಕಾರವು ಅಪ್ರೀತಿಗೆ ಕಾರಣವಾದುದರಿಂದಲೇ 'ನಿಂದನಸ್ತವ ಸತ್ಕಾರ ನ್ಯಕ್ಕಾರಾರ್ಥಂ ಕಲೇವರಂ । ಪ್ರಧಾನಪರಯೋ ರಾಜನ್ನವಿವೇಕೇನ ಕಲ್ಪಿತಂ ॥ ಸರ್ವಾತ್ಮನಸ್ಸಮದೃಶೋ ಹ್ಯದ್ವಯಸ್ಯಾನಹಂಕೃತೇಃ । ತತ್ಕೃತಂ ಮತಿವೈಷಮ್ಯಂ ನಿರವದ್ಯಸ್ಯ ನ ಕ್ವಚಿತ್' ॥(ಭಾಗ. ಸ್ಕಂ-೮.) ಇದು ಮೊದಲಾದುವುಗಳು ಭಕ್ತರು ಪ್ರಮಾದದಿಂದ ಮಾಡಿದ ಅಪರಾಧವಿಷಯಕವೆಂದು ತಿಳಿಯತಕ್ಕದು. ಅಂದರೆ ಭಕ್ತನು ಕದಾಚಿತ್ ಪ್ರಮಾದದಿಂದ, ಅಸುರಾವೇಶಪ್ರಯುಕ್ತದ್ವೇಷದಿಂದ ನಿಂದಿಸುವಿಕೆ ಮೊದಲಾದ ಅಪರಾಧಗಳನ್ನು ಮಾಡಿದರೆ ಅವನ ಪೂರ್ವಜನ್ಮದ ಭಕ್ತಿಯನ್ನೇ ಅಪೇಕ್ಷಿಸಿ ಇತರಾವೇಶದಿಂದ ಮಾಡಿದ ತತ್ಕಾಲದಲ್ಲಿ ದ್ವೇಷದಿಂದ ಮಾಡಿದ ನಿಂದನಾದಿಗಳನ್ನು ಮನಸ್ಸಿಗೆ ತಾರದೆ ಆತನಲ್ಲಿ ಪ್ರೀತನೇ ಆಗುವನು. ಅಪರಾಧಮಾಡಿದವರಿಗೆ ಎಲ್ಲರಿಗೂ ಹೀಗೆ ಆಗಲಾರದು. ಪೂರ್ವದಲ್ಲಿ ಭಕ್ತರೇ ಆಗಿರುವರು, ಶಿಶುಪಾಲಾದಿಗಳು ಈಗ ಮಾತ್ರ ಶಾಪದಿಂದ ದ್ವೇಷಿಗಳಾಗಿರುವರು ॥೧೬೦॥

ಪ್ರೀತಿಯು ಗುಣೋತ್ಕರ್ಷಜ್ಞಾನದಿಂದಲೆ· ವಿಶೇಷಾಕಾರವಾಗಿ ದೃಷ್ಟವಾಗಿದೆ ಎಂದು ಹೇಳಿದ್ದನ್ನು ವಿವರಣಮಾಡುತ್ತಾರೆ —

**ಮೂ || ದದತಿ ಚ ಸರ್ವಮಭಿಪ್ರೇತಂ ಗುಣೋತ್ಕರ್ಷಂ ವದತಃ || ೧೬೧ ||**

ಅ || ಗುಣೋತ್ಕರ್ಷಂ = ಗುಣಾಧಿಕ್ಯವನ್ನು, ವದತಃ = ಹೇಳುವವನಿಗೆ, ಅಥವಾ ಹೇಳುವವರನ್ನು ಕುರಿತು, (ರಾಜಾದಿಗಳು ಸೇವಕರಾದ ಭೃತ್ಯರಿಂದಲೂ ಅತಿಶಯವಾಗಿ) ಸರ್ವಂ ಅಭಿಪ್ರೇತಂ = ಎಲ್ಲಾ ಇಷ್ಟಾರ್ಥವನ್ನೂ, ದದತಿ ಚ = ಕೊಡುತ್ತಾರೆ.

ತಾ || ಅಭಿಪ್ರೇತಗಳಾದ ಧನಾದಿಗಳನ್ನು ಕೊಡುವುದರಿಂದ ರಾಜಾದಿಗಳಿಗೆ ಗುಣೋತ್ಕರ್ಷವನ್ನು ಹೇಳುವವನಲ್ಲಿ ಪರಮ ಪ್ರೀತಿಯೇ ಅನುಮಿತವಾಗುತ್ತದೆ. 'ವಿಷ್ಣುಃ ಗುಣೋತ್ಕರ್ಷಜ್ಞಾತರಿ ಅತಿಶಯೇನ ಪ್ರೀಯತೇ ಸತ್ಪುರುಷತ್ವಾತ್, ಪುಣ್ಯಶ್ಲೋಕರಾಜವತ್' ಶ್ರೀಹರಿಯು ಗುಣೋತ್ಕರ್ಷವನ್ನು ಹೇಳುವವನಲ್ಲಿ ಹೆಚ್ಚು ಪ್ರೀತನಾಗುತ್ತಾನೆ, ಸತ್ಪುರುಷನಾದ ಪ್ರಯುಕ್ತ, ಪುಣ್ಯಯಶಸ್ಸುಳ್ಳ ರಾಜನಂತೆ, ಎಂಬೀ ಅನುಮಾನವು ಉಕ್ತವಾಯಿತು ॥ ೧೬೧ ॥

ಮುಕ್ತಿಯು ಅನುಮಾನಸಿದ್ಧವಲ್ಲ. ಮತ್ತೆ 'ಅತ್ಯುತ್ತಮ ಪುರುಷಾರ್ಥರೂಪವಾದ ಮೋಕ್ಷವು ಭಗವತ್ಪ್ರೀತಿಯಿಂದಲೇ ಸಾಧ್ಯವು, ಪ್ರೀತಿಯು ಗುಣೋತ್ಕರ್ಷಜ್ಞಾನದಿಂದ ಸಾಧ್ಯವು, ಆ ಜ್ಞಾನವು ವೇದವಚನಗಳಿಗೆ ಮಹಾತಾತ್ಪರ್ಯವನ್ನು ಪ್ರತಿಪಾದಿಸಿದುದರಿಂದ ಆಗುವುದು' ಎಂದುಹೇಳಿದ ಅಶೇಷಾರ್ಥಗಳನ್ನು ಸಂಗ್ರಹಿಸತಕ್ಕ ಶ್ರುತಿಯನ್ನು ಹೇಳುತ್ತಾರೆ.

**ಮೂ || ಶ್ರು || ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ । ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಃ ಸರ್ವಏವ || ಇತಿ ಸೌಪರ್ಣಶ್ರುತಿಃ || ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ ।**

ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತೇತಿ ಗುಣೋತ್ಕರ್ಷ ಜ್ಞಾನಾದೇವ ಪರಮಾ ಪ್ರೀತಿರ್ಭಗವತಾ ಸ್ವಯಮೇವಾಭಿಹಿತಾ ‖ ಅತೋ ವಿಷ್ಣೋರ್ಗುಣೋತ್ಕರ್ಷ ಏವ ಸರ್ವಶ್ರುತಿಸ್ಮೃತೀನಾಂ ಮಹಾತಾತ್ಪರ್ಯಂ । ನ ಚಾಭೇದೇ ತಾತ್ಪರ್ಯಮಿತ್ಯತ್ರ ಕಿಂಚಿ-ನ್ಮಾನಂ ‖ ೧೬೨ ‖

ಅ ‖ ಈದೃಶಸ್ಯ=ಸ್ತುತ್ಯನಾದ. ವಿಷ್ಣೋಃ=ಶ್ರೀ ಹರಿಗೆ, ಗುಣೋತ್ಕರ್ಷಜ್ಞಾತರಿ= ಗುಣೋತ್ಕರ್ಷವನ್ನು ತಿಳಿದವನಲ್ಲಿ, ಯಾದೃಶೀ ಪ್ರೀತಿಃ=ಎಂತಹ ಸಂತೋಷವು, ಸ್ಯಾತ್= ಆಗುವುದೋ, ತಾದೃಶೀ ಪ್ರೀತಿಃ=ಅಂತಹ ಪ್ರೀತಿಯು, (ಸೇವಕರಲ್ಲಿಯೂ) ನ=ಇಲ್ಲವು. ತತ್ಪ್ರೀಣನಾತ್=ಗುಣೋತ್ಕರ್ಷಜ್ಞಾನಪೂರ್ವಕವಾಗಿ ಶ್ರೀಹರಿಯನ್ನು ಸಂತೋಷಿಸಿದುದರಿಂದ, ಸರ್ವಃ=ಎಲ್ಲರೂ, ಮೋಕ್ಷಂ=ಮುಕ್ತಿಯನ್ನು, ಆಪ್ನೋತಿ=ಹೊಂದುತ್ತಾರೆ. ತತಃ=ಆದ ಪ್ರಯುಕ್ತ, ಸರ್ವ ಏವ ವೇದಾಃ=ಎಲ್ಲಾ ವೇದಗಳೂ, ತತ್ಪರಾಃ=ಭಗವತ್ಪ್ರತಿಪಾದಕಗಳೇ ಆಗಿವೆ. ಇತಿ=ಹೀಗೆ, ಸೌಪರ್ಣಶ್ರುತಿಃ=ಸೌಪರ್ಣಶ್ರುತಿಯು. (2) 'ಯೋಮಾಮೇವಂ' (ಈ ಶ್ಲೋಕದ ಅರ್ಥವು ಹಿಂದೆ ನಿರೂಪಿಸಲ್ಪಟ್ಟಿದೆ) ಇತಿ=ಹೀಗೆ. ಗುಣೋತ್ಕರ್ಷಜ್ಞಾನಾದೇವ=ಗುಣಾಧಿಕ್ಯಜ್ಞಾನದಿಂದಲೇ, ಪರಮಾ ಪ್ರೀತಿಃ=ಶ್ರೀಹರಿಗೆ (ಕೃಷ್ಣನಿಗೆ) ಮುಖ್ಯಪ್ರೀತಿಯು, ಭಗವತಾ= ಶ್ರೀಕೃಷ್ಣನಿಂದ, ಸ್ವಯಮೇವ=ತಾನಾಗಿಯೇ, ಅಭಿಹಿತಾ=ಹೇಳಲ್ಪಟ್ಟಿದೆ. (ಆದ ಕಾರಣ ಹೀಗೆ ಜೀವರಿಗೆ ಮೋಕ್ಷಕ್ಕಾಗಿ ಪ್ರವೃತ್ತಗಳಾದ ಸದಾಗಮಗಳು ಮೋಕ್ಷಸಾಧನವಾದ ಭಗವತ್ಪ್ರೀತಿಗೆ ಕಾರಣವಾದ ಗುಣೋತ್ಕರ್ಷಜ್ಞಾನಕ್ಕಾಗಿ ಆ ವಿಷ್ಣುವಿನಲ್ಲಿಯೇ ಮಹಾ-ತಾತ್ಪರ್ಯವುಳ್ಳವುಗಳು ಎಂದು ಸಿದ್ಧವಾಯಿತು). ಅತಃ=ಆದಕಾರಣ, ವಿಷ್ಣೋಃ=ಶ್ರೀ ಹರಿಯ, ಗುಣೋತ್ಕರ್ಷ ಏವ=ಗುಣಾಧಿಕ್ಯ ವಿಷಯದಲ್ಲಿಯೇ, ಸರ್ವಶ್ರುತಿಸ್ಮೃತೀನಾಂ= ಎಲ್ಲಾ ಅಪೌರುಷೇಯ ಪೌರುಷೇಯ ಸದಾಗಮಗಳಿಗೆ, ಮಹಾತಾತ್ಪರ್ಯಂ=ಮುಖ್ಯ ತಾತ್ಪರ್ಯವು. (ಜೀವಬ್ರಹ್ಮರಿಗೆ ಐಕ್ಯವು ಎಲ್ಲಾ ಪ್ರಮಾಣಗಳಿಂದಲೂ ವಿರುದ್ಧಗಳಾದ ಪ್ರಯುಕ್ತ ತತ್ತ್ವಮಸ್ಯಾದಿವಾಕ್ಯಗಳಿಗೆ ತಾತ್ಪರ್ಯವು ಕೂಡಲಾರದು.) ಅಭೇದೇ=ಜೀವ ಬ್ರಹ್ಮರ ಐಕ್ಯದಲ್ಲಿ, ತಾತ್ಪರ್ಯಂ = ತಾತ್ಪರ್ಯವು, ಇತ್ಯತ್ರ=ಈ ವಿಷಯದಲ್ಲಿ, ಕಿಂಚಿತ್ ಮಾನಂ=ಯಾವುದೊಂದು ಪ್ರಮಾಣವೂ, ನ ಚ = ಇಲ್ಲವು.

ತಾ ‖ ನಾವು ಹೇಗೆ ಶ್ರೀ ಹರಿಗೆ ಗುಣೋತ್ಕರ್ಷವನ್ನು ಪ್ರತಿಪಾದಿಸುವ ವಿಷಯದಲ್ಲಿ ಎಲ್ಲಾ ಸದಾಗಮಗಳಿಗೂ ಮಹಾತಾತ್ಪರ್ಯವೆನ್ನುವಲ್ಲಿ ಶ್ರುತಿ ಸ್ಮೃತಿ ಯುಕ್ತಿಗಳನ್ನು ಪ್ರಮಾಣಗಳನ್ನಾಗಿ ತೋರಿಸಿದೆವೋ, ಹಾಗೆಯೇ ಪರರು ಹೇಳುವ ಅರ್ಥದಲ್ಲಿ ಯಾವ ಪ್ರಮಾಣವೂ ಇಲ್ಲವು ‖ ೧೬೨ ‖

(1) ಹಿಂದೆ ಹೇಳಿದ ಪ್ರಕಾರ ಶ್ರೀಹರಿಯು ಸರ್ವೋತ್ತಮನೆಂಬುವ ವಿಷಯದಲ್ಲಿ ಎಲ್ಲಾ ಸದಾಗಮಗಳಿಗೂ, ಮಹಾತಾತ್ಪರ್ಯವೆನ್ನುವುದನ್ನು ಪ್ರಮಾಣಗಳಿಂದುಪಪಾದಿಸಿದರು. ಆ ವಿಷಯದಲ್ಲಿ ಬಾಧಕಗಳನ್ನು ಪರಿಹರಿಸುವುದಕ್ಕಾಗಿ 'ಕಥಂ ಚ ಜೀವಪರಮಾತ್ಮೈಕ್ಯೇ' ಎನ್ನುವುದಕ್ಕಿಂತ ಮೊದಲಿನ ಗ್ರಂಥವು ಹೇಳಲ್ಪಟ್ಟಿದೆ. ಹೇಗೆಂದರೆ—ಕ್ಷರ (ಚತುರ್ಮುಖಾದಿ ಸರ್ವ ಜೀವರು) ಅಕ್ಷರ (ಮಹಾಲಕ್ಷ್ಮಿಯು) ಮತ್ತು ಜಡ ಸ್ವರೂಪಗಳಾದ ಸರ್ವವಸ್ತುಗಳಿಗಿಂತಲೂ ಉತ್ತಮತ್ವವೆನ್ನುವ ಅರ್ಥವು ಭೇದವನ್ನಪೇಕ್ಷಿಸಿಕೊಂಡಿದೆ. ಯಾವುದೊಂದು ಭೇದವೂ ಪ್ರಮಾಣದಿಂದ ಸಿದ್ಧವಾಗಲಿಲ್ಲ. ಘಟಪಟಾದಿಗಳ ಭೇದವು ಪ್ರತ್ಯಕ್ಷಸಿದ್ಧವೆಂದು ಹೇಳಕೂಡದು.

ಏಕೆಂದರೆ— ಒಂದೇ ಭೇದವು ಎರಡರಲ್ಲಿದೆ ಎಂಬುವ ಕಲ್ಪದಲ್ಲಿ ಘಟಪಟಗಳು ಬೇದವುಳ್ಳವುಗಳು ಎಂದು ಘಟಪಟಗಳಲ್ಲಿ ವಿಶೇಷಣವಾಗಿ ಆಗಲೀ, ಘಟಪಟಗಳಿಗೆ ಭೇದವು ಎಂದು ಅವುಗಳಲ್ಲಿ ವಿಶೇಷ್ಯವಾಗಿ ಆಗಲೀ ಭೇದವು ತೋರುತ್ತದೆ, ಅಲ್ಲದೆ ಸ್ವತಂತ್ರವಾಗಿ ಅಂದರೆ ಬರೇ ಭೇದ ಎಂದಿಷ್ಟೇ ಜ್ಞಾನವುಂಟಾಗುವುದಿಲ್ಲವಷ್ಟೆ! (2) 'ಘಟಪಟಗಳು ಭಿನ್ನಗಳು' ಎನ್ನುವಲ್ಲಿ ಘಟದಿಂದ ಪಟವು ಭಿನ್ನವು, ಪಟದಿಂದ ಘಟವು ಭಿನ್ನವು ಎಂದು ಘಟಪಟಗಳೇ ಧರ್ಮಿಗಳಾಗಿ ಉಳ್ಳ ಎರಡು ಭೇದಗಳೇ ತೋರುತ್ತವೆ' ಎಂದಂಗೀಕರಿಸಿ ಘಟನಿರೂಪಿತ (ಪ್ರತಿಯೋಗಿಕ) ಭೇದವು ಪಟದಲ್ಲಿ, ಪಟನಿರೂಪಿತ (ಪ್ರತಿಯೋಗಿಕ) ಭೇದವು ಘಟದಲ್ಲಿ ಹೀಗೆ ಎರಡರಲ್ಲಿ ಒಂದನ್ನು ಆಶ್ರಯಿಸಿಯದೆ ಎನ್ನುವ ಕಲ್ಪದಲ್ಲಿಯೂ ವಿಶೇಷಣ ವಿಶೇಷ್ಯವಾಗಿ ಆಗಲೀ ಧರ್ಮಿಪ್ರತಿಯೋಗಿಗಳ ಭಾವವನ್ನು ಅಪೇಕ್ಷಿಸಿಕೊಂಡಾಗಲೀ ಭೇದವು ತೋರುತ್ತದೆ. ಭೇದಪ್ರತೀತಿಯಲ್ಲಿ ವಿಶೇಷಣಾದಿಗಳ ಅಪೇಕ್ಷೆ ಯಲ್ಲದೆ ಬೇರೆ ಉಪಾಯವಿಲ್ಲವು. ಭೇದವು ಧರ್ಮಿಯಾಗಿ ಒಂದು ಸಂಬಂಧಿಯನ್ನು ಪ್ರತಿಯೋಗಿ ಯಾಗಿ ಮತ್ತೊಂದು ಸಂಬಂಧಿಯನ್ನೂ ಅಪೇಕ್ಷಿಸುತ್ತದೆ. ಭೇದವು ವಿಶೇಷಣವಾದರೆ ಘಟಪಟ ಗಳು ವಿಶೇಷ್ಯಗಳಾಗುತ್ತವೆ. ಭೇದವು ವಿಶೇಷ್ಯವಾದರೆ ಘಟಪಟಗಳು ವಿಶೇಷಣವಾಗುತ್ತವೆ. (3) ವಿಶೇಷಣಭೂತಗಳಾದ ಘಟಪಟಗಳ ಜ್ಞಾನವುಂಟಾದರೆ ವಿಶೇಷ್ಯವಾದ ಭೇದಜ್ಞಾನ ಉಂಟಾಗುತ್ತದೆ. ವಿಶೇಷ್ಯವಾದ ಭೇದಜ್ಞಾನವುಂಟಾದರೆ ವಿಶೇಷಣಭೂತಗಳಾದ ಘಟಪಟಗಳ ಜ್ಞಾನವು ಬರುತ್ತದೆ. ಈ ರೀತಿಯಾಗಿ ಮದುವೆಯಾಗದೆ ಹುಚ್ಚುಬಿಡದು, ಹುಚ್ಚುಬಿಡದೆ ಮದುವೆಯಾಗದೆಂಬಂತೆ ಒಂದೇ ಭೇದವು ಎರಡರಲ್ಲಿದೆ ಎಂದು ತಾರ್ಕಿಕರ ಪಕ್ಷದಲ್ಲಿ ಅನ್ಯೋ ನ್ಯಾಶ್ರಯವು. (4) ಘಟಪಟಗಳು ಭಿನ್ನಗಳು ಎನ್ನುವಲ್ಲಿ ಘಟಪಟಧರ್ಮಿಕಗಳಾದ ಎರಡು ಭೇದಗಳು ತೋರುತ್ತವೆ ಎನ್ನುವ ಕಲ್ಪದಲ್ಲಿಯೂ ಧರ್ಮಿಪ್ರತಿಯೋಗಿಗಳಾದ ಘಟಪಟಗಳ ಜ್ಞಾನ ವುಂಟಾದರೆ ಭೇದಜ್ಞಾನವುಂಟಾಗುತ್ತದೆ. ಭೇದಜ್ಞಾನವುಂಟಾದರೆ ಘಟಪಟಗಳ ಜ್ಞಾನವುಂಟಾಗು ತ್ತದೆ. ಹೀಗೆ ಅನ್ಯೋನ್ಯಾಶ್ರಯವು, ಬರುವುದರಿಂದ ಪ್ರತ್ಯಕ್ಷದಿಂದ ಭೇದಪ್ರತೀತಿಯು ಕೂಡುವು ದಿಲ್ಲ. ಆದುದರಿಂದ ಸೂತ್ರಕಾರರಿಂದಲೂ ಶ್ರುತಿಯಿಂದಲೂ ಕಾಲ್ಪನಿಕವಾದಭೇದವೇ ಹೇಳ ಲ್ಪಟ್ಟಿದೆ, ಪಾರಮಾರ್ಥಿಕವಲ್ಲ, ಎಂಬ ಮಾಯಾವಾದಿಗಳ ಮತವನ್ನು ಆಶಂಕಿಸಿ ನಿಷೇಧಿಸುತ್ತಾರೆ.

**ಮೂ || ನ ಚ ವಿಶೇಷಣವಿಶೇಷ್ಯತಯಾ ಭೇದಸಿದ್ಧಿಃ । ವಿಶೇಷಣವಿಶೇಷ್ಯ ಭಾವಶ್ಚ ಭೇದಾಪೇಕ್ಷಃ ಧರ್ಮಿಪ್ರತಿಯೋಗ್ಯಪೇಕ್ಷಯಾ ಭೇದಸಿದ್ಧಿಃ ಭೇದಾಪೇಕ್ಷಂ ಚ ಧರ್ಮಿಪ್ರತಿಯೋಗಿತ್ವಮಿತ್ಯನ್ಯೋನ್ಯಾಶ್ರಯ ತಯಾ ಭೇದಸ್ಯಾಯುಕ್ತಿಃ || ಪದಾರ್ಥಸ್ವರೂಪತ್ವಾದ್ಭೇದಸ್ಯ || ೧೬೩ ||**

ಅ || ವಿಶೇಷಣವಿಶೇಷ್ಯತಯಾ=(ದ್ವಿತ್ವವಿಶಿಷ್ಟಗಳಾದ ಘಟಪಟಗಳಿಗೆ) ವಿಶೇಷಣರೂಪ ದಿಂದ ವಿಶೇಷ್ಯರೂಪದಿಂದಾಗಲೀ (ಪ್ರತೀತಿಯಿದ್ದರೆ) ಭೇದಸಿದ್ಧಿಃ=ಭೇದವು ಸಿದ್ಧಿಸುವುದು, ವಿಶೇಷಣ ವಿಶೇಷ್ಯಭಾವಶ್ಚ=ವಿಶೇಷಣ ವಿಶೇಷ್ಯಭಾವಪ್ರತೀತಿಯು, ಭೇದಾಪೇಕ್ಷಃ=ಭೇದಪ್ರತೀತಿ ಯನ್ನಪೇಕ್ಷಿಸುತ್ತಿದೆ. ಧರ್ಮಿಪ್ರತಿಯೋಗ್ಯಪೇಕ್ಷಯಾ=ಧರ್ಮಿತ್ವಜ್ಞಾನ, ಪ್ರತಿಯೋಗಿತ್ವಜ್ಞಾನ ಗಳನ್ನಪೇಕ್ಷಿಸಿ, ಭೇದಸಿದ್ಧಿಃ=ಭೇದಜ್ಞಾನವು ಸಿದ್ಧಿಸುವುದು. ಭೇದಾಪೇಕ್ಷಂ ಚ=ಭೇದಜ್ಞಾನ ವನ್ನಪೇಕ್ಷಿಸಿ, ಧರ್ಮಿಪ್ರತಿಯೋಗಿತ್ವಂ=ಧರ್ಮಿತ್ವಜ್ಞಾನ ಪ್ರತಿಯೋಗಿತ್ವಜ್ಞಾನಗಳು, ಇತಿ= ಹೀಗೆ, ಅನ್ಯೋನ್ಯಾಶ್ರಯತಯಾ=ಅನ್ಯೋನ್ಯಾಶ್ರಯ ದೋಷಬರುವುದರಿಂದ, ಭೇದಸ್ಯ= ಭೇದಕ್ಕೆ, ಅಯುಕ್ತಿಃ=ಕೂಡದಿರುವಿಕೆಯು, ನ ಚ=ಇಲ್ಲವು. ಏಕೆಂದರೆ, ಭೇದಸ್ಯ=ಭೇದಕ್ಕೆ, ಪದಾರ್ಥಸ್ವರೂಪತ್ವಾತ್=ಧರ್ಮಿಸ್ವರೂಪತ್ವವಿದ್ದುದರಿಂದ.

ತಾ || (1) ಭೇದವು ಧರ್ಮಿಸ್ವರೂಪವೇ ಆಗಿರುವುದರಿಂದ ಧರ್ಮಿಜ್ಞಾನವೇ ಭೇದಜ್ಞಾನವು, ಬೇರೆಯಲ್ಲ. ಆದುದರಿಂದ ಎರಡು ಪ್ರತೀತಿಗಳಿಲ್ಲದ ಕಾರಣ ಅನ್ಯೋನ್ಯಾಶ್ರಯರೂಪದೋಷವಿಲ್ಲ. ಅಂದರೆ, ಒಂದೇ ಭೇದವು ಎರಡರ ಧರ್ಮವಲ್ಲ. ಒಂದರ ಧರ್ಮವಾಗಿದೆ. ಮತ್ತೊಂದರಿಂದ ನಿರೂಪಿತವಾಗುತ್ತದೆ. 'ಘಟಪಟೌ ಭಿನ್ನೌ' ಎನ್ನುವಲ್ಲಿಯೂ ಘಟದಿಂದ ಪಟವು ಭೇದವುಳ್ಳದ್ದು, ಪಟದಿಂದ ಘಟವು ಭೇದವುಳ್ಳದ್ದು ಎಂದೇ ಅರ್ಥವು. ಹೀಗೆಯೇ 'ಘಟಪಟಯೋರ್ಭೇದಃ' ಎನ್ನುವಲ್ಲಿಯೂ ಘಟಪಟಧರ್ಮಿಕಗಳಾದ ಎರಡು ಭೇದಗಳೇ ತೋರುತ್ತವೆ. ಘಟಪಟಗಳ ರೂಪವು ಎನ್ನುವಂತೆ ಸಮುದಾಯವನ್ನು ಇಟ್ಟುಕೊಂಡು 'ಭೇದಃ' ಎಂದು ಏಕವಚನಪ್ರಯೋಗವು. ಅಂತೂ ಭೇದವು ಧರ್ಮಿಸ್ವರೂಪವೇ. (2) ಹೀಗೆ ಅನ್ಯೋನ್ಯಾಶ್ರಯವಿಲ್ಲದಿದ್ದರೂ ಭೇದವು ಪ್ರತಿಯೋಗಿಸ್ವರೂಪವಾಗದಿರುವುದರಿಂದ ಭೇದಕ್ಕೆ ಅವಧಿಯಾಗಿ ಪ್ರತಿಯೋಗಿತ್ವಜ್ಞಾನವಿದ್ದರೆ ಭೇದಜ್ಞಾನವು, ಭೇದಜ್ಞಾನವಿದ್ದರೆ ಭೇದಕ್ಕೆ ಅವಧಿಯಾಗಿ ಪ್ರತಿಯೋಗಿಜ್ಞಾನವು, ಹೀಗೆ ಪ್ರತಿಯೋಗಿಪ್ರತೀತಿಯನ್ನಪೇಕ್ಷಿಸಿ ಅನ್ಯೋನ್ಯಾಶ್ರಯವು ಬರುವುದೆಂದರೆ, ಘಟಕ್ಕೆ ಪ್ರತಿಯೋಗಿತ್ವವೂ ಕೂಡ ಪಟಪ್ರತಿಯೋಗಿಕವಾದ ಘಟಧರ್ಮಿಕವಾದ ಭೇದಪ್ರಯುಕ್ತವೇ ಸರಿ, ಸಂಶಯವಿಲ್ಲವು. ಅದೂ ಘಟಸ್ವರೂಪವೇ. ಸ್ವರೂಪತಃ ಭೇದವಿರುವ ಪದಾರ್ಥವನ್ನು ತಿಳಿದುದರಿಂದ ಮಾತ್ರ ಪ್ರತಿಯೋಗಿತ್ವವು ಕೂಡುವುದರಿಂದ ಪ್ರತಿಯೋಗಿಜ್ಞಾನವನ್ನಪೇಕ್ಷಿಸಿಕೊಂಡು ಅನ್ಯೋನ್ಯಾಶ್ರಯದೋಷ ಬರುವುದಿಲ್ಲ. (3) ಮತ್ತು ಪ್ರತ್ಯಕ್ಷವು ಭೇದವನ್ನೇ ವಿಷಯೀಕರಿಸುತ್ತದೋ, ವಸ್ತುವನ್ನೂ ವಿಷಯೀಕರಿಸುತ್ತದೋ, 'ಭೇದಃ' ಎಂದಿಷ್ಟೇ ತೋರದಿರುವುದರಿಂದ ಭೇದವನ್ನೇ ವಿಷಯೀಕರಿಸುತ್ತದೆ ಎಂದನ್ನಕೂಡದು. ವಸ್ತುವನ್ನೂ ಕೂಡ ವಿಷಯೀಕರಿಸುತ್ತದೆ, ಎನ್ನುವ ಕಲ್ಪದಲ್ಲಿಯೂ ಪ್ರಥಮತಃ ಭೇದವನ್ನು ವಿಷಯೀಕರಿಸಿ ಮೇಲೆ ವಸ್ತುವನ್ನು ವಿಷಯೀಕರಿಸುತ್ತದೆ ಎಂದು ಹೇಳಕೂಡದು. 'ಭೇದಃ' ಎಂದಿಷ್ಟೇ ಪ್ರತೀತವಾಗುವುದಿಲ್ಲ. ವಿರಮ್ಯವ್ಯಾಪಾರವು ಕೂಡಲಾರದು. (ಮಧ್ಯೇ ನಿಂತು ನಿಂತು ವ್ಯಾಪಾರವು ವಿರಮ್ಯವ್ಯಾಪಾರವು. ಇದು ಚೇತನಧರ್ಮವಾದುದರಿಂದ ಜಡದಲ್ಲಿ ಪ್ರತ್ಯಕ್ಷವಾಗಿ ಕೂಡಲಾರದು.) ವಿರಮ್ಯವ್ಯಾಪಾರವು ಕೂಡದಿರುವುದರಿಂದಲೇ ಪ್ರಥಮತಃ ವಸ್ತುವನ್ನು ವಿಷಯೀಕರಿಸಿ ಮೇಲೆ ಭೇದವನ್ನು ವಿಷಯೀಕರಿಸುತ್ತದೆ ಎಂದೂ ಹೇಳಕೂಡದು. ಭೇದವನ್ನೂ ವಸ್ತುವನ್ನೂ ಎರಡನ್ನೂ ಏಕಕಾಲದಲ್ಲಿಯೇ ವಿಷಯೀಕರಿಸುತ್ತದೆ ಎಂದೂ ಹೇಳಕೂಡದು. ಏಕೆಂದರೆ— ವಸ್ತುಪ್ರತೀತಿಯು ಭೇದಪ್ರತೀತಿಗೆ ಕಾರಣವಾಗಿರುವುದರಿಂದ ಯೌಗಪದ್ಯವು ಕೂಡಲಾರದು ಎಂಬೀ ದೋಷವೂ, ಭೇದವು ಧರ್ಮಿಸ್ವರೂಪವಾಗಿರುವುದರಿಂದ ಧರ್ಮಿಪ್ರತೀತಿಯೇ ಭೇದಪ್ರತೀತಿಯೂ, ಅದಪ್ರಯುಕ್ತ ಭೇದಪ್ರತೀತಿ, ವಸ್ತುಪ್ರತೀತಿಗಳಿಗೆ ಕಾರ್ಯಕಾರಣ ಭಾವವೇ ಇಲ್ಲದಿರುವುದರಿಂದ ಈ ದೋಷಕ್ಕೂ ಅವಕಾಶವಿರುವುದಿಲ್ಲ || ೧೭೩ ||

ಭೇದವು ಧರ್ಮಿಸ್ವರೂಪವಾಗಿದ್ದರೆ ಅನ್ಯೋನ್ಯಾಶ್ರಯದೋಷವನ್ನು ಪರಿಹರಿಸಬಹುದು. ಆದರೆ ಅದೇ ಕೂಡಲಾರದು. ಮತ್ತೊಂದರ ಪ್ರತೀತಿಯನ್ನಪೇಕ್ಷಿಸದೇನೇ ಧರ್ಮಿಸ್ವರೂಪವು ತೋರುತ್ತದೆ. ಯಾಂಗಾದರೂ 'ಇದರಿಂದ ಈ ಪಟವು' ಎಂದಾಗಲೀ, ಇದರಿಂದ ಇದಕ್ಕೆ ಪಟವು ಎಂದಾಗಲೀ ಪ್ರತೀತಿಯಿಲ್ಲವಷ್ಟೆ! ಮತ್ತೆ ಪಟವು ಎಂದೇ ತೋರುತ್ತದೆ, ಭೇದವಾದರೆ ಘಟದಿಂದ ಪಟವು ಭಿನ್ನವು ಎಂದಾಗಲೀ ಘಟದಿಂದ ಪಟಕ್ಕೆ ಭೇದವು ಎಂದಾಗಲೀ ಧರ್ಮಿಪ್ರತಿಯೋಗಿಗಳ ಪ್ರತೀತಿಯನ್ನಪೇಕ್ಷಿಸಿಯೇ ಪ್ರತೀತವಾಗುತ್ತದೆ. ಭೇದವು, ಎಂದಿಷ್ಟೇ ಯಾವಾಗಲೂ ತೋರುವುದಿಲ್ಲ. ಅಂತೂ ಸಾಪೇಕ್ಷತ್ವ ನಿರಪೇಕ್ಷತ್ವರೂಪ ವಿರುದ್ಧಧರ್ಮಗಳುಳ್ಳ ಭೇದಸ್ವರೂಪ, ಧರ್ಮಿಸ್ವರೂಪಗಳಿಗೆ ಐಕ್ಯವು ಕೂಡಲಾರದೆಂದಾಶಂಕಿಸಿದರೆ —

ಮೂ ॥ ನ ಚ ಧರ್ಮಿಪ್ರತಿಯೋಗ್ಯಪೇಕ್ಷಯಾ ಭೇದಸ್ಯಾಸ್ವರೂಪತ್ವಂ ।
ಐಕ್ಯವತ್ಸ್ವರೂಪಸ್ಯೈವ ತಥಾತ್ವಾತ್ ॥ ೧೬೪ ॥

ಅ ॥ ಧರ್ಮಿಪ್ರತಿಯೋಗ್ಯಪೇಕ್ಷಯಾ = ಧರ್ಮಿಪ್ರತೀತಿ, ಪ್ರತಿಯೋಗಿಪ್ರತೀತಿಗಳನ್ನ ಪೇಕ್ಷಿಸಿ, (ತೋರುವುದರಿಂದ) ಭೇದಸ್ಯ=ಭೇದಕ್ಕೆ, ಅಸ್ವರೂಪತ್ವಂ=ಮತ್ತೊಂದರ ಪ್ರತೀತಿ ಯನ್ನಪೇಕ್ಷಿಸದೆ ಪ್ರತೀತವಾಗುವ ಧರ್ಮಿಯ ಸ್ವರೂಪತ್ವವು ಕೂಡುವುದಿಲ್ಲವೆನ್ನುವುದು, ನ ಚ= ಇಲ್ಲವು. ಐಕ್ಯವತ್=ಜೀವನಿಗೆ ಬ್ರಹ್ಮನಿಂದ ಐಕ್ಯವು ಎನ್ನುವುದರಂತೆಯೇ, ಸ್ವರೂಪಸ್ಯೈವ= ಧರ್ಮಿಯ ಸ್ವರೂಪಕ್ಕೇನೆ, ತಥಾತ್ವಾತ್=ಪ್ರತೀತಿಯಿದ್ದುದರಿಂದ,

ತಾ ॥ ಇತರವನ್ನಪೇಕ್ಷಿಸದೆ ಪ್ರತೀತವಾಗುವ ಪ್ರತ್ಯಕ್‌ಚೈತನ್ಯಸ್ವರೂಪವಾದ ಜೀವ ಬ್ರಹ್ಮೈಕ್ಯವು 'ಜೀವನಿಗೆ ಬ್ರಹ್ಮನಿಂದ ಐಕ್ಯವು' ಎಂದು ಧರ್ಮಿಪ್ರತಿಯೋಗಿ ಪ್ರತೀತಿಗಳನ್ನಪೇಕ್ಷಿಸಿ ಪ್ರತೀತವಾಗುತ್ತದೆ ಎಂದು ಹೇಗೆ ಮಾಯಾವಾದಿಗಳು ಅಂಗೀಕರಿಸುವರೋ, ಹಾಗೆಯೇ ಇತರ ವನ್ನಪೇಕ್ಷಿಸದೆ ಪ್ರತೀತವಾಗುವ ಧರ್ಮಿಸ್ವರೂಪವೇ ಆದ ಭೇದವೂ ಧರ್ಮಿಪ್ರತೀತಿ,ಪ್ರತಿಯೋಗಿ ಪ್ರತೀತಗಳನ್ನಪೇಕ್ಷಿಸಿ ಪ್ರತೀತವಾಗುತ್ತದೆ ಎಂದು ಯುಕ್ತವೇ ಆಗುತ್ತದೆ. (2) 'ಐಕ್ಯವತ್' ಎನ್ನುವ ಮೂಲದಿಂದ 'ಭೇದಪಟೌ ನಾಭಿನ್ನೌ ಸಾಪೇಕ್ಷ ನಿರಪೇಕ್ಷ ಪ್ರತೀತಿಕತ್ವೇನ ವಿರುದ್ಧ ಧರ್ಮಾಧಿಕರಣತ್ವಾತ್' ಭೇದಪಟಗಳು, ಅಭಿನ್ನಗಳಲ್ಲ ಭಿನ್ನಗಳೇ, ಸಾಪೇಕ್ಷ ನಿರಪೇಕ್ಷ ಪ್ರತೀತಿ ಯಿರುವಪ್ರಯುಕ್ತ ವಿರುದ್ಧಧರ್ಮಗಳಿಗೆ ಆಶ್ರಯವಾದುದರಿಂದ ಎನ್ನುವ ಅನುಮಾನಕ್ಕೆ ಮಾಯಾವಾದಿಗಳು ಜೀವಸ್ವರೂಪವೆಂದಂಗೀಕರಿಸಿದ ಜೀವಬ್ರಹ್ಮೈಕ್ಯದಲ್ಲಿ ವ್ಯಭಿಚಾರವು ॥೧೬೪॥

ಹಿಂದೆ ಹೇಳಿದ ಅನುಮಾನಕ್ಕೆ ವ್ಯಭಿಚಾರಬಂದರೂ ಭೇದವು ಧರ್ಮಿಸ್ವರೂಪವಲ್ಲವು. ಕೆಲವುವೇಳೆ ಧರ್ಮಿಸ್ವರೂಪವು ಪ್ರತೀತವಾದರೂ ಭೇದವು ಪ್ರತೀತವಾಗುವುದಿಲ್ಲ. ಯಾವುದು ತೋರಿದರೂ ಯಾವುದು ತೋರುವುದಿಲ್ಲವೋ ಅದು ಅದರ ಸ್ವರೂಪವಲ್ಲ. ಘಟವು ತೋರಿದರೂ ಪಟವು ತೋರದಿರುವುದರಿಂದ ಪಟವು ಘಟಸ್ವರೂಪವಲ್ಲ. ಈ ಹೇತುವು ಪಕ್ಷದಲ್ಲಿ ಸಿದ್ಧವಾಗಲಿಲ್ಲ ಎಂದಲ್ಲ. ಸ್ಥಾಣು, ಮುತ್ತಿನ ಚಿಪ್ಪುಗಳು, ಪ್ರತೀತಗಳಾದರೂ ಸ್ಥಾಣುವಿನಲ್ಲಿ ಪುರುಷಭೇದವೂ ಶುಕ್ತಿಯಲ್ಲಿ ರಜತಭೇದವೂ ತೋರುವುದಿಲ್ಲ. ಪ್ರತೀತವಾದರೆ ಸಂಶಯವಿಪರ್ಯಯಗಳೇ ಹುಟ್ಟದೆ ಹೋಗಬೇಕಾಗುವುವು. ಸ್ಥಾಣ್ವಾದಿಗಳು ತೋರದಿದ್ದರೆ ಸಂಶಯಾದಿಗಳು ಹುಟ್ಟ ಲಾರವು. ಎಂದಾಶಂಕಿಸಿದರೆ —

ಮೂ ॥ ಸ್ವರೂಪಸಿದ್ಧಾವಪಿ ತದಸಿದ್ಧಿಶ್ಚ ಜಿವೇಶ್ವರೈಕ್ಯಂ ವದತಃ ಸಿದ್ಧೈವ ॥ ೧೬೫ ॥

ಅ ॥ ಸ್ವರೂಪಸಿದ್ಧಾವಪಿ=ಧರ್ಮಿಸ್ವರೂಪವು ತೋರಿದರೂ, ತದಸಿದ್ಧಿಶ್ಚ=ಭೇದವು ತೋರದಿರುವುದು, (ಧರ್ಮಿಸ್ವರೂಪ ಭೇದಗಳಿಗೆ ಅಭೇದಕ್ಕೆ ಅವಿರೋಧಿಯಾಗಿ,) ಜೀವೇಶ್ವ- ರೈಕ್ಯಂ = ಜೀವಬ್ರಹ್ಮೈಕ್ಯವನ್ನು, ವದತಃ = ಹೇಳುವ ಮಾಯಾವಾದಿಗಳಿಗೆ, ಸಿದ್ಧೈವ = ಸಮ್ಮತವೇ ಸರಿ.

ತಾ ॥ ಪ್ರತ್ಯಕ್ ಚೈತನ್ಯವು ಸ್ವಪ್ರಕಾಶವಾಗಿರುವುದರಿಂದ ಜ್ಞಾತವಾಗಿದ್ದರೂ ಜೀವ ಬ್ರಹ್ಮರಿಗೆ ಐಕ್ಯವು ಜ್ಞಾತವಾಗಲಿಲ್ಲ. ಜ್ಞಾತವಾಗಿದ್ದರೆ ಉಪದೇಶವೇ ವ್ಯರ್ಥವಾಗಬೇಕಾಗುವುದು. ಅಲ್ಲದೆ ಮಾಯಾವಾದಿ ತತ್ವವಾದಿಗಳಿಗೂ ವಿವಾದವೇ ಇಲ್ಲದೇಹೋಗಬೇಕಾಗುವುದು.ಆದಾಗ್ಯೂ ಐಕ್ಯವು ಸಿದ್ಧವಾಗದಿದ್ದರೂ ಪ್ರತ್ಯಕ್‌ಚೈತನ್ಯಸ್ವರೂಪವೆಂದು ಪರರು ಅಂಗೀಕರಿಸಿರುವರು.

ಆದಕಾರಣ 'ಧರ್ಮಿಸ್ವರೂಪಪ್ರತೀತಾವಪಿ ಭೇದಸ್ಯಾಪ್ರತೀಯಮಾನತ್ವಾತ್' ಎನ್ನುವ ಹೇತುವಿಗೆ (ಅಂದರೆ — ಧರ್ಮಿಯು ತೋರಿದರೂ ಭೇದವು ತೋರದಿರುವುದರಿಂದ ಭೇದವು ಧರ್ಮಿಸ್ವರೂಪವಲ್ಲವೆಂದು ಸಾಧಿಸುವ ಈ ಅನುಮಾನಕ್ಕೆ) ಮಾಯಾವಾದಿಗಳ ಮತದಲ್ಲಿ ಜೀವಬ್ರಹ್ಮೈಕ್ಯದಲ್ಲಿ ವ್ಯಭಿಚಾರವು ॥ ೧೬೫ ॥

ಈ ಹೇತುವಿಗೆ ಅಸಿದ್ಧಿರೂಪದೋಷವೂ ಇದೆ ಎಂದು ನಿರೂಪಿಸುತ್ತಾರೆ —

**ಮೂ ॥ ಭೇದಸ್ತು ಸ್ವರೂಪದರ್ಶನ ಏವ ಸಿದ್ಧಃ । ಪ್ರಾಯಃ ಸರ್ವತೋ ವಿಲಕ್ಷಣಂ ಹಿ ಪದಾರ್ಥಸ್ವರೂಪಂ ದೃಶ್ಯತೇ ॥ ೧೬೬ ॥**

ಅ ॥ ಭೇದಸ್ತು=ಭೇದವಾದರೂ, ಸ್ವರೂಪದರ್ಶನ ಏವ=ಧರ್ಮಿಸ್ವರೂಪವು ತೋರುವಾಗಲೇ, ಸಿದ್ಧಃ = ತಿಳಿಯಲ್ಪಡುವುದು. ಪ್ರಾಯಃ = ಹೆಚ್ಚಿಗೆಯಾಗಿ, ಪದಾರ್ಥಸ್ವರೂಪಂ = ಧರ್ಮಿಸ್ವರೂಪವು, ಸರ್ವತಃ=ಎಲ್ಲಾ ವಸ್ತುಗಳಿಂದಲೂ, ವಿಲಕ್ಷಣಂ ಹಿ=ಭೇದವುಳ್ಳದ್ದಾಗಿಯೇ, ದೃಶ್ಯತೇ=ಕಾಣಲ್ಪಡುತ್ತದೆ.

ತಾ ॥ (1) ಸ್ವಪ್ರಕಾಶವಾಗಿ ಪ್ರತ್ಯಕ್‌ಚೈತನ್ಯವು ಜ್ಞಾತವಾದರೂ ಐಕ್ಯವು ಜ್ಞಾತವಲ್ಲವು. ಭೇದವು ಹೀಗಲ್ಲವು. ಧರ್ಮಿಸ್ವರೂಪವು ಜ್ಞಾತವಾಗುವಾಗ ಜ್ಞಾತವೇ ಆಗಿದೆ. ಹೀಗೆ ಐಕ್ಯಕ್ಕಿಂತ ಭೇದಕ್ಕೆ ವಿಶೇಷವನ್ನು 'ತು' ಶಬ್ದದಿಂದ ಹೇಳಿದರು. (2) ಕೆಲವುವೇಳೆ ಧರ್ಮಿಯು ತೋರುವಾಗ ಭೇದವೂ ತೋರುತ್ತದೆಂದು ಪರರೂ ಅಂಗೀಕರಿಸಿರುವುದರಿಂದ ಯಾವಾಗ ಯಾವಾಗ ಧರ್ಮಿಸ್ವರೂಪವು ತೋರುತ್ತದೋ, ಆಗಾಗ ಭೇದವು ತೋರುತ್ತದೆ ಎಂಬ ನಿಯಮವನ್ನು 'ಏವ' ಶಬ್ದದಿಂದ ಹೇಳಿದರು. ಸಂಶಯಾದಿ ಸ್ಥಳಗಳಲ್ಲಿ ವಿಶೇಷವನ್ನು ತೋರಿಸುವುದಕ್ಕಾಗಿ 'ಪ್ರಾಯಃ' ಎಂದು ಹೇಳಿರುವರು. ಅಲ್ಲಿಯೂ ವಿಶೇಷವನ್ನು 'ಜಾತ್ಯೈವ ಹಿ ಪ್ರಾಯಃ' ಎನ್ನುವಲ್ಲಿ ಹೇಳುವೆವು. ಯಾವ್ಯಾವುದು ಕಾಣಲ್ಪಡುತ್ತದೋ ಅದು ಅದು ಎಲ್ಲಾ ವಸ್ತುಗಳಿಂದಲೂ ಭಿನ್ನವಾಗಿಯೇ ಕಾಣಲ್ಪಡುತ್ತದೆ. ಅಂದರೆ— ಘಟಪಟ ಮೊದಲಾದ ಎಲ್ಲಾ ವಸ್ತುಗಳ ಜ್ಞಾನವುಂಟಾಗುವಾಗಲೂ ಅವುಗಳು ಅವುಗಳಿಂದ ಇತರ ಎಲ್ಲಾ ವಸ್ತುಗಳಿಂದ ಬೇರೆಯಾಗಿಯೇ ಸರ್ವರಿಂದಲೂ ಅನುಭವಿಸಲ್ಪಡುತ್ತವೆ. ಅಲ್ಲದೆ ಮಿಶ್ರವಾಗಿ ಅಂದರೆ— ಘಟವು ಪಟವು ಎಂದೆಲ್ಲವೂ ಒಂದೇ ರೂಪವಾಗಿ ಜ್ಞಾನವುಂಟಾಗುವುದಿಲ್ಲ. (5) ವ್ಯಾವೃತ್ತಿಯೇ ಭೇದವು, ಒಂದು ವಸ್ತುವಿನಲ್ಲಿ ಅನೇಕ ಭೇದಗಳಿಲ್ಲ; ಮತ್ತೆ ಒಂದೇ ಭೇದವು. ಆದಕಾರಣ ಧರ್ಮಿಸ್ವರೂಪವು ತೋರುವಾಗ ಭೇದವು ಪ್ರತೀತವಾಗುತ್ತದೆ ಎಂದು ಸಿದ್ಧವೇ ಆಗುವುದು ॥೧೬೬॥

ಆದಾಗ್ಯೂ 'ಪಟಸ್ಯ ಭೇದಃ' ಎಂದು ಭೇದವು ಪಟಸಂಬಂಧಿಯಾಗಿ ಪ್ರತೀತವಾಗುವುದರಿಂದ ಭೇದಕ್ಕೆ ಧರ್ಮಿಸ್ವರೂಪತ್ವವು ಕೂಡುವುದಿಲ್ಲ. ಯಾವುದು ಯಾವುದಕ್ಕೆ ಸಂಬಂಧಿಯಾಗಿ ಪ್ರತೀತವಾಗುತ್ತದೋ ಅದು ಅದರ ಸ್ವರೂಪವಲ್ಲ, ಬ್ರಾಹ್ಮಣನ ಕಂಬಲವು ಎನ್ನುವುದರಂತೆ. ಎಂದಾಶಂಕಿಸಿದರೆ —

**ಮೂ ॥ ಅಸ್ಯ ಭೇದ ಇತಿ ತು ಪದಾರ್ಥಸ್ಯ ಸ್ವರೂಪಮಿತಿವತ್ ॥ ೧೬೭ ॥**

ಅ ॥ ಅಸ್ಯ=ಈ ಪಟದ, ಭೇದಃ=ಭೇದವು, ಇತಿ ತು=ಎನ್ನುವುದಾದರೂ, (ಪಟದ ಸಂಬಂಧಿಯಾಗಿ ತೋರುವುದು ವ್ಯಪದೇಶವಾಗಲೀ) ಪದಾರ್ಥಸ್ಯ=ಪದಾರ್ಥದ, ಸ್ವರೂಪಂ=ಸ್ವರೂಪವು, ಇತಿವತ್=ಎನ್ನುವುದರಂತೆ, (ಉಪಪನ್ನವಾಗುತ್ತದೆ.)

ತಾ ॥ (1) ಹೇಗೆ 'ಪದಾರ್ಥಸ್ಯ ಸ್ವರೂಪಂ' ಎಂದು ಪದಾರ್ಥ ಸಂಬಂಧಿಯಾಗಿ ತೋರಿದರೂ ಸ್ವರೂಪವು ಪದಾರ್ಥಕ್ಕಿಂತ ಬೇರೆಯಲ್ಲವೋ, ಹಾಗೆಯೇ ಭೇದವೂ ಧರ್ಮಿ ಸಂಬಂಧಿಯಾಗಿ ತೋರಿದರೂ ಧರ್ಮಿಯಿಂದ ಬೇರೆಯಲ್ಲ, ಧರ್ಮಿ ಸ್ವರೂಪವೇ ಸರಿ. (2) 'ಪದಾರ್ಥಸ್ಯ ಸ್ವರೂಪಂ' ಎನ್ನುವ ಮೂಲದಿಂದ ಪದಾರ್ಥ ಸಂಬಂಧಿಯಾಗಿ ತೋರುವ ಪದಾರ್ಥದಿಂದ ಅಭಿನ್ನವಾದ ಸ್ವರೂಪದಲ್ಲಿ ವ್ಯಭಿಚಾರವು ಉಕ್ತವಾಯಿತು. (3) ಹಾಗೆಯೇ 'ಆನಂದಂ ಬ್ರಹ್ಮಣೋ ವಿದ್ವಾನ್' ಇದು ಮೊದಲಾದುದನ್ನು ದೃಷ್ಟಾಂತವಾಗಿಟ್ಟುಕೊಳ್ಳಬೇಕು. ಆನಂದವು ಬ್ರಹ್ಮ ಸಂಬಂಧಿಯಾಗಿ ಪ್ರತೀತವಾದರೂ ಬ್ರಹ್ಮನಿಂದ ಅಭಿನ್ನವೆಂದು ಪರರಿಗೂ ಸಮ್ಮತವಾಗಿದೆ. ಅಲ್ಲಿಯೂ ವ್ಯಭಿಚಾರವು. ಅಂತೂ ಚೈತ್ರನ ಸ್ವರೂಪವು ಎಂಬಲ್ಲಿ ಚೈತ್ರನಿಗೂ ಆತನ ಸ್ವರೂಪಕ್ಕೂ ಐಕ್ಯವಿದ್ದರೂ ಹಾಗೆ ಪ್ರಯೋಗವು ಹೇಗೆ ಕೂಡುತ್ತದೋ, ಹಾಗೆಯೇ ಪಟದ ಭೇದವು ಎಂದು ಪಟದ ಸಂಬಂಧಿಯನ್ನಾಗಿ ಭೇದವನ್ನು ಪ್ರಯೋಗಿಸುವುದು ಅವುಗಳಿಗೆ ಐಕ್ಯವಿದ್ದರೂ ಕೂಡುತ್ತದೆ. (4) 'ಪದಾರ್ಥಸ್ಯ ಸ್ವರೂಪಂ' 'ಬ್ರಹ್ಮಣಃ ಆನಂದಂ' ಇತ್ಯಾದಿ ಸ್ಥಳಗಳಲ್ಲಿ ಭೇದಾತಿರಿಕ್ತವಾದ ಸಂಬಂಧ ಪ್ರತೀತಿಗೆ ನಿಮಿತ್ತವಾದುದು, ಉಪಚಾರಾದಿ ರೂಪವಾದುದು ಹೇಳಲ್ಪಡುವುದಾದರೆ ಇಲ್ಲಿಯೂ ಭೇದಕ್ಕೆ ಧರ್ಮಿಭೂತವಾದ ಪಟಸ್ವರೂಪತ್ವವಿದ್ದರೂ 'ಪಟದ ಭೇದವು' ಎಂದು ಸಂಬಂಧಿಯಾಗಿ ತೋರಲಿಕ್ಕೆ ಕಾರಣವು. 'ಅಭೇದವಿದ್ದರೂ ಭೇದಕಾರ್ಯನಿರ್ವಾಹಕರೂಪವಿಶೇಷವೆಂದು ಹೇಳುವೆವು' ॥ ೧೩೭ ॥

(1) ಹಾಗಾದರೆ ಭೇದಕ್ಕೆ ಧರ್ಮಿಸ್ವರೂಪತ್ವವು ಸಿದ್ಧವಾದರೆ ವಿಶೇಷರೂಪವಾದ ನಿಮಿತ್ತಾಂತರವನ್ನು ಕಲ್ಪಿಸುವುದು ಕೂಡಬಹುದು. ಭೇದವು ಧರ್ಮಿಸ್ವರೂಪವು ಎನ್ನುವ ವಿಷಯದಲ್ಲಿಯೇ ಏನು ಪ್ರಮಾಣವೆಂದರೆ — ಯಾವ ಮಾಯಾವಾದಿಗಳು ಭೇದವನ್ನೇ ಒಡಂಬಡುವುದಿಲ್ಲವೋ ಅವರನ್ನು ಕುರಿತು ಬೇದಕ್ಕೆ ಧರ್ಮಿ ಸ್ವರೂಪತ್ವರೂಪವಾದ ಪ್ರಮೇಯ ವಿಶೇಷದಲ್ಲಿ ಪ್ರಮಾಣ ವಿಚಾರವು ವ್ಯರ್ಥವು. (2) ಭೇದ ಸ್ವರೂಪದಲ್ಲಿಯೇ ಪ್ರಮಾಣವಿಲ್ಲದಿರುವುದರಿಂದ ಭೇದವನ್ನು ನಾವು (ಮಾಯಾವಾದಿಗಳು) ಒಡಂಬಡುವುದಿಲ್ಲ, ಎಂದು ಹೇಳಿದರೆ 'ಭೇದ ಸ್ವರೂಪವು ಇದೆ' ಎನ್ನುವಲ್ಲಿ ಪ್ರತ್ಯಕ್ಷವೇ ಪ್ರಮಾಣವೆಂದು 'ಭೇದಸ್ತು ವಸ್ತುಸ್ವರೂಪ ದರ್ಶನ ಏವ ಸಿದ್ಧಃ' ಎನ್ನುವುದರಿಂದುಕ್ತವಾಗಿದೆ. ಭೇದಗ್ರಾಹಿ ಪ್ರತ್ಯಕ್ಷಪ್ರಮಾಣಕ್ಕೆ ಬಾಧಕಗಳೂ ಪರಿಹೃತಗಳಾಗಿವೆ. 'ಭೇದಕ್ಕೆ ಮಿಥ್ಯಾತ್ವಸಾಧಕವಾದ ಕೇವಲ ಅನುಮಾನದಿಂದ ಪ್ರತ್ಯಕ್ಷವು ಬಾಧಿತವಾಗಲಾರದೆಂದು ಹೇಳುವೆವು'. (3) ಯಾರು (ತಾರ್ಕಿಕರು) ಭೇದವನ್ನು ಒಡಂಬಟ್ಟು ಭೇದವು ಧರ್ಮಿಸ್ವರೂಪವು ಎನ್ನುವಲ್ಲಿ ಪ್ರಮಾಣವನ್ನು ತಿಳಿಯಲಿಚ್ಛಿಸುವರೋ ಅವರನ್ನು ಕುರಿತು ಆಚಾರ್ಯರು ಹೇಳುತ್ತಾರೆ —

**ಮೂ ॥ ಯದಿ ನ ಸ್ವರೂಪಂ ಭೇದಃ ತದಾ ಪದಾರ್ಥೇ ದೃಷ್ಟೇ ಪ್ರಾಯಃ ಸರ್ವತೋ ವೈಲಕ್ಷಣ್ಯಂ ತಸ್ಯ ನ ಜ್ಞಾಯೇತ ॥ ಅಜ್ಞಾತೇ ಚ ವೈಲಕ್ಷಣ್ಯೇ ಆತ್ಮನಿ ಘಟಃ ಇತ್ಯಪಿ ಸಂಶಯಃ ಸ್ಯಾತ್ ॥ ನ ಹಿ ಕಶ್ಚಿತ್ತಥಾ ಸಂಶಯಂ ಕರೋತಿ ॥ ೧೩೮ ॥**

**ಅ ॥** ಭೇದಃ=ಭೇದವು, ಸ್ವರೂಪಂ ನ ಯದಿ=ಧರ್ಮಿಸ್ವರೂಪವು ಆಗದೆಹೋದರೆ, ತದಾ=ಆಗ, ಪದಾರ್ಥೇ=ಧರ್ಮಿಯು, ದೃಷ್ಟೇ=ಕಾಣಲ್ಪಡುತ್ತಿರಲು, ಪ್ರಾಯಃ = ಬಹುಶಃ, ಸರ್ವತಃ ವೈಲಕ್ಷಣ್ಯಂ=ಎಲ್ಲಾ ವಸ್ತುಗಳಿಂದ ಭೇದವು, ತಸ್ಯ=ಆ ಧರ್ಮಿಗೆ, ನ ಜ್ಞಾಯೇತ=

ತಿಳಿಯಲ್ಪಡದೆ ಹೋಗಬೇಕಾಗುವುದು. ವೈಲಕ್ಷಣ್ಯೇ=(ಆ ಧರ್ಮಿಗೆ) ಘಟವೊದಲಾದ ಸರ್ವ ವಸ್ತುಗಳಿಂದಲೂ ಭೇದವು, ಅಜ್ಞಾತೇ ಚ = ತಿಳಿಯಲ್ಪಡದಿರಲು, ಆತ್ಮನಿ = ಆತ್ಮವಿಷಯದಲ್ಲಿಯೂ, ಘಟ ಇತ್ಯಪಿ ಸಂಶಯಃ=ಘಟವೆಂಬೀ ಸಂದೇಹವು, ಸ್ಯಾತ್=ಬರಬೇಕಾಗುವುದು. ಕಶ್ಚಿತ್=ಯಾರೊಬ್ಬನೂ, ತಥಾ=ಹಾಗೆ, ಸಂಶಯಂ=ಸಂದೇಹವನ್ನು, ನ ಹಿ ಕರೋತಿ= ಮಾಡುವುದಿಲ್ಲವಷ್ಟೆ!

ತಾ ॥ (1) ಸಂಶಯಾದಿ ಸ್ಥಳಗಳನ್ನು ವ್ಯಾವರ್ತಿಸುವುದಕ್ಕಾಗಿ 'ಪ್ರಾಯಃ' ಎಂದು ಹೇಳಿರುವರು. ಭೇದಕ್ಕೆ ಧರ್ಮಿಸ್ವರೂಪತ್ವವಿದ್ದರೇನೇ ಧರ್ಮಿಸ್ವರೂಪವನ್ನು ನೋಡುವಾಗಲೇ ಭೇದವೂ ತೋರುತ್ತದೆ ಎನ್ನುವುದು ಕೂಡುತ್ತದೆ. ಭೇದವು ಧರ್ಮಿಸ್ವರೂಪಕ್ಕಿಂತ ಅತ್ಯಂತ ಭಿನ್ನವಾಗಿದ್ದರೆ ಪಟವನ್ನು ನೋಡುವಾಗ ಘಟವು ಹೇಗೆ ತೋರುವುದಿಲ್ಲವೋ ಹಾಗೆಯೇ, ಪಟದಲ್ಲಿಯೂ ಇತರ ಭೇದವು ತೋರದೆ ಹೋಗಬೇಕಾಗುವುದು. (2) ಪಟದಲ್ಲಿ ಸರ್ವವಸ್ತುಗಳಿಂದಲೂ ಭೇದವು ತಿಳಿಯಲ್ಪಡದೆ ಇದ್ದರೆ ಎಲ್ಲಾ ಪದಾರ್ಥಗಳಲ್ಲಿ ಸೇರಿದ ತನ್ನ ಸ್ವರೂಪಜ್ಞಾನ ಬರುವಾಗಲೂ ಘಟಪಟಾದಿ ವಸ್ತುಗಳಿಗಿಂತ ಬೇರೆಯಾಗಿ ತೋರದೆ ಹೋಗಬೇಕಾದೀತು. ಹಾಗೆ ವಸ್ತುವು ತೋರುವಾಗ ಅದಕ್ಕೆ ಇತರ ಪದಾರ್ಥದಿಂದ ಭೇದವು ತೋರದಿರುವುದಾದರೆ, ತನ್ನ ಸ್ವರೂಪವನ್ನು ತಿಳಿಯುವಾಗ ತನಗೆ ಘಟಾದಿ ಸರ್ವಪದಾರ್ಥಗಳಿಂದ ಭೇದವು ತಿಳಿಯದೆ ಹೋದರೆ ತನ್ನ ಸ್ವರೂಪದಲ್ಲಿಯೂ ನಾನೋ ಅಥವಾ ಘಟವೋ, ಅಥವಾ ಘಟವೇ ಸರಿ. ಇದು ಮೊದಲಾದ ಸಂಶಯವಿಪರೀತಜ್ಞಾನಗಳು ಹುಟ್ಟಬೇಕಾಗುವವು. ದ್ರವ್ಯತ್ವ-ಮೊದಲಾದ ಸಮಾನ ಧರ್ಮಾದಿಗಳೂ ಇವೆ. ಪ್ರತಿಬಂಧಕೀಭೂತವಾದ ಭೇದಜ್ಞಾನವೂ ಇರುವುದಿಲ್ಲ. (3) ಹಾಗೆ ಸಂಶಯಾದಿಗಳು ಹುಟ್ಟಲಿ, ಎಂದು ಹೇಳಕೂಡದು. ಅಪ್ರಾಮಾಣಿಕವಾದುದನ್ನು ಅಂಗೀಕರಿಸುವುದು ಅಯೋಗ್ಯವೇ ಆಗಿರುತ್ತದೆ. (4) ಭೇದವೇನೋ ಇದ್ದೇ ಇದೆ. ಭೇದವು ಧರ್ಮಿಸ್ವರೂಪವೆಂದೂ ಧರ್ಮಿಯಿಂದ ಭಿನ್ನವೆಂದೂ ಎರಡೇ ರೀತಿಯು. ಅದರಲ್ಲಿ ಧರ್ಮಿಸ್ವರೂಪಕ್ಕಿಂತ ಭಿನ್ನವು ಎನ್ನುವ ಪಕ್ಷದಲ್ಲಿ ಆತ್ಮಾದಿ ವಿಷಯದಲ್ಲಿಯೂ ಸಂಶಯಾದಿಗಳು ಬರುವುದರಿಂದ ಉಪಪನ್ನವಾಗದಿರುವಪ್ರಯುಕ್ತ * ಪರಿಶೇಷಪ್ರಮಾಣದಿಂದ ಧರ್ಮಿಸ್ವರೂಪತ್ವವೇ ಸಿದ್ಧಿಸುವುದು. (5) ಧರ್ಮಿಯು ತೋರುವಾಗ ಭೇದವು ತೋರದಿದ್ದರೂ ಮೇಲೆ ಪ್ರತೀತವಾಗುವುದು. ಆ ಭೇದವೇ ಪ್ರಸಕ್ತವಾದಾಗ್ಯೂ ಸಂಶಯಾದಿಗಳನ್ನು ತಡೆಯುವುದು, ಎಂದೂ ಹೇಳಕೂಡದು. ಏಕೆಂದರೆ — ಮೇಲೆಯೂ ಪಟಕ್ಕೆ ಘಟದಿಂದ ಭೇದವು ಎಂದು ತಿಳಿಯಬೇಕು. ಧರ್ಮಿಯು ಪ್ರತೀತವಾಗುವ ಕಾಲದಲ್ಲಿ ನಿರ್ಭೇದವಾದ ವಸ್ತುವಿನಲ್ಲಿ ಪಟಕ್ಕೆ ಘಟದಿಂದ (ಭೇದವು) ಎಂದು ವಿಭಾಗಮಾಡಿ ಅನುವಾದವೇ ಕೂಡಲಾರದು. ಆದಕಾರಣ ಧರ್ಮಿಯು ತೋರುವಾಗಲೇ ಭೇದವು ತೋರದಿದ್ದರೆ ಯಾವಾಗಲೂ ತೋರದೇನೇ ಹೋಗಬೇಕಾದೀತು. ಹಿಂದೆಹೇಳಿದ ಸಂಶಯಾದಿಪ್ರಸಂಗಗಳನ್ನು ನಿವಾರಣೆಮಾಡಲಿಕ್ಕೇನೇ ಸಾಧ್ಯವಿಲ್ಲವು. ಅಂತೂ ಪೂರ್ವದಲ್ಲಿಯೇ ಧರ್ಮಿಯು ತೋರುವ ಸಮಯದಲ್ಲಿಯೇ ಭೇದವೂ ತೋರುತ್ತದೆಂದಂಗೀಕರಿಸಲೇ ಬೇಕು ॥ ೧೬೮ ॥

ಪುನಃ ಶಂಕಿಸುತ್ತಾರೆ— ಭೇದವು ಧರ್ಮಿಸ್ವರೂಪವಾಗಿದ್ದರೆ ಧರ್ಮಿಯು ತೋರುವಾಗಲೇ ಭೇದವೂ ತೋರಬೇಕಾಗುವುದು. ಹೀಗೆ ಇಲ್ಲವು. ಧರ್ಮಿಯು ಪ್ರತೀತವಾಗುವಾಗಲೇ

* ಭೇದಃ = ಭೇದವು, ಧರ್ಮಿಸ್ವರೂಪಂ=ಧರ್ಮಿಸ್ವರೂಪವು, ಧರ್ಮಿಣಾ ಸಹಾನುಪಪನ್ನಭೇದವತ್ತ್ವಾತ್= ಧರ್ಮಿಯಿಂದ ಕೂಡಿಕೊಂಡು ಭೇದವು ಕೂಡದಿರುವುದರಿಂದ, ಧರ್ಮಿಸ್ವರೂಪವತ್=ಧರ್ಮಿಯ ಸ್ವರೂಪದಂತೆಯೇ, ಎಂದು ಅನುಮಾನಪ್ರಯೋಗವು.

ಭೇದವೂ ತೋರಿದರೆ ಸಂಶಯಾದಿಗಳೇ ಹುಟ್ಟದೆ ಹೋಗಬೇಕಾಗುವುವು. ಸಂಶಯಾದಿಗಳು ಪ್ರಮಾಣಸಿದ್ಧಗಳಾಗಿವೆ. ಆದಕಾರಣ ಧರ್ಮಿಯು ತೋರುವಾಗ ಭೇದವು ತೋರುವುದಿಲ್ಲ. ಆದಪ್ರಯುಕ್ತ ಭೇದಕ್ಕೆ ಧರ್ಮಿಸ್ವರೂಪತ್ವವು ಕೂಡಲಾರದು, ಎಂದಾಶಂಕಿಸಿದರೆ —

**ಮೂ ॥ ಜ್ಞಾತ್ವೈವ ಪ್ರಾಯಃ ಸರ್ವತೋ ವೈಲಕ್ಷಣ್ಯಂ ಕಸ್ಮಿಂಶ್ಚಿದೇವ ಸದೃಶೇ ಸಂಶಯಂ ಕರೋತಿ ॥ ೧೭೯ ॥**

**ಅ ॥** ಪ್ರಾಯಃ=ಹೆಚ್ಚಿಗೆಯಾಗಿ, ಸರ್ವತಃ=ಎಲ್ಲಾ ವಸ್ತುಗಳಿಂದಲೂ, ವೈಲಕ್ಷಣ್ಯಂ= ಭೇದವನ್ನು, ಜ್ಞಾತ್ವೈವ=ತಿಳಿದೇ, ಸದೃಶೇ = ಸಮಾನವಾದ, ಕಸ್ಮಿಂಶ್ಚಿದೇವ=ಯಾವುದಾದರೊಂದರಲ್ಲಿಯೇ, ಸಂಶಯಂ=ಸಂದೇಹವನ್ನು, ಕರೋತಿ=ಮಾಡುತ್ತಾನೆ.

**ತಾ ॥** ಒಂದು ವಸ್ತುವಿಗೆ ಒಂದೇ ಭೇದವು. ಅನೇಕವುಂಟೆನ್ನುವ ವಿಷಯದಲ್ಲಿ ಪ್ರಮಾಣವಿಲ್ಲವು. ಆ ಭೇದವಾದರೆ ವಸ್ತುವು ತೋರುವಾಗ ಪ್ರತೀತವೇ ಆಗುವುದು. ಆದರೆ ಆ ಭೇದಕ್ಕೆ ಘಟಪ್ರತಿಯೋಗಿಕತ್ವ, ಪಟಪ್ರತಿಯೋಗಿಕತ್ವ, ಸ್ತಂಭಪ್ರತಿಯೋಗಿಕತ್ವ ಇವು ಮೊದಲಾದ ಅನಂತ ಧರ್ಮಗಳಿವೆ. ಅವುಗಳಲ್ಲಿ ಭೇದದಲ್ಲಿರುವ ಯತ್ಪ್ರತಿಯೋಗಿಕತ್ವರೂಪವಾದ ಧರ್ಮವು ಸಾದೃಶ್ಯಾದಿಗಳ ವಶದಿಂದ ತೋರುವುದಿಲ್ಲವೋ ಅಂತಹ ಸ್ಥಳದಲ್ಲಿ ಸಂಶಯಾದಿಗಳು ಹುಟ್ಟುತ್ತವೆ. ಅಲ್ಲಿಯೂ ಭೇದವು ತೋರುವುದಿಲ್ಲವೆಂದಲ್ಲ. ಆದಕಾರಣ ಸಂಶಯಾದಿಗಳು ಬೇರೆ ರೀತಿಯಾಗಿಯೂ ಕೂಡುವುದರಿಂದ ಅದಕ್ಕಾಗಿ ಧರ್ಮಿಯು ತೋರುವಾಗ ಭೇದವು ತೋರುವುದಿಲ್ಲ ಎಂದಂಗೀಕರಿಸಕೂಡದು. ಆದಕಾರಣ ಭೇದವು ತೋರದಿರುವ ಪ್ರಯುಕ್ತ ಧರ್ಮಿಸ್ವರೂಪವಾಗದಿರುವುದು ಹೇಗೆ? ॥ ೧೭೯ ॥

ಸಂಶಯಾದಿ ಸ್ಥಳಗಳಲ್ಲಿಯೂ ಸರ್ವವಸ್ತುಗಳಿಂದ ಭೇದವು ಪ್ರತೀತವೇ ಆಗುವುದು ಎಂದುಕ್ತವಾಯಿತು. ಭೇದವು ಸರ್ವಥಾ ಪ್ರತೀತವಾಗದಿದ್ದರೆ ಆತ್ಮರೂಪಧರ್ಮಿಯಲ್ಲಿ ಪ್ರತೀತನಾಗುವ ನಾನು ದೇವದತ್ತನೋ? ಅಥವಾ ಘಟವೋ? ಇದುಮೊದಲಾದ ಸಂಶಯಗಳಾಗಲೀ, ನಾನು ಘಟವೇ ಸರಿ. ಎಂಬೀ ವಿಪರ್ಯವೇ ಆಗಲೀ, ಆಗಬೇಕಾಗುವುವು. ಹೀಗೆ ಇಲ್ಲವೆಂದು ನಿರೂಪಿಸುತ್ತಾರೆ —

**ಮೂ ॥ ನ ಹ್ಯಾತ್ಮನ್ಯಹಂ ದೇವದತ್ತೋ ನವೇತಿ ಕಸ್ಯಚಿತ್ಸಂಶಯೋ ಭವತಿ ॥ ೧೮೦ ॥**

**ಅ ॥** ಆತ್ಮನಿ = ಆತ್ಮರೂಪಧರ್ಮಿಯಲ್ಲಿ, ಅಹಂ = ನಾನು, ದೇವದತ್ತಃ = ದೇವದತ್ತನೋ, ನ ವಾ=ದೇವದತ್ತನಲ್ಲವೋ, (ಅಂದರೆ ಘಟವೋ?) ಇತಿ=ಹೀಗೆ, ಕಸ್ಯಚಿತ್= ಯಾರೊಬ್ಬನಿಗೂ, ಸಂಶಯಃ=ಸಂದೇಹವು, ನ ಹಿ ಭವತಿ=ಹುಟ್ಟುವುದಿಲ್ಲ ॥ ೧೮೦ ॥

ಹಾಗಾದರೆ ಘಟಾದಿಗಳಲ್ಲಿ ಘಟತ್ವ ಮೊದಲಾದ ಅಸಾಧಾರಣಧರ್ಮಗಳನ್ನು ಕಂಡು ಅಂತಹ ಧರ್ಮಗಳನ್ನು ತನ್ನಲ್ಲಿ ಕಾಣದಿದ್ದವನಿಗೆ ಸಂಶಯಾದಿಗಳು ಹುಟ್ಟದಿರುವುದರಿಂದ ಅದಕ್ಕಾಗಿ ಎಲ್ಲಾ ವಸ್ತುಗಳಿಂದಲೂ ಭೇದಪ್ರತೀತಿಯನ್ನು ಕಲ್ಪಿಸಕೂಡದು. ಮತ್ತು ಎಲ್ಲಾ ವಸ್ತುಗಳು ತೋರದಿದ್ದರೆ ಎಲ್ಲಾ ವಸ್ತುಗಳಿಂದ ಭೇದವನ್ನು ತಿಳಿಯಲು ಸಾಧ್ಯವಲ್ಲ. ಎಲ್ಲಾ ವಸ್ತುಗಳೂ ಪ್ರತೀತಗಳಾಗುವುದಾದರೆ ಸರ್ವರಿಗೂ ಸಾರ್ವಜ್ಞ್ಯವು ಬರಬೇಕಾದೀತು, ಎಂದಾಶಂಕಿಸಿದರೆ —

**ಮೂ ॥ ಸಾಮಾನ್ಯತಃ ಸರ್ವವೈಲಕ್ಷಣ್ಯೇ ಜ್ಞಾತ ಏವ ಘಟತ್ವಾದಿಜ್ಞಾನಂ ॥ ೧೮೧ ॥**

ಅ ॥ ಸಾಮಾನ್ಯತಃ=ಸಾಮಾನ್ಯಾಕಾರವಾಗಿ, ಸರ್ವವೈಲಕ್ಷಣ್ಯೇ=ಎಲ್ಲಾ ವಸ್ತುಗಳಿಂದಲೂ ಭೇದವು, ಜ್ಞಾತ ಏವ=ತಿಳಿಯಲ್ಪಟ್ಟರೇನೇ, ಘಟತ್ವಾದಿಜ್ಞಾನಂ=ಘಟತ್ವವೊದಲಾದವುಗಳ ಜ್ಞಾನವು, (ಅಸಾಧಾರಣವಾಗಿ ಹುಟ್ಟುತ್ತದೆ.)

ತಾ ॥ (1) ಘಟತ್ವವೊದಲಾದ ಅಸಾಧಾರಣ ಧರ್ಮಜ್ಞಾನದಿಂದ ಸಂಶಯಾದಿಗಳು ಹುಟ್ಟುವುದಿಲ್ಲವೆಂದು ಹೇಳುವವರೂ ಪ್ರಥಮದಲ್ಲಿ ಧರ್ಮಿಗಳಿಗೆ ಎಲ್ಲಾ ವಸ್ತುಗಳಿಂದ ಭೇದಜ್ಞಾನವನ್ನು ಇಚ್ಛಿಸಲೇ ಬೇಕು. ಧರ್ಮಿಗಳಿಗೆ ಎಲ್ಲಾ ವಸ್ತುಗಳಿಂದ ಭೇದಜ್ಞಾನವಿಲ್ಲದೆ ಘಟತ್ವಾದಿಗಳಿಗೆ ಅಸಾಧಾರಣವಾಗಿ ಜ್ಞಾನವೇ ಕೂಡಲಾರದು. ಧರ್ಮಿಗಳಿಗೆ ಅಭೇದವಿದ್ದರೆ ಧರ್ಮವು ಅಸಾಧಾರಣವಾಗಲಾರದು. (2) ಎಲ್ಲಾ ವಸ್ತುಗಳ ಜ್ಞಾನವು ಸಾಮಾನ್ಯವಾಗಿದ್ದರೇನೇ ಸಾಕು. ವಿಶೇಷವಾಗಿ ಬೇಕೆಂದಿಲ್ಲ. ಅಂತಹ ಸಾಮಾನ್ಯವಾದ ಎಲ್ಲಾ ವಸ್ತುಗಳ ಜ್ಞಾನವು, ಎಲ್ಲಾ ಪ್ರಾಣಿಗಳಿಗೆ ಇದ್ದರೂ ವಿಶೇಷಾಕಾರವಾಗಿ ಸರ್ವ ಪದಾರ್ಥಜ್ಞಾನವಿಲ್ಲದಿರುವುದರಿಂದ ಎಲ್ಲರೂ ಸರ್ವಜ್ಞರಾಗಬೇಕೆಂಬುವ ದೋಷವಿಲ್ಲವು. (3) ಎದುರಿಗಿದ್ದ ವಸ್ತುವು ಸರ್ವಸ್ವರೂಪವಲ್ಲವು. ಮತ್ತೆ ಸರ್ವವಸ್ತುಗಳಿಂದ ಭಿನ್ನವೆಂದೇ ಧರ್ಮಿಯು ಸ್ವರೂಪದಿಂದ ತೋರತಕ್ಕ ಭೇದಕ್ಕೆ ಸಾಮಾನ್ಯವಾಗಿ ಸರ್ವವಸ್ತುಗಳೇ ಪ್ರತಿಯೋಗಿಯಾಗಿರುವಿಕೆಯೂ, ಆಗ ಸ್ಮೃತಿಗೆ ಬಂದ ಕೆಲವು ವಿಶೇಷ ವಸ್ತುಗಳೇ ಪ್ರತಿಯೋಗಿಯಾಗಿರುವಿಕೆಯೂ, ಅನುಭವಸಿದ್ಧವು. ಆದಕಾರಣ ಹೀಗೆ ಭೇದವು ಧರ್ಮಿಯು ತೋರುವಾಗಲೇ ತೋರುವ ಪ್ರಯುಕ್ತ ಭೇದಕ್ಕೆ ಧರ್ಮಿಸ್ವರೂಪತ್ವವು ಯುಕ್ತವೇ ಆಗುವುದು. (4) ವಿದಾರಣ ರೂಪವಾದ ಭೇದವು ಪಟಸ್ವರೂಪವಾದರೆ ಪಟಕ್ಕೂ ವಿದಾರಣವು (ಶೀಳೋಣವು) ಆಗಬೇಕಾದೀತು. ಹಾಗೆಯೇ ಪಟಾವಯವಗಳಿಗೂ ವಿದಾರಣವು ಆಗಬೇಕಾದೀತು. ಹೀಗೆ ಸರ್ವವೂ ಶೂನ್ಯವಾಗಬೇಕಾದೀತು, ಎಂದು ಹೇಳಕೂಡದು. ಭೇದವು ವಿದಾರಕ (ಶೀಳಿಸತಕ್ಕುದು) ಅಲ್ಲ. ಮತ್ತೆ ವಿದಾರಣವು (ಶೀಳೋಣವು ವಿಭಾಗವು) ಅಥವಾ ವಿದಾರಕವಾದರೂ ಭೇದವು ಪ್ರತಿಯೋಗಿಯಿಂದ ಧರ್ಮಿಯನ್ನು ಶೀಳಿಸುವುದು. (ವಿಭಾಗಿಸುವುದು.) ತನ್ನಿಂದಲೇ ಧರ್ಮಿಯನ್ನು ವಿಭಾಗಿಸುವುದಲ್ಲ. ವಸ್ತುತಸ್ತು ಭೇದವು ವಿದಾರಣ ಸ್ವರೂಪವಲ್ಲ. ಮತ್ತೆ ಅನ್ಯೋನ್ಯಭಾವವೇ ಸರಿ ॥೧೭೧॥

ಮೂ ॥ ಅತೋ ನಾನ್ಯೋನ್ಯಾಶ್ರಯತಾ ॥ ೧೭೨ ॥

ಅ ॥ ಅತಃ=ಆದಕಾರಣ, ಅನ್ಯೋನ್ಯಾಶ್ರಯತಾ=ಅನ್ಯೋನ್ಯಾಶ್ರಯರೂಪದೋಷವು ನ=ಇಲ್ಲವು.

ತಾ ॥ ಹೀಗೆ ಬಾಧಕವಿಲ್ಲದಿರುವುದರಿಂದಲೂ, ಸಾಧಕವಿದ್ದುದರಿಂದಲೂ ಭೇದವು, ಧರ್ಮಿಸ್ವರೂಪವಾದ ಪ್ರಯುಕ್ತ ಭೇದಪ್ರತೀತಿಯಲ್ಲಿ ಅನ್ಯೋನ್ಯಾಶ್ರಯರೂಪ ದೋಷವಿಲ್ಲವು. ॥ ೧೭೨ ॥

ಪಟವು ತೋರುವಾಗ ಎಲ್ಲಾ ವಸ್ತುಗಳಿಂದಲೂ ಭಿನ್ನವಾಗಿಯೇ ತೋರುತ್ತದೆ ಎಂದುಕ್ತವಾಗಿದೆ. ಅದು ಅಯುಕ್ತವು. ಪ್ರತಿಯೋಗಿಭೂತಗಳಾದ ಸರ್ವವಸ್ತುಗಳದ್ದೂ, ಧರ್ಮಿಯಾದ ಪಟದ್ದೂ ಕೂಡ ಏಕಕಾಲದಲ್ಲಿ ಜ್ಞಾನವು ಹುಟ್ಟಬೇಕಾಗುವುದು. ಯದ್ಯಪಿ, ಒಂದನೇ ಕ್ಷಣದಲ್ಲಿ ಸಂಶಯವು, ಎರಡನೇ ಕ್ಷಣದಲ್ಲಿ ಸಂಶಯವನ್ನು ನಿವರ್ತಿಸುವ ವಿಶೇಷ ದರ್ಶನವು ಆಗುವುದು. ಅಂತೂ ಸಂಶಯ ವಿಶೇಷ ದರ್ಶನಗಳಿಗೆ ಬೆಕ್ಕು ಇಲಿಗಳಂತೆ ವಧ್ಯಘಾತುಕ ಭಾವವಿರುವುದರಿಂದ ಯೌಗಪದ್ಯವು ಇದೆ. (ಅಂದರೆ ಜ್ಞಾನಗಳು ಏಕಕಾಲದಲ್ಲಿರುತ್ತವೆ.) ಇಲ್ಲವಾದರೆ ವಧ್ಯಘಾತುಕ ಭಾವವು (ಬಾಧ್ಯಬಾಧಕ ಭಾವವೇ) ಕೂಡದೆ ಹೋಗುವುದು. ಅಂತೂ ಜ್ಞಾನಗಳು

ಏಕಕಾಲದಲ್ಲಿ ಇರಲಾರವೆಂದು ಲೋಕದಲ್ಲಿ ದೃಷ್ಟವಾದ ಪ್ರಯುಕ್ತ ಪ್ರಕೃತ ಪಟವು ಸರ್ವವಸ್ತುಗಳಿಂದ ಭಿನ್ನವಾಗಿ ತೋರುತ್ತದೆಂದಂಗೀಕರಿಸಿದರೆ ಧರ್ಮಿಜ್ಞಾನ, ಪ್ರತಿಯೋಗಿಜ್ಞಾನಗಳು ಏಕಕಾಲದಲ್ಲಿ ಇರಬೇಕಾಗುವುವೆಂದಾಪಾದಿಸಿದರೆ ಇಷ್ಟವಾದುದನ್ನೇ ಆಪಾದಿಸಿದ ಹಾಗೆ ಆಗುವುದು. ಆದಾಗ್ಯೂ ಜ್ಞಾನಗಳು ಏಕಕಾಲದಲ್ಲಿ ಹುಟ್ಟಲಾರವು. ಏಕೆಂದರೆ— ಮನಸ್ಸು ಅಣುವಾದ ಪ್ರಯುಕ್ತ ಏಕಕಾಲದಲ್ಲಿ ಅನೇಕೇಂದ್ರಿಯಗಳಿಂದ ಸನ್ನಿಕರ್ಷವೇ ಕೂಡಲಾರದು. ಒಂದು ಇಂದ್ರಿಯಕ್ಕೆ ವಿಷಯಗಳಾಗುವ ವಸ್ತುಗಳ ಜ್ಞಾನ ಬರುವಾಗ ಒಂದು ಇಂದ್ರಿಯರೂಪವಾದ ಅಧಿಷ್ಠಾನದಲ್ಲಿ ಮನಸ್ಸನ್ನಿಕರ್ಷವಿದ್ದರೂ ಸಜಾತೀಯಗಳಾದ ಆತ್ಮಗುಣಗಳು ಏಕಕಾಲದಲ್ಲಿ ಹುಟ್ಟಲಾರವು. ಅಂತೂ ಒಂದು ಇಂದ್ರಿಯದಿಂದ ಏಕಕಾಲದಲ್ಲಿ ಅನೇಕ ಜ್ಞಾನಗಳು ಸಹ ಹುಟ್ಟಲಾರವು ಎಂದಾಶಂಕಿಸಿ ಸಮಾಧಾನವನ್ನು ಹೇಳುತ್ತಾರೆ.

**ಮೂ ॥ ನ ಚ ಯುಗಪಜ್ಜ್ಞಾನಾನುತ್ಪತ್ತಿರ್ದೋಷಃ । ಯಥಾ ಯುಗಪದೇವ ದೀಪಸಹಸ್ರದರ್ಶನೇ ಸಾಮಾನ್ಯತಃ ಸರ್ವೇ ಜ್ಞಾಯಂತ ಏವ ತಥಾ ಸ್ಯಾತ್ ॥ ೧೭೩ ॥**

ಅ ॥ ಯುಗಪತ್=ಏಕಕಾಲದಲ್ಲಿ, ಜ್ಞಾನಾನುತ್ಪತ್ತಿಃ=ಜ್ಞಾನ ಹುಟ್ಟದಿರುವುದು, ದೋಷಃ=ದೋಷವು, ನ ಚ=ಅಲ್ಲವು. ಯಥಾ=ಹೇಗೆ, ಯುಗಪದೇವ=ಏಕಕಾಲದಲ್ಲಿಯೇ, ದೀಪಸಹಸ್ರದರ್ಶನೇ=ಸಹಸ್ರದೀಪಗಳಿಗೆ ಚಕ್ಷುಸ್ಸನ್ನಿಕರ್ಷವಾಗುವಾಗ, ಸಾಮಾನ್ಯತಃ = ಸಾಮಾನ್ಯಾಕಾರವಾಗಿ, ಸರ್ವೇ=ಎಲ್ಲಾ ದೀಪಗಳೂ, ಜ್ಞಾಯಂತ ಏವ=ತಿಳಿಯಲ್ಪಡುತ್ತವೆಯೇ ಸರಿ. ತಥಾ=ಹಾಗೆಯೇ, (ಪ್ರಕೃತದಲ್ಲಿಯೂ) ಸ್ಯಾತ್=ಆಗುವುದು.

ತಾ ॥ (1) ಯದ್ಯಪಿ ಏಕಕಾಲದಲ್ಲಿ ಅನೇಕ ಜ್ಞಾನಗಳು ಹುಟ್ಟುವುದಿಲ್ಲ. ಆದಾಗ್ಯೂ ಸಮುದಾಯವನ್ನು ವಿಷಯೀಕರಿಸುವ ಒಂದು ಜ್ಞಾನವು ಹುಟ್ಟುತ್ತದೆ ಎನ್ನುವಲ್ಲಿ ಯಾವ ಅನುಪಪತ್ತಿಯೂ ಇಲ್ಲ. (2) ಶಿಷ್ಯನು ಶಂಕಿಸುವನು. ಆದರೆ ' ಸರ್ವವೂ ' ಎಂದು ಸಾಮಾನ್ಯಾಕಾರವಾಗಿ ಯಾವುದು ಸರ್ವವಿಷಯಕವಾದ ಜ್ಞಾನವದೆಯೋ ಅದು ಸಾಕ್ಷಿರೂಪವು. ಸಾಕ್ಷಿರೂಪ ಜ್ಞಾನವು ನಿತ್ಯವಾದಪ್ರಯುಕ್ತ ಅದು ಸರ್ವದಾ ಇರುವಾಗಲೇ ಮನೋವೃತ್ತಿರೂಪಗಳಾದ ಘಟಪಟಾದಿಗಳ ಜ್ಞಾನಗಳು ಹುಟ್ಟುತ್ತವೆ. ಆದಕಾರಣ ಈ ಆಕ್ಷೇಪಪರಿಹಾರಗಳು (ಏಕಕಾಲದಲ್ಲಿ ಜ್ಞಾನಹುಟ್ಟಬೇಕಾದೀತು. ಎಂದಾಪಾದನರೂಪವಾದ ಆಶಂಕೆಯು, ಸಮೂಹಾಲಂಬನ ಜ್ಞಾನವನ್ನಂಗೀಕರಿಸಿ ಪರಿಹಾರವೂ) ಹೇಗೆ ಕೂಡಬಹುದು, ಎಂದಾಶಂಕಿಸಿದರೆ ಅರ್ಥವನ್ನಂಗೀಕರಿಸಿ ಸಮಾಧಾನವನ್ನು ಹೇಳುತ್ತಾರೆ. ಆದಾಗ್ಯೂ ವಿಶೇಷಾಕಾರವಾಗಿ ಭೇದವು ಪ್ರತೀತವಾಗುವಾಗ ಘಟಪಟಜ್ಞಾನಗಳು ಏಕಕಾಲದಲ್ಲಿ ಹುಟ್ಟಬೇಕಾಗುವುವು. ಅಂತೂ ಅವುಗಳ ಉತ್ಪತ್ತಿಗೂ ಯೌಗಪದ್ಯವು ಬರಬೇಕಾಗುವುದು. ಆದರಲ್ಲಿ ಧರ್ಮಿಯೂ ಪ್ರತಿಯೋಗಿಗಳೂ ಎದುರುನಲ್ಲಿದ್ದರೆ ಏಕಕಾಲದಲ್ಲಿ ಇಂದ್ರಿಯಸನ್ನಿಕರ್ಷವೂ ಆಗುವಾಗ ಸಮುದಾಯವನ್ನು ವಿಷಯೀಕರಿಸುವ ಅಂದರೆ ಧರ್ಮಿ ಪ್ರತಿಯೋಗಿ ಈ ಎರಡನ್ನೂ ವಿಷಯೀಕರಿಸುವ ಒಂದು ಜ್ಞಾನವು ಹುಟ್ಟುತ್ತದೆಂದುಕ್ತವಾಗಿದೆ. ಧರ್ಮಿಪ್ರತಿಯೋಗಿಗಳಲ್ಲಿ ಒಂದೇ ಎದುರಿನಲ್ಲಿದ್ದರೆ ಸಂಸ್ಕಾರಸಹಕೃತವಾದ (ಅಂದರೆ ಧರ್ಮಿಪ್ರತಿಯೋಗಿಗಳಲ್ಲಿ ಯಾವುದೊಂದು ಸನ್ನಿಹಿತವಾಗಲಿಲ್ಲವೋ ಆಯಾಯ ವಸ್ತುಗಳನ್ನು ವಿಷಯೀಕರಿಸುವ ಪೂರ್ವಾನುಭವದಿಂದ ಹುಟ್ಟಿದ ಸಂಸ್ಕಾರಸಹಕೃತವಾದ) ಇಂದ್ರಿಯಸನ್ನಿಕರ್ಷದಿಂದ ಧರ್ಮಿಪ್ರತಿಯೋಗಿಗಳಲ್ಲಿ ಯಾವುದೊಂದು ಸನ್ನಿಹಿತವಾಗಿದೆಯೋ

ಅದನ್ನು ವಿಷಯೀಕರಿಸುವ ಒಂದೇ ಜ್ಞಾನವು ಹುಟ್ಟುತ್ತದೆ. ಧರ್ಮಿಪ್ರತಿಯೋಗಿಗಳು ಎರಡೂ ಸನ್ನಿಹಿತಗಳಾಗದಿದ್ದರೆ ಸಂಸ್ಕಾರವೇ ವ್ಯಾಪಾರವಾಗಿಯುಳ್ಳ ಮನಸ್ಸಿನಿಂದ ಸಮುದಾಯವನ್ನು ವಿಷಯೀಕರಿಸುವ ಒಂದು ಜ್ಞಾನವು ಹುಟ್ಟುತ್ತದೆ. ಎಂದು ತಿಳಿಯತಕ್ಕದು ॥ ೧೭೩ ॥

ಪುನಃ ಆಶಂಕಿಸುತ್ತಾರೆ. ಭೇದವು ಪಟಸ್ವರೂಪವಾದರೆ ಪಟವೇ (ಧರ್ಮಿಯೇ) ಇದೆ ಭೇದವು ಇಲ್ಲ ಎಂದಾಗಲೀ, ಭೇದವೇ ಇದೆ ಪಟವು ಇಲ್ಲ ಎಂದಾಗಲೀ, ಪಟ ಭೇದಶಬ್ದಗಳು ಪರ್ಯಾಯಗಳು ಎಂದಾಗಲೀ ಆಗಬೇಕಾಗುವುವು. ಎಂದು ಆಪಾದಿಸಕೂಡದು, ಇರತಕ್ಕ ಪಟಭೇದಗಳಿಗೇನೇ ಸವಿಶೇಷಾಭೇದವನ್ನು ಸ್ವೀಕರಿಸುವೆವು. ಅದರಲ್ಲಿ ಅಭೇದವಿದ್ದುದರಿಂದ ಅನ್ಯೋನ್ಯಾಶ್ರಯ ಮೊದಲಾದ ದೋಷಗಳು ಪರಿಹೃತಗಳಾಗುವುವು. ವಿಶೇಷವಿದ್ದುದರಿಂದ ಎರಡರಲ್ಲಿ ಒಂದೇ ಅವಶಿಷ್ಟವಾಗಲಿ ಎನ್ನುವುದು ಆಗುವುದಿಲ್ಲ. ವಿಶೇಷವು ಭೇದಕ್ಕೆ ಪ್ರತಿನಿಧಿಯಾಗಿದೆ. ಅಭಿನ್ನವಾದ ವಸ್ತುವಿನಲ್ಲಿ ಭೇದಕಾರ್ಯವನ್ನುಂಟುಮಾಡುವುದೇ ವಿಶೇಷವು. ಅಭಿನ್ನವಾದ ವಸ್ತುವಿನಲ್ಲಿ ಪುನಃ ವಿಶೇಷವದೆ ಎನ್ನುವುದು ಅಪ್ರಸಿದ್ಧವಾದುದರಿಂದ ಹೇಗೆ ಅಂಗೀಕರಿಸಲ್ಪಡುತ್ತದೆ ಎಂದಾಶಂಕಿಸಿದರೆ —

**ಮೂ ॥ ಏಕಸ್ಮಿನ್ನೇವ ವಸ್ತುನಿ ವಿಶೇಷಸ್ತೈರಪ್ಯಂಗೀಕೃತ ಏವ ॥ ನೇತಿ ನೇತೀತ್ಯತ್ರ ಸರ್ವವೈಲಕ್ಷಣ್ಯಾಂಗೀಕಾರಾತ್ ॥ ವಿಶೇಷಾನಂಗೀಕಾರೇ ಚ ಪುನರುಕ್ತೇಃ ॥ ೧೭೪ ॥**

**ಅ ॥** ಏಕಸ್ಮಿನ್ನೇವ ವಸ್ತುನಿ=ಒಂದೇ ನಿರ್ಭಿನ್ನವಾದ ವಸ್ತುವಿನಲ್ಲಿ, ವಿಶೇಷಃ=ವಿಶೇಷವು, ತೈರಪಿ=ಸರ್ವೈಕ್ಯವಾದಿಗಳಿಂದಲೂ, ಅಂಗೀಕೃತಃ = ಅಂಗೀಕರಿಸಲ್ಪಟ್ಟ ಪ್ರಾಯವು. (ದ್ರವ್ಯ ಗುಣಾದಿಗಳನ್ನು ವ್ಯವಸ್ಥಾ ಮಾಡತಕ್ಕ ತಾರ್ಕಿಕಾದಿಗಳಿಂದ ಅಂಗೀಕೃತವಾಗಿದೆ ಎಂದು ಸುತರಾಂ ಸಿದ್ಧವು. ಬ್ರಹ್ಮಾಭಿನ್ನಗಳಾದ ಜ್ಞಾನಾನಂದಾದಿಗಳಲ್ಲಿ ಒಂದೇ ಉಳಿಯುತ್ತದೆ ಎಂಬುದನ್ನು ಅವರೂ ಅಂಗೀಕರಿಸದೆ ಇದ್ದಪ್ರಯುಕ್ತ ವಿಶೇಷವನ್ನೂ ಒಪ್ಪಿದಂತೆ ಆಯಿತು. ಅದು ಹೇಗೆಂದರೆ) ನೇತಿ ನೇತಿ=ಆ ಈ ಆತ್ಮನು ಮೂರ್ತವಿಲಕ್ಷಣನು, ಅಮೂರ್ತವಿಲಕ್ಷಣನು, ಇತ್ಯತ್ರ=ಈ ವಾಕ್ಯದಲ್ಲಿ, (ಪ್ರತಿಪಾದ್ಯನಾದ ಬ್ರಹ್ಮನಿಗೆ) ಸರ್ವವೈಲಕ್ಷಣ್ಯಾಂಗೀಕಾರಾತ್ = ಸರ್ವವಸ್ತುಗಳಿಂದಲೂ ಭೇದವನ್ನು ಅಂಗೀಕರಿಸಿರುವುದರಿಂದ, ವಿಶೇಷಾನಂಗೀಕಾರೇ ಚ=ವಿಶೇಷವನ್ನು ಒಡಂಬಡದಿದ್ದರೆ, * ಪುನರುಕ್ತೇಃ=ಪುನರುಕ್ತವಾಗುವುದರಿಂದ,

**ತಾ ॥** (1) ಈ 'ನೇತಿ ನೇತಿ' ಎಂಬುವ ವಾಕ್ಯವು † ಪದಸಮನ್ವಯ ಬಲದಿಂದ ಬ್ರಹ್ಮನಿಗೆ ಸರ್ವಪದಾರ್ಥಗಳಿಂದಲೂ ಭೇದವನ್ನು ಪ್ರತಿಪಾದಿಸುವುದೆಂದು ಪರರೂ ಅಂಗೀಕರಿಸಿರುವರು. ಅದರಲ್ಲಿ ಆತ್ಮಶಬ್ದಾರ್ಥನಾದ ಬ್ರಹ್ಮನಿಗೂ ಎರಡು ವಾಕ್ಯಗಳಲ್ಲಿ ಪ್ರತಿಪಾದ್ಯಗಳಾದ ಭೇದಗಳಿಗೂ, ಬ್ರಹ್ಮನಿಂದಲೂ ಪರಸ್ಪರವಾಗಿಯೂ ಭೇದವಾಗಲೀ ಭೇದಾಭೇದವಾಗಲೀ

---

* ಅನುವಾದವಿಲ್ಲದೆ ಹೇಳಿದ್ದನ್ನೇ ಪುನಃ ಹೇಳುವುದು ಪುನರುಕ್ತವು.

† ಪದಸಮನ್ವಯ, ವಾಕ್ಯಸಮನ್ವಯವೆಂದು, ಸಮನ್ವಯವು ಎರಡು ವಿಧವು. ಅದರಲ್ಲಿ ವೇದದಲ್ಲಿದ್ದ ಅಪರ್ಯಾಯ ಅನೇಕ ಶಬ್ದಗಳಿಗೆ ಬ್ರಹ್ಮನಲ್ಲಿ, ಉಪಕ್ರಮ ಉಪಸಂಹಾರಾದಿಗಳೇ ಪ್ರಮಾಣವಾಗಿಯುಳ್ಳ ಶಕ್ತಿ ತಾತ್ಪರ್ಯರೂಪವಾದ ಸಂಬಂಧವು ಪದಸಮನ್ವಯವು. ಬೇರೆ ಬೇರೆ ಅರ್ಥಗಳಲ್ಲಿ ವಾಚಕವಾಗಿರುವ ಪದ ಸಮುದಾಯರೂಪಗಳಾದ ವಾಕ್ಯಗಳಿಗೆ ಕೊನೆಗೆ ಭಗವತ್ಪರತ್ವವು ವಾಕ್ಯಸಮನ್ವಯವು.

ಅಂಗೀಕರಿಸಲು ಸಾಧ್ಯವಿಲ್ಲ. ನಿರ್ಭಿನ್ನವಾದ ಅರ್ಥಪ್ರತಿಪಾದಕತ್ವರೂಪವಾದ ಅಖಂಡಾರ್ಥತ್ವವನ್ನಂಗೀಕರಿಸುವುದು ವಿರುದ್ಧವಾಗುವುದು. ಬ್ರಹ್ಮನಿಂದ ಅತ್ಯಂತಾಭೇದವಿದ್ದರೂ ವಿಶೇಷವನ್ನಂಗೀಕರಿಸದಿದ್ದರೆ ಪದಗಳಿಗೆ ಪುನರುಕ್ತಿಯು (ಪರ್ಯಾಯತ್ವವು) ಪ್ರಸಕ್ತವಾಗುವುದು. ಆದಕಾರಣ 'ನೇಹ ನಾನಾಸ್ತಿ ಕಿಂಚನ' ಇಹ=ಈ ಬ್ರಹ್ಮನಲ್ಲಿ, ಯಾವುದೂ ಭಿನ್ನವಾದುವು ಇಲ್ಲವು, ಅಂತೂ ಭೇದಗಳಿಗೂ ಬ್ರಹ್ಮನಿಗೂ ಅತ್ಯಂತಾಭೇದವನ್ನಂಗೀಕರಿಸದಿದ್ದರೆ ಈ ವಾಕ್ಯ ವಿರೋಧವು ಬರುವುದು. ಅದನ್ನು ಪರಿಹರಿಸುವುದಕ್ಕಾಗಿ ಅತ್ಯಂತಾಭೇದವನ್ನು ಹೇಗೆ ಅಂಗೀಕರಿಸಬೇಕೋ, ಹಾಗೆಯೇ ಪೌನರುಕ್ತ್ಯಾದಿ ಪ್ರಸಂಗಗಳನ್ನು ಪರಿಹರಿಸುವುದಕ್ಕಾಗಿ ವಿಶೇಷವನ್ನಂಗೀಕರಿಸಲೇಬೇಕು ॥ ೧೭೪ ॥

ಈ ಎರಡು ಭೇದಗಳಿಗೆ ಬ್ರಹ್ಮನಿಂದಲೂ ಪರಸ್ಪರವಾಗಿಯೂ ನಿರ್ವಿಶೇಷಾಭೇದವಿದ್ದರೆ, ಪುನರುಕ್ತಿ ಮೊದಲಾದದೋಷಗಳು ಬರುತ್ತವೆಂದು ಮಾತ್ರವಲ್ಲ. ಮತ್ತೂ ದೋಷಾಂತರವನ್ನು ಪ್ರತಿಜ್ಞಾ ಮಾಡುತ್ತಾರೆ.

**ಮೂ ॥ ನ ಚ ಘಟಾದ್ವೈಲಕ್ಷಣ್ಯಮೇವ ಪಟಾದ್ವೈಲಕ್ಷಣ್ಯಂ । ಅನುಭವ ವಿರೋಧಾತ್ ॥ ೧೭೫ ॥**

**ಅ ॥** ಘಟಾತ್ ವೈಲಕ್ಷಣ್ಯಮೇವ=ಘಟದಿಂದ ಭೇದವೇ, ಪಟಾತ್ ವೈಲಕ್ಷಣ್ಯಂ=ಪಟದಿಂದ ಭೇದವು, ನ ಚ=ಅಲ್ಲವು. (ಇದರಿಂದಲೂ ಈ ಎರಡು ಭೇದಗಳಿಗೆ ನಿರ್ವಿಶೇಷಾಭೇದವಲ್ಲ. ಏಕೆ ಅಲ್ಲವೆಂದರೆ) ಅನುಭವ ವಿರೋಧಾತ್=ಅನುಭವ ವಿರೋಧವಿದ್ದುದರಿಂದ.

**ತಾ ॥** (1) ಅನುಭವದಿಂದ ಸ್ತಂಭಾದಿರೂಪ ಅರ್ಥವು 'ಇದು ಘಟವಿಲಕ್ಷಣ (ಭೇದ)ವು. ಇದು ಪಟವಿಲಕ್ಷಣವು' ಎಂದು ವಿಶೇಷಣವಾಗಿ ಪ್ರತೀತವಾಗುವ ಎರಡು ಭೇದಗಳು ವಿಶೇಷ್ಯದಿಂದ ಅಭಿನ್ನಗಳಾದಾಗ್ಯೂ ಸವಿಶೇಷಾಭಿನ್ನಗಳಾಗಿ ಪ್ರತೀತಗಳಾಗುತ್ತವೆ. ನಿರ್ವಿಶೇಷಾಭಿನ್ನವಲ್ಲ. (2) ಯದ್ಯಪಿ ಸರ್ವಕ್ಕೂ ಐಕ್ಯವನ್ನು ಹೇಳುವ ಮಾಯಾವಾದಿಯೂ ವಿಶೇಷವನ್ನಂಗೀಕರಿಸಬೇಕೆನ್ನುವ ವಿಷಯದಲ್ಲಿ ಸತ್ಯಜ್ಞಾನಾದಿ ವಾಕ್ಯಗಳನ್ನು ಉದಾಹರಿಸಲಿಕ್ಕೆ ಶಕ್ಯವಾಗುವುದು. ಆದಾಗ್ಯೂ ಭೇದಕ್ಕೆ ಸವಿಶೇಷಾಭೇದವನ್ನು ಪ್ರತಿಪಾದಿಸುವುದು ಪ್ರಸ್ತುತವಾಗಿದೆ. ಆದಕಾರಣ ಅಂತಹ 'ನೇತಿ ನೇತಿ' ಎಂದು ಭೇದ ಪ್ರತಿಪಾದಕವಾದ ವಾಕ್ಯವೇ ಉದಾಹೃತವಾಗಿಯದೆ. ಎಲ್ಲಿಯೂ ಜಗತ್ತಿನಲ್ಲಾಗಲೀ ಬ್ರಹ್ಮನಲ್ಲಾಗಲೀ ಭೇದರೂಪ ಪದಾರ್ಥವನ್ನೇ ಅಂಗೀಕರಿಸದಿದ್ದರೆ ಭೇದವನ್ನು ಪ್ರತಿಪಾದಿಸುವ 'ನೇತಿ ನೇತಿ' ಎಂಬೀ ವಾಕ್ಯವಿರೋಧವೂ ಇದರಿಂದ ಸೂಚಿಸಲ್ಪಟ್ಟಿತು ॥ ೧೭೫ ॥

**ಮೂ ॥ ತಸ್ಮಾದ್ಭೇದದರ್ಶನಂ ಯುಕ್ತಮೇವ ॥ ೧೭೬ ॥**

**ಅ ॥** ತಸ್ಮಾತ್=ಆದ ಕಾರಣ, ಭೇದದರ್ಶನಂ=ಪ್ರತ್ಯಕ್ಷದಿಂದ ಭೇದ ಜ್ಞಾನವು, ಯುಕ್ತಮೇವ=ಯೋಗ್ಯವೇ ಸರಿ.

**ತಾ ॥** ಹೀಗೆ ಅನುಮಾನದಿಂದ ಪಕ್ಷ ಸಾಧ್ಯ ಲಿಂಗರೂಪವಾದ ಸ್ವವಿಷಯದಲ್ಲಿಯೂ, ಆಗಮದಿಂದ ಪದ ಪದಾರ್ಥಗಳಿಗೆ ಇರುವ, ವಾಚ್ಯವಾಚಕ ಭಾವ ಸಂಬಂಧರೂಪವಾದ ಸ್ವವಿಷಯದಲ್ಲಿಯೂ 'ನ ಹಿ ಪ್ರಮಾಣದೃಷ್ಟಸ್ಯ ತರ್ಕಬಾಧ್ಯತ್ವಂ' ಇತ್ಯಾದಿ ಮೇಲೆ ಹೇಳುವ ನ್ಯಾಯಗಳಿಂದ ಭೇದಪ್ರತೀತಿಯನ್ನು ತಿಳಿಯತಕ್ಕದು. ಅನುಮಾನದಲ್ಲಿ ವ್ಯಾಪ್ಯವ್ಯಾಪಕಾದಿಗಳಿಗೆ ಭೇದವು ತೋರದಿದ್ದರೆ ಸಾಧ್ಯಹೇತುಗಳಿಗೆ ಐಕ್ಯ ಬರುವುದರಿಂದ ಅನುಮಾನಕ್ಕೆ

ನಾಶವೇ ಬರಬೇಕಾಗುವುದು. ಹೀಗೆ ಆಗಮದಲ್ಲಿಯೂ ಪದಕ್ಕೂ ಪದಾರ್ಥಕ್ಕೂ ಭೇದವು ತೋರದಿದ್ದರೆ ಸಂಸರ್ಗಜ್ಞಾನವೇ ಬಾರದಿರುವುದರಿಂದ ಆಗಮಕ್ಕೆ ಉಚ್ಛೇದವೇ ಬರಬೇಕಾಗುವುದು. ಈ ಎಲ್ಲಾ ವಿಷಯಗಳೂ ತೈತ್ತಿರೀಯೋಪನಿಷದ್ಭಾಷ್ಯದಲ್ಲಿ ಪು. ೧೫೭—೧೬೩ರ ವರೇಗೆ ವಿಶದೀಕೃತಗಳಾಗಿವೆ ॥ ೧೭೭ ॥

## ಭೇದವಾದ ಪ್ರಕರಣವು ಸಮಾಪ್ತವಾಯಿತು.

---

ಮಾಯಾವಾದಿಗಳು ಆಶಂಕಿಸುವರು—

(1) ವಿವಾದಪದಂ = ವಿವಾದಕ್ಕೆ ವಿಷಯವಾದುದು, ಮಿಥ್ಯಾ = ಯಥಾರ್ಥವಲ್ಲವು, ದೃಶ್ಯತ್ವಾತ್=ತೋರುವುದರಿಂದಲೂ, ಜಡತ್ವಾತ್=ಅಚೇತನವಾದ ಪ್ರಯುಕ್ತವೂ, ಪರಿಚ್ಛಿನ್ನತ್ವಾತ್=ದೇಶಾದಿಗಳಿಂದ ಪರಿಚ್ಛೇದವಿರುವುದರಿಂದಲೂ, ಶುಕ್ತಿರಜತವತ್ = ಶುಕ್ತಿರಜತದಂತೆ, (2) ಅಯಂ ಪಟಃ ಏತತ್ತಂತುನಿಷ್ಠಾತ್ಯಂತಾಭಾವ ಪ್ರತಿಯೋಗೀ ಪಟತ್ವಾತ್ ಪಟಾಂತರವತ್= ಈ ಪಟವು, ಈ ಪಟಕ್ಕೆ ಸಮವಾಯಿಕಾರಣವೆಂದಭಿಮತವಾದ ತಂತುವಿನಲ್ಲಿರತಕ್ಕ ಪಟಾತ್ಯಂತಾಭಾವಕ್ಕೆ ಪ್ರತಿಯೋಗಿಯು,ಪಟವಾದ ಪ್ರಯುಕ್ತ ಮತ್ತೊಂದು ಪಟದಂತೆ,(ಅಂದರೆ- ಆ ವಸ್ತ್ರವೂ ವಸ್ತ್ರವಾದಪ್ರಯುಕ್ತ ಈ ನೂಲುಗಳಲ್ಲಿ ಹೇಗೆ ಇಲ್ಲವೋ, ಅಂತೆಯೇ ಈ ವಸ್ತ್ರವೂ ವಸ್ತ್ರವಾದ ಪ್ರಯುಕ್ತ ಈ ವಸ್ತ್ರಕ್ಕೆ ಕಾರಣಗಳಾದ ನೂಲುಗಳಲ್ಲಿ ಇಲ್ಲ.) ಪಕ್ಷದಲ್ಲಿ ಸಾಧ್ಯವಿಲ್ಲವೆಂದಾಶಂಕಿಸಿದರೆ, ಅಂದರೆ— ಮಿಥ್ಯಾತ್ವವನ್ನೇ ಒಪ್ಪದಿದ್ದರೆ ದೃಶ್ಯಕ್ಕೆ ದೃಕ್ಸಂಬಂಧವೇ ಕೂಡದಿರುವುದರಿಂದ ಪಕ್ಷದಲ್ಲಿ ದೃಶ್ಯತ್ವಹೇತುವೇ ಇಲ್ಲನೆಂದಾಗುವುದು. ಅಂತೂ ಜಗತ್ತೇ ಮಿಥ್ಯೆಯಾದುದರಿಂದ ಜಗತ್ತಿನ ಧರ್ಮಭೂತವಾದ ಭೇದವು ಹೇಗೆ ಸತ್ಯವಾಗುವುದು? (3) ಮತ್ತು ವಿಮತಃ ಭೇದಃ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್=ವಿವಾದವಿಷಯವಾದ ಜೀವೇಶ್ವರರ ಭೇದವು ಮಿಥ್ಯೆಯು; ಭೇದವಾದ ಪ್ರಯುಕ್ತ, ಒಂದೇ ಚಂದ್ರನಲ್ಲಿ ಅಂಗುಲಿಯಿಂದ ಚುಚ್ಚಲ್ಪಟ್ಟ ಕಣ್ಣಿನಿಂದ ತೋರುವ ಭೇದದಂತೆಯೇ. (ಕಣ್ಣನ್ನು ಬೆರಳಿಂದ ಚುಚ್ಚಿಕೊಂಡು ಆಕಾಶದ ಕಡೆಗೆ ನೋಡಿದರೆ ಅಲ್ಲಿ ಒಬ್ಬನೇ ಚಂದ್ರನಿರುವುದಾದರೂ ಇಬ್ಬರು ಚಂದ್ರರಿದ್ದಂತೆ ತೋರುವುದು, ಚಂದ್ರರಿಬ್ಬರೆಂದು ತೋರುವುದು ಹೇಗೆ ಸುಳ್ಳೊ, ಅಂತೆಯೇ ಜಗತ್ತಿನಲ್ಲಿ ತೋರುವ ಭೇದವೂ ಸುಳ್ಳು.) (4) ವಿವಾದಪದಂ ಭೇದಸಂವೇದನಂ, ಭ್ರಾಂತಿಃ, ಭೇದಸಂವೇದನತ್ವಾತ್ ಚಂದ್ರಭೇದಸಂವೇದನವತ್=ವಿವಾದಕ್ಕೆ ವಿಷಯವಾದ ಭೇದಜ್ಞಾನವು, ಭ್ರಮೆಯು, ಭೇದಜ್ಞಾನವಾದ ಪ್ರಯುಕ್ತ, ಇಬ್ಬರು ಚಂದ್ರರು ಎಂಬುವ ಜ್ಞಾನದಂತೆ. (ಅಂದರೆ— ಕಣ್ಣನ್ನು ಚುಚ್ಚಿಕೊಂಡು ಆಕಾಶದ ಕಡೆಗೆ ನೋಡಿ ಚಂದ್ರರಿಬ್ಬರಿರುವರೆಂದು ತಿಳಿದುಕೊಂಡದ್ದು ಹೇಗೆ ಭ್ರಾಂತಿಯೋ, ಹಾಗೆಯೇ ಜಗತ್ತು ಭಿನ್ನ ಭಿನ್ನವಾಗಿದೆ ಎಂಬೀ ತಿಳುವಳಿಕೆಯೂ ಭ್ರಾಂತಿಯು.) (5) ವಿಮತಂ ತಾತ್ವಿಕ ಸ್ವಾಂತರ್ಭೇದಹೀನಂ ಮತತ್ವಾತ್ ಗಗನವತ್=ಚೇತನ ಜಡರೂಪವಾದ ಸರ್ವ ಪ್ರಪಂಚವೂ ಸ್ವೈಕದೇಶಗಳಿಂದ ಭೇದವಿರಹಿತವು; ಜ್ಞಾನವಿಷಯವಾದ ಪ್ರಯುಕ್ತ, ಆಕಾಶದಂತೆ. (ಅಂದರೆ— ಜ್ಞಾನಕ್ಕೆ ಗೋಚರವಾಗುವ ಆಕಾಶವು ಹೇಗೆ ಭೇದ ವಿರಹಿತವಾಗಿದೆಯೋ, ಅದರಂತೆಯೇ ಈ ಸಮಸ್ತ ಪ್ರಪಂಚವೂ ಭೇದವಿರಹಿತವಾದದ್ದಾಗಿದೆ.) (6) ವಿಮತಾಃ ಆತ್ಮಾನಃ ದೇವದತ್ತಾತ್ ನ ಭಿದ್ಯಂತೇ ಆತ್ಮತ್ವಾತ್ ದೇವದತ್ತವತ್ = ಚೈತ್ರಾದ್ಯಾತ್ಮರು ದೇವದತ್ತನಿಂದ ಭಿನ್ನರಾಗುವುದಿಲ್ಲ; ಆತ್ಮತ್ವವಿದ್ದುದರಿಂದ ದೇವದತ್ತನಂತೆಯೇ. (ಅಂದರೆ— ದೇವದತ್ತನಿಗೆ ತನ್ನ ಆತ್ಮನಿಂದ ಹೇಗೆ ಅಭೇದವೋ, ಹಾಗೆಯೇ ಚೈತ್ರ ಮೈತ್ರಾದಿಗಳಿಗೂ ದೇವದತ್ತನಿಂದ ಅಭೇದವು.)

(7) ವಿಮತಾನಿ ಶರೀರಾಣಿ ದೇವದತ್ತಸ್ಯೈವ ಭೋಗಾಯತನಾನಿ ಶರೀರತ್ವಾತ್ ಸಂಮತ ದೇವದತ್ತ ಶರೀರವತ್=ಯಜ್ಞದತ್ತಾದಿಗಳ ಶರೀರಗಳು ದೇವದತ್ತನಿಗೇನೇ ಭೋಗಕ್ಕೆ ಸಾಧನ ಗಳು; ಶರೀರವಾದ ಪ್ರಯುಕ್ತ. ಸಮ್ಮತವಾದ ದೇವದತ್ತನ ಶರೀರದಂತೆ. (ಅಂದರೆ — ದೇವದತ್ತನಿಗೆ ತನ್ನ ಶರೀರವು ಹೇಗೆ ಸುಖದುಃಖಗಳನ್ನು ಭೋಗಿಸಲು ಸಾಧನವಾಗುವುದೋ, ಹಾಗೆಯೇ ಎಲ್ಲರ ಶರೀರಗಳೂ ದೇವದತ್ತನಿಗೇನೇ ಸುಖದುಃಖಗಳನ್ನು ಭೋಗಿಸಲು ಸಾಧನ ವಾಗುವುವು.) (8) ವಿಮತಾನಿ ಇಂದ್ರಿಯಾಣಿ ದೇವದತ್ತಸ್ಯೈವ ಭೋಗಾಯತನಾನಿ ಇಂದ್ರಿಯ ತ್ವಾತ್ ತದೀಯೇಂದ್ರಿಯವತ್=ಯಜ್ಞದತ್ತ ವಿಷ್ಣುದತ್ತ ಮೊದಲಾದವರ ಎಲ್ಲಾ ಇಂದ್ರಿಯಗಳು ದೇವದತ್ತನಿಗೇನೇ ಜ್ಞಾನವನ್ನು ಹುಟ್ಟಿಸುವುವು; ಇಂದ್ರಿಯವಾದ ಪ್ರಯುಕ್ತ, ದೇವದತ್ತನ ಇಂದ್ರಿಯದಂತೆ. (ಅಂದರೆ — ದೇವದತ್ತನಿಗೆ ತನ್ನ ಕಣ್ಣು ಮೊದಲಾದ ಇಂದ್ರಿಯಗಳಿಂದ ಪದಾರ್ಥಗಳ ಜ್ಞಾನ ಬಂದಂತೆ ಎಲ್ಲರ ಇಂದ್ರಿಯಗಳಿಂದಲೂ ಆತನಿಗೇನೇ ಜ್ಞಾನವು ಬರುತ್ತದೆ.) (9) ಯಜ್ಞದತ್ತೇಂದ್ರಿಯಂ ದೇವದತ್ತಸ್ಯೈವ ಜ್ಞಾನಕರಣಂ ಇಂದ್ರಿಯತ್ವಾತ್ ದೇವದತ್ತೇಂದ್ರಿ-ಯವತ್=ಯಜ್ಞದತ್ತನ ಚಕ್ಷುರಾದೀಂದ್ರಿಯಗಳು ದೇವದತ್ತನಿಗೇನೇ ಜ್ಞಾನವನ್ನು ಹುಟ್ಟಿಸುವವು ಗಳು; ಇಂದ್ರಿಯವಾದ ಪ್ರಯುಕ್ತ, ದೇವದತ್ತನ ಇಂದ್ರಿಯದಂತೆ. (ಅಂದರೆ — ದೇವದತ್ತ ನಿಗೆ ತನ್ನ ಇಂದ್ರಿಯಗಳು ಜ್ಞಾನ ಹುಟ್ಟಿಸಲಿಕ್ಕೆ ಮುಖ್ಯ ಕಾರಣಗಳಾದಂತೆ ಯಜ್ಞದತ್ತಾದಿಗಳ ಇಂದ್ರಿಯಗಳೂ ಆತನಿಗೇನೇ ಜ್ಞಾನಹುಟ್ಟಿಸಲಿಕ್ಕೆ ಮುಖ್ಯ ಕಾರಣಗಳಾಗುತ್ತವೆ.) ಹೀಗೆಯೇ ಇವೇ ಮೊದಲಾದುವುಗಳನ್ನು ಪ್ರಯೋಗಿಸಿಕೊಳ್ಳಬೇಕು. (10) ಹಾಗೆಯೇ 'ಜೀವಾಃ ಪರ ಮಾತ್ಮನಸ್ತತ್ವತೋ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್ = ಜೀವರು ಪರಬ್ರಹ್ಮನಿಂದ ಯಥಾರ್ಥವಾಗಿ ಭಿನ್ನರಾಗುವುದಿಲ್ಲ, ಆತ್ಮತ್ವವಿದ್ದುದರಿಂದ ಪರಮಾತ್ಮನಂತೆ. ಇವುಗಳಿಂದ ಜೀವಾತ್ಮ ಮತ್ತು ಪರಮಾತ್ಮ ಇವರಿಗೆ ಭೇದವಿಲ್ಲವೆನ್ನುವುದು ತಿಳಿಯುವುದು ಮಾತ್ರವಲ್ಲದೆ ಅವರಿಗೆ ಐಕ್ಯವುಂಟೆಂಬುವುದೂ ಸಿದ್ಧವಾಗುತ್ತದೆ. ಅಲ್ಲದೆ, ಅವರಿಗೆ ಭೇದವುಂಟೆಂದೂ ಹೇಳಿದರೆ, ಪರಮಾತ್ಮನು ಅನಂತ ಗುಣಗಳುಳ್ಳವನೆಂದೂ, ಆದ್ದರಿಂದಲೇ ಉತ್ತಮನೆಂದೂ, ಜೀವರು ಅಲ್ಪಗುಣವಿರುವಕಾರಣ ಅಧಮರೆಂದೂ ಮತ್ತು ಜೀವರು ಬಹಳಮಂದಿ ಇದ್ದಾರೆ; ಆದ್ದರಿಂದ ಅವರಲ್ಲಿ ಅನ್ಯೋನ್ಯವಾಗಿ ಭೇದವುಂಟೆಂದೂ ನಾನಾ ಪ್ರಕಾರವಾಗಿ ಕಲ್ಪನೆ ಮಾಡು ವುದಕ್ಕಿಂತ, ಜೀವಾತ್ಮ ಪರಮಾತ್ಮರಿಗೆ ಐಕ್ಯವನ್ನಂಗೀಕರಿಸಿದರೆ ಲಾಘವವಿದೆ. ಆದಕಾರಣ ಕಲ್ಪನಾಗೌರವವಿಲ್ಲ. (11) ಆದಕಾರಣ ಹಿಂದೆ ಹೇಳಿದ ಪ್ರಕಾರ ಭೇದಕ್ಕೂ, ಭೇದವುಳ್ಳ ಸರ್ವ ಪ್ರಪಂಚಕ್ಕೂ ಮಿಥ್ಯಾತ್ವವಿದ್ದ ಪ್ರಯುಕ್ತ ಶ್ರೀ ವಿಷ್ಣುವಿಗೆ ಸರ್ವೋತ್ತಮತ್ವವು ಹೇಗೆ ಕೂಡ ಬಹುದು? ಹೇಗೆ ತಾನೆ ಸರ್ವಾಗಮಗಳಿಗೂ ಸರ್ವೋತ್ತಮತ್ವದಲ್ಲಿಯೇ ಮಹಾ ತಾತ್ಪರ್ಯವು ಸಂಭವಿಸಬಹುದು? (12) ಈ ಪ್ರಕಾರ ಮಾಯಾವಾದಿಗಳು ಪೂರ್ವಪಕ್ಷಿಸಿದರೆ ಹೀಗೆ ಸಮಾಧಾನವನ್ನು ಹೇಳಬೇಕು. ಆಕಾಶ ಮೊದಲಾದ ಪದಾರ್ಥಗಳೂ, ಅವುಗಳಿಗೆ ಇರುವ ಭೇದವೂ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧಗಳೆಂದಂಗೀಕರಿಸಿರುತ್ತೀರೋ, ಇಲ್ಲವೋ? ಅಂಗೀ ಕರಿಸದಿದ್ದರೆ ನಿಮ್ಮ ಅನುಮಾನಗಳಿಗೆ ಆಶ್ರಯವೇ ಸಿದ್ಧಿಸದೆ ಹೋದೀತು. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಕಾಣಲ್ಪಟ್ಟ ಪದಾರ್ಥಗಳನ್ನೇ ಪಕ್ಷವನ್ನಾಗಿಟ್ಟುಕೊಂಡು ಹೀಗೆ ಅನುಮೇಯಿ ಸುವುದಾದರೆ ಆಚಾರ್ಯರು ಸಮಾಧಾನವನ್ನು ಹೇಳುವರು —

**ಮೂ॥ ಯಚ್ಚ ಪ್ರಮಾಣದೃಷ್ಟಾನಾಮಪಿ ಪದಾರ್ಥಾನಾಂ ಮಿಥ್ಯಾತ್ವಕಲ್ಪನಂ ತಚ್ಚ ಪ್ರಮಾಣವಿರುದ್ಧತ್ವಾದೇವ ಪ್ರಕಾಶತಸ್ಕರತ್ವಂ। ನ ಹಿ ಪ್ರಮಾಣ**

**ದೃಷ್ಟಸ್ಯ ತರ್ಕಬಾಧ್ಯತ್ವಂ । ಪ್ರತ್ಯಕ್ಷಾದಿವಿರುದ್ಧಾನಾಂ ತರ್ಕಾಭಾಸತ್ವ ನಿಯಮಾತ್ ॥ ೧೭೭ ॥**

ಅ ॥ (ಜೀವಬ್ರಹ್ಮರಿಗೆ ಏಕತ್ವದಲ್ಲಿ ಸರ್ವಾಗಮಗಳಿಗೂ ಮುಖ್ಯ ತಾತ್ಪರ್ಯವನ್ನು ಕಲ್ಪಿಸುವುದು ಮಾತ್ರವಲ್ಲ.) ಯಚ್ಚ = ಯಾವುದೊಂದು, ಪ್ರಮಾಣದೃಷ್ಟಾನಾಂ=ಪ್ರತ್ಯಕ್ಷಾದಿ ಪ್ರಮಾಣಗಳಿಂದ ಕಾಣಲ್ಪಟ್ಟ, ಪದಾರ್ಥಾನಾಮಪಿ=ವಸ್ತುಗಳಿಗೂ, (ಅವುಗಳ ಭೇದಕ್ಕೂ ಅನುಮಾನಗಳಿಂದ) ಮಿಥ್ಯಾತ್ವಕಲ್ಪನಂ=ಮಿಥ್ಯಾತ್ವವನ್ನು ಕಲ್ಪಿಸುವಿಕೆಯೋ, ತಚ್ಚ=ಅದೂ ಕೂಡ, ಪ್ರಮಾಣವಿರುದ್ಧತ್ವಾದೇವ=ಧರ್ಮಿಗಳನ್ನು ಗ್ರಹಿಸುವುದರಿಂದ ಪ್ರಬಲಗಳಾದ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಬಾಧಿತಗಳಾದ ಪ್ರಯುಕ್ತವೇ, (ಅನುಮಾನಗಳು ಬಾಧಿತಗಳಾದುವು. ಧರ್ಮಿಗ್ರಾಹಕಗಳಾದ ಪ್ರತ್ಯಕ್ಷಾದಿಗಳು ಪದಾರ್ಥಗಳನ್ನೂ ಅವುಗಳ ಭೇದವನ್ನೂ ಸತ್ಯಗಳನ್ನಾಗಿಯೇ ವಿಷಯೀಕರಿಸುತ್ತವೆ. ಅಂತೂ ಪಕ್ಷದಲ್ಲಿ ಸಾಧ್ಯವಿಲ್ಲದಿರುವುದರಿಂದ ಅನುಮಾನವು ಬಾಧಿತವಾಯಿತು.) ಪ್ರಕಾಶತಸ್ಕರತ್ವಂ=ಸರ್ವರ ಸಮಕ್ಷದಲ್ಲಿ (ಬೆಳಕಿನಲ್ಲಿ) ಕದ್ದುಕೊಂಡ ಹಾಗೆ, (ಅನುಮಾನಗಳಿಂದಲೇ ಪ್ರತ್ಯಕ್ಷಾದಿಗಳಿಗೂ ಬಾಧವು ಬರಬಹುದೆಂದರೆ) ಪ್ರಮಾಣ ದೃಷ್ಟಸ್ಯ=ಪ್ರತ್ಯಕ್ಷಾದಿ ಪ್ರಮಾಣಗಳಿಂದ ಕಾಣಲ್ಪಟ್ಟದ್ದಕ್ಕೆ, ತರ್ಕಬಾಧ್ಯತ್ವಂ=ಅನುಮಾನದಿಂದ ಬಾಧಿಸಲ್ಪಡುವಿಕೆಯು, ನ ಹಿ=ಇಲ್ಲವಷ್ಟೆ, ಪ್ರತ್ಯಕ್ಷಾದಿವಿರುದ್ಧಾನಾಂ=ಪ್ರತ್ಯಕ್ಷಾದಿ ಪ್ರಮಾಣ ಗಳಿಂದ ಬಾಧಿತಗಳಾದ ಅನುಮಾನಗಳಿಗೆ, ತರ್ಕಾಭಾಸತ್ವನಿಯಮಾತ್=ದುಷ್ಟತರ್ಕತ್ವವೆಂದು ನಿಯತವಾದ ಪ್ರಯುಕ್ತ.

ತಾ ॥ (1) ಅನುಮಾನಗಳಿಗೆ ಪ್ರಾಮಾಣ್ಯವಿದ್ದರೆ ಅವುಗಳು ಪ್ರತ್ಯಕ್ಷಾದಿ ವಿಷಯಗಳನ್ನು ಬಾಧಿಸುವುವು. ಹೀಗೆ ಇಲ್ಲವು. ಪ್ರತ್ಯಕ್ಷಾದಿಗಳಿಂದ ವಿರುದ್ಧಗಳಾದ ಅನುಮಾನಗಳೇ ಅಪ್ರಮಾಣಗಳಾಗಿವೆ. ಅಂತೂ ಪ್ರತ್ಯಕ್ಷಾದಿಗಳು ಅಪ್ರಮಾಣಗಳಾದರೆ ಅಬಾಧಿತ ವಿಷಯತ್ವವೆಂಬ ಅಂಗವು ಇರುವುದರಿಂದ ಅನುಮಾನಗಳು ಪ್ರಮಾಣಗಳಾಗುವುವು. ಅನುಮಾನಗಳಿಗೆ ಪ್ರಾಮಾಣ್ಯವು ಸಿದ್ಧವಾದರೆ ಅವುಗಳ ವಿರೋಧದಿಂದ ಪ್ರತ್ಯಕ್ಷಾದಿಗಳು ಅಪ್ರಮಾಣಗಳಾಗುವುವು. ಹೀಗೆ ಅನ್ಯೋನ್ಯಾಶ್ರಯವು. (2) ಹೀಗೆಯೇ ಪ್ರತ್ಯಕ್ಷಾದಿಗಳಿಗೆ ಪ್ರಾಮಾಣ್ಯವಿದ್ದರೂ ಅನ್ಯೋನ್ಯಾಶ್ರಯತ್ವವು ಸಮಾನವು; ಅಂದರೆ ಪ್ರತ್ಯಕ್ಷಾದಿಗಳಿಗೆ ಪ್ರಾಮಾಣ್ಯವಿದ್ದರೆ ತದ್ವಿರುದ್ಧಗಳಾದ ಮಿಥ್ಯಾತ್ವಾನುಮಾನಗಳಿಗೆ ಅಪ್ರಾಮಾಣ್ಯವು. ಅವುಗಳಿಗೆ ಅಪ್ರಾಮಾಣ್ಯವು ಸಿದ್ಧವಾದರೆ ಅದರಿಂದ ವಿರೋಧವಿಲ್ಲದೆ ಇರುವಪ್ರಯುಕ್ತಸತ್ಯತ್ವವನ್ನುಗ್ರಹಿಸುವ ಪ್ರತ್ಯಕ್ಷಾದಿಗಳಿಗೆ ಪ್ರಾಮಾಣ್ಯವು, ಹೀಗೆ ಹೇಳಕೂಡದು. ಪ್ರತ್ಯಕ್ಷಾದಿಗಳು ಧರ್ಮಿಯನ್ನು ಗ್ರಹಿಸುವುದರಿಂದ ಪ್ರಬಲಗಳಾದ ಪ್ರಯುಕ್ತ ದುರ್ಬಲವಾದ ಅನುಮಾನ ವಿರೋಧದ ಪರಿಹಾರವನ್ನು ಅಪೇಕ್ಷಿಸದೇನೇ ಅವುಗಳಿಗೆ ಪ್ರಾಮಾಣ್ಯವು ನಿಶ್ಚಿತವಾಗಿದೆ ॥ ೧೭೭ ॥

ಅನುಮಾನವು ಪ್ರತ್ಯಕ್ಷಾದಿಗಳನ್ನು ಬಾಧಿಸದಿದ್ದರೆ ಮುತ್ತಿನ ಚಿಪ್ಪನ್ನು ನೋಡಿ ಇದು ಬೆಳ್ಳಿಯು ಎಂಬೀ ಪ್ರತ್ಯಕ್ಷರೂಪವಾದ ಪ್ರತೀತಿಯು 'ಇದಂ ರಜತಂ ನ ದಾಹಚ್ಛೇದಾದಿಮತ್ವಾತ್' ಇದು, ಬೆಳ್ಳಿಯಲ್ಲ, ಸುಡುವಿಕೆ, ಛೇದನ ಮೊದಲಾದುದು ಇದ್ದುದರಿಂದ ಎಂಬೀ ಅನುಮಾನದಿಂದ, ಬಾಧಿಸಲ್ಪಡುವುದರಿಂದ ಆ ರಜತತ್ವಪ್ರತೀತಿಗೆ ಭ್ರಮತ್ವವು ಹೇಗೆ ಕಲ್ಪಿತವಾಗುತ್ತದೆ? ಆ ರಜತತ್ವಾದಿ ಪ್ರತೀತಿಯು ಅನುಮಾನದಿಂದ ಬಾಧಿತವಾಗುತ್ತದೆಂದಂಗೀಕರಿಸದಿದ್ದರೆ ಅಬಾಧಿತತ್ವವು ಬರಬೇಕಾದುದರಿಂದ ಆ ಪ್ರತ್ಯಕ್ಷಾದಿ ಪ್ರತೀತಿಯೂ ಭ್ರಾಂತಿಯಾಗದೆ ಹೋಗಬೇಕಾಗುವುದು, ಎಂದಾಶಂಕಿಸಿದರೆ —

ಮೂ ॥ ಶುಕ್ತ್ಯಾದೇರಜತತ್ವಾದಿಪ್ರತೀತೇರಪಿ ಬಲವತ್ಪ್ರತ್ಯಕ್ಷವಿರುದ್ಧತ್ವಾ-
ದೇವ ಭ್ರಮತ್ವಂ ನ ತರ್ಕಮಾತ್ರಾತ್ ॥ ೧೭೮ ॥

ಅ ॥ ಶುಕ್ತ್ಯಾದೇಃ=ಶುಕ್ತ್ಯಾದಿಗಳಿಗೆ, ರಜತತ್ವಾದಿ ಪ್ರತೀತೇರಪಿ=ರಜತತ್ವ ಮೊದಲಾದ ಜ್ಞಾನಕ್ಕೂ ಕೂಡ ಅಂದರೆ, ಶುಕ್ತಿಯನ್ನು ನೋಡಿ ಬರತಕ್ಕ 'ಇದಂ ರಜತಂ' ಇದು ಮೊದಲಾದ ಜ್ಞಾನಕ್ಕೂ ಕೂಡ, ಬಲವತ್ಪ್ರತ್ಯಕ್ಷವಿರುದ್ಧತ್ವಾದೇವ=ಪ್ರಾಮಾಣ್ಯನಿಶ್ಚಯದಿಂದ ಸಹಕೃತವಾದ ಪ್ರಯುಕ್ತ ಪ್ರಬಲವಾದ 'ಇದು ಬೆಳ್ಳಿಯಲ್ಲ, ಮುತ್ತಿನ ಚಿಪ್ಪೇ' ಎಂಬೀ ಪ್ರತ್ಯಕ್ಷದಿಂದ ಬಾಧಿತವಾದ ಪ್ರಯುಕ್ತವೇ, ಭ್ರಮತ್ವಂ = ಭ್ರಾಂತಿತ್ವವು, ತರ್ಕಮಾತ್ರಾತ್ = ಕೇವಲ ಅನುಮಾನದಿಂದ, ನ=ಅಲ್ಲವು.

ತಾ ॥ ಹೀಗೆಯೇ ಬೇರೆ ಕಡೆಯಲ್ಲಿಯೂ 'ಆಕಾಶವು ನೀಲವು' ಎಂಬೀ ಪ್ರತ್ಯಕ್ಷಾದಿಗಳು ಅನುಮಾನಕ್ಕೆ ಮೂಲಭೂತವಾದ ಅವ್ಯಾಕೃತಾಕಾಶಕ್ಕೆ ಅನೀಲತ್ವವನ್ನು ವಿಷಯೀಕರಿಸುವ ಸಾಕ್ಷಿಪ್ರತ್ಯಕ್ಷಾದಿಗಳಿಂದ ಬಾಧಿತಗಳಾದುದರಿಂದಲೇ ಭ್ರಾಂತಿತ್ವವನ್ನು ಹುಟ್ಟಿಸಿ ಕೇವಲ ಅನುಮಾನದಿಂದ ಬಾಧ್ಯವಾಗುವುದಿಲ್ಲವೆಂಬೀ ನಿಯಮವನ್ನು ಸಮರ್ಥಿಸಬೇಕು ॥ ೧೭೮ ॥

ಪುನಃ ಆಶಂಕಿಸುವರು. ದಾಹಚ್ಛೇದಾದ್ಯನುಮಾನವೂ ಕೂಡ ಅನುಕೂಲವಾದ ತರ್ಕದಿಂದ ಯುಕ್ತವಾದರೆ ವ್ಯಾಪ್ತಿಪಕ್ಷಧರ್ಮತೆಗಳು ಇದ್ದುದರಿಂದ ನಿರವಕಾಶವಾದ ಪ್ರಯುಕ್ತ ಪ್ರತ್ಯಕ್ಷದಂತೆ ಪ್ರಬಲವಾದ ಪ್ರತ್ಯಕ್ಷಕ್ಕೆ ಬಾಧಕವಾಗುವುದು. ವಿರೋಧವಿಲ್ಲವಷ್ಟೆ! ಎಲ್ಲಾ ಕಡೆಗಳಲ್ಲಿಯೂ ಪ್ರಬಲಗಳಾದ ಪ್ರತ್ಯಕ್ಷಾದಿಗಳನ್ನು ಹುಡುಕುವ ಈ ವ್ಯಸನವು ಏಕೆಂದರೆ- ಅನುಮಾನದಿಂದಲೇ ಪ್ರತ್ಯಕ್ಷಕ್ಕೆ ಬಾಧವನ್ನಂಗೀಕರಿಸಿದರೆ ಬಾಧವೆಂಬೀ ದೋಷವೇ ಇಲ್ಲವೆಂದಾಗಬೇಕಾಗುವುದು. ಎಲ್ಲಾ ಕಡೆಗಳಲ್ಲಿಯೂ ಹೀಗೆಯೇ ಅನುಮಾನಕ್ಕೆ ಪ್ರಾಬಲ್ಯವನ್ನು ವ್ಯುತ್ಪಾದಿಸಲಿಕ್ಕೆ ಶಕ್ಯವಾಗುವುದೆಂದಭಿಪ್ರಾಯವುಳ್ಳವರಾಗಿ ನಿರೂಪಿಸುತ್ತಾರೆ —

ಮೂ ॥ ತರ್ಕಮಾತ್ರತಃ ಪ್ರತ್ಯಕ್ಷಬಾಧನೇ ಭೂತಚತುಷ್ಟಯಸ್ಯಾಬಾದೇಃ
ಪೃಥಿವೀತ್ವಾದೃಷ್ಟೇಃ ಪೃಥಿವ್ಯಾ ಅಪಿ ಪೃಥಿವೀತ್ವಂ ನ ಸ್ಯಾತ್ ॥೧೭೯॥

ಅ ॥ ತರ್ಕಮಾತ್ರತಃ = ಕೇವಲ ಅನುಮಾನದಿಂದ, ಪ್ರತ್ಯಕ್ಷಬಾಧನೇ=ಪ್ರತ್ಯಕ್ಷಕ್ಕೆ ಬಾಧವನ್ನು ಹೇಳಿದರೆ, ಭೂತಚತುಷ್ಟಯಸ್ಯ ಅಬಾದೇಃ=ನೀರು, ಅಗ್ನಿ, ವಾಯು, ಆಕಾಶವೆಂಬೀ ನಾಲ್ಕು ಭೂತಗಳಿಗೆ, ಪೃಥಿವೀತ್ವಾದೃಷ್ಟೇಃ=ಪೃಥಿವೀತ್ವವು ಕಾಣದಿರುವುದರಿಂದ, ಪೃಥಿವ್ಯಾ ಅಪಿ=ಗಂಧವುಳ್ಳ ದ್ರವ್ಯಕ್ಕೂ, ಪೃಥಿವೀತ್ವಂ=ಪೃಥಿವೀತ್ವವು, ನ ಸ್ಯಾತ್=ಆಗದೆ ಹೋಗುವುದು.

ತಾ ॥ (1) 'ಭೂತಚತುಷ್ಟಯಸ್ಯಾಬಾದೇಃ ಪೃಥಿವೀತ್ವಾದೃಷ್ಟೇಃ' ಎನ್ನುವುದರಿಂದ ಭೂತತ್ವಕ್ಕೆ ಪೃಥೀತ್ವಾಭಾವದಿಂದ ವ್ಯಾಪ್ತಿಯನ್ನು ಸಾಧಿಸುತ್ತಾರೆ. ಬಾಹ್ಯೇಂದ್ರಿಯಗಳಿಂದ ಗ್ರಾಹ್ಯವಾದ ಗುಣವಿರುವಿಕೆಯು ಭೂತತ್ವವು. ಎಲ್ಲೆಲ್ಲಿ ಭೂತತ್ವವೋ, ಅಲ್ಲಲ್ಲಿ ಪೃಥಿವೀತ್ವಾಭಾವವೆಂದು ವ್ಯಾಪ್ತಿಯು. ತಥಾ ಚ ಗಂಧವದ್ದ್ರವ್ಯಂ ಪೃಥಿವೀ ನ ಭವತಿ ಭೂತತ್ವಾತ್ ಅಬಾದಿವತ್=ಗಂಧವುಳ್ಳ ದ್ರವ್ಯವು ಪೃಥಿವಿಯು ಆಗುವುದಿಲ್ಲ, ಭೂತವಾದ ಪ್ರಯುಕ್ತ ಜಲಾದಿಗಳಂತೆ; ಎಂಬೀ ಅನುಮಾನದಿಂದ ಪೃಥಿವಿಯಲ್ಲಿ ಪೃಥಿವೀತ್ವಾದಿಗಳನ್ನು ಗ್ರಹಿಸತಕ್ಕ ಪ್ರತ್ಯಕ್ಷಕ್ಕೆ ಬಾಧಬರಬೇಕಾಗುವುದು. ಈ ಅನುಮಾನಕ್ಕೂ ವ್ಯಭಿಚಾರವು ಕಾಣದಿರುವುದರಿಂದ ವ್ಯಾಪ್ತ್ಯಾದಿಗಳಿವೆ ॥ ೧೭೯ ॥

ಆಹುದು. ಆದರೆ ‘ ಪೃಥಿವಿಗೂ ಪೃಥಿವೀತ್ವವು ಇಲ್ಲದೆ ಹೋಗಬೇಕಾಗುವುದು ’ ಎಂಬೀ ಅತಿ ಪ್ರಸಂಗರೂಪ ಉಪನ್ಯಾಸವು ಪ್ರಕೃತ ಅನುಕೂಲವಾಗುವುದಿಲ್ಲ. ಈ ಅನುಮಾನದಿಂದ ಗಂಧವುಳ್ಳ ದ್ರವ್ಯಕ್ಕೆ ಪೃಥಿವೀತ್ವಾಭಾವವು ಸಾಧಿಸಲ್ಪಡುತ್ತದೆ. ಅಭಾವಜ್ಞಾನಕ್ಕೆ ಪ್ರತಿಯೋಗಿ ಜ್ಞಾನವು ಕಾರಣವು. ಆದಕಾರಣ ಹೀಗೆ ಅನುಮೇಯಿಸುವವನು ಪೃಥಿವೀತ್ವವನ್ನು ಆದಿಯಲ್ಲಿ ತಿಳಿಯಬೇಕು. ಇಲ್ಲವಾದರೆ ವಿಶೇಷಣವೇ ಅಪಸಿದ್ಧವಾಗಬೇಕಾಗುವುದು. ಅಂತಹ ಪೃಥಿವೀತ್ವವು ಗಂಧವುಳ್ಳ ದ್ರವ್ಯದಲ್ಲಿಯೇ ಪ್ರತ್ಯಕ್ಷದಿಂದ ತಿಳಿಯತಕ್ಕದು. ಹೀಗೆ ಉಪಜೀವ್ಯವಾದ ಪ್ರಯುಕ್ತ (ಪ್ರತಿಯೋಗಿಯನ್ನು ಗ್ರಹಿಸುವ ಪ್ರಯುಕ್ತ) ಪ್ರಬಲವಾದ ಪ್ರತ್ಯಕ್ಷಕ್ಕೆ ಅನುಮಾನವು ಬಾಧಕವಾಗಲಾರದು. ಅನುಮಾನವೇ ಪ್ರತ್ಯಕ್ಷಕ್ಕೆ ಬಾಧಕವಾಗುವುದಾದರೆ, ಪೃಥಿವೀತ್ವರೂಪ ಪ್ರತಿಯೋಗಿ ಜ್ಞಾನವಿಲ್ಲದಿರುವುದರಿಂದ ಪೃಥಿವೀತ್ವಾಭಾವರೂಪವಾದ ಸಾಧ್ಯವು ಅಪ್ರಸಿದ್ಧವಾದ ಪ್ರಯುಕ್ತ ವಿಶೇಷಣವು ಅಪ್ರಸಿದ್ಧವಾಗಿ ಅನುಮಾನವೇ ಹುಟ್ಟದೆ ಹೋಗಬೇಕಾಗುವುದು. ಮತ್ತೆ ಪ್ರತ್ಯಕ್ಷದ ಬಲದಿಂದ ಗಂಧವುಳ್ಳ ದ್ರವ್ಯಕ್ಕೆ ಪೃಥಿವೀತ್ವವು ಸಿದ್ಧವಾಗಲು ಪಕ್ಷವಾದ ಗಂಧವುಳ್ಳ ದ್ರವ್ಯದಲ್ಲಿಯೇ ವ್ಯಾಪ್ತಿಯು ಭಗ್ನವಾಗಿ ಅನುಮಾನವೇ ಅಪ್ರಮಾಣವು. ಪ್ರಕೃತ ಹಾಗೆ ಇಲ್ಲವು. ಅಂದರೆ, ‘ಜೀವರು ಪರಬ್ರಹ್ಮನಿಂದ ಯಥಾರ್ಥವಾಗಿ ಭಿನ್ನರಾಗುವುದಿಲ್ಲ’ ಎನ್ನುವಲ್ಲಿ ಭೇದಾಭಾವ ರೂಪವಾದ ಸಾಧ್ಯಕ್ಕೆ ಪ್ರತಿಯೋಗಿ ಭೂತವಾದ ಭೇದದ ಜ್ಞಾನವು ಘಟಪಟಾದಿಗಳಲ್ಲಿ ಸಂಭವಿಸುವುದರಿಂದ ಪೃಥಿವೀತ್ವಾದಿಗಳಂತೆ ಪಕ್ಷದಲ್ಲಿಯೇ ತಿಳಿಯಬೇಕೆಂಬ ನಿಯಮವು ಇಲ್ಲದಿರುವುದರಿಂದ ಹಿಂದೆ ಹೇಳಿದ ರೀತಿಯಾಗಿ ಪಕ್ಷದಲ್ಲಿಯೇ ಅನುಮಾನವು ಭಗ್ನವಾದ ವ್ಯಾಪ್ತಿಯುಳ್ಳದ್ದಾಗಲಿಲ್ಲ. ಹೀಗೆ ಹೇಳಕೂಡದು. ಯಾವುದು ಇಲ್ಲದೆ ಯಾವುದಕ್ಕೆ ಉತ್ಪತ್ತಿಯಿಲ್ಲವೋ, ಅದು ಅದಕ್ಕೆ ಉಪಜೀವ್ಯವು. ಅದು ನಿಷೇಧ ರೂಪವಾದ ಸಾಧ್ಯಕ್ಕೆ ಯಾವುದು ಪ್ರತಿಯೋಗಿಯೋ ಅದನ್ನೇ ಗ್ರಹಿಸಬೇಕೆಂಬ ನಿಯಮವಿಲ್ಲವು. ಮತ್ತೆ ಧರ್ಮಿ ಸಾಧ್ಯ ಲಿಂಗ ವ್ಯಾಪ್ತ್ಯಾದಿಗಳನ್ನು ಗ್ರಹಿಸತಕ್ಕದು ಉಪಜೀವ್ಯವು ಆಗುವುದು. ಪ್ರಕೃತ ಅದರ ವಿರೋಧವದೆ. ಅಂದರೆ, ಪ್ರಕೃತ ಮಿಥ್ಯಾತ್ವಾನುಮಾನದಲ್ಲಿ ಪ್ರತ್ಯಕ್ಷವು ಧರ್ಮ್ಯಾದಿಗಳನ್ನು ಗ್ರಹಿಸುವುದರಿಂದ ಉಪಜೀವ್ಯವು. ಜೀವರಿಗೆ ಅಭೇದ ಸಾಧಕವಾದ ಅನುಮಾನದಲ್ಲಿ ಸಾಕ್ಷಿ ಪ್ರತ್ಯಕ್ಷವು ಪಕ್ಷೀಭೂತನಾದ ಜೀವನನ್ನು ಗ್ರಹಿಸುವುದರಿಂದ ಬ್ರಹ್ಮ ಭೇದವೇ ಗೃಹೀತವಾದ ಪ್ರಯುಕ್ತ ಜೀವನನ್ನು ಪಕ್ಷೀಕರಿಸಿ ಬ್ರಹ್ಮಾಭೇದವನ್ನು ಸಾಧಿಸಿದರೆ ಅನುಮಾನಕ್ಕೆ ಪ್ರತ್ಯಕ್ಷ ಬಾಧವಿದೆ. ಆದಕಾರಣ ಅನುಮಾನವು ಪ್ರತ್ಯಕ್ಷಕ್ಕೆ ಬಾಧಕವು ಹೇಗೆ ಆಗುವುದು, ಎಂದಾಶಯವುಳ್ಳವರಾಗಿ ಹಿಂದಿನ ಅತಿ ಪ್ರಸಂಗಕ್ಕೆ ವಿಪರ್ಯಯ ಪರ್ಯವಸಾನವನ್ನು ಹೇಳುತ್ತಾರೆ.

**ಮೂ ॥ ಅತೋ ನ ತರ್ಕಮಾತ್ರತ ಏವ ದೃಷ್ಟಸ್ಯ ಭ್ರಾಂತಿತ್ವಂ ಕಲ್ಪ್ಯಂ ॥೧೮೦॥**

ಅ ॥ ಅತಃ = ಆದಕಾರಣ, ತರ್ಕಮಾತ್ರತ ಏವ = ಕೇವಲ ಅನುಮಾನದಿಂದಲೇ, ದೃಷ್ಟಸ್ಯ = ಪ್ರತ್ಯಕ್ಷಕ್ಕೆ, ಭ್ರಾಂತಿತ್ವಂ = ಭ್ರಮತ್ವವು, ನ ಕಲ್ಪ್ಯಂ = ಕಲ್ಪಿಸಕೂಡದು. ಅಥವಾ ದೃಷ್ಟಸ್ಯ = ಕಾಣಲ್ಪಟ್ಟ ವಸ್ತುವಿಗೆ, ಭ್ರಾಂತಿತ್ವಂ = ಭ್ರಾಂತಿಪರಿಕಲ್ಪಿತತ್ವವು, ನ ಕಲ್ಪ್ಯಂ = ಕಲ್ಪಿಸಕೂಡದು ॥ ೧೮೦ ॥

ಪ್ರತ್ಯಕ್ಷದಿಂದ ಬಾಧಿಸಲ್ಪಡುವುದರಿಂದಲೇ ಯಾವಾಗ ಅನುಮಾನವು ಅಪ್ರಮಾಣವೋ, ಆಗ ಸರ್ವ ಪ್ರಮಾಣಗಳಿಂದ ವಿರುದ್ಧವಾದ ಪ್ರಯುಕ್ತ ಅಪ್ರಮಾಣವಾಗುತ್ತದೆ ಎಂದು ಹೇಳಬೇಕಾಗಿಯೇ ಇಲ್ಲವು. ಸುತರಾಂ ಸಿದ್ಧವು. ಆ ಕಾರಣ ಹಿಂದೆ ಹೇಳಿದ ಬಾಧವನ್ನು ಉಪಸಂಹಾರಮಾಡುತ್ತಾರೆ —

**ಮೂ ॥ ಅತಃ ಸರ್ವಭೇದನಿರಾಸಕತರ್ಕಸ್ಯ ಸರ್ವಶ್ರುತಿಸ್ಮೃತಿ ಪ್ರತ್ಯಕ್ಷಾನು-ಮಾನವಿರುದ್ಧತ್ವಾನ್ನಿತರಾಮಾಭಾಸತ್ವಂ ॥ ೧೮೧ ॥**

ಅ ॥ ಅತಃ=ಆದಕಾರಣ, ಸರ್ವಭೇದನಿರಾಸಕತರ್ಕಸ್ಯ=ಎಲ್ಲಾ ಭೇದಗಳನ್ನೂ ನಿರಾಸ ಮಾಡತಕ್ಕ ಅನುಮಾನಕ್ಕೆ, ಸರ್ವಶ್ರುತಿ ಸ್ಮೃತಿ ಪ್ರತ್ಯಕ್ಷಾನುಮಾನವಿರುದ್ಧತ್ವಾತ್ = ಎಲ್ಲಾ ಶ್ರುತಿ, ಸ್ಮೃತಿ, ಪ್ರತ್ಯಕ್ಷ ಅನುಮಾನಗಳಿಂದ ಬಾಧಿತಗಳಾಗುವ ಪ್ರಯುಕ್ತ, ನಿತರಾಂ= ಸಂಶಯಕ್ಕೆ ವಿಷಯವಾಗದೇನೇ, ಆಭಾಸತ್ವಂ=ದುಷ್ಟತ್ವವು ॥ ೧೮೧ ॥

(1) ಪುನಃ ಪರರು ಆಶಂಕಿಸುವರು — ಇಲ್ಲಿ ವ್ಯವಸ್ಥೆಯಿದೆ. ಕೇವಲ ಅನುಮಾನವು ಉಪಜೀವ್ಯ ಪ್ರತ್ಯಕ್ಷದಿಂದ ಬಾಧಿಸಲ್ಪಡುತ್ತದೆ. ಪ್ರಮಾಣಸಹಾಯವುಳ್ಳ ಅನುಮಾನವೇ ಉಪ ಜೀವ್ಯವಾದ ಪ್ರತ್ಯಕ್ಷವನ್ನು ಬಾಧಿಸುತ್ತದೆ. ಪ್ರಕೃತ ಅನುಮಾನಗಳ ಸಮೂಹಕ್ಕೆ 'ತತ್ತ್ವಮಸಿ' ಇತ್ಯಾದ್ಯಾಗಮಗಳ ಸಾಹಾಯ್ಯವಿದೆ ಎಂದು ಪರರು ಹೇಳಕೂಡದು. 'ತತ್ತ್ವಮಸಿ' ಇತ್ಯಾದ್ಯಾ ಗಮಗಳು ಐಕ್ಯಪರಗಳಾಗುವುದಿಲ್ಲವೆಂದು ಪೂರ್ವದಲ್ಲಿಯೇ ಹೇಳಿಯದೆ. (2) ಪುನಃ ಆಶಂಕಿಸು ವರು — ಪ್ರತ್ಯಕ್ಷಾದಿಗಳು ಉಪಜೀವ್ಯಗಳಾದಾಗ್ಯೂ ಅನುಮಾನಗಳ ಸಮೂಹವು ಅಪ್ರಮಾಣ ವಾಗುವುದಿಲ್ಲ. ವಿಷಯಗಳು ಬೇರೆಬೇರೆಯಾದುದರಿಂದ ವಿರೋಧವಿಲ್ಲ. ಭೇದಪ್ರಪಂಚಕ್ಕೆ ನಾವು ಪಾರಮಾರ್ಥಿಕ ಸತ್ವವನ್ನು ಅಂಗೀಕರಿಸುವುದಿಲ್ಲ; ವ್ಯಾವಹಾರಿಕ ಸತ್ವವನ್ನು ಅಂಗೀ ಕರಿಸುವೆವು. ಅದರಲ್ಲಿ ಅನುಮಾನಗಳ ಸಮೂಹಗಳು ಭೇದಪ್ರಪಂಚಕ್ಕೆ ಪಾರಮಾರ್ಥಿಕ ಸತ್ವವನ್ನು ನಿಷೇಧಿಸುವುವು. ಪ್ರತ್ಯಕ್ಷಾದಿಗಳು ವ್ಯಾವಹಾರಿಕ ಸತ್ವವನ್ನು ವಿಷಯೀಕರಿಸುವವು. ಅಪೃಥಿವೀತ್ವಾದ್ಯನುಮಾನವು ಪ್ರತ್ಯಕ್ಷವು ಈ ಎರಡೂ ಅಪರಮಾರ್ಥ ವಿಷಯಕವು. ಆದಕಾರಣ ಅಲ್ಲಿ ಬಾಧ್ಯಬಾಧಕಭಾವವು ಯುಕ್ತವು ಎಂದಭಿಪ್ರಾಯದಿಂದ ಆಶಂಕಿಸಿ ನಿಷೇಧಿಸುತ್ತಾರೆ —

**ಮೂ ॥ ನ ಚ ಪರಮಾರ್ಥತೋ ಭೇದಾಭಾವೋ ವ್ಯಾವಹಾರಿಕಃ ಸೋಽಸ್ತೀತಿ ವಾಚ್ಯಂ ॥ ೧೮೨ ॥**

ಅ ॥ ಪರಮಾರ್ಥತಃ=ಪಾರಮಾರ್ಥಿಕವಾಗಿ, ಭೇದಾಭಾವಃ=ಭೇದವಿಲ್ಲವೆನ್ನುವುದು, (ಅನುಮಾನದಿಂದ ಸಾಧಿಸಲ್ಪಡಬೇಕು.) ವ್ಯಾವಹಾರಿಕಃ = ವ್ಯಾವಹಾರಿಕವಾದ, ಸಃ = ಆ ಭೇದವು, ಅಸ್ತಿ=ಅದೆ, ಸಃ=ಆ ಭೇದವು, (ಪ್ರತ್ಯಕ್ಷಾದಿಗಳಿಗೆ ವಿಷಯವು) ಇತಿ=ಹೀಗೆ, ನ ಚ ವಾಚ್ಯಂ=ಹೇಳಕೂಡದು ॥ ೧೮೨ ॥

ಏಕೆ ಹೀಗೆ ಹೇಳಕೂಡದೆಂದರೆ — ಪ್ರತ್ಯಕ್ಷಾದಿಗಳು ಭೇದಕ್ಕೂ, ಪ್ರಪಂಚಕ್ಕೂ ಪಾರ ಮಾರ್ಥಿಕ ಸತ್ವವನ್ನು ವಿಷಯೀಕರಿಸುತ್ತವೆ. ಅದಾದರೂ ಪರಿಶೇಷ ಪ್ರಮಾಣದಿಂದ ಸಿದ್ಧ ವಾಗುವುದು. ಭೇದಪ್ರಪಂಚವನ್ನು ವಿಷಯೀಕರಿಸುವ ಪ್ರತ್ಯಕ್ಷಾದಿಗಳಿಗೆ ಪಾರಮಾರ್ಥಿಕ ಸತ್ತಾದ ಈ ಭೇದಪ್ರಪಂಚವಾಗಲೀ, ಅಸತ್ತಾಗಲೀ, ಸದಸದ್ವಿಲಕ್ಷಣವಾದ ಅನಿರ್ವಚನೀಯ ವಾಗಲೀ ವಿಷಯವೆಂದು ಹೇಳಬೇಕಾಗುವುದು. ಅವುಗಳಲ್ಲಿ ಅನಿರ್ವಚನೀಯವನ್ನೂ, ಅಸ ತ್ತನ್ನೂ ನಿಷೇಧಿಸುವಾಗ ಪಾರಮಾರ್ಥಿಕ ಸತ್ತನ್ನೂ ವಿಷಯೀಕರಿಸುತ್ತದೆ; ಎಂದೇ ಪರಿಶೇಷ ಪ್ರಮಾಣದಿಂದ ಸಿದ್ಧವಾಗುವುದೆಂದಭಿಪ್ರಾಯವುಳ್ಳವರಾಗಿ ಸದಸದ್ವೈಲಕ್ಷಣ್ಯಪಕ್ಷವು ಕೂಡುವು ದಿಲ್ಲವೆನ್ನುವುದರಲ್ಲಿ ಹೇತುವನ್ನು ಹೇಳುತ್ತಾರೆ —

**ಮೂ ॥ ಸದಸದ್ವೈಲಕ್ಷಣ್ಯೇ ಪ್ರಮಾಣಾಭಾವಾತ್ ॥ ೧೮೩ ॥**

ಅ ॥ ಸದಸದ್ವೈಲಕ್ಷಣ್ಯೇ = ಭೇದಪ್ರಪಂಚಕ್ಕೆ ಸತ್ವದಿಂದಲೂ ಅಸತ್ವದಿಂದಲೂ ರಾಹಿತ್ಯವಿಷಯದಲ್ಲಿ ಅಂದರೆ ಭೇದಪ್ರಪಂಚವು ಸತ್ತೂ ಅಲ್ಲ ಅಸತ್ತೂ ಅಲ್ಲ ಎನ್ನುವಲ್ಲಿ, ಪ್ರಮಾಣಾಭಾವಾತ್=ಪ್ರಮಾಣವಿಲ್ಲದಿರುವುದರಿಂದ.

ದೃಶ್ಯತ್ವಾದಿಹೇತುಗಳಿಂದ ಆಕಾಶವೊದಲಾದ ಜಗತ್ತಿಗೆ ಸದಸದ್ವೈಲಕ್ಷಣ್ಯವನ್ನು ಸಾಧಿಸುವುದರಿಂದ ಪ್ರಮಾಣವಿಲ್ಲವೆನ್ನುವುದು ಹೇಗೆ ಕೂಡುವುದು ಎಂದು ಹೇಳಕೂಡದು. ದೃಷ್ಟಾಂತವಿಲ್ಲದಿರುವುದರಿಂದ ವ್ಯಾಪ್ತಿಯು ಸಿದ್ಧವಾಗಲಿಲ್ಲ. ಶುಕ್ತಿರಜತಾದಿಗಳು ದೃಷ್ಟಾಂತವೆಂದು ಹೇಳಕೂಡದು, ಏಕೆ ಎಂದಾಶಂಕಿಸಿದರೆ— ಇದೇ ಮೂಲದಿಂದ ಸಮಾಧಾನವನ್ನು ಹೇಳುತ್ತಾರೆ —

**ಮೂ ॥ ಸದಸದ್ವೈಲಕ್ಷಣ್ಯೇ ಪ್ರಮಾಣಾಭಾವಾತ್ ॥**

ಅ ॥ ಶುಕ್ತಿರಜತಾದಿಗಳಿಗೆ ಸದಸದ್ವೈಲಕ್ಷಣ್ಯವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ॥ ೧೮೩ ॥

(1) ಪುನಃ ಆಶಂಕಿಸುವರು — 'ಶುಕ್ತಿರಜತಾದಿಯು ಸದಸದ್ವಿಲಕ್ಷಣವು' ಎನ್ನುವಲ್ಲಿ * ಅರ್ಥಾಪತ್ತಿಯೂ ಪ್ರಮಾಣವು. ಅಸತ್ತಿಗೆ ಪ್ರತೀತಿಯೇ ಕೂಡದಿರುವುದರಿಂದ ಶುಕ್ತಿರಜತಾದಿಗಳು ಅತ್ಯಂತಾಸತ್ತಲ್ಲ; ಶುಕ್ತಿರಜತಾದಿಗಳಿಗೆ ಪ್ರತೀತಿಯಿದೆ; ಪಾರಮಾರ್ಥಿಕ ಸತ್ತೂ ಅಲ್ಲ; ಸತ್ತಿಗೆ ಬಾಧವು ಕೂಡಲಾರದು; ಇದಾದರೂ ಬಾಧಿಸಲ್ಪಡುತ್ತದೆ. ಆದಕಾರಣ ಖ್ಯಾತಿ ಬಾಧಗಳು ಅನ್ಯಥೋಪಪನ್ನಗಳಾಗದಿರುವುದರಿಂದ ಶುಕ್ತಿರಜತಾದಿಗಳು ಸದಸದ್ವಿಲಕ್ಷಣವೇ ಸರಿ ಎಂದು ಹೇಳಕೂಡದು. ಶುಕ್ತಿರಜತಾದಿಗಳಿಗೆ ಅತ್ಯಂತಾಸತ್ವವಿದ್ದರೂ ಪ್ರತೀತಿಯು ಕೂಡಬಹುದು. (2) ಆದರೆ ಅಸತ್ತಿಗೆ ಪ್ರತೀತಿಯಿಲ್ಲ. ಪ್ರತೀತವಾಗುವ ಈ ಶುಕ್ತಿರಜತಾದಿಗಳು ಅಸತ್ತಲ್ಲವು, ಎಂದು ಹಿಂದೆ ಹೇಳಿರುವೆವು, ಎಂದಾಶಂಕಿಸಿದರೆ — ಅಸತ್ತಿಗೂ ಪ್ರತೀತಿಯನ್ನುಪಪಾದಿಸಲಿಕ್ಕೆ ಪ್ರಶ್ನೆಮಾಡುತ್ತಾರೆ.

**ಮೂ ॥ ಅಸತಃ ಖ್ಯಾತ್ಯಯೋಗಾದಿತಿ ವದತಃ ಖ್ಯಾತಿರಭೂನ್ನ ವಾ ॥ ಯದಿ ನಾಭೂನ್ನ ತತ್ಖ್ಯಾತಿನಿರಾಕರಣಂ ॥ ಯದ್ಯಭೂತ್ತಥಾಽಪಿ ॥ ನ ಚಾಸತೋ ವೈಲಕ್ಷಣ್ಯಂ ತತ್ಪ್ರತೀತಿಂ ವಿನಾ ಜ್ಞಾಯತೇ ॥ ೧೮೪ ॥**

ಅ ॥ ಅಸತಃ=ಅಸತ್ತಿಗೆ, ಖ್ಯಾತ್ಯಯೋಗಾತ್=ಪ್ರತೀತಿಯಿಲ್ಲದಿರುವುದರಿಂದ, ಇತಿ=ಹೀಗೆ, ವದತಃ=ಹೇಳುವವನಿಗೆ, ಅಂದರೆ ಅಸತ್ತಿಗೆ ಪ್ರತೀತಿಯನ್ನು ಪ್ರತಿಷೇಧಮಾಡತಕ್ಕ ಪರನಿಗೆ, ಖ್ಯಾತಿಃ=ಅಸತ್ತಿನ ಪ್ರತೀತಿಯು, ಅಭೂತ್=ಇತ್ತೋ, ನ ವಾ=ಪ್ರತೀತಿಯಿರಲಿಲ್ಲವೋ, (ಪ್ರತೀತಿಯಿಲ್ಲವೆನ್ನುವ ಪಕ್ಷವನ್ನು ಪರರು ಅಂಗೀಕರಿಸಿರುವುದರಿಂದ ಅದನ್ನೇ ಆದಿಯಲ್ಲಿ ನಿರಾಕರಿಸುತ್ತಾರೆ.) ನಾಭೂತ್ ಯದಿ=(ಅಸತ್ತು ಪರನಿಂದ ಯಾವಾಗಲೂ ಪ್ರತೀತವು) ಆಗದಿದ್ದರೆ, ತತ್ಖ್ಯಾತಿನಿರಾಕರಣಂ=ಪರನಿಗೆ ಅಸತ್ಪ್ರತೀತಿಯನ್ನು ನಿಷೇಧಿಸುವುದು, ನ=ಯುಕ್ತವಾಗುವುದಿಲ್ಲ. (ಅಂದರೆ ಅಸದ್ವಿಶಿಷ್ಟವಾದ ಪ್ರತೀತಿಯನ್ನು ನಿರಾಕರಿಸಬೇಕು. ವಿಶೇಷಣವೇ ಪ್ರತೀತವಾಗದಿದ್ದರೆ ವಿಶಿಷ್ಟಪ್ರತೀತಿಯು ಕೂಡಲಾರದು. ಪ್ರತೀತವೇ ಆಗದಿದ್ದರೆ ಪ್ರತಿಷೇಧವು ಸುತರಾಂ

---

* ಅನುಪಪದ್ಯಮಾನವಾದ ಅರ್ಥವನ್ನು ತಿಳಿದು ಅದಕ್ಕೆ ಉಪಪಾದಕವಾದ ಅರ್ಥವನ್ನು ತಿಳಿಯುವುದು ಅರ್ಥಾಪತ್ತಿಯು.

ಕೊಡುವುದಿಲ್ಲವಾದಕಾರಣ ಪರರು ಅಸತ್ತಿಗೆ ಪ್ರತೀತಿಯನ್ನು ನಿಷೇಧಮಾಡಿದ್ದು ಕೂಡದಿರುವುದರಿಂದಲೇ ಅಸತ್ತಿಗೂ ಪ್ರತೀತಿಯಿದೆ ಎಂದು ಸಿದ್ಧವಾಗುವುದು.) ಅಭ್ಯುದ್ಯದಿ=ಅಸತ್ತಿಗೆ ಪ್ರತೀತಿಯಿದ್ದರೂ, ತಥಾಪಿ=ಆದರೂ (ಪರನಿಗೆ ಅಸತ್ಪ್ರತೀತಿಯನ್ನು ನಿಷೇಧಿಸುವುದು ಕೂಡುವುದಿಲ್ಲ. ಏಕೆಂದರೆ — ಅಸತ್ತಿಗೆ ಪ್ರತೀತಿಯಿಲ್ಲವೆಂಬೀವಚನಕ್ರಿಯೆಯಿಂದ ವಿರೋಧವು. ಅಂತೂ ಅಸತ್ಪ್ರತೀತಿಯನ್ನು ನಿವಾರಿಸಲು ಸಾಧ್ಯವೇ ಇಲ್ಲ.) ಕಾರಣಾಂತರದಿಂದಲೂ ಅಸತ್ಪ್ರತೀತಿಯನ್ನು ಅಂಗೀಕರಿಸಬೇಕೆಂದು ನಿರೂಪಿಸುತ್ತಾರೆ. ಅಸತಃ=(ಶುಕ್ತಿರಜತ ಮೊದಲಾದುದಕ್ಕೆ)ಅಸತ್ತಿನಿಂದ, ವೈಲಕ್ಷಣ್ಯಂ=ಭೇದವು, (ಅರ್ಥಾಪತ್ತಿಯಿಂದ ತಿಳಿಯಲ್ಪಡಬೇಕು. ಅದಾದರೂ) ತತ್ಪ್ರತೀತಿಂ ವಿನಾ=ಅಸತ್ತಿನ ಜ್ಞಾನವನ್ನು ಹೊರತು, ನ ಚ ಜ್ಞಾಯತೇ=ತಿಳಿಯಲು ಶಕ್ಯವಾಗುವುದಿಲ್ಲ.

ತಾ || ವೈಲಕ್ಷಣ್ಯವೆಂದರೆ ವ್ಯಾವೃತ್ತಿಯು; ಅಂದರೆ ಭೇದವು. ಅದಕ್ಕೆ ಪ್ರತಿಯೋಗಿಜ್ಞಾನವು ಕಾರಣವು. ಆದಕಾರಣ ಅಸತ್ತೇ ಪ್ರತೀತವಾಗದಿದ್ದರೆ ಅಸದ್ವೈಲಕ್ಷಣ್ಯವು ಹೇಗೆ ಪ್ರತೀತವಾಗುವುದು? ಆದಕಾರಣ ಅರ್ಥಾಪತ್ತಿಗೆ ಅಸದ್ವೈಲಕ್ಷಣ್ಯಜ್ಞಾನರೂಪ ಫಲದಿಂದ ವಿರೋಧವು ಬರುವುದು. ಅಂತೂ ಶುಕ್ತಿರಜತಾದಿಗಳು ಅಸತ್ತೆಂದೇ ಉಪಪನ್ನವಾಗುತ್ತವೆ. ಅರ್ಥಾಪತ್ತಿಯಿಂದ ಶುಕ್ತಿರಜತಾದಿಗಳಿಗೆ ಅನಿರ್ವಾಚ್ಯತ್ವವು ಸಿದ್ಧಿಸುವುದಿಲ್ಲ ॥ ೧೮೪ ॥

ಆದರೂ 'ಶುಕ್ತಿರಜತಾಟಕಂ ಅನಿರ್ವಚನೀಯಂ ಬಾಧ್ಯತ್ವಾತ್ ವ್ಯತಿರೇಕೇಣ ಆತ್ಮವತ್'= ಶುಕ್ತಿರಜತ ಮೊದಲಾದುದು ಅನಿರ್ವಚನೀಯವು ಬಾಧಿಸಲ್ಪಡುವುದರಿಂದ, ವ್ಯತಿರೇಕೇಣ ಆತ್ಮವತ್=ವ್ಯತಿರೇಕ ವ್ಯಾಪ್ತಿಯಿಂದ ಆತ್ಮನಂತೆ, ಆತ್ಮನಲ್ಲಿ ಅನಿರ್ವಚನೀಯತ್ವವೂ ಇಲ್ಲ, ಬಾಧ್ಯತ್ವವೂ ಇಲ್ಲ ಎಂಬೀ ಅನುಮಾನದಿಂದ ಅನಿರ್ವಚನೀಯತ್ವವು ಸಿದ್ಧಿಸುವುದು ಎಂದಾಶಂಕಿಸಿದರೆ—

**ಮೂ || ನ ಚ ಶುಕ್ತೇರಜತತ್ವಂ ಸದಸದ್ವಿಲಕ್ಷಣಂ । ಅಸದೇವ ರಜತಂ ಪ್ರತ್ಯಭಾದಿತ್ಯನುಭವಾತ್ || ೧೮೫ ||**

ಅ || ಶುಕ್ತೇಃ ರಜತತ್ವಂ=ಶುಕ್ತಿಯಲ್ಲಿ ಆರೋಪಿತವಾದ ರಜತತ್ವವು, ಸದಸದ್ವಿಲಕ್ಷಣಂ=ಅನಿರ್ವಚನೀಯವು, ಎಂದು, ನ ಚ=ಅನುಮಾನದಿಂದ ಕಲ್ಪಿಸಕೂಡದು. (ಅತ್ಯಂತಾಸತ್ತಾದ ರಜತತ್ವಕ್ಕೆ ಶುಕ್ತಿಯಲ್ಲಿ ಅತ್ಯಂತಾಸತ್ತೇ ಆದ ಸಮವಾಯ ಸಂಬಂಧವಾಗಲೀ ರಜತಾಭೇದವಾಗಲೀ ಭ್ರಾಂತಿವಿಷಯವು ಎಂದು ತಿಳಿಸುವುದಕ್ಕಾಗಿ ಕೆಲವು ಕಡೆ 'ಶುಕ್ತೇಃ ರಜತತ್ವಂ' ಎಂದು ಧರ್ಮನಿರ್ದೇಶವು. ಕೆಲವು ಕಡೆ 'ಶುಕ್ತಿರಜತಾದೇಃ' ಎಂದು ಧರ್ಮಿನಿರ್ದೇಶವು.)

ಏಕೆ ಹೇಳಕೂಡದೆಂದರೆ — ಬಾಧಕಜ್ಞಾನದಿಂದ ಅತ್ಯಂತಾಸತ್ವವೇ ನಿಶ್ಚಿತವಾದುದರಿಂದ ಪಕ್ಷದಲ್ಲಿ ಸಾಧ್ಯ (ಅನಿರ್ವಚನೀಯತ್ವ)ವಿಲ್ಲದಿರುವುದರಿಂದ ಬಾಧಿತವಾಯಿತೆಂದು ನಿರೂಪಿಸುತ್ತಾರೆ. ಅಸದೇವ ರಜತಂ=ಅತ್ಯಂತಾಸತ್ತೇ ಆದ ರಜತವು, ಪ್ರತ್ಯಭಾತ್=ತೋರಿತು, ಇತಿ= ಹೀಗೆ, ಅನುಭವಾತ್=ಸಾಕ್ಷಿಪ್ರತ್ಯಕ್ಷಸಿದ್ಧವಾದ ಪ್ರಯುಕ್ತ, ಅಂತೂ ಬಾಧಕಜ್ಞಾನವು ವಸ್ತುವನ್ನು ವ್ಯವಸ್ಥೆಮಾಡುವುದರಿಂದ ಅದು ಪ್ರಬಲವೆಂದು ನಿಶ್ಚಿತವೇ ಆಗುವುದು ॥ ೧೮೫ ॥

ಪುನಃ ಆಶಂಕಿಸುವರು — ಶುಕ್ತಿರಜತಾದಿಗಳಿಗೆ ಪ್ರತೀತಿಯಿದ್ದುದರಿಂದಲೂ, ಅಸತ್ವವಿಲ್ಲದಿರುವುದರಿಂದಲೂ ಈ ಬಾಧಕಪ್ರತ್ಯಯವು ಸತ್ವಾಭಾವವನ್ನು ವಿಷಯೀಕರಿಸುತ್ತದೆ. ಅಸತ್ತಿಗೂ ಪ್ರತೀತಿಯು ಉಪಪಾದಿತವಾಗಿದೆ ಎಂದು ಹೇಳಕೂಡದು. ಅಸತ್ತು ಅಸತ್ತೆಂದು ತೋರಿದರೂ ಸತ್ತೆಂದು ತೋರುವುದಿಲ್ಲ. ಶುಕ್ತಿರಜತಾದಿಗಳು ಸತ್ತೆಂದೇ ತೋರುತ್ತವೆ. ಪ್ರತೀತಿಮಾತ್ರ

ಇದ್ದುದರಿಂದ ಪ್ರತಿಷೇಧ ಅಸದ್ವೈಲಕ್ಷಣ್ಯ ಜ್ಞಾನಗಳು ಕೂಡುತ್ತವೆ. 'ಸತ್ವದಿಂದ ಪ್ರತೀತಿಯು' ಎನ್ನುವುದು ಅರ್ಥಾಪತ್ತಿ ಶರೀರದಲ್ಲಿ ಸೇರಿಯದೆ ಎಂದಾಶಂಕಿಸಿದರೆ —

**ಮೂ ॥ ನ ಚ ಪ್ರತೀತತ್ವಾದಸತ್ವಾಭಾವಃ ॥ ೧೮೬ ॥**

ಅ ॥ ಪ್ರತೀತತ್ವಾತ್=ಸತ್ ಎಂದು ಪ್ರತೀತಿಯಿದ್ದುದರಿಂದ, ಅಸತ್ವಾಭಾವಃ=ಶುಕ್ತಿ ರಜತಾದಿಗಳಿಗೆ ಅಸತ್ವವಿಲ್ಲವೆನ್ನುವುದು, ನ ಚ=ಇಲ್ಲವು ॥ ೧೮೬ ॥

ಏಕೆ ಇಲ್ಲವೆಂದರೆ— ಅಸತ್ತಿಗೆ ಸತ್ ಎಂದು ಪ್ರತೀತಿಯು ಭ್ರಾಂತಿಯಿಲ್ಲದಿರುವಾಗ ಇಲ್ಲವೆಂದರ್ಥವೋ ಅಥವಾ ಭ್ರಾಂತಿಯಲ್ಲಿಯೂ ಇಲ್ಲವೆಂದರ್ಥವೋ? ಒಂದನೇದ್ದು ಕೂಡಲಾರದು. ಏಕೆಂದರೆ ಪ್ರಕೃತಕ್ಕೆ ಉಪಯುಕ್ತವಲ್ಲ. ಅಂದರೆ ಭ್ರಾಂತಿವಿಷಯವಾದುದು ಅಸದ್ವೈಲಕ್ಷಣ್ಯ ಸಿದ್ಧಿರೂಪವಾದ ಪ್ರಕೃತ ಪ್ರಮೇಯಕ್ಕೆ ಉಪಯುಕ್ತವಲ್ಲವು. ಎರಡನೇ ಕಲ್ಪದಲ್ಲಿ ಭ್ರಾಂತಿಯೇ ಇಲ್ಲವೆಂದಾಗುವುದು. ಏಕೆಂದಾಶಂಕಿಸಿದರೆ —

**ಮೂ ॥ ಅಸತಃ ಸತ್ವಪ್ರತೀತಿಃ ಸತೋಽಸತ್ವಪ್ರತೀತಿರಿತ್ಯನ್ಯಥಾ ಪ್ರತೀತೇರೇವ ಭ್ರಾಂತಿತ್ವಾತ್ ॥ ೧೮೭ ॥**

ಅ ॥ ಅಸತಃ=ಅಸತ್ತಾದ ರಜತಾದಿಗಳಿಗೆ, ಸತ್ವಪ್ರತೀತಿಃ=ಸತ್ತೆನ್ನುವ ಪ್ರತೀತಿಯು, ಸತಃ=ಸತ್ತಾದ ಶುಕ್ತ್ಯಾದಿಗಳಿಗೆ, ಅಸತ್ವಪ್ರತೀತಿಃ=ಅಸತ್ತೆನ್ನುವ ಜ್ಞಾನವು, ಇತ್ಯನ್ಯಥಾಪ್ರತೀತೇರೇವ=ಅನ್ಯಥಾ ಜ್ಞಾನಕ್ಕೇನೇ, ಭ್ರಾಂತಿತ್ವಾತ್=ಭ್ರಮತ್ವವಿದ್ದುದರಿಂದ.

ತಾ ॥ 'ಅನ್ಯಥಾ ಪ್ರತೀತೇರೇವ ಭ್ರಾಂತಿತ್ವಾತ್' ಎಂದಿಷ್ಟೇ ಹೇಳಿದರೆ ಅಸತ್ತಿಗೆ ಸತ್ತೆನ್ನುವ ಪ್ರತೀತಿಯು ಸಿದ್ಧವಾಗುವುದಿಲ್ಲ. ಅನ್ಯಥಾಖ್ಯಾತಿವಾದಿಗಳೂ ಆ ಪ್ರತೀತಿಯನ್ನು ಅಂಗೀಕರಿಸಲಿಲ್ಲವು. ಆದಕಾರಣ 'ಅಸತಃ' ಇತ್ಯಾದಿಗಳಿಂದ ಅನ್ಯಥಾಖ್ಯಾತಿಯನ್ನು ವ್ಯಾಖ್ಯಾನ ಮಾಡಿದರು ॥ ೧೮೭ ॥

ಅನಿರ್ವಚನೀಯವನ್ನು ವಾದಿಸುವವರು ಶಂಕಿಸುತ್ತಾರೆ— ಅಸತ್ತು ಸತ್ತೆಂದು ತೋರದಿದ್ದರೆ ಭ್ರಾಂತಿಯೇ ಇಲ್ಲವೆಂದಾಗುವುದು. ಎಂಬೀ ದೋಷವು ಇತರರಿಗೆ ಸಂಭವಿಸಬಹುದು. ನಾವು ಆದರೂ 'ಅನಿರ್ವಚನೀಯವಾದ ಅರ್ಥದ ತೋರುವಿಕೆಯು ಭ್ರಮವು' ಎಂದಂಗೀಕರಿಸಿರುವುದರಿಂದ ಅಸತ್ತಿಗೆ ಭ್ರಾಂತಿಯಲ್ಲಿಯೂ ಪ್ರತೀತಿಯಿಲ್ಲವೆಂದಂಗೀಕರಿಸಿದರೂ ನಮಗೆ ಯಾವ ದೋಷವೂ ಇಲ್ಲವೆಂದಾಶಂಕಿಸಿ ನಿಷೇಧಿಸುತ್ತಾರೆ—

**ಮೂ ॥ ನ ಚಾಸತೋ ಭ್ರಾಂತಾವಪಿ ಪ್ರತೀತಿರ್ನಾಸ್ತೀತಿ ವಾಚ್ಯಂ ॥ ೧೮೮ ॥**

ಅ ॥ ಅಸತಃ=ಅಸತ್ತಾದ ಶುಕ್ತಿರಜತಾದಿಗಳಿಗೆ, ಭ್ರಾಂತಾವಪಿ=ಭ್ರಮೆಯಲ್ಲಿಯೂ, ಪ್ರತೀತಿಃ = ಸತ್ತೆನ್ನುವ ಜ್ಞಾನವು, ನಾಸ್ತಿ = ಇಲ್ಲವು, ಇತಿ = ಹೀಗೆ, ನ ಚ ವಾಚ್ಯಂ = ಹೇಳಕೂಡದು ॥ ೧೮೮ ॥

ಹಿಂದೆ ಹೇಳಿದ ಪ್ರಕಾರ ಏಕೆ ಹೇಳಕೂಡದೆಂದರೆ— ರಜತವು ಅನಿರ್ವಚನೀಯವು, ಎನ್ನುವ ಪಕ್ಷದಲ್ಲಿಯೂ ಆ ಅನಿರ್ವಚನೀಯ ರಜತವು. (೧) ಅನಿರ್ವಚನೀಯವೆಂದು ತೋರುತ್ತದೋ? (೨) ಅಸತ್ತೆಂದು ತೋರುತ್ತದೋ? (೩) ಸತ್ತೆಂದು ತೋರುತ್ತದೋ? ೧ನೇ ೨ನೇ ಕಲ್ಪಗಳು ಕೂಡಲಾರವು. ಏಕೆಂದರೆ, ಹಾಗೆ ಪ್ರತೀತಿಯೇ ಇಲ್ಲವು. ಪ್ರವೃತ್ತಿಯೂ ಇಲ್ಲವೆಂದು ಆಗಬೇಕಾಗುವುದು. ಅಸತ್ತಾಗಲೀ, ಪ್ರಾತಿಭಾಸಿಕವಾಗಲೀ, ಯಾಹಾಗಲೂ ಭ್ರಾಂತನಿಂದ

ಅರ್ಥಕ್ರಿಯೆಗಳಲ್ಲಿ ಉಪಯೋಗಿಸಲ್ಪಡತಕ್ಕುದಾಗಿ ದೃಷ್ಟವಾಗಲಿಲ್ಲವಷ್ಟೆ! ಆದಕಾರಣ ಅಸತ್ವಾದಿಗಳನ್ನು ತಿಳಿದೂ ಹೇಗೆ ಪ್ರವರ್ತಿಸುವರು? ಆದ ಪ್ರಯುಕ್ತ ಸತ್ತೆಂದೇ ತೋರುತ್ತದೆಂದಂಗೀಕರಿಸಬೇಕು. ಅಂತೂ ಪ್ರತೀತಿಯೂ, ಪ್ರವೃತ್ತಿಯೂ ಕೂಡುತ್ತದೆ. ಕೇವಲ ರಜತಜ್ಞಾನದಿಂದ ಪ್ರವೃತ್ತಿಯೆಂದು ಹೇಳಕೂಡದು; ಅನುಭವವಿರೋಧವದೆ. ಮತ್ತು 'ರಜತಂ' ಇತ್ಯಾದಿ ಪ್ರತೀತಿಗಳಲ್ಲಿ 'ಅಸ್ತಿ' ಎಂದಾಗಲೀ, 'ನಾಸ್ತಿ' ಎಂದಾಗಲೀ ವಿಷಯೀಕರಿಸಲ್ಪಡಬೇಕು. ಅವುಗಳನ್ನು ಬಿಟ್ಟು ಜ್ಞಾನವೇ ಕೂಡಲಾರದು. (2) ಅನಿರ್ವಚನೀಯ ರಜತದಲ್ಲಿ ತೋರುವ ಸತ್ವವು ೧. ಸತ್ತ್ವೋ, ೨. ಅಸತ್ತ್ವೋ, ೩. ಅನಿರ್ವಚನೀಯವೋ. ೧ನೇದ್ದು ಕೂಡಲಾರದು. ರಜತಕ್ಕೆ ಅನಿರ್ವಚನೀಯತ್ವವು ವಿರುದ್ಧವಾಗಿದೆ. ಯಾವುದಕ್ಕೆ ಸತ್ವವು ಸತ್ತಾಗಿದೆಯೋ ಅದು ಅನಿರ್ವಾಚ್ಯವೆಂದಾಗಲಾರದಷ್ಟೆ! ಆದಕಾರಣ ಅಸತ್ತೆಂದೇ ಅಂಗೀಕರಿಸಬೇಕು. ಆದರಿಂದ ಏನಾಯಿತೆಂದಾಶಂಕಿಸಿದರೆ—

ಮೂ ॥ ಅನಿರ್ವಚನೀಯಪರಮಾರ್ಥತ್ವಸ್ಯಾಸತ ಏವ
ದೃಷ್ಟ್ಯಂಗೀಕಾರಾತ್ ॥ ೧೮೯ ॥

ಅ ॥ ಅನಿರ್ವಚನೀಯ ಪರಮಾರ್ಥತ್ವಸ್ಯ=ಪ್ರಾತಿಭಾಸಿಕವಾದ ರಜತಕ್ಕೆ ಯಾವುದು ವ್ಯಾವಹಾರಿಕ ಸತ್ವವದೆಯೋ ಅದಕ್ಕೆ,ಅಸತ ಏವ=ಅತ್ಯಂತಾಸತ್ತಿಗೇನೇ, ದೃಷ್ಟ್ಯಂಗೀಕಾರಾತ್=ಸತ್ತೆಂದು ಪ್ರತ್ಯಕ್ಷವನ್ನು ಒಡಂಬಟ್ಟ ಪ್ರಯುಕ್ತ, (ಅಸತ್ತಿಗೆ ಭ್ರಾಂತಿಯಲ್ಲಿಯೂ ಸತ್ತೆಂದು ಪ್ರತೀತಿಯು ಇಲ್ಲವೆಂದು ಹೇಳಕೂಡದು.) ॥ ೧೮೯ ॥

ರಜತಕ್ಕೂ ಪ್ರಾತಿಭಾಸಿಕವಾದ ಸತ್ವವು ಉಂಟೆಂದು ಹೇಳಬೇಡ. ವ್ಯಾವಹಾರಿಕತ್ವವೇ ಪ್ರತೀತವಾಗದೆ ಇದ್ದರೆ ಪ್ರವೃತ್ತಿಯೇ ಕೂಡಲಾರದೆಂದು ಹೇಳಿದ್ದೇವೆ. ಎಂದರೆ, ಸತ್ಯವೇ. ಆದರೆ ಪ್ರಾತಿಭಾಸಿಕ ರಜತವು ವ್ಯಾವಹಾರಿಕವಾಗಿಯೇ ಪ್ರತೀತವಾಗುತ್ತದೆ. ಆದಾಗ್ಯೂ ಆ ವ್ಯಾವಹಾರಿಕತ್ವವು ಸತ್ತೂ ಅಲ್ಲವು, ಅಸತ್ತೂ ಅಲ್ಲವು. ಮತ್ತೆ ಶುಕ್ತಿಯಲ್ಲಿರುವ 'ಇದಂ' ಎನ್ನುವುದರ ಸಂಸರ್ಗವು 'ಇದಂ ರಜತಂ' ಎಂದು ರಜತದಲ್ಲಿ ಅನಿರ್ವಚನೀಯವೇ ಆರೋಪಿತವಾಗಿ ಹೇಗೆ ಪ್ರತೀತವಾಗುತ್ತದೋ, ಹಾಗೆಯೇ ಶುಕ್ತಿಯಲ್ಲಿರುವ ವ್ಯಾವಹಾರಿಕತಾಸಂಸರ್ಗಕ್ಕೂ ಅನಿರ್ವಾಚ್ಯವಾದ ಆರೋಪಿತವಾದುದಕ್ಕೇನೇ ರಜತದಲ್ಲಿ ಪ್ರತೀತಿಯು. ಆದಕಾರಣ ಅಸತ್ತಿಗೆ ಸತ್ತೆಂಬ ಪ್ರತೀತಿಯನ್ನು ಅಂಗೀಕರಿಸುವುದಿಲ್ಲ. ಆದಕಾರಣ ಅನಿರ್ವಚನೀಯವೆಂಬ ಮೂರನೇ ಪಕ್ಷವನ್ನು ನಿರಾಕರಿಸುತ್ತಾರೆ —

ಮೂ ॥ ನ ಚ ತದಪ್ಯನಿರ್ವಾಚ್ಯಂ । ಅನವಸ್ಥಿತೇಃ ॥ ೧೯೦ ॥

ಅ ॥ (ರಜತವು ಮಾತ್ರ ಅನಿರ್ವಚನೀಯವು ಆಗುವುದಿಲ್ಲವೆಂದಲ್ಲ) ತತ್ ಅಪಿ = ಅನಿರ್ವಚನೀಯ ರಜತದಲ್ಲಿ ತೋರುವ ಸತ್ವವೂ ಕೂಡ, ಅನಿರ್ವಾಚ್ಯಂ=ಅನಿರ್ವಚನೀಯವು, ನ ಚ=ಆಗುವುದಿಲ್ಲ. ಅನವಸ್ಥಿತೇಃ=ಅನವಸ್ಥಾರೂಪದೋಷವು ಬರುವುದರಿಂದ.

ತಾ ॥ (1) ರಜತವು ಮಾತ್ರವಲ್ಲವು. ಮತ್ತೆ ಪ್ರಾತಿಭಾಸಿಕವಾದ ರಜತಕ್ಕೆ ಯಾವುದು ವ್ಯಾವಹಾರಿಕಸತ್ವವು ಪ್ರತೀತವಾಗುತ್ತದೋ ಅದೂ ಅನಿರ್ವಾಚ್ಯವು, ಶುಕ್ತಿಯಲ್ಲಿಯೇ ಇರುವ ವ್ಯಾವಹಾರಿಕಸತ್ವವು ರಜತದಲ್ಲಿ ಸಮಾರೋಪಿತವಾಗಿದೆ ಎನ್ನುವುದೂ ಕೂಡ ಅಲ್ಲ. ಏಕೆಂದರೆ- ಅನವಸ್ಥೆಯು ಬರುವುದರಿಂದ (2) ಶುಕ್ತಿಯಲ್ಲಿಯೇ ಇರುವ ವ್ಯಾವಹಾರಿಕಸತ್ವವು ರಜತದಲ್ಲಿ

ಆರೋಪಿತವು ಅನಿರ್ವಚನೀಯವು, ಎಂದರೆ ಏನರ್ಥವು? ೧ ವ್ಯಾವಹಾರಿಕವೆಂದೋ, ಅಥವಾ ೨ ಪ್ರಾತಿಭಾಸಿಕವೆಂದೋ, ೧ನೇದ್ದು ಕೂಡಲಾರದು. ಹಾಗೆ ಒಡಂಬಡಲಿಲ್ಲವು. ಅಥವಾ ಒಡಂಬಟ್ಟರೆ ರಜತಕ್ಕೂ ವ್ಯಾವಹಾರಿಕತ್ವವು ಪ್ರಾಪ್ತವಾಗುವುದು. ೨ನೇ (ಪ್ರಾತಿಭಾಸಿಕವೆನ್ನುವ) ಕಲ್ಪದಲ್ಲಿಯೂ ಪ್ರಾತಿಭಾಸಿಕವು, (೧) ಪ್ರಾತಿಭಾಸಿಕವೆಂದೇ ತೋರುತ್ತದೋ (೨) ವ್ಯಾವಹಾರಿಕವೆಂದೇ ತೋರುವುದೋ, ೧ನೇದ್ದು ಕೂಡಲಾರದು. ಪ್ರವೃತ್ತಿಯೇ ಇಲ್ಲದೆ ಹೋಗಬೇಕಾಗುವುದು. ಪ್ರಾತಿಭಾಸಿಕವು ಅರ್ಥಕ್ರಿಯೆಗಳಲ್ಲಿ ಉಪಯುಕ್ತವಾಗಿ ಎಲ್ಲಿಯೂ ಉಪಲಬ್ಧವಾಗಲಿಲ್ಲ. ೨ನೇ ಕಲ್ಪದಲ್ಲಿ ಆ ವ್ಯಾವಹಾರಿಕತ್ವವೂ ಸತ್ತ್ವೋ ಅಸತ್ತ್ವೋ, ೧ನೇದ್ದೂ ಕೂಡಲಾರದು. ಪ್ರಾತಿಭಾಸಿಕತ್ವವು ಕೂಡುವುದಿಲ್ಲ. ೨ನೇ ಕಲ್ಪದಲ್ಲಿ ಅಸತ್ತು ಸತ್ತೆಂದು ತೋರಬೇಕಾಗುವುದು. ಇತ್ಯಾದಿಗಳ ಆವೃತ್ತಿಯಿಂದ ಆರೋಪಪರಂಪರೆಗೆ ಪರ್ಯವಸಾನವೇ ಇಲ್ಲವೆಂದಾಗುವುದು. ಎಲ್ಲಿ ಆರೋಪಕ್ಕೆ ಪರ್ಯವಸಾನವಾಗುವುದೋ, ಅಲ್ಲಿಯೇ ಪ್ರವೃತ್ತಿಯಿಲ್ಲದೆ ಹೋಗಬೇಕಾಗುವುದು. ಅಥವಾ ಅಸತ್ತಿಗೂ ಸತ್ ಎಂಬ ಪ್ರತೀತಿಯು ಪ್ರಸಕ್ತವಾಗುವುದು. ಈ ಪರ್ಯವಸಿತವಾಗದಿರುವ ಪರಂಪರೆಯು ಸಿದ್ಧ(ಪ್ರಾಮಾಣಿಕ)ವನ್ನು ವಿಷಯೀಕರಿಸುವುದಿಲ್ಲ. ಆದಕಾರಣ ದೂಷಣವೇ ಆಗುವುದು ॥ ೧೯೦ ॥

ಹಾಗಾದರೆ, ಮೂಲಕ್ಷತಿಯೇ ಇಲ್ಲದಿರುವುದರಿಂದ ಈ ಅನವಸ್ಥೆಯು ದೂಷಣವಲ್ಲವೆಂದರೆ ಮೂಲಕ್ಷತಿಯೆಂದರೆ ಏನು ಅರ್ಥವು? (೧) ಪರಂಪರಾಕಲ್ಪಕಾಭಾವವೋ (ಉತ್ತರೋತ್ತರ ಪರಂಪರೆಯನ್ನು ಕಲ್ಪಿಸುವುದು ಮೂಲವು, ಅದರ ಅಭಾವವು) (೨) ಅಥವಾ ಪ್ರಯೋಜನವಿಲ್ಲದಿರುವುದೋ, ಎಂದರೆ ೧ನೇದ್ದಾದ ಪರಂಪರಾಕಲ್ಪಕಾಭಾವರೂಪವಾದ ಮೂಲಕ್ಷತಿಯು ಪ್ರಕೃತವಾಗಿದೆ ಎಂದು ನಿರೂಪಿಸುತ್ತಾರೆ —

**ಮೂ ॥ ಪ್ರಥಮಾನಿರ್ವಚನೀಯಾಸಿದ್ಧ್ಯಾ ಸರ್ವಾನಿರ್ವಚನೀಯಾಸಿದ್ಧಿರಿತಿ ಮೂಲಕ್ಷತಿಃ ॥ ಅನಿರ್ವಚನೀಯತ್ವೇ ರಜತಸ್ಯಾನಿರ್ವಚನೀಯ-ಮಿದಂ ರಜತಮಿತಿ ಬಾಧಕಜ್ಞಾನಮುತ್ಪದ್ಯೇತ ॥ ೧೯೧ ॥**

ಅ ॥ ಪ್ರಥಮಾನಿರ್ವಚನೀಯಾಸಿದ್ಧ್ಯಾ = ಪ್ರಾಥಮಿಕವಾದ ಅನಿರ್ವಚನೀಯವೇ ಸಿದ್ಧಿಸದಿರುವುದರಿಂದ, ಸರ್ವಾನಿರ್ವಚನೀಯಾಸಿದ್ಧಿಃ= ಎಲ್ಲಾ ಅನಿರ್ವಚನೀಯಗಳೂ ಸಿದ್ಧಿಸಲಾರವು, ಇತಿ=ಆದಕಾರಣ, ಮೂಲಕ್ಷತಿಃ=ಮೂಲಕ್ಕೇನೇ ಹಾನಿಯು. ರಜತಸ್ಯ=ಬೆಳ್ಳಿಗೆ, ಅನಿರ್ವಚನೀಯತ್ವೇ=ಅನಿರ್ವಾಚ್ಯತ್ವವಿದ್ದರೆ, ಇದಂ ರಜತಂ ಅನಿರ್ವಚನೀಯಂ=ಈ ರಜತವು ಅನಿರ್ವಚನೀಯವು, ಇತಿ=ಹೀಗೆ, ಬಾಧಕಜ್ಞಾನಂ=ಬಾಧಕಜ್ಞಾನವು, ಉತ್ಪದ್ಯೇತ=ಹುಟ್ಟುವುದು.

ತಾ ॥ (1) ಒಂದನೇ ರಜತಕ್ಕೆ ಅನಿರ್ವಚನೀಯತ್ವವು ಸಿದ್ಧಿಸಿದರೆ ಅದನ್ನು ಕೂಡಿಸುವುದಕ್ಕಾಗಿ ಮೇಲು ಮೇಲಿನ ಅನಿರ್ವಚನೀಯ ಆರೋಪ ಪರಂಪರೆಗಳನ್ನು ಕಲ್ಪಿಸಬಹುದು. ಒಂದನೇ ರಜತಕ್ಕೇನೇ ಅನಿರ್ವಚನೀಯತ್ವವು ಸಿದ್ಧಿಸಲಿಲ್ಲ. (2) ಪ್ರಯೋಜನ ಪಕ್ಷವೆನ್ನುವುದರಲ್ಲಿಯೂ ಇದೇ ಉತ್ತರವು. ಮೊದಲು ಮೊದಲಿನ ಆರೋಪವೇ ಕೂಡದಿರಲು ಮೇಲು ಮೇಲಿನ ಆರೋಪವೇ ಕೂಡಲಾರದು. (3) ಆದಕಾರಣ ಹೀಗೆ ಅಸತ್ತಿಗೂ ಸತ್ ಎಂದು ಪ್ರತೀತಿಯು ಕೂಡುವುದರಿಂದ ಅದರ ಬಲದಿಂದ ಬಾಧಕ ಪ್ರತ್ಯಯವನ್ನು (ಅಸತ್ತೇ ಆದ ರಜತವನ್ನು ತಿಳಿದೆನು. ಎಂಬೀ ಬಾಧಕ ಪ್ರತ್ಯಯವನ್ನು) ಸತ್ವಾಭಾವ ವಿಷಯವನ್ನಾಗಿ ಕಲ್ಪಿಸಕೂಡದು. (4) ಈ ರಜತವು ಅನಿರ್ವಚನೀಯವು ಎಂದು ಸ್ಫುಟವಾಗಿ ಬಾಧಕಜ್ಞಾನವು ಹುಟ್ಟಿದರೆ ಆಗ

ಅಸತ್ತೇ ಆದ ರಜತವನ್ನು ತಿಳಿದೆನು, ಎಂಬೀ ಅನುಭವಕ್ಕೆ ಸದ್ವೈಲಕ್ಷಣ್ಯರೂಪವಾದ ವಿಷಯಾಂತರವನ್ನು ಕಲ್ಪಿಸುವುದು ಯುಕ್ತವಾಗುವುದು. ಹೀಗೆ ಇಲ್ಲವೇ ಇಲ್ಲ ॥ ೧೯೧ ॥

ಮಿಥ್ಯಾವಾದಿಗಳು ಆಶಂಕಿಸುವರು. ಭ್ರಾಂತನಾದವನು ಭ್ರಮೆಯು ಹೊರಟುಹೋದ ಮೇಲೆ ನಾನು ಈ ವರೆಗೂ ಮಿಥ್ಯೆಯೇ ಆದ ರಜತವನ್ನು ತಿಳಿದಿದ್ದೆನು ಎಂದನುವಾದಮಾಡುವನು. ಅದರಿಂದ ಮಿಥ್ಯಾಶಬ್ದವು ಅನಿರ್ವಚನೀಯ ವಾಚಕವೆಂದನುಮಿತವಾಗುತ್ತದೆ. ಆತನು ರಜತಕ್ಕೆ ಅನಿರ್ವಚನೀಯತ್ವವನ್ನು ಅನುಭವಿಸಿದೆನೆಂದು. ಆದಕಾರಣ ಅನಿರ್ವಚನೀಯತ್ವವನ್ನು ವಿಷಯೀಕರಿಸುವ ಬಾಧಕಜ್ಞಾನವು ಹುಟ್ಟುವುದಿಲ್ಲವೆಂದು ಹೇಗೆ ಹೇಳಲ್ಪಡುತ್ತದೆಂದರೆ —

**ಮೂ ॥ ಮಿಥ್ಯಾಶಬ್ದಸ್ತ್ವಭಾವವಾಚೀ ॥ ನ ಚ ಸದಸದ್ವೈಲಕ್ಷಣ್ಯಂ ನಾಮಾಸ್ತೀತ್ಯತ್ರ ಕಿಂಚಿನ್ಮಾನಂ ॥ ೧೯೨ ॥**

ಅ ॥ ಮಿಥ್ಯಾಶಬ್ದಸ್ತು=ಮಿಥ್ಯೆಯೆಂಬ ಶಬ್ದವಾದರೂ, ಅಭಾವವಾಚೀ=ಅತ್ಯಂತಾಭಾವಕ್ಕೆ ಪ್ರತಿಯೋಗಿಯಾದ ಅಸತ್ತನ್ನು ಹೇಳುತ್ತದೆ. (ಅನಿರ್ವಚನೀಯವನ್ನು ಏಕೆ ಹೇಳುವುದಿಲ್ಲವೆಂದರೆ) ಸದಸದ್ವೈಲಕ್ಷಣ್ಯಂ ನಾಮ = ಸತ್ತಿನಿಂದಲೂ ಅಸತ್ತಿನಿಂದಲೂ ಭಿನ್ನವಾದುದೆನ್ನುವುದು, ಅಂದರೆ ಅನಿರ್ವಚನೀಯವೆನ್ನುವುದು, ಅಸ್ತಿ ಇತ್ಯತ್ರ = ಉಂಟೆನ್ನುವ ವಿಷಯದಲ್ಲಿ, ಕಿಂಚಿತ್= ಯಾವುದೊಂದು, ಮಾನಂ=ಪ್ರಮಾಣವು, ನ ಚ=ಇಲ್ಲ.

ತಾ ॥ (1) ಇಲ್ಲಿ ಮಿಥ್ಯಾಶಬ್ದವು ಅನಿರ್ವಚನೀಯವನ್ನು ಹೇಳುವುದಿಲ್ಲವೆಂದು ಹೇಳಬೇಕಿತ್ತು. ಹಾಗೆ ಹೇಳಿದರೆ ನಿರರ್ಥಕವಾಗುತ್ತಿತ್ತು. ಆದಕಾರಣ 'ಅಭಾವವಾಚೀ' ಎಂದು ಹೇಳಿರುವರು. (2) ಸದಸದ್ವಿಲಕ್ಷಣವಾದ ವಸ್ತುವು ಪ್ರಮಾಣ ಸಿದ್ಧವಾದರೆ ಆ ಮೇಲೆ ಕಥಂಚಿತ್ ಅದನ್ನು ಹೇಳುತ್ತದೆನ್ನುವುದು ಸಂಭವಿಸಬಹುದು. ಅದೇ ಸಿದ್ಧವಾಗಲಿಲ್ಲ. ಪ್ರಮಾಣವನ್ನೇ ಈಗಲೂ ವಿಚಾರಿಸುತ್ತಿರುತ್ತೇವೆ. (3) ಭ್ರಾಂತಿ ಹೊರಟು ಹೋದವನ 'ಮಿಥ್ಯೈವ ರಜತಂ ಪ್ರತ್ಯಭಾತ್' ಎಂಬೀ ಅನುವಾದ ಬಲದಿಂದಲೇ, ಸರ್ವವನ್ನು (ಅಂದರೆ ಸದಸದ್ವಿಲಕ್ಷಣ ವಸ್ತುವಿನಲ್ಲಿ ಪ್ರಮಾಣವನ್ನೂ ಮಿಥ್ಯಾಶಬ್ದಕ್ಕೆ ಅನಿರ್ವಚನೀಯ ವಸ್ತುವಾಚಕತ್ವವನ್ನೂ) ಕಲ್ಪಿಸುತ್ತೇವೆಂದು ಹೇಳಕೂಡದು. ಮಿಥ್ಯಾಶಬ್ದವು ಅಸದ್ವಾಚಕವಾದುದರಿಂದ ಅನ್ಯಥಾ ಸಿದ್ಧವಾಗಿದೆ ॥ ೧೯೨ ॥

ಹೀಗೆ ಅನುಮಾನಕ್ಕೆ ಬಾಧವನ್ನು ಹೇಳಿ ದೂಷಣಾಂತರವನ್ನೂ ಹೇಳುತ್ತಾರೆ.

**ಮೂ ॥ ಅನುಭವವಿರೋಧಶ್ಚ ತತ್ಪಕ್ಷೇ ॥ ಸದಸತೋರ್ದ್ವಯೋರೇವ ಸರ್ವೈರನುಭೂಯಮಾನತ್ವಾತ್ ॥ ೧೯೩ ॥**

ಅ ॥ ತತ್ಪಕ್ಷೇ=ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವವನ್ನು ಸಾಧಿಸಿದರೆ, ಅನುಭವವಿರೋಧಶ್ಚ=ಅನುಭವವಿರೋಧವೂ ಆದೆ, (ಅಂದರೆ- ಅನುಭೂತವಾದ ಅರ್ಥಕ್ಕಿಂತ ವಿಪರೀತವಾದ ಅರ್ಥವನ್ನು ಪ್ರತಿಪಾದಿಸುವಿಕೆಯು; ಅಪ್ರಸಿದ್ಧವಾದ ವಿಶೇಷಣತ್ವವೂ ಕೂಡ ಬರುತ್ತದೆ.) ಹೇಗೆಂದರೆ, ಸದಸತೋಃ ದ್ವಯೋರೇವ= ಸತ್ತು ಅಸತ್ತು ಎರಡಕ್ಕೇನೆ, ಸರ್ವೈರೇವ = ಎಲ್ಲರಿಂದಲೂ, ಅನುಭೂಯಮಾನತ್ವಾತ್=ಅನುಭವಿಸಲ್ಪಡುವಿಕೆ ಇದ್ದುದರಿಂದ.

**ತಾ ॥ (1) ಸತ್ವಾಸತ್ವೇ, ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿನೀ, ಧರ್ಮತ್ವಾತ್ ರೂಪರಸವತ್=ಸತ್ವಾಸತ್ವಗಳು, ಒಂದು ಧರ್ಮಿಯಲ್ಲಿರತಕ್ಕ ಸತ್ವಾಸತ್ವಗಳ ಅತ್ಯಂತಾ**

ಭಾವಕ್ಕೆ ಪ್ರತಿಯೋಗಿಗಳು, ಧರ್ಮವಾದ ಪ್ರಯುಕ್ತ, ರೂಪರಸಗಳಂತೆ, (ರೂಪರಸಗಳು ವಾಯುವಿನಲ್ಲಿರತಕ್ಕ ರೂಪರಸಾತ್ಯಂತಾಭಾವಕ್ಕೆ ಪ್ರತಿಯೋಗಿಗಳು.) ಎಂದು ಸಾಮಾನ್ಯವಾಗಿ ಅನುಮಾನದಿಂದ ಅನಿರ್ವಚನೀಯತ್ವವು (ಸತ್ವಾಸತ್ವ ರಹಿತವಾದುದು) ಸಿದ್ಧವಾಗುವಾಗ ಆ ಅನಿರ್ವಚನೀಯತ್ವವು 'ಶುಕ್ತಿರಜತಾದಿಕಂ ಅನಿರ್ವಚನೀಯಂ ಬಾಧ್ಯತ್ವಾತ್ ಆತ್ಮವತ್ = ಶುಕ್ತಿರಜತ ಮೊದಲಾದುದು ಅನಿರ್ವಚನೀಯವು ಬಾಧಿಸಲ್ಪಡುವುವರಿಂದ, ಆತ್ಮನಂತೆ' ಎಂಬೀ ಕೇವಲವಾಗಿ ವ್ಯತಿರೇಕ ವ್ಯಾಪ್ತಿಯುಳ್ಳ ಅನುಮಾನದಿಂದ ಶುಕ್ತಿರಜತಾದಿಗಳಲ್ಲಿ ಮಾತ್ರವಿರುವುದೆಂದು ಸಾಧಿಸುತ್ತೇವೆ. ಆದಪ್ರಯುಕ್ತ ಅಪ್ರಸಿದ್ಧ ವಿಶೇಷಣತ್ವ (ಸಾಧ್ಯಾಪ್ರಸಿದ್ಧಿ) ವಿಲ್ಲವೆಂದು ಹೇಳಕೂಡದು. ಈ ಅನುಮಾನಕ್ಕೆ ಅವಿರುದ್ಧತ್ವವೆನ್ನುವ ಉಪಾಧಿಯು ದೋಷವು. ರೂಪ ರಸಗಳಲ್ಲಿ ಸಾಧ್ಯವಡೆ. ವಿರೋಧವಿಲ್ಲವು. ಅವಿರುದ್ಧತ್ವವೂ ಇದೆ, ಆದಕಾರಣ ಸಾಧ್ಯವ್ಯಾಪಕತ್ವವು ಧರ್ಮತ್ವವಿರುವ ಸತ್ವಾಸತ್ವಗಳಲ್ಲಿ ವಿರೋಧವದೆ, ಅವಿರುದ್ಧತ್ವವಿಲ್ಲ, ಅಂತೂ ಸಾಧನಾವ್ಯಾಪಕತ್ವವು. (2) 'ಸದಸತೋರ್ದ್ವಯೋರೇವ' ಎನ್ನುವ ಮೂಲದಿಂದ 'ವಿಮತಂ ಸದಸದ್ವಿಲಕ್ಷಣಂ ಬಾಧ್ಯತ್ವಾತ್' ಎಂಬೀ ಅನುಮಾನದ ಪ್ರತಿಜ್ಞೆಯಲ್ಲಿ 'ಸದ್ವಿಲಕ್ಷಣಂ' ಎಂದು ಹೇಳಿದರೆ 'ಅಸತ್' ಎಂದು ಪ್ರಾಪ್ತವಾಗುವುದು. ಪುನಃ 'ಅಸತ್ ನ' ಎಂದು ಹೇಳಿದರೆ ವ್ಯಾಹತಿಯೂ ಸೂಚಿತವಾಯಿತು ॥ ೧೯೩ ॥

ಈ ಪ್ರಕಾರ ಪ್ರತ್ಯಕ್ಷಾದಿಗಳಿಗೆ ವಿಷಯೀಭೂತವಾದ ಭೇದಪ್ರಪಂಚಕ್ಕೆ ಅನಿರ್ವಚನೀಯತ್ವವನ್ನು ಪ್ರತಿಷೇಧಿಸಿ ಉಪಸಂಹಾರಮಾಡುತ್ತಾ ಅಸತ್ವವನ್ನು ಕೂಡ ನಿಷೇಧಿಸುತ್ತಾ ಪರಿಶೇಷ ಸಿದ್ಧವಾದ ಪಾರಮಾರ್ಥಿಕ ಸತ್ವವನ್ನು ತೋರಿಸುತ್ತಾ ಪ್ರಕೃತವನ್ನನುಸರಿಸುತ್ತಾರೆ.

**ಮೂ ॥ ಅತೋಽನಿರ್ವಚನೀಯಾಭಾವಾದಸತಃ ಪ್ರತೀತ್ಯನಂಗೀಕಾರಾತ್ಪ್ರತೀಯಮಾನತ್ವಾಚ್ಚ ಭೇದಸ್ಯ ಸತ್ತ್ವಪ್ರಾಪ್ತೇರ್ನಾದ್ವಿತೀಯತ್ವಂ ಯುಜ್ಯತೇ ॥ ೧೯೪ ॥**

ಅ ॥ ಅತಃ=ಆದಕಾರಣ, ಭೇದಸ್ಯ=ಭೇದಕ್ಕೆ, ಅನಿರ್ವಚನೀಯಾಭಾವಾತ್ = ಅನಿರ್ವಚನೀಯತ್ವವಿಲ್ಲದಿರುವುದರಿಂದ, ಅಸತಃ=ಅಸತ್ತಿಗೆ, ಪ್ರತೀತ್ಯನಂಗೀಕಾರಾತ್=ಪರನು ಪ್ರತೀತಿಯನ್ನೇ ಅಂಗೀಕರಿಸದೆ ಇದ್ದುದರಿಂದ, ಭೇದಸ್ಯ=ಭೇದಕ್ಕೆ, (ಅಸತ್ವವೂ ಕೂಡದಿರುವುದರಿಂದ) ಸತ್ವಪ್ರಾಪ್ತೇಃ=ಪರಿಶೇಷ ಪ್ರಮಾಣದಿಂದ ಪಾರಮಾರ್ಥಿಕಸತ್ವವೇ ಸಿದ್ಧವಾದ ಪ್ರಯುಕ್ತ, ಅದ್ವಿತೀಯತ್ವಂ=(ಹೀಗೆಯೇ ಪ್ರತ್ಯಕ್ಷಾದಿಗಳೂ ಪಾರಮಾರ್ಥಿಕವಾದ ಅರ್ಥವನ್ನೇ ವಿಷಯೀಕರಿಸುವುದರಿಂದ ಅನುಮಾನಗಳನ್ನು ಬಾಧಿಸುತ್ತವೆ ಎನ್ನುವುದು ಉಪಪನ್ನವಾದ ಪ್ರಯುಕ್ತ ದೃಶ್ಯತ್ವಾದ್ಯನುಮಾನಗಳಿಂದ) ಭೇದಾಭಾವವನ್ನು ಸಾಧಿಸುವುದು, ನ ಯುಜ್ಯತೇ= ಯುಕ್ತವಾಗುವುದಿಲ್ಲ ॥ ೧೯೪ ॥

ಹೀಗೆ ಯಾವಾಗ ಪ್ರತ್ಯಕ್ಷಾನುಮಾನಗಳಿಂದಲೇ ಸಿದ್ಧವಾದ ಭೇದವನ್ನು ಬಾಧಿಸಲಿಕ್ಕೆ ಅನುಮಾನಗಳಿಗೆ ಶಕ್ತಿಯಿಲ್ಲವೋ ಆಗ ಅಪೌರುಷೇಯವಾದುದರಿಂದ ದೋಷಸಂಶಯವೇ ಇಲ್ಲದಿರುವ ಶ್ರುತಿಯಿಂದಲೂ ಸಿದ್ಧವಾದ ಜೀವಪರಮಾತ್ಮರ ಭೇದವನ್ನು ಅನುಮಾನಗಳಿಂದ ಬಾಧಿಸಲು ಶಕ್ಯವಲ್ಲವೆಂದು ಹೇಳಬೇಕಾಗಿಯೇ ಇಲ್ಲವೆಂದು ಅಭಿಪ್ರಾಯವುಳ್ಳವರಾಗಿ ನಿರೂಪಿಸುತ್ತಾರೆ.

**ಮೂ ॥ ಕಥಂ ಚ ಶ್ರುತಿಸಿದ್ಧೋ ಜೀವಪರಮಾತ್ಮಭೇದೋ ನಿರಾಕ್ರಿಯತೇ ॥ ೧೯೫ ॥**

ಅ || ಶ್ರುತಿಸಿದ್ಧಃ='ದ್ವಾ ಸುಪರ್ಣಾ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾದ, ಜೀವ ಪರಮಾತ್ಮಭೇದಃ = ಜೀವ ಪರಬ್ರಹ್ಮರ ಭೇದವು, ಕಥಂ ಚ=ಹೇಗೆ ತಾನೇ, ನಿರಾಕ್ರಿಯತೇ= ನಿರಾಕರಿಸಲ್ಪಡುತ್ತದೆ.

ತಾ || ಭೇದಶ್ರುತಿಗಳು ಅಯಥಾರ್ಥಗಳನ್ನು ತಿಳಿಸಿಕೊಡುವುದರಿಂದ ಅಂತಹ ಶ್ರುತಿಗಳನ್ನು ಬಾಧಿಸುವುದು ಯುಕ್ತವೇ ಎಂದು ಹೇಳಕೂಡದು. ಪರಿಶೇಷ ಪ್ರಮಾಣದಿಂದ ನಿರಾಕೃತವಾಗಿದೆ. ಅಂದರೆ ಅನಿರ್ವಚನೀಯ ವಿಷಯಕತ್ವ ಅಸದ್ವಿಷಯಕತ್ವ, ಸದ್ವಿಷಯಕತ್ವಗಳ ಮಧ್ಯದಲ್ಲಿ ೧ನೇ ೨ನೇ ಪಕ್ಷಗಳನ್ನು ನಿರಾಕರಿಸಿ ಕೊನೆಯ ಪಕ್ಷವನ್ನು ಸಾಧಿಸಿದ್ದರಿಂದ ಶ್ರುತಿಗಳಿಗೆ ಅತತ್ವಾವೇದಕತ್ವವು ನಿರಾಕರಿಸಲ್ಪಟ್ಟಿದೆ || ೧೯೫ ||

ಮೂ || ಮಿಥ್ಯಾವಾದಿತ್ವೇ ಚ ಶ್ರುತೇಃ ಕಥಮೈಕ್ಯಸ್ಯ ಸತ್ಯತ್ವಂ || ೧೯೬ ||

ಅ || ಶ್ರುತೇಃ=ಭೇದಶ್ರುತಿಗೆ, ಮಿಥ್ಯಾವಾದಿತ್ವೇ ಚ=ಮಿಥ್ಯಾರ್ಥಪ್ರತಿಪಾದಕತ್ವವಿದ್ದರೆ, ಐಕ್ಯಸ್ಯ=ಐಕ್ಯಶ್ರುತಿಗೆ, ಸತ್ಯತ್ವಂ=ಪ್ರಾಮಾಣ್ಯವು, ಕಥಂ=ಹೇಗೆ (ಆಗುವುದು.)

ತಾ || ಜೀವೇಶ್ವರೈಕ್ಯವೂ ಕೂಡ ಶ್ರುತಿಸಿದ್ಧವು ಎಂದೇ ಪರರು ಅಂಗೀಕರಿಸಿರುವರು. ಅದರಲ್ಲಿ ಭೇದಶ್ರುತಿಯು ಮಿಥ್ಯಾರ್ಥಪ್ರತಿಪಾದಕವಾದರೆ ಐಕ್ಯಶ್ರುತಿಯಲ್ಲಿಯೂ ಶ್ರುತಿತ್ವವು ಸಮಾನವಾದುದರಿಂದ ಅದಕ್ಕೂ ಮಿಥ್ಯಾವಾದಿತ್ವವು ಬರಬೇಕಾಗುವುದು. ಆ ಶ್ರುತಿಯಲ್ಲಿಯೇ ಪ್ರತಿಪಾದಿಸಲ್ಪಟ್ಟ ಐಕ್ಯಕ್ಕೆ ಸತ್ಯತ್ವವನ್ನು ಹೇಗೆ ಅಂಗೀಕರಿಸುವುದು? ಭೇದಶ್ರುತಿಯಲ್ಲಿ ಅನುವಾದಕತ್ವ ಮೊದಲಾದ ಬಾಧಕಗಳನ್ನು ಸೂಚಿಸಿದಂತೆಯೇ ಅದ್ವೈತಶ್ರುತಿಯಲ್ಲಿಯೂ ಪ್ರತ್ಯಕ್ಷ ವಿರುದ್ಧತ್ವಾದಿ ಬಾಧಕಗಳು ಇವೆ || ೧೯೬ ||

ದೋಷಾಂತರವನ್ನು ಹೇಳುತ್ತಾರೆ.

ಮೂ || ಕಥಂ ಚೈವಂವಾದಿನಾಂ ವೇದವಾದಿತ್ವಂ || ೧೯೭ ||

ಅ || ಏವಂ ವಾದಿನಾಂ=ವೇದೋಕ್ತವಾದ ಪ್ರಮೇಯಕ್ಕೂ, ಮಿಥ್ಯಾತ್ವವನ್ನಂಗೀಕರಿಸುವವರಿಗೆ, ವೇದವಾದಿತ್ವಂ=ವೇದಪ್ರಾಮಾಣ್ಯಾಂಗೀಕಾರವು, ಕಥಂ ಚ=ಹೇಗೆ ಉಪಪನ್ನವಾಗುವುದು || ೧೯೭ ||

ವೇದೋಕ್ತವಾದ ಪ್ರಮೇಯಕ್ಕೆ ಮಿಥ್ಯಾತ್ವವನ್ನಂಗೀಕರಿಸಿದರೂ ಮಾಯಾವಾದಿಗಳಿಗೆ, ವೇದವಾದಿತ್ವವು ಏಕೆ ಕೂಡುವುದಿಲ್ಲವೆಂದರೆ ವ್ಯಾಪ್ತಿಯನ್ನು ತೋರಿಸುವರು.

ಮೂ || ವೇದೋಕ್ತಸ್ಯ ಮಿಥ್ಯಾತ್ವಾಂಗೀಕಾರಾದೇವ ಹ್ಯವೇದವಾದಿತ್ವಂ ಬೌದ್ಧಾದೀನಾಮಪಿ || ೧೯೮ ||

ಅ || ವೇದೋಕ್ತಸ್ಯ=ಶ್ರುತಿಗಳಲ್ಲಿ ಹೇಳಿದ ಪ್ರಮೇಯಕ್ಕೆ, ಮಿಥ್ಯಾತ್ವಾಂಗೀಕಾರಾದೇವ=ಮಿಥ್ಯಾತ್ವವನ್ನು ಒಡಂಬಟ್ಟ ಪ್ರಯುಕ್ತವೇ, ಬೌದ್ಧಾದೀನಾಮಪಿ=ಬೌದ್ಧ ಮೊದಲಾದವರಿಗೂ, ಅವೇದವಾದಿತ್ವಂ=ವೇದಗಳಿಗೆ ಪ್ರಾಮಾಣ್ಯವನ್ನು ಒಡಂಬಡದಿರುವಿಕೆಯು, ಹಿ= ನಿಶ್ಚಯವು.

ತಾ || (1) ವಿಮತಃ=ವಿವಾದವಿಷಯನಾದ ಮಾಯಾವಾದಿಯು, ವೈದಿಕತ್ವೇನ ನ ವ್ಯವಹರ್ತವ್ಯಃ=ವೇದಪ್ರಾಮಾಣ್ಯವಾದಿಯೆಂದು ವ್ಯವಹರಿಸಕೂಡದು, ಅಥವಾ ಅವೈದಿಕತ್ವೇನ

ವ್ಯವಹರ್ತವ್ಯಃ = ವೈದಿಕನಲ್ಲವೆಂದು ವ್ಯವಹರಿಸಿಕೊಳ್ಳಲಿಕ್ಕೆ ಯೋಗ್ಯನು, ವೇದೋಕ್ತಸ್ಯ ಮಿಥ್ಯಾತ್ವಾಂಗೀಕಾರಿತ್ವಾತ್=ವೇದದಲ್ಲಿ ಹೇಳಿದ ಪ್ರಮೇಯಕ್ಕೆ ಮಿಥ್ಯಾತ್ವವನ್ನು ಒಡಂಬಟ್ಟ ಪ್ರಯುಕ್ತ, ಬೌದ್ಧಾದಿವತ್=ಬೌದ್ಧಮೊದಲಾದವರಂತೆ. (2) ನಾವು (ಮಾಯಾವಾದಿಗಳು) ವೇದೈಕದೇಶವನ್ನು ತತ್ವಾವೇದಕವೆಂದಂಗೀಕರಿಸುತ್ತೇವೆ, ಎಂದು ಹೇಳಕೂಡದು. ಬೌದ್ಧಾದಿಗಳೂ ವೇದೈಕದೇಶದಲ್ಲಿ ಹೇಳಿದ ಅಹಿಂಸಾದಿರೂಪ ಪ್ರಮೇಯಕ್ಕೆ ಸತ್ಯತ್ವವನ್ನೂ ಅಂಗೀಕರಿಸುವುದರಿಂದ ನೀವು (ಮಾಯಾವಾದಿಗಳು) ಹೇಳತಕ್ಕ ಅವೇದವಾದಿತ್ವವು ಬೌದ್ಧರಿಗೂ ಕೂಡದೆ ಹೋಗಬೇಕಾಗುವುದು. (3) ನಾವು (ಮಾಯಾವಾದಿಗಳು) ಬೌದ್ಧರು ವೇದಕ್ಕೆ ಸರ್ವಥಾ ಅಪ್ರಾಮಾಣ್ಯವನ್ನು ಹೇಳುವಂತೆ ಸರ್ವಥಾ ಅಪ್ರಾಮಾಣ್ಯವನ್ನು ಹೇಳುವುದಿಲ್ಲ. ಮತ್ತೆ ಮಂದಾಧಿಕಾರಿಗಳನ್ನು ಕುರಿತು ವೇದವು ಭೇದಸಾಪೇಕ್ಷಿತವಾದ ಕರ್ಮಾದಿಗಳನ್ನೂ ಪ್ರತಿಪಾದಿಸುತ್ತದೆ ಎಂದು ಹೇಳುತ್ತೇವೆ, ಎಂದರೆ ಸತ್ಯವೇ. ಆದರೂ ಹೇಳಲ್ಪಡತಕ್ಕ ಕರ್ಮಾದಿಗಳಿಗೆ ಮಿಥ್ಯಾತ್ವವನ್ನು ಅಂಗೀಕರಿಸಿದುದರಿಂದ ಹೀಗೆ ಹೇಳಿ ಏನು ಪ್ರಯೋಜನವು. ಅಂತೂ ಬೌದ್ಧರಿಗೂ ಮಾಯಾವಾದಿಗಳಿಗೂ ವೈಲಕ್ಷಣ್ಯವಿಲ್ಲ ॥ ೧೯೮ ॥

ಈ ಪ್ರಕಾರ ಭೇದಕ್ಕೂ, ಭೇದವುಳ್ಳ ಪ್ರಪಂಚಕ್ಕೂ ಮಿಥ್ಯಾತ್ವರೂಪಬಾಧಕವನ್ನು 'ಯಚ್ಚ ಪ್ರಮಾಣದೃಷ್ಟಾನಾಮಪಿ' ಇತ್ಯಾದಿಗಳಿಂದ ಪರಿಹರಿಸಿ ಸಿದ್ಧವಾದ ಅರ್ಥವನ್ನುಪಸಂಹಾರ ಮಾಡುತ್ತಾರೆ.

**ಮೂ ॥ ಅತೋ ವಿಷ್ಣೋಃ ಸರ್ವೋತ್ತಮತ್ವ ಏವ ಮಹಾತಾತ್ಪರ್ಯಂ ಸರ್ವಾಗಮಾನಾಂ ॥ ೧೯೯ ॥**

ಅ ॥ ಅತಃ=ಆದಕಾರಣ, ಸರ್ವಾಗಮಾನಾಂ=ಎಲ್ಲಾ ಆಗಮಗಳಿಗೂ, ವಿಷ್ಣೋಃ= ಶ್ರೀಹರಿಯ, ಸರ್ವೋತ್ತಮತ್ವ ಏವ=ಸರ್ವೋತ್ಕೃಷ್ಟತ್ವ ವಿಷಯದಲ್ಲಿಯೇ, ಮಹಾತಾತ್ಪರ್ಯಂ= ಮುಖ್ಯತಾತ್ಪರ್ಯವು, ಸಿದ್ಧಂ=ನಿಷ್ಪನ್ನವಾಯಿತು. (ಈ ಪರಿಚ್ಛೇದ ಮುಗಿಯುವ ವರೇಗೂ ಈ ಮೇಲಿನ ಗ್ರಂಥದಲ್ಲಿ ಹಿಂದೆಹೇಳಿದ ಅರ್ಥವನ್ನೇ ವಿಸ್ತರಿಸುವರು.) ॥ ೧೯೯ ॥

ಜೀವಬ್ರಹ್ಮೈಕ್ಯದಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ ಪ್ರಮಾಣವಿರೋಧವಿದ್ದುದರಿಂದಲೂ ಅದರಲ್ಲಿ ವೇದಗಳಿಗೆ ತಾತ್ಪರ್ಯವು ಇಲ್ಲವೆಂದು ಯಾವುದು ಹೇಳಿಯದೋ ಅದರಲ್ಲಿ ಪರರಿಗೆ ಅಭಿಪ್ರೇತವಾದ ಪ್ರಮಾಣಗಳನ್ನು ಕಂಠತಃ ಉಪನ್ಯಾಸಮಾಡಿ ದೂಷಿಸಲಿಲ್ಲವು. ವಿರೋಧಿಭೂತಗಳಾದ ಭೇದಸಾಧಕಪ್ರಮಾಣಗಳನ್ನುಪನ್ಯಾಸಮಾಡಿ ಪರರು ಹೇಳತಕ್ಕ ಅರ್ಥವನ್ನು ನಿರಾಕರಿಸಿ ಸಮರ್ಥಿಸಲಿಲ್ಲ. ಆದಕಾರಣ ಆ ಎರಡನ್ನೂ ಮಾಡಲಿಚ್ಛಿಸುತ್ತಾ ಉಪಕ್ರಮ ಮಾಡುತ್ತಾರೆ —

**ಮೂ ॥ ಕಥಂ ಚ ಜೀವಪರಮಾತ್ಮೈಕ್ಯೇ ಸರ್ವಶ್ರುತೀನಾಂ ತಾತ್ಪರ್ಯಂ ಯುಜ್ಯತೇ ॥ ಸರ್ವಪ್ರಮಾಣವಿರುದ್ಧತ್ವಾತ್ ॥ ತಥಾ ಹ್ಯನುಭವವಿರೋಧಃ ॥ ನ ಹ್ಯಹಂ ಸರ್ವಜ್ಞಃ ಸರ್ವೇಶ್ವರೋ ನಿರ್ದುಃಖೋ ನಿರ್ದೋಷ ಇತಿ ವಾ ಕಸ್ಯಚಿದನುಭವಃ ॥ ೨೦೦ ॥**

ಅ ॥ ಸರ್ವಪ್ರಮಾಣವಿರುದ್ಧತ್ವಾತ್=ಪ್ರತ್ಯಕ್ಷಾನುಮಾನಾಗಮಗಳಿಂದ ವಿರುದ್ಧಗಳಾದ ಪ್ರಯುಕ್ತವೂ, ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧಗಳಾಗದೆ ಇದ್ದಪ್ರಯುಕ್ತವೂ, ಸರ್ವ

ಶ್ರುತೀನಾಂ=ಎಲ್ಲಾ ಶ್ರುತಿಗಳಿಗೆ, ಜೀವಪರಮಾತ್ಮೈಕ್ಯೇ=ಜೀವಬ್ರಹ್ಮೈಕ್ಯದಲ್ಲಿ, ತಾತ್ಪರ್ಯಂ=ತಾತ್ಪರ್ಯವು, ಕಥಂ ಚ ಹೇಗೆ, ಯುಜ್ಯತೇ=ಯುಕ್ತವಾಗುತ್ತದೆ. (ಪ್ರತ್ಯಕ್ಷವಿರೋಧಾದಿಗಳನ್ನುಪಪಾದಿಸುತ್ತಾರೆ.) ತಥಾ ಹಿ=ಅದು ಯುಕ್ತವು. ಅನುಭವವಿರೋಧಃ=(ಜೀವೇಶ್ವರೈಕ್ಯಕ್ಕೆ) ಸಾಕ್ಷಿಪ್ರತ್ಯಕ್ಷದಿಂದ ವಿರೋಧವದೆ. ಅದು ಪ್ರತ್ಯಕ್ಷಾಸಿದ್ಧವೂ ಆಗಿದೆ. (ಪ್ರತ್ಯಕ್ಷದಿಂದ ಸಿದ್ಧವಾಗಲಿಲ್ಲ ಎನ್ನುವುದನ್ನು ತೋರಿಸುವರು.) ಅಹಂ=ನಾನು, ಸರ್ವಜ್ಞಃ = ಸರ್ವವನ್ನೂ ತಿಳಿದವನು, ಸರ್ವೇಶ್ವರಃ=ಸರ್ವರಿಗೂ ನಿಯಾಮಕನು, ನಿರ್ದುಃಖಃ=ದುಃಖಲೇಶರಹಿತನು, ನಿರ್ದೋಷಃ=ದೋಷಗಂಧವಿರಹಿತನು, ಇತಿ ವಾ = ಎಂದಾಗಲೀ, ಕಸ್ಯಚಿತ್=ಯಾರಿಗೂ, ಅನುಭವಃ=ಸಾಕ್ಷ್ಯನುಭವವು, ನ ಹಿ=ಇಲ್ಲವಷ್ಟೆ!

ತಾ ॥ (1) ಈಶ್ವರನಾದರೂ 'ಏಷ ಸರ್ವಜ್ಞಃ ಏಷ ಸರ್ವೇಶ್ವರಃ' ಇದು ಮೊದಲಾದ ಶ್ರುತಿಗಳಿಂದ ಸಾರ್ವಜ್ಞಾದಿ ಗುಣಗಳಿಂದ ಯುಕ್ತನೆಂದೇ ಪ್ರಮಿತನಾಗಿರುವನು. ಜೀವನಿಗೆ ಬ್ರಹ್ಮೈಕ್ಯದ ಅನುಭವವಿದ್ದರೆ 'ಅಹಂ ಸರ್ವಜ್ಞಃ' ಇದು ಮೊದಲಾದ ಪ್ರತೀತಿಯು ಬರುವುದು. ಹೀಗೆ ಇಲ್ಲ. ಜೀವನಲ್ಲಿ ಸಾಕ್ಷಿಯೇ ಸಂಭಾವಿತವಾದ ಪ್ರಯುಕ್ತ 'ಕಸ್ಯಚಿತ್ಪ್ರತ್ಯಯಃ' ಎಂದು ಹೇಳದೆ ಸಾಕ್ಷಿ ಪರ್ಯಾಯವಾದ 'ಅನುಭವಃ' ಎಂದು ಹೇಳಿರುವರು. (2) ನಾವು ಸಾರ್ವಜ್ಞಾದಿ ಗುಣಗಳುಳ್ಳವನೂ ಸಗುಣನೂ ಆದ ಈಶ್ವರನಿಂದ ಜೀವನಿಗೆ ಐಕ್ಯವನ್ನು ಹೇಳುವುದಿಲ್ಲ. ಮಿಥ್ಯಾಭೂತಗಳಾದ ಸರ್ವವಸ್ತುಗಳು ಸೇರಿಕೊಂಡಿರುವ ಸಾರ್ವಜ್ಞಾದಿಗಳೂ ಮಾಯಿಕಗಳಾದುದರಿಂದ ಮಿಥ್ಯೆಯೇ ಆಗಿವೆ. ಆದಕಾರಣ ಮಿಥ್ಯಾಭೂತಗಳಾದ ಸಾರ್ವಜ್ಞಾದಿಗಳ ಅನುಭವವಿಲ್ಲದಿರುವುದು ದೋಷಾಧಾಯಕವಲ್ಲ. ಮತ್ತೆ 'ನಿರಂಜನಃ ನಿರವದ್ಯಃ' ಇದು ಮೊದಲಾದ ಶ್ರುತಿಗಳಲ್ಲಿ ಪ್ರತಿಪಾದಿಸಲ್ಪಟ್ಟ ನಿರ್ಗುಣ ಬ್ರಹ್ಮನಿಂದ ಐಕ್ಯವನ್ನು ಹೇಳುವೆವು ಎಂದರೆ ಸತ್ಯವೇ, ಆದರೆ ನಿರ್ದುಃಖ ನಿರ್ದೋಷಸ್ವರೂಪನಾದ ನಿರ್ಗುಣಬ್ರಹ್ಮನಿಂದಲೂ ಐಕ್ಯಾನುಭವವು ಇಲ್ಲವು, ಎಂಬ ಅಭಿಪ್ರಾಯದಿಂದ 'ನಿರ್ದುಃಖಃ ನಿರ್ದೋಷಃ' ಎಂದು ಹೇಳಿರುವರು. (3) ರತ್ನದ ಯಾಥಾರ್ಥ್ಯವು ರತ್ನಪರೀಕ್ಷಾರೂಪವಾದ ಶಾಸ್ತ್ರದಿಂದ ಅನುಗೃಹೀತವಾದ ಪ್ರತ್ಯಕ್ಷದಿಂದ ಹೇಗೆ ತಿಳಿಯಲ್ಪಡಬೇಕೋ ಹಾಗೆಯೇ ಬ್ರಹ್ಮಾತ್ಮೈಕ್ಯವೂ ಶಾಸ್ತ್ರಾನುಗೃಹೀತವಾದ ಪ್ರತ್ಯಕ್ಷದಿಂದ ತಿಳಿಯಲ್ಪಡಬೇಕು. ಆದಕಾರಣ ಕೇವಲ ಪ್ರತ್ಯಕ್ಷದಿಂದ ಹೇಗೆ ತಿಳಿಯಲ್ಪಡಬೇಕು ಎಂದರೆ, ಶಾಸ್ತ್ರವನ್ನುತಿಳಿದಂತಹ ಗೌಡಪಾದಾದಿಗಳಿಗೂ ನಿರ್ಗುಣಬ್ರಹ್ಮನಿಂದ ಐಕ್ಯಸಾಕ್ಷಾತ್ಕಾರರೂಪವಾದ ಅನುಭವವಿಲ್ಲ. (4) ಪರರ ಬುದ್ಧಿಯು ಅಪ್ರತ್ಯಕ್ಷವಾದ ಪ್ರಯುಕ್ತ ಗೌಡಪಾದಾದಿಗಳಿಗೂ ಐಕ್ಯಸಾಕ್ಷಾತ್ಕಾರವಾಗಲಿಲ್ಲವೆಂದು ಹೇಗೆ ತಿಳಿಯುತ್ತದೆಂದರೆ– ಐಕ್ಯಸಾಕ್ಷಾತ್ಕಾರವಾಗಿದ್ದರೆ ಭಿಕ್ಷಾಟನಾದಿಕಾರ್ಯಸಹಿತವಾದ ಅವಿದ್ಯೆಯು ನಷ್ಟವಾಗುತ್ತಿತ್ತು. ಅಂತೂ ಭಿನ್ನವಾದ ಪ್ರಪಂಚವನ್ನು ನೋಡದಿರುವವನಿಗೆ ಶರೀರದ ರಕ್ಷಣಾದಿಗಳಿಗಾಗಿ ಭಿಕ್ಷಾಟನಾದಿಗಳಲ್ಲಿ ಪ್ರವೃತ್ತಿಯೇ ಇಲ್ಲದೆ ಹೋಗುವುದು. ಶರೀರಾದಿಗಳನ್ನು ರಕ್ಷಿಸುವುದಕ್ಕಾಗಿ ಭಿಕ್ಷಾಟನಾದಿ ರೂಪ ಪ್ರವೃತ್ತಿಯಿದ್ದುದರಿಂದ ಅವಿದ್ಯೆಯಿದೆ ಎಂದಂಗೀಕರಿಸಬೇಕು. ಅದರಿಂದ ಗೌಡಪಾದಾದಿಗಳಿಗೂ ಐಕ್ಯಸಾಕ್ಷಾತ್ಕಾರವಿಲ್ಲವೆಂದು ತಿಳಿಯುತ್ತದೆ ॥ ೨೦೦ ॥

ಹೀಗೆ ಜೀವ ಬ್ರಹ್ಮೈಕ್ಯವು ಪ್ರತ್ಯಕ್ಷ ಸಿದ್ಧವಲ್ಲವೆಂದು ಹೇಳಿ ಪ್ರತ್ಯಕ್ಷವಿರೋಧವನ್ನು ತೋರಿಸುತ್ತಾರೆ —

**ಮೂ ॥ ಅಸ್ತಿ ಚ ತದ್ವಿಪರ್ಯಯೇಣಾನುಭವಃ ॥ ೨೦೧ ॥**

ಅ ॥ ತದ್ವಿಪರ್ಯಯೇಣ=ಸರ್ವಜ್ಞತ್ವ ಸರ್ವೇಶ್ವರತ್ವ, ಈ ಎರಡು ಕೂಡಿ ಒಂದು ವಿಧವು, ನಿರ್ದುಃಖತ್ವ, ನಿರ್ದೋಷತ್ವ ಈ ಎರಡೂ ಕೂಡಿ ಒಂದು ವಿಧವು. ಆ ಈ ಎರಡು ರೂಪಗಳ ವ್ಯತ್ಯಾಸದಿಂದ, (ಅಂದರೆ ಸರ್ವಜ್ಞನಲ್ಲ, ಅಲ್ಪಜ್ಞನು. ಸರ್ವೇಶ್ವರನಲ್ಲ, ದುಃಖವುಳ್ಳವನು. ಎಂದೇ) ಅನುಭವಃ=ಸಾಕ್ಷಿ ಪ್ರತ್ಯಕ್ಷವು, ಅಸ್ತಿ ಚ=ಇದೆ.

ತಾ ॥ ಯಾರು ಶ್ರುತಿಯಲ್ಲಿ ಹೇಳಿದ ಸರ್ವಜ್ಞತ್ವಾದಿ ಲಕ್ಷಣಗಳುಳ್ಳ ಈಶ್ವರನನ್ನು ತಿಳಿದು ತನ್ನನ್ನು ಆ ಲಕ್ಷಣ ವಿರಹಿತನನ್ನಾಗಿ ಅನುಭವಿಸುತ್ತಾನೋ, ಆತನು ಅವಶ್ಯವಾಗಿ ತನಗೆ ಈಶ್ವರನಿಂದ ಭೇದವನ್ನು ಅನುಭವಿಸುತ್ತಾನೆಯೇ ಸರಿ. ಸ್ತಂಭವನ್ನನುಸಂಧಾನ ಮಾಡಿದವನಿಗೆ ಅದರಿಂದ ವಿಪರೀತವಾದ ಕುಂಭವನ್ನು ನೋಡಿದರೆ ಸ್ತಂಭದಿಂದ ಕುಂಭಕ್ಕೆ ಭೇದವದೆ, ಎನ್ನುವುದು ಅನುಭವ ಸಿದ್ಧವು. ಆದಕಾರಣ ಜೀವೇಶ್ವರರ ಭೇದವು ಪ್ರತ್ಯಕ್ಷಸಿದ್ಧವಾದಪ್ರಯುಕ್ತ ಜೀವೇಶ್ವರೈಕ್ಯಕ್ಕೆ ಪ್ರತ್ಯಕ್ಷವಿರೋಧವು ಸಿದ್ಧವಾಯಿತು ॥ ೨೦೧ ॥

ಮಾಯಾವಾದಿಗಳು ಆಶಂಕಿಸುವರು. 'ನಾನು ದುಃಖಗಳುಳ್ಳವನು, ರಾಗದ್ವೇಷ ಮೊದಲಾದ ದೋಷಗಳುಳ್ಳವನು, ಎಂದು ನಿರ್ದುಃಖತ್ವ, ನಿರ್ದೋಷತ್ವ ರೂಪಗಳಾದ ಬ್ರಹ್ಮರೂಪಗಳಿಂದ ವ್ಯತ್ಯಾಸವಾಗಿ ತನ್ನಲ್ಲಿ ಯಾವುದೊಂದನುಭವವದೆಯೋ, ಅದು ಭ್ರಮವೇ. ಆದಕಾರಣ ತನ್ನಿಮಿತ್ತವಾದ ಭೇದಾನುಭವವೂ ಭ್ರಮವೇ. ಆದುದರಿಂದ ಭೇದಾನುಭವ ವಿರೋಧವು ಐಕ್ಯಕ್ಕೆ ಹಾನಿಯನ್ನು ಹೊಂದಿಸಲಾರದು ಎಂದಾಶಂಕಿಸಿದರೆ —

**ಮೂ ॥ ನ ಚ ಮಿಥ್ಯಾನುಭವೋಽಯಂ ॥ ತದ್ವಿಪರೀತಪ್ರಮಾಣಾಭಾವಾತ್॥ ॥ ೨೦೨ ॥**

ಅ ॥ ಅಯಂ ಅನುಭವಃ=ನಾನು ದುಃಖವುಳ್ಳವನು; ರಾಗಾದಿ ದೋಷಗಳುಳ್ಳವನು ಎಂಬೀಅನುಭವವು, ಮಿಥ್ಯಾ=ಮಿಥ್ಯಾರ್ಥವಿಷಯಕವಾದುದರಿಂದ ಮಿಥ್ಯೆಯಾದುದು, ನ ಚ= ಅಲ್ಲ ತದ್ವಿಪರೀತ ಪ್ರಮಾಣಾಭಾವಾತ್=ಅದಕ್ಕೆ ಬಾಧಕವಾದ ಪ್ರಮಾಣವಿಲ್ಲದಿರುವುದರಿಂದ.

ತಾ ॥ (1) ಬಾಧಕಜ್ಞಾನವಿದ್ದರೆ ಜ್ಞಾನಗಳಿಗೆ ಭ್ರಮತ್ವವನ್ನು ಕಲ್ಪಿಸಬಹುದಿತ್ತು. 'ನಾನು ದುಃಖಿಯು' ಇತ್ಯಾದಿ ಜ್ಞಾನಗಳಲ್ಲಿ ಬಾಧಕಜ್ಞಾನವಿಲ್ಲ. (2) ಶಿಷ್ಯನು ಶಂಕಿಸುವನು. ದುಃಖ ಮೊದಲಾದುದು ಅಂತಃಕರಣ ಧರ್ಮವೇ. ಜಪಾಕುಸುಮಾ(ಕೆಂಪುದಾಸನ ಹೂವು)ದಿಗಳಲ್ಲಿರತಕ್ಕ ಲಾಹಿತ್ಯವು ಸ್ಫಟಿಕದಲ್ಲಿ ಹೇಗೆ ತೋರುತ್ತದೋ ಹಾಗೆಯೇ ದುಃಖಾದಿಗಳೂ ಸನ್ನಿಧಾನದಿಂದ ಜೀವನಲ್ಲಿ ಭ್ರಾಂತಿಯಿಂದ ತೋರುತ್ತವೆ. ಎಂದು ನಾವೂ (ದ್ವೈತಿಗಳೂ) ಅಂಗೀಕರಿಸುತ್ತೇವೆ. ಆದಕಾರಣ 'ನಾನು ದುಃಖಿಯು' ಇದು ಮೊದಲಾದ ಅನುಭವವು ಮಿಥ್ಯೆಯಲ್ಲವೆಂದು ಹೇಳಿದ್ದು ಯುಕ್ತವಲ್ಲವೆಂದರೆ ಹೀಗೆ ಸಮಾಧಾನವು. ದುಃಖ ಮೊದಲಾದುದು ಅಂತಃಕರಣದ ಪರಿಣಾಮವೇ, 'ಏತತ್ಸರ್ವಂ ಮನ ಏವ' ಈ ದುಃಖಾದಿಗಳೆಲ್ಲವೂ ಅಂತಃಕರಣ ಪರಿಣಾಮವೇ ಎಂದು ಶ್ರುತಿಯಿದ್ದುದರಿಂದ ಆ ದುಃಖಾದಿಗಳು ಆತ್ಮನಲ್ಲಿವೆ ಎಂದು ತೋರುವುದು ಭ್ರಮವು. ದುಃಖಾದಿ ಸ್ವರೂಪವೂ, ದುಃಖಾದಿಗಳಿಗೆ ಸ್ವಾಮಿಯು ಆತ್ಮನೆನ್ನುವುದೂ, ನಾನು ದುಃಖಿಯು ಎಂದು ದುಃಖಸ್ವಾಮಿತ್ವಾನುಭವವೂ, ಆತ್ಮನಿಗೆ ತನ್ನಿಮಿತ್ತವಾದ ನೀಚೋಚ್ಚತ್ವರೂಪವಾದ ವಿಕಾರವೂ ಸತ್ಯವೇ. ಬಾಧಕವಿಲ್ಲವಷ್ಟೆ. ದುಃಖ ಮೊದಲಾದ ಬಂಧವು ಸ್ವಾಭಾವಿಕವಲ್ಲದಿರುವುದರಿಂದಲೂ, ಅನಿತ್ಯವಾದ ಪ್ರಯುಕ್ತವೂ 'ವಿಮುಕ್ತಶ್ಚ ವಿಮುಚ್ಯತೇ' ಇತ್ಯಾದಿ ವಚನಗಳೂ ಉಪಪನ್ನಗಳಾಗುತ್ತವೆ. ಅಂತೂ ಈ ವಾಕ್ಯಗಳೂ ದುಃಖಾದಿಗಳಿಗೆ ಮಿಥ್ಯಾತ್ವವಿಷಯದಲ್ಲಿ ಪ್ರಮಾಣಗಳಾಗಲಾರವು ॥ ೨೦೩ ॥

ಈ ಪ್ರಕಾರ ಜೀವಬ್ರಹ್ಮೈಕ್ಯವು ಎಲ್ಲಾ ಪ್ರಮಾಣಗಳಿಂದಲೂ ಶ್ರೇಷ್ಠವಾದ ಸಾಕ್ಷಿಪ್ರತ್ಯಕ್ಷದಿಂದ ಅಸಿದ್ಧವೂ ವಿರುದ್ಧವೂ ಆಗಿರುತ್ತದೆ ಎಂದು ಪ್ರಥಮತಃ ಹೇಳಿ, ಈಗ ಅನುಮಾನಕ್ಕಿಂತಲೂ ಆಗಮವು ಪ್ರಬಲವಾದುದರಿಂದ ಆಗಮದಿಂದ ಅಸಿದ್ಧವೂ ವಿರುದ್ಧವೂ (ಬಾಧಿತವೂ)ಆಗಿರುತ್ತದೆ ಎಂದು ಪ್ರತಿಪಾದಿಸುತ್ತಾರೆ.

ಮೂ || ನ ಚಾಭೇದೇ ಕಶ್ಚಿದಾಗಮಃ । ಸಂತಿ ಚ ಭೇದೇ ಸರ್ವಾಗಮಾಃ ||
ತಥಾ ಹ್ಯತತ್ತ್ವಮಸೀತಿ ನವಕೃತ್ವೋಪದೇಶಃ ಸದೃಷ್ಟಾಂತಕಃ ||
|| ೨೦೩ ||

ಅ || ಅಭೇದೇ=ಜೀವೇಶ್ವರರಿಂಗೆ ಅಭೇದವಿಷಯದಲ್ಲಿ, ಕಶ್ಚಿತ್ ಆಗಮಃ=ಯಾವುದೊಂದು ಆಗಮವು, ನ ಚ=ಇಲ್ಲ. (ಅಂತೂ ಜೀವಬ್ರಹ್ಮೈಕ್ಯವು ಯಾವ ಆಗಮದಿಂದಲೂ ಸಿದ್ಧವಾಗಲಿಲ್ಲ. ಇದನ್ನುಪಪಾದಿಸುವೆವು.) ಭೇದೇ = (ಜೀವೇಶ್ವರರಿಗೆ) ಭೇದವಿಷಯದಲ್ಲಿ, ಸರ್ವಾಗಮಾಃ=ಎಲ್ಲಾ ಆಗಮಗಳು, ಸಂತಿ ಚ=ಇವೆ, (ಅಂತೂ ಐಕ್ಯವು ಆಗಮವಿರುದ್ಧವೂ, ಆಗಿರುತ್ತದೆ.) ತಥಾ ಹಿ=ಒಂದಾಗಮವಾಕ್ಯದಿಂದ ಅದನ್ನುಪಪಾದಿಸುವರು. (ಜೀವೇಶ್ವರರ ಭೇದವಿಷಯದಲ್ಲಿ), ಸಃ=ಅವನೇ, ಆತ್ಮಾ=ಪರಮಾತ್ಮನು, ತ್ವಂ=ನೀನು, ಅತತ್ ಅಸಿ=ಆ ಬ್ರಹ್ಮನಿಂದ ಬೇರೆ ವಸ್ತುವಾಗಿರುತ್ತಿ, ಇತಿ = ಹೀಗೆ, ಸದೃಷ್ಟಾಂತಕಃ = ದೃಷ್ಟಾಂತಸಹಿತವಾಗಿ. ನವಕೃತ್ವೋಪದೇಶಃ=ಒಂಭತ್ತಾವರ್ತಿ ಉಪದೇಶವದೆ.

ತಾ || (1) ಛಾಂದೋಗ್ಯೋಪನಿಷತ್ತಿನಲ್ಲಿ ಆರನೇ ಅಧ್ಯಾಯದಲ್ಲಿ 'ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ' ಎಂದು ಉದ್ದಾಲಕರು ಮಗನಾದ, ತನಗೆ ಸಮಾನಿಕರು ಯಾರೂ ಇಲ್ಲವೆಂದು ತಿಳಿದು ಮಹಾ ದುರಹಂಕಾರಿಯಾದ, ಶ್ವೇತಕೇತುವಿಗೆ ಉಪದೇಶಿಸಿದ್ದಾಗಿರುತ್ತದೆ. ಚತುರ್ಮುಖನು 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ' ಎಂದು ವಿರೋಚನನನ್ನು ವಂಚಿಸುವುದಕ್ಕಾಗಿ ಹೇಳಿದಂತೆ ಇದು ಅಲ್ಲವೆಂದು ಸೂಚಿಸುವುದಕ್ಕಾಗಿ 'ಉಪದೇಶಃ' ಎಂದು ಹೇಳಿರುವರು. ತಂದೆಯು ಮಗನಿಗೆ ಉಪದೇಶ ಮಾಡಿದ 'ಅತತ್ತ್ವಮಸಿ' ಎನ್ನುವ ವಾಕ್ಯಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ಶಂಕಿಸಕೂಡದೆಂದು ಒಂಭತ್ತಾವರ್ತಿ ಉಪದೇಶಿಸಿರುವರು. ಮತ್ತು ಶಕುನಿಸೂತ್ರಾದಿದೃಷ್ಟಾಂತಗಳಿಂದುಪಪಾದಿಸಿರುವರು. (2) ಅಭ್ಯಾಸ (ಅಸಕೃತ್ಆವೃತ್ತಿ) ಉಪಪತ್ತಿಗಳು ತಾತ್ಪರ್ಯವನ್ನು ನಿಶ್ಚಯಿಸುವವುಗಳು ಎಂದು 'ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ।ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥' ಎಂಬೀ ಪ್ರಮಾಣಪ್ರಸಿದ್ಧವು ಆದುದರಿಂದಲೇ ಒಂಭತ್ತಾವರ್ತಿ ದೃಷ್ಟಾಂತಸಹಿತವಾಗಿ ಉಪದೇಶಿಸಿರುವರು. (3) ಯದ್ಯಪಿ ಜೀವೇಶ್ವರರ ಭೇದವಿಷಯದಲ್ಲಿ ಸಂಶಯಗ್ರಸ್ತಗಳಾಗದೇನೇ ಇರುವ 'ದ್ವಾ ಸುಪರ್ಣಾ' ಇತ್ಯಾದಿವಾಕ್ಯಗಳಿವೆ. ಆದಾಗ್ಯೂ ಐಕ್ಯವು ಶ್ರುತಿಸಿದ್ಧವೂ ಆಗಲಿಲ್ಲ. ಶ್ರುತಿಬಾಧಿತವೂ ಆಗಿರುತ್ತದೆ. ಈ ಎರಡನ್ನು ಉಪಪಾದಿಸುವುದಕ್ಕಾಗಿ ಈ ವಾಕ್ಯವನ್ನುದಾಹರಿಸಿರುವರು ॥ ೨೦೩ ॥

ಮಾಯಾವಾದಿಗಳು ಶಂಕಿಸುವರು. 'ತತ್ತ್ವಮಸಿ' ಎಂದು ಪದಚ್ಛೇದ ಮಾಡಿ ಇದು ಜೀವೇಶ್ವರರಿಂಗೆ ಐಕ್ಯೋಪದೇಶವೆಂದೇ ಪ್ರಸಿದ್ಧವಾಗಿರುವುದರಿಂದ ಅಕಾರವನ್ನು ಪ್ರಶ್ಲೇಷಮಾಡಿಕೊಂಡು 'ಅತತ್' ಎಂದು ಪದಚ್ಛೇದಮಾಡಿ ಭೇದವನ್ನುಪದೇಶಿಸಿದ್ದು ಎನ್ನುವುದು ಕೂಡಲಾರದು. ಎಂದಾಶಂಕಿಸಿದರೆ —

ಮೂ ॥ (1) ನ ಚಾಯಮಭೇದೋಪದೇಶಃ ॥ (2) ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧೋ ದಿಶಂ ದಿಶಂ ಪತಿತ್ವಾಽನ್ಯತ್ರಾಯತನಮಲಬ್ಧ್ವಾ ಬಂಧನಮೇವೋಪಾಶ್ರಯತೇ ॥ (3) ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ ॥ ೨೦೪ ॥ ೧ ॥

ಅ ॥ ಅಯಂ=ಇದು, ('ತತ್ತ್ವಮಸಿ' ಎನ್ನುವುದು) ಅಭೇದೋಪದೇಶಃ=ಐಕ್ಯೋಪದೇಶವು, ನ ಚ=ಅಲ್ಲ, ಸಃ ಯಥಾ=ಅದು ಹೇಗೆಂದರೆ, ಶಕುನಿಃ=ಪಕ್ಷಿಯು, ಸೂತ್ರೇಣ=ಹಗ್ಗದಿಂದ, ಪ್ರಬದ್ಧಃ=ಕಟ್ಟಲ್ಪಟ್ಟದ್ದಾಗಿ, ದಿಶಂ ದಿಶಂ=ಪ್ರತಿದಿಕ್ಕನ್ನು ಕುರಿತು, ಪತಿತ್ವಾ=ಹಾರಿ, ಅನ್ಯತ್ರ=ಬೇರೆ ಕಡೆ, ಆಯತನಂ=ಆಶ್ರಯವನ್ನು, ಅಲಬ್ಧ್ವಾ=ಹೊಂದದೆ, ಬಂಧನಮೇವ=ಬಂಧನವನ್ನೇ, ಉಪಾಶ್ರಯತೇ = ಆಶ್ರಯಿಸುತ್ತದೋ, (3) ಸೋಮ್ಯ=ಎಲೋ ಶ್ವೇತಕೇತುವೇ, ಇಮಾಃ ಸರ್ವಾಃ ಪ್ರಜಾಃ=ಈ ಎಲ್ಲಾ ಪ್ರಜೆಗಳೂ, ಸನ್ಮೂಲಾಃ=ನಿರ್ದುಷ್ಟನಾದ ಪರಬ್ರಹ್ಮನೇ ಕರ್ತನಾಗಿ ಉಳ್ಳವರು, ಸದಾಯತನಾಃ = ಪರಬ್ರಹ್ಮನೇ ಆಶ್ರಯವಾಗಿ ಉಳ್ಳವರು, ಸತ್ಪ್ರತಿಷ್ಠಾಃ=ಮುಕ್ತಿಯಲ್ಲಿಯೂ ಪರಬ್ರಹ್ಮನೇ ಸ್ಥಿತಿಯಾಗಿ ಉಳ್ಳವರು.

ತಾ ॥ (1) 'ಸ ಯಥಾ' ಇದು ಮೊದಲಾದ ಒಂಭತ್ತು ಪ್ರಕರಣಗಳಲ್ಲಿಯೂ ಭೇದವಿಷಯದಲ್ಲಿಯೇ ದೃಷ್ಟಾಂತವನ್ನು ಹೇಳಿಯದೆ. (2) ಯದ್ಯಪಿ ಎರಡು ಪ್ರಕಾರವೂ ಪದಚ್ಛೇದವು ಕೂಡುವುದರಿಂದ 'ಸ ಆತ್ಮಾ ತತ್ತ್ವಮಸಿ' ಎನ್ನುವ ವಾಕ್ಯವು ಸಂಧಿಗ್ಧವಾಗಿದೆ. ಆದಾಗ್ಯೂ ಅಸಂದಿಗ್ಧವಾದ ಭೇದ ವಿಷಯಕವಾದ ದೃಷ್ಟಾಂತವನ್ನು ಹೇಳಿರುವುದರಿಂದ ಭೇದೋಪದೇಶವೆಂದೇ ನಿಶ್ಚಿತವಾಗುತ್ತದೆ. ಅಭೇದೋಪದೇಶವಲ್ಲ. ಐಕ್ಯವನ್ನು ಪ್ರತಿಜ್ಞಾಮಾಡಿ ಭೇದದಲ್ಲಿ ದೃಷ್ಟಾಂತವನ್ನು ಹೇಳುವುದು ಯುಕ್ತವಾಗಲಾರದಷ್ಟೆ! (3) ಯಾವಾಗ ಭೇದ ವಿಷಯಕವಾಗಿ ಅಸಂಧಿಗ್ಧವಾದ ಒಂದು ದೃಷ್ಟಾಂತವನ್ನು ಹೇಳುವುದು ಸಂದಿಗ್ಧವಾದ ಪ್ರತಿಜ್ಞಾವಾಕ್ಯಾರ್ಥವನ್ನು ನಿಶ್ಚಯಿಸಲಿಕ್ಕೆ. ಸಾಕಾಗುವುದೋ, ಆಗ ಒಂಭತ್ತು ಪ್ರಕರಣಗಳಲ್ಲಿಯೂ ಒಂಭತ್ತು ಅಸಂದಿಗ್ಧವಾದ ಅರ್ಥವುಳ್ಳ ಭೇದ ವಿಷಯಕಗಳಾದ ದೃಷ್ಟಾಂತಗಳನ್ನು ಹೇಳಿದ್ದು ಸಂಧಿಗ್ಧವಾದ ಪ್ರತಿಜ್ಞಾ ವಾಕ್ಯಾರ್ಥವನ್ನು ನಿಶ್ಚಯಿಸುತ್ತದೆ ಎಂದು ಹೇಳಬೇಕಾಗಿಯೇ ಇಲ್ಲವು. ಸುತರಾಂ ಸಿದ್ಧವು. (4) ಒಂಭತ್ತು ಪ್ರಕರಣಗಳಲ್ಲಿಯೂ ಬೇರೆ ಬೇರೆ ಭೇದವಿಷಯಕಗಳಾದ ವಾಕ್ಯಗಳಿವೆ. ಅವುಗಳಲ್ಲಿ ಆದಿಯಲ್ಲಿ ಜೀವೇಶ್ವರರಿಗೆ ಅತ್ಯಂತಭೇದವನ್ನು ಬೋಧಿಸುವುದಕ್ಕಾಗಿ ಅಸಹಾಯಕನಾದ ಶ್ರೀ ಹರಿಗೆ ಪೃಥಿವೀ ಜಲ ತೇಜಸ್ಸು ಮೊದಲಾದ ಎಲ್ಲಾ ಜಗತ್ತುಗಳಿಗೂ ನಿಮಿತ್ತಕಾರಣತ್ವಾದಿ ರೂಪವಾದ, ಜೀವರಲ್ಲಿಲ್ಲದೇನೇ ಇರುವ ಮಾಹಾತ್ಮ್ಯಗಳು ಹೇಳಲ್ಪಟ್ಟವೆ. ಅಂತಹ ಮಹಿಮೆಯು ಆಗಮಗಳಿಂದಲೇ ವೇದ್ಯವಲ್ಲದೆ ಅನುಭವ ಸಿದ್ಧವಲ್ಲ. ಆದಕಾರಣ ಜಾಗರಾವಸ್ಥೆಯಲ್ಲಿ ಜೀವರಿಗೆ ತಾವು ಸ್ವತಂತ್ರರೆಂಬ ಅಭಿಮಾನವಿದ್ದ ಪ್ರಯುಕ್ತ ಸ್ವಾಪ್ನದಲ್ಲಿ ಅಭಿಮಾನವಿಲ್ಲದಿರುವುದರಿಂದ ಆಗ 'ಜೀವರು ಭಗವಂತನನ್ನು ಆಶ್ರಯಿಸುತ್ತಿದ್ದಾರೆ' ಎನ್ನುವುದನ್ನು ಜೀವರಿಗೆ ಅನುಭವಾರೂಢವನ್ನು ಮಾಡುವುದಕ್ಕಾಗಿ 'ಸ್ವಪ್ನಾಂತಂ ಮೇ ಸೋಮ್ಯ ವಿಜಾನೀಹಿ' ಎಂದು ೮ ನೇ ಖಂಡದಲ್ಲಿ ಉಪಕ್ರಮಿಸಲ್ಪಟ್ಟದೆ. ಅದರಲ್ಲಿ ಜಾಗ್ರದವಸ್ಥೆ, ಸುಷುಪ್ತ್ಯವಸ್ಥೆಗಳಲ್ಲಿ ಶರೀರ ಇಂದ್ರಿಯ ಮನಸ್ಸುಗಳಿಗೆ ಅಸ್ವತಂತ್ರಲಾಗಿ ಸಂಚಾರದಿಂದ ಶ್ರಾಂತರಾದ (ಬಳಲಿದ) ಜೀವರಿಗೆ ಶ್ರಮವನ್ನು ಪರಿಹರಿಸುವುದಕ್ಕಾಗಿ ಸ್ವಾಪ್ನದಲ್ಲಿ ಪರಮೇಶ್ವರನೇ ಆಶ್ರಯನೆಂದು ಹೇಳಿ ಆ ವಿಷಯದಲ್ಲಿ ದೃಷ್ಟಾಂತವು ಹೇಳಲ್ಪಡುತ್ತದೆ. 'ಸ ಯಥಾ ಶಕುನಿಃ' ಇದು ಮೊದಲಾದುದು. (5) ಹಾಗೆಯೇ ಪ್ರಸಿದ್ಧಗಳಾದ 'ಅಶನಾಪಿಪಾಸೇ,

ಸೋಮ್ಯ ವಿಜಾನೀಹಿ ' ಎಂದು ಉಕ್ತಗಳಾದ ಅಶನೇಚ್ಛೆ ಪಾನೇಚ್ಛೆಗಳ ಸ್ವರೂಪವನ್ನು ಪರ್ಯಾಲೋಚಿಸಿ (ಅಂದರೆ ಜೀವರಿಗೆ ಈಶ್ವರಮೂಲಕವಾದ ಅಶನೇಚ್ಛೆ, ಪಾನೇಚ್ಛೆಗಳು ಈಶ್ವರನಿಗೆ ಜೀವ ಸಂಬಂಧಿಯಾದ ಅಶನಾ ಪಿಪಾಸಾ ಮೂಲತ್ವವೂ ಪ್ರತೀತವಾದುದು. ಜೀವರಿಗೆ ಭಗವಂತನ ಅಧೀನತೆಯನ್ನು ಹೊರತು ಕೂಡಲಾರದು. ಈ ಪ್ರಕಾರ) ಜೀವರಿಗೆ ಭಗವಂತನ ಅಧೀನತೆಯನ್ನು ಪ್ರತಿಪಾದಿಸಿ 'ಸನ್ಮೂಲಾಃ' ಇತ್ಯಾದಿಗಳಿಂದ ಉಪಸಂಹಾರ ಮಾಡಲ್ಪಡುತ್ತದೆ ॥ ೨೦೪ ॥ ೧ ॥

ಈ ಪ್ರಕಾರ ಒಂದನೇ ಪ್ರಕರಣದಿಂದ ಜೀವರಿಗೆ ಭಗವದಾಶ್ರಯತ್ವವು ಹೇಳಲ್ಪಡಲು, ಮಗನಾದ ಶ್ವೇತಕೇತುವು 'ಈ ಶರೀರದಲ್ಲಿ ನನ್ನಿಂದ ಬೇರೆ ಒಬ್ಬನು ಇಲ್ಲ. ನನ್ನಿಂದ ಬೇರೆಯಾಗಿ ಕಾಣಲ್ಪಡದೆ ಇದ್ದ ಪ್ರಯುಕ್ತ' ಈ ಪ್ರಕಾರ ಅಭಿಪ್ರಾಯವುಳ್ಳವನಾಗಿ ತಂದೆಯವರಾದ ಉದ್ದಾಲಕರನ್ನು ಕುರಿತು 'ಭೂಯ ಏವ ಮಾ ಭಗವಾನ್ ವಿಜ್ಞಾಪಯತು ' ಮತ್ತು ತಾವು ನನಗೆ ತತ್ವವನ್ನು ತಿಳಿಸಿಕೊಡಬೇಕೆಂದು ಪ್ರಶ್ನಿಸಲು 'ಯಥಾ ಸೋಮ್ಯ ಮಧು' ಇತ್ಯಾದಿಗಳಿಂದ ಉತ್ತರ ಕೊಡುತ್ತಾರೆ.

ಮೂ ॥ ಯಥಾ ಸೋಮ್ಯ ಮಧು ಮಧುಕೃತೋ ನಿಸ್ತಿಷ್ಠಂತಿ ನಾನಾತ್ಯಯಾನಾಂ ವೃಕ್ಷಾಣಾಂ ರಸಾನಾಂ ಸಮವಹಾರಮೇಕತಾಂ ಗಮಯಂತಿ । ತೇ ಯಥಾ ತತ್ರ ನ ವಿವೇಕಂ ಲಭಂತೇಽಮುಷ್ಯಾಹಂ ವೃಕ್ಷಸ್ಯ ರಸೋಽಸ್ಮ್ಯಮುಷ್ಯಾಹಂ ವೃಕ್ಷಸ್ಯ ರಸೋಽಸ್ಮೀತ್ಯೇವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ ಸಂಪತ್ಸ್ಯಾಮಹ ಇತಿ । ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ಭವಂತಿ ತತ್ತದಾ ಭವಂತಿ ॥
॥ ೨೦೫ ॥ ೨ ॥

ಅ ॥ ಸೋಮ್ಯ = ಎಲೋ ಶ್ವೇತಕೇತುವೇ, ಯಥಾ = ಹೇಗೆ, ಮಧುಕೃತಃ = ಭ್ರಮರಗಳು, ಮಧು = ಜೇನುವನ್ನು, ನಿಸ್ತಿಷ್ಠಂತಿ = ನಿರ್ಮಿಸುತ್ತವೋ, ನಾನಾತ್ಯಯಾನಾಂ = ನಾನಾವಿಧ ಗತಿಯುಳ್ಳ,ಅಂದರೆ ಪರಸ್ಪರ ವಿಲಕ್ಷಣಗಳಾದ, ವೃಕ್ಷಾಣಾಂ ರಸಾನಾಂ = ವೃಕ್ಷಸಂಬಂಧಿಗಳಾದ ಪುಷ್ಪರಸಗಳ, ಸಮವಹಾರಂ = ಸಮೂಹವನ್ನು, ಏಕತಾಂ = ಮಿಶ್ರತ್ವವನ್ನು, ಗಮಯಂತಿ = ಹೊಂದಿಸಿಕೊಡುತ್ತವೋ, ತೇ = ಅವುಗಳು, (ನಾನಾವೃಕ್ಷರಸಗಳು,) ಯಥಾ = ಹೇಗೆ, ತತ್ರ = ವೃಕ್ಷರಸಗಳು ಮಿಶ್ರಗಳಾಗುವಾಗ ಅವುಗಳಲ್ಲಿದ್ದಾಗ್ಯೂ, ವಿವೇಕಂ = ಪರಸ್ಪರ ಭೇದವನ್ನು, ನ ಲಭಂತೇ = ತಿಳಿಯುವುದಿಲ್ಲವೋ, ಅಹಂ = ನಾನು, ಅಮುಷ್ಯ ವೃಕ್ಷಸ್ಯ = ಈ ಆಮ್ರವೃಕ್ಷದ, ರಸಃ = ರಸವು, ಅಸ್ಮಿ = ಆಗಿರುತ್ತೇನೆ. (ಇದು ಮತ್ತೊಂದು ವೃಕ್ಷದ ರಸವು) ಹಾಗೆಯೇ ಇನ್ನೊಂದೂ ಕೂಡ, ಅಮುಷ್ಯ ವೃಕ್ಷಸ್ಯ ಅಹಂ ರಸಃ ಅಸ್ಮಿ = ನಾನು ಈ ವೃಕ್ಷದ ರಸವು ಆಗಿರುತ್ತೇನೆ. ಇತಿ = ಹೀಗೆ, (ಪರಸ್ಪರ ಭೇದವನ್ನು ತಿಳಿಯುವುದಿಲ್ಲವೋ,) ಏವಮೇವ ಖಲು = ಹೀಗೆಯೇ, ಸೋಮ್ಯ = ಶ್ವೇತಕೇತುವೇ, ಇಮಾಃ ಸರ್ವಾಃ ಪ್ರಜಾಃ = ಈ ಎಲ್ಲಾ ಜೀವರು, (ಪರಮೇಶ್ವರ ಶಕ್ತಿಗಳಿಂದಲೇ ತಂತಮ್ಮ ಶರೀರದಲ್ಲಿರುವ) ಸತಿ = ಪರಮೇಶ್ವರನಲ್ಲಿ, ಸಂಪದ್ಯ = ಬ್ರಹ್ಮನಿಂದ ಮಿಶ್ರೀಭಾವವನ್ನು ಹೊಂದಿ, ಸತಿ = ಪರಮೇಶ್ವರನಲ್ಲಿ, ಸಂಪತ್ಸ್ಯಾಮಹೇ = ಮೇಲೆ ಸಂಗತರಾಗುವೆವು. (ಪೂರ್ವದಲ್ಲಿ ಸಂಗತರಾಗಿದ್ದೆವು.) ಸಂಪದ್ಯಾಮಹೇ = ಈಗ ಸಂಗತರಾಗುತ್ತೇವೆ.

ಇತಿ=ಹೀಗೆ, ನ ವಿದುಃ=ತಿಳಿಯುವುದಿಲ್ಲ. ಇಹ = ಲೋಕದಲ್ಲಿ, ತೇ=ಆ ಪ್ರಸಿದ್ಧಗಳಾದ, ವ್ಯಾಘ್ರೋ ವಾ=ಹುಲಿಯಾಗಲೀ, ಸಿಂಹೋ ವಾ=ಸಿಂಹವಾಗಲೀ, ವೃಕೋ ವಾ=ಚೆನ್ನಾಯಿಯಾಗಲೀ, ವರಾಹೋ ವಾ=ಹಂದಿಯಾಗಲೀ, ಕೀಟೋ ವಾ=ಕೀಟವಾಗಲೀ, ಪತಂಗೋ ವಾ=ದೀಪಕ್ಕೆ ಹಾರುವ ನೊಣವಾಗಲೀ, ದಂಶೋ ವಾ=ದೊಡ್ಡ ನೊಣವಾಗಲೀ, ಮಶಕೋ ವಾ=ನೊಣವಾಗಲೀ, ಯತ್ ಯತ್ = ಯಾವುದು ಯಾವುದು, ಭವಂತಿ = ಆಗುತ್ತವೋ, ತತ್=ಅದು, (ವ್ಯಾಘ್ರಾದಿರೂಪಗಳು) ತದಾ=ಪರಮೇಶ್ವರಾಶ್ರಿತತ್ವಜ್ಞಾನವಿಲ್ಲದಿರುವಿಕೆಯೆಂಬ ಅಪರಾಧದಿಂದ, ಭವಂತಿ=ಆಗುತ್ತವೆ.

ತಾ ॥ ರಸವನ್ನು ದೃಷ್ಟಾಂತೀಕರಿಸಿ, ಜೀವೇಶ್ವರರಿಗೆ ಭೇದವಿದ್ದರೂ ಅದರ ಜ್ಞಾನವಿಲ್ಲವೆಂದು ಹೇಳಿದುದರಿಂದ 'ಯಾರು ಯಾರನ್ನು ತನ್ನಿಂದ ಭಿನ್ನನೆಂದು ನೋಡುವುದಿಲ್ಲವೋ, ಆತನು ಆತನಿಂದ ಭಿನ್ನನಾಗುವುದಿಲ್ಲ' ಎಂಬೀ ವ್ಯಾಪ್ತಿಗೆ ರಸಗಳಲ್ಲಿ ಹೇತುವಿದ್ದರೂ ಸಾಧ್ಯವಿಲ್ಲದಿರುವುದರಿಂದ ವ್ಯಭಿಚಾರವು ಉಕ್ತವಾಯಿತು ॥ ೨೦೫ ॥ ೨ ॥

ಅಚೇತನಗಳಾದ ನಾನಾವೃಕ್ಷರಸಗಳಿಗೆ ಭೇದಜ್ಞಾನವಿಲ್ಲದೆ ಹೋಗಲಿ. ನಾನು ವ್ಯಭಿಚಾರವನ್ನು ನಿವಾರಿಸುವುದಕ್ಕಾಗಿ 'ಮಯಾ ಭೇದೇನ ಅನುಪಲಭ್ಯಮಾನತ್ವಾತ್' ಎನ್ನುವ ಹೇತುವಿನಲ್ಲಿ 'ಚೇತನತ್ವೇ ಸತಿ' ಎಂದು ವಿಶೇಷಣವನ್ನು ಕೊಡುತ್ತೇನೆ, ಎಂದಭಿಪ್ರಾಯದಿಂದ ಪುನಃ ಶ್ವೇತಕೇತುವು ಪ್ರಶ್ನಿಸಲು ಉದ್ದಾಲಕರು 'ಇಮಾಃ ಸೋಮ್ಯ' ಇತ್ಯಾದ್ಯುತ್ತರವನ್ನು ಕೊಟ್ಟರು.

**ಮೂ ॥ ಇಮಾಃ ಸೋಮ್ಯ ನದ್ಯಃ ಪುರಸ್ತಾತ್ಪ್ರಾಚ್ಯಃ ಸ್ಯಂದಂತೇ ಪಶ್ಚಾತ್ಪ್ರತೀಚ್ಯಸ್ತಾಃ ಸಮುದ್ರಾತ್ಸಮುದ್ರಮೇವಾಪಿಯಂತಿ ಸಮುದ್ರ ಏವ ಭವಂತಿ । ತಾ ಯಥಾ ತತ್ರ ನ ವಿದುರಿಯಮಹಮಸ್ಮೀಯಮಹಮಸ್ಮೀತಿ । ಏವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹ ಇತಿ । ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ಭವಂತಿ ತತ್ತದಾ ಭವಂತಿ ॥ ೨೦೬ ॥ ೩ ॥**

ಅ ॥ ಸೋಮ್ಯ=ಶ್ವೇತಕೇತುವೇ, ಇಮಾಃ = ಪ್ರಸಿದ್ಧಗಳಾದ, ನದ್ಯಃ=ಗಂಗೆಯೇ ಮೊದಲಾದ ನದೀದೇವತೆಗಳು, ಪ್ರಾಚ್ಯಃ = ಪ್ರಾಚೀ (ಮೂಡು) ದಿಕ್ಕಿಗೆ ಅಭಿಮುಖವಾಗಿ ಹೋಗುವುದರಿಂದ ಪ್ರಾಚೀಶಬ್ದವಾಚ್ಯಗಳಾಗಿ, ಪುರಸ್ತಾತ್=ಪೂರ್ವದಿಕ್ಕಿಗೆ ಅಭಿಮುಖವಾಗಿ, ಸ್ಯಂದಂತೇ=ಹರಿಯುತ್ತವೆ. ಪ್ರತೀಚ್ಯಃ=ಪ್ರತೀಚೀ (ಪಶ್ಚಿಮ)ದಿಕ್ಕಿಗೆ ಅಭಿಮುಖವಾಗಿ ಹೋಗುವುದರಿಂದ ಪ್ರತೀಚೀ ಶಬ್ದವಾಚ್ಯಗಳಾಗಿ, ಪಶ್ಚಾತ್=ಪಶ್ಚಿಮದಿಕ್ಕಿಗೆ ಅಭಿಮುಖವಾಗಿ, ಸ್ಯಂದಂತೇ= ಹರಿಯುತ್ತವೆ. ತಾಃ=ಹೀಗೆ ಅತ್ಯಂತವಿಲಕ್ಷಣಗಳಾದ ನದಿಗಳು, ಸಮುದ್ರಾತ್=(* ಮೇಘಾದ

---

* ನದಿಗಳು ಸಮುದ್ರದಲ್ಲಿ ಪ್ರವೇಶಿಸಿ ಪರಸ್ಪರ ಮಿಶ್ರಗಳಾದಾಗ್ಯೂ, ವಾಯುದೇವರು ಆಯಾಯ ನದಿಗಳ ನೀರನ್ನು ಬೇರೆ ಬೇರೆ ತಿಳಿದು ಮೇಘಕ್ಕೆ ಕೊಟ್ಟು ಮಳೆ ಸುರಿಸುತ್ತಾರೆ. ಅದರಿಂದ ನದಿಗಳಲ್ಲಿ ಜಲಪೂರ್ತಿಯಾಗುವುದು. 'ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ । ವಾಯುಸ್ತು ತತ್ಪೃಥಕ್ ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ' ಎಂದು ಪ್ರಮಾಣವು. ಅಂತೂ ಅಭಿಮನ್ಯಮಾನಜಲಗಳು ಸಮುದ್ರದಿಂದ ಹುಟ್ಟಿರುವುದರಿಂದ ತದಭಿಮಾನಿಗಳಾದ ದೇವತೆಗಳು ಹುಟ್ಟಿರುವರು. ಎಂಬುವ ವ್ಯವಹಾರವು ಯುಕ್ತವೇ.

ಗಳ ದ್ವಾರಾ) ಸಮುದ್ರದಿಂದ (ಹುಟ್ಟಿದ ಜಲವುಳ್ಳದ್ದಾದುದರಿಂದ) ಸಮುದ್ರಮೇವ=ಸಮುದ್ರವನ್ನೇ, ಅಪಿಯಂತಿ=ಪ್ರವೇಶಿಸುತ್ತವೆ. (ನದಿಗಳಿಗೆ ಸಮುದ್ರದಲ್ಲಿ ಪ್ರವೇಶವಾಗುವಾಗ) ಸಃ ಏವ=ಜಲಗಳ ರಾಶಿಯೇ, ಯಾ ಜಲಾಭಿಮಾನಿಯೇ, ಸಮುದ್ರಃ=ಸಮುದ್ರವು, ಭವತಿ=ಆಗುತ್ತದೆ. (ನದೀದೇವತೆಗಳಿಗೆ ಸಮುದ್ರದಿಂದ ಐಕ್ಯವಿಲ್ಲ.) ಅಥವಾ (ನದಿಗಳಿಗೆ ಸಮುದ್ರದಲ್ಲಿ ಪ್ರವೇಶವಾದಾಗ್ಯೂ) ಸಃ=ಆ ಸಮುದ್ರವು, ಸಮುದ್ರ ಏವ=ಸಮುದ್ರವೇ, ಭವತಿ=ಆಗುತ್ತದೆ. ನದಿಗಳಾಗುವುದಿಲ್ಲ, ತಾಃ = ಆ ನದೀದೇವತೆಗಳು, ಯಥಾ=ಹೇಗೆ, ತತ್ರ=ಆ ಸಮುದ್ರದಲ್ಲಿ, ಇಯಂ ಅಹಂ ಅಸ್ಮಿ=ಈ ಗಂಗೆಯು ನಾನು ಆಗಿರುತ್ತೇನೆ. (ಇವಳು ಯಮುನೆಯು, ಅದು ಸಮುದ್ರವು) ಇಯಂ ಅಹಂ ಅಸ್ಮಿ=ಈ ಯಮುನೆಯು ನಾನು ಆಗಿರುತ್ತೇನೆ. ಇತಿ=ಹೀಗೆ, ನ ವಿದುಃ=ತಿಳಿಯುವುದಿಲ್ಲವೋ, ಏವಮೇವ ಖಲು=ಹೀಗೆಯೇ, ಸೋಮ್ಯ=ಶ್ವೇತಕೇತುವೇ, ಇಮಾಃ ಸರ್ವಾಃ ಪ್ರಜಾಃ=ಈ ಎಲ್ಲಾ ಜನರು, ಸತಃ=ಪರಮೇಶ್ವರನಿಂದ, ಆಗಮ್ಯ=ಹುಟ್ಟಿದರೂ, ಸತಃ = ಶ್ರೀಹರಿಯಿಂದ, ಆಗಚ್ಛಾಮಹೇ = ಹುಟ್ಟುತ್ತೇವೆ, ಹುಟ್ಟುವೆವು, ಹುಟ್ಟಿರುತ್ತೇವೆ, ಇತಿ=ಹೀಗೆ, ನ ವಿದುಃ=ತಿಳಿಯುವುದಿಲ್ಲ. (ಹೀಗೆಯೇ ಪರಮೇಶ್ವರನಲ್ಲಿದ್ದರೂ ಅವನನ್ನು ಆಶ್ರಯಿಸಿರುತ್ತೇವೆ ಎಂದೂ ತಿಳಿಯುವುದಿಲ್ಲ. 'ತ ಇಹ ವ್ಯಾಘ್ರೋ ವಾ' ಇತ್ಯಾದಿಗಳಿಗೆ ಹಿಂದಿನಂತೆ ಅರ್ಥವು. ಇದರಿಂದ ಚೇತನತ್ವ ವಿಶಿಷ್ಟವಾದ ಹೇತುವಿಗೂ ನದೀ ದೇವತೆಗಳಲ್ಲಿ ವ್ಯಭಿಚಾರವು ಹೇಳಲ್ಪಟ್ಟಿತು ॥ ೨೦೬ ॥ ೩ ॥

ಈಶ್ವರನು ಜೀವನಿಂದ ಭಿನ್ನನಾಗಲಿ, ಆದರೂ ಜೀವನು ಈಶ್ವರನ ಅಧೀನನೆನ್ನುವುದನ್ನು ಏಕೆ ಅಂಗೀಕರಿಸಬೇಕು? ಎಂದಭಿಪ್ರಾಯವುಳ್ಳ ಶ್ವೇತಕೇತುವಿನಿಂದ ಪ್ರಶ್ನಿಸಲ್ಪಟ್ಟ ಉದ್ದಾಲಕರು ಉತ್ತರಕೊಟ್ಟರು.

**ಮೂ ॥ ಸ ಏಷ ಜೀವೇನಾತ್ಮನಾಽನುಪ್ರಭೂತಃ ಪೇಪೀಯಮಾನೋ ಮೋದ-**
**ಮಾನಸ್ತಿಷ್ಠತಿ । ಅಸ್ಯ ಯದ್ಯೇಕಾಂ ಶಾಖಾಂ ಜೀವೋ ಜಹಾತ್ಯಥ**
**ಸಾ ಶುಷ್ಯತಿ ॥ ೨೦೭ ॥ ೪ ॥**

ಅ ॥ (ಮೂಲಕ್ಕೆ ಅಪೇಕ್ಷಿತವಾದ ಆವಶ್ಯಕವಾದ ಪೂರ್ವಭಾಗವು) 'ಅಸ್ಯ ಸೋಮ್ಯ ಮಹತೋ ವೃಕ್ಷಸ್ಯ ಯೋ ಮೂಲೇಽಭ್ಯಾಹನ್ಯಾಜ್ಜೀವನ್ಸ್ರವೇದ್ಯೋ ಮಧ್ಯೇಽಭ್ಯಾಹನ್ಯಾಜ್ಜೀವನ್ಸ್ರವೇದ್ಯೋಽಗ್ರೇಽಭ್ಯಾಹನ್ಯಾಜ್ಜೀವನ್ಸ್ರವೇತ್ ಸ ಏಷ ಜೀವೇನಾತ್ಮನೇತ್ಯಾದಿ, ಸೋಮ್ಯ=ಶ್ವೇತಕೇತುವೇ, ಯಃ = ಯಾರೊಬ್ಬನಾದರೂ, ಅಸ್ಯ ಮಹತೋ ವೃಕ್ಷಸ್ಯ = ಈ ದೊಡ್ಡ ವೃಕ್ಷಕ್ಕೆ, ಮೂಲೇ=ಬುಡದಲ್ಲಿ, ಅಭ್ಯಾಹನ್ಯಾತ್=ಹೊಡೆದರೆ, ಜೀವನ್=ಪ್ರಾಣಧಾರಕನಾದ ಪರಮೇಶ್ವರನಿಂದ ಅಧಿಷ್ಠಿತವಾಗಿಯೇ, ಆಗ, ಸ್ರವೇತ್=ರಸವನ್ನೇ ಸುರಿಸುತ್ತದೆ. (ಸಾಯುವುದಿಲ್ಲ) ಯಃ=ಯಾರೊಬ್ಬನಾದರೂ, ಮಧ್ಯೇ=ಮಧ್ಯದಲ್ಲಿ, ಅಭ್ಯಾಹನ್ಯಾತ್ ಜೀವನ್ ಸ್ರವೇತ್, ಯಃ ಅಗ್ರೇ=ತುದಿಯಲ್ಲಿ, ಅಭ್ಯಾಹನ್ಯಾತ್ ಜೀವನ್ ಸ್ರವೇತ್=(ಹಿಂದಿನಂತೆಯೇ ಅರ್ಥವು) ಸ ಏಷಃ=ಆ ಈ ವೃಕ್ಷವು, ಜೀವೇನ=ಪ್ರಾಣಧಾರಕನಾದ, ಆತ್ಮನಾ=ಪರಮಾತ್ಮನಿಂದ, ಅನುಪ್ರಭೂತಃ=ಪ್ರಾಪಿಸಲ್ಪಟ್ಟದ್ದಾಗಿ, ಅಧಿಷ್ಠಿತವಾದ ಶರೀರವುಳ್ಳದ್ದಾಗಿ, ಪೇಪೀಯಮಾನಃ=ಮತ್ತು ಮತ್ತು ಚೆನ್ನಾಗಿ ಪಾನಮಾಡತಕ್ಕದಾಗಿ, ಮೋದಮಾನಃ=ಸಂತೋಷವನ್ನು ಹೊಂದತಕ್ಕದಾಗಿ, ತಿಷ್ಠತಿ=ಇರುತ್ತದೆ. ಅಸ್ಯ=ಈ ವೃಕ್ಷದ, ಏಕಾಂ ಶಾಖಾಂ=ಒಂದು ಗೆಲ್ಲನ್ನು, ಯದಾ=ಯಾವಾಗ, ಜೀವಃ=ಶ್ರೀ ಹರಿಯು, ಜಹಾತಿ=ಬಿಡುತ್ತಾನೋ, ಅಥ=ಆ ಮೇಲೆ, ಸಾ=ಆ ಗೆಲ್ಲು, ಶುಷ್ಯತಿ=ಒಣಗುತ್ತದೆ.

ತಾ || ಹೇಗೆ ವೃಕ್ಷಜೀವನಿಗೆ ಯಾವಾಗಲೂ ಶರೀರವನ್ನು ಬಿಡದೇನೆ ಸುಖಿಯಾಗಿಯೇ ನಾನು ಇರಬೇಕೆಂದು ಇಚ್ಛೆಯಿದ್ದರೂ ಕೆಲವು ವೇಳೆಯೇ ಈಶ್ವರಾನುಗ್ರಹವಿರುವಾಗ ಬಾಹ್ಯ ಕಾರಣಗಳು ವಿಘಾತಕಗಳಾಗಿದ್ದರೂ ಹೀಗೆ ಅವಸ್ಥಿತಿಯು ಯುಕ್ತವಾಗುತ್ತದೆ. ಮತ್ತು ಕೆಲವು ವೇಳೆ ಈಶ್ವರನ ಅನುಗ್ರಹವಿಲ್ಲದಿರಲು ಬಾಹ್ಯಕಾರಣಗಳ ಬಲವಿಲ್ಲದಿದ್ದರೂ ಶರೀರವನ ಒಣಗಿಸುವಿಕೆ, ಪರಿತ್ಯಾಗ ಮೊದಲಾದ ಅನಿಷ್ಟವಾಗುವುದು. ಅಂತೂ ಜೀವನು ಈಶ್ವರಾನುಗ್ರಹ ಪ್ರಯುಕ್ತ ಸುಖದುಃಖಗಳನ್ನು ಹೊಂದುವುದರಿಂದ ಈಶ್ವರನ ಅಧೀನನು. ಹೀಗೆಯೇ ಮನು ಷ್ಯರ ಶರೀರದಲ್ಲಿಯೂ ಈಶ್ವರಾನುಗ್ರಹ, ಈಶ್ವರನ ಅನುಗ್ರಹವಿಲ್ಲದಿರುವಿಕೆ ತನ್ನಿಮಿತ್ತವಾದ ಸುಖದುಃಖಗಳು ಇದ್ದುದರಿಂದ ಜೀವರು ಈಶ್ವರನ ಅಧೀನರೆಂದು ತಿಳಿಯಬೇಕು || ೨೦೭ || ೪ ||

ಹೀಗೆ ಜೀವನಿಗೆ ಸತ್ತಾದಿಗಳನ್ನು ಕೊಡತಕ್ಕ ಪರಮಾತ್ಮನು ಇದೇ ಶರೀರದಲ್ಲಿದ್ದರೆ ಜೀವನಿಗೆ ಏಕೆ ಕಾಣುವುದಿಲ್ಲ? ಸೂಕ್ಷ್ಮನಾದ ಪ್ರಯುಕ್ತ ಕಾಣುವುದಿಲ್ಲ ಎಂದು ಹೇಳಕೂಡದು. ಸೂಕ್ಷ್ಮ ವಾದ ತನ್ನ ಸ್ವರೂಪವನ್ನು ನೋಡತಕ್ಕ ಜೀವನಿಗೆ ಸೂಕ್ಷ್ಮವಸ್ತುವನ್ನು ನೋಡತಕ್ಕ ಶಕ್ತಿಯಿದ್ದುದ ರಿಂದ ಸೂಕ್ಷ್ಮಭೂತನಾದ ಪರಮಾತ್ಮನೂ ಜೀವನಿಂದ ಕಾಣಲ್ಪಡಬೇಕು. ಎಂದಭಿಪ್ರಾಯದಿಂದ ಪುನಃ ಪ್ರಶ್ನಿಸಲು ತಂದೆಯವರು ಉತ್ತರವನ್ನು ಕೊಟ್ಟರು.

**ಮೂ || ನ್ಯಗ್ರೋಧಫಲಮತ ಆಹರೇತೀದಂ ಭಗವ ಇತಿ ಭಿಂಧೀತಿ ಭಿನ್ನಂ ಭಗವ ಇತಿ ಕಿಮತ್ರ ಪಶ್ಯಸೀತ್ಯಣ್ವ್ಯ ಇವೇಮಾ ಧಾನಾ ಭಗವ ಇತ್ಯಾ- ಸಾಮಂಗೈಕಾಂ ಭಿಂಧೀತಿ ಭಿನ್ನಾ ಭಗವ ಇತಿ ಕಿಮತ್ರ ಪಶ್ಯಸೀತಿ ನ ಕಿಂಚನ ಭಗವ ಇತಿ| ತಂ ಹೋವಾಚ ಯಂ ವೈ ಸೋಮ್ಯೈತಮಣಿ ಮಾನಂ ನ ನಿಭಾಲಯಸೇ ಅಸ್ಯ ಸೋಮ್ಯೈಷೋಽಣಿಮ್ನ ಏವಂ ಮಹಾನ್ನ್ಯಗ್ರೋಧಸ್ತಿಷ್ಠತಿ || ೨೦೮ || ೫ ||**

ಅ || ಅತಃ = ಈ ವೃಕ್ಷದಿಂದ, ನ್ಯಗ್ರೋಧಫಲಂ = ವಟದ ಬೀಜವನ್ನು, ಆಹರ= ತೆಗೆದುಕೊಂಡುಬಾ, ಇತಿ=ಹೀಗೆ, (ತಂದೆಯವರು ಹೇಳಿದರು. ಆಗ ಮಗನು ತಂದು) ಭಗವಃ= ಪೂಜ್ಯರೇ, ಇದಂ=ವಟದ ಬೀಜವು, (ತರಲ್ಪಟ್ಟಿತು ) ಇತಿ=ಎಂದನು, ಭಿಂಧಿ=(ಈ ಬೀಜವನ್ನು) ಭೇದಿಸು. ಇತಿ=ಹೀಗೆ (ತಂದೆಯವರು ಹೇಳಿದರು) ಭಗವಃ=ಪೂಜ್ಯರೇ, ಭಿನ್ನಂ=(ಅದನ್ನು ಭೇದಿಸಿ) ಭಿನ್ನವಾಯಿತು. ಇತಿ=ಹೀಗೆ, (ಮಗನು ಹೇಳಿದನು.) ಅತ್ರ=ಈ ಭಿನ್ನವಾದ ಫಲದಲ್ಲಿ, ಕಿಂ ಪಶ್ಯಸಿ=ಏನನ್ನು ನೋಡುತ್ತೀ, ಇತಿ=ಹೀಗೆ, (ತಂದೆಯವರು ಹೇಳಿದರು.) ಭಗವಃ= ಪೂಜ್ಯರೇ, ಅಣ್ವ್ಯ ಇವ=ಸೂಕ್ಷ್ಮಗಳಾದ, ಇಮಾಃ ಧಾನಾಃ=ಈ ಬೀಜಗಳನ್ನು, (ನೋಡು ತ್ತೇನೆ ಎಂದು ಮಗನು ಹೇಳಿದನು.) ಅಂಗ=ಎಲೈ ಮಗನೇ, ಆಸಾಂ=ಈ ಬೀಜಗಳ ಮಧ್ಯದಲ್ಲಿ, ಏಕಾಂ=ಒಂದು ಬೀಜವನ್ನು, ಭಿಂಧಿ=ಭೇದಿಸು, ಇತಿ=ಹೀಗೆ, (ತಂದೆಯವರು ಹೇಳಿದರು.) ಭಗವಃ=ಪೂಜ್ಯರೇ, ಭಿನ್ನಾಃ=(ಅದನ್ನು ಭೇದಿಸಿ) ಭಿನ್ನವಾಯಿತು, ಇತಿ = ಹೀಗೆ, (ಮಗನು ಹೇಳಿದನು) ಅತ್ರ=ಈ ಭಿನ್ನವಾದ ಬೀಜದಲ್ಲಿ, ಕಿಂ ಪಶ್ಯಸಿ=ಏನನ್ನು ನೋಡುತ್ತೀ, ಇತಿ=ಹೀಗೆ, (ತಂದೆಯವರು ಹೇಳಿದರು.) ಭಗವಃ=ಪೂಜ್ಯರೇ, ಕಿಂಚನ=ಯಾವುದನ್ನೂ, ನ (ಪಶ್ಯಾಮಿ)= ನೋಡುವುದಿಲ್ಲ, ಇತಿ=ಹೀಗೆ, (ಮಗನು ಹೇಳಿದನು.) ತಂ ಹ=ಹೀಗೆ ಹೇಳಿದ ಮಗನನ್ನು ಕುರಿತು, ಉವಾಚ=(ತಂದೆಯವರು ಹೇಳಿದರು.) ಸೋಮ್ಯ=ಮಗನೇ, ಯಂ ಏತಂ ಅಣಿಮಾನಂ=ಯಾವ ಈ ಪರಮಸೂಕ್ಷ್ಮನಾದ ಪರಮಾತ್ಮನನ್ನು, ನ ನಿಭಾಲಯಸೇ=ನೋಡು

ವುದಿಲ್ಲವೋ, ಸೋಮ್ಯ=ಶ್ವೇತಕೇತುವೇ, ಅಸ್ಯ ಅಣಿಮ್ನಃ=ಈ ಪರಮಸೂಕ್ಷ್ಮನಾದ ಶ್ರೀ ಹರಿಯ ಸಾಮರ್ಥ್ಯದಿಂದಲೇ, ಏವಂ = ಕಾಣಲ್ಪಡತಕ್ಕ ರೀತಿಯಿಂದ, ಏಷಃ ಮಹಾನ್ ನ್ಯಗ್ರೋಧಃ=ಈ ದೊಡ್ಡ ಗೋಳೀವೃಕ್ಷವು, ತಿಷ್ಠತಿ=ಇರುತ್ತದೆ.

ತಾ || ಇಲ್ಲಿ ವೃಕ್ಷವು ಪ್ರಪಂಚವು. ಫಲವು ಶರೀರವು. ಧಾನ (ಬೀಜ) ಗಳು ಜೀವರು. ಹೀಗೆ ಇರಲು, ಸೂಕ್ಷ್ಮವಾದ ವಟಬೀಜವು ಕಾಣಲ್ಪಟ್ಟರೂ ಯಾವ ಶ್ರೀ ಹರಿಯ ಸಾಮರ್ಥ್ಯ ದಿಂದಲೇ ಗೋಳೀಮರವಿರುವುದೋ ಅಂತಹ ಬೀಜಾಂತರ್ಗತನಾದ ಪರಮಾತ್ಮನು ಪರಮ ಸೂಕ್ಷ್ಮನಾದಪ್ರಯುಕ್ತ ಹೇಗೆ ಕಾಣಲ್ಪಡುವುದಿಲ್ಲವೋ, ಹಾಗೆಯೇ ಜೀವನಿಂದಲೂ ಅತಿಸೂಕ್ಷ್ಮ ನಾದುದರಿಂದ ಜೀವಾಂತರ್ಗತನಾದ ಪರಮಾತ್ಮನೂ ಪರಮಸೂಕ್ಷ್ಮನಾದ ಪ್ರಯುಕ್ತ ಕಾಣ ಲ್ಪಡುವುದಿಲ್ಲ || ೨೦೮ || ೫ ||

ವಟಸ್ಥಿತಿರೂಪವಾದ ಕಾರ್ಯದಿಂದ ಈಶ್ವರನ ಸಾಮರ್ಥ್ಯವು ಕಾಣಲ್ಪಟ್ಟರೂ ಆತನು ಕಾಣುವುದಿಲ್ಲವೆನ್ನುವುದನ್ನು ನಾನು ಹೇಗೆ ತಿಳಿದೇನು ಎಂದು ಮಗನಿಂದ ಪ್ರಾರ್ಥಿಸಲ್ಪಟ್ಟ ತಂದೆಯು ಉತ್ತರಗೈದನು.

ಮೂ || **ಲವಣಮೇತದುದಕೇऽವಧಾಯಾಥ ಮಾ ಪ್ರಾತರುಪಸೀದಥಾ ಇತಿ ತದ್ಧ ತಥಾ ಚಕಾರ ತಂ ಹೋವಾಚ ಯದ್ದೋಷಾ ಲವಣಮೇತದುದ ಕೇऽವಧಾ ಅಂಗ ತದಾಹರೇತಿ ತದ್ಧಾವಮೃಶ್ಯ ನ ವಿವೇದ ಯಥಾ ವಿಲೀನಮೇವಾಂಗಾಸ್ಯಾಂ ತದಾಚಾಮೇತಿ ಕಥಮಿತಿ ಲವಣಮಿತಿ ಮಧ್ಯಾದಾಚಾಮೇತಿ ಕಥಮಿತಿ ಲವಣಮಿತಿ ಅಂತ್ಯಾದಾಚಾಮೇತಿ ಕಥಮಿತಿ ಲವಣಮಿತಿ ಅಭಿಪ್ರಾಸ್ಯೈತದಥ ಮೋಪಸೀದಥಾ ಇತಿ ತದ್ಧ ತಥಾ ಚಕಾರ ತಚ್ಛಶ್ವತ್ಸಂವರ್ತತೇ। ತಂ ಹೋವಾಚಾತ್ರ ವಾ-ವ ಕಿಲ ಸತ್ಸೋಮ್ಯ ನ ನಿಭಾಲಯಸೇऽತ್ರೈವ ಕಿಲೇತಿ || ೨೦೯ || ೬ ||**

ಅ || ಏತತ್ ಲವಣಂ=ಈ ಉಪ್ಪನ್ನು, ಉದಕೇ=ನೀರಿನಲ್ಲಿ, ಅವಧಾಯ=ಇಟ್ಟು, ಅಥ=ಆ ಮೇಲೆ, ಪ್ರಾತಃ=ಬೆಳಿಗ್ಯೆ, ಮಾ ಉಪಸೀದಥಾಃ=ನನ್ನ ಸಮಿಾಪಕ್ಕೆ ಬಾ, ಇತಿ= ಹೀಗೆ, (ತಂದೆಯು ಹೇಳಿದನು.) ತತ್=ಅದನ್ನು, ತಥಾ=ತಂದೆಯು ಹೇಳಿದಂತೆಯೇ, ಚಕಾರ ಹ=(ಮಗನು) ಮಾಡಿದನು. ತಂ ಹ=ಆ ಮಗನನ್ನು ಕುರಿತು, ಉವಾಚ=(ತಂದೆಯು ಹೇಳಿ ದನು.) ಅಂಗ=ಮಗನೇ, ದೋಷಾ=ರಾತ್ರಿಯಲ್ಲಿ, ಯತ್ ಏತತ್ ಲವಣಂ=ಯಾವ ಈ ಲವಣ ಖಂಡವನ್ನು, ಉದಕೇ=ನೀರಿನಲ್ಲಿ, ಅವಧಾಃ=(ಅವಾಧಾಃ=) ಇಟ್ಟಿರುವಿಯೋ, ತತ್= ಅದನ್ನು, ಆಹರ= (ಬೆಳಿಗ್ಯೆ) ತೆಗೆದುಕೊಂಡು ಬಾ, ಇತಿ=ಹೀಗೆ (ತಂದೆಯು ಹೇಳಿದನು.) **ತತ್ ಹ=ಆ ಲವಣಖಂಡವನ್ನು, ಅವಮೃಶ್ಯ= (ನೀರಿನಲ್ಲಿ ಕೈಯಿಂದ) ವಿಮರ್ಶಿಸಿ, ನ ವಿವೇದ = (ಮಗನು) ತಿಳಿಯಲಿಲ್ಲ, ಯಥಾ ವಿಲೀನಮೇವ=ಅತ್ಯಂತಏನಷ್ಟವಾದ ವಸ್ತುವನ್ನು ತಿಳಿಯುವುದಿಲ್ಲವೋ ಹಾಗೆಯೇ ತಿಳಿಯಲಿಲ್ಲ. ಅಂಗ=ಎಲೈ ಮಗನೇ, ಅಸ್ಯ=ಈ ನೀರಿನ, ಅಂತ್ಯಾತ್=ಪೂರ್ವದಿಕ್ಕಿನಲ್ಲಿರುವ ಏಕ ದೇಶದಿಂದ ತೆಗೆದು ಏಕದೇಶವನ್ನು, ಆಚಾಮ=ಆಚ ಮನ ಮಾಡು. ಇತಿ=ಹೀಗೆ, (ತಂದೆಯು ಹೇಳಿದನು.) ಕಥಮಿತಿ= (ಆಚಮನ ಮಾಡಿದ ಮಗನನ್ನು ಕುರಿತು) ಹೇಗೆ ಇದೆ ಎಂದನು. ಲವಣಮಿತಿ = ಲವಣರಸದಿಂದೊಡಗೂಡಿದೆ ಎಂದು, (ಮಗನು ಹೇಳಿದನು.)ಮಧ್ಯಾತ್ ಆಚಾಮೇತಿ=ಮಧ್ಯದಿಂದ ತೆಗೆದು ಆಚಮನಮಾಡು**

ಎಂದು ತಂದೆಯು ಹೇಳಿದನು. ಕಥಮಿತಿ=ಹೇಗೆ ಇದೆ ಎಂದನು. ಲವಣಮಿತಿ=ಲವಣರಸದಿಂದ ಯುಕ್ತವಾಗಿದೆ. ಎಂದು ಮಗನು ಹೇಳಿದನು. ಅಂತ್ಯಾತ್ ಆಚಾಮ ಇತಿ=ಪಶ್ಚಿಮ ದಿಕ್ಕಿನಲ್ಲಿರುವ ಏಕ ದೇಶದಿಂದ ತೆಗೆದು ಆಚಮನಮಾಡು ಎಂದನು. ಕಥಮಿತಿ=ಹೇಗೆ ಇದೆ ಎಂದನು. ಲವಣಮಿತಿ=ಲವಣರಸೋಪೇತವಾಗಿದೆ ಎಂದು ಮಗನು ಹೇಳಿದನು. ಏತತ್=ಈ ನೀರನ್ನು ಅಭಿಪ್ರಾಸ್ಯ=ಚೆಲ್ಲಿ, ಅಥ=ಆ ಮೇಲೆ, ಮಾ ಉಪಸೀದಥಾಃ=ನನ್ನ ಸಮೀಪಕ್ಕೆ ಬಾ, ಇತಿ=ಹೀಗೆ, (ತಂದೆಯು ಹೇಳಿದನು) ತತ್ ಹ ತಥಾ ಚಕಾರ=ಅದನ್ನು (ಮಗನು) ಹಾಗೆಯೇ ಮಾಡಿದನು. ತತ್=ಆ ಲವಣವು, ಶಶ್ವತ್ ಸಂವರ್ತತೇ=ನೀರಿನಲ್ಲಿ ಕಾರ್ಯರೂಪದಿಂದ ನಾಶವಾದರೂ ಕಾರಣರೂಪದಿಂದ ಚೆನ್ನಾಗಿಯೇ ಇದೆ. ನಷ್ಟವಾಗಲಿಲ್ಲ. (ಹೀಗೆ ಶ್ರುತಿಯು ಸ್ವವಾಕ್ಯವು. 'ತತ್ ಹ ತಥಾ ಚಕಾರ' ಎಂಬೀ ವಾಕ್ಯವನ್ನು 'ಅಂಗ ತತ್ ಆಹರ' 'ಅಂತ್ಯಾತ್ ಆಚಾಮ' ಇದು ಮೊದಲಾದ ವಾಕ್ಯಗಳನ್ನ ಮೇಲೆಯೂ ಅನುವರ್ತಿಸಬೇಕು.) ತಂ ಹ=ಆ ಮಗನನ್ನು ಕುರಿತು, ಉವಾಚ=ಹೇಳಿದನು, ಸೋಮ್ಯ=ಎಲೋ ಶ್ವೇತಕೇತುವೇ, ಅತ್ರ ವಾವ ಕಿಲ ಸತ್=ಇಲ್ಲಿರತಕ್ಕದ್ದನ್ನು, ನ ನಿಭಾಲಯಸೇ=ನೋಡುವುದಿಲ್ಲ.

ತಾ ॥ ಇದರಿಂದ ಲವಣಗುಣವು ಕಾಣಲ್ಪಟ್ಟರೂ ಹೇಗೆ ನೀರಿನಲ್ಲಿ ಹಾಕಿಟ್ಟದ್ದ ಲವಣ ಖಂಡವು ಕಾಣಲ್ಪಡುವುದಿಲ್ಲವೋ, ಹಾಗೆಯೇ ಶ್ರೀ ಹರಿಯ ಸಾಮರ್ಥ್ಯವು ಕಾಣಲ್ಪಟ್ಟರೂ ಆತನು ಕಾಣಲ್ಪಡಲಾರನು ॥ ೨೦೯ ॥ ೬ ॥

ಇಂತಹ ಶ್ರೀಹರಿಯು ಅವಿದ್ಯೆಯೆಂಬ ಆವರಣಭೂತವಾದ ವಸ್ತುವಿನಿಂದ ಆಚ್ಛಾದಿತವಾದ ಮನಸ್ಸುಳ್ಳ ಈ ಅಧಿಕಾರಿಗಳಿಗೆ ಹೇಗೆ ಕಾಣಿಸಿಕೊಳ್ಳುವನು, ಹೇಗೆ ತಾನೇ ಪ್ರಾಪಿಸಿಕೊಳ್ಳುವನು? ಎಂದು ಮಗನು ತಿಳಿಯಲಿಚ್ಛಿಸಲು ತಂದೆಯುವರು ಹೇಳಿದರು.

**ಮೂ ॥ ಯಥಾ ಸೋಮ್ಯ ಪುರುಷಂ ಗಂಧಾರೇಭ್ಯೋಽಭಿನದ್ಧಾಕ್ಷಮಾನೀಯ ತಂ ತತೋಽತಿಜನೇ ವಿಸೃಜೇತ್ ॥ ೨೧೦ ॥ ೭ ॥**

ಅ ॥ 'ವಿಸೃಜೇತ್' ಎನ್ನುವುದರಿಂದ ಮೇಲಿನವಾಕ್ಯವು. "ಸ ಯಥಾ ತತ್ರ ಪ್ರಾಙ್ವೋದಙ್ವಾ ಅಧರಾಙ್ವಾ ಪ್ರಾಧ್ಮಾಯೀತಾಭಿನದ್ಧಾಕ್ಷ ಆನೀತೋ ಅಭಿನದ್ಧಾಕ್ಷೋ ವಿಸೃಷ್ಟಸ್ತಸ್ಯ ತಥಾಽಭಿನಹನಂ ಪ್ರಮುಚ್ಯ ಭ್ರೂಯಾತ್ । ಏತಾಂ ದಿಶಂ ಗಂಧರಾ ಏತಾಂ ದಿಶಂ ಪ್ರವ್ರಜೇತಿ ಸ ಗ್ರಾಮಾದ್ಗ್ರಾಮಂ ಪೃಚ್ಛನ್ಪಂಡಿತೋ ಮೇಧಾವೀ ಗಂಧಾರಾನೇವೋಪಸಂಪದ್ಯತೇ ಏವಮೇವೇಹಾಚಾರ್ಯವಾನ್ಪುರುಷೋ ವೇದ" ॥ ಸೋಮ್ಯ=ಸೋಮಪಾನಾರ್ಹನಾದ ಶ್ವೇತಕೇತುವೇ, ಯಥಾ=ಹೇಗೆ, ಪುರುಷಂ=ಧನಿಕನನ್ನು, ಗಂಧಾರೇಭ್ಯಃ=ಗಂಧಾರಸಂಜ್ಞಕಗಳಾದ ದೇಶಗಳಿಂದ, ಅಭಿನದ್ಧಾಕ್ಷಂ=ಕಟ್ಟಲ್ಪಟ್ಟ ಕಣ್ಣುಗಳುಳ್ಳವನನ್ನಾಗಿ, ಅಂದರೆ ಕಣ್ಣುಗಳನ್ನು ಕಟ್ಟಿ, ಆನೀಯ=ತಂದು, ತತಃ=ಆಮೇಲೆ, ತಂ=ಆ ಧನಿಕನನ್ನು, ಅತಿಜನೇ=ಜನಸಂಚಾರವಿಲ್ಲದ ಅರಣ್ಯದಲ್ಲಿ, ವಿಸೃಜೇತ್=(ಕಳ್ಳನು) ಬಿಟ್ಟುಬಿಟ್ಟಪಕ್ಷದಲ್ಲಿ, ಸಃ=ಬಿಡಲ್ಪಟ್ಟ ಧನಿಕನು, ಯಥಾ=ಹೇಗೆ, ತತ್ರ=ಆ ಅರಣ್ಯದಲ್ಲಿ, ಪ್ರಾಙ್ ವಾ=ಪೂರ್ವದಿಕ್ಕಿಗೆ ಅಭಿಮುಖವಾಗಿ, ಉದಙ್ ವಾ=ಉತ್ತರದಿಕ್ಕಿಗೆ ಅಭಿಮುಖವಾಗಿ, ಅಧರಾಙ್ ವಾ=ಕೆಳಗಿನ ದಿಕ್ಕಿಗೆ ಅಭಿಮುಖವಾಗಿ, (ಅಂತೂ ಸರ್ವದಿಕ್ಕಿಗೆ ಅಭಿಮುಖವಾಗಿ), ಅಭಿನದ್ಧಾಕ್ಷಃ ಆನೀತಃ=ಕಣ್ಣುಕಟ್ಟಿ ತರಲ್ಪಟ್ಟವನಾಗಿರುತ್ತೇನೆ, ಅಭಿನದ್ಧಾಕ್ಷಃ ವಿಸೃಷ್ಟಃ=ಕಣ್ಣುಕಟ್ಟಬಿಡಲ್ಪಟ್ಟವನಾಗಿರುತ್ತೇನೆ, ಇತಿ=ಹೀಗೆ, ಪ್ರಾಧ್ಮಾಯೀತ=

ಘಟ್ಟಿಯಾಗಿ ಶಬ್ದವನ್ನು ಮಾಡುತ್ತಾನೋ, ತಥಾ=ಹಾಗೆ, ಯಥಾ=ಹೇಗೆ, (ಒಬ್ಬ ದಯಾಳುವು ಆ ವಾಕ್ಯವನ್ನು ಚೆನ್ನಾಗಿ ಕೇಳಿ) ತಸ್ಯ=ಆತನ, ಅಭಿನಹನಂ=ನೇತ್ರಬಂಧನವನ್ನು, ಪ್ರಮುಚ್ಯ= ಬಿಡಿಸಿ, ಏತಾಂ ದಿಶಂ=ಈ ದಿಕ್ಕಿನಲ್ಲಿ, ಗಂಧಾರಾಃ=ಗಂಧಾರದೇಶಗಳು, ಸಂತಿ=ಇರುತ್ತವೆ. ಏತಾಂ ದಿಶಂ=ಈ ದಿಕ್ಕನ್ನು ಕುರಿತು, ಪ್ರವ್ರಜ=ಹೋಗು, ಇತಿ=ಹೀಗೆ, ಬ್ರೂಯಾತ್=ಹೇಳಿದರೆ, ಸಃ=ಆತನು, ಗ್ರಾಮಾತ್=(ಆತನಿಂದುಪದೇಶಿಸಲ್ಪಟ್ಟ) ಗ್ರಾಮದಿಂದ, (ಹೊರಟು) ಗ್ರಾಮಂ= ಮತ್ತೊಂದು ಗ್ರಾಮವನ್ನು, ಪೃಚ್ಛನ್=ಕೇಳಿದ, ಪಂಡಿತಃ=ಪ್ರಾಜ್ಞನಾದವನು, ಮೇಧಾವೀ= ಅವನುಪದೇಶಿಸಿದ ಮಾರ್ಗದ ಸ್ಮೃತಿಯುಳ್ಳವನಾಗಿ, ಗಂಧಾರಾನೇವ=ಗಂಧಾರದೇಶಗಳನ್ನೇ, ಉಪಸಂಪದ್ಯತೇ=ಹೊಂದುತ್ತಾನೋ, ಏವಮೇವ=ಹೀಗೆಯೇ, ಇಹ=ಇಲ್ಲಿ, ಆಚಾರ್ಯವಾನ್= ಆಚಾರ್ಯೋಪದೇಶವುಳ್ಳ, ಪುರುಷಃ=ಪುರುಷನು, ವೇದ=ತಿಳಿಯುತ್ತಾನೆ.

ತಾ || ಅನಾದಿಯಾದ ಅವಿದ್ಯೆ ಕಾಮಕರ್ಮಾದಿಗಳಿಂದ, ಆಚ್ಛಾದಿಸಲ್ಪಟ್ಟ ಸ್ವರೂಪಜ್ಞಾನವುಳ್ಳ ಜೀವನು ಸಂಸಾರದಲ್ಲಿಯೇ ಬದ್ಧವನಾಗಿ ಪರಮೇಶ್ವರನ ಅನುಗ್ರಹದಿಂದ ತಿಳಿಯಬೇಕೆಂಬ ಇಚ್ಛೆಯು ಹುಟ್ಟಿ ಗುರುಗಳ ಉಪದೇಶವನ್ನು ಹೊಂದಿ ಕ್ರಮಪ್ರಾಪ್ತಗಳಾದ ಶ್ರವಣ ಮನನ ನಿದಿಧ್ಯಾಸನ ಮೊದಲಾದ ಸಾಧನಗಳನ್ನು ಮಾಡಿ ತನ್ನ ಉತ್ಪತ್ತಿಗೆ ಕಾರಣನಾದ ಶ್ರೀ ಭಗವಂತನನ್ನು ಪ್ರತ್ಯಕ್ಷೀಕರಿಸಿ ಆತನನ್ನೇ ಹೊಂದುತ್ತಾನೆ || ೨೧೦ || ೭ ||

ವೃಕ್ಷಶರೀರದಲ್ಲಿದ್ದ ಜೀವನು ಭಗವಂತನ ಅಧೀನನೆಂದು ತಿಳಿಯಲ್ಪಟ್ಟಿತು. ಮನುಷ್ಯರ ಶರೀರದಲ್ಲಿಯೇ ಜೀವನಿಗೆ ಭಗವಂತನ ಅಧೀನತೆಯನ್ನು ತಿಳಿಸಿಕೊಡು ಎಂದು ಮಗನಿಂದ ಪ್ರಾರ್ಥಿಸಲ್ಪಟ್ಟ ತಂದೆಯು ಉಪದೇಶಿಸಿದನು.

**ಮೂ || ಅಥ ಯದಾಽಸ್ಯ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ ತಾವನ್ನ ಜಾನಾತಿ || || ೨೧೧ || ೮ ||**

ಅ || ಈ ಮೂಲದ ಪೂರ್ವಭಾಗವು ಹೀಗೆ ಇದೆ. 'ಪುರುಷಂ ಸೋಮ್ಯೋಪತಾಪಿನಂ ಜ್ಞಾತಯಃ ಪರ್ಯುಪಾಸತೇ । ಜಾನಾಸಿ ಮಾಂ ಜಾನಾಸಿ ಮಾಮಿತಿ । ತಸ್ಯ ಯಾವನ್ನ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ । ತಾವಜ್ಜಾನಾತ್ಯಥ ಯದಾಽಸ್ಯೇತಿ' || ಸೋಮ್ಯ=ಶ್ವೇತಕೇತುವೇ, ಉಪತಾಪಿನಂ=ರೋಗಿಯಾದ, ಪುರುಷಂ= ಮನುಷ್ಯರನ್ನು, ಜ್ಞಾತಯಃ=ಬಾಂಧವರು, ಪರ್ಯುಪಾಸತೇ=ಸುತ್ತಮುತ್ತಲೂ ಕೂತುಕೊಳ್ಳುತ್ತಾರೆ. ಮಾಂ ಜಾನಾಸಿ ಮಾಂ ಜಾನಾಸಿ=ನನ್ನನ್ನು ತಿಳಿಯುತ್ತೀಯೋ ನನ್ನನ್ನು ತಿಳಿಯುತ್ತೀಯೋ, ಇತಿ=ಹೀಗೆ, ಹೇಳುತ್ತಾ ಇರುತ್ತಾರೆ. ತಸ್ಯ=ಆತನ, ವಾಕ್ = ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಪಾರ್ವತಿಯು, ಮನಸಿ=ಮನೋಽಭಿಮಾನಿಯಾದ ರುದ್ರನಲ್ಲಿ, ಮನಃ= ಮನೋಽಭಿಮಾನಿಯು, ಪ್ರಾಣೇ=ಮುಖ್ಯಪ್ರಾಣನಲ್ಲಿಯು, ಪ್ರಾಣಃ = ಪ್ರಾಣನು, ತೇಜಸಿ= ತೇಜೋಽಭಿಮಾನಿನಿಯಾದ ಲಕ್ಷ್ಮಿಯಲ್ಲಿಯೂ, ತೇಜಃ=ಲಕ್ಷ್ಮಿಯು, ಪರಸ್ಯಾಂ ದೇವತಾಯಾಂ= ಸರ್ವೋತ್ತಮನಾದ ಶ್ರೀ ಹರಿಯಲ್ಲಿಯೂ, ನ ಸಂಪದ್ಯತೇ = ಗ್ರಸ್ತವಾದ ವ್ಯಾಪಾರವುಳ್ಳದ್ದು ಆಗುವುದಿಲ್ಲವೋ, ತಾವತ್=ಅಷ್ಟು ತನಕ, ಜಾನಾತಿ=ತಿಳಿಯುತ್ತಾನೆ. ಅಥ = ಆಮೇಲೆ, ಯದಾ = ಯಾವಾಗ, ಅಸ್ಯ = ಇವನ, ವಾಕ್ = ವಾಗಿಂದ್ರಿಯಾಭಿಮಾನಿಯು, ಮನಸಿ=

ಮನೋಽಭಿಮಾನಿಯಲ್ಲಿ, ಮನಃ=ಮನೋಽಭಿಮಾನಿಯು, ಪ್ರಾಣೇ=ಮುಖ್ಯಪ್ರಾಣನಲ್ಲಿಯೂ, ಪ್ರಾಣಃ=ಪ್ರಾಣನು, ತೇಜಸಿ=ಲಕ್ಷ್ಮೀದೇವಿಯಲ್ಲಿಯೂ, ತೇಜಃ=ಲಕ್ಷ್ಮೀದೇವಿಯು, ಪರಸ್ಯಾಂ ದೇವತಾಯಾಂ = ಶ್ರೀ ಸರ್ವೋತ್ತಮನಾದ ಶ್ರೀ ಹರಿಯಲ್ಲಿಯೂ, ಸಂಪದ್ಯತೇ = ವ್ಯಾಪಾರ ರಹಿತಳು ಆಗುತ್ತಾಳೋ, ತಾವತ್=ಆಗ, ನ ಜಾನಾತಿ=ತಿಳಿಯುವುದಿಲ್ಲ ॥ ೨೧೧ ॥ ೮ ॥

ಈ ಪ್ರಕಾರ ಸರ್ವಪ್ರೇರಕನೂ, ಮಹಾನುಭಾವನೂ ಆದ ಭಗವಂತನನ್ನು ಯಾರು ತನ್ನಿಂದ ಅತ್ಯಂತ ಭಿನ್ನನನ್ನಾಗಿ ತಿಳಿಯುತ್ತಾನೋ, ಯಾರು 'ಅವನೇ ನಾನು' ಅವನಿಗೂ ನನಗೂ ಭೇದವಿಲ್ಲವೆಂದು ತಿಳಿಯುತ್ತಾನೋ, ಆ ಭೇದಜ್ಞಾನಿ ಐಕ್ಯಜ್ಞಾನಿಗಳಿಗೆ ಎಂತಹ ಫಲವಾಗುವುದು. ಎಂದು ತಿಳಿಯಲಿಚ್ಛಿಸಲು ಉದ್ದಾಲಕರು ಶ್ವೇತಕೇತುವಿಗೆ ಉಪದೇಶಿಸಿದರು.

**ಮೂ ॥ ಪುರುಷಂ ಸೋಮ್ಯೋತ ಹಸ್ತಗೃಹೀತಮಾನಯಂತ್ಯಪಹಾರ್ಷೀ-ತ್ಸ್ತೇಯಮಕಾರ್ಷೀತ್ಪರಶುಮಸ್ಮೈ ತಪತೇತಿ ಸ ಯದಿ ತಸ್ಯ ಕರ್ತಾ ಭವತಿ ತತ ಏವಾನೃತಮಾತ್ಮಾನಂ ಕುರುತೇ ಸೋಽನೃತಾಭಿಸಂ-ಧೋಽನೃತೇನಾತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ದಹ್ಯತೇಽಥ ಹನ್ಯತೇ ಅಥ ಸ ಯದಿ ತಸ್ಯಾಕರ್ತಾ ಭವತಿ ತತ ಏವ ಸತ್ಯಮಾತ್ಮಾನಂ ಕುರುತೇ ಸ ಸತ್ಯಾಭಿಸಂಧಃ ಸತ್ಯೇನಾತ್ಮಾನಮಂತ-ರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ನ ದಹ್ಯತೇಽಥ ಮುಚ್ಯತೇ ॥ ೨೧೨ ॥ ೯ ॥**

ಅ ॥ ಸೋಮ್ಯ=ಶ್ವೇತಕೇತುವೇ, ಪುರುಷಂ=(ರಾಜದ್ರವ್ಯವು ಕಳವಾಗೋಣ ಸಂಶಯಕ್ಕೆ ವಿಷಯನಾದ) ಪುರುಷನನ್ನು, (ರಾಜಭಟರು) ಅಯಂ=ಇವನು, ಅಪಹಾರ್ಷೀತ್=ಎದುರಾಗಿ ಕದ್ದುಕೊಂಡನು, ಸ್ತೇಯಂ ಅಕಾರ್ಷೀತ್=ಪರೋಕ್ಷವಾಗಿ ಕದ್ದುಕೊಂಡನು, ಇತಿ=ಹೀಗೆ ಹೇಳುತ್ತಾ, ಹಸ್ತಗೃಹೀತಂ = ಕೈಹಿಡಿದುಕೊಂಡು, ಆನಯಂತಿ=ತರುತ್ತಾರೆ. (ಆಮೇಲೆ ಆತನು ಕದ್ದುಕೊಳ್ಳಲಿಲ್ಲವೆಂದು ರಾಜಭಟರನ್ನು ಕುರಿತು ಹೇಳೋಣ ರಾಜನು ಹೇಳುತ್ತಾನೆ.) ಅಸ್ಮೈ=ಈತನ ಪರೀಕ್ಷೆಗಾಗಿ, ಪರಶುಂ=ಕೊಡಲಿಯನ್ನು, ತಪತ=ಕಾಯಿಸಿರಿ. ಇತಿ=ಹೀಗೆ (ಹೇಳುತ್ತಾನೆ.) ಸಃ=ಹಿಡಿದವನು, ಯದಿ ತಸ್ಯ ಕರ್ತಾ ಭವತಿ=ದ್ರವ್ಯವನ್ನು ಅಪಹಾರ ಮಾಡಿದವನಾದರೆ (ಅಲ್ಲದೆ ಅಪಹಾರಮಾಡಲಿಲ್ಲವೆಂದು ಹೇಳಿದರೆ) ತತ ಏವ=ಅದರಿಂದಲೇ, ಆತ್ಮಾನಂ=ತನ್ನನ್ನು, ಅನೃತಂ=ಅನೃತಭಾಷಿಯನ್ನಾಗಿ, ಕುರುತೇ=ಮಾಡುತ್ತಾನೆ. ಅನೃತಾ-ಭಿಸಂಧಃ=ಅನೃತದಲ್ಲಿಯೇ ಅಭಿಪ್ರಾಯವುಳ್ಳ ಸಃ=ಆತನು, ಅನೃತೇನ=ಸುಳ್ಳುಮಾತಿನಿಂದ, ಆತ್ಮಾನಂ=ತನ್ನನ್ನು, ಅಂತರ್ಧಾಯ=ಆಚ್ಛಾದನೆಮಾಡಿಕೊಂಡು, ಪರಶುಂ ತಪ್ತಂ=ಚೆನ್ನಾಗಿ ಕಾಯಿಸಲ್ಪಟ್ಟ ಕೊಡಲಿಯನ್ನು, ಪ್ರತಿಗೃಹ್ಣಾತಿ=ಹಿಡಿಯುತ್ತಾನೆ. ಸಃ=ಆತನು, ದಹ್ಯತೇ=ಸುಡಲ್ಪಡುತ್ತಾನೆ. ಅಥ=ಆ ಮೇಲೆ, ಹನ್ಯತೇ=ಕೊಲ್ಲಿಸಲ್ಪಡುತ್ತಾನೆ. ಅಥ=ಆಮೇಲೆ, ಸಃ=ಹಿಡಿದವನು, ಯದಿ ತಸ್ಯ ಅಕರ್ತಾ ಭವತಿ=ಆ ದ್ರವ್ಯವನ್ನು ಅಪಹರಿಸದೆ ಇರುವವನಾದರೆ, ತತ ಏವ=ಅದರಿಂದಲೇ, ಆತ್ಮಾನಂ = ತನ್ನನ್ನು, ಸತ್ಯಂ = ಯಥಾರ್ಥನುಡಿಯುಳ್ಳವನನ್ನಾಗಿ, ಕುರುತೇ=ಮಾಡುತ್ತಾನೆ. ಸತ್ಯಾಭಿಸಂಧಃ ಸಃ=ಯಥಾರ್ಥನುಡಿಯಲ್ಲಿಯೇ ಅಭಿಪ್ರಾಯವುಳ್ಳ ಆತನು, ಸತ್ಯೇನ=ಯಥಾರ್ಥನುಡಿಯಿಂದ, ಆತ್ಮಾನಂ=ತನ್ನನ್ನು, ಅಂತರ್ಧಾಯ=ಆಚ್ಛಾದಿಸಿ, ಪರಶುಂ ತಪ್ತಂ ಪ್ರತಿಗೃಹ್ಣಾತಿ=ಕಾಯಿಸಲ್ಪಟ್ಟ ಕೊಡಲಿಯನ್ನು ಹಿಡಿಯುತ್ತಾನೆ. ಸಃ=ಆತನು,

ನ ದಹ್ಯತೇ=ಸುಡಲ್ಪಡುವುದಿಲ್ಲ. ಅಥ=ಆಮೇಲೆ, ಮುಚ್ಯತೇ=ಬಿಡಲ್ಪಡುತ್ತಾನೆ (ಹೀಗೆಯೇ ಆಚಾರ್ಯರಿಂದ ಉಪದೇಶಿಸಿಕೊಂಡವನು ಭಗವಂತನನ್ನು ಪ್ರತ್ಯಕ್ಷೀಕರಿಸಿಕೊಂಡು ಮುಕ್ತನಾಗುವನು) ॥ ೨೧೨ ॥ ೯ ॥

ಮೂ ॥ ಏವಮೇವ ಖಲು ಸೋಮ್ಯಾಚಾರ್ಯವಾನ್ಪುರುಷೋ ವೇದೇತಿ ಸ್ಥಾನನವಕೇಽಪಿ ಭೇದ ಏವ ದೃಷ್ಟಾಂತಾಭಿಧಾನಾತ್ । ನ ಹಿ ಶಕುನಿಸೂತ್ರಯೋರ್ನಾನಾವೃಕ್ಷರಸಾನಾಂ ನದೀಸಮುದ್ರಯೋರ್ಜೀವ-ವೃಕ್ಷಯೋರಣಿಮಧಾನಯೋರ್ಲವಣೋದಕಯೋರ್ಗಂಧಾರ-ಪುರುಷಯೋರಜ್ಞಪ್ರಾಣಾದಿನಿಯಾಮಕಯೋಃ ಸ್ತೇನಾಪಹಾರ್ಯ-ಯೋಶ್ಚೈಕ್ಯಂ ॥ ೨೧೩ ॥

ಅ ॥ ಸೋಮ್ಯ=ಎಲೋ ಶ್ವೇತಕೇತುವೇ, ಏವಮೇವ ಖಲು=ಹೀಗೆಯೇ, ಆಚಾರ್ಯವಾನ್=ಆಚಾರ್ಯರಿಂದುಪದೇಶಿಸಿಕೊಂಡ, ಪುರುಷಃ=ಪುರುಷನು, ವೇದ = ತಿಳಿಯುತ್ತಾನೆ. ಇತಿ=ಹೀಗೆ, ಸ್ಥಾನನವಕೇಽಪಿ=ಒಂಭತ್ತು ಸ್ಥಾನಗಳಲ್ಲಿ, ಭೇದ ಏವ=ಭೇದವಿಷಯದಲ್ಲಿಯೇ, ದೃಷ್ಟಾಂತಾಭಿಧಾನಾತ್=ದೃಷ್ಟಾಂತವನ್ನು ಹೇಳಿರುವುದರಿಂದ, (ಹೀಗೆ ಒಂಭತ್ತು ಸ್ಥಾನಗಳಲ್ಲಿಯೂ ಭೇದವಿಷಯದಲ್ಲಿಯೇ ದೃಷ್ಟಾಂತಗಳು ಹೇಳಲ್ಪಟ್ಟವು. ಒಂದು ದೃಷ್ಟಾಂತವೂ ಐಕ್ಯವಿಷಯಕವಾಗಿ ಹೇಳಲ್ಪಡಲಿಲ್ಲ. ಆದಕಾರಣ ಇದು ಐಕ್ಯೋಪದೇಶವಲ್ಲ, ಎಂದು ಹೇಳಿದ್ದನ್ನು ವಿವರಿಸುತ್ತಾರೆ.) ಶಕುನಿಸೂತ್ರಯೋಃ=ಪಕ್ಷಿಹಗ್ಗಗಳಿಗೂ, ನಾನಾವೃಕ್ಷರಸಾನಾಂ = ಅನೇಕ ವೃಕ್ಷರಸಗಳಿಗೂ, ನದೀ ಸಮುದ್ರಯೋಃ=ನದಿಯು ಸಮುದ್ರವೂ ಇವುಗಳಿಗೆ, ಜೀವ-ವೃಕ್ಷಯೋಃ = ಶ್ರೀ ಹರಿಯು ಮರವೂ ಇವುಗಳಿಗೆ, ಅಣಿಮಧಾನಯೋಃ = ಅಣುವಿಗೂ ಬೀಜಕ್ಕೂ ಇವುಗಳಿಗೆ, ಲವಣೋದಕಯೋಃ = ಉಪ್ಪು, ನೀರು, ಇವುಗಳಿಗೆ, ಗಂಧಾರ-ಪುರುಷಯೋಃ=ಗಂಧಾರದೇಶ, ಪುರುಷ ಇವರಿಗೆ, ಅಜ್ಞಪ್ರಾಣಾದಿನಿಯಾಮಕಯೋಃ=ಜ್ಞಾನಿಯಾಗದಿದ್ದವನೂ ( ಬಾಧಕಜ್ಞಾನವುಳ್ಳವನೂ ) ಪ್ರಾಣಾದಿನಿಯಾಮಕನೂ ಇವರಿಗೆ, ಸ್ತೇನಾಪಹಾರ್ಯಯೋಶ್ಚ=ಸ್ತೇನನಿಗೂ, ಅಪಹಾರ್ಯವಾದ ದ್ರವ್ಯಕ್ಕೂ ಆ ದ್ರವ್ಯಕ್ಕೆ ಸ್ವಾಮಿಯಾದ ರಾಜನಿಗೂ, ಐಕ್ಯಂ=ಅಭೇದವು, ನ ಹಿ = ಇಲ್ಲವಷ್ಟೆ! (ಅಂತೂ ಚೋರರಾಜರಿಗೆ ಇದ್ದಂತೆಯೇ ಜೀವೇಶ್ವರರಿಗೂ ಐಕ್ಯವಲ್ಲ. ಭೇದವೇ ಸಂ.) ॥ ೨೧೩ ॥

ನಾನಾ ವೃಕ್ಷರಸ ದೃಷ್ಟಾಂತದಲ್ಲಿಯೂ, ನದೀ ಸಮುದ್ರದೃಷ್ಟಾಂತದಲ್ಲಿಯೂ ಅವುಗಳು ಹೇಗೆ ಅಲ್ಲಿ ವಿವೇಕವನ್ನು ಹೊಂದುವುದಿಲ್ಲವೋ, ಅವುಗಳಿಗೆ 'ಯಥಾ ತತ್ರ ನ ವಿದುಃ' ಎಂದು ಭೇದಜ್ಞಾನವಿಲ್ಲವೆಂದು ಹೇಳಲ್ಪಡುತ್ತದೆ. ಅಂತೂ ಭೇದವಿಲ್ಲದಿರುವುದರಿಂದಲೇ ಭೇದಜ್ಞಾನವಿಲ್ಲವೆಂದು ಹೇಳಲ್ಪಡುತ್ತದೆ. ಆದಕಾರಣ ಹೇಗೆ ನಾನಾ ವೃಕ್ಷರಸಗಳು ಐಕ್ಯವನ್ನು ಹೊಂದಿ ಮಧುಭಾವವನ್ನು ಹೊಂದಿದವುಗಳಾಗಿ, ಭೇದವನು ತಿಳಿಯುವುದಿಲ್ಲವೋ, ಹೇಗೆ ನದಿಗಳು ಸಮುದ್ರದಿಂದ ಐಕ್ಯವನ್ನು ಹೊಂದಿದ್ದಾವೋ, ಹಾಗೆಯೇ, ಜೀವರು ಪರಮಾನಂದವುಳ್ಳ ಅಪರಿಚ್ಛಿನ್ನನಾದ ಬ್ರಹ್ಮನಿಂದ ಸುಪ್ತಿಯಲ್ಲಿಯೂ ಮುಕ್ತಿಯಲ್ಲಿಯೂ ಐಕ್ಯವನ್ನು ಹೊಂದಿದವರಾಗಿ ಭೇದವನ್ನು ನೋಡುವದಿಲ್ಲವೆಂದು ವ್ಯಾಖ್ಯಾನಮಾಡಲಿಕ್ಕೆ ಶಕ್ಯವಾಗುವುದು. ಆದಕಾರಣ ಒಂದೂ ದೃಷ್ಟಾಂತವು ಐಕ್ಯವಿಷಯಕವಾಗುವುದಿಲ್ಲವೆಂದು ಹೇಗೆ ಹೇಳಲ್ಪಡುತ್ತದೆ ಎಂದರೆ —

ಮೂ || ಸತಿ ಸಂಪದ್ಯ ನ ವಿದುಃ ಸತಿ ಸಂಪತ್ಸ್ಯಾಮಹ ಇತಿ ತ ಇಹ ವ್ಯಾಘ್ರೋ ವಾ ಸಿಂಹೋ ವೇತಿ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹ ಇತಿ ತ ಇಹ ವ್ಯಾಘ್ರೋ ವಾ ಸಿಂಹೋ ವೇತಿ ಭೇದಾಪರಿಜ್ಞಾನಾ-ನೇನಾನರ್ಥವಚನಾಚ್ಚ || ೨೧೪ ||

ಅ || ಸತಿ = ಸದ್ರೂಪನಾದ ಬ್ರಹ್ಮನಲ್ಲಿ, ಸಂಪದ್ಯ = ಪ್ರವೇಶಿಸಿ, ಸತಿ = ಬ್ರಹ್ಮನಲ್ಲಿ, ಸಂಪತ್ಸ್ಯಾಮಹೇ=ಸೇರುವೆವು, ಇತಿ=ಹೀಗೆ, ನ ವಿದುಃ=ತಿಳಿಯುವುದಿಲ್ಲ. ತೇ=ಅವುಗಳು, ಇಹ=ಇಲ್ಲಿ, ವ್ಯಾಘ್ರೋ ವಾ=ಹುಲಿಯಾಗಲೀ, ಸಿಂಹೋ ವಾ=ಸಿಂಹವಾಗಲೀ, ಇತಿ= ಹೀಗೆ, ಸತಃ=ಬ್ರಹ್ಮನಿಂದ, ಆಗಮ್ಯ=ಪ್ರಾಪಿಸಿ, ಸತಃ=ಬ್ರಹ್ಮನಿಂದ, ಆಗಚ್ಛಾಮಹೇ = ಹೊಂದುತ್ತೇವೆ, ಇತಿ=ಹೀಗೆ, ನ ವಿದುಃ=ತಿಳಿಯುವುದಿಲ್ಲ, ತೇ ಇಹ ವ್ಯಾಘ್ರೋ ವಾ ಸಿಂಹೋ ವಾ ಇತಿ (ಹಿಂದಿನಂತೆ ಅರ್ಥವು) ಭೇದಾಪರಿಜ್ಞಾನೇನ=ಭೇದಜ್ಞಾನವಿಲ್ಲದಿರುವುದ ರಿಂದ, ಅನರ್ಥವಚನಾಚ್ಚ=ಅನರ್ಥವನ್ನು ಹೇಳುವುದರಿಂದಲೂ

ತಾ || (1) ನಾನಾವೃಕ್ಷರಸ ದೃಷ್ಟಾಂತವನ್ನು ಹೇಳಿ 'ಸತಿ ಸಂಪದ್ಯ' ಎಂಬೀ ದಾಷ್ಟಾರ್ಂತಿಕ ವಾಕ್ಯದಲ್ಲಿ ನದೀ ಸಮುದ್ರದೃಷ್ಟಾಂತವನ್ನೂ ಹೇಳಿ, 'ಸತ ಆಗಮ್ಯ' ಎಂಬೀ ದಾಷ್ಟಾರ್ಂತಿಕವಾಕ್ಯದಲ್ಲಿ ಜೀವರಿಗೆ ಇರತಕ್ಕ ಭೇದಪರಿಜ್ಞಾನವಿಲ್ಲದಿರುವುದರಿಂದ ವ್ಯಾಘ್ರಸ್ವರೂಪತ್ವವೊದಲಾದ ಅನರ್ಥಗಳನ್ನು ಹೇಳಿದುದರಿಂದ ದೃಷ್ಟಾಂತವಾಕ್ಯಗಳಲ್ಲಿಯೂ ಇದ್ದ ಭೇದಪರಿಜ್ಞಾನವಿಲ್ಲವೆಂದೇ ವಿವಕ್ಷಿತವಾಗಿದೆ ಎಂದು ತಿಳಿಯಲ್ಪಡುತ್ತದೆ. (2) ನಾನಾವೃಕ್ಷರಸಗಳು ಪರಸ್ಪರ ಭಿನ್ನಗಳೇ ಆಗಿ ತನ್ನಲ್ಲಿರುವ ಭಿನ್ನವೇ ಆದ, ಅಥವಾ ತನ್ನ ಪರಿಣಾಮವಾದ ಭಿನ್ನಾಭಿನ್ನವೇ ಆದ ಪೂರ್ವದಲ್ಲಿ ಸಿದ್ಧಿಸದಿರುವ ಮಧುವನ್ನು ಹುಟ್ಟಿಸುತ್ತವೆ. ಪರಸ್ಪರವಾಗಿ ಭೇದವನ್ನು ಬಿಟ್ಟು ಪೂರ್ವದಲ್ಲಿ ಸಿದ್ಧವಾದ ಮಧುವಿನಿಂದ ಐಕ್ಯವನ್ನು ಹೊಂದುವುದಿಲ್ಲವಷ್ಟೆ || ೨೧೪ ||

ದಾಷ್ಟಾರ್ಂತಿಕವಾಕ್ಯಗಳಲ್ಲಿಯೂ ಭೇದವು ಉಂಟೆಂದು ಹೇಗೆ ತಿಳಿಯಲ್ಪಡುತ್ತದೆಂದರೆ ಜೀವರಿಗೆ ಪ್ರವೇಶ ಆಗಮನ ರೂಪಕ್ರಿಯೆಗಳನ್ನು ಕುರಿತು ಸದ್ರೂಪನಾದ ಬ್ರಹ್ಮನಿಗೆ 'ಸತಿ ಸಂಪದ್ಯ ನ ವಿದುಃ ಸತ ಆಗಮ್ಯ ನ ವಿದುಃ' ಎಂಬೀವಾಕ್ಯಗಳಿಂದ ಅಧಿಕರಣತ್ವ ಅಪಾದಾನತ್ವಗಳು ಉಕ್ತಗಳಾಗಿವೆ. ಅದರಿಂದಲೂ ಹೇಗೆ ಭೇದವು ತಿಳಿಯಲ್ಪಡುತ್ತದೆಂದರೆ ಕರ್ತನಿಗೆ ಅಧಿಕರಣ ಅಪಾದಾನಗಳಿಂದ ಭೇದವೇ ಲೋಕದಲ್ಲಿ ದೃಷ್ಟವಾಗಿದೆ ಎಂದಭಿಪ್ರಾಯವುಳ್ಳವರಾಗಿ ಹೇಳುತ್ತಾರೆ.

ಮೂ || ನ ಹಿ ಗೃಹಾದಾಗತಸ್ಯ ಗೃಹೇ ಪ್ರವಿಷ್ಟಸ್ಯ ಚ ತದೈಕ್ಯಂ || ೨೧೫ ||

ಅ || ಗೃಹಾತ್=ಮಂದಿರದಿಂದ, ಆಗತಸ್ಯ=ಬಂದವನಿಗೂ, ಗೃಹೇ=ಮಂದಿರದಲ್ಲಿ, ಪ್ರವಿಷ್ಟಸ್ಯ ಚ=ಪ್ರವೇಶಮಾಡಿದವನಿಗೂ, ತದೈಕ್ಯಂ=ಮನೆಯಿಂದ ಐಕ್ಯವು, ನ ಹಿ=ಇಲ್ಲವಷ್ಟೆ!

ತಾ || (1) ಮೂಲದಲ್ಲಿ 'ಸತಿ ಸಂಪದ್ಯ' 'ಸತ ಆಗಮ್ಯ' ಎಂದಿದ್ದರೂ ಶ್ರೌತಕ್ರಮವನ್ನು ಬಿಟ್ಟು ವಿವಕ್ಷಿಸಿಕೊಳ್ಳದೆ 'ಗೃಹಾದಾಗತಸ್ಯ ಗೃಹೇ ಪ್ರವಿಷ್ಟಸ್ಯ ಚ' ಎಂದು ಹೇಳಿರುವರು. ಅಲ್ಲದೆ ನದೀಸಮುದ್ರ ದೃಷ್ಟಾಂತದಲ್ಲಿ ಎರಡೂ ವಿವಕ್ಷಿತವಾಗಿವೆ. (2) ಕರ್ಮಕ್ಕೆ ಅಧಿಕರಣತ್ವವನ್ನು ವಿವಕ್ಷಿಸಿಕೊಂಡು ಶ್ರುತಿಯಲ್ಲಿ 'ಸತ್ ಸಂಪದ್ಯ' ಎಂದು ಹೇಳದೆ 'ಸತಿ ಸಂಪದ್ಯ' ಎಂದು ಹೇಳಿರುವರು. ಅದನ್ನನುಸರಿಸಿಯೇ 'ಗೃಹಂ ಪ್ರವಿಷ್ಟಸ್ಯ' ಎನ್ನುವ ಬದಲಿಗೆ 'ಗೃಹೇ ಪ್ರವಿಷ್ಟಸ್ಯ ಎಂದು ಹೇಳಿರುವರು. (3) ಮತ್ತು ಭೇದವೇ ಇಲ್ಲವಾದರೆ ಬ್ರಹ್ಮನಿಗೆ ಕಾಲ್ಪನಿಕ

ಅಧಿಕರಣತ್ವಾದ್ಯಜ್ಞಾನವು ವ್ಯಾಘಾತ್ವಾಪತ್ಯಾದಿರೂಪವಾದ ಅನರ್ಥಕ್ಕೆ ಕಾರಣವೆಂದು ಹೇಳಿದ್ದು ಅಯುಕ್ತವಾಗಬೇಕಾಯಿತು. ಮತ್ತು ಕರ್ತನಿಗೂ ಅಧಿಕರಣಕ್ಕೂ ಐಕ್ಯವು ಎಲ್ಲಿಯೂ ದೃಷ್ಟವಾಗಲಿಲ್ಲ ॥ ೨೧೫ ॥

ಪುನಃ ಶಂಕಿಸುತ್ತಾರೆ— ನದೀ—ಸಮುದ್ರದೃಷ್ಟಾಂತದಲ್ಲಿ ' ಸ ಸಮುದ್ರ ಏವ ಭವತಿ ' ಎಂದು ನದಿಗಳಿಗೆ ಸಮುದ್ರದಿಂದ ಐಕ್ಯವು ಹೇಳಲ್ಪಟ್ಟಪ್ರಯುಕ್ತ ಒಂದೂ ದೃಷ್ಟಾಂತವು ಐಕ್ಯ ವಿಷಯಕವಲ್ಲವೆಂದು ಹೇಳಿದ್ದು ಹೇಗೆ ಕೂಡಬಹುದೆಂದಾಶಂಕಿಸಿದರೆ —

ಮೂ ॥ ತಾಃ ಸಮುದ್ರಾತ್ಸಮುದ್ರ ಏವಾಪಿಯಂತಿ ಸ ಸಮುದ್ರ ಏವ ಭವತೀತ್ಯತ್ರಾಪಿ ಭೇದ ಏವೋಚ್ಯತೇ । ಅನ್ಯಥಾ ತಾಸ್ಸಮುದ್ರ ಏವ ಭವತೀತಿ ವ್ಯಪದೇಶಃ ಸ್ಯಾತ್ । ಅತೋ ನದ್ಯಃ ಸಮುದ್ರಾದಾಗಚ್ಛಂತಿ ತಂ ಪ್ರವಿಶಂತಿ ಚ ಸಮುದ್ರಸ್ತು ಸ ಏವ ನೈತಾಸಾಂ ಸಮುದ್ರತ್ವಂ ಭವತೀತ್ಯರ್ಥಃ ॥ ೨೧೬ ॥

ಅ ॥ ತಾಃ=ಆ ನದಿಗಳು, ಸಮುದ್ರಾತ್=ಸಮುದ್ರದಿಂದ, ಸಮುದ್ರಮೇವ=ಸಮುದ್ರವನ್ನೇ, ಅಪಿಯಂತಿ=ಸೇರುತ್ತವೆ. ಸ ಏವ ಸಮುದ್ರೋ ಭವತಿ=ಸಮುದ್ರವೇ ಸಮುದ್ರವು ಆಗುತ್ತದೆ. ಇತ್ಯತ್ರಾಪಿ=ಇಲ್ಲಿಯೂ, ಭೇದ ಏವ=ಭೇದವೇ, ಉಚ್ಯತೇ=ಹೇಳಲ್ಪಡುತ್ತದೆ. (ಅಭೇದವು ಹೇಳಲ್ಪಡುವುದೇ ಇಲ್ಲ, ಹೇಗೆಂದರೆ) ಅನ್ಯಥಾ=ಅಲ್ಲವಾದರೆ, ತಾಃ=ಆ ನದಿಗಳು, ಸಮುದ್ರ ಏವ=ಸಮುದ್ರವೇ, ಭವತಿ=ಆಗುತ್ತದೆ, ಇತಿ=ಹೀಗೆ, ವ್ಯಪದೇಶಃ=ಹೇಳೋಣವು, ಸ್ಯಾತ್ = ಆಗಬೇಕಾಗುವುದು. (ಅಂತೂ ಈ ವಾಕ್ಯದಲ್ಲಿ ನದಿಗಳನ್ನುದ್ದೇಶಿಸಿ ಅವುಗಳಿಗೆ ಸಮುದ್ರತ್ವವನ್ನು ವಿಧಿಸಿದ್ದರೆ 'ತಾಃ ಸಮುದ್ರ ಏವ ಭವಂತಿ ' ಎಂದು ಪಾಠವಿರಬೇಕಿತ್ತು. ಹೀಗೆ ಇಲ್ಲವು. ಆದಕಾರಣ ಇಲ್ಲಿ ಅಭೇದವು ಹೇಳಲ್ಪಡುವುದಿಲ್ಲ.) (ಆದರೂ ಭೇದೋಕ್ತಿಯೆಂದು ಹೇಳಿರುವುದು ಹೇಗೆ ಕೂಡಬಹುದೆಂದರೆ), ಅತಃ=ಬೇರೆ ಪ್ರಕಾರಗಳು ಕೂಡದಿರುವುದರಿಂದ, ನದ್ಯಃ=ನದಿಗಳು, ಸಮುದ್ರಾತ್=ಸಮುದ್ರದಿಂದ, ಆಗಚ್ಛಂತಿ=ಬರುತ್ತವೆ, ತಂ=ಆ ಸಮುದ್ರವನ್ನು, ಪ್ರವಿಶಂತಿ ಚ=ಪ್ರವೇಶಿಸುತ್ತವೆ, ಸಮುದ್ರಸ್ತು=ಸಮುದ್ರವಾದರೂ, ಸ ಏವ=ಅದೇ ಸಂ. ಏತಾಸಾಂ=ಈ ನದಿಗಳಿಗೆ, ಸಮುದ್ರತ್ವಂ=ಸಮುದ್ರದ ಅಭೇದವು, ನ ಹಿ ಭವತಿ= ಆಗುವುದಿಲ್ಲ, ಇತಿ ಅರ್ಥಃ=ಹೀಗೆ ಅರ್ಥವು.

ತಾ ॥ (1) 'ಸಮುದ್ರಮೇವ ಅಪಿಯಂತಿ ' ಎನ್ನುವುದರ ಅರ್ಥವು 'ತಂ ಪ್ರವಿಶಂತಿ ' ಎನ್ನುವುದು. (2) ' ಸ ಸಮುದ್ರ ಏವ ಭವತಿ ' ಎನ್ನುವುದರ ಅರ್ಥವು ' ಸಮುದ್ರಸ್ತು ಸ ಏವ ' ಎನ್ನುವುದು. ' ನೈತಾಸಾಂ ಸಮುದ್ರತ್ವಂ ' ಎನ್ನುವುದು 'ಏವ' ಶಬ್ದಾರ್ಥವಿವರಣವು ॥ ೨೧೬ ॥

ನದಿಗಳನ್ನುದ್ದೇಶಿಸಿ ಅವುಗಳಿಗೆ ಸಮುದ್ರತ್ವವನ್ನು ವಿಧಿಸಿದರೆ ಆಗ 'ತಾಃ ಸಮುದ್ರಃ,' ಎಂದು ಹೇಳಬೇಕಿದ್ದಿತು. ಆದರೆ ಹೀಗೆ ಇಲ್ಲವು. ಮತ್ತೆ ನದಿಗಳು ಸಮುದ್ರಕ್ಕೆ ಪ್ರವೇಶಿಸಿದಮೇಲೆ ಆ ಎಲ್ಲಾ ಜಲಸಮುದಾಯವೂ ಐಕ್ಯವಾಗಿ ಸಮುದ್ರವೇ ಆಗುತ್ತದೆ ಎಂದು ವ್ಯಾಖ್ಯಾನಮಾಡಲ್ಪಡುತ್ತದೆ. ಎಂದರೆ ಹೀಗೆ ಹೇಳಿದರೆ 'ಕಥಂಚಿತ್' ಶಬ್ದದೋಷವಿಲ್ಲವೆಂದು ಆಗುವುದು. ಅರ್ಥದೋಷವಿದ್ದೇ ಇದೆ. ಹೇಗೆಂದರೆ — (೧) ಸಮುದ್ರಾಖ್ಯಜಲರಾಶಿಯಲ್ಲಿ ನದೀಜಲಗಳಿಗೆ ಪ್ರವೇಶವಾಗೋಣ ಪರಸ್ಪರ ವೇಗಾದಿಗಳಿಂದ ಮಾಡಲ್ಪಟ್ಟ ದೃಢಸಂಬಂಧದಿಂದಾಗಲೀ, ಪ್ರಬಲಗಳಾದ ಅಲೆಗಳ ಪ್ರಹಾರದಿಂದಾಗಲೀ ಅವಯವಗಳಲ್ಲಿ ಕ್ರಿಯೆಹುಟ್ಟಿ ವಿಭಾಗವೊದಲಾದ ಕ್ರಮದಿಂದ ದ್ವ್ಯಣುಕ

ಪರ್ಯಂತಗಳಾದ ಅವಯವಿಗಳ ಅವಯವನಾಶವಾಗೋಣ ನದೀ ಸಮುದ್ರಕಾರಣಗಳಾದ ಪರಮಾಣುಗಳಿಗೆ ಪರಸ್ಪರ ಐಕ್ಯವಾಗುವುದೋ, ಅಥವಾ (೨) ನದೀಸಮುದ್ರಕಾರಣಗಳಾದ ಭಿನ್ನಗಳೇ ಆದ ಪರಮಾಣುಗಳಿಂದ ಸಮುದ್ರಾಖ್ಯ ಒಂದೇ ಸಮುದ್ರಾಖ್ಯ ಅವಯವಿಯು ಹುಟ್ಟುತ್ತದೋ, (೩) ಅಥವಾ ಅವಿನಷ್ಟಗಳೇ ಆದ ಅವಯವಿಗಳಿಗೆ ಪರಸ್ಪರವಾಗಿ ಐಕ್ಯವಾಗುವುದೋ ಎನೇದ್ದನ್ನು ದೂಷಿಸುತ್ತಾರೆ.

ಮೂ ॥ ನ ಹಿ ಭಿನ್ನಾನಾಂ ನದೀ ಜಲಪರಮಾಣೂನಾಂ ಸಾಮುದ್ರಾಣುಭಿಃ ರೈಕ್ಯಂ ಯುಜ್ಯತೇ । ತಥಾ ಸತಿ ಮಹಾಜನಸಮಿತೌ ಪ್ರವಿಷ್ಟಾನಾಂ ದ್ವಿತ್ರಾಣಾಂ ತದೈಕ್ಯಂ ಸ್ಯಾತ್ । ನ ಚ ತದ್ಯುಜ್ಯತೇ । ಭೇದೇನಾನುಭವಾತ್ ॥ ೨೧೭ ॥

ಅ ॥ ಭಿನ್ನಾನಾಂ=ಭೇದವುಳ್ಳ, ನದೀಜಲಪರಮಾಣೂನಾಂ=ನದೀಜಲದ ಪರಮಾಣುಗಳಿಗೆ, ಸಾಮುದ್ರಾಣುಭಿಃ = ಸಮುದ್ರದ ಪರಮಾಣುಗಳಿಂದ, ಐಕ್ಯಂ = ಅಭೇದವು, ನ ಹಿ ಯುಜ್ಯತೇ=ಕೂಡುವುದಿಲ್ಲ. (ತಥಾ ಚ ವಿಮತಾಃ ಪರಮಾಣವಃ ನ ಪರಸ್ಪರಮೇಕೀಭವಂತಿ ಭಿನ್ನತ್ವಾತ್ ಜಲಾನಲವತ್=ವಿವಾದವಿಷಯಗಳಾದ ಪರಮಾಣುಗಳು ಪರಸ್ಪರವಾಗಿ ಐಕ್ಯಗಳಾಗುವುದಿಲ್ಲ. ಭಿನ್ನವಾದವ್ರಯುಕ್ತ, ನೀರು ಬೆಂಕಿಗಳಂತೆ, ಎಂದುಕ್ತವಾಯಿತು.) (ಭೇದವಿದ್ದರೂ ಸಜಾತೀಯಗಳು ಸಮುದ್ರವನ್ನು ಪ್ರವೇಶಿಸಿರುವುದರಿಂದ ಅವುಗಳಿಗೆ ಐಕ್ಯವಾಗುವುದೆಂದಂಗೀಕರಿಸಿದರೆ ದೋಷವಿಲ್ಲವೆಂದರೆ) ತಥಾ ಸತಿ=ಹಾಗೆ ಹೇಳಿದರೆ, ಮಹಾಜನಸಮಿತೌ=ಮಹಾಜನರ ಸಭೆಯಲ್ಲಿ, ಪ್ರವಿಷ್ಟಾನಾಂ=ಪ್ರವೇಶಿಸಿದ, ದ್ವಿತ್ರಾಣಾಂ=ಇಬ್ಬರು ಮೂವರಿಗೆ, ತದೈಕ್ಯಂ=ಸಭೆಯಿಂದ ಐಕ್ಯವು, ಸ್ಯಾತ್=ಬರಬೇಕಾಗುವುದು. (ಸಜಾತೀಯತ್ವದಿಂದ ವಿಶೇಷವಿಲ್ಲದಿರುವುದರಿಂದ) ತತ್=ಆ ಐಕ್ಯವು, ನ ಚ ಯುಜ್ಯತೇ=ಕೂಡುವುದಿಲ್ಲ. (ಐಕ್ಯವೇ ಆಗುವುದಾದರೆ ವೃದ್ಧಿಯೂ ಇಲ್ಲದೆ ಹೋಗಬೇಕಾಗುವುದು ಎಂಬೀ ಬಾಧಕವೂ ಸ್ಪಷ್ಟವಾಗಿಯೇ ಇದೆ.) ಭೇದೇನ=ಭೇದದಿಂದಲೇ, ಅನುಭವಾತ್=ಸಾಕ್ಷ್ಯನುಭವವಿದ್ದುದರಿಂದಲೂ,

ತಾ ॥ (1) ಸಭೆಯಲ್ಲಿ ಪ್ರವೇಶಿಸಿದ ಇಬ್ಬರು ಯಾ ಮೂವರಿಗೆ ಸಭೆಯಿಂದ ಐಕ್ಯ ಬರಬೇಕಾಗುವುದು ಎಂದಾಪಾದಿಸಿರುವುದರಿಂದಲೂ, ವೃದ್ಧಿಯು ಇಲ್ಲದೆ ಹೋಗಬೇಕಾಗುವುದು ಎಂದಾಪಾದಿಸಿರುವುದರಿಂದಲೂ 'ವಿನಷ್ಟಗಳಾಗದೆ ಇದ್ದ ಅವಯವಗಳಿಗೆ ಪರಸ್ಪರ ಐಕ್ಯವು' ಎಂಬೀ ೩ನೇ ಕಲ್ಪವು ತಿರಸ್ಕೃತವಾಯಿತು. (2) ೨ನೇ ಕಲ್ಪದಲ್ಲಿ ಯಾರಿಗೂ ಯಾರಿಂದಲೂ ಐಕ್ಯವು ಬಾರದೆ ಹೋಗಬೇಕಾಗುವುದು. ಅಂದರೆ — ನದೀ ಸಮುದ್ರರೂಪವಾದ ಅವಯವಿಯು ನಷ್ಟವಾಗಿ ಭಿನ್ನಗಳೇ ಆದ ನದೀಸಮುದ್ರ ಪರಮಾಣುಗಳಿಂದ ಸಮುದ್ರರೂಪವಾದ ಸ್ವತಂತ್ರವಾದ ಒಂದೇ ಅವಯವಿಯು ಹುಟ್ಟುವುದರಿಂದ ಯಾರಿಗೆ ಯಾರಿಂದ ಐಕ್ಯವಾಗುವುದು, ಮತ್ತು ಈ ಪಕ್ಷವು ನಿನಗೆ ವಿರುದ್ಧವೇ ಆಗಿರುತ್ತದೆ. ಏಕೆಂದರೆ — ಜೀವಬ್ರಹ್ಮರು ನಷ್ಟರಾಗಿ ಇನ್ನೊಂದು ವಸ್ತುವು ಹುಟ್ಟುತ್ತದೆ ಎಂದು ಪರರೂ ಅಂಗೀಕರಿಸಲಿಲ್ಲವು. ಆದಕಾರಣ ಅವಯವಿಗಳು ನಷ್ಟಗಳಾಗುವಾಗ ಪರಮಾಣುಗಳ ಸಂಯೋಗದಿಂದ ಮತ್ತೊಂದು ಅವಯವಿಯು ಹುಟ್ಟುತ್ತದೆ ಎಂದಾಗಲೀ ನಾಶವನ್ನು ಹೊಂದದೇನೆ ಇರುವ ಅವಯವಿಗಳಿಗೆ ಕೇವಲ ಸಂಯೋಗವಾಗಲೀ ಆಗುತ್ತದೆಂದೇ ಯುಕ್ತವು. (3) ಇದೇ ನ್ಯಾಯದಿಂದ ನಾನಾ ವೃಕ್ಷರಸ ದೃಷ್ಟಾಂತದಲ್ಲಿಯೂ 'ಏಕತಾಂ' ಎನ್ನುವುದಕ್ಕೆ ಮಿಶ್ರತ್ವವನ್ನು ಎಂದೇ ಅರ್ಥವು ॥ ೨೧೭ ॥

ಯದ್ಯಪಿ ' ಶಕುನಿಸೂತ್ರ ದೃಷ್ಟಾಂತದಲ್ಲಿ ಭೇದವು ಪ್ರತೀತವಾಗುವುದು. ಆದಾಗ್ಯೂ ಅದರಲ್ಲಿ ತಾತ್ಪರ್ಯವಿಲ್ಲ. ಜೀವನಿಗೆ ಬ್ರಹ್ಮನೇ ಮುಖ್ಯಾಶ್ರಯನು ಎನ್ನುವಲ್ಲಿಯೇ ತಾತ್ಪರ್ಯವು. 'ಸ್ವಂ ಹ್ಯಪೀತೋ ಭವತಿ' ಎಂಬ ಪೂರ್ವವಾಕ್ಯದಲ್ಲಿ ಜೀವನು ಸ್ವಾತ್ಮಭೂತನಾದ ಬ್ರಹ್ಮನನ್ನು ಪ್ರವೇಶಿಸಿದವನು ಆಗುತ್ತಾನೆ ಎಂದು ಬ್ರಹ್ಮನಲ್ಲಿ ಸ್ವಸ್ವರೂಪವನ್ನು (ಜೀವನನ್ನು) ಹೇಳುವ 'ಸ್ವ'. ಶಬ್ದವನ್ನು ಪ್ರಯೋಗಿಸಿರುವುದರಿಂದ ಐಕ್ಯವು ಪ್ರತೀತವಾಗುವುದೆಂದರೆ —

ಮೂ ॥ ಸ್ವಂ ಹ್ಯಪೀತೋ ಭವತೀತ್ಯತ್ರಾಪಿ ಸ್ವ ಇತಿ ಪರಮಾತ್ಮನೋಽಭಿಧಾನಂ । ಸ್ವಾತ್ಮನಾ ಚೋತ್ತರಯೋರಿತಿ ಸೂತ್ರಾತ್ । ಸ್ವಾತಂತ್ರ್ಯಾತ್ಸ್ವ ಇತಿ ಪ್ರೋಕ್ತ ಆತ್ಮಾಽಯಂ ಚಾತತತ್ವತಃ । ಬ್ರಹ್ಮಾಽಯಂ ಗುಣಪೂರ್ಣತ್ವಾದ್ಭಗವಾನ್ವಿಷ್ಣುರವ್ಯಯಃ ॥ ಇತಿ ಪರಮೋಪನಿಷದಿ ॥ ೨೧೮ ॥

ಅ ॥ (1) (ಯಾವ ಕಾರಣದಿಂದ) ಸ್ವಃ ಇತಿ=ಸ್ವಃ ಎನ್ನುವುದು, ಪರಮಾತ್ಮನಃ= ಪರಬ್ರಹ್ಮನಿಗೆ, ಅಭಿಧಾನಂ=ಹೆಸರು ಆಗುತ್ತದೋ, (ಆದಕಾರಣ) 'ಸ್ವಂ ಹ್ಯಪೀತೋ ಭವತಿ' ಇತ್ಯತ್ರಾಪಿ=ಎನ್ನುವಲ್ಲಿಯೂ, (ಐಕ್ಯವು ಹೇಳಲ್ಪಡುವುದಿಲ್ಲ) (2) (ಜ್ಞಸ್ಯ=ಜೀವನಿಗೆ, ಉತ್ಕ್ರಾಂತ್ಯಾದಯಃ=ಉತ್ಕ್ರಮಣ ಮೊದಲಾದುವುಗಳು) ಸ್ವಾತ್ಮನಾ ಚ=ಪರಬ್ರಹ್ಮನಿಂದಲೇ, (ಭವಂತಿ= ಆಗುತ್ತವೆ.) ಉತ್ತರಯೋಃ='ಸ ಏತೇನೈವ ಸ್ವಾತ್ಮನಾ; ಏಷ ಹ್ಯೇವಾನಂದಯಾದತ್ತೇ' ಎಂಬ ಉತ್ತರವಾಕ್ಯಗಳು (ಇದ್ದುದರಿಂದ), ಇತಿ=ಹೀಗೆ, ಸೂತ್ರಾತ್=(ಬ್ರ. ಸೂ. ಅ. ೨ ಪಾ. ೩. ೨೧ನೇ) ಸೂತ್ರದಿಂದ. (3) ಭಗವಾನ್=ಪೂಜ್ಯನಾದ, ಅವ್ಯಯಃ=ಅವಿನಾಶಿಯಾದ, ವಿಷ್ಣುಃ=ಶ್ರೀ ಹರಿಯು, ಸ್ವಾತಂತ್ರ್ಯಾತ್=ಸರ್ವ ಸ್ವಾತಂತ್ರ್ಯವಿದ್ದುದರಿಂದ, ಸ್ವ ಇತಿ=ಸ್ವ ಎಂದು, ಪ್ರೋಕ್ತಃ= ಹೇಳಲ್ಪಟ್ಟದ್ದಾನೆ. ಅಯಂ=ಈತನು, ಆತತತ್ವತಃ = ವ್ಯಾಪ್ತನಾದಪ್ರಯುಕ್ತ, ಆತ್ಮಾ ಚ = ಆತ್ಮನೆನ್ನಿಸಿಕೊಳ್ಳುತ್ತಾನೆ. ಅಯಂ=ಈತನು, ಗುಣಪೂರ್ಣತ್ವಾತ್=ಗುಣಸಂಪೂರ್ಣನಾದುದರಿಂದ, ಬ್ರಹ್ಮ=ಪರಬ್ರಹ್ಮನೆನ್ನಿಸಿಕೊಳ್ಳುತ್ತಾನೆ. ಇತಿ=ಹೀಗೆ, ಪರಮೋಪನಿಷದಿ=ಪರಮೋಪನಿಷತ್ತಿನಲ್ಲಿದೆ.

ತಾ ॥ (1) ಈ ಸ್ವ ಶಬ್ದವು ಜೀವನೊಳಗೆ ಇರುವ ಪ್ರತ್ಯಕ್ತ್ವವನ್ನು ನಿಮಿತ್ತೀಕರಿಸಿಕೊಂಡು ಜೀವನನ್ನೇ ಹೇಳುವುದಾದರೆ ಆಗಬಹುದಿತ್ತು. ಆದರೆ, ಹೀಗೆ ಇಲ್ಲವು. ಏಕೆಂದರೆ, ಮಹಾಪ್ರಾಜ್ಞರ ಪ್ರಯೋಗವು ಕಂಡದ್ದರಿಂದ ಪರಬಹ್ಮನಿಗೇನೇ ನಾಮಧೇಯವು. (2) 'ಸೋಽಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಮಭಿಗಚ್ಛತ್ಯಮುಷ್ಮಾದಿಮಂ ಲೋಕಮಾಗಚ್ಛತಿ' ಎಂಬ ವಾಕ್ಯದಲ್ಲಿ ಹೇಳಿದ ಉತ್ಕ್ರಮಣ ಮೊದಲಾದುವುಗಳು ಶ್ರೀ ಹರಿಯಿಂದಲೇ ಆಗುತ್ತವೆ. 'ಸ ಏತೇನೈವ ಸ್ವಾತ್ಮನಾ ಪರೇಣೇಮಂ ಗರ್ಭಮಾವಿಶತಿ ಪರೇಣ ಜಾಯತೇ ಪರೇಣ ಕರ್ಮ ಕುರುತೇ ಪರೇಣ ನೀಯತೇ ಪರೇಣೋನ್ನೀಯತೇ ತಂ ವಾ ಏತಮಭಿವದಂತಿ ಸ್ವಾತ್ಮೇತಿ । ಏಷ ಹ್ಯೇವಾನಂದಮಾದತ್ತೇ ಏಷ ಹ್ಯೇನಂ ಜೀವಮಭಿಜೀವಯತ್ಯೇಷ ಉದ್ಗಮಯತ್ಯೇಷ ಆಗಮಯತಿ' ಎಂಬ ಮೇಲಿನ ವಾಕ್ಯಗಳಲ್ಲಿ ಸ್ಪಷ್ಟವಾಗಿ ತೋರುವುದರಿಂದ ಹೀಗೆ ತಿಳಿಯುತ್ತದೆ ॥ ೨೧೮ ॥

ಆದಾಗ್ಯೂ ' ಅಪೀತ ' ಶಬ್ದದಿಂದ ಐಕ್ಯವು ಹೇಳಲ್ಪಟ್ಟ ಪ್ರಯುಕ್ತ ಶಕುನಿಸೂತ್ರ ದೃಷ್ಟಾಂತಕ್ಕೆ ಭೇದದಲ್ಲಿ ತಾತ್ಪರ್ಯವಿಲ್ಲ. 'ಏಕೀಭವತಿ' ಎನ್ನುವುದಕ್ಕೂ 'ಅಪೀತೋ ಭವತಿ' ಎನ್ನುವುದಕ್ಕೂ ಒಂದೇ ಅರ್ಥವೆಂದು ಹೇಳಕೂಡದು. ಏಕೆಂದರೆ— ಅಪೀತ ಶಬ್ದಕ್ಕೆ ಅವಯವ ವೃತ್ತಿಯನ್ನಾಶ್ರಯಿಸಿ ಐಕ್ಯವು ಅರ್ಥವು ಎಂದು ಹೇಳುತ್ತೀರೋ, (೨) ರೂಢಿಯನ್ನಾಶ್ರಯಿಸಿ

ಕೊಂಡು ಎಂದು ಹೇಳುತ್ತೀರೋ, ೧ನೇ ಅರ್ಥದಲ್ಲಿ ಅವಯವವೃತ್ತಿಯಿಂದ ಐಕ್ಯವು ಲಬ್ಧವಾಗುವುದಿಲ್ಲವೆಂದು ನಿರೂಪಿಸಿರುತ್ತಾರೆ —

**ಮೂ ॥ ಅಪೀತ ಇತ್ಯತ್ರಾಪಿ ಪ್ರವೇಶಮಾತ್ರಂ । ಸ್ವಮಿತಿ ದ್ವಿತೀಯಾ ನಿರ್ದೇಶಾತ್ ॥ ೨೧೯ ॥**

ಅ ॥ ಅಪೀತ ಇತ್ಯಪಿ=' ಅಪೀತಃ ' ಎನ್ನುವುದರಿಂದಲೂ ಕೂಡ, ಪ್ರವೇಶಮಾತ್ರಂ= ಕೇವಲ ಪ್ರವೇಶವು, (ಲಬ್ಧವಾಗುತ್ತದೆ. ಐಕ್ಯವು ಲಬ್ಧವಾಗುವುದಿಲ್ಲ. ಅಂದರೆ — ಸ್ವಶಬ್ದವು ಮಾತ್ರ ಐಕ್ಯವನ್ನು ತಿಳಿಸಿಕೊಡುವುದಿಲ್ಲವೆಂದಲ್ಲ. ಅಪೀತಶಬ್ದವೂ ತಿಳಿಸಿಕೊಡುವುದಿಲ್ಲ. ಏಕೆಂದರೆ— 'ಅಪಿ ' ಶಬ್ದವು ಆಚ್ಛಾದನ ಎನ್ನುವ ಅರ್ಥದಲ್ಲಿದೆ. ಇಣ್ ಧಾತುವು ಗತ್ಯರ್ಥಕವು. ನಿಷ್ಠಾ ಪ್ರತ್ಯಯವು ಕರ್ತ್ರರ್ಥಕವು. ಅಂತೂ ಆಚ್ಛಾದಿತನಿಗೆ ಪ್ರವೇಶವಾಗುವಾಗ ಪ್ರಾಪ್ತಿಯು ಕೂಡಬಹುದು. ೨ನೇದ್ದೂ ಕೂಡುವುದಿಲ್ಲ; ಏಕೆಂದರೆ —) ಸ್ವಮಿತಿ=ಸ್ವಂ ಎಂದು ದ್ವಿತೀಯಾ ವಿಭಕ್ತಿಯನ್ನು ನಿರ್ದೇಶಮಾಡಿರುವುದರಿಂದ.

ತಾ ॥ ರೂಢಿಯಾದರೆ ಅಪೀತಶಬ್ದವು ಐಕ್ಯಪರ್ಯಾಯವೆಂದಂಗೀಕರಿಸಬೇಕು. ಆ ಅಪೀತಶಬ್ದವು ಕ್ರಿಯಾವಾಚಕವಾಗದಿರುವುದರಿಂದ ಸತ್ತಾರ್ಥಕವಾದ ಭೂ ಧಾತುವು ಅಕರ್ಮಕವಾಗಿರುವುದರಿಂದ ಕರ್ಮದ ಅಪೇಕ್ಷೆಯೇ ಇಲ್ಲದಿರಲು ' ಸ್ವಂ ' ಎಂದು ಕರ್ಮಾರ್ಥಕವಾದ ದ್ವಿತೀಯಾನಿರ್ದೇಶವು ಕೂಡಲಾರದು. ಅವಯವವೃತ್ತಿಯನ್ನಂಗೀಕರಿಸಿದರೆ ಇಣ್ ಧಾತುವು ಸಕರ್ಮಕವಾದುದರಿಂದ ದ್ವಿತೀಯಾವಿಭಕ್ತಿಯು ಉಪಪನ್ನವೇ ಆಗುತ್ತದೆ ॥ ೨೧೯ ॥

ಹೀಗೆ ರೂಢಿಯೆಂದಗೀಕರಿಸಿದರೆ ಶ್ರುತವಾದ ದ್ವಿತೀಯಾವಿಭಕ್ತಿಗೆ ಹಾನಿ ಬರಬೇಕಾಗುವುದೆಂದು ಹೇಳಿ ಅಶ್ರುತವಾದುದನ್ನು ಕಲ್ಪಿಸಬೇಕಾಗುವುದು ಎಂದು ನಿರೂಪಿಸುತ್ತಾರೆ —

**ಮೂ ॥ ಏಕೀಭಾವವಿವಕ್ಷಾಯಾಂ ಸ್ವೇನೇತಿ ನಿರ್ದೇಶಃ ಸ್ಯಾತ್ । ಸ್ವಂ ಕುಲಾಯಂ ಯಥಾಽಪೀತಃ ಪಕ್ಷಿಸ್ಸ್ಯಾದೇವಮೀಶ್ವರಂ । ಅಪ್ಯೇತಿ ಜೀವಃ ಪ್ರಸ್ವಾಪೇ ಮುಕ್ತೌ ಚಾನ್ಯೋಽಪಿ ಸನ್ಸದಾ ॥ ಇತಿ ಚ ॥ ೨೨೦ ॥**

ಅ ॥ ಏಕೀಭಾವವಿವಕ್ಷಾಯಾಂ=ಐಕ್ಯರೂಪ ಅರ್ಥವನ್ನು ವಿವಕ್ಷಿಸಿದರೆ, 'ಸ್ವೇನ' ಇತಿ ನಿರ್ದೇಶಃ=' ಸ್ವೇನ ' (ಬ್ರಹ್ಮನಿಂದ) ಎಂದು ನಿರ್ದೇಶವು, ಸ್ಯಾತ್=ಆಗ ಬೇಕಿದ್ದಿತು. ('ಸ್ವಂ' ಎಂದು ಆಗದೆ ಹೊಗಬೇಕಿದ್ದಿತು)

(ಹೀಗೆ ರೂಢಿಯೆಂದಂಗೀಕರಿಸಿದರೆ ವಿಭಕ್ತಿಯು ಕೂಡದಿರುವುದರಿಂದ ಯೋಗವೆಂದೇ ಅವಶ್ಯವಾಗಿ ಆಶ್ರಯಿಸುವಾಗ ' ಅಪೀತ ಶಬ್ದಕ್ಕೆ ಪ್ರವೇಶವೆಂದೇ ಅರ್ಥವು ಲಬ್ಧವಾಗುತ್ತದೆಂದು ಉಕ್ತವಾಯಿತು. ಸಮಾಖ್ಯೆಯಿಂದಲೂ ಹೀಗೆಯೇ ಎಂದು ನಿರೂಪಿಸುತ್ತಾರೆ.) ಯಥಾ= ಹೇಗೆ, ಪಕ್ಷೀ=ಹಕ್ಕಿಯು, ಸ್ವಂ=ತನ್ನದಾದ, ಕುಲಾಯಂ=ಗೂಡನ್ನು ಅಪೀತಃ=ಪ್ರವೇಶ ಮಾಡಿದ್ದಾಗಿ, ಸ್ಯಾತ್=ಆಗುವುದೋ, ಏವಂ=ಹೀಗೆಯೇ, ಜೀವಃ=ಜೀವನು, ಪ್ರಸ್ವಾಪೇ= ಸುಪ್ತಿಯಲ್ಲಿ, ಅನ್ಯೋಽಪಿ=ಮತ್ತೊಬ್ಬನಾದಾಗ್ಯೂ, ಸನ್ = ನಿರ್ದುಃಖನಾದವನು, ಸದಾ= ಯಾವಾಗಲೂ, ಮುಕ್ತೌ ಚ = ಮುಕ್ತಿಯಲ್ಲಾದರೂ, ಈಶ್ವರಂ = ಶ್ರೀ ಪರಬ್ರಹ್ಮನನ್ನು, ಅಪ್ಯೇತಿ=ಪ್ರವೇಶಿಸುತ್ತಾನೆ. ಇತಿ ಚ=ಹೀಗೂ ಆದೆ,

ತಾ ॥ ಹೀಗೆ ಅಪೀತಶಬ್ದಕ್ಕೆ ಪ್ರವೇಶವೆಂಬ ಅರ್ಥವು ಸಿದ್ಧವಾಗುವಾಗ ಯದ್ಯಪಿ ಸ್ವಶಬ್ದವು ಜೀವವಾಚಕವು, ಆದರೂ ಇಲ್ಲಿ ಈ ಅರ್ಥವನ್ನು ಸ್ವೀಕರಿಸುವುದು ಯೋಗ್ಯವಲ್ಲ. ತನಗೆ ತನ್ನಲ್ಲಿ ಪ್ರವೇಶವು ಕೂಡಲಾರದಷ್ಟೆ! ಮತ್ತೆ ಪರಮೇಶ್ವರನನ್ನು ಪ್ರತಿಪಾದಿಸತಕ್ಕದೆಂದೇ ಸ್ವೀಕರಿಸಬೇಕೆಂದು ಸಿದ್ಧವಾಯಿತು ॥ ೨೨೦ ॥

ಶಕುನಿಸೂತ್ರದೃಷ್ಟಾಂತವನ್ನು ಹೇಳಿ ದಾರ್ಷ್ಟಾಂತಿಕದಲ್ಲಿ ಮನಸ್ಸು ಪ್ರಾಣನನ್ನಾಶ್ರಯಿಸಿ ಕೊಂಡಿದೆ ಎಂದು ಹೇಳಲ್ಪಡುತ್ತದೆ. ಆದಕಾರಣ ಎಲ್ಲಾ ದೃಷ್ಟಾಂತಗಳೂ ಜೀವೇಶ್ವರ ಭೇದ ವಿಷಯಕಗಳೆಂದು ಹೇಳಲ್ಪಟ್ಟದ್ದು ಹೇಗೆ ಕೂಡುತ್ತವೆ ಎಂದರೆ --

ಮೂ ॥ ಏವಮೇವ ಖಲು ಸೋಽಮ್ಯೈತನ್ಮನೋ ದಿಶಂ ದಿಶಂ ಪತಿತ್ವಾನ್ಯತ್ರಾಯತನಮಲಬ್ಧ್ವಾ ಪ್ರಾಣಮೇವೋಪಾಶ್ರಯತ ಇತ್ಯತ್ರಾಪಿ ಮನ ಇತಿ ಜೀವಃ ಪ್ರಾಣ ಇತಿ ಪರಮಾತ್ಮಾ । ಯತ್ರಾಯಂ ಪುರುಷಃ ಸ್ವಪಿತಿ ನಾಮೇತಿ ತಯೋರೇವ ಪ್ರಸ್ತುತತ್ವಾತ್ ॥ ೨೨೧ ॥

ಅ ॥ ಸೋಽಮ್ಯ=ಶ್ವೇತಕೇತುವೇ, ಏವಮೇವ ಖಲು=ಹೀಗೆಯೇ, ಏತನ್ಮನಃ=ಈ ಮನಸ್ಸು, (ಜೀವನು) ದಿಶಂ ದಿಶಂ=ಪ್ರತಿ ದಿಕ್ಕನ್ನು ಕುರಿತು. ಪತಿತ್ವಾ=ಹಾರಿ, ಅನ್ಯತ್ರ= ಬೇರೆಕಡೆ. ಆಯತನಂ=ಆಶ್ರಯವನ್ನು, ಅಲಬ್ಧ್ವಾ=ಹೊಂದದೆ, ಪ್ರಾಣಮೇವ=ಪ್ರಾಣನನ್ನೇ (ಶ್ರೀಹರಿಯನ್ನೇ), ಉಪಾಶ್ರಯತೇ = ಆಶ್ರಯಿಸುತ್ತಾನೆ. ಇತ್ಯತ್ರಾಪಿ=ಇಲ್ಲಿಯೂ, ಮನಃ ಇತಿ='ಮನಃ' ಎನ್ನುವ ಶಬ್ದದಿಂದ, ಜೀವಃ=ಜೀವನು, ಪ್ರಾಣ ಇತಿ=ಪ್ರಾಣಃ ಎನ್ನುವ ಶಬ್ದ ದಿಂದ, ಪರಮಾತ್ಮಾ=ಪರಬ್ರಹ್ಮನು, (ಹೇಳಲ್ಪಡುತ್ತಾನೆ.) 'ಯತ್ರಾಯಂ ಪುರುಷಃ ಸ್ವಪಿತಿ ನಾಮ ಸತಾ ಸೋಽಮ್ಯ ತದಾ ಸಂಪನ್ನೋ ಭವತಿ' ಇತಿ=ಎಂಬೀ ಪೂರ್ವವಾಕ್ಯದಲ್ಲಿ, ಯತ್ರ= ಯಾವ ಕಾಲದಲ್ಲಿ, ಅಯಂ ಪುರುಷಃ=ಈ ಜೀವನು, ಸ್ವಪಿತಿ=ಮಲಗಿಕೊಳ್ಳುತ್ತಾನೋ, ತದಾ=ಆಗ, ಸತಾ=ಪರಮಾತ್ಮನಿಂದ ಸಂಪನ್ನಃ=ಸಂಗತನು, ಭವತಿ=ಆಗುತ್ತಾನೆ. ಇತಿ= ಹೀಗೆ, (ಪುರುಷ ಸತ್ ಶಬ್ದಗಳಿಂದ) ತಯೋರೇವ=ಆ ಜೀವೇಶ್ವರರಿಗೇನೇ, ಪ್ರಸ್ತುತ- ತ್ವಾತ್=ಆಶ್ರಯಾಶ್ರಯಿಭಾವದಿಂದ ಪ್ರಕೃತವಾದ ಪ್ರಯುಕ್ತ. (ಬೇರೆ ಒಂದು ಪ್ರತಿಜ್ಞೆ ಮಾಡಿ ದೃಷ್ಟಾಂತವನ್ನು ಹೇಳಿ ದಾರ್ಷ್ಟಾಂತಿಕದಲ್ಲಿ ಬೇರೆ ಒಂದು ಹೇಳಲ್ಪಡುತ್ತದೆ ಎನ್ನುವುದು ಕೂಡಲಾರದು. ಅಸಂಗತಿ ಬರಬೇಕಾಗುವುದು) ॥ ೨೨೧ ॥

ಜೀವೇಶ್ವರರೇ ಉಪಕ್ರಾಂತರಾಗಿದ್ದಾರೆ ಎಂಬೀ ತಾತ್ಪರ್ಯವನ್ನು ತಿಳಿಸಿಕೊಡತಕ್ಕ ಪ್ರಕರಣ ರೂಪವಾದ ಪ್ರಮಾಣವಿದೆ. ಮನಃ ಪ್ರಾಣ ಶಬ್ದಗಳಿಗೆ ಜೀವ ಪರಮಾತ್ಮರಲ್ಲಿ ಶಕ್ತಿಯೆಂಬು ವುದು ಹೇಗೆ ಸಿದ್ಧವಾಗುವುದೆಂದರೆ ಕ್ರಮವಾಗಿ ಎರಡು ಆಗಮ ವಾಕ್ಯಗಳನ್ನು ಪಠನ ಮಾಡುತ್ತಾರೆ —

ಮೂ ॥ ಮನನಾನ್ಮನ ಉದ್ದಿಷ್ಟಃ ಪುದ್ಗಲೋ ವಿರಯಂ ಗಿರನ್ । ಕರ್ಮಾನು ಶಯವಾಚ್ಚೈವ ಸಂಸಾರ್ಯನುಶಯೀ ಸ್ಮೃತಃ । ಇತಿ ಚ ಪರಮೇಪು ನಿಷದಿ । ಪ್ರಾಣಃ ಪ್ರಣಯನಾದೇಷ ಸಾಧುತ್ವಾತ್ಸನ್ಹರಿಃ ಸ್ಮೃತಃ ॥ ಇತಿ ಚ ॥ ೨೨೨ ॥

ಅ ॥ ಸಂಸಾರೀ=ಜೀವನು, ಮನನಾತ್=ಮನನಮಾಡುವುದರಿಂದ, (ಜ್ಞಾನಿಯಾದುದರಿಂದ) ಮನಃ=ಮನೋನಾಮಕನೆಂದು, ಉದ್ದಿಷ್ಟಃ=ಹೇಳಿಸಿಕೊಳ್ಳಲ್ಪಡುತ್ತಾನೆ. ನಿರಯಂ=ನರಕವನ್ನು, ಗಿರನ್=ಅನುಭವಿಸುವವನಾಗಿ, ಪುದ್ಗಲಃ=ಪುದ್ಗಲನೆಂದು, (ಹೇಳಿಸಿಕೊಳ್ಳಲ್ಪಡುತ್ತಾನೆ) ಕರ್ಮಾನುಶಯನಾಚ್ಚ=ಕರ್ಮವನ್ನನುಸರಿಸಿ ಸಂಸಾರದಲ್ಲಿ ಬೀಳುವುದರಿಂದ, ಸಂಸಾರೀ ಏವ=ಜೀವನೇ, ಅನುಶಯೀ=ಅನುಶಯೀ ಎಂದು, ಸ್ಮೃತಃ=ಹೇಳಲ್ಪಡುತ್ತಾನೆ. ಇತಿ ಚ=ಹೀಗೂ ಅದೆ. ಏಷಃ ಹರಿಃ=ಈ ಹರಿಯು, ಪ್ರಣಯನಾತ್=ಜಗತ್ತನ್ನು ಪ್ರವರ್ತಿಸುವುದರಿಂದ, ಪ್ರಾಣಃ=ಪ್ರಾಣನೆನ್ನಿಸುತ್ತಾನೆ. ಸಾಧುತ್ವಾತ್=ನಿರ್ದೋಷನಾದುದರಿಂದ, ಸನ್=ಸನ್ ಎಂದು, ಸ್ಮೃತಃ=ಪ್ರತಿಪಾದಿತನಾಗಿರುತ್ತಾನೆ. ಇತಿ ಚ=ಹೀಗೂ ಉಕ್ತವಾಗಿದೆ ॥೨೨॥

ಪುನಃ ಶಂಕಿಸುತ್ತಾರೆ— ಶಕುನಿಸೂತ್ರ ದೃಷ್ಟಾಂತಪ್ರಕರಣದಲ್ಲಿ 'ಸನ್ಮೂಲಾಃ' ಎನ್ನುವುದರಿಂದ ಐಕ್ಯವು ಪ್ರತೀತವಾಗುವುದು. ಹೇಗೆಂದರೆ, ಘಟಕ್ಕೆ ಮಣ್ಣಿನಂತೆಯೇ ಅಥವಾ ಹಾವಿಗೆ ಹಗ್ಗದಂತೆಯೇ ಸರ್ವೋತ್ತಮನಾದ ಪರಬ್ರಹ್ಮನೇ ಸ್ಥಾವರ ಜಂಗಮಾತ್ಮಕಗಳಾದ ಎಲ್ಲಾ ಪ್ರಜೆಗಳಿಗೂ ಉಪಾದಾನಕಾರಣನು, ಅಂತಹ ಪ್ರಜೆಗಳು ಸನ್ಮೂಲರು. ಹಾಗೆಯೇ ಸ್ಥಿತಿಕಾಲದಲ್ಲಿಯೂ ಸದ್ರೂಪನಾದ ಪರಬ್ರಹ್ಮನೇ ಆಶ್ರಯನಾಗಿ ಉಳ್ಳ ಪ್ರಜೆಗಳು ಸದಾಯತನರು. ಘಟವು ಮಣ್ಣನ್ನು ಆಶ್ರಯಿಸದೆ ಸ್ಥಿತಿಯನ್ನು ಹೊಂದುವುದಿಲ್ಲ. ಅಂತಹದರಲ್ಲಿಯೂ ಪರಬ್ರಹ್ಮನೇ ಪರ್ಯವಸಾನವಾಗಿ ಉಳ್ಳ ಪ್ರಜೆಗಳು ಸತ್ಪ್ರತಿಷ್ಠರು, ಅಂದರೆ ಸತ್ಸ್ವರೂಪತ್ವವನ್ನೇ ಹೊಂದುತ್ತಾರೆ. ಆದಕಾರಣ ಸರ್ವವೂ ಭೇದಪರವೆನ್ನುವುದು ಹೇಗೆ ಯುಕ್ತವಾಗುವುದೆಂದರೆ-

**ಮೂ ॥ ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾ ಇತ್ಯತ್ರಾಪಿ ಭೇದ ಏವ ಪ್ರತೀಯತೇ । ಸ್ರಷ್ಟೃತ್ವಾದಾಶ್ರಯತ್ವಾಚ್ಚ ಮುಕ್ತಾನಾಂ ಚ ಪ್ರತಿ ಪ್ರತಿ । ಸ್ಥಾಪನಾಚ್ಚ ವಿಭುರ್ವಿಷ್ಣುರನ್ಯಃ ಸಂಸಾರಿಣೋ ಮತಃ ॥ ಇತಿ ಚ ॥ ೨೩ ॥**

ಅ ॥ ಸೋಮ್ಯ=ಶ್ವೇತಕೇತುವೇ, ಇಮಾಃ ಸರ್ವಾಃ ಪ್ರಜಾಃ=ಈ ಎಲ್ಲಾ ಪ್ರಜೆಗಳೂ, ಸನ್ಮೂಲಾಃ=ಪರಬ್ರಹ್ಮನೇ ಕಾರಣನಾಗಿ ಉಳ್ಳವರು, ಸದಾಯತನಾಃ=ಪರಬ್ರಹ್ಮನೇ ಆಶ್ರಯನಾಗಿ ಉಳ್ಳವರು, ಸತ್ಪ್ರತಿಷ್ಠಾಃ=ಪರಬ್ರಹ್ಮನೇ ಸ್ಥಾಪಕನಾಗಿ ಉಳ್ಳವರು, ಇತ್ಯತ್ರಾಪಿ=ಈ ವಾಕ್ಯದಲ್ಲಿಯೂ, ಭೇದ ಏವ=ಭೇದವೇ, ಪ್ರತೀಯತೇ=ತೋರುತ್ತದೆ. ವಿಭುಃ=ವ್ಯಾಪ್ತನಾದ, ವಿಷ್ಣುಃ=ಶ್ರೀಹರಿಯು, ಸ್ರಷ್ಟೃತ್ವಾತ್=ಸರ್ಜಕನಾದುದರಿಂದ, ಮುಕ್ತಾನಾಂ ಚ=ಮುಕ್ತರಿಗೂ, ಆಶ್ರಯತ್ವಾಚ್ಚ=ಆಶ್ರಯನಾದುದರಿಂದಲೂ, ಪ್ರತಿ ಪ್ರತಿ ಸ್ಥಾಪನಾಚ್ಚ = ಪ್ರತ್ಯೇಕ ಪ್ರತ್ಯೇಕ ಅವರವರಿಗೆ ಯೋಗ್ಯವಾದ ಸ್ಥಲವಿಶೇಷದಲ್ಲಿ ಸ್ಥಾಪಿಸುವುದರಿಂದಲೂ, ಸಂಸಾರಿಣಃ=ಸಂಸಾರಿಯಿಂದ, ಅನ್ಯಃ=ಭಿನ್ನನಾಗಿ, ಮತಃ=ಸಂಮತನು, ಇತಿ ಚ=ಹೀಗೂ ಅದೆ.

ತಾ ॥ ಮೂಲ, ಆಯತನ, ಪ್ರತಿಷ್ಠಾ ಶಬ್ದಗಳು ನಿಯಮವಾಗಿ ಉಪಾದಾನಾದಿ ವಾಚಕಗಳು ಆಗುವುದಿಲ್ಲ. ಮತ್ತೆ ಮೂಲಾದಿ ಶಬ್ದಗಳು ಕ್ರಮದಿಂದ ಕಾರಣ ಆಶ್ರಯ ಸ್ಥಾಪಕತ್ವಗಳನ್ನು ಮಾತ್ರ ಹೇಳುತ್ತವೆ. ಹೀಗೆ ಇರಲು ಆಗಮ ವಾಕ್ಯಾಂತರಗಳನ್ನನುಸರಿಸಿ ತಂದೆಯು ಮಗನಿಗೆ ಮೂಲನು ಆಶ್ರಯನು, ತತ್ತದ್ಯೋಗ್ಯ ವಿಶೇಷಸ್ಥಲದಲ್ಲಿ ಸ್ಥಾಪಕನು, ಎನ್ನುವಂತೆ ಭಗವಂತನು ಪ್ರಜೆಗಳಿಗೆ ನಿಮಿತ್ತಕಾರಣಾದಿ ಸ್ವರೂಪನು ಎಂದೇ ಈ ವಾಕ್ಯವನ್ನು ವ್ಯಾಖ್ಯಾನ ಮಾಡಬೇಕಾದುದರಿಂದ ಭೇದವನ್ನು ಪ್ರತಿಪಾದಿಸುವುದು ಎಂದೇ ಸಿದ್ಧವಾಗುವುದು ॥ ೨೩ ॥

ಜೀವವೃಕ್ಷ ದೃಷ್ಟಾಂತವು ಜೀವ ಪರಮಾತ್ಮರಿಗೆ ಭೇದಪ್ರತಿಪಾದಕವಲ್ಲ. ಮತ್ತೆ ಸಮುದ್ರದಲ್ಲಿ ಪ್ರವಿಷ್ಟಗಳಾದ ನದಿಗಳಂತೆಯೇ ಸುಪ್ತಿಯಲ್ಲಿಯೂ, ಪ್ರಲಯಕಾಲದಲ್ಲಿಯೂ ಪರಮಾತ್ಮನಲ್ಲಿ ಪ್ರವಿಷ್ಟನಾದ ಜೀವನಿಗೆ ವಿನಾಶವು ಬರುವುದೆಂದು ಆಶಂಕೆ ಬರಲು ವಿನಾಶ ವಿಲ್ಲವೆಂದು ಪ್ರತಿಪಾದಿಸುವುದಕ್ಕಾಗಿಯೇ ಹೇಳಿರುವುದು. ಆದಕಾರಣ ಒಂಭತ್ತು ಪ್ರಕರಣ ಗಳಲ್ಲಿಯೂ ಭೇದವೇ ಪ್ರತಿಪಾದಿತವಾಗಿದೆ ಎನ್ನುವುದು ಹೇಗೆ ಸಂಗತವಾಗುವುದೆಂದರೆ —

ಮೂ ॥ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ ಸ ಏಷ ಜೀವೇನಾತ್ಮನಾನುಪ್ರಭೂತಃ ಪೇಪೀಯಮಾನೋ ಮೋದ-ಮಾನಸ್ತಿಷ್ಠತೀತ್ಯತ್ರಾಪಿ ಜೀವಶಬ್ದೇನ ಪರಮಾತ್ಮಾಭಿಹಿತಃ । ಜೀವ ಇತಿ ಭಗವತೋಽನಿರುದ್ಧಸ್ಯಾಖ್ಯಾ ॥ ಇತಿ ಶ್ರುತೇಃ ॥ ೨೨೪ ॥

ಅ ॥ 'ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾಃ ಅನೇನ ಜೀವೇ-ನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ । ಸೇಯಂ ದೇವತೇಮಾಸ್ತಿಸ್ರೋ ದೇವತಾಃ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರೋತ್ । ತಾಸಾಂ ತ್ರಿವೃತಂ ತ್ರಿವೃತ-ಮೇಕೈಕಾಮಕರೋತ್' ॥ ಆ ಈ ದೇವತೆಯು ಆಲೋಚಿಸಿತು. ನಾನು ಈ ಮೂರು ದೇವತೆ ಗಳನು, ಈ ಪ್ರಾಣಧಾರಕನಾದ ಅನಿರುದ್ಧರೂಪಿಯಾದ ಶ್ರೀ ಪರಮಾತ್ಮನಿಂದ ಪ್ರವೇಶಿಸಿ ಶಬ್ದ ಪ್ರಪಂಚ, ಅರ್ಥಪ್ರಪಂಚಗಳನ್ನು ಸೃಷ್ಟಿಸುವೆನು. ಆ ಈ ದೇವತೆಯು ಈ ಮೂರು ದೇವತೆಗಳನ್ನು ಈ ಅನಿರುದ್ಧರೂಪಿ ಪರಮಾತ್ಮನಿಂದ ಪ್ರವೇಶಿಸಿ ಶಬ್ದಾರ್ಥಪ್ರಪಂಚಗಳನ್ನು ಸೃಷ್ಟಿಸಿತು. ಅವುಗಳಲ್ಲಿ ಒಂದೊಂದನ್ನು ಮೂರು ಮೂರುಗಳಿಂದ ಯುಕ್ತವಾದುದನ್ನಾಗಿ ಸೃಷ್ಟಿಸಿತು. ಈ ವಾಕ್ಯದಲ್ಲಿ ಹೇಗೆ ಜೀವಶಬ್ದದಿಂದ ಪರಮಾತ್ಮನು ಹೇಳಲ್ಪಡುತಾನೋ, ಹಾಗೆಯೇ, ಸ ಏಷಃ = ಆ ಈ ಪುರುಷನು, ಜೀವೇನ ಆತ್ಮನಾ = ಅನಿರುದ್ಧರೂಪಿ ಶ್ರೀ ಹರಿಯಿಂದ, ಅನುಪ್ರ ಭೂತಃ = ಉತ್ಪನ್ನನಾಗಿ, ಪೇಪೀಯಮಾನಃ = ಮತ್ತೂ ಮತ್ತು ಪಾನಮಾಡಿದವನಾಗಿ, ಮೋದ-ಮಾನಃ = ಸಂತೋಷವನ್ನು ಹೊಂದುವವನಾಗಿ, ತಿಷ್ಠತಿ = ಇರುತ್ತಾನೆ. ಇತ್ಯತ್ರಾಪಿ = ಈ ಜೀವ ವೃಕ್ಷ ದೃಷ್ಟಾಂತ ವಾಕ್ಯದಲ್ಲಿಯೂ, ಜೀವಶಬ್ದೇನ = ಜೀವ ಎಂಬೀ ಶಬ್ದದಿಂದ, ಪರಮಾತ್ಮಾ = ಪರಬ್ರಹ್ಮನೇ, ಅಭಿಹಿತಃ = ಹೇಳಲ್ಪಡುತ್ತಾನೆ. (ಸಂಸಾರಿಯಲ್ಲ. ವೃಕ್ಷಶಬ್ದದಿಂದಲಾದರೂ ಸಂಸಾರಿಯೇ ಹೇಳಲ್ಪಡುತ್ತಾನೆ. ಜಡಶರೀರವಲ್ಲ. ಅಂತೂ ಹಿಂದೆ ಹೇಳಿದ ಪ್ರಕಾರ ಸಂಸಾರಿಯು ಪರಬ್ರಹ್ಮನ ಅಧೀನನೆಂದೇ ಹೇಳಲ್ಪಡುತ್ತಾನೆ.) (ಜೀವಶಬ್ದಕ್ಕೆ ಭಗವದ್ವಾಚಕತ್ವವು ಹೇಗೆ ಅಂದರೆ —) ಜೀವ ಇತಿ = ಜೀವ ಎಂಬುವುದು, ಭಗವತಃ = ಷಡ್ಗುಣಪೂರ್ಣನಾದ, ಅನಿರುದ್ಧಸ್ಯ = ಅನಿರುದ್ಧರೂಪಿ ಶ್ರೀ ಹರಿಗೆ, ಆಖ್ಯಾ = ನಾಮಧೇಯವು, ಇತಿ = ಹೀಗೆ. ಶ್ರುತೇಃ = ಶ್ರುತಿಯಿದ್ದುದರಿಂದ.

ತಾ ॥ (1) ಜೀವಶಬ್ದವು ಭಗವತ್ಪರವಾದರೆ 'ಆತ್ಮನಾ' ಎನ್ನುವುದು ವ್ಯರ್ಥವಾಗ ಬೇಕಾಗುವುದು. ದೃಷ್ಟಾಂತೀಕೃತವಾದ ವಾಕ್ಯದಲ್ಲಿ 'ಜೀವೇನ ಆತ್ಮನಾ' ಎಂದು ಎರಡೂ ವ್ಯರ್ಥವಾಗಬೇಕಾಗುವುದು ಎಂಬುವುದನ್ನೂ ಇದರಿಂದಲೇ ಪರಿಹರಿಸಿದ ಹಾಗಾಯಿತು. ಹೇಗೆಂದರೆ — ಜೀವೇನ = ಪ್ರಾಣಧಾರಕನಾದ, ಅನಿರುದ್ಧನಾಮಕನಾದ, ಆತ್ಮನಾ = ಪರಮಾತ್ಮ ನಿಂದ, ಎಂಬ ಅರ್ಥವು ಯುಕ್ತವಾಗುವುದು. (2) ಅಲ್ಲದೆ ಪರರಿಗೇನೇ 'ಆತ್ಮನಾ' ಎನ್ನುವುದು ವ್ಯರ್ಥವಾಗಬೇಕಾಗುವುದು. ಹಾಗೆಯೇ ದೃಷ್ಟಾಂತೀಕೃತವಾದ ವಾಕ್ಯದಲ್ಲಿಯೂ ಅನಿರುದ್ಧನಾಮಕನಾದ ಪರಮಾತ್ಮನಿಂದ ಎಂಬೀ ಅರ್ಥವು ಸಂಭವಿಸುವುದು ॥ ೨೨೪ ॥

ಜೀವಶಬ್ದಕ್ಕೆ ಪರಮಾತ್ಮನಲ್ಲಿ ಶಕ್ತಿಯಿರಲಿ. ಆದರೂ ಈ ವಾಕ್ಯಗಳು ಭಗವತ್ಪರಗಳೆಂದು ಹೇಗೆ ಸಿದ್ಧವಾಗುವುವು, ಎಂದರೆ ಸಮಾಖ್ಯಾರೂಪವಾದ ವಾಕ್ಯಾಂತರದಿಂದ ಎಂಬೀ ಅಭಿಪ್ರಾಯದಿಂದ ಅದನ್ನು ಪಠಿಸುತ್ತಾರೆ —

ಮೂ ॥ ವಿಷ್ಣುರ್ಜೀವ ಇತಿ ಪ್ರೋಕ್ತಃ ಸತತಂ ಪ್ರಾಣಧಾರಣಾತ್ । ಸ ಪ್ರವಿಶ್ಯ ಶರೀರಂ ಚ ಸ್ಥಾವರಂ ಜಂಗಮಂ ತಥಾ । ಮಹಾಭೂತಾನಿ ಚ ವಿಭುಸ್ತ್ರಿವೃತ್ಕರಣಪೂರ್ವಕಂ । ಸಂಸಾರಿಣಂ ಭ್ರಾಮಯತಿ ಸದೈವಾನ್ಯತ್ವಲಕ್ಷಣಂ । ತೇನಾಯಂ ಮೋದತೇ ನಿತ್ಯಂ ವೃಕ್ಷಾವಸ್ಥಾಂ ಗತೋಽಪಿ ಸನ್ನಿತಿ ಚ । ತತ್ತೇಜ ಐಕ್ಷತ ತಾ ಆಪ ಐಕ್ಷಂತ ಇಮಾಸ್ತಿಸ್ರೋ ದೇವತಾ ಇತಿ ಪೂರ್ವಮೇವ ಚೇತನತ್ವಸಿದ್ಧೇರನೇನ ಜೀವೇನಾತ್ಮನೇತಿ ಸಂಸಾರಿಣಃ ಪುನಃ ಪ್ರವೇಶೋ ನ ಯುಕ್ತಃ ॥ ೨೨೫ ॥

ಅ ॥ ವಿಷ್ಣುಃ = ಶ್ರೀ ಹರಿಯು, ಸತತಂ = ಯಾವಾಗಲೂ, ಪ್ರಾಣಧಾರಣಾತ್ = ಇಂದ್ರಿಯಗಳನ್ನು ಶರೀರದಲ್ಲಿ ಸ್ಥಾಪಿಸುವುದರಿಂದ. ಜೀವ ಇತಿ=(ಜೀವ ಪ್ರಾಣಧಾರಣೇ ಎಂದು ಧಾತುವ್ಯಾಖ್ಯಾನವು) ಜೀವನೆಂದು, ಪ್ರೋಕ್ತಃ=ಹೇಳಲ್ಪಡುತ್ತಾನೆ. ಸಃ ವಿಭುಃ=ವ್ಯಾಪ್ತನಾದ ಆ ಶ್ರೀ ಹರಿಯು, ಸ್ಥಾವರಂ ಜಂಗಮಂ ಚ=ಸ್ಥಾವರ ಜಂಗಮಾತ್ಮಕವಾದ, ಶರೀರಂ=ದೇಹವನ್ನೂ. ತಥಾ=ಹಾಗೆಯೇ, ಮಹಾಭೂತಾನಿ ಚ=ಪೃಥಿವ್ಯಪ್ತೇಜಸ್ಸುಗಳನ್ನು, ಪ್ರವಿಶ್ಯ= ಪ್ರವೇಶಮಾಡಿ, ತ್ರಿವೃತ್ಕರಣಪೂರ್ವಕಂ = ಮಿಶ್ರೀಕರಣಪೂರ್ವಕವಾಗಿ, ನಾಮರೂಪೇ = ಶಬ್ದಾರ್ಥಾತ್ಮಕ ಪ್ರಪಂಚಗಳನ್ನು, ವ್ಯಾಕರೋತ್=ಸೃಷ್ಟಿಸಿದನು. ವಿಭುಃ=ಶ್ರೀ ಹರಿಯು, ಸದೈವ=ಯಾವಾಗಲೂ, ಅನ್ಯತ್ವಲಕ್ಷಣಂ=ಭೇದವೇ ಸ್ವರೂಪವಾಗಿವುಳ್ಳ, ಸಂಸಾರಿಣಂ=ಜೀವನನ್ನು, ಭ್ರಾಮಯತಿ=(ಜಾಗರಾದ್ಯವಸ್ಥೆಗಳಲ್ಲಿ) ತಿರುಗಾಡಿಸುತ್ತಾನೆ. ಅಯಂ=ಈ ಜೀವನು, ವೃಕ್ಷಾವಸ್ಥಾಂ ಗತೋಽಪಿ ಸನ್=ವೃಕ್ಷಾವಸ್ಥೆಯನ್ನುಹೊಂದಿದವನಾದಾಗ್ಯೂ, ತೇನ=ಪರಮೇಶ್ವರ ಸನ್ನಿಧಾನವಿಶೇಷದಿಂದ, ನಿತ್ಯಂ=ನಿರಂತರದಲ್ಲಿಯೂ, ಮೋದತೇ=ಸಂತೋಷವನ್ನು ಹೊಂದುತ್ತಾನೆ. ಇತಿ ಚ=ಹೀಗೂ ಆದೆ. ತತ್ ತೇಜಃ=ಆ ತೇಜೋಭಿಮಾನಿಯು, ಐಕ್ಷತ=ನೋಡಿದಳು. ತಾಃ ಆಪಃ ಐಕ್ಷಂತ=ಆ ಜಲಾಭಿಮಾನಿಗಳು ನೋಡಿದರು. ಇಮಾಃ ತಿಸ್ರಃ ದೇವತಾಃ=ಈ ಮೂರು ದೇವತೆಗಳು, ಇತಿ=ಹೀಗೆ, (ವಚನಾತ್=ವಾಕ್ಯದಿಂದ) ಪೂರ್ವಮೇವ=ಜೀವಪ್ರವೇಶದಿಂದ ಮೊದಲೇ, ಚೇತನತ್ವಸಿದ್ಧೇಃ=ಚೇತನತ್ವವು ಸಿದ್ಧಿಸುವುದರಿಂದ, 'ಅನೇನ ಜೀವೇನ ಆತ್ಮನಾ' ಇತಿ='ಅನೇನ ಜೀವೇನ ಆತ್ಮನಾ' ಎಂದು ಹೇಳಲ್ಪಡತಕ್ಕದು, ಸಂಸಾರಿಣಃ=ಜೀವನಿಗೆ, ಪುನಃ= ಮತ್ತು, ಪ್ರವೇಶಃ=ಪ್ರವೇಶವು, ನ ಯುಕ್ತಃ=ಯುಕ್ತವಾಗಲಾರದು. (ವ್ಯರ್ಥವಾಗುವುದರಿಂದ.)

ತಾ ॥ (1) ಚೇತನತ್ವೇ ಸತಿ ಈಶ್ವರಾದನ್ಯತ್ವಮೇವ=ಚೇತನರಾಗಿದ್ದು, ಲಕ್ಷ್ಮೀನಾರಾಯಣರಿಂದ ಭೇದವೇ, ಸಂಸಾರಿಗೆ ಲಕ್ಷಣವು. (2) 'ತತ್ತೇಜಃ' ಎಂಬೀ ವಾಕ್ಯದಿಂದ ದೃಷ್ಟಾಂತೀಕೃತವಾದ ವಾಕ್ಯದಲ್ಲಿ ಜೀವಶಬ್ದವು ಭಗವತ್ಪರವೆನ್ನುವುದರಲ್ಲಿ ಯುಕ್ತಿಯನ್ನು ಹೇಳಿದ ಹಾಗಾಯಿತು. (3) ತೇಜಸ್ಸು, ಜಲ, ಅನ್ನ, ಇವುಗಳು ಅಚೇತನಗಳಾಗಿದ್ದರೆ ಆಗ ಚೇತನಾಧಿಷ್ಠಾನವಿಲ್ಲದೆ ಅವುಗಳಿಗೆ ಕಾರ್ಯವನ್ನು ಮಾಡಲು ಶಕ್ತಿಯಿಲ್ಲದಿರುವುದರಿಂದ ಜೀವಶಬ್ದದಿಂದ ಹೇಳಲ್ಪಟ್ಟ ಸಂಸಾರಿಗೇನೇ ಅಲ್ಲಿ ಪ್ರವೇಶವನ್ನು ಹೇಳಬೇಕಾಗುವುದು. ಹೀಗಿಲ್ಲ, ಈಕ್ಷಣ

(ನೋಡುವಿಕೆ) ಲಿಂಗದಿಂದಲೂ ದೇವತಾಶಬ್ದದಿಂದಲೂ ಚೇತನತ್ವವೇ ತಿಳಿಯಲ್ಪಡುತ್ತದೆ. ಆದಕಾರಣ ಜೀವಶಬ್ದವು ಇಲ್ಲಿ ಸಂಸಾರಿವಾಚಕವಲ್ಲವೆಂದು ತಿಳಿಯಲ್ಪಡುತ್ತದೆ ॥ ೨೨೫ ॥

ಮೂ ॥ ಅತಸ್ತತ್ರ ಜೀವಶಬ್ದೇನ ಪರಮಾತ್ಮೈವಾಭಿಹಿತಃ । ಜೀವೇನಾತ್ಮನಾನುಪ್ರಭೂತಃ ಪೇಪೀಯಮಾನೋ ಮೋದಮಾನಸ್ತಿಷ್ಠತೀತ್ಯತ್ರಾಪಿ ಜೀವಶಬ್ದೋದಿತಃ ಪರ ಏವ । ಪೇಪೀಯಮಾನೋ ಮೋದಮಾನಸ್ತು ಸಂಸಾರೀ ॥ ೨೨೬ ॥

ಅ ॥ ಅತಃ=ಆದ ಕಾರಣ, (ಪರಿಶೇಷಪ್ರಮಾಣದಿಂದ) ತತ್ರ=ದೃಷ್ಟಾಂತೀಕೃತವಾದ ವಾಕ್ಯದಲ್ಲಿ, ಜೀವಶಬ್ದೇನ=ಜೀವ ಎಂಬೀ ಶಬ್ದದಿಂದ, ಪರಮಾತ್ಮೈವ=ಪರಬ್ರಹ್ಮನೇ, ಅಭಿಹಿತಃ=ಹೇಳಲ್ಪಡುತ್ತಾನೆ. (ಚೇತನಗಳಿಗೂ 'ನ ಖಿದ್ಯತೇ ತ್ವತ್ಕ್ರಿಯತೇ' ಎಂಬೀ ಶ್ರುತಿಯಿಂದ ಈಶ್ವರ ಹೊರತು ಯಾರಿಗೂ ಸ್ವತಃ ಪ್ರವೇಶವು ಕೂಡದಿರುವುದರಿಂದ ಈಶ್ವರನ ಪ್ರವೇಶವು ಸಾರ್ಥಕವೇ ಸರಿ.) ಏವಮೇವ=ಹೀಗೆಯೇ, 'ಜೀವೇನ ಆತ್ಮನಾ ಅನುಪ್ರಭೂತಃ ಪೇಪೀಯಮಾನಃ ಮೊದಮಾನಸ್ತಿಷ್ಠತಿ' ಇತ್ಯತ್ರಾಪಿ='ಜೀವೇನ' ಇತ್ಯಾದಿ ದಾರ್ಷ್ಟಾಂತಿಕವಾಕ್ಯದಲ್ಲಿಯೂ, ಜೀವಶಬ್ದೋದಿತಃ=ಜೀವ ಶಬ್ದದಿಂದ ಪ್ರತಿಪಾದಿಸಲ್ಪಟ್ಟವನು, ಪರ ಏವ=ಪರಬ್ರಹ್ಮನೇ ಸರಿ. ಪೇಪೀಯಮಾನಃ=ಭೋಗಿಸಿಕೊಂಡಿರುವ, ಮೋದಮಾನಸ್ತು = ಸಂತೋಷದಿಂದ ಇರುವವನಾದರೂ, ಸಂಸಾರೀ=ಜೀವನು.

ತಾ ॥ ಪೇಪೀಯಮಾನತ್ವ (ಮತ್ತು ಮತ್ತು ವಿಷಯಗಳನ್ನನುಭವಿಸುವಿಕೆ) ಇದು ಮೊದಲಾದ ಲಿಂಗಗಳಿಂದ ವೃಕ್ಷವು ಸಂಸಾರಿ ಚೇತನವೆಂದೇ ಸಿದ್ಧವಾಗಿರುವುದರಿಂದ 'ಜೀವೇನ ಆತ್ಮನಾ ಅನುಪ್ರಭೂತಃ' ಎಂದು ಹೇಳಲ್ಪಡುತ್ತಾ, ಪುನಃ ಜೀವನ ಪ್ರವೇಶವೇ ವ್ಯರ್ಥವಾಗುವುದು. ಆದಕಾರಣ ಈ ದಾರ್ಷ್ಟಾಂತಿಕವಾಕ್ಯದಲ್ಲಿಯೂ ಜೀವಶಬ್ದವು ಸಂಸಾರಿಪರವೆಂದು ಯುಕ್ತವಾಗದಿರುವುದರಿಂದ ಪರಿಶೇಷಾತ್ ಭಗವತ್ಪರವೆಂದೇ ನಿಶ್ಚಿತವಾಗುವುದು ॥ ೨೨೬ ॥

'ಪೇಪೀಯಮಾನಃ ಮೋದಮಾನಃ' ಎನ್ನುವುದರಿಂದ ಜಡಭೂತವಾದ ವೃಕ್ಷಶರೀರವು ನಿರ್ದೇಶಿಸಲ್ಪಡುತ್ತದೆ. ಅದು ಸಂಸಾರಿಯಿಂದ ಅನುಪ್ರಭೂತವಾಗಿದೆ ಎನ್ನುವುದು ಯುಕ್ತವೇ ಎಂದಾಶಂಕಿಸಿದರೆ —

ಮೂ ॥ ನ ಹಿ ಚೇತನಾದನ್ಯಸ್ಯ ಮೋದಭೋಗಾದಿಕಂ ಯುಜ್ಯತೇ । ಸುಖಸ್ಯ ಚಾಪ್ಯಾಯತನಂ ಶರೀರಂ ದುಃಖಸ್ಯ ಚಾಪ್ಯಾಯತನಂ ಶರೀರಂ । ಅಚೇತನಂ ಪ್ರಾಕೃತಮೇತದಾಹುರ್ಭೋಕ್ತಾ ತಯೋಶ್ಚೇತನಃ ಶರೀರೀ ॥ ಇತಿ ಚ ಭಾರತೇ ॥ ೨೨೭ ॥

ಅ ॥ ಚೇತನಾತ್=ಜೀವನಿಂದ, ಅನ್ಯಸ್ಯ=ಬೇರೆಯವರಿಗೆ, ಮೋದಭೋಗಾದಿಕಂ, ಮೋದ=ಸುಖವು, ಭೋಗ=ವಿಷಯಾನುಭವವು, ಇವುಗಳಿಗೆ ಕಾರಣಗಳಾದ ಇಚ್ಛಾಪ್ರಯತ್ನಗಳು ಇವುಗಳೇ, ಆದಿಕಂ=ಮೊದಲಾದುದು, ನ ಹಿ ಯುಜ್ಯತೇ=ಕೂಡುವುದಿಲ್ಲ. ಸುಖಸ್ಯ ಚ= ಸುಖಕ್ಕೂ, ಶರೀರಂ=ಶರೀರವು, ಆಯತನಂ=ಆಶ್ರಯವು, ದುಃಖಸ್ಯ ಚ=ದುಃಖಕ್ಕೂ, ಶರೀರಂ=ಶರೀರವು, ಆಯತನಂ=ಆಶ್ರಯವು, ಏತತ್=ಇದನ್ನು, ಅಚೇತನಂ=ಚೇತನವಲ್ಲದಿರುವುದನ್ನಾಗಿಯೂ, ಪ್ರಾಕೃತಂ=ಪ್ರಕೃತಿಪರಿಣತವಾದುದನ್ನಾಗಿಯೂ, ಆಹುಃ=ಹೇಳುತ್ತಾರೆ.

ತಯೋಃ=ಆ ಸುಖದುಃಖಗಳಿಗೆ, ಭೋಕ್ತಾ=ಭೋಕ್ತನಾದವನು, ಶರೀರೀ=ಶರೀರವುಳ್ಳವನು, ಚೇತನಕಃ=ಕುತ್ಸಿತಚೇತನನು. ಇತಿ ಚ=ಹೀಗೆ, ಭಾರತೇ=ಭಾರತದಲ್ಲಿದೆ.

ತಾ ॥ (1) ಸುಖದುಃಖಾದಿಗಳು ಚೇತನಧರ್ಮಗಳೆಂದೇ ಪ್ರಸಿದ್ಧಗಳು. ಅವುಗಳು ಅಂತಃಕರಣಪರಿಣತಗಳಾದಾಗ್ಯೂ ಚೇತನಸ್ವಾಮಿಕಗಳಾಗಿವೆ. ಆದಕಾರಣ ಹೇಗೆ ತಾನೆ ಶರೀರ ಧರ್ಮಗಳಾದಾವು? (2) ಶರೀರವನ್ನಧಿಷ್ಠಾನೀಕರಿಸಿಕೊಂಡು ಸುಖದುಃಖಗಳನ್ನು ಭೋಗಿಸು ವುದರಿಂದ ಅವುಗಳಿಗೆ ಶರೀರವು ಸಾಧನವು ॥ ೨೨೭ ॥

'ಜೀವಾಪೇತಂ' ಎಂಬೀ ಉಪಸಂಹಾರವಾಕ್ಯದಲ್ಲಿ ಜೀವನಿಗೆ ವಿನಾಶವಿಲ್ಲವೆಂದು ಹೇಳಿರು ವುದರಿಂದ ಪೂರ್ವವಾಕ್ಯವೂ ವಿನಾಶಾಭಾವಪರವೇ ಆಗಿರುತ್ತದೆ, ಎಂದರೆ —

**ಮೂ ॥ ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತ ಇತ್ಯತ್ರಾಪಿ ಜೀವಶಬ್ದಃ ಪರೇ । ನ ಹಿ ಸಂಸಾರಿಣೋ ಮುಖ್ಯತಃ ಪ್ರಾಣಧಾರಕತ್ವಂ ಯುಜ್ಯತೇ । ಬ್ರಹ್ಮಣಾ ತ್ಯಕ್ತದೇಹಸ್ತು ಮೃತ-ಇತ್ಯುಚ್ಯತೇ ನರಃ ॥ ಇತಿ ಚ ॥ ೨೨೮ ॥**

ಅ ॥ ಜೀವಾಪೇತಂ=ಪರಮಾತ್ಮನಿಂದ ಬಿಡಲ್ಪಟ್ಟ ಶರೀರವುಳ್ಳ, ಇದಂ=ಈ ಸಂಸಾರಿ ಸಮೂಹವು, ಮ್ರಿಯತೇ ಕಿಲ ವಾವ=ನಿಶ್ಚಯವಾಗಿಯೂ ಪ್ರಾಣಗಳಿಂದ ವಿಯುಕ್ತವಾಗುತ್ತದೆ, ಜೀವಃ=ಪರಮಾತ್ಮನಾದರೂ, ನ ಮ್ರಿಯತೇ=ಯಾವಾಗಲೂ ಪ್ರಾಣಗಳಿಂದ ವಿಯುಕ್ತನಾಗು ವುದಿಲ್ಲ. (ಈ ಪ್ರಕಾರ ಜೀವ ಪರಬ್ರಹ್ಮರು ಅತ್ಯಂತವಿಲಕ್ಷಣರಾಗಿರುತ್ತಾರೆ.) ಇತ್ಯತ್ರಾಪಿ= ಈ ವಾಕ್ಯದಲ್ಲಿಯೂ, ಜೀವಶಬ್ದಃ=ಜೀವ ಎಂಬೀ ಶಬ್ದವು, ಪರೇ=ಪರಮಾತ್ಮವಿಷಯದಲ್ಲಿಯೇ, ಸಂಸಾರಿಣಃ=ಸಂಸಾರವುಳ್ಳ ಜೀವನಿಗೆ, ಮುಖ್ಯತಃ=ಸ್ವತಂತ್ರವಾಗಿ, ಪ್ರಾಣಧಾರಕತ್ವಂ=ಪ್ರಾಣ ಗಳನ್ನು ಧರಿಸುವಿಕೆಯು, ನ ಹಿ ಯುಜ್ಯತೇ=ಕೂಡುವುದಿಲ್ಲ. (ಸಂಸಾರಿಗೇನೇ ಸ್ವತಂತ್ರವಾಗಿ ಪ್ರಾಣಧಾರಕತ್ವವಿದ್ದರೆ ಇಚ್ಛೆಯಿಲ್ಲದೆ ಇರುವಾಗ ಮರಣವೇ ಕೂಡಲಾರದು.) (ಈ ವಾಕ್ಯವು ಭಗವತ್ಪರವೆನ್ನುವುದು ಸಮಾಖ್ಯೆಯಿಂದಲೂ ಸಿದ್ಧವಾಗುವುದೆನ್ನುತ್ತಾರೆ.) ಬ್ರಹ್ಮಣಾ=ಪರಮಾತ್ಮ ನಿಂದ, ತ್ಯಕ್ತದೇಹಸ್ತು=ಬಿಡಲ್ಪಟ್ಟ ಶರೀರವುಳ್ಳ, ನರಃ=ಮನುಷ್ಯನು, ಮೃತ ಇತಿ=ಮರಣ ಪಟ್ಟವನೆಂದು, ಉಚ್ಯತೇ=ಹೇಳಲ್ಪಡುತ್ತಾನೆ. ಇತಿ ಚ=ಹೀಗೂ ಅದೆ ॥ ೨೨೮ ॥

ಜೀವ ಪರಬ್ರಹ್ಮರಿಗೆ ಭೇದ ಪ್ರತಿಪಾದಕವಾದ ಪದವು ತೋರದಿರುವುದರಿಂದ ಅಣಿಮ ಧಾನಾ ದೃಷ್ಟಾಂತವು ಜೀವಬ್ರಹ್ಮರಿಗೆ ಭೇದಪ್ರತಿಪಾದಕವಲ್ಲ. ಎಂದರೆ —

**ಮೂ ॥ ಯಂ ವೈ ಸೋಮ್ಯೈತಮಣಿಮಾನಂ ನ ನಿಭಾಲಯಸೇಽಸ್ಯ ಸೋಮ್ಯೈಷೋಽಣಿಮ್ನ ಏವಂ ಮಹಾನ್ನ್ಯಗ್ರೋಧಸ್ತಿಷ್ಠತೀತ್ಯತ್ರಾಪ್ಯ-ಣಿಮಶಬ್ದೇನ ಪರ ಏವಾಭಿಹಿತಃ । ಸ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾತತ್ತ್ವಮಸಿ ಶ್ವೇತಕೇತೋ ಇತ್ಯುಕ್ತ ತ್ವಾಚ್ಚ । ಧಾನಾಸು ತ್ವಣ್ವ್ಯ ಇವೇಮಾ ಧಾನಾ ಇತಿ ಸ್ತ್ರೀಲಿಂಗಪ್ರಯೋ-ಗಾದಿವಶಬ್ದಪ್ರಯೋಗಾಚ್ಚ ನಾಣಿಮತ್ವಂ । ನ ಚ ತಾ ನ ನಿಭಾಲ ಯಸೇ ॥ ೨೨೯ ॥**

ಅ ॥ ಸೋಮ್ಯ=ಶ್ವೇತಕೇತುವೇ, ಯಂ ವಾ ಏತಂ ಅಣಿಮಾನಂ=ಯಾವ ಈ ಅಣು ಪದಾರ್ಥವನ್ನು, ನ ನಿಭಾಲಯಸೇ = ನೋಡುವುದಿಲ್ಲವೋ, ಏಷಃ = ಈದಾವ, ಅಸ್ಯ=ಈ, ಅಣಿಮ್ನಃ=ಅಣುರೂಪನಾದ ಶ್ರೀ ಹರಿಯ ಸಾಮರ್ಥ್ಯದಿಂದ, ಏವಂ=ಹೀಗೆಯೇ, ಮಹಾನ್= ದೊಡ್ಡದಾದ, ನ್ಯಗ್ರೋಧಃ = ವಟವೃಕ್ಷವು, ತಿಷ್ಠತಿ = ಇರುತ್ತದೆ. ಇತ್ಯತ್ರಾಪಿ = ಈ ವಾಕ್ಯ ದಲ್ಲಿಯೂ, (ಜೀವಪರಭೇದವೇ ಹೇಳಲ್ಪಟ್ಟದೆ. ಹೇಗೆಂದರೆ) ಅಣಿಮಶಬ್ದೇನ = ಅಣಿಮ ಎಂಬ ಶಬ್ದದಿಂದ, ಪರ ಏವ=ಪರಬ್ರಹ್ಮನೇ, ಅಭಿಹಿತಃ=ಹೇಳಲ್ಪಡುತ್ತಾನೆ. (ಅಥವಾ ಹೇಗೆ ಪೂರ್ವವಾಕ್ಯದಲ್ಲಿ ಜೀವಶಬ್ದದಿಂದ ಪರಮಾತ್ಮನು ಹೇಳಲ್ಪಟ್ಟಿದ್ದಾನೋ, ಹಾಗೆಯೇ ಇಲ್ಲಿಯೂ ಅಣಿಮಶಬ್ದದಿಂದ ಪರಮಾತ್ಮನೇ ಹೇಳಲ್ಪಡುತ್ತಾನೆ. ಅಂತೂ ಹಿಂದೆ ಹೇಳಿದಪ್ರಕಾರ ಭೇದಪರ ತ್ವವೇ ಸಿದ್ಧವಾಗುವುದು.) ಸ ಏಷಃ=ಆ ಈ ಪರಮಾತ್ಮನು, ಅಣಿಮಾ = ಅತ್ಯಣುವಾದವನು, ಇದಂ ಸರ್ವಂ=ಈ ಎಲ್ಲಾ ಜಗತ್ತು, ಐತದಾತ್ಮ್ಯಂ=ಈ ಪರಬ್ರಹ್ಮನೇ ಸ್ವಾಮಿಯಾಗಿವುಳ್ಳದ್ದು. ತತ್=ಆ ಪರಬ್ರಹ್ಮನು, ಸತ್ಯಂ=ಸಾಧುಸ್ವರೂಪನು, ಸಃ=ಆತನು, ಆತ್ಮಾ=ಚೆನ್ನಾಗಿ ವ್ಯಾಪ್ತ ಗುಣಗಳುಳ್ಳವನು, ತ್ವಂ=ನೀನು, ಶ್ವೇತಕೇತೋ=ಶ್ವೇತಕೇತುವೇ, ಅತತ್=ಪರಬ್ರಹ್ಮನಿಂದ ಭಿನ್ನನು, ಅಸಿ=ಆಗಿರುತ್ತಿ, ಇತಿ=ಹೀಗೆ, ಉಕ್ತತ್ವಾಚ್ಚ=ಹೇಳಲ್ಪಟ್ಟ ಪ್ರಯುಕ್ತವೂ, (ಅಂದರೆ ಇದೇ ಪ್ರಕರಣದಲ್ಲಿ ಪ್ರಯೋಗವಿದ್ದುದರಿಂದಲೂ ಅಣಿಮಶಬ್ದವು ಭಗವತ್ಪರವೇ ಸರಿ. ಇಲ್ಲ ವಾದರೆ, ಪ್ರಕೃತವಾದುದನ್ನು ಬಿಡಬೇಕಾಗುವುದು.) ಧಾನಾಸು ತು = ಬೀಜಗಳಲ್ಲಿ ಆದರೆ, ಇಮಾಃ ಧಾನಾಃ=ಈ ಬೀಜಗಳು, ಅಣ್ವ್ಯ ಇವ=ಅಣುಗಳಂತೆಯೇ, ಇತಿ=ಹೀಗೆ, ಸ್ತ್ರೀಲಿಂಗ ಪ್ರಯೋಗಾತ್ = ಸ್ತ್ರೀಲಿಂಗಪ್ರಯೋಗದಿಂದಲೂ, ಇವಶಬ್ದಪ್ರಯೋಗಾಚ್ಚ = 'ಇವ' ಎಂಬೀ ಶಬ್ದವನ್ನು ಪ್ರಯೋಗಿಸಿದರಿಂದಲೂ, ಅಣಿಮತ್ವಂ=ಇಲ್ಲಿ ಅಣಿಮಶಬ್ದವಿಷಯತ್ವವು, ನ= ಇಲ್ಲ. (ಅಂದರೆ ಬೀಜಗಳು ಸ್ತ್ರೀಲಿಂಗವಾದ ಬಹುವಚನಾಂತವಾದ ಇವ ಶಬ್ದಶಿರಸ್ಕವಾದ ಅಣುಶಬ್ದದಿಂದ ಪ್ರಸ್ತುತಗಳಾಗಿವೆ. ಅಂತಹ ಧಾನಗಳು (ಬೀಜಗಳು) ಭಾವಪ್ರತ್ಯಯವೇ ಅಂತ್ಯದಲ್ಲಿ ಉಳ್ಳ ಪುಲ್ಲಿಂಗವಾದ ಏಕವಚನಾಂತವಾದ, ಇವ ಶಬ್ದರಹಿತವಾದ ಅಣಿಮಶಬ್ದದಿಂದ ಪರಾಮರ್ಶಿಸಲ್ಪಡಬೇಕೆಂದು ವ್ಯಾಖ್ಯಾನಮಾಡಲಿಕ್ಕೆ ಹೇಗೆ ಶಕ್ಯಗಳಾಗುತ್ತವೆ? ಶಬ್ದಭೇದವೂ ಅರ್ಥವಿರೋಧವೂ ಸ್ಪಷ್ಟವಾಗಿ ತೋರುತ್ತದಷ್ಟೆ! ಇವ ಶಬ್ದದಿಂದ ಮುಖ್ಯವಾಗಿ ಅಣುವಲ್ಲ ವೆಂದು ತಿಳಿಯಲ್ಪಡುತ್ತದೆ. ಇಲ್ಲಿಯಾದರೂ 'ಇವ' ಶಬ್ದವಿಲ್ಲದಿರುವುದರಿಂದ ಮುಖ್ಯ ಅಣುತ್ವವೇ ತಿಳಿಯಲ್ಪಡುತ್ತದೆ.) ತಾಃ=ಆ ಬೀಜಗಳನ್ನು, ನ ನಿಭಾಲಯಸೇ ನ ಚ=ನೋಡುವುದಿಲ್ಲ ವೆಂದಲ್ಲ. (ಅಂದರೆ ಅಣಿಮಶಬ್ದವಾಚ್ಯವಾದುದಕ್ಕೆ ಅದೃಶ್ಯತ್ವವು ಹೇಳಲ್ಪಟ್ಟದೆ. ಆ ಬೀಜಗಳನ್ನು ಶ್ವೇತಕೇತುವು ನೋಡುವುದಿಲ್ಲವೆಂದಲ್ಲ. 'ಕಿಮತ್ರ ಪಶ್ಯಸಿ' ಇಲ್ಲಿ ಏನನ್ನು ನೋಡುತ್ತಿ ಎಂದು ಪ್ರಶ್ನಿಸಿಕೊಂಡವನು 'ಅಣ್ವ್ಯ ಇವ ಇಮಾಃ ಧಾನಾಃ ಪಶ್ಯಾಮಿ' ಅಣುಗಳಂತಿರುವ ಈ ಬೀಜ ಗಳನ್ನು ನೋಡುತ್ತೇನೆ ಎಂದು ಹೇಳಿರುವನು. ಆದುದರಿಂದಲೂ ಅಣಿಮಶಬ್ದವು ಬೀಜವಿಷಯಕ ವಲ್ಲ ॥ ೨೨೯ ॥

ಪುನಃ ಶಂಕಿಸುತ್ತಾರೆ— ಅಣಿಮಶಬ್ದಕ್ಕೆ ಪರಬ್ರಹ್ಮನಲ್ಲಿ ಶಕ್ತಿಯನ್ನು ತೋರಿಸುವುದಕ್ಕಾಗಿ ಉದಾಹೃತವಾದ ಇದೇ ವಾಕ್ಯದಲ್ಲಿ 'ಐತದಾತ್ಮ್ಯಮಿದಂ ಸರ್ವಂ' ಎಂದು ಜೀವೇಶ್ವರೈಕ್ಯವು ಪ್ರತೀತವಾಗುವುದು. ಹೇಗೆಂದರೆ— ಈ ಜಗತ್ತು ಬ್ರಹ್ಮನೇ ಸ್ವರೂಪವಾಗಿವುಳ್ಳದ್ದು, (ಏತತ್ ಆತ್ಮಾ ಯಸ್ಯ ಏತದಾತ್ಮಾ ತಸ್ಯ ಭಾವಃ ಐತದಾತ್ಮ್ಯಂ) ಈ ಸದ್ರೂಪನಾದ ಬ್ರಹ್ಮನಿಂದ ಈ ಎಲ್ಲಾ ಜಗತ್ತು ಸ್ವರೂಪವುಳ್ಳದ್ದಾಗಿದೆ. ಈ ಜಗತ್ತಿಗೆ ಇನ್ನೊಬ್ಬ ಸಂಸಾರಿಯಿಲ್ಲ. ಆದಕಾರಣ ಈ ಪ್ರಕರಣದಲ್ಲಿ ಭೇದವೇ ಹೇಳಲ್ಪಡುತ್ತದೆಂಬುದು ಹೇಗೆ ಕೂಡುವುದೆಂದರೆ—

**ಮೂ ॥ ಐತದಾತ್ಮ್ಯಮಿತ್ಯೇತದೀಯಂ । ಸ ಆತ್ಮೇತ್ಯಾತ್ಮಶಬ್ದಸ್ತು ಪರ ಏವ ॥ ೨೩೦ ॥**

ಅ ॥ ಐತದಾತ್ಮ್ಯಮಿತಿ=ಐತದಾತ್ಮ್ಯ ಎನ್ನುವುದಕ್ಕೆ, ಏತದೀಯಂ=ಇವನ (ಶ್ರೀ ಹರಿಯು) ಸಂಬಂಧಿಯಾದುದೆಂದೇ ಅರ್ಥವು. ಅಂತೂ ಇವನೇ ಸ್ವಾಮಿಯಾಗಿ ಉಳ್ಳದ್ದು ಎಂದು ಸಿದ್ಧವಾಗುವುದು. ಅಥವಾ ಏಷ ಚಾಸಾವಾತ್ಮಾ ಚ. ತಸ್ಯ ಇದಂ=ಈ ಆತ್ಮನ ಸಂಬಂಧಿಯಾದುದು, ಎಂದರ್ಥವು. ಅಂತೂ ಈ ವಾಕ್ಯಕ್ಕೆ ಅರ್ಥಾಂತರವು ಸಂಭವಿಸುವುದರಿಂದ ಜೀವೇಶ್ವರರಿಗೆ ಐಕ್ಯವಿಷಯಕತ್ವವು ಕೂಡಲಾರದು. ಆದಾಗ್ಯೂ 'ಸ ಆತ್ಮಾ' ಆ ಅಣಿಮಶಬ್ದವಾಚ್ಯನೇ ಜೀವನು ಎಂದು ಐಕ್ಯವು ಹೇಳಲ್ಪಡುತ್ತದೆ ಎಂದರೆ—) 'ಸಃ ಆತ್ಮಾ' ಅವನು ಆತ್ಮನು ಎಂದೂ, ಇತಿ=ಎಂಬೀ, ಆತ್ಮಶಬ್ದಸ್ತು='ಆತ್ಮಾ' ಎಂಬೀ ಶಬ್ದವಾಚ್ಯನಾದವನಾದರೂ, ಪರಃ=ಪರಮಾತ್ಮನೇ ಸರಿ. (ಜೀವನಲ್ಲ.) ಅಥವಾ 'ಆತ್ಮಾ' ಎಂಬೀ ಶಬ್ದವು ಪರಮಾತ್ಮವಿಷಯಕವೇ॥೨೩೦॥

ನಿರುಪಪದವಾದ ಆತ್ಮಶಬ್ದವು ಪ್ರತ್ಯಗಾತ್ಮನಲ್ಲಿ ರೂಢವಾದುದರಿಂದ ಇದು ಕೂಡಲಾರದೆಂದರೆ —

**ಮೂ ॥ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ । ನಾನುಮಾನಮತಚ್ಛಬ್ದಾತ್ । ಪ್ರಾಣಭೃಚ್ಚೇತ್ಯತ್ರ ತಮೇವೈಕಂ ಜಾನಥ ಆತ್ಮಾನಮಿತಿ ಸ್ವಶಬ್ದಪರ್ಯಾಯಾತ್ಮಶಬ್ದಾನ್ನ ಪ್ರಕೃತಿಜೀವಾವಭಿಧೀಯೇತೇ ಕಿಂತು ಪರ ಏವೇತಿ ಭಗವತಾ ವ್ಯಾಸೇನಾಭಿಹಿತಂ । ಅತ ಆತ್ಮಶಬ್ದಸ್ತಸ್ಮಿನ್ನೇವ ಮುಖ್ಯಃ ॥ ೨೩೧ ॥**

ಅ ॥ (೧) ದ್ಯುಭ್ವಾದ್ಯಾಯತನಂ='ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಂ' ಎಂಬೀ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವರ್ಗ ಭೂಮ್ಯಾದಿಗಳಿಗೆ ಆಶ್ರಯನಾದವನು, (ತತ್ತು=ವಿಷ್ಣುವೇ,) ಸ್ವ ಶಬ್ದಾತ್ = ಆ ಶ್ರುತಿಯಲ್ಲಿ 'ತಮೇವೈಕಂ ಜ್ಞಾನಥಾತ್ಮಾನಂ' ಎಂದು ಸ್ವ ಶಬ್ದಪರ್ಯಾಯವಾದ ಆತ್ಮಶಬ್ದವು ಶ್ರುತವಾದುದರಿಂದ (ಬ್ರ. ಸೂ. ಅ. ೧. ಪಾ. ೩. ಸೂ. ೧.)(೨)(ದ್ಯುಭ್ವಾದಿಗಳಿಗೆ ಆಶ್ರಯವಾದುದು.) ಅನುಮಾನಂ=ಅನುಮಾನದಿಂದ ಸಿದ್ಧವಾದ ಪ್ರಾಮಾಣ್ಯವುಳ್ಳ ಪರಾಭಿಮತಗಳಾದ ಪಾಶುಪತಾದ್ಯಾಗಮಗಳಿಂದ ಸಿದ್ಧಗಳಾದ ರುದ್ರಪ್ರಧಾನಗಳು, ನ=ಆಗುವುದಿಲ್ಲ. ಅತಚ್ಛಬ್ದಾತ್ = ದ್ಯುಭ್ವಾದ್ಯಾಯತನ ಪ್ರಕರಣದಲ್ಲಿ ರುದ್ರಪ್ರಧಾನಗಳಲ್ಲಿ ಅಸಾಧಾರಣವಾದ ಶಬ್ದವಿಲ್ಲದಿರುವುದರಿಂದ, (ಬ್ರ. ಸೂ. ಅ. ೧. ಪಾ. ೩. ಸೂ. ೩.) (೩) ಪ್ರಾಣಭೃಚ್ಚ=ಜೀವನು ವಾಯುವೂ ಕೂಡ (ಬ್ರ. ಸೂ. ಅ೧. ಪಾ. ೩. ಸೂ. ೪.) (ದ್ಯುಭ್ವಾದ್ಯಾಶ್ರಯನು ಆಗುವುದಿಲ್ಲ. ಆತ್ಮಶಬ್ದದಿಂದಲೂ, ಮುಕ್ತಪ್ರಾಪ್ಯತ್ವ ವ್ಯಪದೇಶವಿದ್ದುದರಿಂದಲೂ, ಜೀವಾದಿ ವಾಚಕವಾದ ಶಬ್ದವಿಲ್ಲದಿರುವುದರಿಂದಲೂ, ಜೀವಾದಿಪ್ರಾಪಕವಾದ 'ಅಜಾಯಮಾನಃ' ಇತ್ಯಾದಿ ಶ್ರುತಿಗಳು ವಿಷ್ಣುಪರಗಳೇ,) ಇತ್ಯತ್ರ=ಈ ಮೂರು ಸೂತ್ರಗಳಲ್ಲಿ, ತಮೇವ ಆತ್ಮಾನಂ=ಆ ವಿಷ್ಣುವನ್ನೇ, ಏಕಂ = ಪ್ರಧಾನನನ್ನಾಗಿ, ಜಾನಥ = ತಿಳಿಯಿರಿ, ಇತಿ = ಹೀಗೆ, ಸ್ವಶಬ್ದಪರ್ಯಾಯಾತ್ಮಶಬ್ದಾತ್=ಸ್ವ ಎಂಬ ಶಬ್ದಕ್ಕೆ ಯಾವ ಅರ್ಥವೋ ಅದೇ ಅರ್ಥವುಳ್ಳ ಆತ್ಮಶಬ್ದದಿಂದ, ಪ್ರಕೃತಿಜೀವೌ=ಪ್ರಕೃತಿಜೀವರೂ, ವಾಯುರುದ್ರರೂ ಕೂಡ, ನಾಭಿಧೀಯೇತೇ=(ಯಸ್ಮಿನ್ ದ್ಯೌಃ ಇತ್ಯಾದಿ ವಾಕ್ಯಗಳಲ್ಲಿ) ಹೇಳಲ್ಪಡುವುದಿಲ್ಲ. ಕಿಂತು=ಮತ್ತೆ, ಪರ ಏವ=ಪರಮಾತ್ಮನೇ, ಇತಿ=ಈ ಪ್ರಮೇಯವು, ಭಗವತಾ=ಭಗವಂತರಾದ, ವ್ಯಾಸೇನ=ವೇದವ್ಯಾಸರಿಂದ, ಅಭಿಹಿತಂ=

ಹೇಳಲ್ಪಟ್ಟಿದೆ. ಅತಃ=ಆದಕಾರಣ, ಆತ್ಮಶಬ್ದಃ='ಆತ್ಮಾ' ಎಂಬೀ ಶಬ್ದವು, ತಸ್ಮಿನ್ನೇವ=ಆ ಪರಬ್ರಹ್ಮನಲ್ಲಿಯೇ, ಮುಖ್ಯಃ=ಮುಖ್ಯ ವೃತ್ತಿಯುಳ್ಳದ್ದು. (ಅಮುಖ್ಯ ವೃತ್ತಿಯಿಂದ ಜೀವನಲ್ಲಿ ಪ್ರಯೋಗವು.)

ತಾ ॥ 'ಯಸ್ಮಿನ್ ದ್ಯೌಃ' ಎಂಬೀ ವಾಕ್ಯದಲ್ಲಿ ಜೀವಾದಿಗಳು ಪ್ರತಿಪಾದಿಸಲ್ಪಡುತ್ತಾರೋ ಅಥವಾ ಪರಮಾತ್ಮನೋ ಎಂದು ಸಂಶಯ ಬರಲು ಜೀವಾದಿಗಳೇ ಎಂದು ಪೂರ್ವಪಕ್ಷವು ಪ್ರಾಪ್ತವಾಗಲು, ಪರಮಾತ್ಮನೇ ಸರಿ ಎಂದು ಸಿದ್ಧಾಂತ ಮಾಡಲ್ಪಟ್ಟಿದೆ. ಏಕೆಂದರೆ - ಆತ್ಮಶಬ್ದ ವಿದ್ದುದರಿಂದ ಜೀವಾದಿಗಳಾಗಲಾರರು. ಆತ್ಮಶಬ್ದವು ಜೀವವಾಚಕವಾಗಿದ್ದರೆ ಇಲ್ಲಿ ಆತ್ಮಶಬ್ದವನ್ನು ಏಕೆ ಹೇತುವನ್ನಾಗಿ ಮಾಡಿರುವರು? ವಿರುದ್ಧವಾಗಬೇಕಾಗುವುದು. ಆದಕಾರಣ ಈ ಅರ್ಥದಲ್ಲಿ ಆತ್ಮಶಬ್ದವನ್ನು ಹೇತೂಕರಿಸಿದ ಸೂತ್ರಕಾರರು ಆತ್ಮಶಬ್ದವನ್ನು ಪರಮಾತ್ಮವಾಚಕವನ್ನಾಗಿಯೇ ಅಂಗೀಕರಿಸಿರುವರು ಎಂದು ತಿಳಿಯುತ್ತದೆ. ಆದಕಾರಣ ಆತ್ಮ ಶಬ್ದವು ಜೀವನಲ್ಲಿ ಮುಖ್ಯ ವೃತ್ತಿಯಿಂದ ಇರಲಾರದು ॥ ೨೩೧ ॥

**ಮೂ ॥ ಆತತತ್ವಾಚ್ಚ ಮಾತೃತ್ವಾದಾತ್ಮೇತಿ ಪರಮೋ ಹರಿಃ । ಆತ್ಮಾಭಾಸಾ-ಸ್ತದನ್ಯೇ ಯೇ ನ ಹ್ಯೇತೇಷಾಂ ತತಾ ಗುಣಾಃ॥ಇತಿ ಪರಮೋಪನಿಷದಿ॥ ॥ ೨೩೨ ॥**

ಅ ॥ ಆತತತ್ವಾತ್=ದೇಶಕಾಲಗುಣಗಳಿಂದ ವ್ಯಾಪ್ತನಾದ ಪ್ರಯುಕ್ತವೂ, ಮಾತೃ ತ್ವಾಚ್ಚ=ತಿಳಿಯುವವನಾದುದರಿಂದಲೂ ನಿರ್ಮಾಣಮಾಡುವವನಾದುದರಿಂದಲೂ, ಆತ್ಮೇತಿ= ಆತ್ಮಾ ಎಂಬೀ ಶಬ್ದದಿಂದ, ಹರಿಃ=ಶ್ರೀ ಹರಿಯು, ಪರಮಃ=ಪರಮಮುಖ್ಯವಾಚ್ಯನು. ತದನ್ಯೇ ಯೇ=ಆ ಬ್ರಹ್ಮನಿಂದ ವ್ಯತಿರಿಕ್ತರಾದವರು ಯಾರೋ ಅವರು, ಆತ್ಮಾಭಾಸಾಃ=ಅಮು ಖ್ಯವೃತ್ತಿಯಿಂದ ಆತ್ಮ ಶಬ್ದವಾಚ್ಯರು. ಏತೇಷಾಂ=ಈ ಜೀವರ, ಗುಣಾಃ=ಗುಣಗಳು, ತತಾಃ=ವ್ಯಾಪ್ತಗಳು, ನ ಹಿ=ಅಲ್ಲವಷ್ಟೆ. ಇತಿ=ಹೀಗೆ, ಪರಮೋಪನಿಷದಿ=ಪರಮೋಪನಿಷ ತ್ತಿನಲ್ಲಿದೆ ॥ ೨೩೨ ॥

ಜ್ಞಾನಿಯು ಯಾವ ಕ್ರಮದಿಂದ ಬ್ರಹ್ಮನನ್ನು ಹೊಂದುತ್ತಾನೆಂದು ವಿಚಾರ ಬರಲು ಆ ಕ್ರಮವನ್ನು ತೋರಿಸುವುದಕ್ಕಾಗಿ 'ಪುರುಷಂ ಸೋಮ್ಯೋಪತಾಪಿನಂ' ಇತ್ಯಾದಿ ವಾಕ್ಯಗಳು ಹೇಳಲ್ಪಡುತ್ತವೆ. ಆದಕಾರಣ ಒಂಭತ್ತು ಪ್ರಕರಣಗಳಲ್ಲಿಯೂ ಭೇದವೇ ಹೇಳಲ್ಪಡುತ್ತದೆನ್ನು ವುದು ಹೇಗೆ ಸಂಗತವಾಗುವುದೆಂದರೆ —

**ಮೂ ॥ ತೇಜಃ ಪರಸ್ಯಾಂ ದೇವತಾಯಾಂ ತಾವನ್ನ ಜಾನಾತೀತ್ಯತ್ರ ಚ ಯದಾಽಸ್ಯ ಪ್ರಾಣಾದೀನ್ಪರೋ ಗ್ರಸತಿ ತದಾ ನ ಜಾನಾತಿ ಯದಾ ದದಾತಿ ತದಾ ಜಾನಾತೀತಿ ತದ್ವಶತ್ವಮೇವೋಕ್ತಂ ॥ ೨೩೩ ॥**

ಅ ॥ ತೇಜಃ=ತೇಜೋಽಭಿಮಾನಿಯು, ಪರಸ್ಯಾಂ ದೇವತಾಯಾಂ=ಪರದೇವತೆಯಲ್ಲಿ (ಸಂಗತವಾಗುತ್ತದೋ) ತಾವತ್=ಆಗ, ನ ಜಾನಾತಿ=ತಿಳಿಯುವುದಿಲ್ಲ, ಇತ್ಯತ್ರ ಚ=ಈ ವಾಕ್ಯದಲ್ಲಿಯೂ, ಯದಾ=ಯಾವಾಗ, ಅಸ್ಯ=ಈ ಜೀವನ, ಪ್ರಾಣಾದೀನ್=ಇಂದ್ರಿಯಾದಿ ಗಳನ್ನು, ಪರಃ=ಪರಮಾತ್ಮನು, ಗ್ರಸತಿ=ನಿರ್ವ್ಯಾಪಾರಗಳನ್ನಾಗಿ ಮಾಡುತ್ತಾನೋ, ತದಾ= ಆಗ, ನ ಜಾನಾತಿ = ತಿಳಿಯುವುದಿಲ್ಲ. ಯದಾ = ಯಾವಾಗ, ದದಾತಿ=ಪ್ರಾಣಾದಿಗಳನ್ನು

ಕೊಡುತ್ತಾನೋ, ತದಾ=ಆಗ, ಜಾನಾತಿ=ತಿಳಿಯುತ್ತಾನೆ. ಇತಿ=ಹೀಗೆ ತೋರುವುದರಿಂದ, ತದ್ವಶತ್ವಮೇವ=ಪರಮಾತ್ಮನ ಅಧೀನತೆಯೇ, ಉಕ್ತಂ=ಹೇಳಲ್ಪಟ್ಟಿದೆ.

ತಾ ॥ (1) ಈ ವಾಕ್ಯದಲ್ಲಿಯೂ ಜೀವನಿಗೆ ಪರಮಾತ್ಮಾಧೀನತ್ವವೇ ಹೇಳಲ್ಪಟ್ಟಿದೆ. 'ಯದಾಽಸ್ಯ' ಇತ್ಯಾದಿಗಳು ತೋರುವ ಪ್ರಯುಕ್ತ, 'ತಸ್ಯ ಯಾವನ್ನವಾಕ್' ಎಂದು ಹೇಳುವುದನ್ನು ಬಿಟ್ಟು 'ತೇಜಃ ಪರಸ್ಯಾಂ' ಎಂದು ಹೇಳಿದ್ದು ಭಗವದಧೀನತ್ವವನ್ನು ಪ್ರತಿಪಾದಿಸುವುದಕ್ಕಾಗಿ. (2) ಈ ವಾಕ್ಯವು ಬ್ರಹ್ಮಪ್ರಾಪ್ತಿ ಕ್ರಮವನ್ನು ತೋರಿಸುವುದಕ್ಕಾಗಿ ಹೇಳಿದ್ದರೆ ಆಗ 'ಅಸ್ಯ ವಾಙ್ಮನಸಿ ಸಂಪದ್ಯತೇ' ಇದು ಮೊದಲಾದ 'ತೇಜಃ ಪರಸ್ಯಾಂ ದೇವತಾಯಾಂ' ಏತತ್ಪರ್ಯಂತವೇ ಆದ ವಾಕ್ಯವು ಇರಬೇಕಿದ್ದಿತು. ಬಾಕಿ ಎಲ್ಲವೂ ವ್ಯರ್ಥವೇ ಆಗುವುದು. ಆದಕಾರಣ ಇದು ಅರ್ಥವಲ್ಲ. ನಾವು ಹೇಳಿದ್ದೇ ಅರ್ಥವಾಗಬೇಕು ॥ ೨೩೩ ॥

**ಮೂ ॥ ಯದಾ ಪ್ರಾಣಾನ್ ದದಾತೀಶಸ್ತದಾ ಚೇತನಕೋಽಖಿಲಂ । ಜಾನಾತಿ ಗ್ರಸ್ತಕರಣಸ್ತೇನ ವೇತ್ತಿ ನ ಕಿಂಚನ । ಇತಿ ಚ ॥ ೨೩೪ ॥**

ಅ ॥ ಈಶಃ=ಶ್ರೀಹರಿಯು, ಯದಾ=ಯಾವಾಗ, ಪ್ರಾಣಾನ್=ಇಂದ್ರಿಯಾದಿಗಳನ್ನು, ದದಾತಿ = ಕೊಡುತ್ತಾನೋ, ತದಾ = ಆಗ, ಚೇತನಕಃ = ಕುತ್ಸಿತಚೇತನನು, ಅಖಿಲಂ= ಸಮಸ್ತವನ್ನೂ, ಜಾನಾತಿ=ತಿಳಿಯುತ್ತಾನೆ. ತೇನ=ಆ ಹರಿಯಿಂದ, ಗ್ರಸ್ತಕರಣಃ=ನಿರ್ವ್ಯಾಪಾರೀಕೃತಗಳಾದ ಇಂದ್ರಿಯಗಳುಳ್ಳವನು, ಕಿಂಚನ=ಯಾವುದನ್ನೂ, ನ ವೇತ್ತಿ=ತಿಳಿಯುವುದಿಲ್ಲ. ಇತಿ ಚ=ಹೀಗೆ ಇದೆ ॥ ೨೩೪ ॥

ವಾಗಾದಿಗಳ ಲಯಕ್ರಮದಿಂದ ಮರಣವನ್ನು ಹೊಂದಿದವನಿಗೂ, ಮುಕ್ತಿಯನ್ನು ಹೊಂದಿದವನಿಗೂ ಸದ್ರೂಪನಾದ ಬ್ರಹ್ಮನ ಪ್ರಾಪ್ತಿಯು ಸಮಾನವಾಗಿದ್ದರೆ ವಿದ್ವಾಂಸನು ಸತ್ಸಂಪನ್ನನಾಗಿ ತಿರುಗಿ ಬರುವುದಿಲ್ಲ. ವಿದ್ವಾಂಸನಲ್ಲದವನು ತಿರುಗಿಬರುತ್ತಾನೆ ಎನ್ನುವಲ್ಲಿ ಏನು ಕಾರಣವೆಂದು ವಿಚಾರಬರಲು ಬ್ರಹ್ಮನೇ ಆತ್ಮನೆಂಬುವುದು ಸತ್ಯವು ಎಂದು ತಿಳಿಯುವುದೂ, ತಿಳಿಯದಿರುವುದೂ ಕಾರಣವೆಂದು ತೋರಿಸುವುದಕ್ಕಾಗಿ 'ಪುರುಷಂ ಸೋಮ್ಯ' ಇದು ಮೊದಲಾದ ವಾಕ್ಯಗಳು ಪಠಿತಗಳಾಗಿವೆ. ಆದಕಾರಣ ಒಂಭತ್ತು ಪ್ರಕರಣಗಳಲ್ಲಿ ಭೇದವೇ ಹೇಳಲ್ಪಡುತ್ತದೆನ್ನುವುದು ಹೇಗೆ ಕೂಡುವುದೆಂದರೆ —

**ಮೂ ॥ ಅಪಹಾರ್ಷೀತ್ಸ್ತೇಯಮಕಾರ್ಷೀದಿತ್ಯತ್ರ ಚಾನ್ಯಾಭಿಮತಸ್ಯೈವ ವಸ್ತುನೋಽಪಹಾರ್ಯತ್ವಾದ್ಭೇದ ಏವಾಯಂ ದೃಷ್ಟಾಂತಃ । ಅನ್ಯಂ ಸಂತಂ ಪರಮಾತ್ಮಾನಂ ಸ್ವಯಮಿತಿ ಮನ್ಯಮಾನಸ್ತೇನ ಏವೇತಿ । ನ ಹಿ ಸ್ವಕೀಯಂ ಪರಿತ್ಯಜಂಸ್ತೇನೋ ಭವತಿ ॥ ೨೩೫ ॥**

ಅ ॥ ಅಪಹಾರ್ಷೀತ್ = ಅಪಹರಿಸಿದನು, ಸ್ತೇಯಂ = ಕದ್ದುಕೊಳ್ಳುವಿಕೆಯನ್ನು, ಅಕಾರ್ಷೀತ್=ಮಾಡಿದನು, ಇತ್ಯತ್ರ ಚ=ಈ ವಾಕ್ಯದಲ್ಲಿಯೂ, ಅನ್ಯಾಭಿಮತಸ್ಯೈವ ವಸ್ತುನಃ= ಇತರರಿಗೆ ಅಭಿಮತವಾದ ವಸ್ತುವಿಗೇನೇ, ಅಪಹಾರ್ಯತ್ವಾತ್=ಅಪಹರಿಸಲಿಕ್ಕೆ ಯೋಗ್ಯತೆ ಇರುವುದರಿಂದ, ಅಯಂ ದೃಷ್ಟಾಂತಃ=ಈ ಸ್ತೇನಾಪಹಾರ್ಯ ದೃಷ್ಟಾಂತವು, ಭೇದ ಏವ= ಭೇದವಿಷಯದಲ್ಲಿಯೇ, (ಕಥಿತಃ=ಹೇಳಲ್ಪಟ್ಟಿದೆ. ಭೇದಾಭೇದಜ್ಞಾನಿಗೆ ಮೋಕ್ಷಹಾನಿ ವಿಷಯಕವೇ. ಅಂದರೆ — ಅನ್ಯರಿಗೆ ಅಭಿಮತವಾದ ವಸ್ತುವೇ ಅಪಹಾರ್ಯವೆಂದು ಪ್ರಸಿದ್ಧವು. ಅದರಲ್ಲಿ

ಅಭಿಮಾನವುಳ್ಳವನು ಅಪಹಾರಿಯೆಂದು ಪ್ರಸಿದ್ಧನು. ಅಂತೂ ದೃಷ್ಟಾಂತವನ್ನನುಸರಿಸಿಯೇ ದಾರ್ಷ್ಟಾಂತಿಕವನ್ನು ಕೂಡಿಸಬೇಕಾದುದರಿಂದ ಭೇದವಿಷಯದಲ್ಲಿಯೇ ಈ ದೃಷ್ಟಾಂತವು ) ಅನ್ಯಂ ಸಂತಂ ಪರಮಾತ್ಮಾನಂ=ಭಿನ್ನನೇ ಆದ ಸದ್ರೂಪನಾದ ಪರಮಾತ್ಮನನ್ನು, ಸ್ವಯಮಿತಿ ಮನ್ಯಮಾನಃ=ತಾನೇ ಎಂದು ತಿಳಿಯುವವನಾಗಿ, ಅಂದರೆ— ಇತರ ಸಂಬಂಧಿಯಾದ ಪರಮಾತ್ಮತ್ವವನ್ನು ತನಗೆ ಎಂದು ತಿಳಿಯುವವನಾಗಿ, ಸ್ತೇನ ಏವ=ಚೋರನೇಸಂ. ಇತಿ=ಹೀಗೆ, ಭೇದ ಏವ=ಭೇದವಿಷಯದಲ್ಲಿಯೇ. ಸ್ವಕೀಯಂ=ತನ್ನದನ್ನು, ಪರಿತ್ಯಜನ್=ಪರಿತ್ಯಾಗಮಾಡುವವನು, ಸ್ತೇನಃ=ಚೋರನು, ನ ಹಿ ಭವತಿ=ಆಗುವುದಿಲ್ಲವಷ್ಟೇ! (ಮತ್ತೆ ಮಂದನಾಗಲೀ, ವಿರಕ್ತನಾಗಲೀ ಆಗುತ್ತಾನೆ. ಅಂತೂ ಭೇದಜ್ಞಾನಿಗೆ ಸ್ತೇನೋಪಮಾನವು ಕೂಡಲಾರದು.) ॥ ೨೩೫ ॥

ಐಕ್ಯಜ್ಞಾನಿಯು ಲೋಕಾನುಸಾರದಿಂದ ಮಾತ್ರ ಸ್ತೇನನಲ್ಲ. ವಚನಾಂತರದಿಂದಲೂ ಸ್ತೇನನೇ ಎಂದು ನಿರೂಪಿಸುತ್ತಾರೆ —

ಮೂ ॥ ಐಕಾತ್ಮ್ಯಂ ನಾಮ ಯದಿದಂ ಕೇಚಿದ್ಬ್ರೂಯುರನೈಪುಣಾಃ । ಶಾಸ್ತ್ರತತ್ತ್ವಮವಿಜ್ಞಾಯ ತಥಾವಾದಬಲಾ ಜನಾಃ । ಕಾಮಕ್ರೋಧಾಭಿಭೂತತ್ವಾದಹಂಕಾರವಶಂ ಗತಾಃ । ಯಾಥಾತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ । ಬ್ರಹ್ಮಸ್ತೇನಾ ನಿರಾನಂದಾ ಅಪಕ್ವಮನಸೋಽಶಿವಾಃ । ವೈಗುಣ್ಯಮೇವ ಪಶ್ಯಂತಿ ನ ಗುಣಾನಿ ನಿಯುಂಜತೇ । ತೇಷಾಂ ತಮಶ್ಶರೀರಾಣಾಂ ತಮ ಏವ ಪರಾಯಣಂ । ಯತಃ ಸ್ವರೂಪತಶ್ಚಾನ್ಯೋ ಜಾತಿತಃ ಶ್ರುತಿತೋಽರ್ಥತಃ । ಕಥಮಸ್ಮಿ ಸ ಇತ್ಯೇವ ಸಂಬಂಧಃಸ್ಯಾದಸಂಹಿತಃ ॥ ಇತಿ ಮೋಕ್ಷಧರ್ಮೇ ॥
॥ ೨೩೬ ॥

ಅ ॥ ಯತ್ ಐಕಾತ್ಮ್ಯಂ ನಾಮ=ಯಾವುದೊಂದು ಸರ್ವಾತ್ಮರಿಂಗೂ ಬ್ರಹ್ಮೈಕ್ಯವದೆಯೋ, ಇದಂ=ಈ ಜೀವ ಬ್ರಹ್ಮೈಕ್ಯವನ್ನು, ಅನೈಪುಣಾಃ = ಪಾಂಡಿತ್ಯವಿಲ್ಲದಿರುವ, ಕೇಚಿತ್=ಕೆಲವರು, ಶಾಸ್ತ್ರತತ್ತ್ವಂ='ಅಹಂ ಬ್ರಹ್ಮಾಸ್ಮಿ' ಇದು ಮೊದಲಾದ ಶಾಸ್ತ್ರಗಳಿಗೆ ಅಭಿಪ್ರೇತವಾದ ಅರ್ಥವನ್ನು, ಅವಿಜ್ಞಾಯ=ತಿಳಿಯದೆ, ಬ್ರೂಯುಃ=ಹೇಳುತ್ತಾರ. ತಥಾವಾದಬಲಾಃ, ತಥಾವಾದ=ಐಕ್ಯಪ್ರತಿಪಾದಕಕ್ಕೆ ಸದೃಶವಾದ 'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಇತ್ಯಾದಿಗಳಲ್ಲಿ ಪ್ರಥಮಾವಿಭಕ್ತಿತ್ವಾದಿ ರೂಪವಾದ ವಾದವೇ, ಬಲಾಃ = ಬಲವಾಗಿ ಉಳ್ಳ ಅಂದರೆ 'ಅಹಂ ಬ್ರಹ್ಮಾಸ್ಮಿ' 'ಏಕೀ ಭವಂತಿ' ಇತ್ಯಾದಿ ವಾಕ್ಯಗಳ ತಾತ್ಪರ್ಯವನ್ನು ತಿಳಿಯದೆ ಆಪಾತತಃ ಪ್ರತೀತವೇ ಆದ ಅರ್ಥದಲ್ಲಿ ಭ್ರಾಂತರಾದ, ಜನಾಃ=ಜನರು, ಕಾಮಕ್ರೋಧಾಭಿಭೂತತ್ವಾತ್ = ಕಾಮಕ್ರೋಧಗಳಿಂದ ತಿರಸ್ಕೃತರಾದ ಪ್ರಯುಕ್ತ, ಅಹಂಕಾರವಶಂ ಗತಾಃ = ಅಹಂಕಾರದ ಅಧೀನತೆಯನ್ನು ಹೊಂದಿದವರಾಗಿ, ಶಾಸ್ತ್ರಾಣಾಂ=ಭೇದಪರಗಳಾದ ಶಾಸ್ತ್ರಗಳ, ಯಾಥಾತಥ್ಯಂ = ಯಥಾರ್ಥವಾದ ಅರ್ಥವನ್ನು, ಅವಿಜ್ಞಾಯ = ತಿಳಿಯದೆ, ಶಾಸ್ತ್ರದಸ್ಯವಃ= ಆ ಶಾಸ್ತ್ರಗಳು ಅತತ್ತ್ವಾವೇದಕಗಳೆಂದು ತಿಳಿಯುವವರಾಗಿ, ಬ್ರಹ್ಮಸ್ತೇನಾಃ = ಹೀಗೆಯೇ ಐಕ್ಯವನ್ನು ತಿಳಿಯುವವರಾಗಿ, ನಿರಾನಂದಾಃ=ಆನಂದಲೇಶರಹಿತರಾಗಿ, ಅಪಕ್ವಮನಸಃ=ಅಪಕ್ವವಾದ ಮನಸ್ಸುಳ್ಳವರಾಗಿ, ಅಶಿವಾಃ=ಅಮಂಗಲರಾಗಿ, ವೈಗುಣ್ಯಮೇವ = ಜೀವಬ್ರಹ್ಮರಿಂಗೆ ಪಾರಮಾರ್ಥಿಕವಾಗಿ ನಿರ್ಗುಣತ್ವವನ್ನೇ, ಪಶ್ಯಂತಿ = ನೋಡುತ್ತಾರೆ, ಗುಣಾನಿ = ಸರ್ವಜ್ಞತ್ವಾದಿ

ಗುಣಗಳನ್ನು, ನ ನಿಯುಂಜತೇ=ಬ್ರಹ್ಮಸ್ವರೂಪವಾಗಿ ಕೂಡಿಸುವುದಿಲ್ಲ. ತಮಶ್ಶರೀರಾಣಾಂ= ತಮೋಗುಣಪ್ರಚುರವಾದ ಶರೀರವುಳ್ಳ, ತೇಷಾಂ = ಅನ್ಯಥಾಜ್ಞಾನಿಗಳಿಗೆ, ತಮ ಏವ=ನರಕ ವಿಶೇಷವೇ, ಪರಾಯಣಂ = ಪ್ರಾಪ್ಯವು. ಯತಃ = ಏಕೆಂದರೆ, ಸ್ವರೂಪತಃ=ಪರಿಮಾಣ ಭೇದ ದಿಂದಲೂ, ಜಾತಿತಃ=ಜೀವತ್ವಾದಿ ಜಾತಿಭೇದಗಳಿಂದಲೂ, ಶ್ರುತಿತಃ = 'ದ್ವಾ ಸುಪರ್ಣಾ' ಇತ್ಯಾದಿ ಶ್ರುತಿಗಳಿಂದಲೂ, ಅರ್ಥತಃ = ಪ್ರಯೋಜನ ಭಾವಾಭಾವಗಳಿಂದಲೂ, ಸಃ=ಆ ಹರಿಯು, ಅನ್ಯಃ=ಭಿನ್ನನಾಗಿಯೇ, (ಪ್ರತೀತನಾಗುತ್ತಾನೆ, ಆದಕಾರಣ,) ಸಃ=ಅವನೇ, ಅಸ್ಮಿ=ನಾನು ಆಗಿರುತ್ತೇನೆ. ಇತಿ=ಹೀಗೆ, ಸಂಬಂಧಃ=ಅನ್ವಯವು, ಅಸಂಹಿತಃ=ಅಯೋಗ್ಯ ವಾದುದು, ಕಥಮೇವ=ಹೇಗೆ ತಾನೆ, ಸ್ಯಾತ್=ಆಗುವುದು. ಇತಿ=ಹೀಗೆ, ಮೋಕ್ಷಧರ್ಮೇ= ಮೋಕ್ಷಧರ್ಮದಲ್ಲಿದೆ.

ತಾ || (1) 'ಇಚ್ಛಾದ್ವೇಷ ಸಮುತ್ಥೇನ ದ್ವಂದ್ವಮೋಹೇನ ಭಾರತ । ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂ ತಪ ॥' ಇಚ್ಛಾದ್ವೇಷಗಳಿಂದ ಹುಟ್ಟಿದ ಜೀವೇಶ್ವರರ ದ್ವಂದ್ವವಿಷಯಕವಾದ ಮಿಥ್ಯಾಜ್ಞಾನದಿಂದ, ಹಾಗೆಯೇ ಅವರ ಧರ್ಮಭೂತಗಳಾದ ಸರ್ವಜ್ಞತ್ವ, ಅಲ್ಪಜ್ಞತ್ವ, ಸ್ವಾತಂತ್ರ್ಯ, ಪಾರತಂತ್ರ್ಯ, ಸರ್ವಶಕ್ತಿ, ಅಲ್ಪಶಕ್ತ್ಯಾದಿ ರೂಪಗಳಾದ ದ್ವಂದ್ವ ವಿಷಯಕ ಮೋಹಗಳಿಂದ ನನ್ನನ್ನು ಯಾರೂ ತಿಳಿಯುವುದಿಲ್ಲ. ಸೃಷ್ಟಿಕಾಲವನ್ನಾರಂಭಿಸಿ ಎಲ್ಲಾ ಭೂತಗಳೂ, ಜೀವೇಶ್ವರೈಕ್ಯರೂಪವಾದ ಮಿಥ್ಯಾಜ್ಞಾನವನ್ನು ಹೊಂದುತ್ತಾರೆಂದು ಗೀತೆಯಲ್ಲಿ ಹೇಳಿರುವುದರಿಂದಲೇ ಕಾಮಾದಿಗಳಿಂದ ಯುಕ್ತರಾದಪ್ರಯುಕ್ತ ಶಾಸ್ತ್ರತತ್ವಜ್ಞಾನವು ಅವರಿಗಿಲ್ಲ. (2) 'ಅಹಂ ಬ್ರಹ್ಮಾಸ್ಮಿ' ಇತ್ಯಾದಿಗಳಿಂದ ಸ್ಪಷ್ಟವಾಗಿ ಐಕ್ಯವು ಪ್ರತೀತವಾಗುವುದ ರಿಂದ ಅದರ ಬಲದಿಂದಲೇ ಭೇದಶಾಸ್ತ್ರಾದಿಗಳಿಗೆ ಅತತ್ವಾವೇದಕತ್ವವನ್ನು ಕಲ್ಪಿಸುವುದು ಯುಕ್ತವೇ, ಎಂದು ಹೇಳಕೂಡದು. ಪರಿಮಾಣ ಭೇದಾದಿಗಳಿಂದ ಜೀವರಿಂದ ಭಿನ್ನನೆಂದೇ ಸಿದ್ಧನಾಗಿರುವನು. (3) 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ವಾಕ್ಯಗಳಿಗೆ ಐಕ್ಯಪರತ್ವವು ನಿಶ್ಚಿತ ವಾಗಿದ್ದರೆ ಭೇದವಾಕ್ಯಗಳಿಗೆ ಅತತ್ವಾವೇದಕತ್ವಾದಿಗಳನ್ನು ಕಲ್ಪಿಸುವುದು ಯುಕ್ತವಾಗುತ್ತಿತ್ತು. ಹೀಗಿಲ್ಲ. ವಿರುದ್ಧಧರ್ಮಾಶ್ರಯತ್ವರೂಪಾನುಮಾನ ದ್ವಾ ಸುಪರ್ಣಾ ಇತ್ಯಾದ್ಯಾಗಮ ಇವುಗ ಳಿಂದ ವಿರೋಧವಿದ್ದುದರಿಂದ ಪ್ರತೀತವಾದ ಅನ್ವಯಕ್ಕೆ ಯೋಗ್ಯತೆಯೇ ಇಲ್ಲ. ಇವು ಐಕ್ಯವಾಕ್ಯ ಗಳಲ್ಲಿಯೂ ಯೋಗ್ಯತೆಯನ್ನಂಗೀಕರಿಸಿದರೆ ಅನ್ಯೋನ್ಯಾಶ್ರಯರೂಪದೋಷವು ಪ್ರಾಪ್ತವಾಗು ವುದು. ಭೇದವಾಕ್ಯಾದಿಗಳಿಗೆ ಅತತ್ವಾವೇದಕತ್ವಾದಿಗಳು ಸಿದ್ಧಿಸಿದರೆ ಭೇದವಾಕ್ಯದ ವಿರೋಧ ವಿಲ್ಲದಿರುವುದರಿಂದ ಯೋಗ್ಯತೆಯು ಸಂಪತ್ತಿಯಿಂದ ಅಹಮಾದಿ ವಾಕ್ಯಗಳಿಗೆ ಐಕ್ಯಾರ್ಥವು ನಿಶ್ಚಿತವಾಗುವುದು. ಐಕ್ಯಾರ್ಥವು ನಿಶ್ಚಿತವಾದರೆ ಅದರ ವಿರೋಧದಿಂದ ಭೇದವಾಕ್ಯಗಳಿಗೆ ಅತತ್ವಾ ವೇದಕತ್ವಾದಿಗಳು ನಿಶ್ಚಿತಗಳಾಗುವುವು. ಅಂತೂ ಒಂಭತ್ತು ಪ್ರಕರಣಗಳಿಗೂ ಭೇದದಲ್ಲಿಯೇ ತಾತ್ಪರ್ಯವು ॥ ೨೩೬ ॥

ಹೀಗೆ ಒಂಭತ್ತು ವಾಕ್ಯಗಳಿಗೂ ಜೀವಬ್ರಹ್ಮಭೇದದಲ್ಲಿಯೇ ತಾತ್ಪರ್ಯವೆಂದು ಪ್ರತ್ಯೇಕ ಉಪಪಾದಿಸಿ ಈಗ ಎಲ್ಲಾ ವಾಕ್ಯಗಳೂ ಭೇದಪರಗಳಾಗಿವೆ ಎಂಬೀ ವಿಷಯದಲ್ಲಿ ಸಮಾಖ್ಯಾ ವಾಕ್ಯವನ್ನು ಪಠಿಸುತ್ತಾರೆ —

**ಮೂ ॥ ಯಥಾ ಪಕ್ಷೀ ಚ ಸೂತ್ರಂ ಚ ನಾನಾವೃಕ್ಷರಸಾ ಯಥಾ । ಯಥಾ ನದ್ಯಃ ಸಮುದ್ರಶ್ಚ ಶುದ್ಧೋದಲವಣೌ ಯಥಾ। ಯಥಾ ಚೋರಾಪ- ಹಾರ್ಯೌ ಚ ಯಥಾ ಪುಂವಿಷಯಾವಪಿ । ತಥಾ ಜೀವೇಶ್ವರೌ**

**ಭಿನ್ನೌ ಸರ್ವದೈವ ವಿಲಕ್ಷಣೌ । ತಥಾಽಪಿ ಸೂಕ್ಷ್ಮರೂಪತ್ವಾನ್ನ ಜೀವಾತ್ಪರಮೋ ಹರಿಃ । ಭೇದೇನ ಮಂದದೃಷ್ಟೀನಾಂ ದೃಶ್ಯತೇ ಪ್ರೇರಕೋಽಪಿ ಸನ್ । ವೈಲಕ್ಷಣ್ಯಂ ತಯೋರ್ಜ್ಞಾತ್ವಾ ಮುಚ್ಯತೇ ಬಧ್ಯತೇಽನ್ಯಥಾ ॥ ಇತಿ ಚ ಪರಮೋಪನಿಷದಿ ॥ ೨೩೭ ॥**

ಅ ॥ ಯಥಾ=ಹೇಗೆ, ಪಕ್ಷೀ ಚ=ಹಕ್ಕಿಯು. ಸೂತ್ರಂ ಚ=ಸೂತ್ರವೂ ಇವುಗಳೋ, ತಥಾ=ಹಾಗೆಯೇ, ಜೀವೇಶ್ವರೌ=ಜೀವೇಶ್ವರರು, ಭಿನ್ನೌ=ಭೇದವುಳ್ಳವರು, ಯಥಾ=ಹೇಗೆ, ನಾನಾವೃಕ್ಷರಸಾಃ=ಅನೇಕ ವೃಕ್ಷಗಳು ರಸಗಳೋ, ಯಥಾ=ಹೇಗೆ, ನದ್ಯಃ=ನದಿಗಳು, ಸಮುದ್ರಶ್ಚ=ಸಮುದ್ರವೋ, ತಥಾ=ಹಾಗೆಯೇ, ಸರ್ವದೈವ=ಯಾವಾಗಲೂ ಜೀವೇಶ್ವರರು, ವಿಲಕ್ಷಣೌ=ಭೇದವುಳ್ಳವರೇ, ಯಥಾ=ಹೇಗೆ, ಧಾನಾಗತಃ=ಬೀಜಗಳಲ್ಲಿರತಕ್ಕ ಶ್ರೀ ಹರಿಯು (ಸೂಕ್ಷ್ಮರೂಪನಾದುದರಿಂದ ಕಾಣಲ್ಪಡುವುದಿಲ್ಲವೋ), ತಥಾ=ಹಾಗೆಯೇ, ಸೂಕ್ಷ್ಮರೂಪತ್ವಾತ್= ಸೂಕ್ಷ್ಮಸ್ವರೂಪನಾದುದರಿಂದ, ಜೀವಾತ್ ಭಿನ್ನೋಽಪಿ=ಜೀವನಿಂದ ಭೇದವುಳ್ಳವನಾದಾಗ್ಯೂ, ಪರಮಃ=ಸರ್ವೋತ್ತಮನಾದ. ಹರಿಃ=ಶ್ರೀ ಪರಮಾತ್ಮನು, ಮಂದದೃಷ್ಟೀನಾಂ=ಅಲ್ಪಜ್ಞಾನಿಗಳಿಗೆ, ಭೇದೇನ=ಭೇದದಿಂದ, ನ ದೃಶ್ಯತೇ=ಕಾಣಲ್ಪಡುವುದಿಲ್ಲ. ಯಥಾ=ಹೇಗೆ, ಶುದ್ಧೋದಲವಣೇ=ಶುದ್ಧೋದಕ ಲವಣಗಳು, ಭಿನ್ನೇ=ಭೇದವುಳ್ಳವುಗಳೋ, ತಥಾಪಿ=ಆದಾಗ್ಯೂ, ನೀರಿನೊಳಗೆ ಇರುವ ಲವಣದ ಸಾಮರ್ಥ್ಯವು ಕಂಡರೂ ಅದು ಕಾಣುವುದಿಲ್ಲ. ತಥಾ=ಹಾಗೆಯೇ, ಪ್ರೇರಕೋಽಪಿ ಸನ್=ಕಾಣಲ್ಪಟ್ಟ ಸಾಮರ್ಥ್ಯವುಳ್ಳವನಾದಾಗ್ಯೂ, ನ ದೃಶ್ಯತೇ=ಕಾಣಲ್ಪಡುವುದಿಲ್ಲ. ಯಥಾ=ಹೇಗೆ, ಪುಂವಿಷಯೌ=ಕಟ್ಟಲ್ಪಟ್ಟ ಕಣ್ಣುಳ್ಳವನು, ಗಂಧಾರದೇಶಗಳು (ಭಿನ್ನಗಳೋ), ಗುರುಗಳ ಉಪದೇಶದಿಂದ ದ್ರಷ್ಟೃದೃಶ್ಯಭಾವವುಳ್ಳವುಗಳೋ. ತಥಾ=ಹಾಗೆಯೇ, ಜೀವೇಶ್ವರಾವಪಿ=ಜೀವೇಶ್ವರರೂ ಕೂಡ, ಯಥಾ=ಹೇಗೆ, ಚೋರಾಪಹಾರ್ಯೌ=ಕದಿಯುವವನೂ ಕದ್ದುಕೊಳ್ಳತಕ್ಕ ವಸ್ತುವೂ ಭಿನ್ನಗಳೋ, ಹಾಗೆಯೇ ಜೀವೇಶ್ವರರೂ ಭಿನ್ನರು, ತಯೋಃ=ಆ ಜೀವೇಶ್ವರರಿಗೆ, ವೈಲಕ್ಷಣ್ಯಂ=ಅತ್ಯಂತ ಭೇದವನ್ನು, ಜ್ಞಾತ್ವಾ=ತಿಳಿದು, ಮುಚ್ಯತೇ=ಸಂಸಾರದಿಂದ ಬಿಡಲ್ಪಡುತ್ತಾನೆ. ಅನ್ಯಥಾ=ಐಕ್ಯಜ್ಞಾನದಿಂದ, ಬಧ್ಯತೇ=ನಿತ್ಯ ನರಕದಲ್ಲಿ ಸ್ಥಾಪಿಸಲ್ಪಡುತ್ತಾನೆ. ಇತಿ ಚ=ಹೀಗೆ, ಪರಮೋಪನಿಷದಿ=ಪರಮೋಪನಿಷತ್ತಿನಲ್ಲಿದೆ ॥ ೨೩೭ ॥

ಹೀಗೆ ದೃಷ್ಟಾಂತಾದಿ ವಾಕ್ಯಗಳನ್ನನುಸರಿಸಿ 'ಅತತ್ ತ್ವಂ' ಎಂದು ಪದವನ್ನು ಛೇದಿಸಿ ಭೇದಪರವಾಗಿ ವಾಕ್ಯವನ್ನು ವ್ಯಾಖ್ಯಾನಮಾಡಿದರು. ಅದು ಅಸಂಗತವು. ಹೀಗೆ ಹೇಳಿದರೆ 'ಸ ಆತ್ಮಾ ತತ್ತ್ವಮಸಿ' ಎಂಬೀ ವಾಕ್ಯವು ಐಕ್ಯವನ್ನು ಪ್ರತಿಷೇಧಿಸತಕ್ಕುದು ಎಂದು ಹೇಳಿದಹಾಗೆ ಆಗುವುದು. ಇದು ಯುಕ್ತವಾಗಲಾರದು. ಐಕ್ಯವು ಪ್ರಾಪ್ತವಾಗದಿರುವುದರಿಂದ ಪ್ರತಿಷೇಧವೇ ಕೂಡಲಾರದು ಎಂದರೆ ಪ್ರಸಕ್ತಿಯನ್ನು (ಆದಿಯಲ್ಲಿ ಸಾಧಾರಣ ಪ್ರಾಪ್ತಿಯನ್ನು) ತೋರಿಸುವುದಕ್ಕಾಗಿ ಆಗಮವಾಕ್ಯವನ್ನು ಹೇಳುತ್ತಾರೆ —

**ಮೂ ॥ ಪ್ರೇರಕಃ ಸರ್ವಜೀವಾನಾಂ ಪ್ರಾಣಧೀಚೋದಿತಾ ಚ ಸಃ । ವಿಷ್ಣುಸ್ಸಂಸಾರಿಣೋಽನ್ಯೋ ಯಸ್ತಮವಿಜ್ಞಾಯ ಮೂಢಧೀಃ । ದೇಹೇಂದ್ರಿಯಪ್ರಾಣಬುದ್ಧಿನೇತೃತ್ವಂ ಮನ್ಯತೇ ತ್ಮನಃ । ಅತಃ ಸಂಸಾರಪದವೀಂ ಯಾತಿ ಜೀವೇಶಯೋಃ ಸದಾ । ವೈಲಕ್ಷಣ್ಯಂ ಪರಂ ಜ್ಞಾತ್ವಾ ಮುಚ್ಯತೇ ಬಧ್ಯತೇನ್ಯಥಾ ॥ ಇತಿ ಚ ॥ ೨೩೮ ॥**

ಅ || ಯಃ=ಯಾವಾತನು, ಸರ್ವಜೀವಾನಾಂ = ಎಲ್ಲಾ ಜೀವರಿಗೂ, ಪ್ರೇರಕಃ= ಪ್ರೇರಿಸತಕ್ಕವನೋ, ಪ್ರಾಣಧೀಚೋದಿತಾ ಚ, ಪ್ರಾಣ=ಇಂದ್ರಿಯಗಳಿಗೂ ವಾಯುಗಳಿಗೂ, ಧೀ=ಮನಸ್ಸಿಗೂ, ಚೋದಿತಾ ಚ=ಪ್ರೇರಕನೋ, ಸಃ ವಿಷ್ಣುಃ=ಆ ಹರಿಯು, ಸಂಸಾರಿಣಃ= ಜೀವನಿಂದ, ಅನ್ಯಃ=ಭಿನ್ನನು, ತಂ=ಆ ಹರಿಯನ್ನು, ಅವಿಜ್ಞಾಯ=ತಿಳಿಯದೆ, ಮೂಢಧೀಃ= ಅತಿಮೂಢವಾದ ಬುದ್ಧಿಯುಳ್ಳವನಾಗಿ, ದೇಹೇಂದ್ರಿಯಪ್ರಾಣಬುದ್ಧಿನೇತೃತ್ವಂ=ಶರೀರ ಚಕ್ಷು ರಾದೀಂದ್ರಿಯ ವಾಯು ಮನಸ್ಸು ಇವುಗಳ ಪ್ರೇರಕತ್ವವನ್ನು. ತ್ಮನಃ=ತನಗೇನೆ, ಮನ್ಯತೇ= ತಿಳಿಯುತ್ತಾನೆ. ಅತಃ=ಆದಕಾರಣ, ಸಂಸಾರಪದವೀಂ=ಸಂಸಾರಪದವಿಯನ್ನು, ಯಾತಿ= ಹೊಂದುತ್ತಾನೆ. ಸದಾ = ಯಾವಾಗಲೂ, ಜೀವೇಶಯೋಃ=ಜೀವಬ್ರಹ್ಮರಿಗೆ, ಪರಂ=ಪಾರ ಮಾರ್ಥಿಕವಾಗಿಯೂ, ವೈಲಕ್ಷಣ್ಯಂ=ಭೇದವನ್ನು, ಜ್ಞಾತ್ವಾ=ತಿಳಿದು, ಮುಚ್ಯತೇ=ಸಂಸಾರ ದಿಂದ ಬಿಡಲ್ಪಡುತ್ತಾನೆ. ಅನ್ಯಥಾ=ಜೀವೇಶರಿಗೆ ಭೇದವನ್ನು ತಿಳಿಯದೆ, (ತಾನೇ ದೇಹಾದಿ ಗಳಿಗೆ ಪ್ರೇರಕನೆಂಬೀಜ್ಞಾನದಿಂದ ಸಂಸಾರಪದವಿಯನ್ನು ಹೊಂದುತ್ತಾನೆ ಎಂದಿಷ್ಟೇ ಅಲ್ಲ, ಮತ್ತೆ ನಿತ್ಯನರಕದಲ್ಲಿ, ಬಧ್ಯತೇ ಚ=ಸ್ಥಾಪಿಸಲ್ಪಡುತ್ತಾನೆ. ಇತಿ ಚ=ಹೀಗೆ ಇದೆ.

ತಾ || ಈ ವಾಕ್ಯದಲ್ಲಿ ಶ್ರೀ ಭಗವಂತನಿಗೆ ಶರೀರಾದಿಗಳನ್ನ ಪ್ರೇರಿಸುವಿಕೆಯು ಎಂಬೀ ಲಕ್ಷಣವು ಹೇಳಲ್ಪಟ್ಟಿತು. ಅಂತಹ ಲಕ್ಷಣವನು ಎಲ್ಲಾ ಜನರು ಅಹಂಕಾರ (ತಾನೇ ಕರ್ತನು ಎಂಬೀ ಅಭಿಮಾನವು) ಮಮಕಾರ (ದೆಹಾದಿಗಳಲ್ಲಿ ತನ್ನದೆಂಬ ಅಭಿಮಾನವು) ವಶದಿಂದ ತಮಗೇನೇ ಎಂದು ತಿಳಿಯುತ್ತಾರೆ. ಅಂತಹ ಜನರಿಗೆ ತನ್ನಲ್ಲಿ ಭಗವಂತನ ಲಕ್ಷಣವಿದೆ ಎಂಬೀ ಜ್ಞಾನದಿಂದ ಅನೇಕ ಅನರ್ಥವು ಸಂಭವಿಸುವುದು. ಅಂತಹ ಅಭಿಮಾನವನ್ನು ಬಿಟ್ಟುಬಿಟ್ಟರೆ ಮಹಾ ಪುರುಷಾರ್ಥವು ಲಭಿಸುವುದು. ಆದಕಾರಣ ಎಲ್ಲಾ ಪ್ರಾಣಿಗಳಿಗೂ ಐಕ್ಯಾಭಿಮಾನದಿಂದ ಐಕ್ಯಜ್ಞಾನವು ಪ್ರಾಪ್ತಿಯಾಗಲು ಶ್ವೇತಕೇತು ಮೊದಲಾದ ಎಲ್ಲಾ ಸಜ್ಜನರಿಗೂ ಇಷ್ಟಪ್ರಾಪ್ತಿ ಅನಿಷ್ಟಪರಿಹಾರಕ್ಕಾಗಿ ಐಕ್ಯವು ನಿಷೇಧಿಸಲ್ಪಡುವುದು || ೨೩೮ ||

ಹೀಗೆ ಸಾಧಾರಣ ಪ್ರಾಪ್ತಿಯನ್ನು ತೋರಿಸಿ ಅಸಾಧಾರಣಪ್ರಾಪ್ತಿಯನ್ನು ತೋರಿಸುತ್ತಾರೆ.

**ಮೂ || ಸರ್ವಾನ್ವೇದಾನಧೀತ್ಯ ಮಹಾಮನಾ ಅನೂಚಾನಮಾನೀ ಸ್ತಬ್ಧ- ಏಯಾಯೇತ್ಯಾತ್ಮನೋಽನಮನೂಚಾನ್ಯತ್ವಾದಿ ಗುಣಪ್ರದಂ ಪರಮ- ವಿಜ್ಞಾಯ ಸ್ತಬ್ಧಸ್ಯ ಪರಾಧೀನತ್ವಜ್ಞಾಪನೇನ ಸ್ತಬ್ಧತಾಂ ನಿರಸ್ಯ ತನ್ನಿಷ್ಠಾ ಹ್ಯತ್ರೋಪದಿಶ್ಯತೇ || ೨೩೯ ||**

ಅ || (ಛಾ. ಉ. ಅ. ೬. ವ. ೧) ಶ್ವೇತಕೇತುರ್ಹಾರುಣೇಯ ಆಸ ತಂ ಹ ಪಿತೋವಾ ಚ ಶ್ವೇತಕೇತೋ ವಸ ಬ್ರಹ್ಮಚರ್ಯಂ ನ ವೈ ಸೋಮ್ಯಾಸ್ಮತ್ಕುಲೀನೋಽನನೂಚ್ಯ ಬ್ರಹ್ಮಬಂಧು ರಿವ ಭವತೀತಿ ಸ ಹ ದ್ವಾದಶವರ್ಷ ಉಪೇತ್ಯ ಚತುರ್ವಿಂಶತಿವರ್ಷಃ ಸರ್ವಾನ್ ವೇದಾನಧೀತ್ಯ ಮಹಾಮನಾ ಅನೂಚಾನಮಾನೀ ಸ್ತಬ್ಧ ಏಯಾಯ ಇತ್ಯಾದಿ || (ಈ ೬ನೇ ಅಧ್ಯಾಯದಲ್ಲಿ ಜೀವೇಶ್ವರರ ಭೇದವಿಷಯದಲ್ಲಿ ಸಂಶಯಗ್ರಸ್ತನು ಅಥವಾ ಯಾರು ವಿಪರ್ಯಸ್ತನಾಗಿರುವನೋ ಆತನನ್ನು ಕುರಿತು ಈಶ್ವರನಿಂದ ಭೇದಜ್ಞಾನವು ಮುಕ್ತಿಗೆ ಉಪಯುಕ್ತವು ಎಂದು ಯುಕ್ತಿ ಗಳಿಂದ ತಿಳಿಸಲ್ಪಡುವುದು. ಈಗ ಶ್ವೇತಕೇತುವನ್ನು ನಿಮಿತ್ತೀಕರಿಸಿ ಜೀವರಿಗೆಲ್ಲಾ ಶ್ರೀ ಹರಿ ಯಿಂದ ಭೇದವನ್ನು ಬೋಧಿಸಲಿಕ್ಕೆ ಅಭೇದದ ಪ್ರಸಕ್ತಿಯನ್ನು ಹೇಳುತ್ತಾರೆ.) ಆರುಣೇಯಃ= ಅರುಣನ ಮೊಮ್ಮಗನಾದ, ಶ್ವೇತಕೇತುಃ=ಶ್ವೇತಕೇತುವು, ಆಸ=ಇದ್ದನು, ಹ=ಪ್ರಸಿದ್ಧವು.

ತಂ=ಆ ಮಗನನ್ನು ಕುರಿತು, ಪಿತಾ=ತಂದೆಯು, ಉವಾಚ ಹ=ಹೇಳಿದನು, ಶ್ವೇತಕೇತೋ= ಎಲೋ ಶ್ವೇತಕೇತುವೇ, ಬ್ರಹ್ಮಚರ್ಯಂ=ವೇದಾಧ್ಯಯನವನ್ನುದ್ದೇಶಿಸಿ, ವಸ=ಆವಾಸಮಾಡು, (ಗುರುಕುಲದಲ್ಲಿ ವೇದಾಧ್ಯಯನವನ್ನು ಮಾಡು.) ಸೋಮ್ಯ = ಎಲೋ ಶ್ವೇತಕೇತುವೇ, ಅಸ್ಮತ್ಕುಲೀನಃ=ನಮ್ಮ ಕುಲದಲ್ಲಿ ಹುಟ್ಟಿದವನು, ಯಾರೊಬ್ಬನೂ, ಅನನೂಚ್ಯ = ಅಧ್ಯಯನ ಮಾಡದೆ, ಬ್ರಹ್ಮಬಂಧುರಿವ=ಬ್ರಾಹ್ಮಣಾಭಾಸನಂತೆ, ನ ವೈ ಭವತಿ = ಆಗುವುದೇ ಇಲ್ಲವು ಇತಿ=ಹೀಗೆ ಹೇಳಿದನು. ಸ ಹ=ಹೀಗೆ ತಂದೆಯಿಂದ ಹೇಳಲ್ಪಟ್ಟ ಶ್ವೇತಕೇತುವು, ದ್ವಾದಶವರ್ಷಃ= ಹನ್ನೆರಡುವರ್ಷ ವಯಸ್ಸುಳ್ಳವನಾಗಿ, ಉಪೇತ್ಯ=ಗುರುಕುಲವನ್ನು ಹೊಂದಿ, ಚತುರ್ವಿಂಶತಿ ವರ್ಷಃ=೨೪ ವರ್ಷ ವಯಸ್ಸುಳ್ಳವನಾಗಿ, ಸರ್ವಾನ್ ವೇದಾನ್=ಎಲ್ಲಾ ವೇದಗಳನ್ನೂ, ಅಧೀತ್ಯ=ಅಧ್ಯಯನಮಾಡಿ, ಅನೂಚಾನಮಾನೀ=ಅಂಗಸಹಿತಗಳಾದ ವೇದಗಳನ್ನು ಅಧ್ಯಯನ ಮಾಡಿದವನು ನಾನೇ ಎಂದಭಿಮಾನವುಳ್ಳವನಾಗಿ, ಮಹಾಮನಾಃ = ಮಹಾತ್ಮನಾಗಿರುವೆನು ಎಂಬೀ ಮನಸ್ಸುಳ್ಳವನಾಗಿ, ಸ್ತಬ್ಧಃ=ಅವಿನೀತನಾಗಿ, ಏಯಾಯ=ಪ್ರಾಪಿಸಿದನು. ಇತಿ=ಹೀಗೆ ಆತ್ಮನಃ=ತನ್ನಿಂದ, ಅನ್ಯಂ=ಮತ್ತೊಬ್ಬನನ್ನು, ಅನೂಚಾನತ್ವಾದಿಗುಣಪ್ರದಂ=ಅನೂಚಾನತ್ವ ಮೊದಲಾದ ಗುಣಗಳನ್ನು ಕೊಡತಕ್ಕ, ಪರಂ=ಪರಮಾತ್ಮನನ್ನು, ಅವಿಜ್ಞಾಯ=ತಿಳಿಯದೆ, ಸ್ತಬ್ಧಸ್ಯ=ಅವಿನೀತನಿಗೆ, ಪರಾಧೀನತ್ವಜ್ಞಾಪನೇನ=ಇತರಾಧೀನತ್ವವನ್ನು ತಿಳಿಸಿಕೊಡೋಣದ ರಿಂದ, ಸ್ತಬ್ಧತಾಂ=ಅವಿನೀತತ್ವವನ್ನು, ನಿರಸ್ಯ=ನಿರಾಕರಿಸಿ, ತನ್ನಿಷ್ಠಾ = ಭಗವನ್ನಿಷ್ಠವಾದ ಭಕ್ತಿಯು, ಅತ್ರ =ಇಲ್ಲಿ, ಉಪದಿಶ್ಯತೇ=ಉಪದೇಶಿಸಲ್ಪಡುತ್ತದೆ. ಹಿ=ನಿಶ್ಚಯವು.

ತಾ ॥ ನಾನೇ ಸ್ವತಂತ್ರವಾಗಿ ಅನೂಚಾನತ್ವಾದಿಗುಣಗಳುಳ್ಳವನೆಂದು ತಿಳಿದು ಅವಿನೀತವಾದ ಶ್ವೇತಕೇತುವಿಗೆ ಭಗವನ್ನಿಷ್ಠವಾದ ಭಕ್ತಿಯು ಉಪದೇಶಿಸಲ್ಪಟ್ಟಿತು. ಪರಮಾತ್ಮನ ಲಕ್ಷಣಗಳು ತನಗೆ ಇವೆ ಎಂದು ಅಭಿಮಾನವಿರಲು ಆ ಹರಿಯಿಂದ ಐಕ್ಯವೇ ಪ್ರಾಪ್ತವಾಗುವುದರಿಂದ ಅಪ್ರಾಪ್ತಪ್ರತಿಷೇಧವಾಗಲಾರದು ॥ ೨೩೯ ॥

ರೀತ್ಯಂತರದಿಂದಲೂ 'ಅತತ್ತ್ವಮಸಿ' ಎನ್ನುವುದು ಪ್ರಾಪ್ತವಾದುದನ್ನು ನಿಷೇಧಿಸುತ್ತದೆ ಎಂದು ತೋರಿಸುವರು —

**ಮೂ ॥ ತದ್ಧೈಕ ಆಹುರಸದೇವೇದಮಗ್ರ ಆಸೀದಿತ್ಯಾದಿವಾದಿಪ್ರಸಿದ್ಧಮಪಿ ನಿರಾಕ್ರಿಯತೇ ॥ ೨೪೦ ॥**

ಅ ॥ ತತ್=ಆ ಸೃಷ್ಟಿವಿಷಯದಲ್ಲಿ, ಏಕೇ=ಶೂನ್ಯವಾದಿಗಳು, ಇದಮಗ್ರೇ=ಪ್ರಲಯ ಕಾಲದಲ್ಲಿ, ಅಸದೇವ=ಶೂನ್ಯಾತ್ಮಕವೇ, ಆಸೀತ್=ಇತ್ತು. ಇತಿ=ಹೀಗೆ, ಆಹುಃ=ಹೇಳುತ್ತಾರೆ. ಇತ್ಯಾದಿ ವಾದಿಪ್ರಸಿದ್ಧಮಪಿ=ಇದುಮೊದಲಾದ ಐಕ್ಯವಾದಿಗಳ ಪ್ರವಾದದಿಂದ ಪ್ರಾಪ್ತವಾದಾಗ್ಯೂ ಐಕ್ಯವು, ನಿರಾಕ್ರಿಯತೇ='ಅತತ್ತ್ವಮಸಿ' ಎನ್ನುವುದರಿಂದ ನಿರಾಕರಿಸಲ್ಪಡುತ್ತದೆ.

ತಾ ॥ (1) ಅನಾದಿಯಾದ ವೇದವು ಸಾದಿನಾದಿಪ್ರಾಪ್ತವಾದುದನ್ನು ನಿರಾಕರಿಸುತ್ತದೆ ಎನ್ನುವುದು ಹೇಗೆ ಕೂಡುವುದೆಂದರೆ— ವಾದಿಪ್ರವಾದಗಳೂ ಪ್ರವಾಹರೂಪದಿಂದ ಅನಾದಿಗಳೇ ಆಗಿವೆ. (2) ವಾದಿಪ್ರಾಪ್ತವಾದುದೂ ವೇದದಿಂದ ನಿರಾಕರಿಸಲ್ಪಡುತ್ತದೆ ಎನ್ನುವುದು ಸ್ಪಷ್ಟವಾಗಿ ಇಲ್ಲಿಯೇ ದೃಷ್ಟವಾಗಿದೆ. ಹೇಗೆಂದರೆ— ಇದೇ ಪ್ರಕರಣದಲ್ಲಿ 'ಸದೇವ ಸೋಮ್ಯೇದಮಗ್ರ ಆಸೀತ್' ಎನ್ನುವುದರಿಂದ ತನ್ನ ಮತವನ್ನು ಹೇಳಿ 'ತದ್ಧೈಕ ಆಹುರಸದೇವೇದಮಗ್ರ ಆಸೀತ್ ತಸ್ಮಾದಸತಃ ಸದಜಾಯತ' ಎಂದು ಶೂನ್ಯವಾದಿರೀತ್ಯಾಪ್ರಾಪ್ತವಾದ ಶೂನ್ಯವೇ ಪ್ರಲಯಕಾಲ

ದಲ್ಲಿರುವುದು ಜಗತ್ತಿಗೆ ಕಾರಣವಾದುದು, ಎಂದನುವಾದಮಾಡಿ 'ಕುತಸ್ತು ಖಲು ಸೋಮ್ಯೈವಂ ಸ್ಯಾತ್' 'ಕಥಮಸತಃ ಸಜ್ಜಾಯೇತ' ಎಂದು ನಿರಾಕರಿಸಲ್ಪಡುವುದು ॥ ೨೪೦ ॥

**ಮೂ ॥ ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದ-ಯಂತೇ ಪ್ರಮೂಢಾ ಇತ್ಯಾದಿವಚ್ಛ್ರುತಿತಾತ್ಪರ್ಯಾಪರಿಜ್ಞಾನಪ್ರಾಪ್ತಂ ಚ । ದರ್ಶಿತಂ ಚೈಕಾತ್ಮ್ಯಂ ನಾಮ ಯದಿದಂ ಕೇಚಿದ್ಬ್ರುಯು-ರನ್ಯೈಪುಣಾಃ ॥ ಇತಿ ॥ ೨೪೧ ॥**

ಅ ॥ ಇಷ್ಟಾಪೂರ್ತಂ=ಯಾಗ ಅನ್ನದಾನಾದಿಗಳನ್ನು, ವರಿಷ್ಠಂ=ಶ್ರೇಷ್ಠವಾದವುಗಳನ್ನಾಗಿ, ಮನ್ಯಮಾನಾಃ=ತಿಳಿಯುವವರಾಗಿ, ಪ್ರಮೂಢಾಃ=ಅತಿ ಮೂಢರಾದವರಾಗಿ, ಅನ್ಯತ್=ಬೇರೆ, ಶ್ರೇಯಃ=ಶ್ರೇಯಸ್ಸಾಧನವನ್ನು, ನ ವೇದಯಂತೇ=ತಿಳಿಯುವುದಿಲ್ಲ. ಇತ್ಯಾದಿವತ್=ಇತ್ಯಾದಿಗಳಂತೆಯೇ, ಶ್ರುತಿತಾತ್ಪರ್ಯಾಪರಿಜ್ಞಾನಪ್ರಾಪ್ತಂ ಚ=ಶ್ರುತಿಗಳ ತಾತ್ಪರ್ಯ ಪರಿಜ್ಞಾನವಿಲ್ಲದಿರುವುದರಿಂದಲೇ ಪ್ರಾಪ್ತವಾಗಿದೆ. (ಇಂತಹುದೂ ನಿರಾಕರಿಸಲ್ಪಡುತ್ತವೆ.) ಐಕಾತ್ಮ್ಯಂ ನಾಮ ಯತ್ ಇದಂ=ಯಾವ ಈ ಜೀವಬ್ರಹ್ಮೈಕ್ಯವನ್ನಾದರೂ. ಅನ್ಯೈಪುಣಾಃ=ಶಾಸ್ತ್ರ ತತ್ವಜ್ಞಾನವಿಲ್ಲದಿರುವ, ಕೇಚಿತ್=ಕೆಲವರು, ಬ್ರೂಯುಃ = ಹೇಳುತ್ತಾರೆ. ಇತಿ=ಹೀಗೆ, ದರ್ಶಿತಂ ಚ = ಮೋಕ್ಷಧರ್ಮದಲ್ಲಿ ತೋರಿಸಲ್ಪಟ್ಟದೆ.

ತಾ ॥ (1) 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಇತ್ಯಾದಿ ಶ್ರುತಿ ತಾತ್ಪರ್ಯವನ್ನು ತಿಳಿಯದೇನೇ ಬಂದಿರುವುದೂ ಮತ್ತು ಈಶ್ವರನನ್ನು ವಿಷಯೀಕರಿಸದಿರುವುದೂ ಆದ ಯಾಗ ಅನ್ನದಾನಾದಿರೂಪವಾದ ಕಾಮ್ಯ ಕರ್ಮವನ್ನು 'ಇಷ್ಟಾಪೂರ್ತಂ' ಎನ್ನುವುದರಿಂದ ಅನುವಾದಮಾಡಿ 'ನಾಕಸ್ಯ ಪೃಷ್ಠೇ ಸುಕೃತೇ ತೇಽನುಭೂತ್ವಾ ಇಮಂ ಲೋಕಂ ಹೀನತರಂ ವಾ ವಿಶಂತಿ' ಅವರು ಸ್ವರ್ಗದಲ್ಲಿ ಸುಕೃತಗಳನ್ನನುಭವಿಸಿ ಭೂಲೋಕಕ್ಕೆ ಅಥವಾ ನರಕಕ್ಕೆ ಪ್ರವೇಶಿಸುತ್ತಾರೆ ಎಂದು ನಿರಾಕರಿಸಲ್ಪಡುತ್ತದೆ. ಹಾಗೆಯೇ 'ಅಹಂ ಬ್ರಹ್ಮಾಸ್ಮಿ' ಇದು ಮೊದಲಾದ ಶ್ರುತಿಗಳ ತಾತ್ಪರ್ಯವನ್ನು (ನನ್ನ ಅಂತರ್ಗತನು ಬ್ರಹ್ಮನು ಎಂಬುವುದನ್ನು) ತಿಳಿಯದೆ ಜೀವನಿಗೆ ಬ್ರಹ್ಮೈಕ್ಯರೂಪವಾದ ಅರ್ಥಜ್ಞಾನದಿಂದಲೂ ಪ್ರಾಪ್ತವಾದ ಐಕ್ಯವು 'ಅತತ್ತ್ವಮಸಿ' ಎನ್ನುವುದರಿಂದ ನಿರಾಕರಿಸಲ್ಪಡುತ್ತದೆ. (2) ಐಕ್ಯವು ಕುವಾದಿ ಪ್ರಾಪ್ತವಾದುದು, ಶ್ರುತಿ ತಾತ್ಪರ್ಯಪರಿಜ್ಞಾನವಿಲ್ಲದೆ ಪ್ರಾಪ್ತವಾದುದು ಎನ್ನುವುದೂ ಸಂಭಾವಿತಮಾತ್ರವಲ್ಲ. ಮೋಕ್ಷಧರ್ಮದಲ್ಲಿಯೂ ತೋರಿಸಲ್ಪಟ್ಟದೆ. ಆದಕಾರಣ ೧ ಸಾಧಾರಣ ಪ್ರಾಪ್ತಿಃ ೨ ಅಸಾಧಾರಣ ಪ್ರಾಪ್ತಿಃ ೩ ವಾದಿಪ್ರಾಪ್ತಿಃ ೪ ಶ್ರುತಿತಾತ್ಪರ್ಯಾಪರಿಜ್ಞಾನ ಪ್ರಾಪ್ತಿ. ಹೀಗೆ ೪ ವಿಧ ಪ್ರಾಪ್ತಿ ಇದ್ದುದರಿಂದಲೂ ಐಕ್ಯವನ್ನು ನಿಷೇಧಿಸುವುದು ಯುಕ್ತವೇ ಆಗಿರುತ್ತದೆ ॥ ೨೪೧ ॥

ಪುನಃ ಶಂಕಿಸುತ್ತಾರೆ. 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಎಲ್ಲಾ ಪ್ರಪಂಚವೂ ಬ್ರಹ್ಮಸ್ವರೂಪವೆಂದು ಹೇಳಿ ಅದು ಹೇಗೆ ಎಂದು ಆಕಾಂಕ್ಷೆಬರಲು 'ತಜ್ಜಲಾನಿತಿ ಶಾಂತ ಉಪಾಸೀತ' ಎಂದು ಸರ್ವ ಪ್ರಪಂಚಕ್ಕೂ ಬ್ರಹ್ಮನೇ ಉಪಾದಾನಕಾರಣನೆಂದು ಅಂದರೆ ಜಗದಾರೋಪಕ್ಕೆ ಅಧಿಷ್ಠಾನನೆಂದು ಹೇಳಲ್ಪಟ್ಟದೆ. ಅದನ್ನು ವಿಸ್ತರಿಸುವುದಕ್ಕಾಗಿಯೇ ಆರನೇ ಅಧ್ಯಾಯದ ಪೂರ್ವಾರ್ಧವು ಪ್ರವೃತ್ತವಾಗಿದೆ. ಅದರಲ್ಲಿ ಉದ್ದಾಲಕರು ಶ್ವೇತಕೇತುವಿಗೆ 'ಯೇನಾಶ್ರುತಂ ಶ್ರುತಂ ಭವತಿ' ಎಂದು ಒಬ್ಬ ಬ್ರಹ್ಮನ ಜ್ಞಾನದಿಂದ ಎಲ್ಲಾ ವಸ್ತುಗಳ ಜ್ಞಾನವೂ ಆಗುತ್ತದೆ.

ಎಂದು ಹೇಳಲು ಶ್ವೇತಕೇತುವು ಪುನಃ ಆಕ್ಷೇಪಿಸಲು ಕಾರ್ಯಕ್ಕೂ, ಉಪಾದಾನಕಾರಣಕ್ಕೂ ಅಭೇದವಿದ್ದಪ್ರಯುಕ್ತ ಅನುಪಪತ್ತಿಯಿಲ್ಲವೆಂದಭಿಪ್ರಾಯದಿಂದ ಉದ್ದಾಲಕರು ಮೃದಾದಿ ದೃಷ್ಟಾಂತಪೂರ್ವಕವಾಗಿ ಬ್ರಹ್ಮನಿಗೆ ಜಗದುಪಾದಾನತ್ವವನ್ನು ನಿಶ್ಚಯಿಸುವುದಕ್ಕಾಗಿ 'ಸದೇವ ಸೋಮ್ಯ' ಇತ್ಯಾದಿಗಳಿಂದ ಸೃಷ್ಟಿಯನ್ನು ಹೇಳಿದರು. ಉಪಾದಾನತ್ವವು ಆರೋಪಾಧಿಷ್ಠಾನತ್ವವು. ಅದು ಮಿಥ್ಯಾತ್ವವಿಲ್ಲದೆ ಕೂಡಲಾರದು. ಅಂತೂ ಬ್ರಹ್ಮ ವ್ಯತಿರಿಕ್ತವಾದ ಎಲ್ಲಾ ಜಗತ್ತು ಮಿಥ್ಯೆಯೆಂದೇ ೬ನೇ ಅಧ್ಯಾಯದ ಪೂರ್ವಾರ್ಧದ ತಾತ್ಪರ್ಯವೆಂದು ನಿಶ್ಚಿತವಾಗಿದೆ. ಆದಕಾರಣ ಉತ್ತರಾರ್ಧಕ್ಕೆ ಪೂರ್ವಾರ್ಧವಿರುದ್ಧವಾದ ಭೇದಪರತ್ವವನ್ನು ಹೇಳುವುದು ಯುಕ್ತವಲ್ಲವು. ಮತ್ತೆ ಚಂಡಾಲನಿಗೆ ಕೊಟ್ಟರೆ ವೈಶ್ವಾನರನಲ್ಲಿ ಹೋಮಿಸಿದಂತೆಯೇ ಆಯಿತು ಎಂಬೀ ಮೇಲಿನ ಅರ್ಥವು ಕೂಡುವುದಕ್ಕಾಗಿ ಸರ್ವಜೀವರಿಗೂ ಬ್ರಹ್ಮನಿಂದ ಅಭೇದವೇ ಉತ್ತರಾರ್ಧದಿಂದ ಪ್ರತಿಪಾದಿಸಲ್ಪಡುತ್ತದೆ ಎನ್ನುವುದು ಯುಕ್ತವು, ಎಂದು ಪೂರ್ವಪಕ್ಷಮಾಡಿದರೆ, ಪೂರ್ವಾರ್ಧದಲ್ಲಿ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಿದರೆ ಉತ್ತರಾರ್ಧಕ್ಕೆ ಐಕ್ಯಪರತ್ವವೂ ಭೇದಪರತ್ವವಿಲ್ಲವೆನ್ನುವುದೂ ಯುಕ್ತವಾಗುತ್ತಿತ್ತು. ಹೀಗೆ ಇಲ್ಲವು. ಹಾಗೆ ಪ್ರತಿಪಾದಿಸತಕ್ಕುದೇ ತೋರುವುದಿಲ್ಲ. 'ಸದೇವ ಸೋಮ್ಯೇದಮಗ್ರ ಆಸೀತ್' ಇದುಮೊದಲಾದ ಸೃಷ್ಟಿವಾಕ್ಯಗಳು ಪ್ರತಿಪಾದಿಸುತ್ತವೆ. ಎಂದೂ ಕೂಡಲಾರದು. ಏಕೆಂದರೆ — 'ತದೈಕ್ಷತ ತತ್ತೇಜೋಽಸೃಜತ' ಎಂದು ಈಕ್ಷಾಪೂರ್ವಕವಾದ ಸೃಷ್ಟಿಯನ್ನೇ ಹೇಳಿರುವರು. ಘಟಾದಿಗಳಿಗೆ ಉಪಾದಾನಕಾರಣಗಳಾದ ಮೃದಾದಿಗಳಲ್ಲಿ ಈಕ್ಷಾಪೂರ್ವಕವಾದ ಸ್ರಷ್ಟೃತ್ವವು ಕಾಣದಿರುವುದರಿಂದ 'ಸತ್' ಶಬ್ದವಾಚ್ಯನಾದ ಬ್ರಹ್ಮನಿಗೆ 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ವಾಕ್ಯಗಳಲ್ಲಿ ಕುಲಾಲನಂತೆಯೇ ನಿಮಿತ್ತಕಾರಣತತ್ವವೇ ಉಕ್ತವಾಗಿದೆ. ಹೀಗೆ ಇಟ್ಟುಕೊಂಡರೆ ನಿಮಿತ್ತಕಾರಣನೆಂದು ಹೇಳುವುದು ಪ್ರಯೋಜನವಿಲ್ಲದಿರುವುದರಿಂದ ಸೃಷ್ಟಿಯನ್ನು ಹೇಳುವುದು ಅಸಂಗತವೇ ಆಗುವುದೆಂದಾ ಶಂಕಿಸಿದರೆ —

**ಮೂ ॥ ತದ್ವಶತ್ವಜ್ಞಾಪನಾರ್ಥಂ ಚ ಸದೇವ ಸೋಮ್ಯೇದಮಗ್ರ ಆಸೀದಿತ್ಯಾದಿ ಸೃಷ್ಟಿಕಥನಂ ॥ ೨೪೨ ॥**

ಅ ॥ ಸೋಮ್ಯ=ಎಲೋ ಶ್ವೇತಕೇತುವೇ, ಇದಮಗ್ರೇ=ಪ್ರಲಯಕಾಲದಲ್ಲಿ, ಸದೇವ= ಸದ್ರೂಪನಾದ ಬ್ರಹ್ಮನೇ, ಆಸೀತ್=ಇದ್ದನು, ಇತ್ಯಾದಿ = ಇದುಮೊದಲಾದ, ಸೃಷ್ಟಿಕಥನಂ ಚ=ಸೃಷ್ಟಿಯನ್ನು ಪ್ರತಿಪಾದಿಸತಕ್ಕದಾದರೂ, ತದ್ವಶತ್ವಜ್ಞಾಪನಾರ್ಥಂ ಚ=ಸರ್ವಪ್ರಪಂಚಕ್ಕೂ ಭಗವದಧೀನತೆಯನ್ನು ತಿಳಿಸಿಕೊಡುವುದಕ್ಕಾಗಿಯೇ,

ಟೀ ॥ ಕಾರ್ಯವು ನಿಮಿತ್ತಕಾರಣದ ಅಧೀನವೆಂದು ಪ್ರಸಿದ್ಧವೇ ಆಗಿರುತ್ತದೆ. ಎಲ್ಲಾ ಜಗತ್ತಿಗೂ ಬ್ರಹ್ಮಾಧೀನತ್ವವನ್ನು ತಿಳಿಸಿಕೊಡುವುದಕ್ಕಾಗಿ ಜಗತ್ತಿಗೆ ನಿಮಿತ್ತಕಾರಣನೆಂದಭಿಪ್ರಾಯದಿಂದ ಸೃಷ್ಟಿಯನ್ನು ಹೇಳಿದಾಗಿರುತ್ತದೆ. ಆದಕಾರಣ ಅಸಂಗತವಲ್ಲವು ॥ ೨೪೨ ॥

ಶಂಕಿಸುವರು — ಪ್ರಪಂಚಕ್ಕೆ ಬ್ರಹ್ಮಾಧೀನತ್ವವನ್ನು ತಿಳಿಸಿಕೊಡುವುದೂ ಪ್ರಕೃತೋಪಯುಕ್ತವಲ್ಲ. ಒಂದರ ಜ್ಞಾನದಿಂದ ಸರ್ವಜ್ಞಾನವು ಪ್ರಕೃತವಾಗಿದೆ. ಅದನ್ನುಪಪಾದಿಸುವುದಕ್ಕಾಗಿಯೇ ಸೃಷ್ಟಿಯನ್ನು ಹೇಳಿದ್ದು. ಬ್ರಹ್ಮನು ಹೊರತು (ಬ್ರಹ್ಮನಿಂದ ಭಿನ್ನವಾದ) ಜಗತ್ತು ಇಲ್ಲವೆಂಬೀ ಅಭಿಪ್ರಾಯದಿಂದ ಒಂದರ ಜ್ಞಾನದಿಂದ ಸರ್ವವಿಜ್ಞಾನವು ಹೇಳಲ್ಪಟ್ಟಿದೆ. ಬ್ರಹ್ಮನು ಹೊರತು ಜಗತ್ತು ಇದ್ದರೆ ಸರ್ವ ವಿಜ್ಞಾನವು ಕೂಡಲಾರದು. ಒಂದರ ಜ್ಞಾನದಿಂದ ಸರ್ವವಿಜ್ಞಾನವಾದರೂ ಉಪಾದಾನ ಕಾರಣತ್ವವನ್ನು ತಿಳಿಸಿದರೇನೇ ಸಿದ್ಧಿಸುವುದು. ಬ್ರಹ್ಮನ ಅಧೀನತೆ

ಯನ್ನು ತಿಳಿಸಿದರೆ ಸಿದ್ಧಿಸಲಾರದು. ಹೀಗೆ ಉಪಾದಾನತ್ವವನ್ನು ತಿಳಿಸುವುದಕ್ಕಾಗಿಯೇ ಸೃಷ್ಟಿಯನ್ನು ಹೇಳಿದ್ದು. ಅವನ ಅಧೀನತೆಯನ್ನು ತಿಳಿಸುವುದಕ್ಕಾಗಿ ನಿಮಿತ್ತಕಾರಣನೆಂಬಭಿಪ್ರಾಯದಿಂದ ಸೃಷ್ಟಿಯನ್ನು ಹೇಳಿದ್ದಲ್ಲ. ಎಂದರೆ —

**ಮೂ ॥ ಏಕವಿಜ್ಞಾನೇನ ಸರ್ವವಿಜ್ಞಾನಂ ಚ ಪ್ರಾಧಾನ್ಯಾತ್ಕಿಂಚಿತ್ಸಾದೃಶ್ಯಾತ್ಕಾರಣತ್ವಾಚ್ಚ। ನ ತು ತದನ್ಯಸ್ಯ ಮಿಥ್ಯಾತ್ವಾತ್। ನ ಹಿ ಸತ್ಯಜ್ಞಾನೇನ ಮಿಥ್ಯಾಜ್ಞಾನಂ ಭವತಿ ॥ ೨೪೩ ॥**

ಅ ॥ ಏಕವಿಜ್ಞಾನೇನ = ಒಂದರ ಜ್ಞಾನದಿಂದ, ಸರ್ವವಿಜ್ಞಾನಂ ಚ = ಸರ್ವವಿಜ್ಞಾನವಾದರೂ, ಪ್ರಾಧಾನ್ಯಾತ್=ಬ್ರಹ್ಮನಿಗೆ ಜಗತ್ತಿನಿಂದ ಪ್ರಾಧಾನ್ಯವಿದ್ದುದರಿಂದಲೂ, ಕಿಂಚಿತ್ಸಾದೃಶ್ಯಾತ್ = ಜಗತ್ತಿನಿಂದ ಸತ್ತಾ ಮೊದಲಾದ ಕಿಂಚಿತ್ಸಾದೃಶ್ಯವಿದ್ದುದರಿಂದಲೂ, ಕಾರಣತ್ವಾಚ್ಚ= ಜಗತ್ತನ್ನು ಕುರಿತು ನಿಮಿತ್ತಕಾರಣತ್ವವಿದ್ದುದರಿಂದಲೂ, (ಉಕ್ತವಾಗಿದೆ,) ತದನ್ಯಸ್ಯ=ಬ್ರಹ್ಮವ್ಯತಿರಿಕ್ತವಾದ ಜಗತ್ತಿಗೆ, ಮಿಥ್ಯಾತ್ವಾತ್ = ಬ್ರಹ್ಮನಲ್ಲಿ ಆರೋಪಿತತ್ವವಿದ್ದಕಾರಣ, ನ ತು = (ಒಂದರ ಜ್ಞಾನದಿಂದ ಸರ್ವವಿಜ್ಞಾನವಾದರೂ ಹೇಳಿದ್ದು.) ಆಗಲಾರದು. ಸತ್ಯಜ್ಞಾನೇನ = ಅಧಿಷ್ಠಾನಜ್ಞಾನದಿಂದ, ಮಿಥ್ಯಾಜ್ಞಾನಂ=ಅಧ್ಯಸ್ತದ ಜ್ಞಾನವು, ನ ಹಿ ಭವತಿ=ಆಗುವುದಿಲ್ಲ.

ತಾ ॥ (1) ಸರ್ವ ಪ್ರಪಂಚವೂ ಭಗವಂತನ ಅಧೀನವಾಗದೆ ಆತನಿಗೆ ಪ್ರಾಧಾನ್ಯವು ಸಿದ್ಧಿಸಲಾರದು. ಆದಕಾರಣ ಭಗವದಧೀನತ್ವವನ್ನು ತಿಳಿಸಿಕೊಡುವುದಕ್ಕಾಗಿ ಶ್ರೀ ಹರಿಯು ನಿಮಿತ್ತಕಾರಣನೆಂಬಭಿಪ್ರಾಯದಿಂದ ಸೃಷ್ಟಿಯನ್ನು ಹೇಳಿರುವುದು ಸಂಗತವೇ. (2) ಬೇರೆ ಹೇತುಗಳೇ ಇಲ್ಲದಿರುವುದರಿಂದ ಒಂದರ ಜ್ಞಾನದಿಂದ ಸರ್ವವಿಜ್ಞಾನವು ಪ್ರಾಧಾನ್ಯ ಮೊದಲಾದ ಮೂರು ಹೇತುಗಳಿಂದಲೇ ಸಿದ್ಧಿಸುವುದು. (3) 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಇದು ಮೊದಲಾದ ಶ್ರುತಿವಿರೋಧವಿದ್ದುದರಿಂದ ಜಗತ್ತಿಗೆ ಬ್ರಹ್ಮನುಪಾದಾನನೆಂಬುವುದನ್ನು ಪರರು ಸಾಕ್ಷಾತ್ತಾಗಿ (ಅಂದರೆ— ಬ್ರಹ್ಮಪರಿಣಾಮವೆಂದು) ಅಂಗೀಕರಿಸಲಿಲ್ಲವು. ಮತ್ತೆ ಮಿಥ್ಯಾಭೂತವಾದ ಜಗದಾರೋಪಕ್ಕೆ ಬ್ರಹ್ಮನು ಅಧಿಷ್ಠಾನನಾದುದರಿಂದ ಬ್ರಹ್ಮನು ಉಪಾದಾನನೆಂದು ಹೇಳಲ್ಪಡುತ್ತಾನೆ. ಬಹ್ಮಾಶ್ರಿತವಾದ ಮಾಯೆಯೇ ಮುಖ್ಯವಾಗಿ ಉಪಾದಾನಕಾರಣವು, ಬ್ರಹ್ಮನಲ್ಲ. ಅಂತೂ 'ಬ್ರಹ್ಮೋಪಾದಾನಕತ್ವಾತ್' ಎನ್ನುವುದಕ್ಕೆ ಬ್ರಹ್ಮನಲ್ಲಿ ಆರೋಪಿತವಾದ ಪ್ರಯುಕ್ತ ಎಂಬರ್ಥವು. ಇದಾದರೂ ಬ್ರಹ್ಮಜ್ಞಾನದಿಂದ ಸರ್ವವಿಜ್ಞಾನಕ್ಕೆ ಹೇತುವಾಗಲಾರದು ॥ ೨೪೩ ॥

ಪರರು ಶಂಕಿಸುವರು — ರಜತಾದ್ಯಾರೋಪಕ್ಕೆ ಉದ್ಬುದ್ಧವಾದ ರಜತಸಂಸ್ಕಾರವು ಕಾರಣವೆನ್ನುವುದು ಅನ್ವಯವ್ಯತಿರೇಕಸಿದ್ಧವು. ಸಂಸ್ಕಾರವು ಉದ್ಬುದ್ಧವಾಗಲಿಕ್ಕೆ ಅಧಿಷ್ಠಾನಜ್ಞಾನವು ಕಾರಣವು. ಮತ್ತು ಅಧ್ಯಸ್ತದ ಜ್ಞಾನ ಬರುವುದಾದರೂ 'ಇದು ಬೆಳ್ಳಿಯು' ಎಂದು ಅಧಿಷ್ಠಾನದಿಂದ ಅಭಿನ್ನವಾಗಿಯೇ ಹುಟ್ಟುವುದು. 'ಬೆಳ್ಳಿಯು' ಎಂದಿಷ್ಟೇ ಬರುವುದಿಲ್ಲ. ಆದಕಾರಣ ಸತ್ಯಜ್ಞಾನದಿಂದ ಮಿಥ್ಯಾಜ್ಞಾನವಾಗುವುದಿಲ್ಲವೆಂದು ಹೇಳಿರುವುದು ಹೇಗೆ ಕೂಡುವುದು ಎಂದರೆ —

**ಮೂ ॥ ನ ಹಿ ಶುಕ್ತಿಜ್ಞೋ ರಜತಜ್ಞ ಇತ್ಯುಚ್ಯತೇ ॥ ೨೪೪ ॥**

ಅ ॥ ಶುಕ್ತಿಜ್ಞಃ = ಶುಕ್ತಿತ್ವಪ್ರಕಾರಕಜ್ಞಾನವುಳ್ಳವನು, ರಜತಜ್ಞ ಇತಿ = ಶುಕ್ತಿಯಲ್ಲಿ ಆರೋಪಿತವಾದ ರಜತವನ್ನು ತಿಳಿದವನೆಂದು; ನ ಹಿ ಉಚ್ಯತೇ=ಹೇಳಲ್ಪಡುವುದಿಲ್ಲವಷ್ಟೆ!

ತಾ ॥ (1) ಇಲ್ಲಿ ಬ್ರಹ್ಮಜ್ಞಾನವೆಂದರೆ ಬ್ರಹ್ಮವಿಷಯಕ ಯಥಾರ್ಥಜ್ಞಾನವೇ ವಿವಕ್ಷಿತವಾಗಿದೆ. ಸತ್ವಾದಿರೂಪದಿಂದ ಬ್ರಹ್ಮಜ್ಞಾನವಲ್ಲವು. ಏಕೆಂದರೆ, ಸಾಧಾರಣಾಕಾರವಾದ ಬ್ರಹ್ಮಜ್ಞಾನವು ಸರ್ವಪದಾರ್ಥ ವಿಷಯಕ ಜ್ಞಾನಗಳಲ್ಲಿ ಅಧಿಷ್ಠಾನತ್ವ ರೂಪಹೇತುವಿನಿಂದ ಸ್ವಭಾವಸಿದ್ಧವಾಗಿದೆ. ಇಲ್ಲಿ ಸಾಧಾರಣಾಕಾರದಿಂದ ಭಿನ್ನವಾದ ಯಥಾರ್ಥ ವಿಷಯಕವಾದ ಅಪೂರ್ವಜ್ಞಾನವನ್ನು ಹುಟ್ಟಿಸುವುದಕ್ಕಾಗಿ ಶ್ವೇತಕೇತುವನ್ನು ಅಭಿಮುಖೀಕರಿಸುವುದಕ್ಕಾಗಿ 'ಯೇನಾಶ್ರುತಂ ಶ್ರುತಂ ಭವತಿ' ಎಂಬೀ ಅರ್ಥವಾದವನ್ನುಪನ್ಯಾಸ ಮಾಡಿದ್ದಾಗಿರುತ್ತದೆ. ಆದಕಾರಣ ಬ್ರಹ್ಮನು ಅದ್ವಿತೀಯನು ಎಂದು ತಿಳಿಯೋಣದರಿಂದ ಸರ್ವವೂ ತಿಳಿಯಲ್ಪಡುತ್ತದೆ ಎಂಬೀ ವಾಕ್ಯಾರ್ಥವು ಕೂಡುವುದಿಲ್ಲ. (2) ಹಾಗಾದರೆ ಯಾರು ಶುಕ್ತಿಯಾಥಾರ್ಥ್ಯವನ್ನು ತಿಳಿಯುತ್ತಾನೋ ಆತನು ರಜತವಿಲ್ಲವೆಂದು ತಿಳಿಯುತ್ತಾನೆ. ಆದಕಾರಣ ಇದು ಹೇಗೆ ಕೂಡುವುದು ಎಂಬೀ ಆಶಂಕೆಯನ್ನು ನಿರಾಕರಿಸುವುದಕ್ಕೋಸ್ಕರ 'ನ ಹಿ ಶುಕ್ತಿಜ್ಞೋ ರಜತಜ್ಞೋ ಭವತಿ' ಎಂದು ಹೇಳುವುದನ್ನು ಬಿಟ್ಟು 'ಇತ್ಯುಚ್ಯತೇ' ಎಂದು ಉಕ್ತವಾಗಿದೆ. ಹೀಗಾದರೆ 'ಇವನು ರಜತಾಭಾವವನ್ನು ತಿಳಿದವನು, ರಜತವನ್ನು ತಿಳಿದವನಲ್ಲ ಎಂದು ಹೇಳಬೇಕಿದ್ದಿತು. ಹೀಗೆಯೇ ಬ್ರಹ್ಮಜ್ಞಾನದಿಂದ ಸರ್ವಾಭಾವವನ್ನು ತಿಳಿದವನು ಎಂದು ಹೇಳಬೇಕಿದ್ದಿತು. ಸರ್ವಜ್ಞನೆಂದು ಹೇಳದೆ ಇರಬೇಕಿದ್ದಿತು. ಬ್ರಹ್ಮಜ್ಞಾನದಿಂದ ಸರ್ವಜ್ಞಾನವೆಂದರೆ ಸರ್ವವೂ ಇಲ್ಲವೆಂಬೀ ಜ್ಞಾನವು ಎಂದಭಿಪ್ರಾಯವಾದರೆ 'ಅಶ್ರುತಂ ಶ್ರುತಂ ಭವತಿ' ಇತ್ಯಾದಿಗಳಿಗೆ 'ಇಲ್ಲವೆಂದು ಕೇಳಲ್ಪಟ್ಟದ್ದು' ಎಂಬೀ ಅರ್ಥವು ಪ್ರಾಪ್ತವಾಗುವುದರಿಂದ ಔಪಚಾರಿಕವಾಗಬೇಕಾಯಿತು. (3) ಹಾಗಾದರೆ ಬ್ರಹ್ಮಜ್ಞಾನವೆಂದರೆ, ಹೇಗೆ ಬ್ರಹ್ಮನ ಯಥಾರ್ಥಜ್ಞಾನವೋ ಹಾಗೆಯೇ ಸರ್ವಜ್ಞಾನವೆಂದರೂ ಸರ್ವ ವಸ್ತುಗಳ ಯಾಥಾರ್ಥ್ಯಜ್ಞಾನವೇ. ಸರ್ವವಸ್ತುಗಳ ಯಾಥಾರ್ಥ್ಯವೆಂದರೆ ಮಿಥ್ಯಾತ್ವವೇ ಎಂದೂ ಹೇಳಕೂಡದು. ಏಕೆಂದರೆ, ಕರ್ಮಾದಿಗಳ ಜ್ಞಾನಕ್ಕಾಗಿ ಅನೇಕ ವೇದಾಭ್ಯಾಸಾದಿಗಳನ್ನು ಮಾಡಿ ವ್ಯರ್ಥವಾಗಿ ಶ್ರಾಂತನಾಗಿರುವಿ. ಬ್ರಹ್ಮನನ್ನೇ ಚೆನ್ನಾಗಿ ತಿಳಿಯಬೇಕು. ಅದರಿಂದಲೇ ಕರ್ಮಾದಿಗಳೂ ತಿಳಿಯಲ್ಪಡುತ್ತವೆ. ಹೀಗೆ ಕರ್ಮಾದಿ ವಿಷಯಕವಾದ, ವೇದಫಲಭೂತವಾದ ಕರ್ಮಜ್ಞಾನವು ಬ್ರಹ್ಮಜ್ಞಾನ ಸಾಧ್ಯವೆಂದು ಇಲ್ಲಿ ಹೇಳಲ್ಪಡುತ್ತದೆ. ಕರ್ಮಾದಿ ವಿಷಯಕವಾದ (ಪ್ರತಿಪಾದಕವಾದ) ವೇದಕ್ಕೆ ಕರ್ಮಾದಿಗಳಿಗೆ ಮಿಥ್ಯಾತ್ವಜ್ಞಾನವೇ ಫಲವಲ್ಲವು. ಕರ್ಮಾದಿ ಮಿಥ್ಯಾತ್ವಜ್ಞಾನವೇ ಕರ್ಮಾದಿಗಳನ್ನು ಪ್ರತಿಪಾದಿಸುವ ವೇದಕ್ಕೆ ಫಲವಾದರೆ ಕರ್ಮಾದಿಗಳ ಜ್ಞಾನಸಂಪಾದನೆಯು ವ್ಯರ್ಥವೇ. ಅದು ಮಿಥ್ಯೆಯು ಎಂದೇ ಹೇಳಿದ್ದರೆ ಸಾಕಾಗುತ್ತಿತ್ತು. ಒಂಭತ್ತಾವರ್ತಿ ಉಪದೇಶಿಸಿದ್ದೂ ವ್ಯರ್ಥವೇ ಆಗಬೇಕಾಗುವುದು ॥ ೨೪೪ ॥

ಅಧಿಷ್ಠಾನದ ಯಾಥಾತ್ಮ್ಯಜ್ಞಾನವು ಬರುವಾಗ ಅಧ್ಯಸ್ತ (ಆರೋಪಿತ) ಜ್ಞಾನವಾಗುವುದಿಲ್ಲವೆಂಬುವುದು ಸರಿಯಲ್ಲ. ಕಾರಣವೇ ಇಲ್ಲವು. ದರ್ಶನಮಾತ್ರವಿಲ್ಲವೆನ್ನುವುದು ಬೇರೆ ಸಾಮಗ್ರಿಗಳು ಇಲ್ಲದಿರುವ ಪ್ರಯುಕ್ತವೂ ಸಿದ್ಧಿಸುವುದರಿಂದ ಪ್ರಮೇಯವಿಲ್ಲವೆನ್ನುವುದಕ್ಕೆ ನಿಶ್ಚಾಯಕವಾಗಲಾರದು. ಎಂದಾಶಂಕಿಸಿದರೆ—

ಮೂ ॥ ವಿರೋಧಾತ್ತಯೋರ್ಜ್ಞಾನಯೋಃ । ನೇದಂ ರಜತಮಿತ್ಯರಜತ-
ಜ್ಞೋ ಹಿ ಶುಕ್ತಿಜ್ಞೋ ಭವತಿ ॥ ರಜತಜ್ಞಶ್ಚೇನ್ನ ಶುಕ್ತಿಜ್ಞಃ ॥ ನ ಹಿ
ತಜ್ಜ್ಞಸ್ತದಭಾವಜ್ಞೋ ಭವತಿ ॥ ತದಭಾವಸ್ಯ ತಜ್ಜ್ಞಾನಪೂರ್ವಕತ್ವಂ
ಚಾನ್ಯತ್ರ ತಸ್ಯ ಸತ್ವಾದೇವ ದೃಷ್ಟಂ ॥ ತದನಂಗೀಕಾರೇ ತದೇವ ನ
ಯುಜ್ಯತೇ ॥ ೨೪೫ ॥

ಅ ॥ ತಯೋಃ ಜ್ಞಾನಯೋಃ=ಆ ಜ್ಞಾನಗಳಿಗೆ, ವಿರೋಧಾತ್=ವಿರೋಧವಿದ್ದುದ ರಿಂದ, ಶುಕ್ತಿಜ್ಞಃ=ಯಾರು ಇದು ಮುತ್ತಿನಚಿಪ್ಪೆಂದು ಜ್ಞಾನವುಳ್ಳವನೋ ಆತನು,ಅರಜತಜ್ಞೋ ಹಿ ಭವತಿ=ಶುಕ್ತಿಯಲ್ಲಿ ಆರೋಪಿತವಾದ ರಜತವನ್ನು ನೋಡುವುದಿಲ್ಲ. ಮತ್ತೆ, ನೇದಂ ರಜತಂ ಇತಿ=ಇದು ಬೆಳ್ಳಿಯಲ್ಲವೆಂದೇ ನೋಡುತ್ತಾನೆ. (ಹೀಗೆ ಅಧಿಷ್ಠಾನ ಜ್ಞಾನವಿದ್ದವರಿಗೆ ಅಧ್ಯಸ್ತ ಜ್ಞಾನವಿಲ್ಲವೆಂದು ಹೇಳಿ, ಅಧ್ಯಸ್ತ (ಆರೋಪಿತ) ಜ್ಞಾನವಿದ್ದವನಿಗೆ ಅಧಿಷ್ಠಾನಯಾಥಾತ್ಮ್ಯ ಜ್ಞಾನವಿಲ್ಲವೆಂದು ನಿರೂಪಿಸುತ್ತಾರೆ), ರಜತಜ್ಞಶ್ಚೇತ್ = ರಜತವನ್ನು ತಿಳಿದವನಾದರೆ, ಶುಕ್ತಿಜ್ಞಃ=ಶುಕ್ತಿಯನ್ನು ತಿಳಿದವನು, ನ=ಆಗುವುದಿಲ್ಲ. ಅಂತೂ ಈ ಜ್ಞಾನಗಳು ಪರಸ್ಪರ ವಾಗಿ ಬಿಟ್ಟುಕೊಂಡೇ ಇರುವುದರಿಂದ ಇವುಗಳಿಗೆ ವಿರೋಧವು. ತಜ್ಜ್ಞಃ=ಅದನ್ನು ತಿಳಿದವನು, ತದಭಾವಜ್ಞಃ=ಅದರ ಅಭಾವವನ್ನು ತಿಳಿದವನು, ನ ಹಿ ಭವತಿ=ಆಗುವುದಿಲ್ಲವಷ್ಟೆ! (ಅಂದರೆ ಭಾವಾಭಾವಗಳಿಗೇನೇ ಸಾಕ್ಷಾದ್ವಿರೋಧವು. ಇಲ್ಲವಾದರೆ ಪ್ರತಿಯೋಗಿ, ಅನುಯೋಗಿ ಭಾವವೇ ಇಲ್ಲದೆ ಹೋಗುವುದು. ತದ್ವಾರಾ ಜ್ಞಾನಗಳಿಗೆ ವಿರೋಧವು. ಪ್ರಕೃತ, ಶುಕ್ತಿರಜತಗಳು ಅನ್ಯೋನ್ಯಾಭಾವರೂಪಗಳು, ಆದಕಾರಣ ತದ್ವಾರಾ ಶುಕ್ತಿರಜತ ಜ್ಞಾನಗಳಿಗೂ ವಿರೋಧವು.) (ಘಟಜ್ಞಾನವಿದ್ದರೇನೇ ಘಟಾಭಾವಜ್ಞಾನವು ಹುಟ್ಟುವುದು. ಅಭಾವಜ್ಞಾನಕೆ ಪ್ರತಿಯೋಗಿಜ್ಞಾನವು ಕಾರಣವು. ಆದಕಾರಣ 'ನ ಹಿ ತಜ್ಜ್ಞಸ್ತದಭಾವಜ್ಞೋ ಭವತಿ' ಎಂದು ಹೇಳಿದ್ದು ಹೇಗೆ ಕೂಡುವುದೆಂದರೆ) ತದಭಾವಸ್ಯ=ಅದರ ಅಭಾವಜ್ಞಾನಕ್ಕೆ, ತಜ್ಞಾನಪೂರ್ವಕತ್ವಂ ಚ=ಅದರ ಜ್ಞಾನವೇ ಪೂರ್ವದಲ್ಲಿರಬೇಕು ಎನ್ನುವುದು, ಅನ್ಯತ್ರ=ದೇಶಾಂತರ ಕಾಲಾಂತರಗಳಲ್ಲಿ, ತಸ್ಯ=ಆ ಪ್ರತಿಯೋಗಿಗೆ. ಸತ್ವಾದೇವ=ಇದ್ದುದರಿಂದಲೇ, ದೃಷ್ಟಂ=ಕಾಣಲ್ಪಟ್ಟಿದೆ. ತದನಂಗೀಕಾರೇ=ಅದನ್ನು ಒಡಂಬಡದಿದ್ದರೆ, ತದೇವ=ಆ ಅಭಾವ ಜ್ಞಾನವೇ, ನ ಯುಜ್ಯತೇ=ಕೂಡುವುದಿಲ್ಲ.

ತಾ ॥ (1) ದೇಶಾಂತರ ಕಾಲಾಂತರಗಳಲ್ಲಿರತಕ್ಕ ಪ್ರತಿಯೋಗಿಜ್ಞಾನವೇ ದೇಶ ಕಾಲಾಂತರಗಳಲ್ಲಿರತಕ್ಕ ಅಭಾವಜ್ಞಾನಕ್ಕೆ ಕಾರಣವು. ಅದೇ ದೇಶ ಅದೇ ಕಾಲಗಳಲ್ಲಿರ ತಕ್ಕುದು ಕಾರಣವಾಗಲಾರದು. ಅಂದರೆ ಶುಕ್ತಿರಜತಗಳು ಅನ್ಯೋನ್ಯಾಭಾವರೂಪಗಳಾದುದ ರಿಂದ ಅವುಗಳಿಗೆ ಅಭೇದವು ವಿರುದ್ಧವು. ತದ್ವಾರಾ ಅವುಗಳ ಜ್ಞಾನಗಳಿಗೂ ವಿರೋಧವೆಂದು ಪೂರ್ವದಲ್ಲಿ ಹೇಳಲ್ಪಟ್ಟಿದೆ. ಅಂತೂ ಯಾರಿಗೆ ಯಾವಾಗ ಎಲ್ಲಿ ಶುಕ್ತಿಯೆಂಬ ಜ್ಞಾನವೋ ಅವನಿಗೇನೇ ಆಗಲೇ ಅಲ್ಲಿಯೇ ರಜತಜ್ಞಾನವು ಕೂಡುವುದಿಲ್ಲವೆಂದುಕ್ತವಾದ ಹಾಗಾಯಿತು. ಈ ನಿಯಮಕ್ಕೆ ದೇಶಕಾಲಾಂತರ ಮೊದಲಾದವುಗಳಲ್ಲಿ ವ್ಯವಸ್ಥಿತಗಳಾದ ಪ್ರತಿಯೋಗ್ಯಭಾವ ಜ್ಞಾನಗಳಲ್ಲಿ ವ್ಯಭಿಚಾರವನ್ನು ಶಂಕಿಸಕೂಡದು. (2) ದೇಶಕಾಲಾಂತರಗಳಲ್ಲಿರತಕ್ಕ ಪ್ರತಿಯೋಗಿಜ್ಞಾನವು ದೇಶಕಾಲಾಂತರಗಳಲ್ಲಿರತಕ್ಕ ಅಭಾವಜ್ಞಾನಕ್ಕೆ ಕಾರಣವೆಂದಂಗೀಕರಿಸದಿದ್ದರೆ, ಆ ದೇಶ ಕಾಲಗಳಲ್ಲಿಯೇ ಪ್ರತಿಯೋಗಿಜ್ಞಾನವೆಂದಂಗೀಕರಿಸಿದರೆ ಆ ಪ್ರತಿಯೋಗಿಗಳ ಅಭಾವ ಜ್ಞಾನವೇ ಕೂಡುವುದಿಲ್ಲ. ಯಾರಾದರೂ ಆ ದೇಶ ಕಾಲಗಳಲ್ಲಿಯೇ ಘಟವನ್ನು ನೋಡುತ್ತಾ ಘಟಾಭಾವವನ್ನು ನೋಡುವುದಿಲ್ಲ. ನೋಡುವುದಾದರೆ ಪ್ರತಿಯೋಗಿ ತದಭಾವಗಳಿಗೆ ವಿರೋಧ ವಾರ್ತೆಯೇ ಜಗತ್ತಿನಲ್ಲಿ ಇಲ್ಲವೆಂದಾಗಬೇಕಾಗುವುದು. ಆದ ಪ್ರಯುಕ್ತ ಹಿಂದೆ ಹೇಳಿದ ಪ್ರಕಾರ ಉಪಾದಾನ, ಉಪಾದೇಯಭಾವದಿಂದ ಒಂದರ ಜ್ಞಾನದಿಂದ ಸರ್ವ ವಿಜ್ಞಾನವು ಆಗುವುದಿಲ್ಲವೆಂದು ಸಿದ್ಧವಾಯಿತು ॥ ೨೪೫ ॥

ಒಂದರ ಜ್ಞಾನದಿಂದ ಸರ್ವ ವಿಜ್ಞಾನದಲ್ಲಿ ಪರರಿಗೆ ಅಭಿಪ್ರೇತವಾದ ಉಪಾದಾನೋಪಾದೇಯಭಾವರೂಪವಾದ ಹೇತುವನ್ನು ನಿರಾಸಮಾಡಿದ ಹಾಗಾಯಿತು.

ಒಂದರ ಜ್ಞಾನದಿಂದ ಸರ್ವವನ್ನು ತಿಳಿದುಕೊಳ್ಳುವ ವಿಷಯದಲ್ಲಿ ಪ್ರಾಧಾನ್ಯವೊದಲಾದ ಮೂರು ಹೇತುಗಳೆಂದು ಹೇಳಲ್ಪಟ್ಟದ್ದು ಅಸಂಗತವು. ಪ್ರಧಾನ ಭೂತನಾದ ರಾಜನ ಜ್ಞಾನವು ಹುಟ್ಟಿದರೂ ಭೃತ್ಯರ ಜ್ಞಾನವು ಬರುವುದಿಲ್ಲ; ಗೋವಿನ ಜ್ಞಾನವಾದರೂ ಗವಯದ ಜ್ಞಾನವಾಗುವುದಿಲ್ಲ; ಕುಂಬಾರನ ಜ್ಞಾನವಾದರೂ ಘಟದ ಜ್ಞಾನವಾಗುವುದಿಲ್ಲ. ಎಂದು ಪರರು ಆಶಂಕಿಸಿದರೆ ಪ್ರಾಧಾನ್ಯವು ಹೇತುವೆನ್ನುವುದನ್ನು ಈಗ ಉಪಪಾದಿಸುತ್ತಾರೆ.

ಮೂ ॥ ಪ್ರಧಾನಜ್ಞಾನಾದಪ್ರಧಾನಸ್ಯ ಜ್ಞಾತವದ್ವ್ಯಪದೇಶೋಽಸ್ತ್ಯೇವ ।
ಯಥಾ ಪ್ರಧಾನ ಪುರುಷಾಣಾಂ ಜ್ಞಾನಾಹ್ವಾನನಾಶನೈರ್ಗ್ರಾಮೋ
ಜ್ಞಾತ ಆಹೂತೋ ನಾಶಿತ ಇತಿ ವ್ಯಪದೇಶಃ ॥ ೨೪೬ ॥

ಅ ॥ ಪ್ರಧಾನಜ್ಞಾನಾತ್=ಅಪ್ರಧಾನ ಜ್ಞಾನದಿಂದ ಯಾವ ಪ್ರಯೋಜನವು ಆಗುವುದೋ ಆದು ಪ್ರಧಾನಜ್ಞಾನದಿಂದಲೇ ಹುಟ್ಟುವ ಪ್ರಯುಕ್ತ, ಅಪ್ರಧಾನಸ್ಯ = ಅಪ್ರಧಾನವಾದುದಕ್ಕೆ, ಜ್ಞಾತವತ್ = ತಿಳಿಯಲ್ಪಟ್ಟದರಂತೆ, ವ್ಯಪದೇಶಃ = ವ್ಯವಹಾರವು, ಅಸ್ತ್ಯೇವ = ಇದ್ದೇ ಇದೆ. ಯಥಾ=ಹೇಗೆಂದರೆ, ಪ್ರಧಾನಪುರುಷಾಣಾಂ=ಪ್ರಧಾನ ಪುರುಷರ, ಜ್ಞಾನಾಹ್ವಾನನಾಶನೈಃ=ಜ್ಞಾನ ಆಹ್ವಾನ ನಾಶಗಳಿಂದ, ಗ್ರಾಮಃ=ಗ್ರಾಮವು, ಜ್ಞಾತಃ=ತಿಳಿಯಲ್ಪಟ್ಟಿತು, ಆಹೂತಃ=ಕರೆಯಲ್ಪಟ್ಟಿತು, ನಾಶಿತಃ=ನಾಶಮಾಡಲ್ಪಟ್ಟಿತು, ಇತಿ=ಹೀಗೆ, ವ್ಯಪದೇಶಃ=ವ್ಯವಹಾರವು. (ಇದ್ದೇ ಇದೆ)

ಟೀ ॥ (1) ಶ್ರುತ ಮತ ವಿಜ್ಞಾತಶಬ್ದಗಳಿಗೆ ಶ್ರುತಿಯಲ್ಲಿ ಉಪಲಕ್ಷಕತ್ವವನ್ನು ಸೂಚಿಸುವುದಕ್ಕಾಗಿ ಇಲ್ಲಿ ಜ್ಞಾನ ಆಹ್ವಾನ ನಾಶಪದಗಳನ್ನು ಸ್ವೀಕರಿಸಿರುವರು. (2) ಕರ್ಮದೇವತಾದಿ ವಿಷಯಕವಾದ ಶ್ರವಣ, ಮನನ, ವಿಜ್ಞಾನ, ಅನುಷ್ಠಾನ, ಆಹ್ವಾನ, ಪೂಜಾ ಇತ್ಯಾದಿಗಳಿಂದ ಯಾವ ಸ್ವರ್ಗಾದಿರೂಪಫಲವಾಗುವುದೋ ಅದೆಲ್ಲವೂ ಅದಕ್ಕಿಂತ ಉತ್ಕೃಷ್ಟಫಲವೂ, 'ಜ್ಞಾನಾದೇವ ಸ್ವರ್ಗೋ ಜ್ಞಾನಾದೇವಾಪವರ್ಗೋ ಜ್ಞಾನಾದೇವ ಸರ್ವೇ ಕಾಮಾಃ ಸಂಪದ್ಯಂತೇ' ಎಂಬೀ ಶ್ರುತಿಯಿಂದ ಭಗದ್ವಿಷಯಕ ಶ್ರವಣಮನನಾದಿಗಳಿಂದಲೇ ಲಭಿಸುವುದು. ಆದಕಾರಣ ಕರ್ಮಗಳೂ ದೇವತೆಗಳೂ ಅನೇಕಗಳಾದ ಪ್ರಯುಕ್ತ ಅನೇಕ ವಿಷಯಕ ಶ್ರವಣಾದಿಗಳನ್ನು ಮಾಡುವುದಕ್ಕಿಂತ ಒಬ್ಬ ಸರ್ವೋತ್ತಮನಾದ ಶ್ರೀ ಹರಿಯನ್ನು ಪ್ರತಿಪಾದಿಸುವ ಶಾಸ್ತ್ರಗಳ ಶ್ರವಣಾದಿಗಳನ್ನು ಮಾಡಿದರೆ ಲಾಘವವಿದ್ದುದರಿಂದಲೂ ಹೆಚ್ಚುಫಲವಿದ್ದುದರಿಂದಲೂ ಭಗವದ್ವಿಷಯಕ ಶ್ರವಣಾದಿಗಳನ್ನೇ ಮಾಡಬೇಕು. ಕರ್ಮದೇವತಾದಿ ವಿಷಯಕ ಶ್ರವಣಾದಿಗಳಿಗೆ ಅಲ್ಪಫಲವಿದ್ದ ಪ್ರಯುಕ್ತವೂ ಗೌರವವಿದ್ದಪ್ರಯುಕ್ತವೂ ಅದನ್ನು ಮಾಡಬಾರದು. (3) ಹಾಗೆಯೇ ಕರ್ಮದೇವತಾದಿವಿಷಯಕ ಕರ್ಮಭ್ರಂಶವಾದರೆ ಯಾವ ಪ್ರತ್ಯವಾಯವೋ ಅಂತಹ ಪ್ರತ್ಯವಾಯವೂ, ಅದಕ್ಕಿಂತ ಹೆಚ್ಚು ಪ್ರತ್ಯವಾಯವೂ ಭಗವದಪರಾಧವಾದರೆ (ಶ್ರವಣಾದಿಗಳನ್ನು ಮಾಡದಿದ್ದರೆ) ಆಗುವುದು. ಆದಕಾರಣ ಭಗವದ್ವಿಷಯದಲ್ಲಿಯೇ ಹೇಗೆ ಅಪರಾಧವಾಗಲಾರದೋ, ಶಾಸ್ತ್ರ ಶ್ರವಣಾದಿಗಳು ಹೇಗೆ ಆಗುವುವೋ, ಹಾಗೆಯೇ ಉದ್ಯೋಗವನ್ನು ಮಾಡುತ್ತಾ ಇರಬೇಕು. ಕರ್ಮದೇವತಾದಿ ವಿಷಯಕ ಶ್ರವಣಾದಿಗಳನ್ನು ಆದರಿಸಕೂಡದು ॥ ೨೪೬ ॥

ಕಾರಣತ್ವಕ್ಕೆ ಹೇತುತ್ವವನ್ನುಪಪಾದಿಸುತ್ತಾರೆ —

ಮೂ ॥ ಕಾರಣೇ ಚ ಪಿತರಿ ಜ್ಞಾತೇ ಪುತ್ರೋ ಜ್ಞಾತ ಇತಿ । ಜ್ಞಾನಾಪ್ಯೇನ-
ಮಸ್ಯ ಪುತ್ರೋಽಯಮಿತಿ ವ್ಯಪದೇಶ ಇತಿ। ಏವಮುತ್ಪ್ರೇಕ್ಷ್ಯೈತತ್ಸ್ವೃಷ್ಟಂ
ಸರ್ವಮಿತ್ಯಾದಿ ॥ ೨೪೭ ॥

ಅ ॥ ಕಾರಣೇ ಚ=ಹೇತುಭೂತನಾದ, ಪಿತರಿ=ತಂದೆಯು, ಜ್ಞಾತೇ=ತಿಳಿಯಲ್ಪಡುತ್ತಿರಲು, ಪುತ್ರಃ=ಮಗನು, ಜ್ಞಾತಃ ಇತಿ=ತಿಳಿಯಲ್ಪಟ್ಟನೆಂದು, (ವ್ಯಪದೇಶಃ=ವ್ಯವಹಾರವು, ಅಸ್ತಿ=ಇದೆ.) ಅಯಂ=ಇವನು, ಅಸ್ಯ=ಯಜ್ಞದತ್ತನ, ಪುತ್ರ ಇತಿ=ಮಗನೆಂದು, ಏನಂ=ಇವನನ್ನು, ಜಾನಾಮಿ=ತಿಳಿಯುತ್ತೇನೆ, ಇತಿ=ಹೀಗೆ, ವ್ಯಪದೇಶಃ=ವ್ಯವಹಾರವದೆ. ಏವಂ=ಹೀಗೆ, ಅತ್ರಾಪಿ=ಇಲ್ಲಿಯೂ, (ಈ ಪರಮಾತ್ಮನೂ ಜಗತ್ಕಾರಣನು ಇತ್ಯಾದಿ ರೂಪಗಳಿಂದ ತಿಳಿಯಲ್ಪಡುತ್ತಿರಲು,) ಸರ್ವಂ=ಸಮಸ್ತ ಜಗದಾದಿಗಳೂ, ಏತತ್ಸೃಷ್ಟಂ=ಈ ಹರಿಯಿಂದಲೇ ಸೃಷ್ಟಿಸಲ್ಪಟ್ಟವೆ, ಇತ್ಯಾದಿ=ಇವೇಮೊದಲಾದ ರೂಪಗಳಿಂದ, (ಜಗತ್ತು ತಿಳಿಯಲ್ಪಡುತ್ತದೆ.)

ತಾ ॥ (1) ದೇವದತ್ತನ ತಂದೆಯಾದ ಯಜ್ಞದತ್ತನು, ದೇವದತ್ತನಿಗೆ ಕಾರಣನೆಂದು ತಿಳಿಯಲ್ಪಡುತ್ತಿರಲು ದೇವದತ್ತನೂ ದೇವದತ್ತನೆಂದೇ ತಿಳಿಯಲ್ಪಟ್ಟವನಾಗಿ ಯಜ್ಞದತ್ತನ ಮಗನೆಂದು ಉಪದೇಶಿಸದೇನೇ ತಿಳಿಯಲ್ಪಡುತ್ತಾನೆ. ಇವನು ದೇವದತ್ತನು ಎಂಬೀ ವಾಕ್ಯವನ್ನು ಮಾತ್ರ ಕೇಳೋಣ, ದೇವದತ್ತನಾದರೆ ಈತನನ್ನು ಇವನು ಈ ಯಜ್ಞದತ್ತನ ಮಗನೆಂದು ತಿಳಿಯುತ್ತೇನೆಂದು ವ್ಯಪದೇಶವಿದ್ದುದರಿಂದ (2) ಕರ್ಮ ಮೊದಲಾದ ಸಮಸ್ತ ಜಗತ್ತಿನ ಸ್ವರೂಪತಃ ಜ್ಞಾನವು (ಅಂದರೆ ಭಗವಂತನಿಂದ ಸೃಷ್ಟವಾಗಿದೆ. ಆದಕಾರಣ ಆತನ ಅಧೀನವಾಗಿದೆ ಎಂಬುವುದನ್ನು ಹೊರತಾದ ಜ್ಞಾನವು) ವ್ಯರ್ಥವು. ಏಕೆಂದರೆ, ಅಲ್ಪ ಅಸ್ಥಿರಗಳಾದ ಪ್ರಯುಕ್ತ ಕರ್ಮಾದಿಗಳು ಪುರುಷಾರ್ಥಗಳೇ ಅಲ್ಲವು. ಮತ್ತು ಕರ್ಮಾದಿ ಜಗತ್ತು ಭಗವಂತನಿಂದ ಸೃಷ್ಟಿಸಲ್ಪಟ್ಟದೆ. ಇದು ಮೊದಲಾದ ಪ್ರಕಾರಗಳನ್ನು ಹೊರತು ಸ್ವರೂಪದಿಂದಲೇ ಜ್ಞಾನವನ್ನು ಒಡಂಬಟ್ಟರೆ ಸ್ವತಂತ್ರವಾಗಿಯೇ ಜ್ಞಾನವು ಪ್ರಾಪ್ತವಾಗುವುದರಿಂದ ಅನರ್ಥಫಲವಾಗುವುದು. ಆದಕಾರಣ ಮೋಕ್ಷವನ್ನು ಬಯಸುವವನು ಸರ್ವಪ್ರಪಂಚವೂ ಭಗವತ್ಸೃಷ್ಟವೇ ಇತ್ಯಾದಿ ರೂಪಗಳಿಂದಲೇ ತಿಳಿಯಲ್ಪಡಬೇಕು. ಇದೆಲ್ಲವೂ ಭಗವತ್ಸೃಷ್ಟವು ಎಂದು ತಿಳಿಯಲಿಕ್ಕೂ ಪ್ರತ್ಯೇಕ ಪ್ರಯಾಸಪಡಬೇಕಾಗಿಲ್ಲ. ಅದು ಭಗವಂತನ ಜ್ಞಾನದಿಂದಲೇ ಸಿದ್ಧಿಸುವುದು. ಆ ಪರಮಾತ್ಮನೇ ಜಗತ್ಕಾರಣನು. ಇತ್ಯಾದಿ ರೂಪಗಳಿಂದ ತಿಳಿಯಲ್ಪಡುತ್ತಾನೆ. ಅಂತೂ ಪರಮಾತ್ಮನು ಹಾಗೆ ತಿಳಿಯಲ್ಪಡುತ್ತಿರಲು ಜಗತ್ತು ಶ್ರೀಹರಿಯಿಂದ ಸೃಷ್ಟವಾಗಿದೆ, ಇತ್ಯಾದಿ ರೂಪಗಳಿಂದ ತಿಳಿಯಲ್ಪಡುತ್ತದೆಯೇ ಸರಿ. ಆದಕಾರಣ ಶ್ರೀಹರಿಯಲ್ಲಿಯೇ ಭಕ್ತಿಯನ್ನು ಮಾಡಬೇಕು. ॥ ೨೪೭ ॥

ಸಾದೃಶ್ಯಕ್ಕೆ ಹೇತುತ್ವವನ್ನುಪಪಾದಿಸುತ್ತಾರೆ —

**ಮೂ ॥ ಸಾದೃಶ್ಯಾಚ್ಚೈಕಸ್ತ್ರೀಜ್ಞಾನಾದನ್ಯಸ್ತ್ರೀಜ್ಞಾನವಿತಿ ॥ ೨೪೮ ॥**

ಅ ॥ ಸಾದೃಶ್ಯಾಚ್ಚ=(ಒಬ್ಬ ಸ್ತ್ರೀವ್ಯಕ್ತಿಯು ಸ್ತ್ರೀಶಬ್ದವಾಚ್ಯಳು, ಇತ್ಯಾದಿ ರೂಪಗಳಿಂದ ತಿಳಿಯಲ್ಪಡುತ್ತಿರಲು) ಸಾದೃಶ್ಯದಿಂದ, ಏಕಸ್ತ್ರೀ ಜ್ಞಾನಾತ್=ಒಬ್ಬ ಹೆಂಗಸಿನ ಜ್ಞಾನದಿಂದ, ಅನ್ಯಸ್ತ್ರೀ ಜ್ಞಾನಂ=ಬೇರೆ ಹೆಂಗಸರ ಜ್ಞಾನವು, ಇತಿ=ಪ್ರಾಧಾನ್ಯ, ಸಾದೃಶ್ಯ, ಕಾರಣತ್ವಗಳೆಂಬ ಮೂರು ಹೇತುಗಳೂ ಸಮಾಪ್ತಗಳಾದುವು.

ತಾ ॥ (1) 'ಸ್ತನಕೇಶವತೀ ಸ್ತ್ರೀ ಸ್ಯಾತ್' ಎಂದು ಹೇಳಿದ ಸಾದೃಶ್ಯದಿಂದ ಬೇರೆ ಸ್ತ್ರೀವ್ಯಕ್ತಿಯೂ ಉಪದೇಶವಿಲ್ಲದೇನೇ ಹೇಗೆ ತಿಳಿಯಲ್ಪಡುತ್ತಾಳೋ, ಹಾಗೆಯೇ ಭಗವಂತನು ಸತ್ಯನೆಂದು ತಿಳಿಯಲ್ಪಡೋಣ ಪ್ರಾಮಾಣಿಕತ್ವ ಸಾದೃಶ್ಯದಿಂದ ಜಗತ್ತೂ ಸತ್ಯವೆಂದೇ ತಿಳಿಯಲ್ಪಡುತ್ತದೆ. 'ಜಗತ್ ಸತ್ಯಂ ಭವಿತುಮರ್ಹತಿ ಪ್ರಾಮಾಣಿಕತ್ವಾತ್ ಬ್ರಹ್ಮವತ್' ಪ್ರಪಂಚವು

ಸತ್ಯವಾಗಲು ಯೋಗ್ಯವಾಗಿದೆ. ಪ್ರಮಾಣಸಿದ್ಧವಾದ ಪ್ರಯುಕ್ತ, ಬ್ರಹ್ಮನಂತೆ ಎಂದು ಅನುಮಾನಾಕಾರವು. (2) 'ಭಗವಂತನು ಜ್ಞಾನಾನಂದಾದಿ ಸ್ವರೂಪನು' ಎಂದು ತಿಳಿಯಲ್ಪಡೋಣ ಚೇತನತ್ವ ಸಾದೃಶ್ಯದಿಂದ ಜೀವರೂ ಹಾಗೆಯೇ ತಿಳಿಯಲ್ಪಡುತ್ತಾರೆ. 'ಸಜ್ಜೀವಾಃ ಜ್ಞಾನಾನಂದರೂಪಾಃ ಸಚ್ಚೇತನತ್ವಾತ್ ಬ್ರಹ್ಮವತ್' ಸಜ್ಜೀವರು ಜ್ಞಾನಾನಂದ ಸ್ವರೂಪರು. ನಿರ್ದುಷ್ಟ ಚೇತನರಾದ ಪ್ರಯುಕ್ತ, ಬ್ರಹ್ಮವತ್=ಪರಬ್ರಹ್ಮನಂತೆಯೇ, ಎಂಬೀ ಅನುಮಾನದಿಂದ ಜ್ಞಾನಾನಂದಾದಿ ಸ್ವರೂಪರೆಂದು ಜೀವರು ತಿಳಿಯಲ್ಪಡುತ್ತಾರೆ. (3) ಅಬಾಧಿತ ವಿಷಯದಲ್ಲಿಯೇ ಅನುಮಾನವು ಪ್ರವೃತ್ತಿಯಾಗುವುದರಿಂದ ಚೇತನತ್ವಾದಿ ಹೇತುಗಳಿಂದ ಸ್ವಾತಂತ್ರ್ಯಾದಿಗಳನ್ನನು ಮೇಯಿಸಕೂಡದು. ಆ ಕಾರಣ ಅತಿ ಪ್ರಸಂಗವಿಲ್ಲವು. ಆದಕಾರಣ ಅಪೇಕ್ಷಿತವಾದ ಜಗಜ್ಞಾನವು ಹಿಂದೆ ಹೇಳಿದ ಪ್ರಕಾರ ಭಗವಂತನ ಜ್ಞಾನದಿಂದಲೇ ಲಭಿಸುವ ಪ್ರಯುಕ್ತ ಕೇವಲ ಕರ್ಮಾದಿಗಳನ್ನು ಪ್ರತಿಪಾದಿಸುವ ಶಾಸ್ತ್ರವನ್ನು ಅಭ್ಯಾಸ ಮಾಡಕೂಡದು ॥ ೨೪೮ ॥

ಒಂದು ವಸ್ತುವಿನ ಜ್ಞಾನದಿಂದ ಸರ್ವವಸ್ತುವಿನ ಜ್ಞಾನವಾಗುತ್ತದೆ. ಎನ್ನುವಲ್ಲಿ ಪ್ರಾಧಾನ್ಯ ಮೊದಲಾದುದು ಕಾರಣವೆಂದು ಹೇಳಿದ್ದು ಕೂಡಲಾರದು. ಅಂತಹ ಅರ್ಥವು ಶ್ರುತಿಗೆ ಅಭಿಪ್ರೇತವಲ್ಲವು. ಶ್ರುತಿಯಲ್ಲಿ ಆದರೂ ಅದನ್ನು ಬೋಧಿಸುವುದಕ್ಕಾಗಿ ಮೃತ್ಪಿಂಡ ಮೃಣ್ಮಯ ಮೊದಲಾದ ಮೂರು ದೃಷ್ಟಾಂತಗಳು ಹೇಳಲ್ಪಟ್ಟಿವೆ. ಅದರಲ್ಲಿ ಅಧಿಷ್ಠಾನ ಅಧ್ಯಸ್ತತ್ವರೂಪವಾದ ಉಪಾದಾನೋಪಾದೇಯ ಭಾವವೇ ಸ್ಪಷ್ಟವಾಗಿ ತೋರುತ್ತದೆ ಎಂದು ಪರರು ಆಶಂಕಿದರೆ —

**ಮೂ ॥ ತದೇವ ಸಾದೃಶ್ಯಮತ್ರಾಪಿ ವಿವಕ್ಷಿತಂ ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾದಿತ್ಯಾದಿನಾ ॥೨೪೯॥**

ಅ ॥ ತದೇವ ಸಾದೃಶ್ಯಂ=(ನಾವು ಒಂದರ ಜ್ಞಾನದಿಂದ ಸರ್ವ ವಿಜ್ಞಾನ ವಿಷಯದಲ್ಲಿ ಹೇತುವಾಗಿ ಯಾವ ಸಾದೃಶ್ಯವನ್ನು ಹೇಳಿರುತ್ತೇವೋ) ಅದೇ ಸಾದೃಶ್ಯವು, ಅತ್ರಾಪಿ=ಈ ಶ್ರುತಿಯಲ್ಲಿಯೂ, ಯಥಾ=ಹೇಗೆ, ಸೋಮ್ಯ=ಸೋಮಪಾನಾರ್ಹನೇ, ಏಕೇನ ಮೃತ್ಪಿಂಡೇನ= ಒಂದು ಮಣ್ಣಿನ ಹೆಂಟೆಯಿಂದ, ಸರ್ವಂ ಮೃಣ್ಮಯಂ=ಎಲ್ಲಾ ಮೃಣ್ಮಯವಾದ ವಸ್ತುವೂ, ವಿಜ್ಞಾತಂ = ತಿಳಿಯಲ್ಪಟ್ಟದ್ದಾಗಿ, ಸ್ಯಾತ್ = ಆಗುವುದು, ಇತ್ಯಾದಿನಾ = ಇವು ಮೊದಲಾದ ಮೂರು ದೃಷ್ಟಾಂತ ವಾಕ್ಯಗಳಿಂದ, ವಿವಕ್ಷಿತಂ = ಅಲ್ಲಿ ಹೇತುವಾಗಿ ವಿವಕ್ಷಿತವಾಗಿದೆ. (ಆದಕಾರಣ ನಮ್ಮ ವ್ಯಾಖ್ಯಾನವು ಶ್ರುತ್ಯಭಿಪ್ರಾಯಕ್ಕೆ ವಿರುದ್ಧವಾಗಲಿಲ್ಲ.)

ತಾ ॥ (1) ಸಾದೃಶ್ಯವು ಶ್ರುತಿಗೆ ಅಭಿಪ್ರೇತವು ಎಂದು ತಿಳಿಸಿಕೊಡುವುದಕ್ಕಾಗಿಯೇ 'ಪ್ರಾಧಾನ್ಯಾತ್ ಕಿಂಚಿತ್ಸಾದೃಶ್ಯಾತ್ ಕಾರಣತ್ವಾಚ್ಚ' ಎಂದು ಮಧ್ಯದಲ್ಲಿ ಸಾದೃಶ್ಯವನ್ನು ಹೇಳಿದ್ದರೂ ಅಂತ್ಯದಲ್ಲಿ ಉಪಪಾದಿಸಿದ್ದು ॥ ೨೪೯ ॥

ಪುನಃ ಶಂಕಿಸುವರು. (1) ಇಲ್ಲಿಯೂ ಸಾದೃಶ್ಯವೇ ಹೇತುವೆಂದು ವಿವಕ್ಷಿಸಿದರೆ, ಮೂರು ದೃಷ್ಟಾಂತಗಳು ವ್ಯರ್ಥಗಳೆಂದು ಪರರು ಹೇಳಿದರೆ, ವಿಕಾರಗಳಿಗೆ ಮಿಥ್ಯಾತ್ವವೇ ಹೇತುವೆಂದು ವಿವಕ್ಷಿಸಿದರೂ ವ್ಯರ್ಥವೆನ್ನುವುದು ಸಮವೇ ಸರಿ. (2) ತತ್ವವನ್ನು ತಿಳಿಯಲು ಬಹು ಪ್ರಯಾಸವಿದ್ದುದರಿಂದ ಅನೇಕ ದೃಷ್ಟಾಂತಗಳನ್ನು ಹೇಳಿದ್ದೆಂದರೆ ನಮ್ಮ ಮತದಲ್ಲಿಯೂ ಸರಿಯೇ. ಅಲ್ಲದೆ ಶ್ರೀಮದಾಚಾರ್ಯರೇ ಛಾಂದೋಗ್ಯಭಾಷ್ಯದಲ್ಲಿ ಮೃತ್ಪಿಂಡ, ಲೋಹ, ನಖನಿಕೃಂತನ ರೂಪಗಳಾದ ಮೂರು ದೃಷ್ಟಾಂತಗಳಲ್ಲಿ ಸಾದೃಶ್ಯ ಪ್ರಾಧಾನ್ಯರೂಪ ಅರ್ಥಗಳನ್ನು ತಿಳಿಸಿ

ಕೊಡೋಣದರಿಂದ ಭೇದವು ಹೇಳಲ್ಪಟ್ಟದೆ. (3) ಮೂರು ದೃಷ್ಟಾಂತವಾಕ್ಯಗಳಲ್ಲಿಯೂ ಅಧಿಷ್ಠಾನತ್ವಾದಿ ರೂಪವಾದ ಉಪಾದಾನತ್ವಾದಿಗಳನ್ನೇ ವಿವಕ್ಷಿಸಿದ್ದು ಎಂದು ಏಕೆ ಆಗಬಾರದು? ಉಪಾದಾನ ಉಪಾದೇಯಗಳಿಗೆ ಅಭೇದವಿದ್ದುದರಿಂದ ಉಪಾದಾನದ ಜ್ಞಾನದಿಂದ ಉಪಾದೇಯದ ಜ್ಞಾನವು ಸಂಭವಿಸಬಹುದು, ಎಂದರೆ ಈಗ ಮೃತ್ಪಿಂಡದೃಷ್ಟಾಂತವಾಕ್ಯದಲ್ಲಿ ಅನುಪಪತ್ತಿಯನ್ನು ತೋರಿಸುತ್ತಾರೆ —

ಮೂ ॥ ಅನ್ಯಥೈಕಶಬ್ದಃ ಪಿಂಡಶಬ್ದಶ್ಚ ವ್ಯರ್ಥಃ ಸ್ಯಾತ್ । ಮೃದಾ ವಿಜ್ಞಾತಯೇತ್ಯೇತಾವತಾ ಪೂರ್ಣತ್ವಾತ್ । ನ ಹ್ಯೇಕಮೃತ್ಪಿಂಡಾತ್ಮಕಾನ್ಯನ್ಯಮೃಣ್ಮಯಾನಿ । ಸಾದೃಶ್ಯಮೇವ ಹಿ ತೇಷಾಂ ॥ ೨೫೦ ॥

ಅ ॥(1)ಅನ್ಯಥಾ=ಇಲ್ಲಿ ಉಪಾದಾನೋಪಾದೇಯಭಾವದಿಂದ ಐಕ್ಯವು ವಿವಕ್ಷಿತವಾಗಿದ್ದರೆ, ಏಕಶಬ್ದಃ='ಏಕ'ಎಂಬೀಶಬ್ದವು, ಪಿಂಡಶಬ್ದಶ್ಚ='ಪಿಂಡ'ಎಂಬೀಶಬ್ದವು, ವ್ಯರ್ಥಃ=ಪ್ರಯೋಜನವಿಲ್ಲದಿರುವುದೂ, ವಿರುದ್ಧವಾದ ಪ್ರಯೋಜನವುಳ್ಳದ್ದೂ, ಸ್ಯಾತ್=ಆಗುವುದು. (2)ವಿಜ್ಞಾತಯಾ=ತಿಳಿಯಲ್ಪಟ್ಟ, ಮೃದಾ=ಮಣ್ಣಿನಿಂದ, ಇತ್ಯೇತಾವತಾ=ಇಷ್ಟರಿಂದಲೇ, ಪೂರ್ಣತ್ವಾತ್=(ವಿವಕ್ಷಿತವಾದ ಅರ್ಥವನ್ನು ಪ್ರತಿಪಾದಿಸುವುದಕ್ಕೆ) ಪರಿಪೂರ್ಣತ್ವವಿದ್ದುದರಿಂದ, (ಯಾವುದು ಇಲ್ಲದೇನೆ ವಿವಕ್ಷಿತವಾದ ವಾಕ್ಯಾರ್ಥಜ್ಞಾನವಾಗುವುದೋ ಅದು ಅನಾಕಾಂಕ್ಷಿತವಾದುದರಿಂದ ಪ್ರಯೋಜನವಿಲ್ಲದಿರುವುದೇ ಆಗುವುದು.) (3) ಅನ್ಯಮೃಣ್ಮಯಾನಿ=ಬೇರೆ ಮೃತ್ಪಿಂಡಾಂತರಕಾರ್ಯಗಳು, ಏಕಮೃತ್ಪಿಂಡಾತ್ಮಕಾನಿ=ಒಂದು ಮೃತ್ಪಿಂಡಸ್ವರೂಪಗಳು, ನ ಹಿ=ಅಲ್ಲವಷ್ಟೆ! (ಉಪಾದಾನೋಪಾದೇಯಭಾವವನ್ನು ವಿವಕ್ಷಿಸಿದರೆ 'ಏಕ' 'ಮೃತ್ಪಿಂಡ'ಶಬ್ದಗಳು ವಿರುದ್ಧಗಳೇ ಆಗುವೆ.) (4) ತೇಷಾಂ=ಬೇರೆ ಮೃಣ್ಮಯಗಳಾದವುಗಳಿಗೆ, (ಒಂದು ಮೃತ್ಪಿಂಡದಿಂದ) ಸಾದೃಶ್ಯಮೇವ ಹಿ=ಸಾದೃಶ್ಯವೇ ಸರಿ. (ಅಂತೂ ಪರರಿಗೆ ವಿರೋಧವಿದ್ದಂತೆಯೇ ನಮಗೆ ವಿರೋಧವಿಲ್ಲವು) ॥೨೫೦॥

ಲೋಹಮಣಿ ನಖನಿಕೃಂತನ ದೃಷ್ಟಾಂತವಾಕ್ಯಗಳಲ್ಲಿಯೂ ಅನುಪಪತ್ತಿಯನ್ನು ತೋರಿಸುತ್ತಾರೆ —

ಮೂ ॥ ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್ । ಯಥಾ ಸೋಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾದಿತ್ಯಾದಿಕಮಪಿ ವ್ಯರ್ಥಂ ಸ್ಯಾತ್ । ನ ಹ್ಯೇಕಮಣ್ಯಾತ್ಮಕಮನ್ಯಲ್ಲೋಹಮಯಂ । ನ ಚೈಕನಖನಿಕೃಂತನಾತ್ಮಕಂ ಸರ್ವಂ ಕಾರ್ಷ್ಣಾಯಸಂ ॥ ೨೫೧ ॥

ಅ ॥ (1) ಅನ್ಯಥಾ=ಉಪಾದಾನೋಪಾದೇಯಭಾವದಿಂದ ಐಕ್ಯವು ವಿವಕ್ಷಿತವಾಗಿದ್ದರೆ, ಯಥಾ=ಹೇಗೆ, ಸೋಮ್ಯ = ಸೋಮಪಾನಾರ್ಹನೇ, ಏಕೇನ ನಖನಿಕೃಂತನೇನ = ಒಂದು ಉಗುರುಕತ್ತಿಯಿಂದ, ಸರ್ವಂ ಕಾರ್ಷ್ಣಾಯಸಂ=ಎಲ್ಲಾ ಕಬ್ಬಿಣವೂ, ವಿಜ್ಞಾತಂ=ತಿಳಿಯಲ್ಪಟ್ಟದ್ದಾಗಿ, ಸ್ಯಾತ್=ಆಗುವುದು, ಇತ್ಯಾದಿಕಮಪಿ=ಇದುಮೊದಲಾದುದೂ, (ಏಕಶಬ್ದ ಮೊದಲಾದುದೂ) ವ್ಯರ್ಥಂ=ಪ್ರಯೋಜನವಿಲ್ಲದಿರುವುದೂ ವಿರುದ್ಧಪ್ರಯೋಜನವುಳ್ಳದ್ದೂ, ಸ್ಯಾತ್=ಆಗುವುದು. 'ಲೋಹೇನ ಕೃಷ್ಣಾಯಸೇನ' ಇಷ್ಟರಿಂದಲೇ ಪರಿಪೂರ್ಣವಾದುದರಿಂದ ಈ ವಾಕ್ಯಗಳಲ್ಲಿಯೂ 'ಏಕ' ಮೊದಲಾದ ಪದಗಳಿಗೆ ಪ್ರಯೋಜನವಿಲ್ಲವು. (2)ಅನ್ಯತ್ ಲೋಹಮಯಂ=

ಬೇರೆ ಲೋಹಮಯವಾದುದು, ಏಕಮಣ್ಯಾತ್ಮಕಂ=ಒಂದು ಮಣಿಸ್ವರೂಪವಾದುದು, ನ ಹಿ= ಅಲ್ಲವಷ್ಟೆ! ಸರ್ವಂ ಕಾರ್ಷ್ಣಾಯಸಂ=ಎಲ್ಲಾ ಕಬ್ಬಿಣದ ವಿಕಾರವೂ, ಏಕ ನಖನಿಕೃಂತನಾತ್ಮ-ಕಂ=ಒಂದು ಉಗುರುಕತ್ತಿಯ ಸ್ವರೂಪವಾದುದೂ, ನ ಚ=ಅಲ್ಲವಷ್ಟೆ! (ಅಂತೂ ವಿರುದ್ಧ ಪ್ರಯೋಜನವುಳ್ಳದ್ದೇ ಸರಿ.)

ತಾ || (1) ಮೂರು ದೃಷ್ಟಾಂತಗಳಲ್ಲಿಯೂ ಆಯಾಯ ವಸ್ತುಗಳ ವಿಕಾರವೇ ಸರ್ವ ಶಬ್ದದಿಂದ ಹೇಳಲ್ಪಡುತ್ತದೆ, ಆದಕಾರಣ ಹಿಂದಿನ ದೋಷವಿಲ್ಲವೆಂದು ಹೇಳಕೂಡದು. ಹಾಗೆ ಇದ್ದರೆ ಸರ್ವಶಬ್ದಕ್ಕೆ ವೈಯರ್ಥ್ಯ ಬರಬೇಕಾಗುವುದು. 'ಮೃಣ್ಮಯಂ' ಇತ್ಯಾದಿಗಳಿಂದಲೇ ಪೂರ್ಣವಾಗುವುದು. (2) ನಖನಿಕೃಂತನವು ಅಂತ್ಯಾವಯವಿಯಾದುದರಿಂದ ಉಪಾದಾನ ಕಾರಣವೇ ಆಗಲಾರದು. ಆದಕಾರಣ ಆ ದೃಷ್ಟಾಂತವು ಅತ್ಯಂತಾಸಂಬದ್ಧವು. (3) 'ನಖ ನಿಕೃಂತನ' ಎಂಬುವುದರ ಗ್ರಹಣವು ಕಪ್ಪಾದ ಕಬ್ಬಿಣಗೋಲಿಗೆ ಉಪಲಕ್ಷಕವೆಂದು ಹೇಳ ಕೂಡದು. ಸಾದೃಶ್ಯವೆಂದಭಿಪ್ರಾಯವಿದ್ದರೆ ಮುಖ್ಯವಾದ ಅರ್ಥವೇ ಸಂಭವಿಸಬಹುದು ||೨೫೧||

ಪುನಃ ಶಂಕಿಸುತ್ತಾರೆ. ಈ ಮೂರು ದೃಷ್ಟಾಂತಗಳನ್ನುಪಪಾದಿಸುವುದಕ್ಕಾಗಿ ಈ ಮೂರು ವಾಕ್ಯಗಳದ್ದೂ ಶಿಷ್ಟವಾಕ್ಯಗಳಿವೆ. 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' 'ವಾಚಾರಂಭಣಂ ವಿಕಾರೋ ನಾಮಧೇಯಂ ಲೋಹಮಣಿತ್ಯೇವ ಸತ್ಯಂ' 'ವಾಚಾರಂಭಣಂ ವಿಕಾರೋ ನಾಮಧೇಯಂ ಕೃಷ್ಣಾಯಸಮಿತ್ಯೇವ ಸತ್ಯಂ' ಎಂದು, ವಿಕಾರಃ=ವಿಕ್ರಿಯಮಾಣವಾದ,ಘಟಶರಾವಾದಿಗಳು, ವಾಚಾರಂಭಣಂ=ಮಾತಿನಿಂದಲೇ ಇರುತ್ತವೆಂದು ಆರಬ್ಧವಾಗುತ್ತವೆ, ಪಾರಮಾರ್ಥಿಕವಾಗಿ ವಿಕ್ರಿಯಮಾಣವಾದ ವಸ್ತುವು ಇಲ್ಲವು. ನಾಮಧೇಯಂ=ಹೆಸರುಮಾತ್ರವೇ ಸರಿ, ವಿಕ್ರಿಯಮಾಣವಾದ ವಸ್ತುವು ಇಲ್ಲವೇ ಇಲ್ಲ. ಮೃತ್ತಿಕೇತ್ಯೇವ=ಪಾರಮಾರ್ಥಿಕವಾಗಿ, 'ಮೃತ್ತಿಕಾ' ಎನ್ನುವುದೇ, ಸತ್ಯಂ=ಸತ್ಯವಸ್ತುವು ಆದಕಾರಣ ಕಾರಣಹೊರತಾದ ಕಾರ್ಯವೇ ಮಿಥ್ಯೆಯಾದುದರಿಂದ 'ಯಥಾ ಸೋಮ್ಯೈಕೇನ' ಎಂದು ಹೇಳಲ್ಪಟ್ಟದ್ದು ಯುಕ್ತವೇ ಸರಿ. ಹೀಗೆ ಶ್ರುತಿಯು ತಾನಾಗಿಯೇ ವಿಕಾರ ಮಿಥ್ಯಾತ್ವವು ಒಂದರ ಜ್ಞಾನದಿಂದ ಸರ್ವಜ್ಞಾನದಲ್ಲಿ ಹೇತುವೆಂದು ಹೇಳುವುದರಿಂದ ಸಾದೃಶ್ಯಾದಿಗಳಿಗೆ ಹೇತುತ್ವವು ಹೇಗೆ ಹೇಳಲ್ಪಡುತ್ತದೆ? ಶ್ರುತ್ಯಭಿಪ್ರಾಯವು ನಿಶ್ಚಿತವಾಗಿದ್ದರೆ ಪದವೈಯರ್ಥ್ಯಾದಿಗಳು ದೋಷವಲ್ಲವು, ಎಂದರೆ, ಉಪಲಕ್ಷಕವೆಂದಭಿಪ್ರಾಯದಿಂದ ಒಂದು ವಾಕ್ಯವನ್ನು ವ್ಯಾಖ್ಯಾನ ಮಾಡುತ್ತಾರೆ.

**ಮೂ || ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮಿತ್ಯತ್ರ ಚ ವಾಚಾ ನಾಮ್ನಾಮಾರಂಭಣಂ ವಿಕಾರಃ ಅವಿಕೃತಂ ನಿತ್ಯಂ ನಾಮಧೇಯಂ ಮೃತ್ತಿಕೇತ್ಯೇವೇತ್ಯೇತದ್ವಚನಂ ಸತ್ಯಮಿತಿ ಶ್ರುತ್ಯರ್ಥಃ || ೨೫೨ ||**

ಟಿ || 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಇತ್ಯತ್ರ ಚ=ಈ ವಾಕ್ಯದಲ್ಲಿಯಾದರೂ, ಯಸ್ಮಾತ್=ಯಾವ ಕಾರಣದಿಂದ, ವಾಚಾ=ವಾಗಿಂದ್ರಿಯದಿಂದ, ನಾಮ್ನಾಂ=ಸಂಸ್ಕೃತ ಹೊರತಾದ ಭಾಷಾಶಬ್ದಗಳಿಗೆ, ಯತ್ ಆರಂಭಣಂ = ಯಾವುದು ಉಚ್ಚಾರಣವೋ, ತತ್ ವಿಕಾರಃ=ಅದು ಹುಟ್ಟಿಸುವಿಕೆಯು. ಸಂಸ್ಕೃತದಂತೆ

ವ್ಯಕ್ತೀಕರಿಸಿದ್ದಲ್ಲ. ಆದಕಾರಣ ಅವುಗಳು ವಿಕೃತಗಳು.) ಮೃತ್ತಿಕೇತ್ಯೇವ ನಾಮಧೇಯಂ= ಮೃತ್ತಿಕಾ ಎನ್ನುವ ಸಂಸ್ಕೃತನಾಮಧೇಯವೇ, ಅವಿಕೃತಂ=ವಿಕಾರವನ್ನು ಹೊಂದದಿರುವುದು, ನಿತ್ಯಂ ಚ=ನಿತ್ಯವೂ ಆಗಿರುತ್ತದೆ. (ಹೇಗೆ ಈ ಗ್ರಾಮದಲ್ಲಿ ಬಾಕಿ ಎಲ್ಲರೂ ದುರಾಚಾರಿಗಳು, ಇವನೊಬ್ಬನೇ ಬ್ರಾಹ್ಮಣನು ಎನಲು ಸದಾಚಾರಿಯು ಎಂದು ಲಭಿಸುತ್ತದೋ ಹಾಗೆಯೇ)ಇತ್ಯೇತದ್ವ್ಚನಂ=ಈ ಮಾತು, ಸತ್ಯಂ=ಯಥಾರ್ಥವು, ಇತಿ=ಹೀಗೆ, ಶ್ರುತ್ಯರ್ಥಃ=ಶಕ್ತಿವೃತ್ತಿಯಿಂದಲೇ ಬೋಧಿಸಲ್ಪಟ್ಟ ಅರ್ಥವು (ಆದಕಾರಣ ಪರರಂತೆ ಕಾಲ್ಪನಿಕವಾದ ಅರ್ಥವಲ್ಲವು. ಅಥವಾ ಈ ವಾಕ್ಯದಲ್ಲಿ ವಿಕಾರ ಮಿಥ್ಯಾತ್ವವು ಹೇಳಲ್ಪಡುವುದಿಲ್ಲ.) ॥

ತಾ ॥ (1) ಸಂಸ್ಕೃತ ಅಪಭ್ರಂಶಶಬ್ದಗಳಿಗೆ ನಿತ್ಯತ್ವ ಅನಿತ್ಯತ್ವವನ್ನು ಹೇಳಿರುವುದು ಅಸಂಗತವು ಎಂದು ಹೇಳಕೂಡದು. ಈ ವಾಕ್ಯವು ಹಿಂದಿನ ದೃಷ್ಟಾಂತವನ್ನುಪಪಾದಿಸುವುದು ಅಲ್ಲವು. ಮತ್ತೆ ಪ್ರಾಧಾನ್ಯದಿಂದ ಒಂದರ ಜ್ಞಾನದಿಂದ ಸರ್ವ ವಿಜ್ಞಾನವು ಹೇಳಲ್ಪಟ್ಟದೆ. ಅದರಲ್ಲಿ ಈ ವಾಕ್ಯದಿಂದ ದೃಷ್ಟಾಂತವು ಹೇಳಲ್ಪಡುತ್ತದೆ. ಹೇಗೆ ಅವಿಕೃತವಾಗಿರುವುದರಿಂದಲೂ ನಿತ್ಯವಾಗಿರುವುದರಿಂದಲೂ ಸಂಸ್ಕೃತವು ಪ್ರಧಾನವೋ, ವಿಕೃತವಾಗಿರುವುದರಿಂದ ಸಾಂಕೇತಿಕ ನಾಮಗಳು ಅಪ್ರಧಾನಗಳೋ, ಅವುಗಳ ಜ್ಞಾನದಿಂದ ಯಾವುದು ಫಲವೋ, ಅದು ಸಂಸ್ಕೃತಜ್ಞಾನದಿಂದ ಲಭಿಸುವುದು. ಹಾಗೆಯೇ ಜಗಜ್ಞಾನದ ಫಲವು ಪರಮಾತ್ಮನ ಜ್ಞಾನದಿಂದಲೇ ಲಭಿಸುವುದು. ಇದಕ್ಕಾಗಿಯೇ 'ಯಥಾ ಸೋಮ್ಯ' ಎಂದನುವರ್ತಿಸಬೇಕು ॥ ೨೫೨ ॥

ಈ ವಾಕ್ಯವು ವಿಕಾರಕ್ಕೆ ಮಿಥ್ಯಾತ್ವವನ್ನು ಪ್ರತಿಪಾದಿಸುವುದೆಂದೇಕೆ ಆಗಬಾರದು ಎಂದು ಹೇಳಕೂಡದು. ಇಲ್ಲಿ ಮಿಥ್ಯಾತ್ವವನ್ನು ಹೇಳುವ ಶಬ್ದವಿಲ್ಲವು. 'ವಾಚಾರಂಭಣ' ಎಂಬೀ ಶಬ್ದವು ಇದೆ. ಎಂದರೆ, ಆ ಶಬ್ದವು ಮಿಥ್ಯಾತ್ವದಲ್ಲಿ ರೂಢವೋ ಅಥವಾ ಯೌಗಿಕವೋ, ಎರಡೂ ಹೇಳಕೂಡದು, ಎನ್ನುತ್ತಾರೆ.

**ಮೂ ॥ ನ ಚ ವಾಚಾರಂಭಣ ಶಬ್ದೋಽಪಿ ಮಿಥ್ಯಾತ್ವೇ ಪ್ರಸಿದ್ಧಃ । ವಾಚಾರಂಭಣಮಾತ್ರಮಿತಿ ಚಾಶ್ರುತಕಲ್ಪನಂ ॥ ೨೫೩ ॥**

ಅ ॥ (1) ವಾಚಾರಂಭಣ ಶಬ್ದೋಽಪಿ=ವಾಚಾರಂಭಣ ಶಬ್ದವೂ ಕೂಡ, (ಶಕ್ತಿಗ್ರಾಹಕಗಳಾದ ಕೋಶ ವ್ಯಾಕರಣಾದಿಗಳು ಈ ವಿಷಯದಲ್ಲಿಲ್ಲದಿರುವುದರಿಂದ) ಮಿಥ್ಯಾತ್ವೇ=ಮಿಥ್ಯಾತ್ವದಲ್ಲಿ, ಪ್ರಸಿದ್ಧಃ=ಪ್ರಸಿದ್ಧವು, ನ ಚ=ಅಲ್ಲವು. (2) ಅಂತೂ ಕೋಶಾದಿಗಳಿಲ್ಲದಿರುವುದರಿಂದ ರೂಢವಾಗಲಾರದು. ಅವಯವವೃತ್ತಿಯಿಂದ ಮಿಥ್ಯಾತ್ವವು ಲಭಿಸದಿರುವುದರಿಂದ ಯೌಗಿಕವಾಗಲಾರದು. (3) (ಈ ಹೊತ್ತು ಅನ್ನವನ್ನು ಮಾತ್ರ ಊಟಮಾಡಿದೆ ಎನಲು ಪಲ್ಯಕಾಯಿಗಳು ಇರಲಿಲ್ಲವೆಂದು ಹೇಗೆ ಲಭಿಸುವುದೋ ಹಾಗೆಯೇ. ವಾಚಾರಂಭಣಮಾತ್ರಂ = ಮಾತಿನಿಂದ ಮಾತ್ರ ಆರಬ್ಧವಾಗಿದೆ ಎನಲು ವಸ್ತುತಃ ಇಲ್ಲವು ಎಂದೇ ಲಭಿಸುತ್ತದೆ ಎಂದರೆ) ವಾಚಾರಂಭಣಮಾತ್ರಂ ಇತಿ ಚ=ಕೇವಲ ಮಾತಿನಿಂದ ಆರಬ್ಧವಾಗಿದೆ ಎನ್ನುವುದೂ, ಅಶ್ರುತಕಲ್ಪನಂ= ಅಶ್ರುತವಾದುದನ್ನೇ ಕಲ್ಪಿಸಿದ್ದು.

ತಾ ॥ (1) 'ಮಾತ್ರ' ಶಬ್ದವು ಅಲ್ಲಿದ್ದರೆ ಹೀಗೆ ಕಲ್ಪಿಸಬಹುದಿತ್ತು. ಮಾತ್ರಶಬ್ದವೇ ಮೂಲದಲ್ಲಿ (ಉಪನಿಷತ್ತಿನಲ್ಲಿ)ಲ್ಲವು. ಅಶ್ರುತಕಲ್ಪನವೇ ದೋಷವು. (2) 'ಅಬ್ಭಕ್ಷ' 'ವಾಯು

ಭಕ್ಷಃ' ನೀರನ್ನು ಮಾತ್ರ ಭಕ್ಷಿಸುವುದು, ವಾಯುವನ್ನು ಮಾತ್ರ ಭಕ್ಷಿಸುವುದು ಎನ್ನುವಂತೆ ಇಲ್ಲಿಯೂ ಅವಧಾರಣಕಲ್ಪಕವಾದುದು ಯಾವುದೂ ಇಲ್ಲವು ॥ ೨೫೩ ॥

ಹೀಗೆ ಅವಧಾರಣವನ್ನಧ್ಯಾಹಾರಮಾಡಿಕೊಂಡು ವಾಚಾರಂಭಣ ಶಬ್ದದಿಂದ ಮಿಥ್ಯಾತ್ವವು ಲಭಿಸುತ್ತದೆಂದಂಗೀಕರಿಸಿದರೆ ನಾಮಧೇಯವೆನ್ನುವುದು ಪುನರುಕ್ತವಾಗುವುದರಿಂದ ವ್ಯರ್ಥವಾಗುವುದು. ನಾಮಧೇಯ ಶಬ್ದಕ್ಕೂ ಕೇವಲ ಹೆಸರೇ ಸರಿ, ವಿಕಾರವೆಂಬುವ ವಸ್ತುವಿಲ್ಲವು, ಎಂದೇ ವ್ಯಾಖ್ಯಾತವಾಗಿರುತ್ತದೆ ಎಂದು ನಿರೂಪಿಸುತ್ತಾರೆ—

ಮೂ ॥ ತಸ್ಮಿನ್ಪಕ್ಷೇ ನಾಮಧೇಯಶಬ್ದ ಇತಿಶಬ್ದಶ್ಚ ವ್ಯರ್ಥಃಸ್ಯಾತ್ ।
ಅತೋ ನ ಕುತ್ರಾಪಿ ಜಗತೋ ಮಿಥ್ಯಾತ್ವಮುಚ್ಯತೇ ॥ ೨೫೪ ॥

ಅ ॥ ತಸ್ಮಿನ್ ಪಕ್ಷೇ = ಆ ಪಕ್ಷದಲ್ಲಿ, ನಾಮಧೇಯಶಬ್ದಃ = ನಾಮಧೇಯವೆಂಬೀ ಶಬ್ದವು, ಇತಿ ಶಬ್ದಶ್ಚ=ಇತಿ ಶಬ್ದವೂ ಕೂಡ, ವ್ಯರ್ಥಃ=ವ್ಯರ್ಥವು, ಸ್ಯಾತ್=ಆಗುವುದು. ಅತಃ=ಆದಕಾರಣ, ಅಂದರೆ ಭಗವಂತನ ಅಧೀನತ್ವವನ್ನು ತಿಳಿಸಿಕೊಡುವುದಕ್ಕಾಗಿಯೇ ಹೇಳಿರುವುದರಿಂದ, ಕುತ್ರಾಪಿ=ಎಲ್ಲಿಯೂ, ಸೃಷ್ಟಿವಾಕ್ಯದಲ್ಲಿಯೂ, ಏಕ ವಿಜ್ಞಾನವಾಕ್ಯದಲ್ಲಿಯೂ, ದೃಷ್ಟಾಂತವಾಕ್ಯದಲ್ಲಿಯೂ, ವಾಚಾರಂಭಣ ವಾಕ್ಯದಲ್ಲಿಯೂ, ಅಥವಾ ಪಷ್ಠಾಧ್ಯಾಯದ ಪೂರ್ವಾರ್ಧದಲ್ಲಿ ಮಾತ್ರವಲ್ಲವು, ಮತ್ತೆ ಶ್ರುತ್ಯಾದಿಗಳಲ್ಲಿ ಎಲ್ಲಿಯೂ, ಜಗತಃ= ಪ್ರಪಂಚಕ್ಕೆ, ಮಿಥ್ಯಾತ್ವಂ=ಮಿಥ್ಯಾತ್ವವು ನ ಉಚ್ಯತೇ=ಹೇಳಲ್ಪಡುವುದಿಲ್ಲ.

ತಾ ॥ (1) ಮತ್ತು ಮೃತ್ತಿಕಾ ಶಬ್ದಕ್ಕೆ, ಶಬ್ದಪದಾರ್ಥಕತ್ವವನ್ನಂಗೀಕರಿಸದೆ ಅರ್ಥಪದಾರ್ಥಕತ್ವವನ್ನಂಗೀಕರಿಸಿದರೆ ಇತಿ ಶಬ್ದವು ವ್ಯರ್ಥವಾಗುವುದು. ಬೇರೆ ಅರ್ಥವು ಕೂಡಲಾರದು. (2) ಇತಿ ಶಬ್ದವು ಪದಕ್ಕೆ ಇದ್ದ ಅರ್ಥವನ್ನು ವ್ಯತ್ಯಾಸಮಾಡತಕ್ಕದು. ಅಂದರೆ ಶಬ್ದಪ್ರಕರಣದಲ್ಲಿ ಪ್ರಸಕ್ತವಾದ ಶಬ್ದಪದಾರ್ಥಕತ್ವವನ್ನು ನಿವಾರಿಸಿ ಅರ್ಥಪದಾರ್ಥಕತ್ವವನ್ನು ವ್ಯವಸ್ಥಾಮಾಡುವುದು. ಉದಾ=ನವೇತಿ ವಿಭಾಷಾ ಎಂದು. ಅರ್ಥ ಪ್ರಕರಣದಲ್ಲಿ ಶಬ್ದಪದಾರ್ಥಕತ್ವವನ್ನು ವ್ಯವಸ್ಥಾಮಾಡುವುದು. ಉದಾ='ಗೌಂತ್ಯಯಮಾಹ' ಎಂದು. ಇದಾದರೂ ಅರ್ಥಶಾಸ್ತ್ರವಾಗಿದೆ. ಆದಕಾರಣ ಇತಿ ಶಬ್ದವಿಲ್ಲದೇನೇ ಪ್ರಕರಣದಿಂದಲೇ ಮೃತ್ತಿಕಾ ಶಬ್ದಕ್ಕೆ ಅರ್ಥಪದಾರ್ಥಕತ್ವವು ಸಿದ್ಧವಾಗುವಾಗ ಇತಿ ಶಬ್ದವು ವ್ಯರ್ಥವೇ ಸರಿ. (3) ನಮಗಾದರೂ ಶಬ್ದಪದಾರ್ಥಕತ್ವವನ್ನು ವ್ಯವಸ್ಥಾ ಮಾಡುವುದರಿಂದ ಸಾರ್ಥಕವೇ ಆಗಿರುತ್ತದೆ. (4) ಅಂತೂ ಅವುಗಳ ವಿರೋಧವಿದ್ದುದರಿಂದ ಉತ್ತರಾರ್ಧಕ್ಕೆ ಭೇದಪರತ್ವವ್ಯಾಖ್ಯಾನವು ಅಯುಕ್ತವಲ್ಲವು. ॥೨೫೪॥

ಮೂ॥(೧) ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್-
ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ ।(ಈಶಾ. ಪು. ೧೦) (೨) ಯಚ್ಚಿಕೇತ-
ಸತ್ಯಮಿತ್ತನ್ನ ಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ । (ಋ
ಅಷ್ಟ ೮. ಅಧ್ಯಾ. ೧. ವರ್ಗ ೨೬.) (೩) ವಿಶ್ವಂ ಸತ್ಯಂ ಮಘವಾನಾ ಯುವೋ
ರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ । (ಋ. ಅ. ೨. ಅ.೬. ವ. ೩) (೪) ಪ್ರ-
ಧಾನಸ್ಯ ಮಹತೋ ಮಹಾನಿ ಸತ್ಯಾಸತ್ಯಸ್ಯ ಕಾರಣಾನಿ ಪ್ರೋಚಂ ।
(ಋ. ಅ. ೨. ಅ. ೬. ವ. ೧೫) ಅನಾದ್ಯನಂತಂ ಜಗದೇತದೀದೃಕ್ಪ್ರವರ್ತತೇ
ನಾತ್ರ ವಿಚಾರ್ಯಮಸ್ತಿ । ನ ಚಾನ್ಯಥಾ ಕ್ವಾಪಿ ಚ ಕಸ್ಯ ಚೇದಮಭೂ-

ತ್ಪುರಾ ನಾಪಿ ತಥಾ ಭವಿಷ್ಯತ್ । ಅಸತ್ಯಮಾಹುರ್ಜಗದೇತದಜ್ಞಾಃ ಶಕ್ತಿಂ ಹರೇರ್ಯೇ ನ ವಿದುಃ ಪರಾಂ ಹಿ । ಯಃ ಸತ್ಯರೂಪಂ ಜಗದೇತದೀದೃಕ್ಸೃಷ್ಟ್ವಾ ತ್ವಭೂತ್ಸತ್ಯಕರ್ಮಾ ಮಹಾತ್ಮಾ । ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ । ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ । ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ । ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ಇತ್ಯಾದೇಶ್ಚ ।(ಗೀ. ಅಧ್ಯಾ. ೧೬. ಶ್ಲೋ. ೮. ೯.) ॥೨೫೫॥

ಅ ॥ (1) ಕವಿಃ=ಸರ್ವಜ್ಞನಾದ, ಮನೀಷೀ=ಸರ್ವರ ಮನಸ್ಸುಗಳಿಗೂ ಪ್ರೇರಕನಾದ, ಪರಿಭೂಃ = ಸರ್ವರನ್ನೂ ತಿರಸ್ಕರಿಸುವ, ಅಂದರೆ ಸರ್ವರಿಂದಲೂ ಶ್ರೇಷ್ಠನಾದ, ಸ್ವಯಂಭೂಃ=ಸ್ವತಂತ್ರನಾದ ಪರಮೇಶ್ವರನು, ಅರ್ಥಾನ್=ಮಹತ್ತತ್ವಮೊದಲಾದವುಗಳನ್ನು, ಶಾಶ್ವತೀಭ್ಯಃಸಮಾಭ್ಯಃ = ಎಲ್ಲಾ ಕಾಲಗಳಲ್ಲಿಯೂ, ಯಾಥಾತಥ್ಯತಃ=ಯಾಥಾರ್ಥ್ಯದಿಂದಲೇ, ಅಂದರೆ ಪಾರಮಾರ್ಥಿಕ ಸತ್ಯಗಳನ್ನಾಗಿಯೇ, ವ್ಯದಧಾತ್=ನಿರ್ಮಿಸಿದನು. (ನಿರ್ಮಿಸುವುದರಲ್ಲಿ ಶಕ್ತಿಯನ್ನು ತೋರಿಸುವುದಕ್ಕಾಗಿ ' ಕವಿಃ ' ಮೊದಲಾದ ವಿಶೇಷಣಗಳು). (2) ಸ್ಪಾರ್ಹಂ=ಸ್ಪೃಹಣೀಯವಾದ, ವಸು=ಹವಿಸ್ಸು ಮೊದಲಾದವುಗಳನ್ನು, ಜೇತಾ=ಭಕ್ತರಿಂದ ಗೆಲ್ಲುವವನು, (ಸ್ವೀಕರಿಸಿಕೊಳ್ಳುವವನು.) ಉತ=ಮತ್ತು, ಜೇತಾ=ಭಕ್ತರಿಗೇನೇ ಪ್ರಾಪಿಸಿ ಕೊಡುವವನು. ಉತ ದಾತಾ=ಭಕ್ತರಿಗೆ ಬೇಕಾದ ಫಲವನ್ನು ಕೊಡುವವನು. (ಪರಮೇಶ್ವರನು) ಯತ್=ಯಾವ ಜಗತ್ತನ್ನು, ಚಿಕೇತ=ಸೃಷ್ಟಿಸಿದನೋ, ತತ್=ಅದು, ಸತ್ಯಮಿತ್=ಪಾರಮಾರ್ಥಿಕ ಸತ್ಯವೇ, ಮೋಘಂ ನ=ಅರ್ಥಕ್ರಿಯೆಗಳಲ್ಲಿ ಅನುಪಯುಕ್ತವಾಗುವುದು ಆಗುವುದಿಲ್ಲ. (ಅರ್ಥಕ್ರಿಯೆಗಳನ್ನು ಮಾಡುವುದರಿಂದ ಸತ್ಯವೇ ಸರಿ) (3) ಮಘವಾನಾ=ಧನವುಳ್ಳ ಇಂದ್ರಾ ಬೃಹಸ್ಪತಿಗಳಿರಾ, ಯುವೋಃ=ನಿಮ್ಮ ಅಧೀನದಲ್ಲಿರುವ, ವಿಶ್ವಂ=ಸಮಸ್ತ ಜಗತ್ತು, ಸತ್ಯಂ ಇತ್=ಸತ್ಯವೇ ಸರಿ. ವಾಂ = ನಿಮ್ಮಿಬ್ಬರ, ವ್ರತಂ = ಸತ್ಯ ಜಗತ್ಪಾಲನಾದಿರೂಪ ಕರ್ಮವನ್ನು, ಆಪಶ್ಚನ=ಎಲ್ಲಾ ದೇವತೆಗಳೂ ಕೂಡ, ಪ್ರಮಿನಂತಿ=ತಿಳಿಯುತ್ತಾರೆ. (ನಾನು ಮಾತ್ರ ತಿಳಿಯುವುದಲ್ಲ) (4) ಮಹತಃ=ಸರ್ವೋತ್ಕೃಷ್ಟನಾದ, ಸತ್ಯಸ್ಯ=ಸತ್ಯಶಬ್ದವಾಚ್ಯನಾದ, ಅಸ್ಯ=ಈ ಇಂದ್ರಶಬ್ದವಾಚ್ಯನಾದ ಪರಮೇಶ್ವರನ, ಮಹಾನಿ=ಮಹತ್ತಾದ, ಸತ್ಯಾ=ಸತ್ಯಗಳಾದ, ಕರಣಾನಿ=ಕರ್ಮಗಳನ್ನು, ನು = ಈಗ, ಪ್ರಮೋಚಂ ಘ=ಹೇಳಿರುವೆನು. (ಕರ್ಮವಿಷಯೀಭೂತವಾದ ಪ್ರಪಂಚಕ್ಕೆ ಸತ್ಯತ್ವವಿಲ್ಲದಿದ್ದರೆ ಕರ್ಮಗಳಿಗೆ ಸತ್ಯತ್ವವು ಕೂಡಲಾರದು.) (5) ಅನಾದ್ಯನಂತಂ=ಆದ್ಯಂತವಿಲ್ಲದಿರುವ, ಈದೃಕ್=ನಾನಾ ವಿಧವಾದ, ಏತತ್ ಜಗತ್=ಈ ಪ್ರಪಂಚವು, ಪ್ರವರ್ತತೇ=ಪ್ರವೃತ್ತವಾಗುತ್ತದೆ. ಅತ್ರ=ಈ ವಿಷಯದಲ್ಲಿ, ವಿಚಾರ್ಯಂ=ವಿಚಾರಿಸಲು ಯೋಗ್ಯವಾದುದು, ನಾಸ್ತಿ=ಇಲ್ಲ. ಕ್ವಾಪಿ=ಯಾವ ದೇಶದಲ್ಲಿಯೂ, ಯಾವ ಕಾಲದಲ್ಲಿಯೂ, ಕಸ್ಯ ಚ=ಯಾವ ಪುರುಷನಿಗೂ ಇದಂ=ಈ ಜಗತ್ತು, ಪುರಾ=ಪೂರ್ವದಲ್ಲಿ, ಅನ್ಯಥಾ=ಬಾಧಿತವಾಗಿ, ನ ಚ=ಅಭೂತ್=ಆಗಲೇ ಇಲ್ಲ. ತಥಾ=ಹಾಗೆಯೇ, ನಾಪಿ ಅಭವಿಷ್ಯತ್=ಮುಂದೆಯೂ ಆಗಲಾರದು. (6) ಯೇ ಅಜ್ಞಾಃ=ಯಾವ ಅಜ್ಞಾನಿಗಳು, ಹರೇಃ=ಶ್ರೀ ಹರಿಯ, ಪರಾಂ=ಸರ್ವೋತ್ಕೃಷ್ಟವಾದ, ಶಕ್ತಿಂ=ಸಾಮರ್ಥ್ಯವನ್ನು, ನ ವಿದುಃ ಹಿ=ತಿಳಿಯಲಾರರೋ, ತೇ=ಅಂತಹರು, ಏತತ್ ಜಗತ್=ಈ ಪ್ರಪಂಚವನ್ನು, ಅಸತ್ಯಂ=ಪಾರಮಾರ್ಥಿಕ ಸತ್ಯವಲ್ಲದುದನ್ನಾಗಿ, (ವ್ಯಾವಹಾರಿಕ ಸತ್ಯವನ್ನಾಗಿಯೇ) ಆಹುಃ=ಹೇಳುತ್ತಾರೆ.

(7) ಮಹಾತ್ಮಾ=ಮಹಾನುಭಾವನಾದ, ಯಃ=ಯಾವ ಶ್ರೀ ಹರಿಯು, ಸತ್ಯರೂಪಂ=ಪಾರಮಾರ್ಥಿಕಸತ್ಯಸ್ವರೂಪವಾದ, ಈದೃಕ್=ನಾನಾ ವಿಧವಾದ, ಏತತ್ ಜಗತ್=ಈ ಪ್ರಪಂಚವನ್ನು, ಸೃಷ್ಟ್ವಾಪಿ ತು = ಸೃಷ್ಟಿಸಿಯಾದರೂ. ಸತ್ಯಕರ್ಮಾ = ಸತ್ಯಕರ್ಮನಾಮಕನಾಗಿಯೇ, ಅಭೂತ್=ಆದನು. (8) ತೇ=ಆ ಅಸುರರು, ಜಗತ್=ಪ್ರಪಂಚವನ್ನು, ಅಸತ್ಯಂ=ಅಯಥಾರ್ಥವನ್ನಾಗಿಯೂ, ಅಪ್ರತಿಷ್ಠಂ=ಬಾಧಿತವಾದುದನ್ನಾಗಿಯೂ, ಅನೀಶ್ವರಂ=ನಿಯಾಮಕರಹಿತವಾದುದನ್ನಾಗಿಯೂ, ಆಹುಃ=ಹೇಳುತ್ತಾರೆ. ಅಪರಸ್ಪರಸಂಭೂತಂ=ಪರಮೇಶ್ವರಾಧಿಷ್ಠಿತನಾದ ಪ್ರಕೃತಿಯಿಂದ ಮಹತ್ತತ್ತ್ವವು, ಅದರಿಂದ ಅಹಂಕಾರತತ್ವವು ಇದುಮೊದಲಾದ ಕ್ರಮಗಳಿಂದ ಪರಸ್ಪರವಾಗಿ ಹುಟ್ಟಿದ್ದಲ್ಲವು. ಕಿಂ=ಸತ್ಯವಲ್ಲವಾದರೆ ಎಂತಹುದೆಂದರೆ, ಅನ್ಯತ್=ಸದಸದ್ವಿಲಕ್ಷಣವು, ಕಿಂ=ಪರಸ್ಪರವಾಗಿ ಹುಟ್ಟಿದ್ದಲ್ಲವಾದರೆ ಹೇಗೆ ಇರುವುದು ಎಂದರೆ, ಕಾಮಹೈತುಕಂ=ಮಿಥ್ಯಾಭೂತವಾದ ಅಜ್ಞಾನವೇ ಹೇತುವಾಗಿ ಉಳ್ಳದ್ದು. ಏತಾಂ=ಈ, ದೃಷ್ಟಿಂ=ಜ್ಞಾನವನ್ನು, ಅವಷ್ಟಭ್ಯ=ಆಶ್ರಯಿಸಿ, ನಷ್ಟಾತ್ಮಾನಃ = ದುಷ್ಟಮನಸ್ಸುಳ್ಳ, ಅಲ್ಪಬುದ್ಧಯಃ=ಅಲ್ಪಜ್ಞಾನಿಗಳು, ಉಗ್ರಕರ್ಮಾಣಃ = ಕ್ರೂರಕರ್ಮವುಳ್ಳವರಾಗಿ, ಜಗತಃ = ಪ್ರಪಂಚಕ್ಕೆ, ಅಹಿತಾಃ=ಅಪಕಾರಿಗಳಾಗಿ, ಕ್ಷಯಾಯ=ಪ್ರಪಂಚಕ್ಕೆ ಅನಿಷ್ಟವನ್ನು ಹೊಂದಿಸುವುದಕ್ಕಾಗಿ, ಪ್ರಭವಂತಿ=ಕಲಿಯುಗಾದಿಗಳಲ್ಲಿ ಹುಟ್ಟುತ್ತಾರೆ. ಇತ್ಯಾದೇಶ್ಚ=ಇದು ಮೊದಲಾದ ವಾಕ್ಯಗಳಿಂದಲೂ ಸಿದ್ಧಿಸುವುದು ॥ ೨೫೫ ॥

ಪುನಃ ಶಂಕಿಸುತ್ತಾರೆ. ಪುರಾಣಾದಿಗಳಲ್ಲಿ, 'ಅವಿದ್ಯಮಾನೋ ಹ್ಯವಭಾತಿ ಹಿ ದ್ವಯೋ ಧ್ಯಾತುರ್ಧಿಯಾ ಸ್ವಪ್ನ ಮನೋರಥೋ ಯಥಾ' ಎಂದು ಪ್ರಪಂಚಕ್ಕೆ ಸ್ವಪ್ನಾದಿಗಳ ಸಾಮ್ಯವೇ ಹೇಳಲ್ಪಡುತ್ತದೆ. ಆದಾದರೂ ಜ್ಞಾನನಿವರ್ತ್ಯತ್ವವೇ ಸರಿ. ಬೇರೆಯಲ್ಲವು. ಆದಕಾರಣ ಎಲ್ಲಿಯೂ ಪ್ರಪಂಚಕ್ಕೆ ಮಿಥ್ಯಾತ್ವವು ಹೇಳಲ್ಪಡುವುದಿಲ್ಲ ಎಂದು ಹೇಳಿದ್ದು ಹೇಗೆ ಕೂಡಬಹುದು ಎಂಬೀ ಆಶಂಕೆಯನ್ನು ಶ್ರುತಿಯಿಂದಲೇ ಪರಿಹರಿಸುತ್ತಾರೆ.

**ಮೂ ॥ ಅನಿತ್ಯತ್ವ ವಿಕಾರಿತ್ವ ಪಾರತಂತ್ರ್ಯಾದಿ ರೂಪತಃ । ಸ್ವಪ್ನಾದಿ ಸಾಮ್ಯಂ**
**ಜಗತೋ ನ ತು ಬೋಧನಿವರ್ತ್ಯತಾ । ಸರ್ವಜ್ಞಸ್ಯ ಯತೋ**
**ವಿಷ್ಣೋಃ ಸರ್ವದೈತತ್ಪ್ರತೀಯತೇ । ಬೋಧಾಸಹಂ ತತೋ ನೈತ-**
**ತ್ಕಿಂತ್ವಜ್ಞಾನವಶಮಸ್ಯ ಹಿ ॥ ಇತಿ ಪರಮೋಪನಿಷದಿ ॥ ೨೫೬ ॥**

ಅ ॥ ಅನಿತ್ಯತ್ವ ವಿಕಾರಿತ್ವ ಪಾರತಂತ್ರ್ಯಾದಿರೂಪತಃ, ಅನಿತ್ಯತ್ವ = ನಿತ್ಯತ್ವವಿಲ್ಲದಿರುವುದು, ವಿಕಾರಿತ್ವ=ಒಂದೇ ಪ್ರಕಾರದಿಂದ ಇಲ್ಲದಿರುವುದು, ಪಾರತಂತ್ರ್ಯ=ಪರಾಧೀನತೆಯೇ, ಆದಿ=ದುಃಖಪ್ರಾಚುರ್ಯ ಮೊದಲಾದ, ರೂಪತಃ=ಧರ್ಮಗಳಿಂದ, ಜಗತಃ=ಪ್ರಪಂಚಕ್ಕೆ, ಸ್ವಪ್ನಾದಿಸಾಮ್ಯಂ=ಸ್ವಪ್ನ ಮನೋರಥಾದಿಗಳ ಸಾಮ್ಯವು, (ಹೇಳಲ್ಪಡುತ್ತದೆ.) ಬೋಧನಿವರ್ತ್ಯತಾ=ಜ್ಞಾನನಿವರ್ತ್ಯತ್ವವು, ನ ತು=ಅಲ್ಲವು. (ಅಂದರೆ ಜಗತ್ತಿಗೆ ಅವಿದ್ಯಮಾನವಾದ ಪದದ ಪ್ರಯೋಗವಿಷಯತ್ವವು ಅನಿತ್ಯತ್ವಾದಿ ಧರ್ಮದಿಂದಲೇ ಆಗಿರುತ್ತದೆ. ಜ್ಞಾನನಿವರ್ತ್ಯತ್ವವು ಜಗತ್ತಿಗೆ ಸ್ವಪ್ನಾದಿಸಾಮ್ಯವನ್ನು ಹೇಳುವುದರಲ್ಲಿ ಕಾರಣವಾಗಲಾರದು.) ಸರ್ವಜ್ಞಸ್ಯ=ಅಧಿಷ್ಠಾನಾಭಿಮತವಾದ ಯಥಾರ್ಥಜ್ಞಾನವಿರುವ, ವಿಷ್ಣೋಃ = ಶ್ರೀ ಹರಿಯಿಂದ, ಏತತ್=ಈ ಜಗತ್ತು, ಸರ್ವದಾ=ಯಾವಾಗಲೂ, ಯತಃ=ಯಾವ ಕಾರಣದಿಂದ, ಪ್ರತೀಯತೇ=ಕಾಣಲ್ಪಡುತ್ತದೋ, ತತಃ=ಆದಪ್ರಯುಕ್ತ, ಏತತ್=ಈ ಜಗತ್ತು, ಬೋಧಾಸಹಂ=ಜ್ಞಾನನಿವರ್ತ್ಯ

ವಾದುದು, ನ=ಅಲ್ಲವು. ಕಿಂತು=ಮತ್ತೆ, ಅಸ್ಯ=ಈ ಹರಿಯು, ಆಜ್ಞಾವಶಂ=ಅಪ್ಪಣೆಯನ್ನನು ಸರಿಸಿಕೊಂಡಿದೆ, ಹಿ=ನಿಶ್ಚಯವು, ಇತಿ=ಹೀಗೆ, ಪರಮೋಪನಿಷದಿ=ಪರಮೋಪನಿಷತ್ತಿನಲ್ಲಿ ಇದೆ.

ತಾ ॥ ಇಲ್ಲಿ ಸ್ವಪ್ನಾದಿಪದಾರ್ಥಗಳಲ್ಲಿ ಆರೋಪಿತವಾದ ಜಾಗ್ರತ್ತ್ವಾದಿಗಳು ಸ್ವಪ್ನಾದಿ ಶಬ್ದದಿಂದ ಹೇಳಲ್ಪಡುತ್ತವೆ. ಪದಾರ್ಥಗಳೂ ಅವುಗಳ ಜ್ಞಾನವೂ ಸತ್ಯವೇ ಆಗಿರುತ್ತವೆ. ಅತಿ ವಿಶ್ವಾಸವನ್ನು ನಿವೃತ್ತೀಕರಿಸುವುದಕ್ಕಾಗಿ ಸ್ವಪ್ನಾದಿಗಳ ಸಾಮ್ಯವನ್ನು ಹೇಳಿದ್ದು. ಅನಿತ್ಯತ್ವಾದಿ ಗಳನ್ನು ತಿಳಿಸಿದರೂ ಅತ್ಯಭಿಮಾನವು ನಿವೃತ್ತವೇ ಆಗುವುದು. ಆದಕಾರಣ ಪ್ರಮಾಣವಿರುದ್ಧ ವಾದ ಮಿಥ್ಯಾತ್ವವನ್ನು ಕಲ್ಪಿಸಬಾರದು ॥ ೨೫೬ ॥

'ಮಾಯಾಮಯೋ ವಾಸನಯಾ ಶಯಾನಃ' (ಭಾ. ಸ್ಕ. ೨. ಅ. ೨.) ಇದುಮೊದಲಾದವು ಗಳಲ್ಲಿ ಸಾಕ್ಷಾತ್ ಜಗನ್ಮಿಥ್ಯಾತ್ವವು ಹೇಳಿರುವುದರಿಂದ ಎಲ್ಲಿಯೂ ಹೇಳಲಿಲ್ಲವೆನ್ನುವುದು ಹೇಗೆ ಕೂಡಬಹುದು ಎಂಬೀ ಆಶಂಕೆಯನ್ನು ಆಗಮವಾಕ್ಯದಿಂದಲೇ ಪರಿಹರಿಸುತ್ತಾರೆ —

ಮೂ ॥ ಪ್ರಜ್ಞಾವಿನಿರ್ಮಿತಂ ಯಸ್ಮಾದತೋ ಮಾಯಾಮಯಂ ಜಗತ್ । ಅನೇನಾನುಗತಂ ಯಸ್ಮಾದನೃತಂ ತೇನ ಕಥ್ಯತೇ । ಬೋಧಾನಿವ-ರ್ತ್ಯಮಪಿ ತು ನಿತ್ಯಮೇವ ಪ್ರವಾಹತಃ । ಅ ಇತ್ಯುಕ್ತಃ ಪರೋ ದೇವ-ಸ್ತೇನ ಸತ್ಯಮಿದಂ ಜಗತ್ । ತದಧೀನಸ್ವರೂಪತ್ವಾದಸತ್ಯಂ ತೇನ ಕಥ್ಯತೇ । ಸತ್ಯಸ್ಯ ಸತ್ಯಃ ಸ ವಿಭುರಿಂದ್ರಚಾಪಸ್ಯ ಸೂರ್ಯವತ್ ॥ ಇತಿ ಚ ॥ ೨೫೭ ॥

ಅ ॥ ಯಸ್ಮಾತ್=ಯಾವ ಕಾರಣದಿಂದ, ಜಗತ್=ಪ್ರಪಂಚವು, ಪ್ರಜ್ಞಾವಿನಿರ್ಮಿತಂ= ಭಗವಂತನ ಪ್ರಜ್ಞೆಯಿಂದ ನಿರ್ಮಿಸಲ್ಪಟ್ಟದ್ದೋ, ಅತಃ=ಆದಕಾರಣ, ಮಾಯಾಮಯಂ= ಭಗವಂತನ ಪ್ರಜ್ಞೆಯಿಂದ ನಿರ್ಮಿಸಲ್ಪಟ್ಟಪ್ರಯುಕ್ತ ಮಾಯಾಮಯವೆನ್ನಿಸುತ್ತದೆ. ಯಸ್ಮಾತ್= ಯಾವ ಕಾರಣದಿಂದ, ಅನೇನ=ಚೇಷ್ಟಕನಾದ ಶ್ರೀ ಹರಿಯಿಂದ, ಅನುಗತಂ=ವ್ಯಾಪ್ತವಾಗಿ ಯದೋ, ತೇನ=ಆದಪ್ರಯುಕ್ತ, ಅನೃತಂ=ಅನೃತವೆಂದು, ಕಥ್ಯತೇ = ಹೇಳಲ್ಪಡುತ್ತದೆ. ಬೋಧಾನಿವರ್ತ್ಯಂ=ಜ್ಞಾನನಿವರ್ತ್ಯವಲ್ಲವು. ಅಪಿ ತು=ಮತ್ತೆ, ಪ್ರವಾಹತಃ=ಪ್ರವಾಹದಿಂದ, ನಿತ್ಯಮೇವ=ನಿತ್ಯವೇ ಸರಿ. (ಆದರೂ ಮಾಯಾಮಯವೆಂದು ಹೇಳಲ್ಪಡುತ್ತದೆ.) ಪರಃ ದೇವಃ= ಸರ್ವೋತ್ತಮನಾದ ದೇವನು, ಅ ಇತಿ ಉಕ್ತಃ='ಅ' ಎಂದು ಹೇಳಲ್ಪಡುತ್ತಾನೆ. ತೇನ= ಆದರಿಂದ, ಇದಂ ಜಗತ್=ಈ ಪ್ರಪಂಚವು, ಸತ್ಯಂ=ಸತ್ಯವೆನಿಸುವುದು, ತೇನ=ಆದಕಾರಣ, (ಪ್ರಪಂಚವು) ತದಧೀನಸ್ವರೂಪತ್ವಾತ್ = ಆ ಭಗವಂತನ ಅಧೀನಸ್ವರೂಪವಾಗಿರುವುದರಿಂದ, ಅಸತ್ಯಂ=ಅಸತ್ಯವೆಂದು, ಕಥ್ಯತೇ=ಹೇಳಲ್ಪಡುತ್ತದೆ. ಇಂದ್ರಚಾಪಸ್ಯ=ಇಂದ್ರನ ಧನುಸ್ಸಿಗೆ, ಸೂರ್ಯವತ್=ಸೂರ್ಯನಂತೆಯೇ, ಸಃ ವಿಭುಃ=ವ್ಯಾಪ್ತನಾದ ಆ ಹರಿಯು, ಸತ್ಯಸ್ಯ ಸತ್ಯಃ= ಸತ್ಯತ್ವಕ್ಕೂ ನಿಯಾಮಕನು. ಇತಿ ಚ=ಹೀಗೂ ಅದೆ.

ತಾ ॥ (1) ಇಂದ್ರಚಾಪದ ಸತ್ಯತ್ವವು ಸೂರ್ಯಾಧೀನವು ಎಂದು ಹೇಗೆ ಲಭಿಸುವುದೋ, ಹಾಗೆಯೇ ಪ್ರಕೃತವೂ ಇಟ್ಟುಕೊಳ್ಳಬೇಕು. ಅಥವಾ ಇಂದ್ರಚಾಪಕ್ಕೆ ಸೂರ್ಯನು ಹೇಗೆ ನಿಯಾಮಕನೋ ಹಾಗೆಯೇ ಶ್ರೀ ಹರಿಯು ಸತ್ಯತ್ವಕ್ಕೆ ನಿಯಾಮಕನು. ಪ್ರಾಯಶಃ ಸೂರ್ಯನು ಇಲ್ಲದೆ ಇಂದ್ರಚಾಪವು ಇರಲಾರದು ॥ ೨೫೭ ॥

ಮೂ || ತಸ್ಯೋಪನಿಷತ್ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ || ಇತಿ ಚ || ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ || ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ | ಪ್ರಕೃತಿಃ ಪ್ರಕೃಷ್ಟಕರಣಾದ್ವಾಸನಾ ವಾಸಯೇದ್ಯತಃ | ಅ ಇತ್ಯುಕ್ತೋ ಹರಿಸ್ತಸ್ಯ ವಿದ್ಯಾಽವಿದ್ಯೇತಿ ಸಂಜ್ಞಿತಾ | ಮಾಯೇತ್ಯುಕ್ತಾ ಪ್ರಕೃಷ್ಟತ್ವಾತ್ಪ್ರಕೃಷ್ಟಂ ಹಿ ಮಯಾಭಿಧಂ | ವಿಷ್ಣೋಃ ಪ್ರಜ್ಞಪ್ತಿರೇವೈಕಾ ಶಬ್ದೈರೇತೈರುದೀರ್ಯತೇ | ಪ್ರಜ್ಞಪ್ತಿರೂಪೋ ಹಿ ಹರಿಃ ಸಾ ಚ ಸ್ವಾನಂದಲಕ್ಷಣಾ || ಇತಿ ಚ || ೨೫ಲ ||

ಅ || (೧) ಸತ್ಯಸ್ಯ ಸತ್ಯಂ ಇತಿ=ಸತ್ಯಕ್ಕೆ ಸತ್ಯನೆಂದು, ತಸ್ಯ=ಆ ಪರಮಾತ್ಮನ, ಉಪನಿಷತ್=ರಹಸ್ಯನಾಮವು, ಪ್ರಾಣಾ ವೈ=ಚೇಷ್ಟಕರಾದ ಬ್ರಹ್ಮಾದಿ ದೇವತೆಗಳೇ, ಸತ್ಯಂ=ಸತ್ಯರೆನಿಸುತ್ತಾರೆ. ತೇಷಾಂ=ಆ ಬ್ರಹ್ಮಾದಿಗಳಿಗೆ, ಏಷಃ=ಈ ಹರಿಯು, ಸತ್ಯಂ=ಸತ್ಯತ್ವವನ್ನು ಕೊಡುವವನು, ಅಂದರೆ— ಪ್ರಾಣಗಳ ಸತ್ಯತ್ವವು ಅಪಾರಮಾರ್ಥಿಕವಲ್ಲವು. ಮತ್ತೆ ಭಗವಂತನ ಅಧೀನವೇ ಆಗಿರುತ್ತದೆ. ಇತಿ ಚ=ಹೀಗೂ ಇದೆ. (೨) (ಭಗವಂತನ ಜ್ಞಾನದಂತೆಯೇ ಆತನ ಇಚ್ಛೆಯೂ 'ಮಾಯಾ' ಶಬ್ದವಾಚ್ಯವಾಗಿರುತ್ತದೆ ಎನ್ನುವಲ್ಲಿ ಪುರಾಣವಾಕ್ಯವನ್ನು ಪಠನಮಾಡುತ್ತಾರೆ.), ಅನಂತ=ಎಲೋ ಹರಿಯೇ, ತವ=ನಿನ್ನ, ಇಚ್ಛಾ=ಇಚ್ಛೆಯು, ಮಹಾಮಾಯೇತಿ=ಮಹಾಮ್ಮಾಯಾ ಎಂದೂ, ಅವಿದ್ಯೇತಿ=ಅವಿದ್ಯಾ ಎಂದೂ, ನಿಯತಿಃ=ನಿಯತಿಯೆಂದೂ, ಮೋಹಿನೀ ಇತಿ ಚ=ಮೋಹಿನೀ ಎಂದೂ, ಪ್ರಕೃತಿಃ=ಪ್ರಕೃತಿಯೆಂದೂ, ವಾಸನೇತಿ=ವಾಸನಾ ಎಂದೂ, ಏವಂ=ಹೀಗೆಯೇ, ಕಥ್ಯತೇ=ಹೇಳಲ್ಪಡುತ್ತದೆ. (೩) (ಆ ಶಬ್ದಗಳನ್ನು ಭಗವಂತನ ಪ್ರಜ್ಞೆಯಲ್ಲಿ ನಿರ್ವಚನ ಮಾಡಲಿಕ್ಕೆ ಆಗಮ ವಾಕ್ಯವನ್ನು ಪಠಿಸುತ್ತಾರೆ.) ಪ್ರಕೃಷ್ಟಕರಣಾತ್=ಚಲೋದಾಗಿ ಸೃಷ್ಟಿಸುವುದರಿಂದ, ಪ್ರಕೃತಿಃ=ಪ್ರಕೃತಿಯೆನ್ನಿಸುತ್ತದೆ. ಯತಃ=ಯಾವಕಾರಣದಿಂದ, ವಾಸಯೇತ್=ಹುಟ್ಟಿಸುವುದೋ, ಅತಃ=ಆದಕಾರಣ, ವಾಸನಾ=ವಾಸನಾ ಎನ್ನಿಸುತ್ತದೆ. ಹರಿಃ=ಶ್ರೀಹರಿಯು, ಅ ಇತ್ಯುಕ್ತಃ=ಅ ಎಂದು ಹೇಳಲ್ಪಡುತ್ತಾನೆ. ತಸ್ಯ=ಆ ಹರಿಯ, ವಿದ್ಯಾ=ವಿದ್ಯೆಯು, ಅವಿದ್ಯೇತಿ=ಅವಿದ್ಯೆಯೆಂದು, ಸಂಜ್ಞಿತಾ=ಹೇಳಲ್ಪಡುತ್ತದೆ. ಪ್ರಕೃಷ್ಟತ್ವಾತ್=ಉತ್ಕೃಷ್ಟವಾದುದರಿಂದ, ಮಾಯಾ ಇತಿ ಉಕ್ತಾ=ಮಾಯೆಯೆಂದು ಹೇಳಲ್ಪಟ್ಟದೆ. ಪ್ರಕೃಷ್ಟಂ ಹಿ = ಉತ್ಕೃಷ್ಟವಾದುದೇ, ಮಯಾಭಿಧಂ = ಮಯಶಬ್ದವಾಚ್ಯವಾದುದು. ವಿಷ್ಣೋಃ=ಶ್ರೀಹರಿಯ, ಏಕಾ ಪ್ರಜ್ಞಪ್ತಿರೇವ=ಒಂದು ಜ್ಞಾನವಿಶೇಷವೇ, ಏತೈಃ ಶಬ್ದೈಃ=ಈ ಶಬ್ದಗಳಿಂದ, ಉದೀರ್ಯತೇ=ಹೇಳಲ್ಪಡುತ್ತದೆ. ಹರಿಃ=ಶ್ರೀಹರಿಯು, ಪ್ರಜ್ಞಪ್ತಿರೂಪೋ ಹಿ=ಜ್ಞಾನಸ್ವರೂಪನು, ಸಾ ಚ = ಆ ಪ್ರಜ್ಞಪ್ತಿಯೂ, ಸ್ವಾನಂದಲಕ್ಷಣಾ = ಸ್ವರೂಪಾನಂದಸ್ವರೂಪವಾದುದು. ಇತಿ ಚ=ಹೀಗೂ ಅದೆ. (ಅಂತೂ ಜೀವೇಶ್ವರರ ಭೇದದಲ್ಲಿ 'ಅತತ್ವಮಸಿ' ಎಂಬೀ ಆಗಮವು ಪ್ರಮಾಣವು ಎಂದು ಹೇಳಿದ್ದನ್ನುಪಪಾದಿಸಿದ ಹಾಗಾಯಿತು) || ೨೫ಲ ||

ಆದರೂ ಎಲ್ಲಾ ಆಗಮಗಳೂ ಭೇದವನ್ನೇ ಬೋಧಿಸುತ್ತವೆ ಎನ್ನುವುದು ಯಾವುದರಿಂದ ಸಿದ್ಧವಾಗುವವು ಎಂದರೆ, ಪ್ರತ್ಯೇಕ ಪ್ರತ್ಯೇಕ ಎಲ್ಲಾ ಆಗಮಗಳನ್ನು ಉದಾಹರಿಸಿ ಭೇದಪರತ್ವವನ್ನು ಪ್ರತಿಪಾದಿಸುವುದು ಈ ಅಲ್ಪಗ್ರಂಥದಲ್ಲಿ ಅಸಾಧ್ಯವು ಎಂದಭಿಪ್ರಾಯದಿಂದ ಸರ್ವವೇದಗಳೂ ಭಗವಂತನಿಗೆ ಜೀವಜಡಾತ್ಮಕವಾದ ಎಲ್ಲಾ ಪ್ರಪಂಚದಿಂದಲೂ ಭೇದವನ್ನೇ ಬೋಧಿಸುತ್ತವೆ ಎನ್ನುವಲ್ಲಿ ಶ್ರುತಿಯನ್ನೇ ಉದಾಹರಿಸುತ್ತಾರೆ.

**ಮೂ || ಸರ್ವೇ ವೇದಾ ಹರೇರ್ಭೇದಂ ಸರ್ವಸ್ಮಾಜ್ಜ್ಞಾಪಯಂತಿ ಹಿ | ಭೇದಃ ಸ್ವಾತಂತ್ರ್ಯಸಾರ್ವಜ್ಞ್ಯಸರ್ವೈಶ್ವರ್ಯಾದಿಕಶ್ಚ ಸಃ | ಸ್ವರೂಪಮೇವ ಭೇದೋಽಯಂ ವ್ಯಾವೃತ್ತಿಶ್ಚ ಸ್ವರೂಪತಾ | ಸರ್ವವ್ಯಾವೃತ್ತಯೇ ಯಸ್ಮಾತ್ಸ್ವಶಬ್ದೋಽಯಂ ಪ್ರಯುಜ್ಯತೇ | ಸರ್ವವ್ಯಾವೃತ್ತತಾಮೇವ ನೇತಿ ನೇತ್ಯಾದಿಕಾ ಶ್ರುತಿಃ | ವಿಷ್ಣೋರತೋ ವದೇದನ್ಯಾ ಅಪಿ ಸರ್ವಾ ನ ಸಂಶಯಃ || ಇತಿ ನಾರಾಯಣಶ್ರುತಿಃ || ೨೫೮ ||**

ಅ || (1) ಸರ್ವೇ ವೇದಾಃ=ಎಲ್ಲಾ ಆಗಮಗಳೂ, ಹರೇಃ=ಶ್ರೀ ಭಗವಂತನಿಗೆ, ಸರ್ವಸ್ಮಾತ್ = ಜೀವಜಡಾತ್ಮಕವಾದ ಎಲ್ಲಾ ಪ್ರಪಂಚದಿಂದಲೂ, ಭೇದಂ = ಭೇದವನ್ನು ಜ್ಞಾಪಯಂತಿ ಹಿ=ತಿಳಿಸಿಕೊಡುತ್ತವೆ. (2) (ಸರ್ವಾಗಮಗಳಿಗೂ ಭೇದದಲ್ಲಿಯೇ ತಾತ್ಪರ್ಯವೆಂದು ಹೇಳಿದ್ದು ಅಯುಕ್ತವು. 'ಸರ್ವೋತ್ಕರ್ಷೇ ದೇವದೇವಸ್ಯ' ಎನ್ನುವಲ್ಲಿ ಶ್ರೀ ಹರಿಯ ಗುಣೋತ್ಕರ್ಷದಲ್ಲಿಯೇ ಎಲ್ಲಾ ಆಗಮಗಳಿಗೂ ಮಹಾತಾತ್ಪರ್ಯವೆಂದು ಹೇಳಿರುವುದರಿಂದ ಅದರಿಂದ ವಿರೋಧವು ಬರುವುದು ಏಕವಾಕ್ಯತ್ವವನು ಹೊಂದಿದ ವೇದಕ್ಕೆ ಭೇದದಲ್ಲಿಯೂ ಗುಣೋತ್ಕರ್ಷದಲ್ಲಿಯೂ ಮಹಾತಾತ್ಪರ್ಯವು ಕೂಡಲಾರದು. 'ಅರ್ಥೈಕತ್ವಾದೇಕಂ ವಾಕ್ಯಂ' ಅರ್ಥವು ಒಂದೆಯಾದರೆ ಏಕವಾಕ್ಯತ್ವವು ಕೂಡಬಹುದು ಎಂದಾಶಂಕಿಸಿದರೆ -) ಸ ಚ ಭೇದಃ=ಆ ಭೇದವು, ಸ್ವಾತಂತ್ರ್ಯ ಸಾರ್ವಜ್ಞ್ಯ ಸರ್ವೈಶ್ವರ್ಯಾದಿಕಶ್ಚ=ಪರಾಪೇಕ್ಷೆಯಿಲ್ಲದಿರುವಿಕೆ ಸರ್ವಜ್ಞತ್ವ ಸರ್ವೈಶ್ವರ್ಯ ಇತ್ಯಾದಿ ಸ್ವರೂಪವಾದುದು. ಅಂದರೆ ಗುಣೋತ್ಕರ್ಷವೆಂದರೂ ಭೇದವೆಂದರೂ ಒಂದೇ ಅರ್ಥವು. ಆದಕಾರಣ ವಿರೋಧವಿಲ್ಲವು. (3) (ಶ್ರೀ ಹರಿಗೆ ಸರ್ವಪ್ರಪಂಚದಿಂದಲೂ ಸ್ವಾತಂತ್ರ್ಯಾದ್ಯುತ್ಕೃಷ್ಟ ಗುಣಸ್ವರೂಪವಾದ ಭೇದದಲ್ಲಿಯೇ ಸರ್ವ ವೇದಗಳಿಗೂ ಮಹಾತಾತ್ಪರ್ಯವೆಂದು ಹೇಳಿದರೆ ಶ್ರೀ ಹರಿಯು ಯಾವುದರಿಂದ ಸಿದ್ಧಿಸುವನು ಎಂದೆನ್ನಬೇಕು. ವೇದಗಳಿಂದಲೇ ಸಿದ್ಧಿಸುವನು ಎಂದರೆ ಎರಡು ಕಡೆಗಳಲ್ಲಿಯೂ ಮಹಾತಾತ್ಪರ್ಯವೆನ್ನುವುದು ವಿರುದ್ಧವಾಗಿರುತ್ತದೆ. ಎಂದಾಶಂಕಿಸಿದರೆ —) ಅಯಂ ಭೇದಃ=ಈ ಭೇದವು, ಸ್ವರೂಪಮೇವ=ಶ್ರೀ ಹರಿಯ ಸ್ವರೂಪವೇ, (ಅಂದರೆ — ಸ್ವಾತಂತ್ರ್ಯಾದಿ ಸ್ವರೂಪವಾದ ಭೇದವು ಶ್ರೀ ಹರಿಯ ಸ್ವರೂಪವೇ. ಅಂತೂ ಸ್ವಾತಂತ್ರ್ಯಾದಿ ಸ್ವರೂಪವಾದ ಭೇದಸ್ವರೂಪಭೂತನಾದ ಶ್ರೀ ಹರಿಯಲ್ಲಿ ಸರ್ವಾಗಮಗಳಿಗೂ ಮಹಾತಾತ್ಪರ್ಯವು.) (4) (ಭೇದಶಬ್ದವು ಭಾವಾರ್ಥಕವೆಂದಂಗೀಕರಿಸಿದರೆ ವ್ಯಾವೃತ್ತಿರೂಪವಾದ ಅನ್ಯೋನ್ಯಾಭಾವವೆಂದೂ, ಕರಣಾರ್ಥಕವೆಂದಂಗೀಕರಿಸಿದರೆ ಸ್ವಾತಂತ್ರ್ಯಾದಿ ಸ್ವರೂಪವಾದ ಅಸಾಧಾರಣ ಧರ್ಮವೆಂದೂ ಆಗುವುದು. ಅಂತೂ ಶ್ರೀ ಹರಿಗೆ ಸಮಸ್ತ ಪ್ರಪಂಚದಿಂದಲೂ, ವ್ಯಾವೃತ್ತಿಯಲ್ಲಿಯೂ, ಸ್ವಾತಂತ್ರ್ಯ ಮೊದಲಾದ ಅಸಾಧಾರಣ ಧರ್ಮಸ್ವರೂಪನಾದ ಶ್ರೀ ಹರಿಯಲ್ಲಿಯೂ, ಎಲ್ಲಾ ವೇದಗಳಿಗೂ ಮಹಾತಾತ್ಪರ್ಯವನ್ನಂಗೀಕರಿಸಿದರೆ ಪುನಃ ವಾಕ್ಯಭೇದವು ಬರುವುದು ಎಂದರೆ,) ವ್ಯಾವೃತ್ತಿಃ=(ವಸ್ತುವಿಗೆ ಬೇರೆ ವಸ್ತುವಿನಿಂದ ಯಾವುದೊಂದು) ಭೇದವೋ, ಸ್ವರೂಪತಾ ಚ=ಯಾವುದೊಂದು ಸ್ವರೂಪತ್ವವೋ, (ಅದು ಎರಡೂ ಒಂದೇ ಸರಿ.) ಅಯಂ=ಈ ಸ್ವರೂಪಶಬ್ದಾಂತರ್ಗತವಾದ, ಸ್ವ. ಶಬ್ದಃ=ಸ್ವ ಶಬ್ದವು, ಯಸ್ಮಾತ್=ಯಾವ ಕಾರಣದಿಂದ, ಸರ್ವವ್ಯಾವೃತ್ತಯೇ = ಇತರ ಸರ್ವ ವಸ್ತುಗಳಿಂದಲೂ ವ್ಯಾವೃತ್ತಿಯನ್ನು ಬೋಧಿಸುವುದಕ್ಕಾಗಿ, ಪ್ರಯುಜ್ಯತೇ=ಪ್ರಯೋಗಿಸಲ್ಪಡುತ್ತದೋ, (ಅಂತೂ ಸರ್ವ ವಸ್ತುಗಳಿಂದ ಭಿನ್ನವಾದ ರೂಪವು ಸ್ವರೂಪವು ಎಂದು ಅರ್ಥವು ಸಿಗುವುದು. ಸ್ವರೂಪತಾ ವ್ಯಾವೃತ್ತಿಯೂ ಒಂದೇ ಅರ್ಥವು.

ಆದಕಾರಣ ಸರ್ವ ವಸ್ತುಗಳಿಂದ ಭೇದವೂ ಶ್ರೀ ಹರಿಯ ಸ್ವರೂಪವೇ. ಹೀಗೆ ಭೇದದಲ್ಲಿಯೂ, ಶ್ರೀ ಹರಿಯಲ್ಲಿಯೂ ತಾತ್ಪರ್ಯವೆನ್ನುವುದು ವಿರುದ್ಧವಲ್ಲವು) ನೇತಿ=ಮೂರ್ತವಿಲಕ್ಷಣವು, ನೇತಿ=ಅಮೂರ್ತ ವಿಲಕ್ಷಣವು, ಇತ್ಯಾದಿಕಾ ಶ್ರುತಿಃ=ಇದುಮೊದಲಾದ ಶ್ರುತಿಯು, ವಿಷ್ಣೋಃ= ಶ್ರೀ ಹರಿಗೆ, ಸರ್ವವ್ಯಾವೃತ್ತತಾಮೇವ = ಎಲ್ಲಾ ವಸ್ತುಗಳಿಂದಲೂ ಭೇದವನ್ನೇ, ವದೇತ್= ಪ್ರತಿಪಾದಿಸುವುದು. ಅತಃ=ಆದಕಾರಣ, ಅನ್ಯಾಃ=ಬೇರೆ 'ಸರ್ವಜ್ಞಃ ಸರ್ವವಿತ್' ಇದುಮೊದಲಾದ, ಸರ್ವಾ ಅಪಿ=ಎಲ್ಲಾ ಶ್ರುತಿಗಳೂ, (ಶ್ರೀಹರಿಗೆ ಅಸಾಧಾರಣ ಧರ್ಮಗಳನ್ನು ಹೇಳುತ್ತವೆ.) ನ ಸಂಶಯಃ=ಸಂದೇಹವಿಲ್ಲವು. ಇತಿ=ಹೀಗೆ, ನಾರಾಯಣಶ್ರುತಿಃ=ನಾರಾಯಣ ಶ್ರುತಿಯು. (ಆದಕಾರಣ ಹೀಗೆ ಭೇದವಿಷಯದಲ್ಲಿ ಎಲ್ಲಾ ಆಗಮಗಳೂ ಇವೆ ಎಂದು ಸಿದ್ಧವಾಗುವುದು.) ॥ ೨೫೯ ॥

ಆದಾಗ್ಯೂ ಅಭೇದವಿಷಯದಲ್ಲಿ ಯಾವ ಆಗಮವೂ ಇಲ್ಲವೆನ್ನುವುದು ಅಸಂಗತವು, 'ಅಹಂ ಬ್ರಹ್ಮಾಸ್ಮಿ' ಇದುಮೊದಲಾದ ಅನೇಕ ಆಗಮಗಳಿವೆ, ಎಂದಾಶಂಕಿಸಿದರೆ —

**ಮೂ ॥ (೧) ಅಹಂ ಬ್ರಹ್ಮಾಸ್ಮಿ ತದ್ಯೋಽಹಂ ಸೋಽಸೌ ಯೋಽಸೌ ಸೋಽಹಂ ಯೋಽಸಾವಾದಿತ್ಯೇ ಪುರುಷಃ ಸೋಽಹಮಸ್ಮಿ ಸ ಏವಾಹಮಸ್ಮೀತ್ಯಾದಿ ತ್ವಂತರ್ಯಾಮ್ಯಪೇಕ್ಷಯಾ । (೨) ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ । ಅ ಇತಿ ಬ್ರಹ್ಮ ತತ್ರಾಗತಮಹಮಿತಿ । ತಸ್ಯೋಪನಿಷದಹಮಿತಿ ॥ ೨೬೦ ॥**

ಅ ॥ (೧) ಅಹಂ=ನನ್ನಲ್ಲಿ ಅಂತರ್ಗತನಾದವನು, ಬ್ರಹ್ಮ=ಗುಣಪೂರ್ಣನು, ಅಸ್ಮಿ= ದೋಷಗಳನ್ನು ನಿರಸನಮಾಡಿರುವುದರಿಂದಲೂ, ಸರ್ವಜ್ಞನಾದುದರಿಂದಲೂ 'ಅಸ್ಮಿ' ಶಬ್ದವಾಚ್ಯನು. ತತ್ ಯಃ=ಆ ಪ್ರಸಿದ್ಧನಾದ ಯಾವನು, ಅಹಂ=ನನ್ನಲ್ಲಿ ಅಂತರ್ಗತನೋ, ಸಃ= ಆತನು, ಅಸೌ=ಸೂರ್ಯಾಂತರ್ಗತನು. ಯಃ=ಯಾವ. ಅಸೌ=ಸೂರ್ಯನಲ್ಲಿರುವ ಪರಮಾತ್ಮನೋ, ಸಃ = ಆತನೇ, ಅಹಂ = ನನ್ನಲ್ಲಿ ಅಂತರ್ಗತನು. ಯಃ ಅಸೌ ಪುರುಷಃ= ಯಾವ ಈ ಗುಣಪೂರ್ಣನಾದ ಶ್ರೀಹರಿಯು, ಆದಿತ್ಯೇ=ಸೂರ್ಯಾಂತರ್ಗತನೋ, ಸಃ= ಆತನು, ಅಹಂ=ನನ್ನಲ್ಲಿ ಅಂತರ್ಗತನು, ಅಸ್ಮಿ='ಅಸ್ಮಿ' ಶಬ್ದವಾಚ್ಯನು. ಸ ಏವ=ಆತನೇ, ಅಹಂ=ನನ್ನಲ್ಲಿ ಅಂತರ್ಗತನು. ಅಸ್ಮಿ = ಅಸ್ಮಿಶಬ್ದವಾಚ್ಯನು, ಇತ್ಯಾದಿತು=ಇದೇ ಮೊದಲಾದುದು, ಅಂತರ್ಯಾಮ್ಯಪೇಕ್ಷಯಾ=ಅಂತರ್ಗತರೂಪವನ್ನಪೇಕ್ಷಿಸಿ (ಪ್ರವೃತ್ತವಾಗಿರುತ್ತದೆ.) (೨) ಸಃ=ಪ್ರಸಿದ್ಧನಾದ, ಯಶ್ಚಾಯಂ=ಯಾವ ಈ ಶ್ರೀಹರಿಯು ಪುರುಷೇ = ಜೀವನಲ್ಲಿರುವವನೋ, ಯಶ್ಚ ಅಸೌ=ಯಾವ ಈ ಹರಿಯು, ಆದಿತ್ಯೇ=ಸೂರ್ಯನಲ್ಲಿರುವವನೋ, ಸಃ= ಆತನು, ಏಕಃ=ಪರಸ್ಪರ ನಿರ್ಭಿನ್ನನು, ಅಃ ಇತಿ='ಅಃ' ಎಂಬೀಶಬ್ದವಾಚ್ಯನು, ಬ್ರಹ್ಮ=ಪರಬ್ರಹ್ಮನು, ಅಹಮಿತಿ='ಅಹಂ' ಎನ್ನುವಪದವು, ತತ್ರ = ಆ ಬ್ರಹ್ಮವಿಷಯವಾಗಿ, ಆಗತಂ= ವಾಚಕವಾಗಿ ತಿಳಿಯಲ್ಪಟ್ಟದೆ, ಅಹಮಿತಿ='ಅಹಂ' ಎನ್ನುವಪದವು, ತಸ್ಯ=ಆ ಪರಬ್ರಹ್ಮನ, ಉಪನಿಷತ್=ರಹಸ್ಯನಾಮವು.

ತಾ ॥ (1) 'ಅಹಂ ಬ್ರಹ್ಮಾಸ್ಮಿ' ಎಂಬೀ ಆದಿವಾಕ್ಯದಲ್ಲಿ ಅಹಂ ಶಬ್ದದಿಂದ ಅಂತರ್ಯಾಮಿ ರೂಪವನ್ನು ನಿರ್ದೇಶಿಸಿ ಆ ರೂಪಕ್ಕೆ ದೇಶಕಾಲಗುಣಗಳಿಂದ ಪೂರ್ಣತ್ವರೂಪವಾದ ಬ್ರಹ್ಮತ್ವವು ಹೇಳಲ್ಪಡುತ್ತದೆ. (2) 'ತದ್ಯೋಽಹಂ' ಎಂಬೀ ವಾಕ್ಯದಲ್ಲಿ ಸ್ಥಾನಗಳು

ಬೇರೆ ಬೇರೆಯಾದುದರಿಂದ ಅಂತರ್ಗತರೂಪಗಳಿಗೂ ಭೇದವಿದೆ ಎಂದು ಸಂಶಯವು ಬರುತ್ತಿರಲು ತನ್ನಲ್ಲಿ ಅಂತರ್ಗತವಾದ ರೂಪಕ್ಕೆ ಸೂರ್ಯಾಂತರ್ಗತನಾದ ಶ್ರೀ ಹರಿಯಿಂದ ಐಕ್ಯವನ್ನು ಹೇಳಿ ಮತ್ತು ಇಂದ್ರ ಅರ್ಜುನಾದಿಗಳಂತೆಯೇ ಅವಾಂತರ ವಿಶೇಷವನ್ನು ಸಹ ನಿರಾಕರಿಸುವುದಕ್ಕಾಗಿ 'ಯೋಽಸೌ ಸೋಽಹಂ' ಎಂದು ಸೂರ್ಯಾಂತರ್ಗತನಿಗೆ ಸ್ವಾಂತರ್ಗತನಿಂದ ಐಕ್ಯವು ಹೇಳಲ್ಪಡುತ್ತದೆ. (3) 'ಯೋಽಸೌ ಆದಿತ್ಯೇ' ಎನ್ನುವಲ್ಲಿಯೂ ಹೀಗೆಯೇ ಇಟ್ಟುಕೊಳ್ಳಬೇಕು (4) ಆದಿಪದದಿಂದ ಹೇಳಲ್ಪಟ್ಟ 'ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುಃ' ಅಥ=ಆಮೇಲೆ, ಯಃ=ಯಾವಾತನು, ದೇವತಾಂ=ಶ್ರೀಹರಿಯನ್ನು, ಅನ್ಯಾಂ=ಸ್ವಾಂತರ್ಗತರೂಪದಿಂದ ಭಿನ್ನವಾದುದನ್ನಾಗಿ, ಉಪಾಸ್ತೇ=ಉಪಾಸನಾಮಾಡುತ್ತಾನೋ, ಅಸೌ=ಈತನು, ಅನ್ಯಃ=ಬೇರೆ, ಅಹಂ=ನನ್ನಲ್ಲಿ ಅಂತರ್ಗತನು, ಅನ್ಯಃ=ಭಿನ್ನನು, ಅಸ್ಮಿ=ಅಸ್ಮಿಶಬ್ದವಾಚ್ಯನು, ಸಃ=ಆತನು, ಯಥಾ ಪಶುಃ=ಪಶುವಿನಂತೆ, ನ ವೇದ=ತಿಳಿಯುವುದಿಲ್ಲ. ಇದುಮೊದಲಾದವುಗಳು ಈ ರೀತಿಯಿಂದ ಅಂತರ್ಯಾಮಿ ವಿಷಯಗಳೆಂದು ತಿಳಿಯತಕ್ಕವುಗಳು. (5) 'ಸ ಯಶ್ಚಾಯಂ ಪುರುಷೇ' ಎಂಬೀ ಸಮಾಖ್ಯೆಯಿಂದ ಪ್ರತೀತವಾದ ಅರ್ಥವನ್ನು ಪರಿತ್ಯಾಗಮಾಡಿ ಅರ್ಥಾಂತರವನ್ನು ಕಲ್ಪಿಸಿದ್ದಾಗಿರುತ್ತದೆ. (6) ಅಃ ಇತಿ ಬ್ರಹ್ಮ ಎಂಬೀ ಶ್ರುತಿಯಿಂದ ಅಹಂ ಶಬ್ದಕ್ಕೆ ಅಂತರ್ಯಾಮಿವಾಚಿತ್ವವು ಸಿದ್ಧಿಸುವುದು ॥೨೬೦॥

ಶ್ರೀಹರಿಗೆ ಅಹಂ ಶಬ್ದವಾಚ್ಯತ್ವವು ಜೀವರಿಂದ ಅಭೇದವಿದ್ದ ಪ್ರಯುಕ್ತವೋ, ಎಂಬೀ ಆಶಂಕೆಯನ್ನು ಪರಿಹರಿಸುತ್ತಾ ಅಪೇಕ್ಷಿತಗಳಾದ ಸರ್ವಾರ್ಥಗಳನ್ನು ಬೋಧಿಸತಕ್ಕ ಶ್ರುತಿಯನ್ನುದಾಹರಿಸುತ್ತಾರೆ —

ಮೂ ॥ ಅಹಂನಾಮಾ ಹರಿರ್ನಿತ್ಯಮಹೇಯತ್ವಾತ್ಪ್ರಕೀರ್ತಿತಃ । ತ್ವಂ ಚಾಸೌ ಪ್ರತಿಯೋಗಿತ್ವಾತ್ಪರೋಕ್ಷತ್ವಾತ್ಸ ಇತ್ಯಪಿ । ಸರ್ವಾಂತರ್ಯಾಮಿಣಿ ಹರಾವಸ್ಮಚ್ಛಬ್ದವಿಭಕ್ತಯಃ । ಯುಷ್ಮಚ್ಛಬ್ದಗತಾಶ್ಚೈವ ಸರ್ವಾಸ್ತಚ್ಛಬ್ದಗಾ ಅಪಿ । ಸರ್ವಶಬ್ದಗತಾಶ್ಚೈವ ವಚನಾನ್ಯಖಿಲಾನ್ಯಪಿ । ಸ್ವತಂತ್ರತ್ವಾತ್ಪ್ರವರ್ತಂತೇ ವ್ಯಾವೃತ್ತೇಽಸ್ಯಾಖಿಲಾತ್ಸದಾ । ತತ್ಸಂಬಂಧಾತ್ತು ಜೀವೇಷು ತತ್ಸಂಬಂಧಾದಚಿತ್ಸ್ವಪಿ । ವರ್ತಂತ ಉಪಚಾರೇಣ ತಿಙ್ಪದಾನ್ಯಖಿಲಾನ್ಯಪಿ । ತಸ್ಮಾತ್ಸರ್ವಗತೋ ವಿಷ್ಣುರೇಕೋ ಭಿನ್ನಸ್ತತೋ ಬಹುಃ। ಇತಿ ನಾರಾಯಣಶ್ರುತಿಃ ॥೨೬೧॥

ಅ ॥ ಹರಿಃ=ಶ್ರೀ ಹರಿಯು, ನಿತ್ಯಂ=ನಿರಂತರದಲ್ಲಿ, ಅಹೇಯತ್ವಾತ್=ತ್ಯಾಜ್ಯನಲ್ಲದಿರುವುದರಿಂದ, ಅಹಂ ನಾಮಾ='ಅಹಂ' ಎಂದು ಹೆಸರುಳ್ಳವನು, ಪ್ರಕೀರ್ತಿತಃ=ಹೇಳಲ್ಪಡುತ್ತಾನೆ. ಅಸೌ=ಈ ಹರಿಯು, ಪ್ರತಿಯೋಗಿತ್ವಾತ್=ಸರ್ವರಿಗೂ ಅಭಿಮುಖನಾದುದರಿಂದ, ತ್ವಂ ಚ='ತ್ವಂ' ಎನ್ನಿಸುತ್ತಾನೆ. ಪರೋಕ್ಷತ್ವಾತ್=ಅಜ್ಞದೃಷ್ಟಿಗೆ ಅಗೋಚರನಾದುದರಿಂದ, ಸ ಇತ್ಯಪಿ='ಸಃ' ಎಂದೂ ಹೇಳಲ್ಪಡುತ್ತಾನೆ. ಸರ್ವಾಂತರ್ಯಾಮಿಣಿ = ಸರ್ವಾಂತರ್ಗತನಾದ, ಹರೌ = ಶ್ರೀ ಹರಿಯಲ್ಲಿ, ಅಸ್ಮಚ್ಛಬ್ದವಿಭಕ್ತಯಃ = ಅಸ್ಮತ್ ಶಬ್ದದ ವಿಭಕ್ತಿಗಳೂ, ಯುಷ್ಮಚ್ಛಬ್ದಗತಾಶ್ಚೈವ=ಯುಷ್ಮತ್ ಶಬ್ದದಲ್ಲಿರತಕ್ಕವುಗಳೂ, ತಚ್ಛಬ್ದಗಾಃ=ತತ್ ಶಬ್ದದಲ್ಲಿರುವ, ಸರ್ವಾ ಅಪಿ=ಎಲ್ಲಾ ವಿಭಕ್ತಿಗಳೂ, ಸರ್ವಶಬ್ದಗತಾಶ್ಚೈವ = ಭೂತ ಮೊದಲಾದ ಎಲ್ಲಾ ಶಬ್ದಗಳಲ್ಲಿಯೂ ಇರುವ ಏಳು ವಿಭಕ್ತಿಯೇ ಅಂತ್ಯದಲ್ಲಿ ಉಳ್ಳ ಅಸ್ಮದಾದಿ ಶಬ್ದಗಳು, ಅಖಿಲಾನ್ಯಪಿ

ವಚನಾನಿ=ಎಲ್ಲಾ ವಚನಾದಿಗಳೂ, ಸದಾ=ಯಾವಾಗಲೂ, ಅಖಿಲಾತ್ = ಸರ್ವ ವಸ್ತುವಿನಿಂದಲೂ, ವ್ಯಾವೃತ್ತೇಽಪಿ=ಭಿನ್ನನಾದ ಶ್ರೀ ಹರಿಯಲ್ಲಿ, ಸ್ವತಂತ್ರತ್ವಾತ್=ಸ್ವಾತಂತ್ರ್ಯವಿದ್ದುದರಿಂದ, ಪ್ರವರ್ತಂತೇ=ಪ್ರವರ್ತಿಸುತ್ತವೆ. ತತ್ಸಂಬಂಧಾತ್ತು=ಆ ಶ್ರೀಹರಿಯ ಸಂಬಂಧದಿಂದಲೇ, ಜೀವೇಷು=ಜೀವರಲ್ಲಿ, ತತ್ಸಂಬಂಧಾತ್=ಆ ಜೀವರ ಸಂಬಂಧದಿಂದಲೇ, ಅಚಿತ್ಸ್ವಪಿ=ಅಚೇತನಗಳಲ್ಲಿಯೂ, ಉಪಚಾರೇಣ=ಅಮುಖ್ಯವೃತ್ತಿಯಿಂದ, ವರ್ತಂತೇ = ಇರುತ್ತವೆ. ಅಖಿಲಾನಿ ತಿಙ್‌ಪದಾನ್ಯಪಿ = ಸರ್ವತಿಙಂತಪದಗಳೂ ಕೂಡ, (ಅಸ್ಮಿ ಮೊದಲಾದವುಗಳೂ) ಉಪಚಾರೇಣ=(ಅಮುಖ್ಯ ವೃತ್ತಿಯಿಂದ) ಪರವು ಮುಖ್ಯವೃತ್ತಿಯಿಂದ, ಹೀನವಾದ ವೃತ್ತಿಯಿಂದ, ವರ್ತಂತೇ=ಇರುತ್ತವೆ. ತಸ್ಮಾತ್=ಆದಕಾರಣ, ಸರ್ವಗತಃ=ಸರ್ವಾಂತರ್ಯಾಮಿಯಾದ, ವಿಷ್ಣುಃ=ಶ್ರೀ ಹರಿಯು, ಏಕಃ=ಅಭಿನ್ನನು. ಬಹುಃ=ಪೂರ್ಣನು. ತತಃ=ಸರ್ವವಸ್ತುಗಳಿಂದಲೂ, ಭಿಚ್ಚ=ಭಿನ್ನನೂ ಆಗಿರುತ್ತಾನೆ. ಇತಿ=ಹೀಗೆ. ನಾರಾಯಣಶ್ರುತಿಃ = ನಾರಾಯಣ ಶ್ರುತಿಯು.

ತಾ || (1) ಅಸ್ಮದಾದಿಶಬ್ದಗಳು ಪ್ರತ್ಯಕ್ ಪ್ರತಿಯೋಗ್ಯಾದಿಗಳನ್ನು ಹೇಳತಕ್ಕವುಗಳಾಗಿ ಪ್ರಸಿದ್ಧಗಳು. ಪ್ರತ್ಯಗಾದಿಗಳೂ ನಿಯಾಮಕನಾಗಿ ಅಂತಃಪ್ರವಿಷ್ಟನಾದ ಶ್ರೀಹರಿಯಿಂದ ಯುಕ್ತಗಳಾಗಿಯೇ ಇವೆ. ಅದರಲ್ಲಿ ಅಹೇಯತ್ವ (ತ್ಯಾಜ್ಯವಲ್ಲದಿರುವಿಕೆ!) ಮೊದಲಾದ ನಿಮಿತ್ತವು ಮುಖ್ಯವಾಗಿ ಅಂತರ್ಯಾಮಿಯಾದ ಶ್ರೀ ಹರಿಯಲ್ಲಿರುವುದು. ಜೀವಾದಿಗಳಲ್ಲಿ ಶ್ರೀ ಹರಿಯಿಂದ ಪ್ರೇರಿತಗಳಾಗಿಯೇ ಇರುವುವು. ಆದಕಾರಣ ಹೀಗೆ ಮುಖ್ಯ, ಅಮುಖ್ಯವೃತ್ತಿಗಳಿಂದ ನಿಯಾಮಕನಾಗಿ ಅಂತಃ ಪ್ರವಿಷ್ಟನಾದ ಶ್ರೀ ಹರಿಯನ್ನು ತನ್ನಿಯಮ್ಯನಾದ ಜೀವನನ್ನು ಪ್ರತಿಪಾದಿಸುವ ಶಬ್ದವನ್ನು ಅವಿವೇಕಿಗಳು (ಶ್ರೀ ಹರಿಯಿಂದ ಮಿಲಿತರಾಗಿರುತ್ತಾರೆ ಎಂದು ತಿಳಿಯದವರು ಶ್ರೀ ಹರಿಯಲ್ಲಿಯೇ ಮುಖ್ಯಗಳಾಗಿವೆ ಎಂದೂ ತಿಳಿಯದವರು) ಶ್ರೀ ಹರಿಯಿಂದ ಬಹಿರ್ಭೂತರಾದ ಜೀವಾದಿಗಳಲ್ಲಿಯೇ ಪ್ರಯೋಗಿಸುತ್ತಾರೆ. ಉದಾ=ದಹತಿ = ಸುಡುತ್ತದೆ, ಎಂಬ ಶಬ್ದವನ್ನು ಕಟ್ಟಿಗೆಯಲ್ಲಿ ಪ್ರಯೋಗಿಸುತ್ತಾರೆ. (2) ಪ್ರಾಜ್ಞರಾದರೂ ಅಮುಖ್ಯವಾದ ಅಂಶವನ್ನು ಲಕ್ಷೀಕರಿಸದೆ ಮುಖ್ಯಾರ್ಥನಾದ ಶ್ರೀ ಹರಿಯಲ್ಲಿಯೇ ಪ್ರಯೋಗಿಸುತ್ತಾರೆ. (3) ಪರರೂ ಅಹಂ ಶಬ್ದವಾಚ್ಯವಾದ ಅಹಮರ್ಥಕ್ಕೆ ಚೇತನ ಅಚೇತನ ಮಿಶ್ರಸ್ವರೂಪತ್ವವನ್ನಂಗೀಕರಿಸಿರುವುದರಿಂದ 'ಅಹಂ' ಶಬ್ದಕ್ಕೆ ಬ್ರಹ್ಮಚೈತನ್ಯ ಜಡವಾದ ಅಂತಃಕರಣ ವಸ್ತುರೂಪವಾದ ಪಿಂಡಾರ್ಥತ್ವವನ್ನು ಅಂಗೀಕರಿಸಿರುತ್ತಾರೆ ॥ ೨೬.೧ ॥

ಶ್ರುತಿಸಮಾಖ್ಯೆಯನ್ನು ಹೇಳಿ ಈಗ ಸ್ಮೃತಿಸಮಾಖ್ಯೆಯನ್ನೂ ಹೇಳುತ್ತಾರೆ —

**ಮೂ || ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ । ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಂ । ಇತಿ ಭಗವದ್ವಚನಂ॥೨೬.೨॥**

ಅ || ವಿಭಕ್ತೇಷು = ಪರಸ್ಪರವಾಗಿಯೂ ಪರಮೇಶ್ವರನಿಂದಲೂ ಭಿನ್ನಗಳಾದ, ಸರ್ವಭೂತೇಷು=ಚೇತನಾಚೇತನಗಳಲ್ಲಿ, ಅವಿಭಕ್ತಂ=ಸ್ವಗತಭೇದರಹಿತವಾದ, ಅವ್ಯಯಂ=ಚೇತನಾಚೇತನಗಳಿಗೆ ನಾಶವಾದಾಗ್ಯೂ ನಾಶವಿಲ್ಲದಿರುವ, ಏಕಂ ಭಾವಂ = ಸರ್ವೋತ್ತಮವಾದ ಪದಾರ್ಥವನ್ನು, ಯೇನ = ಯಾವ ಜ್ಞಾನದಿಂದ, ಈಕ್ಷತೇ = ವಿಷಯೀಕರಿಸುತ್ತದೋ, ತತ್ ಜ್ಞಾನಂ=ಆ ಜ್ಞಾನವನ್ನು, ಸಾತ್ತ್ವಿಕಂ=ಸಾತ್ತ್ವಿಕವಾದುದನ್ನಾಗಿ, ವಿದ್ಧಿ=ತಿಳಿ. ಇತಿ=ಹೀಗೆ, ಭಗವದ್ವಚನಂ=ಭಗವಂತನ ಮಾತು ॥ ೨೬.೨ ॥

ಚೇತನಾಚೇತನಾತ್ಮಕಗಳಾದ ಎಲ್ಲಾ ಪದಾರ್ಥಗಳಿಗೆ ಪರಸ್ಪರವಾಗಿಯೂ ಈಶ್ವರನಿಂದಲೂ ಭೇದವು, ಅವುಗಳಲ್ಲಿ ಅಂತರ್ಯಾಮಿಯಾದವನಿಗಾದರೂ ಯಾವ ಭೇದವೂ ಇಲ್ಲ ಎಂದು ಶ್ರುತಿ ಸ್ಮೃತಿಗಳಲ್ಲಿ ಹೇಳಿರುವುದರಿಂದ ಅಹಮಾದಿ ಶ್ರುತಿಗಳೂ ಅದನ್ನು ಅನುಸರಿಸಿಯೇ ಕೂಡಿಸ ಬೇಕು, ಎಂದುಕ್ತವಾಗಿದೆ; ಅದು ಅಯುಕ್ತವು. ಶ್ರುತಿಸ್ಮೃತಿಗಳಿಂದ ಅಸತ್ಯವಾದ ಭೇದವೇ ಹೇಳಲ್ಪಟ್ಟದೆ. ಅತತ್ವಾವೇದಕವನ್ನನುಸರಿಸಿ ತತ್ವಾವೇದಕವನ್ನು ಯೋಜಿಸಲಿಕ್ಕೆ ಕೂಡದು. ಎಂದಾಶಂಕಿಸಿದರೆ —

ಮೂ ॥ (೧)ನ ಚಾಸತ್ಯೋ ಭೇದಃ । (೨) ಸತ್ಯಮೇನಮನು ವಿಶ್ವೇ ಮದಂತಿ ರಾತಿಂ ದೇವಸ್ಯ ಗೃಣತೋ ಮಘೋನಃ । [ಋ. ಅಷ್ಟ. ೩, ಅಧ್ಯಾ ೫, ವರ್ಗ ೨೧.] (೩) ಸತ್ಯಸ್ಸೋ ಅಸ್ಯ ಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ । [ಋ. ಅಷ್ಟ.................] (೪)ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂ ಭಿದಾ ಸತ್ಯಂ ಭಿದಾ ಸತ್ಯಂ ಭಿದಾ ಮೈವಾರುವಣ್ಯೋ ಮೈವಾರುವಣ್ಯೋ ಮೈವಾರುವಣ್ಯಃ ।(೫) ಆತ್ಮಾ ಹಿ ಪರಮಸ್ವತಂತ್ರಃ ಸರ್ವವಿತ್ಸರ್ವಶಕ್ತಿಃ ಪರಮಸುಖಃ ಪರಮೋ ಜೀವಸ್ತು ತದ್ವಶೋಽಲ್ಪಜ್ಞೋಽಲ್ಪಶಕ್ತಿರಾರ್ತೋಽಲ್ಪಕಃ ॥ ಇತ್ಯಾದಿ ಶ್ರುತಿಭ್ಯಃ ॥ ೨೬೩ ॥

ಅ ॥ (೧) ಅಸತ್ಯಃ=ಅಪಾರಮಾರ್ಥಿಕವಾದ, ಭೇದಃ=ಭೇದವು, (ಶ್ರುತ್ಯಾದಿಗಳಿಂದ ಪ್ರತಿಪಾದಿಸಲ್ಪಟ್ಟದೆ, ಹೀಗೆ) ನ ಚ = ಅಲ್ಲ. (೨) ಗೃಣತಃ = ಸ್ತುತಿಸತಕ್ಕ, ದೇವಸ್ಯ = ದೇವನಾದ, ಮಘೋನಃ=ದೇವೇಂದ್ರನಿಗೆ, ರಾತಿಂ=ಮಿತ್ರನಾದ, ಏನಂ ಅನು=ಈ ವಿಷ್ಣುವನ್ನನುಸರಿಸಿರುವುದರಿಂದ, ವಿಶ್ವೇ=ಎಲ್ಲಾ ಪ್ರಾಣಿಗಳೂ, ಮದಂತಿ=ಸಂತೋಷಪಡುತ್ತವೆ. ಸತ್ಯಂ=(ಈ ಪ್ರಕಾರ ಈಶ್ವರನಿಗೂ ಜೀವರಿಗೂ ಉಪಜೀವ್ಯೋಪಜೀವಕತ್ವವು) ಯಥಾರ್ಥವೇ (೩) ಸಃ=ಹಿಂದೆ ಹೇಳಲ್ಪಟ್ಟ, ಅಸ್ಯ=ಈ ವಿಷ್ಣುವಿನ, ಮಹಿಮಾ=ಮಹತ್ವವು, ಸರ್ವೋತ್ತಮತ್ವವು, ಸತ್ಯಃ=ಯಥಾರ್ಥವು. ತಂ=ಆ ಸತ್ಯಮಹಿಮೆಯುಳ್ಳ ಶ್ರೀ ಹರಿಯನ್ನು, ಅಹಂ=ನಾನು, ವಿಪ್ರರಾಜ್ಯೇ=ವಿಪ್ರಪ್ರಧಾನಕಗಳಾದ, ಯಜ್ಞೇಷು=ಯಾಗಗಳಲ್ಲಿ, ಶವಃ=ಸುಖವನ್ನುದ್ದೇಶಿಸಿ, ಗೃಣೇ=ಸ್ತುತಿಸುತ್ತೇನೆ. (೪) ಆತ್ಮಾ=ಪರಮಾತ್ಮನು, ಸತ್ಯಃ=ಯಥಾರ್ಥನು, ಜೀವಃ=ಜೀವನು, ಸತ್ಯಃ=ಸತ್ಯನು. ಭಿದಾ=ಜೀವಪರಮಾತ್ಮರ ಭೇದವೂ, ಸತ್ಯಂ=ಯಥಾರ್ಥವು. ಭೇದವು ಸತ್ಯವು; ಭೇದವು ಸತ್ಯವು. ಆರುವಣ್ಯಃ=ದೋಷಿಗಳಿಂದ ಭಜಿಸಲು ಯೋಗ್ಯನು, ಮೈವ=ಆಗುವುದಿಲ್ಲ. ಪರಮಾತ್ಮನು ದೋಷಿಗಳು ಹೇಳುವಪ್ರಕಾರನಾಗಲಾರನು. (೫) ಆತ್ಮಾ ಹಿ=ಪರಮಾತ್ಮನಾದರೆ, ಪರಮಸ್ವತಂತ್ರಃ=ಮುಖ್ಯ ಸ್ವತಂತ್ರನು; ಸರ್ವವಿತ್=ಸರ್ವಜ್ಞನು; ಸರ್ವಶಕ್ತಿಃ=ಪೂರ್ಣಶಕ್ತನು; ಪರಮಸುಖಃ=ನಿರವಧಿಕ ಆನಂದವುಳ್ಳವನು; ಪರಮಃ=ಸರ್ವೋತ್ತಮನು. ಜೀವಸ್ತು=ಜೀವನಾದರೂ, ತದ್ವಶಃ=ಭಗವಂತನ ಅಧೀನನು; ಅಲ್ಪಜ್ಞಃ=ಅಲ್ಪಜ್ಞಾನಿಯು; ಅಲ್ಪಶಕ್ತಿಃ=ಅಲ್ಪಶಕ್ತನು; ಆರ್ತಃ=ದುಃಖಿಯು, ಅಲ್ಪಕಃ=ಅತ್ಯಲ್ಪನು. ಇತ್ಯಾದಿ ಶ್ರುತಿಭ್ಯಃ=ಇದೇ ಮೊದಲಾದ ಶ್ರುತಿಗಳಿಂದ, (ಭೇದವು ಸತ್ಯವೆಂದೇ ತಿಳಿಯುತ್ತದೆ.) ॥ ೨೬೩ ॥

ಮಾಯಾವಾದಿಗಳು ಆಶಂಕಿಸುವದು— ಶುಕ್ತಿರಜತಾದಿಗಳಲ್ಲಿ ಪ್ರಾತಿಭಾಸಿಕ ಸತ್ಯತ್ವವೂ, ಆಕಾಶಾದಿಗಳಲ್ಲಿ ವ್ಯಾವಹಾರಿಕ ಸತ್ಯತ್ವವೂ, ಬ್ರಹ್ಮನಲ್ಲಿ ಪಾರಮಾರ್ಥಿಕ ಸತ್ಯತ್ವವೂ, ಹೀಗೆ ಸತ್ಯತ್ವವು ಮೂರು ವಿಧವು. ಆದಕಾರಣ ಜೀವೇಶ್ವರರ ಭೇದದಲ್ಲಿ ವ್ಯಾವಹಾರಿಕ ಸತ್ಯತ್ವವಿದ್ದು ದರಿಂದ

ನೀವು ಉದಾಹರಿಸಿದ ಶ್ರುತಿಗಳ ಸಮುದಾಯಗಳೆಲ್ಲವೂ ವ್ಯಾವಹಾರಿಕ ಸತ್ಯತ್ವವನ್ನು ಬೋಧಿಸುತ್ತವೆ. ಪಾರಮಾರ್ಥಿಕ ಸತ್ಯತ್ವವನ್ನು ಬೋಧಿಸಲಾರವು. ಅದನ್ನು ಪ್ರತಿಪಾದಿಸುವ ಪದವು ಇಲ್ಲವು. 'ಅಹಂ ಬ್ರಹ್ಮಾಸ್ಮಿ' ಇದು ಮೊದಲಾದುದು ಪಾರಮಾರ್ಥಿಕ ಸತ್ಯವನ್ನೇ ಬೋಧಿಸುತ್ತದೆ. ಆದಕಾರಣ ವ್ಯಾವಹಾರಿಕ ಸತ್ಯತ್ವವನ್ನು ಬೋಧಿಸತಕ್ಕ ಭೇದಶ್ರುತಿಗೆ ವಿರೋಧವಾಗದಂತೆ ಅಂತರ್ಯಾಮಿ ರೂಪಕ್ಕೆ ಐಕ್ಯವಿದ್ದಪ್ರಯುಕ್ತ ಇದು ಉಪಪನ್ನವಾಗುತ್ತದೆ ಎಂದು ವ್ಯಾಖ್ಯಾನ ಮಾಡಬಾರದು, ಎಂದಾಶಂಕಿಸಿದರೆ —

ಮೂ॥(೧) ನ ಚಾವಾಂತರಸತ್ಯತ್ವಮಿದಂ। (೨) ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್। ಸೋಽಶ್ನುತೇ ಸರ್ವಾನ್ಕಾಮಾನ್ಸಹ ಬ್ರಹ್ಮಣಾ ವಿಪಶ್ಚಿತಾ। [ತೈ.ಉ. ವಲ್ಲೀ. ೨,ಮ.೨,ಪು ೧೨೩] ॥(೩) ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ ಇಮಾನ್ಲೋಕಾನ್ಕಾಮಾನ್ನೀ ಕಾಮರೂಪ್ಯನುಸಂಚರನ್ । ಏತತ್ಸಾಮ ಗಾಯನ್ನಾಸ್ತೇ । [ತೈ. ಉ. ವ. ೩, ಮಂ. ೧೪, ಪು. ೧೭೫.] ॥(೪) ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು । ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ । [ಋ. ಅಷ್ಟ. ೮, ಅಧ್ಯಾ. ೨, ವ. ೨೪.](೫) ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಸ ತತ್ರ ಪರ್ಯೇತಿ ಜಕ್ಷತ್ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾಽಜ್ಞಾತಿಭಿರ್ವಾ ॥ [ ಛಾಂ. ೮. ೧೨. ೩.] ॥(೬) ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್ತತ್ಕೇನ ಕಂ ಜಿಘ್ರೇತ್ತತ್ಕೇನ ಕಂ ವಿಜಾನೀಯಾದ್ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾದ್ವಿಜ್ಞಾತಾರಮರೇ ಕೇನ ವಿಜಾನೀಯಾತ್ । [ಬೃ.ಉ ಅಧ್ಯಾ.೬,ಬ್ರಾ.೬,ಮ.೧೬.] ॥ (೭) ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । [ಕಾಠ. ಅಧ್ಯಾ. ೨, ವಲ್ಲೀ. ೧, ಮಂ. ೧೫, ಪು. ೭೦. ] (೮) ತದಾ ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ । [ಅಥ. ಖಂ. ೫, ಮಂ. ೩, ಪು. ೨೭೭] (೯) ಅಮೃತಸ್ಯೈಷ ಸೇತುಃ।(೧೦) ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ। ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ ॥ (೧೧) ಈಶಮಾಶ್ರಿತ್ಯ ತಿಷ್ಠಂತಿ ಮುಕ್ತಾಃ ಸಂಸಾರಸಾಗರಾತ್ । ಯಥೇಷ್ಟಭೋಗಭೋಕ್ತಾರೋ ಬ್ರಹ್ಮಾಂತಾ ಉತ್ತರೋತ್ತರಂ ॥ ಇತಿ ಮೋಕ್ಷಾನಂತರಂ ಭೇದಶ್ರುತಿಭ್ಯಃ ॥ ೨೬೪ ॥

ಅ ॥ (೧) (ಜೀವೇಶ್ವರ ಭೇದಕ್ಕೆ) ಇದಂ=ಈ ಶ್ರುತಿಬೋಧಿತವಾದ ಸತ್ಯತ್ವವು, ಅವಾಂತರ ಸತ್ಯತ್ವಂ=ವ್ಯಾವಹಾರಿಕ ಸತ್ಯತ್ವವು, ನ ಚ=ಇಲ್ಲ. (೨) ಯಃ=ಯಾವಾತನು, ಗುಹಾಯಾಂ=ಹೃದಯದಲ್ಲಿರುವ, ಪರಮೇ=ಉತ್ಕೃಷ್ಟವಾದ, ವ್ಯೋಮನ್ = ಆಕಾಶದಲ್ಲಿ

ನಿಹಿತಂ=ಇರುವ ಶ್ರೀ ಹರಿಯನ್ನು, ವೇದ=ತಿಳಿಯುತ್ತಾನೋ, ಸಃ=ಆತನು, ವಿಪಶ್ಚಿತಾ=ಜ್ಞಾನಿಯಾದ, ಬ್ರಹ್ಮಣಾ = ಪರಬ್ರಹ್ಮನಿಂದ, ಸಹ=ಕೂಡಿಕೊಂಡು, ಸರ್ವಾನ್ = ಎಲ್ಲಾ, ಕಾಮಾನ್=ಅಭೀಷ್ಟಗಳನ್ನು, ಅಶ್ನುತೇ=ಭೋಗಿಸುತ್ತಾನೆ. (೩) ಏತಂ ಆನಂದಮಯಂ ಆತ್ಮಾನಂ=ಈ ಪೂರ್ಣಾನಂದ ರೂಪಿಯಾದ ಶ್ರೀ ಹರಿಯನ್ನು, ಉಪಸಂಕ್ರಮ್ಯ=ಸಮೀಪ ಪ್ರಾಪಿಸಿ, ಕಾಮಾನ್ನೀ=ಇಚ್ಛಾನುಸಾರವಾದ ಅನ್ನವುಳ್ಳವನಾಗಿ, ಕಾಮರೂಪೀ=ಇಚ್ಛಾನುಸಾರವಾದ ಸ್ವರೂಪವುಳ್ಳವನಾಗಿ, ಇಮಾನ್ ಲೋಕಾನ್=ಈ ಲೋಕಗಳನ್ನು, ಅನುಸಂಚರನ್=ಸಂಚರಿಸುತ್ತಾ, ಏತತ್ ಸಾಮ=ಈ ಸಾಮವನ್ನು, ಗಾಯನ್=ಗಾನಮಾಡುತ್ತಾ, ಆಸ್ತೇ=ಇರುತ್ತಾನೆ. (೪) ತ್ವಃ=ಒಬ್ಬ ಬ್ರಹ್ಮನು, ಪುಪುಷ್ವಾನ್=ಪುಷ್ಟನಾಗಿ, ಋಚಾಂ=ಋಕ್ಕುಗಳ, ಪೋಷಂ=ಪುಷ್ಟವಾದ ಉಚ್ಚಾರಣವನ್ನು, (ಮಾಡುತ್ತಾ) ಆಸ್ತೇ=ಇರುತ್ತಾನೆ. ತ್ವಃ=ಒಬ್ಬ ಬ್ರಹ್ಮನು, ಶಕ್ವರೀಷು=ಶಕ್ವರೀಛಂದಸ್ಕ ಋಕ್ಕುಗಳಲ್ಲಿ, ಗಾಯತ್ರಂ=ಗಾಯತ್ರವೆನ್ನುವ ಸಾಮವನ್ನು, ಗಾಯತಿ=ಗಾನಮಾಡುತ್ತಾನೆ. ತ್ವಃ ಬ್ರಹ್ಮಾ = ಒಬ್ಬ ಬ್ರಹ್ಮನು, ಜಾತವಿದ್ಯಾಂ=ಪೌರುಷೇಯ ವಿದ್ಯೆಯನ್ನು, ವದತಿ=ಹೇಳುತ್ತಾನೆ. ತ್ವಃ=ಒಬ್ಬ ಬ್ರಹ್ಮನು, ಯಜ್ಞಸ್ಯ=ವಿಷ್ಣುವಿನ, ಮಾತ್ರಾಂ ಉ=ಅಂಶವನ್ನೇ, ವಿಮಿಮೀತೇ=ಧ್ಯಾನಿಸುತ್ತಾನೆ. (೫) ಪರಂ ಜ್ಯೋತಿಃ=ಜ್ಯೋತೀರೂಪನಾದ ಶ್ರೀಹರಿಯನ್ನು, ಉಪಸಂಪದ್ಯ=ಸಮೀಪಕ್ಕೆ ಹೋಗಿ, ಸ್ವೇನ ರೂಪೇಣ=ಸ್ವಸ್ವರೂಪದಿಂದ, ಅಭಿನಿಷ್ಪದ್ಯತೇ=ವ್ಯಕ್ತನಾಗುತ್ತಾನೆ. ಸಃ=ಆ ಮುಕ್ತನು, ತತ್ರ=ಆ ಮುಕ್ತಿಯಲ್ಲಿ, ಸ್ತ್ರೀಭಿರ್ವಾ = ಸ್ತ್ರೀಯರಿಂದಾಗಲೀ, ಯಾನೈರ್ವಾ = ಯಾನಗಳಿಂದಾಗಲೀ, ಜ್ಞಾತಿಭಿರ್ವಾ=ಒಟ್ಟಿಗೆ ಮುಕ್ತಿಯನ್ನು ಹೊಂದಿದವರಿಂದಾಗಲೀ, ಅಜ್ಞಾತಿಭಿರ್ವಾ=ಕಲ್ಪಾಂತರದಲ್ಲಿ ಮುಕ್ತಿಯನ್ನು ಹೊಂದಿದವರಿಂದಾಗಲೀ, ಜಕ್ಷನ್=ಭಕ್ಷಿಸುತ್ತಾ, ನೆಗಾಡುತ್ತಾ, ಕ್ರೀಡನ್=ಆಡುತ್ತಾ, ರಮಮಾಣಃ=ರಮಿಸುತ್ತಾ, ಪರ್ಯೇತಿ=ಸಂಚರಿಸುತ್ತಾನೆ. (೬) 'ಯತ್ರತ್ವಸ್ಯ' ಎಂಬೀ ವಾಕ್ಯವನ್ನು ಆಚಾರ್ಯರೇ ವ್ಯಾಖ್ಯಾನಮಾಡುವರು. (೭) ಯಥಾ=ಹೇಗೆ, ಶುದ್ಧೇ=ಶುದ್ಧಜಲದಲ್ಲಿ, ಆಸಿಕ್ತಂ=ಸೇಚಿಸಲ್ಪಟ್ಟ, ಶುದ್ಧಂ=ಪರಿಶುದ್ಧವಾದ, ಉದಕಂ=ನೀರು, ತಾದೃಗೇವ=ಅದಕ್ಕೆ ಸದೃಶವಾಗಿಯೇ, ಭವತಿ=ಆಗುತ್ತದೆ. (ಅದೇ ಆಗುವುದಿಲ್ಲ.) ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ಏವಂ=ಹೀಗೆಯೇ, ವಿಜಾನತಃ ಮುನೇಃ=ತಿಳಿಯತಕ್ಕ ಋಷಿಗಳಿಗೆ, ಆತ್ಮಾ = ಅಧಿಪತಿಯಾದ ಹಿರಣ್ಯಗರ್ಭನೂ ಕೂಡ, ಗೌತಮ = ಗೌತಮನೇ, (ಮುಕ್ತನಾಗಿ ಪರಮಾತ್ಮನನ್ನು ಹೊಂದಿ ಪರಬ್ರಹ್ಮನ ಸದೃಶನೇ ಆಗುವನು. ಇತರರೂ ಸದೃಶರೇ ಆಗುವರು, ಐಕ್ಯವನ್ನು ಹೊಂದಲಾರರು ಎಂದು ಸುತರಾಂ ಸಿದ್ಧವು.) (೮) ತದಾ=ಆಗ, ವಿದ್ವಾನ್=ಜ್ಞಾನಿಯು, ಪುಣ್ಯಪಾಪೇ ಪುಣ್ಯ = ಕಾಮ್ಯ ಫಲವುಳ್ಳ ಅನಿಷ್ಟವಾದ ಪುಣ್ಯವನ್ನು, ಪಾಪೇ=ಪಾಪವನ್ನು, ವಿಧೂಯ=ಪರಿತ್ಯಾಗಮಾಡಿ, ನಿರಂಜನಃ=ನಿರ್ಲೇಪನಾಗಿ, ಪರಮಂ ಸಾಮ್ಯಂ=ಪರಬ್ರಹ್ಮನಿಂದ ನಿರ್ದುಃಖತ್ವಾದಿ ಸಾದೃಶ್ಯವನ್ನು, ಉಪೈತಿ=ಹೊಂದುತ್ತಾನೆ. (ಇದರಿಂದ ಭೇದವನ್ನು ಹೇಳಿದಹಾಗಾಯಿತು.) (೯) ಏಷಃ=ಈ ಪರಮಾತ್ಮನು, ಅಮೃತಸ್ಯ=ಮುಕ್ತರ ಸಮುದಾಯಕ್ಕೆ, ಸೇತುಃ=ಆಶ್ರಯನು. (೧೦) ಅಕ್ಷಣ್ವಂತಃ=ಕಣ್ಣುಳ್ಳವರು, ಕರ್ಣವಂತಃ=ಕಿವಿಯುಳ್ಳವರು, (ಅಂದರೆ ಕಣ್ಣು ಮತ್ತು ಕಿವಿಗಳ ಫಲಭೂತವಾದ ಭಗವಂತನ ನೋಡುವಿಕೆ, ಭಗವದ್ವಿಷಯಕವಾದ ಶಾಸ್ತ್ರದ ಶ್ರವಣ ಇವುಗಳನ್ನು ಹೊಂದಿದವರು,) ಸಖಾಯಃ=ಪರಸ್ಪರವಾಗಿ ಪ್ರೀತಿಯುಕ್ತರಾದ ಮುಕ್ತರು, ಮನೋಜವೇಷು=ಪ್ರಜ್ಞಾದಿಗುಣಗಳಲ್ಲಿ, ಅಸಮಾಃ = ತಾರತಮ್ಯದಿಂದೊಡಗೂಡಿದವರು, ಬಭೂವುಃ = ಆದರು. ತ್ವೇ ಉ=ಅದರಲ್ಲಿ ಕೆಲವರು, ಆದಘ್ನಾಸಃ=ಬಹುಪ್ರಮಾಣವುಳ್ಳ ಕ್ಷೀರಸಮುದ್ರವುಳ್ಳವರಾಗಿ, ಅದರಲ್ಲಿ ಕ್ರೀಡಿಸುವವ

ರಾಗಿಯೂ, ತ್ವೇ=ಕೆಲವರು, ಉಪಕಕ್ಷಾಸಃ=ವನದ ಸಮೀಪದಲ್ಲಿಯೇ ಇರುವವರಾಗಿ, (ವನ ಕ್ರೀಡೆಯಲ್ಲಿ ಆಸಕ್ತರಾಗಿ) ತ್ವೇ ಸ್ನಾತ್ವಾ ಉ ಹ್ರದಾ ಇವ=ಕೆಲವರು ಸ್ನಾನಮಾಡಲಿಕ್ಕೆ ಯೋಗ್ಯ ಗಳಾದ ಹೃದಗಳಂತೆಯೇ ನಿಶ್ಚಲರಾಗಿ, ದದೃಶ್ರೇ=(ಪರಮಾತ್ಮನನ್ನೇ) ಕಂಡರು. (೧೧) ಬ್ರಹ್ಮಾಂತಾಃ=ಬ್ರಹ್ಮನೇ ಕೊನೆಯಾಗಿ ಉಳ್ಳವರು, ಸಂಸಾರಸಾಗರಾತ್ = ಸಂಸಾರವೆಂಬೀ ಸಮುದ್ರದಿಂದ, ಮುಕ್ತಾಃ = ಮುಕ್ತರಾಗಿ, ಉತ್ತರೋತ್ತರಂ = ಮೇಲುಮೇಲೆ, ಯಥೇಷ್ಟ-ಭೋಗಭೋಕ್ತಾರಃ=ಇಚ್ಛಾನುಸಾರವಾಗಿ ಭೋಗಗಳನ್ನನುಭವಿಸುವವರಾಗಿ, ಈಶಂ=ಸರ್ವ ಸ್ವಾಮಿಯಾದ ಶ್ರೀ ನಾರಾಯಣನನ್ನು, ಆಶ್ರಿತ್ಯ=ಆಶ್ರಯಿಸಿಯೇ, ತಿಷ್ಠಂತಿ=ಇರುತ್ತಾರೆ. ಇತಿ=ಹೀಗೆ, ಮೋಕ್ಷಾನಂತರಂ=ಮುಕ್ತಿಯನ್ನು ಹೊಂದಿದಮೇಲೂ, ಭೇದಶ್ರುತಿಭ್ಯಃ=ಭೇದ ಪ್ರತಿಪಾದಕಗಳಾದ ಆಗಮಗಳಿರುವುದರಿಂದ.

**ತಾ ||** (1) ಮುಕ್ತನು ಪರಬ್ರಹ್ಮನ ಸ್ವರೂಪದಿಂದಲೇ ಎಲ್ಲಾ ಅಭೀಷ್ಟಗಳನ್ನು ಏಕ ಕಾಲದಲ್ಲಿ ಭೋಜಿಸುತ್ತಾನೆ ಎಂದು ಐಕ್ಯವಾದಿಗಳು ವಾದಿಸುವರು. ಇದಸಂಗತವು. ಇವನೂ ಬ್ರಹ್ಮನ ಸ್ವರೂಪವನ್ನೇ ಹೊಂದಿದ ಮೇಲೆ ಅವಿದ್ಯೆಯೇ ನಷ್ಟವಾಗುವುದರಿಂದ ಅವಿದ್ಯೆಯ ಕಾರ್ಯವಾದ ಕಾಮವೂ ನಷ್ಟವಾಗುವ ಪ್ರಯುಕ್ತ ಕಾಮಗಳನ್ನು ಹೊಂದುತ್ತಾನೆ ಎನ್ನುವುದೇ ಕೂಡಲಾರದು. ‘ ಸರ್ವ ಭೇದಗಳ ನಿವೃತ್ತಿಯನ್ನು ತೋರಿಸುವುದು ಇದು ’ ಎಂದೂ ಹೇಳ ಕೂಡದು. ಲಕ್ಷಣಾವೃತ್ತಿಕಲ್ಪನೆಮಾಡುವುದರಲ್ಲಿ ಪ್ರಯೋಜನವಿಲ್ಲವು. (2) ಆನಂದಮಯನು ಪರಬ್ರಹ್ಮನೆನ್ನುವುದು ತೈತ್ತಿರೀಯ ಭಾಷ್ಯಾದಿಗಳಲ್ಲಿ ನಿರ್ಧಾರಿತವಾಗಿದೆ. ಉಪಸಂಕ್ರಮ್ಯ ಎಂಬ ಸಮೀಪ ಪ್ರಾಪ್ತಿಯನ್ನು ಹೇಳಿರುವುದರಿಂದ ಭೇದವನ್ನೇ ಸ್ಪಷ್ಟವಾಗಿ ಹೇಳಿದರು. (3) ‘ ಋಚಾಂತ್ವಃ ’ ಎನ್ನುವಲ್ಲಿ ಅನೇಕ ಬ್ರಹ್ಮರನ್ನು ನಿರೂಪಿಸಿರುವುದರಿಂದ ಈ ವಾಕ್ಯವು ಮೋಕ್ಷ ವಿಷಯಕವೆಂದೇ ಸ್ಪಷ್ಟವಾಗುತ್ತದೆ. ಅತೀತ ಅನಂತ ಕಲ್ಪಗಳಲ್ಲಿ ಮುಕ್ತರಾದ ಬ್ರಹ್ಮರು ಬಹುಮಂದಿ ಇರುವರು. ಇದು ಋತ್ವಿಗ್ವಿಷಯಕವೆಂದೂ ಹೇಳಕೂಡದು. ಒಂದು ಯಜ್ಞ ದಲ್ಲಿ ಅನೇಕ ಬ್ರಹ್ಮರು ಇಲ್ಲವಷ್ಟೇ. ಬ್ರಹ್ಮರು ಅನೇಕಮಂದಿ ಇರುತ್ತಾರೆ ಎನ್ನುವುದನ್ನು ಅಂಗೀ ಕರಿಸದಿದ್ದರೆ ಮೂರು ಪಾದಗಳಲ್ಲಿಯೂ ಶ್ರುತವಾದ ‘ ತ್ವಃ ’ ಎನ್ನುವುದು ವ್ಯರ್ಥವಾಗಬೇಕಾ ದೀತು. ಬ್ರಹ್ಮನನ್ನು ಅನುಸರಿಸುತ್ತಿರುವ ಅಧ್ವರ್ಯುವು ಹೋತನು ಉದ್ಗಾತನು ಈ ಮೂವರೂ ಬ್ರಹ್ಮರು ಎಂದೂ ಹೇಳಕೂಡದು. ಅವರಿಗೆ ಋಕ್ ಪೋಷಣ ಗಾಯತ್ರಸಾಮಗಾನ ವಿಷ್ಣು ರೂಪಧ್ಯಾನ ಇದುಮೊದಲಾದುವುಗಳು ಯಾಜ್ಞಿಕರಲ್ಲಿ ಪ್ರಸಿದ್ಧವಲ್ಲ. ಅಲ್ಲದೆ ಯಾಗದಲ್ಲಿ ಪುರಾಣ ಪದ್ಯಗೆ ಉಪಯೋಗವೂ ಇಲ್ಲವು. (4) ‘ಉಪಸಂಪದ್ಯ’ ಎನ್ನುವಲ್ಲಿ ಸಮೀಪ ಪ್ರಾಪ್ತಿ ಯನ್ನೇ ಹೇಳಿರುವುದರಿಂದ ಭೇದವೇ ಉಕ್ತವಾಯಿತು. (5) ‘ ಅಕ್ಷಣ್ವಂತಃ ’ ಎನ್ನುವುದು ಮುಕ್ತವಿಷಯಕವೆನ್ನುವುದು ‘ ಶ್ರುತ್ವಾ ವಿಷ್ಣುಂ ಕರ್ಣಫಲಂ ಪ್ರಾಪ್ತತ್ವಾತ್ಕರ್ಣಸಂಯುತಾಃ’ ಎಂದು ಐತರೇಯಭಾಷ್ಯದಲ್ಲಿ ಉದಾಹೃತವಾದ ಆಗಮವ್ಯಾಖ್ಯಾನದಿಂದ ತಿಳಿಯಲ್ಪಡುತ್ತದೆ.||೨೬೪||

**ಮೂ || (೧) ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ । ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ।(ಗೀ. ಅಧ್ಯಾ. ೧೪. ಶ್ಲೋ. ೨.) ಇತಿ ಭಗವದ್ವಚನಂ ।(೨) ಓಂ ಜಗದ್ವ್ಯಾಪಾರವರ್ಜಂ। (೩) ಓಂ ಪ್ರಕರಣಾದಸನ್ನಿಹಿತತ್ವಾಚ್ಚ || (ಬ್ರ. ಸೂ. ಅಧ್ಯಾ. ೪. ಪಾ. ೪. ಸೂ. ೧೭. ೧೮.) ಇತ್ಯಾದಿ ಚ || ೨೬೫ ||**

ಅ ॥ (೧) ಇದಂ ಜ್ಞಾನಂ=ಈ ಜ್ಞಾನವನ್ನು, ಉಪಾಶ್ರಿತ್ಯ=ಆಶ್ರಯಿಸಿ, ಮಮ=ನನ್ನ, ಸಾಧರ್ಮ್ಯಂ=ಸಮಾನಧರ್ಮವುಳ್ಳತನವನ್ನು, ಆಗತಾಃ=ಹೊಂದಿರುವರು. ಸರ್ಗೇಽಪಿ=ಸೃಷ್ಟಿ ಕಾಲದಲ್ಲಿಯೂ, ನೋಪಜಾಯಂತೇ=ಹುಟ್ಟುವುದಿಲ್ಲ. ಪ್ರಲಯೇ=ಪ್ರಲಯಕಾಲದಲ್ಲಿಯೂ, ನ ವ್ಯಥಂತಿ ಚ=ವ್ಯಥೆಯನ್ನು ಹೊಂದುವುದಿಲ್ಲ. ಇತಿ=ಎಂಬುವ, ಭಗವದ್ವಚನಂ ಚ=ಭಗವಂತನ ಮಾತೂ ಕೂಡ, (ಮೋಕ್ಷಾನಂತರದಲ್ಲಿಯೂ ಭೇದವನ್ನೇ ಹೇಳುತ್ತದೆ.) (೨) ಜಗದ್ವ್ಯಾಪಾರ-ವರ್ಜಂ=ಜಗತ್ತಿನ ನಿಯಮನ ಮೊದಲಾದ ವ್ಯಾಪಾರಗಳನ್ನು ಬಿಟ್ಟು (ಮುಕ್ತನು ಎಲ್ಲಾ ಕಾಮ ಗಳನ್ನು ಹೊಂದುತ್ತಾನೆ ಹೀಗೆ ಜಗದ್ವ್ಯಾಪಾರ ವ್ಯತಿರಿಕ್ತವಾದ ಎಲ್ಲಾ ಕಾಮಗಳ ಪ್ರಾಪ್ತಿರೂಪ ವಾದ ಐಶ್ವರ್ಯ ಮರ್ಯಾದೆಯನ್ನು ಹೇಳಿರುವುದರಿಂದಲೂ ಜಗದ್ವ್ಯಾಪಾರವುಳ್ಳ ಶ್ರೀ ಹರಿ ಯಿಂದ ಭೇದವು ಅವಗತವಾಗುತ್ತದೆ.) (೩) ('ಸರ್ವಾನ್ ಕಾಮಾನ್' ಎಂಬೀ ಶ್ರುತಿಗೆ ಮುಕ್ತ ಪರತ್ವವೂ ಸರ್ವಶಬ್ದಕ್ಕೆ ಸಂಕೋಚವೂ ಏಕೆ ಇಟ್ಟುಕೊಳ್ಳಬೇಕು ಎಂದರೆ) ಪ್ರಕರಣಾತ್= 'ಶರೀರಭೇದಾದೂರ್ಧ್ವಮುತ್ಕ್ರಮ್ಯ' ಎಂದು ಜೀವಪ್ರಕರಣವಾದುದರಿಂದಲೂ, ಅಸನ್ನಿಹಿತ-ತ್ವಾಚ್ಚ=ಜೀವರಿಗೆ ಜಗದ್ವ್ಯಾಪಾರ ಸಾಮರ್ಥ್ಯದಲ್ಲಿ ಸನ್ನಿಧಾನವಿಲ್ಲದಿರುವುದರಿಂದಲೂ (ಅಂದರೆ ಸಾಮರ್ಥ್ಯವಿಲ್ಲದಿರುವುದರಿಂದಲೂ) ಇತ್ಯಾದಿ ಚ=ಇದು ಮೊದಲಾದ ವಾಕ್ಯಗಳೂ ಭೇದವನ್ನೇ ಸ್ಪಷ್ಟವಾಗಿ ಬೋಧಿಸುತ್ತವೆ.

ತಾ ॥ (1) ಇದೂ ಭಗವದ್ವಚನವಾಗಿದ್ದರೂ ನಿರ್ಣಾಯಕಸೂತ್ರವಾಗಿರುವುದರಿಂದ ಪ್ರತ್ಯೇಕ ಉಕ್ತಿಯು. (2) ವ್ಯಾವಹಾರಿಕವೆನ್ನುವುದು ಮಾಯಾಮಯವು, ಮುಕ್ತಿಯಲ್ಲಿ ಮಾಯೆಯು ಸರ್ವಥಾ ನಿವೃತ್ತವಾಗಿದೆ. ಆದಕಾರಣ, ಆ ಮೇಲೆಯೂ ಇರುವ ಭೇದವು ವ್ಯಾವ ಹಾರಿಕ ಸತ್ಯವು ಹೇಗೆ ತಾನೆ ಆಗುವುದು. (3) ಗೌಣಮುಕ್ತಿಯು ಇದು ಎಂದು ಹೇಳಕೂಡದು. ಇದು ಹೊರತಾದ ಪರಮುಕ್ತಿಯು ಇದೆ ಎನ್ನುವಲ್ಲಿ ಪ್ರಮಾಣವಿಲ್ಲ. 'ಯತ್ರತ್ವಸ್ಯ' ಇದು ಮೊದಲಾದ ವಾಕ್ಯಗಳೇ ಐಕ್ಯವಿಷಯದಲ್ಲಿ ಪ್ರಮಾಣಗಳೆಂದನ್ನಕೂಡದು. ಆ ವಾಕ್ಯಗಳಿಗೆ ಹಾಗೆ ಅರ್ಥವಲ್ಲವೆಂಬು ಮೇಲೆಯೇ ವ್ಯಾಖ್ಯಾನಮಾಡುತ್ತೇವೆ ॥ ೨೬ ॥

(1) ಮುಕ್ತ್ಯನಂತರದಲ್ಲಿಯೂ ಭೇದವದೆ ಎಂದು ಪ್ರತಿಪಾದಿಸುವುದಕ್ಕಾಗಿ 'ಯತ್ರ ತ್ವಸ್ಯ' ಎಂಬೀ ವಾಕ್ಯವನ್ನುದಹರಿಸಿದ್ದು ಅಯುಕ್ತವು. ವಿರುದ್ಧಾರ್ಥಕವಾಗಿದೆ. ಹೇಗೆಂದರೆ— ಇಲ್ಲಿ ಮುಕ್ತನಿಗೆ ಕ್ರಿಯಾಕಾರಕ ಫಲಗಳಿಂದ ಸಂಬಂಧಲೇಶವೂ ಇಲ್ಲವೆಂದೇ ಹೇಳಲ್ಪಡುತ್ತದೆ. 'ಯತ್ರ ಹಿ ದ್ವೈತಮಿವ ಭವತಿ ತದಿತರಃ ಇತರಂ ಪಶ್ಯತಿ' ಇತ್ಯಾದಿಗಳಿಂದ ಅವಿದ್ಯಾವಿಷಯವಾದ ಸಂಸಾರಾವಸ್ಥೆಯನ್ನು ತೋರಿಸಿ, 'ಯತ್ರ ತ್ವಸ್ಯ' ಇತ್ಯಾದಿಗಳಿಂದ ಸಂಸಾರವಿಲಕ್ಷಣವಾದ ಮುಕ್ತ್ಯವಸ್ಥೆಯನ್ನು ತೋರಿಸುತ್ತಾರೆ. (2) ಯತ್ರ=ಯಾವಾಗ, (ಅವಿದ್ಯೆಯು ಇರುವಾಗ) ದ್ವೈತಮಿವ ಭವತಿ=ದ್ವೈತದಂತೆ ಆಗುತ್ತದೋ, ಅಂದರೆ ಮಿಥ್ಯೆಯಾದ ಶರೀರ ಇಂದ್ರಿಯ ವಿಷಯಾದಿರೂಪವಾದುದು ಸ್ವವ್ಯತಿರಿಕ್ತವಾದುದು ಇರುತ್ತದೋ, ತತ್=ಆಗ, ಇತರಃ=ಭಿನ್ನ ನಾದ ಕರ್ತನು, ಇತರಂ=ಭಿನ್ನವಾದ ಘಟವನ್ನು, (ಇತರೇಣ=ಭಿನ್ನವಾದ ಚಕ್ಷುಸ್ಸಿನಿಂದ,) ಪಶ್ಯತಿ=ನೋಡುತ್ತಾನೆ. ಇದುಮೊದಲಾದುದು ಉಪಪನ್ನವಾಗುತ್ತದೆ. (4) ಯತ್ರ ತು= ಯಾವಾಗ, ಮುಕ್ತಿಯಲ್ಲಿ ಅವಿದ್ಯೆಯು ಹೊರಟುಹೋದ ಮೇಲೆ, ಅಸ್ಯ=ಈ ಜ್ಞಾನಿಯ, ಸರ್ವಂ=ಕರಣ ಮೊದಲಾದುದೆಲ್ಲವೂ, ಆತ್ಮೈವ ಅಭೂತ್=ಆತ್ಮನೇ ಆಗಿ ಹೋಯಿತೋ, (ಆತ್ಮಹೊರತು ಯಾವುದೂ ಇರುವುದಿಲ್ಲವೋ) ತತ್=ಆ ಅವಸ್ಥೆಯಲ್ಲಿ, ಕೇನ=ಯಾವ ಕರಣ ದಿಂದ, ಕಂ=ಯಾವ ವಿಷಯವನ್ನು, ಪಶ್ಯೇತ್=ನೋಡುವನು. (ಯಾವ ಇಂದ್ರಿಯದಿಂದಲೂ ಯಾವುದನ್ನೂ ನೋಡಲಾರನು) ಕೇನ=ಯಾವ ಕರಣದಿಂದ, ಕಂ=ಯಾವ ವಿಷಯವನ್ನು,

ಜಿಘ್ರೇತ್ = ಪರಿಮಳವನ್ನು ಸ್ವೀಕರಿಸಿಯಾನು. ಕೇನ=ಯಾವ ಕರಣಸಮುದಾಯದಿಂದ, ವಿಜಾನೀಯಾತ್=ತಿಳಿದಾನು, ಯೇನ=ಯಾವ ಕರಣಸಮೂಹದಿಂದ, ಇದಂ ಸರ್ವಂ=ಈ ಎಲ್ಲಾ ವಿಷಯವನ್ನು, ವಿಜಾನಾತಿ=(ಸಂಸಾರಿಯು)ತಿಳಿಯುತ್ತಾನೋ, ತಂ ಚ=ಅದನ್ನೂ ಕೂಡ, ಕೇನ=ಯಾವ ಇಂದ್ರಿಯ ಸಮೂಹದಿಂದ, ವಿಜಾನೀಯಾತ್=ತಿಳಿದಾನು. (ಯಾವುದರಿಂದಲೂ ತಿಳಿಯಲಾರನು.) ಅರೇ=ಎಲೋ ಮೈತ್ರೇಯಿಯೇ, ವಿಜ್ಞಾತಾರಂ=ಪೂರ್ವದಲ್ಲಿ ತಿಳಿದ ಆತ್ಮನನ್ನು, ಕೇನ=ಯಾವುದರಿಂದ, ವಿಜಾನೀಯಾತ್=ತಿಳಿದಾನು. (ಯಾವುದರಿಂದಲೂ ತಿಳಿಯಲಾರನು ) ಆದಕಾರಣ ಹೀಗೆ ವಿರುದ್ಧಾರ್ಥವುಳ್ಳ ವಾಕ್ಯವನ್ನುದಹರಿಸಿದ್ದು ಅಯುಕ್ತವು. ಎಂದು ಮಾಯಾವಾದಿಗಳು ಆಶಂಕಿಸಿದರೆ 'ಯತ್ರತ್ವಸ್ಯ' ಇತ್ಯಾದಿ ವಾಕ್ಯಗಳಿಗೆ ಅವರ ಅರ್ಥವು ಅಯುಕ್ತವು ಎಂದಭಿಪ್ರಾಯದಿಂದ ತಾನು ವ್ಯಾಖ್ಯಾನಮಾಡುತ್ತಾರೆ —

ಮೂ ॥ ಅವಿನಾಶೀ ವಾ ಅರೇಽಯಮಾತ್ಮಾನುಚ್ಛಿತ್ತಿ ಧರ್ಮೇತಿ ತದ್ಧರ್ಮಾಣಾಮಪ್ಯನುಚ್ಛಿತ್ತೇಃ ಪ್ರಸ್ತುತತ್ವಾದತ್ರೈವ ಮಾ ಭಗವಾನ್ಮೋಹಾಂತಮಾಪೀಪಿಪನ್ನ ಪ್ರೇತ್ಯ ಸಂಜ್ಞಾಸ್ತೀತಿ ಸಂಜ್ಞಾನಾಶಸ್ಯ ದೋಷತ್ವೇನೋಕ್ತತ್ವಾತ್ ॥ ೨೬೬ ॥

ಅ ॥ ಅರೇ=ಎಲೋ ಮೈತ್ರೇಯಿಯೇ, ಅಯಂ ಆತ್ಮಾ=ಈ ಆತ್ಮನು, ಅವಿನಾಶೀ ವಾ = ವಿನಾಶವಿಲ್ಲದಿರುವವನು, ಅನುಚ್ಛಿತ್ತಿಧರ್ಮಾ = ನಾಶವಿಲ್ಲದಿರುವ ಧರ್ಮಗಳುಳ್ಳವನು, ಇತಿ=ಹೀಗೆ, ತದ್ಧರ್ಮಾಣಾಮಪಿ = ಮುಕ್ತನ ಜ್ಞಾನಾದಿಧರ್ಮಗಳಿಗೂ, ಅನುಚ್ಛಿತ್ತೇಃ= ವಿನಾಶಾಭಾವಕ್ಕೆ, ಪ್ರಸ್ತುತತ್ವಾತ್=ಪ್ರಸ್ತಾವವಿದ್ದುದರಿಂದ, ಅತ್ರೈವ=ಅವಶ್ಯವಾಗಿ ತಿಳಿಯಲು ಯೋಗ್ಯವಾದ ವಿಷಯದಲ್ಲಿಯೇ, ಮಾ=ನನ್ನನ್ನು, ಭಗವಾನ್=ಪೂಜ್ಯರಾದ ತಾವು, ಪ್ರೇತ್ಯ= ಮುಕ್ತಿಯಾದ ಮೇಲೆ, ಸಂಜ್ಞಾ=ಜ್ಞಾನವು, ನಾಸ್ತೀತಿ=ಇಲ್ಲವೆಂದು, ಮೋಹಾಂತಂ=ಮೋಹಾಖ್ಯ ವಿನಾಶವನ್ನು, ಅಪಿಪತ್=ಹೊಂದಿಸಿರುವಿರಿ. ಇತಿ=ಹೀಗೆ, ಸಂಜ್ಞಾನಾಶಸ್ಯ=ಜ್ಞಾನನಾಶಕ್ಕೆ, ದೋಷತ್ವೇನ=ದೋಷತನದಿಂದ, ಉಕ್ತತ್ವಾತ್=ಹೇಳಲ್ಪಟ್ಟಪ್ರಯುಕ್ತ.

ತಾ ॥ (1) 'ಯತ್ರತ್ವಸ್ಯ' ಎಂಬೀ ವಾಕ್ಯವು ಆಕ್ಷೇಪವೇ. ವಸ್ತುಸ್ಥಿತಿಯನ್ನು ಹೇಳಿದ್ದಲ್ಲ. ಆದಕಾರಣ ಉದಾಹರಿಸಿದ್ದು ಯುಕ್ತವೇ. ಅಂದರೆ 'ಯತ್ರತ್ವಸ್ಯ' ಇತ್ಯಾದಿ ವಾಕ್ಯಗಳಿಂದ ಮುಕ್ತಿಯಲ್ಲಿ ಭೇದವನ್ನು ಒಡಂಬಡದಿದ್ದರೆ ಅನಿಷ್ಟಾಪಾದನರೂಪವಾದ ಪ್ರಸಂಗವು (ಆಕ್ಷೇಪವು) ಮಾಡಲ್ಪಡುತ್ತದೆ. (2) ಮುಕ್ತಿಯಲ್ಲಿ ಚಕ್ಷುಸ್ಸು ಮೊದಲಾದ ಇಂದ್ರಿಯಗಳೇ ಇಲ್ಲದಿರುವುದರಿಂದ ದರ್ಶನಾದಿಗಳು ಕೂಡಲಾರವು ಎಂದು ವಸ್ತುಸ್ಥಿತಿಯನ್ನೇ ಹೇಳಿದ್ದೆಂದು ಏಕೆ ಅಂಗೀಕರಿಸಕೂಡದು. ಪ್ರಸಂಗರೂಪವೆಂದು ಏಕೆ ವ್ಯಾಖ್ಯಾನಮಾಡಬೇಕೆಂದರೆ ಮುಕ್ತಿಯಾದ ಮೇಲೆ ಜ್ಞಾನವೇ ಇಲ್ಲವೆಂದು, ಅವಶ್ಯವಾಗಿ ತಿಳಿಯತಕ್ಕ ವಿಷಯದಲ್ಲಿಯೇ ಅಜ್ಞಾನವನ್ನು ಹೊಂದಿಸಿ ಕೊಟ್ಟಿರುತ್ತೀರಿ. ಇದಾದರೂ ಯಥಾರ್ಥಜ್ಞಾನವಲ್ಲ. ಸರ್ವರಿಂದಲೂ ಅಪೇಕ್ಷಣೀಯವಾದ ಮುಕ್ತಿಯಲ್ಲಿ ಜ್ಞಾನವಿಲ್ಲವೆನ್ನುವುದು ಅಯೋಗ್ಯವಾದುದರಿಂದ ಮುಕ್ತಿಯಲ್ಲಿ ಜ್ಞಾನನಾಶವು ಮೊದಲಿನ ವಾಕ್ಯದಲ್ಲಿ ದೋಷವೆಂದೇ ಉಕ್ತವಾಗಿದೆ. (3) ಪೂರ್ವಪಕ್ಷಮಾಡತಕ್ಕ ಮೈತ್ರೇಯಿಯೂ ಸೂಚಿಸಿದರೂ ಸಿದ್ಧಾಂತಮಾಡತಕ್ಕ ಯಾಜ್ಞವಲ್ಕ್ಯರ ಮಾತನ್ನು ಪ್ರಸಂಗಾರ್ಥವಾಗಿ ವ್ಯಾಖ್ಯಾನಮಾಡಲಿಕ್ಕೆ ಶಕ್ಯವಾಗಲಾರದು, ಎಂದನ್ನಕೂಡದು. ಮುಕ್ತಿಯು ಪುರುಷಾರ್ಥವೇ ಆಗದೆ ಹೋಗುವುದು ಎಂದು ಮೈತ್ರೇಯಿಯ ಮಾತಿನ ಅರ್ಥವು. ಉತ್ತರವಾಕ್ಯದಲ್ಲಿಯೂ ಮುಕ್ತರಿಗೆ ಜ್ಞಾನವಿಲ್ಲವೆನ್ನುವುದೇ ಸಿದ್ಧಾಂತವಾಗಿದ್ದರೆ ಮೈತ್ರೇಯಿಯು ಹೇಳಿದ ಪ್ರಸಂಗಕ್ಕೆ

ಬೇರೆ ಉತ್ತರವನ್ನು ಕೊಡಬೇಕು. ಬೇರೆ ಉತ್ತರವನ್ನು ಕೊಡಲಿಲ್ಲ. ಇದರಿಂದ ಮುಕ್ತನಿಗೆ ಜ್ಞಾನವಿಲ್ಲವೆನ್ನುವುದು ಮೇಲಿನ ವಾಕ್ಯದಲ್ಲಿ ಅಭಿಪ್ರೇತವಲ್ಲವೆಂದೇ ತಿಳಿಯುತ್ತದೆ. (4) ಪೂರ್ವ ಪಕ್ಷಿಸತಕ್ಕ ಮೈತ್ರೇಯಿಯು ಹೇಳಿದ ದೋಷವನ್ನು ಪರಿಹರಿಸದೆ ಇದ್ದುದರಿಂದ ಮಾತ್ರ ಆಕ್ಷೇಪ ವೆಂದು ಹೇಳುವುದಲ್ಲ. ಮತ್ತೆ 'ಅವಿನಾಶೀ' ಇತ್ಯಾದಿಗಳಿಂದ ಜೀವನ ಸ್ವರೂಪಕ್ಕೂ ಮುಕ್ತನ ಜ್ಞಾನಾದಿ ಧರ್ಮಗಳಿಗೂ ವಿನಾಶವಿಲ್ಲವೆಂದೇ ಪೂರ್ವವಾಕದಲ್ಲಿ ಪ್ರಸ್ತುತವಾಗಿರುತ್ತದೆ. ಆದುದರಿಂದ ಸಿದ್ಧಾಂತಮಾಡತಕ್ಕ ಯಾಜ್ಞವಲ್ಕ್ಯರ ಅಭಿಪ್ರಾಯವೂ ಪ್ರಸಂಗವೆಂದೇ ತಿಳಿಯಲ್ಪಡುತ್ತದೆ. ಇಲ್ಲದಿದ್ದರೆ ಪೂರ್ವ ಉತ್ತರವಾಕ್ಯಗಳಿಗೆ ವಿರೋಧವು ಬರುವುದು. (5) 'ಅನುಚ್ಛಿತ್ತಿ ಧರ್ಮಾ' ಎನ್ನುವುದರಿಂದ ಸ್ವರೂಪಾವಿನಾಶವೇ ಹೇಳಲ್ಪಡುತ್ತದೆ. ಧರ್ಮಗಳಿಗೆ ನಾಶವಿಲ್ಲ ವೆಂದು ಹೇಳಲ್ಪಡುವುದಿಲ್ಲ ಎಂದನ್ನಕೂಡದು. 'ಅವಿನಾಶೀ' ಎನ್ನುವುದರಿಂದಲೇ ಸ್ವರೂಪಕ್ಕೆ ವಿನಾಶವಿಲ್ಲವೆಂದುಕ್ತವಾಗಿದೆ. ವಿಕಾರವಿಲ್ಲವೆನ್ನುವುದು ಅದರಿಂದ ಹೇಳಲ್ಪಡುತ್ತದೆ ಎಂದರೆ- ಅನುಚ್ಛಿತ್ತಿಃ' ಎಂದಿಷ್ಟೇ ಸಾಕಾಗುವುದು. ಧರ್ಮಪದವು ವ್ಯರ್ಥವು. (6) ಪರರು ಹೇಳತಕ್ಕ ಅರ್ಥವು ಅಯುಕ್ತವಾದುದರಿಂದ 'ವಿಜ್ಞಾನ ಘನ ಏವ ಏತೇಭ್ಯೋ ಭೂತೇಭ್ಯಸ್ಸಮುತ್ಥಾಯ ತಾನ್ಯೇವಾನು ವಿನಶ್ಯತಿ' ಜ್ಞಾನಸ್ವರೂಪನಾದ ಜೀವನು ಈ ಪಂಚಭೂತಗಳಿಂದ ಹುಟ್ಟಿ ಅವುಗಳನ್ನೇ ಅನುಸರಿಸಿ ನಾಶಹೊಂದುತ್ತಾನೆ. ಎಂದು ಸಂಸಾರದಲ್ಲಿ ಜ್ಞಾನಸ್ವರೂಪನಾದ ಜೀವನಿಗೆ ಉತ್ಪತ್ತಿವಿನಾಶಗಳು ಪಂಚಭೂತಗಳ ಉತ್ಪತ್ತಿವಿನಾಶಗಳೇ ನಿಮಿತ್ತಗಳಾಗಿ ಉಳ್ಳವುಗಳು ಎಂದು ಹೇಳಿ ಮುಕ್ತಿಯು ಅನಂತರದಲ್ಲಿ ಜ್ಞಾನವಿಲ್ಲವೆಂದು ಮುಕ್ತನಿಗಾದರೂ ಭೂತಗಳೇ ವಿನಿವೃತ್ತಗಳಾದುದರಿಂದ ತನ್ನಿಮಿತ್ತವಾದ ವೃತ್ತಿಜ್ಞಾನವೂ ಉತ್ಪತ್ತ್ಯಾದಿಗಳೂ ಇಲ್ಲವೆಂದು ಯಾಜ್ಞವಲ್ಕ್ಯರು ಹೇಳಿದರು. ಆ ಮೇಲೆ ಮುಕ್ತಿಯು ಸ್ವರೂಪವನ್ನು ಚೆನ್ನಾಗಿ ತಿಳಿಯಲು ಇಚ್ಛಿಸತಕ್ಕ ಮೈತ್ರೇಯಿಯು ಸರ್ವಥಾ ಜ್ಞಾನವೇ ಇಲ್ಲವೆಂದು ಯಾಜ್ಞವಲ್ಕ್ಯರು ಹೇಳಿದ್ದೆಂದು ಆರೋಪಿಸಿಕೊಂಡು 'ಅತ್ರೈವ ಮಾ ಭಗವಾನ್' ಎಂದಳು. ಆ ಮೇಲೆ ಯಾಜ್ಞವಲ್ಕ್ಯರು 'ನ ವಾ ಅರೇಽಹಂ ಮೋಹಂ ಬ್ರವೀಮಿ' ಮೈತ್ರೇಯಿಯೇ ನಾನು ಮೋಹಕವಾದ ವಾಕ್ಯವನ್ನು ಹೇಳುವುದಿಲ್ಲ. ನೀನೇ 'ಭೂತೇಭ್ಯಸ್ಸಮುತ್ಥಾಯ' ಎಂಬೀ ಪ್ರಕರಣವನ್ನು ಅನುಸಂಧಾನಮಾಡಿಕೊಳ್ಳದೆ ಸರ್ವಥಾ ಜ್ಞಾನವಿಲ್ಲವೆಂದೇ ನಾನು ಹೇಳಿದೆನು ಎಂದು ಕಲ್ಪಿಸಿಕೊಂಡಿರುತ್ತಿ. ಪ್ರಕರಣವನ್ನನುಸಂಧಾನ ಮಾಡಿಕೊಂಡು ಇದ್ದರೆ ವೃತ್ತಿಜ್ಞಾನವು ಮಾತ್ರ ಇಲ್ಲವೆಂದು ಪ್ರಾಪ್ತವಾಗುವುದು. ಎಂದು ಯಾಜ್ಞವಲ್ಕ್ಯರು ಹೇಳಿದರು. ಪುನಃ ಮೈತ್ರೇಯಿಗೆ ವಿಶೇಷಾಕಾರವಾಗಿ ತಿಳಿಯಬೇಕೆಂದು ಇಚ್ಛೆಯಿದೆ ಎಂದು ತಿಳಿದು ಮುಕ್ತಿವಿಷಯದಲ್ಲಿರುವ ವಾದಿಗಳ ವಿಪ್ರತಿಪತ್ತಿಗಳನ್ನು ನಿರಾಕರಿಸುತ್ತಾ ಶೂನ್ಯವಾದಿಗಳು ಆತ್ಮವಿನಾಶವೇ ಮುಕ್ತಿಯೆಂದು ಅಂಗೀಕರಿಸುವುದರಿಂದ ಅದನ್ನು 'ಅವಿನಾಶೀ ವಾ' ಎಂದು ನಿರಾಕರಿಸಿ ಸುಖಮೊದಲಾದ ವಿಶೇಷಗುಣಗಳ ರಾಹಿತ್ಯವೇ ಮುಕ್ತಿಯೆಂದು ವೈಶೇಷಿಕಾದಿಗಳು ಹೇಳುವುದನ್ನೂ 'ಅನುಚ್ಛಿತ್ತಿಧರ್ಮಾ' ಎನ್ನುವುದರಿಂದ ನಿರಾಕರಿಸಿದರು. ಆ ಮೇಲೆ ಯಾರು ಅದ್ವಿತೀಯ ಚೈತನ್ಯಮಾತ್ರ ಅವಸ್ಥಿತಿಯೇ ಮುಕ್ತಿಯೆಂದು ಅಂಗೀಕರಿಸಿರುವರೋ, ಅವರ ಮತದಲ್ಲಿ ದರ್ಶನಾದಿ ಭೋಗವೇ ಇಲ್ಲವೆಂದಾಗುವುದು ಎಂಬೀ ಅನಿಷ್ಟಪ್ರಸಂಗವನ್ನು ಹೇಳುವುದಕ್ಕಾಗಿ ಪ್ರಸಂಗಕ್ಕೆ ವ್ಯಾಪ್ತಿಯು ಆವಶ್ಯಕವಾದಪ್ರಯುಕ್ತ ವ್ಯಾಪ್ತಿಯನ್ನೇ ಆದಿಯಲ್ಲಿ ಹೇಳಿದರು, 'ಯತ್ರ ಹಿ ದ್ವೈತಮಿವ ಭವತಿ' ಇತ್ಯಾದಿಯಿಂದ. (೧) ದ್ವಯೋರ್ಭಾವಃ=ಭೇದವುಳ್ಳ ಎರಡರ ಧರ್ಮವು, 'ದ್ವಿತಾ'=ಭೇದವು. ತಸ್ಯಾಃ ಇದಂ=ಭೇದದಿಂದ ಯುಕ್ತವಾದ ವಸ್ತುವು ದ್ವೈತವು. (೨) ಅಥವಾ ದ್ವಿತ್ವೇನ ಇತಂ=ಭೇದದಿಂದ ಪ್ರಾಪ್ತವಾದುದು. ದ್ವೀತಮೇವ ದ್ವೈತಂ=ಅಂದರೆ ಭೇದವುಳ್ಳದ್ದು. (೩) ಅಥವಾ ದ್ವಾಭ್ಯಾಂ ಇತಂ=ಎರಡು ವಿರುದ್ಧಧರ್ಮ

ಗಳಿಂದ ಯುಕ್ತವಾದುದು, ದ್ವೀತವು, ದ್ವೀತೇ ಭವಂ=ವಿರುದ್ಧಧರ್ಮಾಧಿಕರಣಗಳಾದ ವಸ್ತು ಗಳಲ್ಲಿರುವುದು, ಭೇದವು. (೪) ಅಥವಾ ದ್ವಿತಾಯಾಂ ಭವಂ=ಅನೇಕತ್ವಸಂಖ್ಯೆಯಲ್ಲಿರುವುದು. ಅಂದರೆ ಒಂದರಿಂದ ಬೇರೆಯಾದ ದ್ವಿತ್ವ ಬಹುತ್ವ ವೊದಲಾದ ಸಂಖ್ಯೆಗಳಲ್ಲಿರುವುದು, ಭೇದವೇ (೫) ಅಥವಾ ದ್ವಿತ್ವಸಂಖ್ಯೆಯಿಂದ ಯುಕ್ತವಾದುದು 'ದ್ವೀತವು' ಅದರಲ್ಲಿರುವುದು, ಅಂದರೆ ದ್ವಿತ್ವಸಂಖ್ಯೆಯಿಂದ ಯುಕ್ತವಾದುದರಲ್ಲಿರುವುದು, ಭೇದವೇ. ಹೀಗೆ ದ್ವೈತಪದಕ್ಕೆ ೫ ಅರ್ಥಗಳು ಉಪಪನ್ನಗಳಾಗುತ್ತವೆ. ಅದರಲ್ಲಿ ಭೇದವೆಂದು ಇಟ್ಟುಕೊಂಡರೂ ಭೇದವುಳ್ಳವುಗಳೆಂದಂಗೀಕರಿಸಿದರೂ ಭೇದಿಗಳಿಗೂ ಭೇದಕ್ಕೂ ಪಾರತಂತ್ರ್ಯವಿದ್ದುದರಿಂದ 'ಇವ' ಶಬ್ದವು. ತಥಾ ಚ, ಯತ್ರ=ಯಾವಾಗ, ದ್ವೈತಮಿವ ಭವತಿ=ಪರತಂತ್ರವಾದ ಭೇದಭೇದಿವಿರುವುದೋ, ತತ್=ಆಗಲೇ, ಇತರಃ ಇತರಂ ಪಶ್ಯತಿ=ಚೈತ್ರನು ಘಟವನ್ನು ನೋಡುತ್ತಾನೆ. ಅಂದರೆ ಆವಾಗಲೇ ದರ್ಶನ ವೊದಲಾದ ಭೋಗವು ದೃಷ್ಟವಾಗಿದೆ. ಇಂತಹ ವ್ಯಾಪ್ತಿಯನ್ನು ಪೂರ್ವದಲ್ಲಿಯೇ ಹೇಳಿದರು ॥ ೨೬೬ ॥

ಯಾವಾಗ ಭೇದ ಭೇದಿಗಳು ಇರುತ್ತವೋ ಆವಾಗಲೇ ದರ್ಶನಾದಿ ಭೋಗಗಳು ದೃಷ್ಟವಾಗಿವೆ ಎಂಬೀ ವ್ಯಾಪ್ತಿಯನ್ನು ಹೇಳಿ ಈಗ ಇಲ್ಲವಾದರೆ ಅದೇ ಕೂಡಲಾರದು ಎಂಬೀ ಪ್ರಸಂಗವನ್ನು ನಿರೂಪಿಸುತ್ತಾರೆ—

**ಮೂ ॥ (೧) ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇದಿತಿ ಹ್ಯಾಕ್ಷೇಪ ಏವ।(೨) ನಹಿ ಭೋಗಾಭಾವೋ ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ ವಿಜ್ಞಾತುರವಿಜ್ಞಾನಂ ಚಾಪೇಕ್ಷಿತಂ ॥ ೨೬೭ ॥**

ಅ ॥ (೧) ಯತ್ರ ತು=ಯಾವಾಗ, ಅಸ್ಯ=ಈ ಜೀವನ, ಸರ್ವಂ=ದೇಹೇಂದ್ರಿಯಾದಿಗಳೆಲ್ಲವೂ, ಆತ್ಮೈವ=ಆತ್ಮನೇ, ಅಭೂತ್=ಆಗುವುದಾದರೆ, ತತ್=ಆಗ, ಕೇನ=ಯಾವಇಂದ್ರಿಯದಿಂದ, ಕಂ=ಯಾವ ವಿಷಯುವನ್ನು, ಪಶ್ಯೇತ್=ನೋಡಲಾಪನು. ಇತಿ=ಹೀಗೆ, ಆಕ್ಷೇಪ ಏವ=ಆಕ್ಷೇಪವೇ ಸರಿ. ಹಿ=ಪ್ರಮಾಣಸಿದ್ಧವು. (ಅಂದರೆ— ನಿರ್ವಿಶೇಷವಾದ ಚೈತನ್ಯಮಾತ್ರ ಅವಶಿಷ್ಟವಾಗುವುದು. ಬೇರೆ ಯಾವುದೂ ಇಲ್ಲ ಎಂದು ಮತವಾಗಿದ್ದರೆ ಆಗ ಚೇತನನಿಗೆ ದರ್ಶನ ವೊದಲಾದ ಭೋಗಗಳೇ ಇಲ್ಲವೆಂದಾಗುವುವು. ಹಾಗೆಯೇ ಯಾವ ಈಶ್ವರನಿಂದ ಜೀವನು ಇದೆಲ್ಲವನ್ನು ತಿಳಿಯುತ್ತಾನೋ ಆ ಈಶ್ವರನ ಜ್ಞಾನವೇ ಇಲ್ಲವೆಂದಾಗುವುದು. ಹೀಗೆಯೇ ತಿಳಿಯತಕ್ಕ ತನ್ನ ಜ್ಞಾನವೂ ಇಲ್ಲವೆಂದೇ ಆಗುವುದು. ವಿಶೇಷವೇ ಇಲ್ಲದಿರುವುದರಿಂದ ಕರ್ತೃಕರ್ಮ ಭಾವವೇ ವಿರುದ್ಧವಾಗುವುದು. ದರ್ಶನಾದಿ ಭೋಗವೂ ಈಶ್ವರಜ್ಞಾನವೂ, ಆತ್ಮಜ್ಞಾನವೂ ಆವಶ್ಯಕವೇ ಆದಕಾರಣ ನಿರ್ವಿಶೇಷ ಚೈತನ್ಯ ಮಾತ್ರ ಅವಸ್ಥಿತಿರೂಪವಾದ ಮುಕ್ತಿಯೂ ಅಯುಕ್ತವು. ಹೀಗೆ ಅನಿಷ್ಟಾಪಾದನರೂಪವಾದ ಆಕ್ಷೇಪವೇ ಈ ವಾಕ್ಯಕ್ಕೆ ಅರ್ಥವು.) (೨) (ಹಾವಾದರೆ ಅನಿಷ್ಟವಾದುದನ್ನು ಆಪಾದಿಸಬಹುದು. ಭೋಗಾಭಾವಾದಿಗಳು ಅನಿಷ್ಟವೇ ಅಲ್ಲ. ಆದಕಾರಣ ಇದು ಪ್ರಸಂಗಾಭಾಸವು ಎಂದರೆ,) ಭೋಗಾಭಾವಃ=ಭೋಗವಿಲ್ಲವೆನ್ನುವುದು, 'ವಿಜ್ಞಾತಾರಮರೇ ಕೇನ ವಿಜಾನೀಯಾತ್' ಇತಿ=ಎನ್ನುವುದರಿಂದ ಹೇಳಲ್ಪಟ್ಟ, ವಿಜ್ಞಾತುಃ=ತಿಳಿಯತಕ್ಕವನ, ಅವಿಜ್ಞಾನಂ ಚ=ವಿಜ್ಞಾನವಿಲ್ಲವೆನ್ನುವುದು, ಅಪೇಕ್ಷಿತಂ=ಇಷ್ಟವಾದುದು, ನ ಹಿ=ಅಲ್ಲ ॥ ೨೬೭ ॥

ಏಕೆ ಇಷ್ಟವಲ್ಲವೆಂದರೆ — ೧ ಪ್ರಾಮಾಣಿಕಹಾನಿ, ೨ ಅಪ್ರಾಮಾಣಿಕ ಸ್ವೀಕಾರವೆಂದು. ಅನಿಷ್ಟವು ೨ ವಿಧವು. ಅದರಲ್ಲಿ ಮುಕ್ತಿಯಲ್ಲಿಯೂ ಆತ್ಮಜ್ಞಾನವು ಪ್ರಮಾಣಸಿದ್ಧವಾದುದರಿಂದ ಆತ್ಮಜ್ಞಾನವು ಪ್ರಮಾಣವಿರುದ್ಧವು ಎಂದು ನಿರೂಪಿಸುತ್ತಾರೆ —

ಮೂ ॥ (೧) ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ। ಸ ದುಃಖೀ ಸ ಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ॥ ಇತಿ ಪರಮಶ್ರುತಿಃ। (೨) ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇತ್ ॥ ಇತಿ ಮೋಕ್ಷಧರ್ಮೇ ॥ ೨೬೮ ॥

ಅ ॥ (೧) ಯಃ ದುಃಖೀ=ಯಾರು ದುಃಖವುಳ್ಳವನೋ, ಸಃ ಜೀವಃ=ಆತನು ಜೀವನು, ಯಃ ಸುಖೀ=ಯಾರು ಪ್ರಾಕೃತ ಸುಖವುಳ್ಳವನೋ, ಸಃ ಜೀವಃ=ಆತನು ಜೀವನು, ಯಃ= ಯಾರು, ಬಂಧಮೋಕ್ಷಯೋಃ ಪಾತ್ರಂ ಚ=ಸಂಸಾರ ಬಂಧಮುಕ್ತಿಗಳಿಗೆ ಪಾತ್ರನೋ, ಸಃ= ಆತನು, ಜೀವ ಇತಿ=ಜೀವನೆಂದು, ಕೀರ್ತಿತಃ=ಹೇಳಲ್ಪಡುತ್ತಾನೆ ಸಃ=ಆತನು, ಅಹಮಿತ್ಯೇವ= 'ಅಹಂ' ಎಂದೇ, (ಎಲ್ಲಾ ಅವಸ್ಥೆಗಳಲ್ಲಿಯೂ,) ವೇದ್ಯ ಏವ=ತನ್ನಿಂದ ವೇದ್ಯನೇ ಆಗುವನು. ಇತಿ=ಹೀಗೆ, ಪರಮಶ್ರುತಿಃ=ಪರಮಶ್ರುತಿಯು. (೨) ಪರೇ ಅಜ್ಞಾನೇ=ಕೇವಲ ಅಜ್ಞಾನದಲ್ಲಿ, ಮಗ್ನಸ್ಯ ಹಿ=ಮುಳುಗಿದ, ಅಂದರೆ ಸರ್ವಥಾ ರೂಪಾದಿ ಜ್ಞಾನಗಳಿಲ್ಲದಿರುವ ಮುಕ್ತನಿಗೆ ಜ್ಞಾನ ವಿಲ್ಲವೆಂದಂಗೀಕರಿಸಿದರೆ, ದುಃಖತರಂ=ದುಃಖಾತಿಶಯವು, ನ ಭವೇತ್ ಕಿಂ=ಆಗಲಾರದೋ ಏನು? ಆಗಿಯೇ ಆಗುವುದು.

ತಾ ॥ ಕುರುಡ ಮೊದಲಾದವರಿಗೆ ದುಃಖಾತಿಶಯವು ದೃಷ್ಟವಾಗಿದೆ. ಮುಕ್ತನಿಗಾದರೂ ದುಃಖವು ಎಷ್ಟುಮಾತ್ರಕ್ಕೂ ಕೂಡಲಾರದು. ಆದಕಾರಣ ರೂಪಾದಿಜ್ಞಾನವು ಉಂಟೇ ಉಂಟು. ನೋಡಲು ಇಚ್ಛೆಯು ಇದು ಮೊದಲಾದುದು ಇಲ್ಲದಿರುವುದರಿಂದ ದುಃಖವು ಇಲ್ಲ ವೆಂದು ಹೇಳಕೂಡದು. 'ಸ ಯದಿ ಪಿತೃಲೋಕ ಕಾಮೋ ಭವತಿ' ಇತ್ಯಾದಿ ಶ್ರುತಿಗಳಿಂದ ಮುಕ್ತರಿಗೆ ಕಾಮಶಬ್ದವಾಚ್ಯವಾದ ಇಚ್ಛೆಯು ಇದ್ದುದರಿಂದ ಕಾಮವಿಲ್ಲವೆನ್ನುವುದು ಪ್ರಮಾಣ ವಿರುದ್ಧವಾಗಿದೆ. ಆದಕಾರಣ ಹೀಗ 'ಯತ್ರ ತ್ವಸ್ಯ' ಎಂಬ ವಾಕ್ಯವು ಅನಿಷ್ಟಪ್ರಸಂಗಪರವಾದುದ ರಿಂದ ಪ್ರಸಂಗಕ್ಕೆ ವಿಪರ್ಯಯದಲ್ಲಿ ಪರ್ಯವಸಾನವಿರುವುದರಿಂದ ಮುಕ್ತಿಯಾದಮೇಲೆಯೂ ಭೇದವನ್ನು ಪ್ರತಿಪಾದಿಸುವುದಕ್ಕಾಗಿ ಶ್ರುತಿಗಳನ್ನುದಾಹರಿಸುವ ಸಮಯದಲ್ಲಿ ಈ ವಾಕ್ಯವನ್ನುವ ಹರಿಸಿದ್ದು ಯುಕ್ತವೇ ಎಂದು ಸಿದ್ಧವಾಯಿತು ॥ ೨೬೮ ॥

ಪುನಃ ಅದ್ವೈತಿಗಳು ಆಶಂಕಿಸುವರು. 'ಯದ್ವೈ ತನ್ನ ಪಶ್ಯತಿ ಪಶ್ಯನ್ವೈ ತನ್ನ ಪಶ್ಯತಿ । ನ ಹಿ ದ್ರಷ್ಟುಃ ದೃಷ್ಟೇರ್ವಿಪರಿಲೋಪೋ ವಿದ್ಯತೇ । ಅವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ಪಶ್ಯೇತ್' ಎಂಬ ಶ್ರುತಿಯಲ್ಲಿ ಅವಿದ್ಯೆಯು ಇದ್ದರೂ ಅಹಂಕಾರ ಮೊದಲಾದ ಅವಿದ್ಯೆಯ ಕಾರ್ಯವು ನಾಶವಾದಪ್ರಯುಕ್ತವೇ ಕ್ರಿಯಾ ಕಾರಕ ಫಲರೂಪವಾದ ಅಂದರೆ ಜ್ಞಾನ ಇಂದ್ರಿಯ ವ್ಯವಹಾರ ಮೊದಲಾದುದು ಎರಡನೇ ವಸ್ತುವು ಇಲ್ಲವೆಂದು ಸುಪ್ತ ನಾದ ಆತ್ಮನಿಗೆ ಹೇಳಲ್ಪಡುವುದು. ಹೇಗೆಂದರೆ — ಬೃಹದಾರಣ್ಯಕ ೬ನೇ ಅಧ್ಯಾಯದಲ್ಲಿ 'ಆತ್ಮೈವಾಸ್ಯ ಜ್ಯೋತಿಃ' ಎನ್ನುವಲ್ಲಿ ಜ್ಯೋತಿಃಶಬ್ದದಿಂದ ಸುಪ್ತನಿಗೆ ಜ್ಞಾನವಿದೆ ಎಂದು ಹೇಳ ಲ್ಪಟ್ಟಿದೆ. ಮತ್ತು 'ಅಯಮಾತ್ಮಾ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಂ' ಈ ಜೀವನು ಪ್ರಾಜ್ಞರೂಪಿಯಾದ ಬ್ರಹ್ಮನಿಂದ ಆಲಿಂಗಿತನಾಗಿ ಹೊರಗೆ ಇರು ವುದನ್ನೂ ಒಳಗಿನದ್ದನ್ನೂ ಯಾವುದನ್ನೂ ತಿಳಿಯುವುದಿಲ್ಲ. ಎಂದು ಜ್ಞಾನವೇ ಇಲ್ಲವೆಂದು ಹೇಳ ಲ್ಪಟ್ಟಿದೆ. ಇದು ಎರಡೂ ವಿರುದ್ಧವು. ಎಂದಾಶಂಕಿಸಿ ಹೀಗೆ ಹೇಳಲ್ಪಡುತ್ತದೆ. ಸುಪ್ತನು, ಯತ್= ಯಾವುದನ್ನು, ನ ಪಶ್ಯತಿ=ನೋಡುವುದಿಲ್ಲವೆಂದು ಹೇಳಲ್ಪಟ್ಟಿದೆಯೋ, ತತ್ ವೈ=ಅದು ಹಾಗೆಯೋ,

ಪರಸ್ಪರ ವಿರೋಧವಿಲ್ಲವು. ಏಕೆಂದರೆ, ಪಶ್ಯನ್ ವೈ=ಜ್ಞಾನವುಳ್ಳವನೇ, ತತ್=ಅದನ್ನು, ನ ಪಶ್ಯತಿ=ನೋಡುವುದಿಲ್ಲ, ಹೀಗೆ ಹೇಳಲ್ಪಟ್ಟಿದೆ. ಜ್ಞಾನವು ಹೇಗೆ ಇರುವುದು. ದ್ರಷ್ಟುಃ= ನೋಡತಕ್ಕವನ, ದೃಷ್ಟೇಃ=ಜ್ಞಾನಕ್ಕೆ, ವಿಪರಿಲೋಪಃ=ವಿನಾಶವು, ನ ಹಿ ವಿದ್ಯತೇ=ಇರುವುದಿಲ್ಲ. ಅವಿನಾಶಿತ್ವಾತ್=ವಿನಾಶವಿಲ್ಲದಿರುವ ಜೀವನ ಸ್ವರೂಪವಾದುದರಿಂದ, ಜ್ಞಾನವುಳ್ಳವನೇ ಯಾವುದನ್ನು ನೋಡುವುದಿಲ್ಲವೆನ್ನುವುದು ಹೇಗೆ ಕೂಡುವುದು ಎಂದರೆ, ಯತ್=ಯಾವುದನ್ನು, ತತಃ=ತನ್ನಿಂದ, ಅನ್ಯತ್=ಬೇರೆಯಾವುದನ್ನು, ವಿಭಕ್ತಂ=ಭಿನ್ನವಾದುದನ್ನಾಗಿ, ಪಶ್ಯೇತ್= ನೋಡಲಾಪನೋ, ತತ್=ಅಂತಹುದು, ದ್ವಿತೀಯಂ ತು=ಎರಡನೇ ವಸ್ತುವಾದರೂ, ನ= ಇಲ್ಲ. ಅಂತೂ ವಿಷಯವೇ ಇಲ್ಲದಿರುವಪ್ರಯುಕ್ತ ನೋಡುವುದಿಲ್ಲವೆಂದೂ ನಿರ್ವಿಷಯಕವಾದ ಸ್ವರೂಪಜ್ಞಾನವಿದ್ದಪ್ರಯುಕ್ತ, ಪಶ್ಯನ್=ಜ್ಞಾನವುಳ್ಳವನೆಂದೂ ಹೇಳಲ್ಪಡುತ್ತಾನೆ. ಆದಕಾರಣ ಪರಸ್ಪರ ವಿರೋಧವಿಲ್ಲವು. ಈ ಪ್ರಕಾರ ಅವಿದ್ಯಾಕಾರ್ಯವು ನಾಶವಾದಪ್ರಯುಕ್ತವೇ ಯಾವಾಗ ಸುಷುಪ್ತನಿಗೂ ಭೇದವಿಲ್ಲವೆಂದಾಗುವುದೋ, ಆಗ ಮುಕ್ತಿಯಲ್ಲಿ ಅವಿದ್ಯೆಯು ಸಂಪೂರ್ಣ ನಿವೃತ್ತಿ ಯಾಗುತ್ತಿರಲು ಭೇದವು ಹೇಗೆ ತಾನೇ ಇರುವುದು, ಆದಕಾರಣ ಮುಕ್ತಿಯಾದ ಮೇಲೆಯೂ ಭೇದವು ಹೇಗೆ ತಾನೆ ಇರಬಹುದು, ಮುಕ್ತನಿಗೂ ಭೋಗಾದಿಗಳು ಹೇಗೆ ಸಂಭವಿಸಬಹುದು? ಎಂದು ಆಶಂಕಿಸಿದರೆ ಯೋಗ್ಯರೀತಿಯಿಂದ ಈ ವಾಕ್ಯವನ್ನು ವ್ಯಾಖ್ಯಾನಮಾಡುತ್ತಾರೆ.

**ಮೂ ॥ (೧) ನ ತು ತದ್ದ್ವಿತೀಯಮಸ್ತೀತಿ ಚ । (೨) ಯತ್ರ ತ್ವಸ್ಯ ದ್ವೈತತ್ವೇನ ನ ಪಶ್ಯತಿ ತದೇವ ದ್ವಿತೀಯಂ ನೇತ್ಯಾಹ । (೩) ಯತ್ತತೋಽನ್ಯದ್ವಿಭಕ್ತತ್ವೇನೈವ ಪಶ್ಯೇದಿತಿ ವಾಕ್ಯಶೇಷಾತ್ । (೪) ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ ॥ ಇತಿ ಹೇತೋಶ್ಚ ॥ ೨೬೯ ॥**

ಅ ॥ (೧) 'ನ ತು ತದ್ದ್ವಿತೀಯಮಸ್ತಿ' ಎಂಬೀ ಶ್ರುತಿಯು ಸುಷುಪ್ತಿಯಲ್ಲಿ ಭೇದಾಭಾವವನ್ನು ಹೇಳುವುದಿಲ್ಲ. ['ಶುಕ್ಲಸ್ಯ ನೀಲಸ್ಯ ಪಿಂಗಲಸ್ಯ ಹರಿತಸ್ಯ ಲೋಹಿತಸ್ಯ ಪೂರ್ಣಾಃ' ಶುಕ್ಲಾದಿರೂಪವುಳ್ಳ ವಾಸುದೇವ ಮೊದಲಾದ ಐದು ರೂಪಗಳಿಂದ ನಾಡಿಗಳು ಪೂರ್ಣಗಳಾಗಿವೆ, ಎಂದು ನಾಡಿಗಳಿಗೆ ಪರಸ್ಪರ ವಿಲಕ್ಷಣರೂಪವುಳ್ಳ ಭಗವದ್ರೂಪಗಳಿಂದ ವ್ಯಾಪ್ತಿಯು ಹೇಳಲ್ಪಟ್ಟಿದೆ. ಅದರಿಂದ ಆ ಭಗವದ್ರೂಪಗಳಿಗೆ ಭೇದವು ಪ್ರಾಪ್ತವಾಗಿಯದೆ. ಹಾಗೆಯೇ 'ತದ್ವಾ ಅಸ್ಯೈತದಾಪ್ತಕಾಮಮಕಾಮಂ ರೂಪಂ ಶುಕ್ಲಸ್ಯ' ಎಂಬೀ ವಾಕ್ಯದಿಂದ ಮೇಲಿನದ್ದಾದ, 'ಯದ್ದ್ವೈತಂ ನ ಪಶ್ಯತಿ' ಎನ್ನುವುದರಿಂದ ಮೊದಲಿನದ್ದಾದ ಅಸ್ಯ=ಈ ಪ್ರಾಜ್ಞರೂಪಿಯಾದ ಶ್ರೀ ಹರಿಯು, ತದ್ವಾ ಏತತ್ ರೂಪಂ=ಪ್ರಸಿದ್ಧವಾದ ಆ ಈ ರೂಪವು, ಆಪ್ತಕಾಮಂ= ಹೊಂದಲ್ಪಟ್ಟದ್ದೇ ಆದ ಕಾಮಗಳುಳ್ಳದ್ದು. (ಹೊಂದತಕ್ಕವುಗಳಲ್ಲ) ಅಥವಾ ಪೂರ್ಣಸುಖಸ್ವರೂಪನಾದುದರಿಂದ ಆತ್ಮನೇ ಕಾಮ್ಯನು. ಅಕಾಮಂ = ವಿಷಯಗಳನ್ನಿಚ್ಛಿಸದಿರುವುದು ಎಂಬೀ 'ಶುಕ್ಲಸ್ಯ' ಎನ್ನುವುದರಿಂದ ಮೇಲಿನದ್ದಾದ 'ಯದ್ದ್ವೈತಂ ನ ಪಶ್ಯತಿ' ಎನ್ನುವುದರಿಂದ ಮೊದಲಿನದ್ದಾದ ವಾಕ್ಯದಲ್ಲಿ ಷಷ್ಠೀ ವಿಭಕ್ತಿಯಿಂದ ರೂಪಕ್ಕೂ ರೂಪವುಳ್ಳವನಿಗೂ ಭೇದವು ಪ್ರತೀತವಾಗುವುದು. ಆ ಭೇದವನ್ನು ನಿರಾಕರಿಸುವುದಕ್ಕಾಗಿ 'ಯದ್ದ್ವೈತಂ ನ ಪಶ್ಯತಿ' ಇದು ಮೊದಲಾದ ವಾಕ್ಯಗಳು ಹೇಳಲ್ಪಡುತ್ತವೆ. 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ' ಎಂಬೀ ಅವ್ಯವಹಿತ ಪೂರ್ವವಾಕ್ಯದಲ್ಲಿ ಹೃದಯಶಬ್ದದಿಂದ ಪ್ರಸ್ತುತನಾದ ಪರಬ್ರಹ್ಮನು, ಯತ್=ಯಾವ ಕಾರಣದಿಂದ, ಶುಕ್ಲಮೊದಲಾದ ರೂಪವನ್ನು, ದ್ವೈತಂ=

ಮೂಲರೂಪದಿಂದಲೂ ಪರಸ್ಪರವಾಗಿಯೂ ಭಿನ್ನವಾದುದನ್ನು, ನ ಪಶ್ಯತಿ=ನೋಡುವುದಿಲ್ಲವೋ, ತತ್=ಆದಕಾರಣ, ತತ್ ದ್ವಿತೀಯಂ=ಆ ಎರಡನೇದ್ದು, ನಾಸ್ತಿ=ಇಲ್ಲವು. ಭಗವಂತನು ಶುಕ್ಲಾದಿರೂಪಗಳನ್ನು ಬೇರೆಯಾಗಿ ತಿಳಿಯದೆ ಇದ್ದರೂ ಏಕೆ ಭಿನ್ನವಾಗಲಾರದು. ನಾವು ಮುತ್ತಿನ ಚಿಪ್ಪನ್ನು ಬೆಳ್ಳಿಯೆಂದು ತಿಳಿದರೂ ಮುತ್ತಿನ ಚಿಪ್ಪಿನಿಂದ ಬೆಳ್ಳಿಯು ಭಿನ್ನವಲ್ಲವೆಂದಲ್ಲ. ಹೀಗೆ ಹೇಳಕೂಡದು ಪಶ್ಯನ್=ಸರ್ವಜ್ಞನೇ, ತತ್=ಆ ಶುಕ್ಲಾದಿರೂಪಗಳನ್ನು, ಭಿನ್ನವಾಗಿ ನ ಪಶ್ಯತಿ ವೈ=ನೋಡುವುದಿಲ್ಲ. ಹೀಗಾದರೆ ಜೀವ ಜಡಾತ್ಮಕವಾದ ಸರ್ವಪ್ರಪಂಚವೂ ಆ ಹರಿಯಿಂದ ಅಭಿನ್ನವೋ, ಅಲ್ಲವು. ಯತ್=ಯಾವ ಕಾರಣದಿಂದ, ಶ್ರೀ ಹರಿಯು, ಅನ್ಯತ್=ಜೀವಾದಿಗಳನ್ನು, ವಿಭಕ್ತಂ=ತನ್ನಿಂದ ಭಿನ್ನವಾದುದನ್ನಾಗಿ, ಪಶ್ಯೇತ್=ನೋಡುತ್ತಾನೋ, ತತ್=ಆದಕಾರಣ, ತತಃ=ಆ ಭಗವಂತನಿಂದ, ಅನ್ಯದೇವ=ಭಿನ್ನವೇ ಸರಿ. ಭಗವಂತನು ಭಿನ್ನವೆಂದು ಕಂಡರೂ ಭಿನ್ನವು ಏಕೆ ಆಗಬೇಕು. ಅಂಗುಲಿಯನ್ನು ಚುಚ್ಚಿ ಚಂದ್ರನು ಚಂದ್ರನಿಂದ ಭಿನ್ನನು ಇಬ್ಬರು ಚಂದ್ರರು ಎಂದು ನಾವು ನೋಡಿದಮಾತ್ರದಿಂದಲೇ ಭಿನ್ನನು ಆಗಲಾರನಷ್ಟೆ! ಹೀಗೆ ಹೇಳಕೂಡದು. ದ್ರಷ್ಟುಃ=ಪರಮೇಶ್ವರನ, ದೃಷ್ಟೇಃ=ಜ್ಞಾನಕ್ಕೆ, ವಿಪರಿಲೋಪಃ=ವೈಪರೀತ್ಯವು, ಅಯಾಥಾರ್ಥ್ಯವು, ನ ಹಿ ವಿದ್ಯತೇ=ಇರುವುದಿಲ್ಲ. ಅವಿನಾಶಿತ್ವಾತ್=ದೋಷವಿಲ್ಲದಿರುವುದರಿಂದಲೂ, ಬಾಧಿಸಲ್ಪಡದಿರುವುದರಿಂದಲೂ, (ಈ ಪ್ರಕಾರವಾಗಿ ಈ ಶ್ರುತಿಯು)] (೨) ಯತ್ ತತ್=ಯಾವ ಪ್ರಸ್ತುತರಾದ ಶುಕ್ಲಾದಿಸ್ವರೂಪರಾದ ವಾಸುದೇವಾದಿಗಳನ್ನು, ಬ್ರಹ್ಮ=ಭಗವಂತನು, ಮೂಲರೂಪಿಯು, ದ್ವೈತತ್ವೇನ=ತನ್ನಿಂದಲೂ ಪರಸ್ಪರವಾಗಿಯೂ ಭಿನ್ನವಾಗಿ, ನ ಪಶ್ಯತಿ=ನೋಡುವುದಿಲ್ಲವೋ, ತತ್=ಆ ವಾಸುದೇವಾದಿ ಸ್ವರೂಪವು, ದ್ವಿತೀಯಂ=ಭಿನ್ನವಾದುದು, ನ ಇತಿ ಏವ ಆಹ=ಆಗುವುದೇ ಇಲ್ಲವು ಎಂದೇ ಹೇಳುತ್ತದೆ. (ಸುಪ್ತಿಯಲ್ಲಿ ಸಕಲ ಭೇದಾಭಾವವನ್ನೂ ಹೇಳುವುದಿಲ್ಲ.) (೩) ('ನ ತು ತದ್ದ್ವಿತೀಯಮಸ್ತಿ' ಎನ್ನುವ ವಾಕ್ಯವು ಸಕಲ ಭೇದಾಭಾವವನ್ನು ಪ್ರತಿಪಾದಿಸುತ್ತದೆ ಎಂದೇಕೆ ಅಂಗೀಕರಿಸಬಾರದು ಎಂದರೆ) ಯತ್=ಯಾವ ಕಾರಣದಿಂದ, (ಮೂಲರೂಪಿಯು) ಯತ್=ಯಾವ ಜೀವಾದಿಗಳನ್ನು, ವಿಭಕ್ತತ್ವೇನೈವ=ತನ್ನಿಂದ ಭಿನ್ನವಾಗಿಯೇ, ಪಶ್ಯೇತ್=ನೋಡುವನೋ, ತತ್=ಆದಕಾರಣ, ತತ್=ಆ ಜೀವಾದಿಗಳು, ತತಃ=ಭಗವಂತನಿಂದ, ಅನ್ಯತ್ ಏವ=ಭಿನ್ನರೇ, ಇತಿ=ಹೀಗೆ, ವಾಕ್ಯಶೇಷಾತ್=ಶಿಷ್ಟವಾಕ್ಯದಿಂದ, (ಈ ವಾಕ್ಯವನ್ನು 'ತತೋಽನ್ಯದ್ವಿಭಕ್ತಂ ಯತ್ಪಶ್ಯೇತ್' ಎನ್ನುವುದರ ಅರ್ಥವನ್ನನುವಾದಮಾಡಿದ್ದೆಂದು ಇಟ್ಟುಕೊಳ್ಳಬೇಕು. ಅಥವಾ ಸದೃಶವಾದ ಶಾಖಾಂತರದ ಪಾಠವೆಂದು ಇಟ್ಟುಕೊಳ್ಳಬೇಕು. ಹೀಗೆ ಶಿಷ್ಟವಾಕ್ಯದಲ್ಲಿ ಎರಡನೇ ವಸ್ತುವು ಇದೆ ಎಂದೇ ಹೇಳಲ್ಪಟ್ಟದೆ. ಇದಕ್ಕೆ ಬೇರೆಯೇ ಅರ್ಥವು ಎಂದನ್ನಕೂಡದು. ಹಾಗಿದ್ದರೆ 'ವಿಭಕ್ತಂ ಯತ್ಪಶ್ಯೇತ್ ತನ್ನಾಸ್ತಿ' ಎನ್ನುವುದರಿಂದಲೇ ಪೂರ್ಣವಾಗುವುದರಿಂದ ಉಳಿದವಾಕ್ಯವು ವ್ಯರ್ಥವೇ ಆಗುವುದು.) (೪) ದ್ರಷ್ಟುಃ=ನೋಡತಕ್ಕವನ, ದೃಷ್ಟೇಃ=ಜ್ಞಾನಕ್ಕೆ, ವಿಪರಿಲೋಪಃ=ವ್ಯತ್ಯಾಸವು, ನ ಹಿ ವಿದ್ಯತೇ=ಇರುವುದಿಲ್ಲ. ಇತಿ ಹೇತೋಶ್ಚ=ಈ ಪ್ರಕಾರವಾದ ಹೇತುವಿನಿಂದಲೂ (ನಿರ್ವಿಶೇಷಚೈತನ್ಯಮಾತ್ರ ಉಳಿಯುವುದು ಎನ್ನುವುದು ಈ ವಾಕ್ಯಕ್ಕೆ ಅರ್ಥವಾಗಲಾರದು. ಈ ವಾಕ್ಯದಲ್ಲಿ ನೋಡುವವನಿಗೂ ಜ್ಞಾನಕ್ಕೂ ಸಂಬಂಧವನ್ನು ಹೇಳಿರುವುದರಿಂದ ನಿರ್ವಿಶೇಷತ್ವವು ಬಾಧಿತವಾಗುವುದು. ಅನುಪಪತ್ತಿಯೇ ಇಲ್ಲದಿರುವುದರಿಂದ ಔಪಚಾರಿಕವೆಂದೂ ಹೇಳಕೂಡದು. 'ದೃಷ್ಟೇಃ' ಎನ್ನುವುದರಿಂದಲೇ ಪೂರ್ಣವಾಗುವುದರಿಂದ 'ದ್ರಷ್ಟು' ಎಂದು ಗ್ರಹಣಮಾಡಿದ್ದು ವ್ಯರ್ಥವಾಗುವುದು. ಆದಕಾರಣ ಮುಕ್ತಿಯಲ್ಲಿ ಭೇದವದೆ ಎಂದಂಗೀಕರಿಸಿದ್ದು ಯುಕ್ತವೇ ಸರಿ) ॥ ೨೬ ॥

ಪುನಃ ಅದ್ವೈತಿಗಳು ಆಶಂಕಿಸುವರು. 'ಗತಾಃ ಕಲಾಃ ಪಂಚದಶ ಪ್ರತಿಷ್ಠಾಃ ದೇವಾಶ್ಚ ಸರ್ವೇ ಪ್ರತಿದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀ ಭವಂತಿ' ॥ (ಮುಕ್ತಿಕಾಲದಲ್ಲಿ ಜ್ಞಾನಿಯ) ಪಂಚದಶ ಕಲಾಃ=ದೇಹಾರಂಭಕಗಳಾದ ಪ್ರಾಣ ಮೊದಲಾದ ೧೫ ಕಲೆಗಳು, ಪ್ರತಿಷ್ಠಾಃ=ಸ್ವಕಾರಣಗಳನ್ನು, ಪ್ರತಿಗತಾಃ=ಹೊಂದಿದವುಗಳು, (ಆಗುತ್ತವೆ.) ದೇವಾಶ್ಚ ಸರ್ವೇ=ತದಭಿಮಾನಿಗಳಾದ ಎಲ್ಲಾ ದೇವತೆಗಳೂ, ಪ್ರತಿದೇವತಾಸು= ತಮ್ಮ ಮೂಲರೂಪಗಳಲ್ಲಿ. ಗತಾಃ=ಸೇರುವರು. ಕರ್ಮಾಣಿ=ಜ್ಞಾನಿಯಿಂದ ಮಾಡಲ್ಪಟ್ಟ ನಿವೃತ್ತಕರ್ಮಗಳೂ, ವಿಜ್ಞಾನಮಯಶ್ಚ ಆತ್ಮಾ=ವಿಜ್ಞಾನಮಯನಾದ ಜ್ಞಾನಿಯಾದ ಜೀವನೂ, ಪರೇ ಅವ್ಯಯೇ=ಪರಮಾತ್ಮನಲ್ಲಿ, ಸರ್ವೇ=ಸಮಸ್ತರೂ, ಏಕೀಭವಂತಿ=ಐಕ್ಯವನ್ನು ಹೊಂದುತ್ತಾರೆ. ಅಂತೂ ಮುಕ್ತಿಯನ್ನು ಹೊಂದಿದಮೇಲೆಯೂ ಭೇದವು ಹೇಳಲ್ಪಡುತ್ತದೆ ಎನ್ನುವುದು ಹೇಗೆ ಸಂಗತವಾಗುವುದು ಎಂದು ಅದ್ವೈತಿಗಳು ಆಶಂಕಿಸಿದರೆ, ಈ ವಾಕ್ಯವನ್ನು ಚೆನ್ನಾಗಿ ವ್ಯಾಖ್ಯಾನಮಾಡುತ್ತಾರೆ.

**ಮೂ ॥ ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತೀತ್ಯತ್ರಾಪ್ಯೇಕೀಭಾವೋ ಮತ್ಯೈಕ್ಯಂ ಕ್ಷೀರಾಬ್ಧ್ಯಾದಿಸ್ಥಿತ ತದ್ರೂಪಾಪೇಕ್ಷಯಾ ಸ್ಥಾನೈಕ್ಯಂ ವಾ ॥ ೨೭೦ ॥**

ಅ ॥ (ಗತಾಃ = ಮುಕ್ತರಾದ, ಪಂಚದಶಕಲಾಃ = ಪ್ರಾಣ ಮೊದಲಾದ ೧೫ ಕಲಾಭಿಮಾನಿ ದೇವತೆಗಳು ಇತರರೂ ಕೂಡ, ಪ್ರತಿದೇವತಾಸು=ದೇವತಾ ಪ್ರತಿಬಿಂಬರಾದ ಪ್ರಜೆಗಳಲ್ಲಿ, ಪ್ರತಿಷ್ಠಾಃ=ಸ್ಥಿತಿಕಾರಣರಾದ, ಸರ್ವೇ ದೇವಾಃ=ಎಲ್ಲಾ ದೇವತೆಗಳೂ, ಕರ್ಮಾಣಿ= ಕರ್ಮಾಭಿಮಾನಿಯಾದ ಪುಷ್ಕರನು, ವಿಜ್ಞಾನಮಯಶ್ಚ ಆತ್ಮಾ=ವಿಜ್ಞಾನಮಯನಾದ ಜೀವನು, ಸರ್ವೇ=ಇವರೆಲ್ಲರೂ, ಪರೇ ಅವ್ಯಯೇ = ಪರಮಾತ್ಮನನ್ನು ಹೊಂದಿ ಪರಮಾತ್ಮನಲ್ಲಿಯೇ, ಏಕೀಭವಂತಿ = ಇರುತ್ತಾರೆ. ಇತ್ಯತ್ರಾಪಿ = ಈ ವಾಕ್ಯದಲ್ಲಿಯೂ, ಏಕೀಭಾವಃ = ಏಕೀಭಾವವೆಂದರೆ, ಮತ್ಯೈಕ್ಯಂ = ಮತಿಗಳಿಗೆ ಐಕ್ಯವು ಕ್ಷೀರಾಬ್ಧಿಸ್ಥಿತ ತದ್ರೂಪಾಪೇಕ್ಷಯಾ = ಕ್ಷೀರಸಮುದ್ರದಲ್ಲಿರುವ ಭಗವದ್ರೂಪವನ್ನಪೇಕ್ಷಿಸಿ, ಸ್ಥಾನೈಕ್ಯಂ ವಾ=ಸ್ಥಾನೈಕ್ಯವಾಗಲೀ, ಕಥಿತಃ= ಹೇಳಲ್ಪಡುತ್ತದೆ.)

ತಾ ॥ (1) ವಿಷಯಗಳಿಗೆ ಐಕ್ಯವಿದ್ದುದರಿಂದ ಬುದ್ಧಿಗಳಿಗೆ ಐಕ್ಯವು. ಬುದ್ಧಿಗಳಿಗೆ ಐಕ್ಯವಿದ್ದುದರಿಂದ ಬುದ್ಧಿಯುಳ್ಳವರಿಗೂ ಐಕ್ಯವು, ಅಂದರೆ ಭಗವಂತನ ಮತಿಗೆ ಯಾವುದು ವಿಷಯವೋ ಅದನ್ನೇ ವಿಷಯೀಕರಿಸುವ ಮತಿಯುಳ್ಳವರೇ ಎಲ್ಲಾ ಮುಕ್ತರು. ಸಂಸಾರಾವಸ್ಥೆಯಲ್ಲಿದ್ದಂತೆಯೇ ಭಗವನ್ಮತಿಗೆ ವಿರುದ್ಧವಾದುದನ್ನು ವಿಷಯೀಕರಿಸುವ ಜ್ಞಾನವುಳ್ಳವರಲ್ಲ. ಹೀಗೆ ಲಕ್ಷಿತಲಕ್ಷಣೆಯು. ಮುಖ್ಯವಾದ ಅರ್ಥಕ್ಕೆ ಬಾಧದಿಂದ ಲಕ್ಷಣೆಯು. ಆ ಅರ್ಥಕ್ಕೂ ಪುನಃ ಬಾಧವಿದ್ದರೆ ಯಾವುದು ಲಕ್ಷಣೆಯೋ ಅದು 'ಲಕ್ಷಿತಲಕ್ಷಣಾ' ಎನ್ನಿಸುತ್ತದೆ (2) ಸ್ಥಾನವು ಒಂದೇಯಾದುದರಿಂದ ಸ್ಥಾನಿಗಳಲ್ಲಿಯೂ ಐಕ್ಯವೆಂದು ವ್ಯವಹಾರವು. (3) ಮೊದಲು ಬೇರೆ ಬೇರೆ ಬುದ್ಧಿಯುಳ್ಳವರು ಈಗ ಐಕಮತ್ಯವನ್ನು ಹೊಂದಿರುವರು. ಮೊದಲು ವಿರುದ್ಧ ಬುದ್ಧಿಯುಳ್ಳ ಬ್ರಾಹ್ಮಣರು ಈಗ ರಾಜನ ಮಂದಿರದಲ್ಲಿ ಐಕಮತ್ಯವನ್ನು ಹೊಂದಿರುತ್ತಾರೆ. ಹಾಗೆಯೇ ಪ್ರಕೃತದಲ್ಲಿಯೂ ಇಟ್ಟುಕೊಳ್ಳಬೇಕು. (4) 'ವಿಭೇದ ಜನಕೇಽಜ್ಞಾನೇ ನಾಶಮಾತ್ಯಂತಿಕಂ ಗತೇ । ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ ॥ ಯಾವನ್ಮೋಕ್ಷಂ ತು ಭೇದಃ

ಸ್ಯಾಜ್ಜೀವಸ್ಯ ಪರಮಸ್ಯ ಚ । ತತಃ ಪರಂ ನ ಭೇದೋಽಸ್ತಿ ಭೇದಹೇತೋರಭಾವತಃ ' ॥ ಇದು ಮೊದಲಾದ ವಾಕ್ಯಗಳನ್ನೂ ಹೀಗೆಯೇ ವ್ಯಾಖ್ಯಾನಮಾಡಬೇಕು ವಿಭೇದ ಜನಕೇ=ಭಗವನ್ಮತಿಗೆ ವಿಷಯವಾಗಿರುವುದಕ್ಕಿಂತ ವಿರುದ್ಧಾರ್ಥವನ್ನೂ ವಿಷಯೀಕರಿಸುವ ಜ್ಞಾನವನ್ನು ಹುಟ್ಟಿಸುವ, ಅಜ್ಞಾನೇ=ಸಂಸಾರಕಾರಣೀಭೂತವಾದ ಅಜ್ಞಾನವು ಆತ್ಯಂತಿಕಂ ನಾಶಂ = ಸಂಪೂರ್ಣ ನಾಶವನ್ನು, ಗತೇ=ಹೊಂದುತ್ತಿರಲು, ಆತ್ಮನಃ=ತನಗೆ, ಬ್ರಹ್ಮಣಃ=ಪರಬ್ರಹ್ಮನಿಂದ, ಭೇದಂ= ವಿರುದ್ಧವಾದ ಬುದ್ಧಿಯುಳ್ಳತನವನ್ನು, ಅಸಂತಂ=ಅಮಂಗಲವಾದುದನ್ನು, ಕಃ=ಯಾರು, ಕರಿಷ್ಯತಿ=ಮಾಡುವರು. ಯಾವನ್ಮೋಕ್ಷಂ ತು=ಮುಕ್ತಿಯಾಗುವತನಕ, ಜೀವಸ್ಯ ಪರಮಸ್ಯ ಚ=ಜೀವಪರಮಾತ್ಮರಿಗೆ, ಭೇದಃ=ವಿರುದ್ಧ ಮತಿಯು, ಸ್ಯಾತ್=ಆಗುವುದು, ತತಃ ಪರಂ= ಆ ಮೇಲೆ, ಭೇದಹೇತೋಃ=ವಿರುದ್ಧಮತಿಗೆ ಕಾರಣವಾದ ಅಜ್ಞಾನವೇ, ಅಭಾವತಃ=ಇಲ್ಲದಿರುವುದರಿಂದ, ಭೇದಃ=ವಿರುದ್ಧಮತಿಯು, ನಾಸ್ತಿ=ಇಲ್ಲವು ॥ ೨೮೦ ॥

ಮುಕ್ತನಿಗೆ ಪರಬ್ರಹ್ಮನಿಂದ ಮತ್ಯೈಕ್ಯವು ಸಿದ್ಧವಾದರೆ ಈ ವಾಕ್ಯವು ತದ್ವಿಷಯಕವು ಆಗಬಹುದು ಅದೇ ಹೇಗೆ ಕೂಡಬಹುದು ಎಂದಾಶಂಕಿಸಿದರೆ — ಆ ವಿಷಯದಲ್ಲಿ ಎರಡು ವಾಕ್ಯಗಳನ್ನು ಹೇಳುತ್ತಾರೆ —

ಮೂ ॥ ಕಾಮೇನ ಮೇ ಕಾಮ ಆಗಾದ್ಧೃದಯಾದ್ಧೃದಯಂ ಮೃತ್ಯೋಃ । ಯದಮೀಷಾಮದಃ ಪ್ರಿಯಂ ತದೈತೂಪ ಮಾಮಭಿ । ಬ್ರಹ್ಮಮತ್ಯನುಕೂಲಾ ಮೇ ಮತಿರ್ಮುಕ್ತೌ ಭವಿಷ್ಯತಿ । ಅತಃ ಪ್ರಾಯೋಽನುಕೂಲತ್ವಮಿದಾನೀಮಪಿ ಮೇಸ್ಥಿತಂ ॥ ೨೮೧ ॥

ಅ ॥ ಮೃತ್ಯೋಃ = ಸಂಹಾರಕನಾದ ಈಶ್ವರನ, ಕಾಮೇನ=ಇಚ್ಛೆಯನ್ನನುಸರಿಸಿಯೇ, ಮೇ=ನನಗೆ, ಕಾಮಃ=ಇಚ್ಛೆಯು, ಆಗಾತ್=ಮುಕ್ತಿಯಲ್ಲಿ ಬರಲಿ. ಮೃತ್ಯೋಃ=ಶ್ರೀಹರಿಯ, ಹೃದಯಾತ್ = ಸಂಕಲ್ಪವನ್ನನುಸರಿಸಿಯೇ, ಹೃದಯಂ = ಸಂಕಲ್ಪವು, ಆಗಾತ್ = ಬರಲಿ. ಅಮೀಷಾಂ=ಈ ಮೃತ್ಯುವಿಗೆ, ಯತ್ ಅದಃ ಪ್ರಿಯಂ=ಯಾವುದು ಈ ಪ್ರಿಯವಾದುದೋ, ತತ್ ಉಪ=ಅದೇ, ಮಾಂ ಅಭಿ=ನನ್ನ ಸಮೀಪಕ್ಕೆ, ಆ=ಚೆನ್ನಾಗಿ, ಏತು=ಬರಲಿ, (ಅಂದರೆ— ಅದೇ ನನಗೂ ಪ್ರಿಯವಾಗಲಿ, ಎಂದು ಮುಕ್ತಿಯನ್ನು ಬಯಸುವವನು ಪ್ರಾರ್ಥಿಸುವನು )ಮೇ= ನನ್ನ, ಮತಿಃ=ಬುದ್ಧಿಯು, ಬ್ರಹ್ಮಮತ್ಯನುಕೂಲಾ=ಬ್ರಹ್ಮನ ಬುದ್ಧಿಗೆ ಅನುಕೂಲವಾದುದು, ಮುಕ್ತೌ=ಮುಕ್ತಿಯಲ್ಲಿ, ಭವಿಷ್ಯತಿ=ಆಗುವುದು. ಅತಃ=ಆದಕಾರಣ ಪ್ರಾಯೋಽನುಕೂಲತ್ವಂ= ಪ್ರಾಯಶಃ ಅನುಕೂಲ್ಯವು, ಇದಾನೀಮಪಿ=ಜೀವನ್ಮುಕ್ತ್ಯವಸ್ಥೆಯಲ್ಲಿಯೂ, ಮೇ=ನನಗೆ, ಸ್ಥಿತಂ=ಇದೆ ॥ ೨೮೧ ॥

ಮುಕ್ತರಿಗೆ 'ಪರಮೇಶ್ವರನಿಂದ ಸ್ಥಾನೈಕ್ಯವದೆ' ಎನ್ನುವುದು ಏಕೆ ಅಂಗೀಕರಿಸಬೇಕು. ಸ್ಥಾನೈಕ್ಯವಿದ್ದರೆ 'ಪರೇಽವ್ಯಯೇ' ಎಂಬೀ ವಾಕ್ಯವು ಸ್ಥಾನೈಕ್ಯ ವಿಷಯಕವಾಗುತ್ತಿತ್ತು ಎಂದಾಶಂಕಿಸಿದರೆ — ಈ ವಿಷಯದಲ್ಲಿಯೂ ಎರಡು ಶ್ರುತಿಗಳನ್ನು ಉದಾಹರಿಸುತ್ತಾರೆ —

ಮೂ ॥ ಯೇನಾಕ್ರಮಂತ್ಯೃಷಯೋ ಹ್ಯಾಪ್ತಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಂ । ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ ॥ ಇತ್ಯಾದಿ ಶ್ರುತಿಭ್ಯಃ ॥ ೨೮೨ ॥

ಅ ॥ (೧) ಯತ್ರ = ಯಾವ ಲೋಕದಲ್ಲಿ, ಸತ್ಯಸ್ಯ = ಪರಮೇಶ್ವರನಿಗೆ, ಪರಮಂ ನಿಧಾನಂ = ಪ್ರಕಟವಾಗಿ ಸಂನಿಧಾನವದೆಯೋ, ತತ್ = ಆ ಲೋಕವನ್ನು, ಆಪ್ತಕಾಮಾಃ = ಕೃತಾರ್ಥರಾದ, ಋಷಯಃ = ಋಷಿಗಳು, ಯೇನ = ಯಾವ ದೇವಯಾನಮಾರ್ಗದಿಂದ, ಆಕ್ರಮಂತಿ = ಹೋಗುತ್ತಾರೆ. (೨) ಏತಂ = ಈ, ಆನಂದಮಯಂ ಆತ್ಮಾನಂ = ಆನಂದರೂಪಿಯಾದ ಶ್ರೀ ಹರಿಯನ್ನು, ಉಪಸಂಕ್ರಾಮತಿ = ಸಮೀಪಿಸುತ್ತಾನೆ. ಇತ್ಯಾದಿ ಶ್ರುತಿಭ್ಯಃ = ಇವು ಮೊದಲಾದ ಶ್ರುತಿಗಳಿಂದ ॥ ೨೭೨ ॥

ಹಾಗಾದರೆ ಈ ವಾಕ್ಯಕ್ಕೆ ಸಾಕ್ಷಾತ್ ಐಕ್ಯರೂಪವಾದ ಅರ್ಥವು ಕೂಡದಿದ್ದರೆ ಅದನ್ನು ಬಿಟ್ಟು ಲಕ್ಷಣಾ ಎಂದು ಆಶ್ರಯಿಸಬೇಕು. ಮುಖ್ಯಾರ್ಥದಲ್ಲಿ ಅನುಪಪತ್ತಿಯನ್ನು ಕಾಣಲಾರೆವು. ಆದಕಾರಣ ಲಕ್ಷಣೆಯೆಂದು ಅಂಗೀಕರಿಸಿದ್ದು ಹೇಗೆ ಸಂಗತವಾಗುವುದು ಎಂದರೆ ಅಂತರಾನುಪಪತ್ತಿಯನ್ನು ತೋರಿಸುತ್ತಾರೆ —

ಮೂ ॥ (೧) ಸ್ವರೂಪೈಕ್ಯಾಭಿಪ್ರಾಯೇ ಕರ್ಮಾಣಿ ವಿಜ್ಞಾನಮಯಶ್ಚೇತಿ ನ ಯುಜ್ಯತೇ । (೨) ನ ಹಿ ತತ್ಪಕ್ಷೇಽಪಿ ಕರ್ಮಣಾಂ ಬ್ರಹ್ಮೈಕ್ಯಂ ಮುಕ್ತಾವಸ್ತಿ । (೩) ನಿವೃತ್ತ್ಯಭಿಪ್ರಾಯೇ ಚ ಪಂಚದಶಕಲಾನಾಮಪಿ ಸಮತ್ವಾತ್ । (೪) ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿ ದೇವತಾಸ್ವಿತ್ಯನ್ಯಾಸಾಂ ಕಲಾನಾಂ ಗಮನಮುಕ್ತ್ವಾ ಕರ್ಮಣಾಂ ವಿಜ್ಞಾನಾತ್ಮನಶ್ಚೈಕೀಭಾವಕಥನಂ ವ್ಯರ್ಥಂ ಸ್ಯಾತ್ । (೫) ವಿಶೇಷಾಭಾವಾತ್ । (೬) ನ ಚ ಜ್ಞಾನನಿವೃತ್ತಸ್ಯ ರಜತಸ್ಯ ಶುಕ್ತ್ಯೈಕೀಭಾವವ್ಯವಹಾರೋಽಸ್ತಿ । (೭) ಪರೇಽವ್ಯಯ ಇತ್ಯಧಿಕರಣತ್ವಕಥನಂ ಚ ಭೇದಜ್ಞಾಪಕಂ । (೮) ಅನ್ಯಥಾ ಪರ ಏವ ಭವತೀತಿ ನಿರ್ದೇಶಃ ಸ್ಯಾತ್ ॥ ೨೭೩ ॥

ಅ ॥ (೧) ಸ್ವರೂಪೈಕ್ಯಾಭಿಪ್ರಾಯೇ = (ಈ ವಾಕ್ಯವು) ಸಾಕ್ಷಾತ್ ಐಕ್ಯವೇ ಅಭಿಪ್ರಾಯವುಳ್ಳದ್ದು (ಎಂದಂಗೀಕರಿಸಿದರೆ) ಕರ್ಮಾಣಿ ವಿಜ್ಞಾನಮಯಶ್ಚ ಇತಿ = ಕರ್ಮಗಳು ವಿಜ್ಞಾನಮಯನೂ ಕೂಡ ಎಂದು ಹೇಳಿದ್ದು, ನ ಯುಜ್ಯತೇ = ಕೂಡುವುದಿಲ್ಲ. (ಅಂದರೆ ವಿಜ್ಞಾನಮಯನಾದ ಆತ್ಮನಂತೆಯೇ ಕರ್ಮಗಳಿಗೂ ಪರಬ್ರಹ್ಮನಿಂದ ಐಕ್ಯವನ್ನು ಹೇಳಿದ್ದು ಕೂಡಲಾರದು. ಏಕೆಂದರೆ) (೨) ತತ್ಪಕ್ಷೇಽಪಿ = ಮುಕ್ತನಿಗೆ ಬ್ರಹ್ಮನಿಂದ ಐಕ್ಯವನ್ನು ಹೇಳುವವರ ಪಕ್ಷದಲ್ಲಿಯೂ (ನಮ್ಮ ಪಕ್ಷದಲ್ಲಿ ಎಂತೂ ಸುತರಾಂ ಕೂಡಲಾರದು) ಕರ್ಮಣಾಂ = ಕರ್ಮಗಳಿಗೆ, ಬ್ರಹ್ಮೈಕ್ಯಂ = ಬ್ರಹ್ಮೈಕ್ಯವು, ಮುಕ್ತೌ = ಮುಕ್ತಿಯಲ್ಲಿ, ನ ಹಿ ಅಸ್ತಿ = ಇರುವುದಿಲ್ಲ. (ಅಂದರೆ ಅದ್ವೈತಿಗಳು ಕರ್ಮಶಬ್ದದಿಂದ ದೇವತೆಯನ್ನಂಗೀಕರಿಸದಿರುವುದರಿಂದ ಜಡಗಳಿಗೆ ಚಿದಾತ್ಮಕನಾದ ಬ್ರಹ್ಮನಿಂದ ಐಕ್ಯವನ್ನಂಗೀಕರಿಸಲಿಲ್ಲ. ಆದಕಾರಣ ಅಪಸಿದ್ಧಾಂತವು.) (೩) ('ಏಕೀಭವಂತಿ' ಎನ್ನುವುದಕ್ಕೆ) ನಿವೃತ್ತ್ಯಭಿಪ್ರಾಯೇ ಚ = ಜ್ಞಾನದಿಂದ ನಿವೃತ್ತಗಳಾಗುತ್ತವೆ ಎಂದಭಿಪ್ರಾಯವೆಂದಂಗೀಕರಿಸಿದರೆ, ಪಂಚದಶಕಲಾನಾಮಪಿ = ಹದಿನೈದು ಕಲೆಗಳಿಗೂ, ಸಮತ್ವಾತ್ = ನಿವೃತ್ತಿಯು ಸಮವಾದುದರಿಂದ, (ಅಂದರೆ 'ಕರ್ಮಾಣಿ ಏಕೀಭವಂತಿ' ಎನ್ನುವುದಕ್ಕೆ ನಿವೃತ್ತಗಳಾಗುತ್ತವೆ ಎಂದಭಿಪ್ರಾಯವಾಗಿದ್ದರೆ ೧೫ ಕಲೆಗಳಿಗೂ ನಿವೃತ್ತಿಯು ಸಮವಾದುದರಿಂದ ಕರ್ಮವೂ ಕಲಾದಲ್ಲಿಯೇ ಸೇರಿರುವುದರಿಂದ 'ಗತಾಃ ಕಲಾಃ ಷೋಡಶ'

ಎಂದೇ ಹೇಳಬೇಕಿದ್ದಿತು. ಪ್ರತ್ಯೇಕವಾಗಿ ನಿವೃತ್ತಿಯನ್ನು ಹೇಳಿದ್ದು ವ್ಯರ್ಥವಾಗುವುದು.) (೪) (ಅಲ್ಲದೆ ಕರ್ಮಹೊರತಾದ ಕಲೆಗಳಿಗೆ 'ಗತಾಃ' ಎಂಬೀ ಶಬ್ದದಿಂದ ಕರ್ಮಕ್ಕೆ 'ಏಕೀಭವಂತಿ' ಎಂಬೀ ಶಬ್ದಾಂತರದಿಂದ ನಿವೃತ್ತಿಯನ್ನು ಹೇಳಿದ್ದು ವ್ಯರ್ಥವಾಗುವುದು. ಅಲ್ಲದೆ ವಿಜ್ಞಾನರೂಪಿಯಾದ ಆತ್ಮನಿಗೂ ನಿವೃತ್ತಿಯು ಬರಬೇಕಾಗುವುದು. ಮತ್ತು ಕರ್ಮಗಳನ್ನು ವಿಜ್ಞಾನಾತ್ಮನೊಟ್ಟಿಗೆ ಹೇಳಿದ್ದೂ ವ್ಯರ್ಥವಾಗುವುದು. ಎಂದಭಿಪ್ರಾಯದಿಂದ ನಿರೂಪಿಸುವರು.) 'ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು' ಇತಿ=ಎನ್ನುವುದರಿಂದ ಅನ್ಯಾಸಾಂ ಕಲಾನಾಂ ಗಮನಂ ಉಕ್ತ್ವಾ=ಬೇರೆ ಕಲೆಗಳಿಗೆ ಗಮನವನ್ನು ಹೇಳಿ, ಕರ್ಮಣಾಂ ವಿಜ್ಞಾನಾತ್ಮನಶ್ಚ=ಕರ್ಮಗಳಿಗೂ ವಿಜ್ಞಾನರೂಪಿಯಾದ ಆತ್ಮನಿಗೂ, ಏಕೀಭಾವಕಥನಂ=ಐಕ್ಯವನ್ನು ಹೇಳಿರುವುದು, ವ್ಯರ್ಥಂ ಸ್ಯಾತ್ = ವಿರುದ್ಧಾರ್ಥವುಳ್ಳದ್ದು, ಆಗುವುದು. (೫) ವಿಶೇಷಾಭಾವಾತ್=ಅವರ ಮತದಲ್ಲಿ ವಿಶೇಷವಿಲ್ಲದಿರುವುದರಿಂದ, (ನಮ್ಮ ಮತದಲ್ಲಿಯಾದರೂ ಪ್ರತ್ಯೇಕವಾಗಿ ಹೇಳಿದ್ದಕ್ಕೆ ಪ್ರಯೋಜನವದೆ. 'ಕಲಾಭ್ಯಶ್ಚಾನ್ಯ ದೇವೇಭ್ಯಃ ಕರ್ಮ ಪ್ರತ್ಯವರಂ ಯತಃ । ಕಲಾಭ್ಯಃ ಪೃಥಗುಕ್ತಂ ತತ್ಪುಷ್ಕರಃ ಕರ್ಮ ಚೋಚ್ಯತೇ' ॥ ಎಂದು ಉಕ್ತವಾಗಿದೆ) (೬) (ಮತ್ತು ಶಕ್ತಿವೃತ್ತಿಯಿಂದ 'ಏಕೀಭವಂತಿ' ಎನ್ನುವುದಕ್ಕೆ ನಿವೃತ್ತಿಯೆಂದರ್ಥವಾಗುತ್ತದೆ ಎಂದನ್ನಕೂಡದು ಏಕೆಂದರೆ) ಜ್ಞಾನನಿವೃತ್ತಸ್ಯ ರಜತಸ್ಯ=ಜ್ಞಾನದಿಂದ ನಿವೃತ್ತವಾದ ರಜತಕ್ಕೆ ಶುಕ್ತ್ಯಾ=ಮುತ್ತಿನ ಚಿಪ್ಪಿನಿಂದ, ಏಕೀಭಾವವ್ಯವಹಾರಃ = ಐಕ್ಯವೆಂಬೀವ್ಯವಹಾರವು, ನ ಚ ಅಸ್ತಿ=ಇಲ್ಲವೇ ಇಲ್ಲ. (ಐಕ್ಯವಾದುದು ಪ್ರತ್ಯೇಕ ಹೇಗೆ ಇಲ್ಲವೋ ಹಾಗೆಯೇ ನಿವೃತ್ತವಾದುದೂ ಪ್ರತ್ಯೇಕವಿಲ್ಲ ಎಂಬೀ ಗೌಣೀವೃತ್ತಿಯಿಂದ ಎಂದೂ ಹೇಳಕೂಡದು ಹಾಗೆ ಹೇಳುವುದಾದರೆ ನಾವು ಹೇಳಿದ ಲಕ್ಷಣೆಯಲ್ಲಿ ಪ್ರದ್ವೇಷವು ಏತಕ್ಕೆ) (೭) ಪರೇ ಅವ್ಯಯೇ ಇತ್ಯಧಿಕರಣತ್ವಕಥನಂ ಚ=ಪರಮಾತ್ಮನಿಗೆ ವಿಜ್ಞಾನರೂಪಿಯಾದ ಆತ್ಮನನ್ನು ಕುರಿತು ಅಧಿಕರಣತ್ವವನ್ನು ಹೇಳಿದ್ದೂ ಕೂಡ, ಭೇದಜ್ಞಾಪಕಂ=ಭೇದವನ್ನೇ ತಿಳಿಸಿಕೊಡತಕ್ಕುದು. (ಅಧಿಕರಣಕ್ಕೂ ಅಧಿಕರ್ತವ್ಯವಾದುದಕ್ಕೂ ಲೋಕದಲ್ಲಿ ಭೇದವೇ ದೃಷ್ಟವಾಗಿದೆ.) (೮) ಅನ್ಯಥಾ=ಸ್ವರೂಪೈಕ್ಯವೇ ವಿವಕ್ಷಿತವಾಗಿದ್ದರೆ, 'ಪರ ಏವ ಭವತಿ' ಇತಿ=ಎಂದು, ನಿರ್ದೇಶಃ=ನಿರ್ದೇಶವು, ಸ್ಯಾತ್=ಇರುತ್ತಿತ್ತು. (ಪ್ರಯೋಗವು ನಮ್ಮಧೀನವಾಗಿರುವಾಗ ಅವಾಚಕವಾದ ಪದವನ್ನು ಏಕೆ ಪ್ರಯೋಗಿಸಿರುವರು ಎಂದು ಕರ್ತೃಪುರುಷನನ್ನೇ ಪ್ರಶ್ನಿಸಬಹುದು. ವೇದದಲ್ಲಿ ಆದರೂ ಪುರುಷನೇ ಇಲ್ಲವು. ಎಂದರೆ— ಹಾಗಾದರೆ ಕರ್ತನೇ ಪೂರ್ವೋತ್ತರಾನುಸಂಧಾನದಿಂದ ಹೇಳುವನು, ಅಂತೂ ಉಪಕ್ರಮಾದ್ಯಾನುಗುಣ್ಯವನ್ನು ವೇದದಲ್ಲಿ ಅನುಸರಿಸದೆ ಹೋಗಬೇಕಾಗುವುದು. ವಿಚಾರವೇ ವ್ಯರ್ಥವಾಗುವುದು ॥ ೨೭೩ ॥

ಹೀಗೆ ಆಂತರಾನುಪಪತ್ತಿಯನ್ನು ಹೇಳಿ ಬಾಹ್ಯವಾದ ಅನುಪಪತ್ತಿಯನ್ನು ಹೇಳುತ್ತಾ ಆ ಶ್ರುತಿಯ ವ್ಯಾಖ್ಯಾನರೂಪವಾದ ಶ್ರುತಿಯನ್ನು ಹೇಳುತ್ತಾರೆ —

**ಮೂ ॥ ಜೀವಸ್ಯ ಪರಮೈಕ್ಯಂ ತು ಬುದ್ಧಿಸಾರೂಪ್ಯಮೇವ ತು । ಏಕಸ್ಥಾನನಿವಾಸೋ ವಾ ವ್ಯಕ್ತಿಸ್ಥಾನಮಪೇಕ್ಷ್ಯ ಸಃ । ನ ಸ್ವರೂಪೈಕತಾ ತಸ್ಯ ಮುಕ್ತಸ್ಯಾಪಿ ವಿರೂಪತಃ । ಸ್ವಾತಂತ್ರ್ಯಪೂರ್ಣತೇಽಲ್ಪತ್ವ ಪಾರತಂತ್ರ್ಯೇ ವಿರೂಪತೇ ॥ ಇತಿ ಪರಮಶ್ರುತಿಃ ॥ ೨೭೪ ॥**

ಅ ॥ ಜೀವಸ್ಯ=ಜೀವನಿಗೆ, ಪರಮೈಕ್ಯಂ ತು=ಪರಬ್ರಹ್ಮನಿಂದ ಐಕ್ಯವೆಂದರೆ, ಬುದ್ಧಿಸಾರೂಪ್ಯಮೇವ=ಏಕವಿಷಯಕವಾದ ಬುದ್ಧಿಯಿರುವಿಕೆಯೇ, (ಅಂದರೆ ಜೀವನು ಯಾವುದನ್ನು

ತಿಳಿಯುವನೋ ಅದು ಪರಬ್ರಹ್ಮನ ಬುದ್ಧಿಯನ್ನನುಸರಿಸಿಯೇ. ಪರಮೇಶ್ವರನು ತಿಳಿದದ್ದೆನ್ನೆಲ್ಲಾ ತಿಳಿಯುವುದಿಲ್ಲ.) ಏಕಸ್ಥಾನನಿವಾಸೋ ವಾ=ಒಂದೇ ಸ್ಥಾನದಲ್ಲಿ ಆವಾಸವಾಗಲೀ, (ಐಕ್ಯವೆನ್ನಿಸುವುದು.) ಸ ತು=ಒಂದು ಸ್ಥಾನದಲ್ಲಿ ಆವಾಸವಾದರೂ, ವ್ಯಕ್ತಿಸ್ಥಾನಂ=ಭಗವಂತನ ಅಭಿವ್ಯಕ್ತಿ ಸ್ಥಾನವನ್ನು, ಅಪೇಕ್ಷ್ಯೈತು=ಅಪೇಕ್ಷಿಸಿಕೊಂಡೇ, (ಉಕ್ತವಾಗಿದೆ. ಒಂದು ಸ್ಥಾನದಲ್ಲಿ ಆವಾಸ ವೆನ್ನುವುದಾದರೂ ಸರ್ವದಾ ಅದೆ.) ತಸ್ಯ=ಆ ಜೀವನಿಗೆ, ಸ್ವರೂಪೈಕತಾ=ಪರಬ್ರಹ್ಮನಿಂದ ಸ್ವರೂಪೈಕ್ಯವು, ನ = ಇಲ್ಲ, ಮುಕ್ತಸ್ಯಾಪಿ = ಮುಕ್ತಿಯನ್ನು ಹೊಂದಿದವನಿಗೂ ಕೂಡ, ವಿರೂಪತಃ=ವಿರುದ್ಧಧರ್ಮವಿದ್ದುದರಿಂದ, (ಸ್ವರೂಪೈಕ್ಯವು ಇಲ್ಲ.) ಸ್ವಾತಂತ್ರ್ಯಪೂರ್ಣತೇ= ಸ್ವಾತಂತ್ರ್ಯಪೂರ್ಣತ್ವಗಳು, ಅಲ್ಪತ್ವಪಾರತಂತ್ರ್ಯೇ=ಅಲ್ಪತ್ವಪಾರತಂತ್ರ್ಯಗಳು. ವಿರೂಪತೇ= ವಿರುದ್ಧಧರ್ಮಗಳು, ಇತಿ=ಹೀಗೆ, ಪರಮಶ್ರುತಿಃ=ಪರಮಶ್ರುತಿಯು ॥ ೨೭೪ ॥

ಅದ್ವೈತಿಗಳು ಆಶಂಕಿಸುವರು— 'ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ' ಎಂಬೀ ಶ್ರುತಿಯಲ್ಲಿ ಮುಕ್ತಿಯಲ್ಲಿ ಜೀವನೇ ಬ್ರಹ್ಮನು ಆಗುವನೆಂದು ಹೇಳಲ್ಪಡುತ್ತದೆ. ಆದಕಾರಣ ಮುಕ್ತ್ಯನಂತರದಲ್ಲಿಯೂ ಭೇದವನ್ನೊಡಂಬಡುವುದು ಹೇಗೆ ಸಂಗತವಾಗುವುದೆಂದಾಶಂಕಿಸಿದರೆ —

**ಮೂ ॥ (೧) ಬ್ರಹ್ಮ ವೇದ ಬ್ರಹ್ಮೈವ ಭವತೀತ್ಯಾದಿ ಚ "ಸಂಪೂಜ್ಯ ಬ್ರಾಹ್ಮಣಂ ಭಕ್ತ್ಯಾ ಶೂದ್ರೋಽಪಿ ಬ್ರಾಹ್ಮಣೋ ಭವೇತ್" ಇತಿವತ್ । (೨) ಬೃಂಹಿತೋ ಭವತೀತ್ಯರ್ಥಃ । ನ ಹಿ ಬ್ರಾಹ್ಮಣಪೂಜಕಃ ಸ ಏವ ಬ್ರಾಹ್ಮಣೋ ಭವತಿ ॥ ೨೭೫ ॥**

ಅ ॥ (೧) (ಯಾರು) ಬ್ರಹ್ಮ=ಪರಬ್ರಹ್ಮನನ್ನು, ವೇದ=ತಿಳಿಯುತ್ತಾನೋ, (ಆತನು) ಬ್ರಹ್ಮೈವ ಭವತಿ=ಅಬ್ರಹ್ಮತ್ವವನ್ನು ಬಿಟ್ಟು ಬ್ರಹ್ಮನು ಆಗುತ್ತಾನೆ ಎಂದೇ ಹೇಳಲ್ಪಡುತ್ತದೆ. (ಯಾವ ಬ್ರಹ್ಮನು ಇವನಿಂದ ತಿಳಿಯಲ್ಪಡುತ್ತಾನೋ ಆ ಬ್ರಹ್ಮನೇ ಇವನು ಆಗುತ್ತಾನೆ ಎಂದು ಹೇಳಲ್ಪಡುವುದಿಲ್ಲ. ಅಂತಹ ಪದವು ಶ್ರುತವಾಗುವುದಿಲ್ಲ.) ಇತ್ಯಾದಿ ಚ=ಇದು ಮೊದಲಾದ ವಾಕ್ಯಗಳು. ಶೂದ್ರೋಽಪಿ=ಶೂದ್ರನೂ ಕೂಡ, ಭಕ್ತ್ಯಾ=ವಿಶ್ವಾಸದಿಂದ, ಬ್ರಾಹ್ಮಣಂ= ಬ್ರಾಹ್ಮಣನನ್ನು, ಸಂಪೂಜ್ಯ=ಪೂಜಿಸಿ, ಬ್ರಾಹ್ಮಣಃ=ಬ್ರಾಹ್ಮಣನು, ಭವೇತ್=ಆಗುವನು. ಇತಿವತ್=ಈ ವಾಕ್ಯದಂತೆಯೇ ವ್ಯಾಖ್ಯಾನಮಾಡತಕ್ಕುದು. (ಅಂದರೆ — 'ಸಂಪೂಜ್ಯ' ಎಂಬೀ ವಾಕ್ಯದಲ್ಲಿ ಬ್ರಾಹ್ಮಣನನ್ನು ಪೂಜಿಸತಕ್ಕ ಶೂದ್ರನಿಗೆ ಬ್ರಾಹ್ಮಣತ್ವವೇ ಹೇಳಲ್ಪಡುತ್ತದೆ ಪೂಜಿಸಿಕೊಂಡ ಬ್ರಾಹ್ಮಣನ ಐಕ್ಯವಲ್ಲವಷ್ಟೆ! ಹಾಗೆಯೇ ಪ್ರಕೃತವೂ ಇಟ್ಟುಕೊಳ್ಳಬೇಕು.) (೨) [ಬ್ರಾಹ್ಮಣ ಪೂಜಕನಾದ ಶೂದ್ರನಿಗೆ ಬ್ರಾಹ್ಮಣಾಂತರತ್ವದಂತೆ ಅನೇಕ ಬ್ರಹ್ಮರೇ ಇಲ್ಲದಿರುವುದರಿಂದ ಬ್ರಹ್ಮಾಂತರತ್ವವು (ಮತ್ತೊಬ್ಬ ಬ್ರಹ್ಮನೆನ್ನುವುದು) ಕೂಡಲಾರದು. ಆದ ಕಾರಣ ತಿಳಿಯಲ್ಪಟ್ಟ ಬ್ರಹ್ಮೈಕ್ಯವೇ ಪ್ರಾಪ್ತವಾಗುವುದೆಂದಾಶಂಕಿಸಿದರೆ —] ಬೃಂಹಿತಃ ಭವತಿ=ಪೂರ್ಣನು ಆಗುತ್ತಾನೆ. ಇತಿ ಅರ್ಥಃ=ಹೀಗೆ ಅಭಿಪ್ರಾಯವು. (ಬ್ರಹ್ಮಶಬ್ದವು ವೃದ್ಧಿರೂಪಯೋಗ ನಿಮಿತ್ತಕವು. ಅವಯವಾರ್ಥವನ್ನಪೇಕ್ಷಿಸದೆ ವ್ಯಕ್ತಿವಿಶೇಷದಲ್ಲಿ ರೂಢವಲ್ಲ. ಅಂತೂ ಅನೇಕ ಬ್ರಹ್ಮರು ಕೂಡುವುದರಿಂದ ಅನುಪಪತ್ತಿಯಿಂದಲೂ ಈ ಅರ್ಥವು ಲಬ್ಧವಾಗುವುದಿಲ್ಲ.) ಬ್ರಾಹ್ಮಣ ಪೂಜಕಃ= ಬ್ರಾಹ್ಮಣನನ್ನು ಪೂಜಿಸತಕ್ಕವನು, ಸ ಏವ ಬ್ರಾಹ್ಮಣಃ=ಯಾರು ಅವನಿಂದ ಪೂಜಿಸಲ್ಪಟ್ಟದ್ದಾನೋ ಆ ಬ್ರಾಹ್ಮಣನೇ, ನ ಹಿ ಭವತಿ=ಆಗುವುದಿಲ್ಲವಷ್ಟೆ! ॥ ೨೭೫ ॥

ಅಥವಾ 'ಬ್ರಹ್ಮವೇದ ಬ್ರಹ್ಮೈವ ಭವತಿ' ಎನ್ನುವಲ್ಲಿ ೧ನೇ ಬ್ರಹ್ಮಶಬ್ದವು ಪರಮಾತ್ಮವಾಚಕವು. ೨ನೇದ್ದು ಜೀವವಾಚಕವು. ಯದ್ಯಪಿ ಜೀವನು ಪರಬ್ರಹ್ಮನನ್ನು ತಿಳಿದಿರುವನು, ಬ್ರಹ್ಮವಿದ್ಯೆ ಮೊದಲಾದ ಬೇಕಾದ ಸಾಧನ ಸಂಪತ್ತಿಗಳನ್ನು ಮಾಡುವನು, ಆದಾಗ್ಯೂ ಜೀವನೇ ಆಗುತ್ತಾನೆ. ಪಾರತಂತ್ರ್ಯ ಮೊದಲಾದ ಜೀವತ್ವವನ್ನು ಬಿಟ್ಟು ಯಾವಾಗಲೂ ಪರಬ್ರಹ್ಮತ್ವವನ್ನು ಹೊಂದುವುದಿಲ್ಲ. ಹೀಗೆ ಶ್ರುತಿಗೆ ಅರ್ಥಾಂತರವನ್ನು ಅಭಿಪ್ರಾಯ ಮಾಡಿಕೊಂಡು ಅದನ್ನು ಸಮರ್ಥಿಸುವುದಕ್ಕಾಗಿ ೨ ಶ್ರುತಿಗಳನ್ನೂ, ೧ ಪುರಾಣ ವಾಕ್ಯವನ್ನೂ ಹೇಳುತ್ತಾರೆ —

**ಮೂ ॥ (೧) ಬ್ರಹ್ಮಾಣಿ ಜೀವಾಃ ಸರ್ವೇಽಪಿ ಪರಬ್ರಹ್ಮಾಣಿ ಮುಕ್ತಿಗಾಃ। ಪ್ರಕೃತಿಃ ಪರಮಂ ಬ್ರಹ್ಮ ಪರಮಂ ಮಹದಚ್ಯುತಃ। ತಸ್ಮಾನ್ನ ಮುಕ್ತಾ ನ ಚ ಸಾ ನ ಕ್ವಚಿದ್ವಿಷ್ಣುವೈಭವಂ । ಪ್ರಾಪ್ನುವಂತಿ ಸ ಏವೈಕಃ ಸ್ವತಂತ್ರಃ ಪೂರ್ಣಷಡ್ಗುಣಃ ॥ ಇತಿ ಪರಮಶ್ರುತಿಃ ॥ (೨) ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ । (೩) ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂ ನೈವ ಶಕ್ಯತೇ । ತದ್ಯತ್ಸ್ವಭಾವಃ ಕೈವಲ್ಯಂ ಸಭವಾನ್ಕೇವಲೋ ಹರೇ ॥ ಇತಿ ಚ ॥ ೨೭೬ ॥**

ಅ ॥ (೧) ಸರ್ವೇಽಪಿ ಜೀವಾಃ=ಎಲ್ಲಾ ಜೀವರೂ (ಮುಕ್ತರೂ ಅಮುಕ್ತರೂ ಕೂಡ), ಬ್ರಹ್ಮಾಣಿ = ಬ್ರಹ್ಮಶಬ್ದ ವಾಚ್ಯರು. ಮುಕ್ತಿಗಾಸ್ತು = ಮುಕ್ತಿಯನ್ನು ಹೊಂದಿದವರಾದರೂ, ಪರಬ್ರಹ್ಮಾಣ್ಯಪಿ=ಪರಬ್ರಹ್ಮಶಬ್ದವಾಚ್ಯರೂ ಆಗತ್ತಾರೆ. ಪ್ರಕೃತಿಃ=ಮಹಾಲಕ್ಷ್ಮಿಯು, ಪರಮಂ ಬ್ರಹ್ಮ=ಪರಬ್ರಹ್ಮಶಬ್ದವಾಚ್ಯಳು. ('ಅತಿಶಯ' ಎಂಬೀ ಅರ್ಥದಲ್ಲಿ ಪರಶಬ್ದದ ಮೇಲೆ 'ಮ' ಪ್ರತ್ಯಯವು.) ಅಚ್ಯುತಃ=ನಾಶರಹಿತನಾದ ಶ್ರೀಹರಿಯು, ಪರಮಂ ಮಹತ್=ಪರಮ ಮಹತ್ ಬ್ರಹ್ಮಶಬ್ದ ವಾಚ್ಯನು. ತಸ್ಮಾತ್=ಆದಕಾರಣ, ಅಂದರೆ — ಸ್ವಾಭಾವಿಕವಾಗಿಯೇ ತಾರತಮ್ಯ ವಿದ್ದಪ್ರಯುಕ್ತ, ಮುಕ್ತಾಃ=ಮುಕ್ತರೂ, ಸಾ=ಆ ಪ್ರಕೃತಿಯು, ಇವರೆಲ್ಲರೂ, ಕ್ವಚಿತ್=ಯಾವದೇಶದಲ್ಲಿಯೂ, ಯಾವ ಕಾಲದಲ್ಲಿಯೂ, ವಿಷ್ಣುವೈಭವಂ=ಶ್ರೀ ಹರಿಯ ಐಶ್ವರ್ಯವನ್ನು, ನ ಆಪ್ನುವಂತೀತಿ ನ ಇತಿ ನ=ಹೊಂದುವುದಿಲ್ಲವೆಂದು ಅಲ್ಲವೆಂದು ಅಲ್ಲ. ಹೊಂದುವುದೇ ಇಲ್ಲವು. ಸ ಏವ ಏಕಃ = ಆ ಒಬ್ಬ ಹರಿಯೇ, ಸ್ವತಂತ್ರಃ = ಸ್ವಾತಂತ್ರ್ಯವುಳ್ಳವನು, ಪೂರ್ಣಷಡ್ಗುಣಃ=ಪರಿಪೂರ್ಣಗಳಾದ ಆರು ಗುಣಗಳುಳ್ಳವನು. ಇತಿ=ಹೀಗೆ, ಪರಮಶ್ರುತಿಃ=ಪರಮಶ್ರುತಿಯು. (೨) ಎಲೋ ವಿಷ್ಣುವೇ, ಮಾತ್ರಯಾ=ಮಿತಿಯಿಂದ, ಪರಃ=ದಾಟಿದವನು, (ಅಸಿ=ಆಗಿರುತ್ತಿ,) ತನ್ವಾ=ಶರೀರದಿಂದಲೇ, ವೃಧಾನ=ಪೂರ್ಣನೇ, (ಕೀರ್ತಿಮಾತ್ರದಿಂದಲ್ಲ.) ತೇ=ಇಂತಹ ನಿನ್ನ, ಮಹಿತ್ವಂ=ಮಹಿಮೆಯನ್ನು, (ಯಾರೂ) ನ ಅನ್ವಶ್ನುವಂತಿ=ಹೊಂದುವುದಿಲ್ಲ. (೩) ಬ್ರಹ್ಮೇಶಾನಾದಿಭಿಃ=ಬ್ರಹ್ಮ ರುದ್ರ ಮೊದಲಾದ, ದೇವೈಃ=ದೇವತೆಗಳಿಂದ, ಯತ್ ಕೈವಲ್ಯಂ=ಯಾವ ಸರ್ವೋತ್ಕೃಷ್ಟತ್ವವು, ನೈವ ಶಕ್ಯತೇ=ಹೊಂದಲುಶಕ್ಯವೇ ಆಗುವುದಿಲ್ಲವೋ, ತತ್=ಅದು, ಯತ್ಸ್ವಭಾವಃ=ಯಾರ ನೈಸರ್ಗಿಕ ಸ್ವರೂಪವೋ, ಹರೇ=ಎಲೋ ಶ್ರೀ ಹರಿಯೇ, ಸ ಭವಾನ್ ಕೇವಲಃ=ಅಂತಹ ನೀನೇ ಸರ್ವೋತ್ತಮನು, ಇತಿ ಚ=ಹೀಗೂ ಉಕ್ತವಾಗಿದೆ॥೨೭೬॥

ಪುನಃ ಅದ್ವೈತಿಗಳು ಆಶಂಕಿಸುವರು — 'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಪೂರ್ವದಲ್ಲಿಯೂ ಬ್ರಹ್ಮನೇ ಆಗಿ (ಅಂದರೆ — ಅವಿದ್ಯೆಯಿಂದ ಆವೃತವಾದ ಬ್ರಹ್ಮತ್ವಉಳ್ಳವನಾಗಿ) ಬ್ರಹ್ಮನನ್ನು ಹೊಂದುತ್ತಾನೆ. (ಅಂದರೆ — ಈಗ ಅವಿದ್ಯೆಯು ನಿವೃತ್ತವಾಗೋಣ ಬ್ರಹ್ಮನಿಂದ

ಐಕ್ಯವನ್ನು ಹೊಂದುತ್ತಾನೆ.) ಎಂದು ಈ ಶ್ರುತಿಯಲ್ಲಿ ಮುಕ್ತನಿಗೆ ಪರಬ್ರಹ್ಮನಿಂದ ಐಕ್ಯವು ಹೇಳಲ್ಪಡುತ್ತದೆ. ಇಲ್ಲಿ ಹಿಂದಿನಂತೆಯೇ ಅರ್ಥಾಂತರವು ಕೂಡಲಾರದು. ಆದಕಾರಣ ಮುಕ್ತಿಯ ಅನಂತರದಲ್ಲಿಯೂ ಭೇದವು ಹೇಳಲ್ಪಡುತ್ತದೆ ಎನ್ನುವುದು ಹೇಗೆ ಸಂಗತವಾಗುವುದು ಎಂದಾಶಂಕಿಸಿದರೆ, ಈ ಶ್ರುತಿಯನ್ನು ವ್ಯಾಖ್ಯಾನ ಮಾಡತಕ್ಕ ಶ್ರುತ್ಯಂತರವನ್ನು ಹೇಳುತ್ತಾರೆ —

**ಮೂ ||** **ಯಥಾಽಪಿಯಂತಿ ತೇಜಾಂಸಿ ಮಹಾತೇಜಸಿ ಭಾಸ್ಕರೇ | ಪೃಥಕ್ಪೃಥಕ್ಸ್ಥಿತಾನ್ಯಹ್ನಿ ಸ್ವರೂಪೈರಪಿ ಸರ್ವಶಃ | ಪರೇ ಬ್ರಹ್ಮಣಿ ಜೀವಾಖ್ಯ ಬ್ರಹ್ಮಾಣ್ಯಪ್ಯಪಿಯಂತಿ ಹಿ | ಮುಕ್ತೌ ಪೃಥಕ್ಸ್ಥಿತಾನ್ಯೇವ ತದನ್ಯೇಷಾಮದರ್ಶನಂ | ಅಪ್ಯಯೋಽಯಂ ಸಮುದ್ದಿಷ್ಟೋ ನ ಸ್ವರೂಪೈಕತಾ ಕ್ವಚಿತ್ || ಇತಿ ನಾರಾಯಣ ಶ್ರುತಿಃ || ೨೭೭ ||**

ಅ || ಸ್ವರೂಪೈಃ = ಸ್ವರೂಪಗಳಿಂದ, ಪೃಥಕ್ ಪೃಥಕ್ = ಬೇರೆ ಬೇರೆಯಾಗಿ, ಸ್ಥಿತಾನ್ಯೇವ=ಇರುವಂತಹ, ಸರ್ವಶೋಽಪಿ=ಎಲ್ಲಾ, ತೇಜಾಂಸಿ=ನಕ್ಷತ್ರ ಮೊದಲಾದವುಗಳು, ಮಹಾತೇಜಸಿ = ಮಹಾತೇಜೋರೂಪನಾದ, ಭಾಸ್ಕರೇ = ಸೂರ್ಯನಲ್ಲಿ, ಅಹ್ನಿ = ಹಗಲಿನಲ್ಲಿ, ಯಥಾ=ಹೇಗೆ, ಅಪಿಯಂತಿ=ಸೇರುತ್ತವೋ, ತಥಾ=ಹಾಗೆಯೇ, ಜೀವಾಖ್ಯ ಬ್ರಹ್ಮಾಣ್ಯಪಿ= ಜೀವರೆಂದು ಹೆಸರುಳ್ಳ ಬ್ರಹ್ಮರೂ ಕೂಡ, ಮುಕ್ತೌ=ಮುಕ್ತಿಯಲ್ಲಿ, ಪೃಥಕ್ ಪೃಥಕ್=ಬೇರೆ ಬೇರೆಯಾಗಿ, ಸ್ಥಿತಾನ್ಯೇವ = ಇರುವಂತಹವುಗಳಾಗಿಯೇ, ಪರೇ ಬ್ರಹ್ಮಣಿ = ಪರಬ್ರಹ್ಮನಲ್ಲಿ, ಅಪಿಯಂತಿ ಹಿ=ಸೇರುತ್ತಾರೆ. ತದನ್ಯೇಷಾಂ=ಅಮುಕ್ತರಿಗೆ, ಅದರ್ಶನಂ=ಅದರ್ಶನ ವಿಶಿಷ್ಟವಾದ ಪ್ರಾಪ್ತಿಯೇ, ಅಯಂ ಅಪ್ಯಯಃ = ಈ ಅಪ್ಯಯವು, ಸಮುದ್ದಿಷ್ಟಃ = ಹೇಳಲ್ಪಟ್ಟಿದೆ. ಕ್ವಚಿತ್=ಎಲ್ಲಿಯೂ, ಸ್ವರೂಪೈಕತಾ=ಸ್ವರೂಪೈಕ್ಯವು, ನ ಹಿ=ಇಲ್ಲವೇ ಇಲ್ಲ. ಇತಿ=ಹೀಗೆ, ನಾರಾಯಣಶ್ರುತಿಃ=ನಾರಾಯಣಶ್ರುತಿಯು.

ತಾ || ಇದರಿಂದ 'ಬ್ರಹ್ಮೈವ ಸನ್=ಪಾರತಂತ್ರ್ಯ ಮೊದಲಾದ ಜೀವತ್ವವನ್ನು ಬಿಡದೇನೇ ಬ್ರಹ್ಮ=ಪರಬ್ರಹ್ಮನನ್ನು, ಅಪ್ಯೇತಿ=ಪ್ರವೇಶಮಾಡುತ್ತಾನೆ.' ಎಂದು ವ್ಯಾಖ್ಯಾತವಾಯಿತು||೨೭೭||

(1) ಇದೇ ರೀತಿಯಾಗಿ 'ಮುಕ್ತರಿಗೆ ಐಕ್ಯವನ್ನು ಪ್ರತಿಪಾದಿಸುವುದರಂತೆ ತೋರುವ ಎಲ್ಲಾ ಆಗಮ ವಾಕ್ಯಗಳನ್ನೂ' ಸಾದೃಶ್ಯಾದ್ಯರ್ಥವುಳ್ಳವುಗಳನ್ನಾಗಿಯೇ ಕೂಡಿಸಬೇಕು. (2) ಹೀಗೆ ಮುಕ್ತಿಯಲ್ಲಿಯೂ ಭೇದವಿದ್ದುದರಿಂದ ಅವಾಂತರಸತ್ಯತ್ವಪರವಾಗಲಾರದೆಂದು ಸಿದ್ಧವಾಯಿತು. (3) 'ನ ಚಾಭೇದೇ ಕಶ್ಚಿದಾಗಮಃ' 'ಸಂತಿ ಚ ಭೇದೇ ಸರ್ವಾಗಮಾಃ' ಎಂದು ಹೇಳಿದ್ದನ್ನುಪಪಾದಿಸಿ ಉಪಸಂಹಾರ ಮಾಡುತ್ತಾರೆ —

**ಮೂ || ಅತಃ ಸರ್ವಾಗಮವಿರುದ್ಧಮೇವ ಜೀವೇಶ್ವರೈಕ್ಯಂ || ೨೭೮ ||**

ಅ || ಅತಃ = ಆದಕಾರಣ, ಜೀವೇಶ್ವರೈಕ್ಯಂ = ಜೀವೇಶ್ವರರ ಐಕ್ಯವು, ಸರ್ವಾಗಮ ವಿರುದ್ಧಮೇವ=ಎಲ್ಲಾ ಆಗಮಗಳಿಂದ ವಿರುದ್ಧವೇ ಆಗಿರುತ್ತದೆ. ಆಗಮಸಿದ್ಧವಾಗಲೇ ಇಲ್ಲ. ಅಂದರೆ — ಆಗಮಾಸಿದ್ಧವೂ ಆಗಮ ವಿರುದ್ಧವೂ ಆಗಿರುತ್ತದೆ || ೨೭೮ ||

ಹೀಗೆ ಜೀವೇಶ್ವರೈಕ್ಯವು ಸರ್ವ ಪ್ರಮಾಣವಿರುದ್ಧವು, ಸರ್ವ ಪ್ರಮಾಣಾಸಿದ್ಧವು ಎಂದು ಹೇಳಿ ಅದರಲ್ಲಿ ಪ್ರತ್ಯಕ್ಷಾಗಮಗಳಿಂದ ವಿರುದ್ಧವೂ ಅಸಿದ್ಧವೂ ಆಗಿರುತ್ತದೆಂದುಪಪಾದಿಸಿ

ಈಗ ಅನುಮಾನಗಳಿಂದ ವಿರುದ್ಧವೂ ಅಸಿದ್ಧವೂ ಆಗಿರುತ್ತದೆಂದುಪಪಾದಿಸಲಿಕ್ಕೆ ಪ್ರತಿಜ್ಞಾ ಮಾಡುತ್ತಾರೆ —

**ಮೂ || ತಥೈವ ಸರ್ವಯುಕ್ತಿ ವಿರುದ್ಧಂ ಚ || ೨೭ ||**

ಅ || ತಥೈವ=(ಹೇಗೆ ಪ್ರತ್ಯಕ್ಷಾಗಮಗಳಿಂದ ವಿರುದ್ಧವೂ ಅಸಿದ್ಧವೂ ಆಗಿಯದೋ) ಹಾಗೆಯೇ, ಸರ್ವಯುಕ್ತಿ ವಿರುದ್ಧಂ ಚ=ಎಲ್ಲಾ ಯುಕ್ತಿಗಳಿಂದ (ಅಂದರೆ ಪ್ರತ್ಯಕ್ಷಾಗಮ ಮೂಲಗಳಾದ ಸಾಧನಾನುಮಾನ ದೂಷಣಾನುಮಾನಗಳಿಂದ) ವಿರುದ್ಧವೂ ಅಸಿದ್ಧವೂ ಆಗಿ ರುತ್ತದೆ || ೨೭ ||

(1) ಜೀವ ಪರಮಾತ್ಮೈಕ್ಯವು ಯುಕ್ತಿಗಳಿಂದ ವಿರುದ್ಧವೂ ಅಸಿದ್ಧವೂ ಹೇಗೆ ಆಗುವು ದೆಂದರೆ ಐಕ್ಯವಾದಿಗಳು ಅನೇಕ ವಿಧರು. (೧) ಕೇವಲೈಕ್ಯವಾದಿಗಳು (೨) ಭೇದಾಭೇದವಾದಿ ಗಳೆಂದು. ಅದರಲ್ಲಿ (೧) ಕೇವಲೈಕ್ಯವಾದಿಗಳಾದ ಮಾಯಾವಾದಿಗಳು ಹೀಗೆ ಅನ್ನುವರು. ಜೀವ ಜಡಗಳಿಂದ ಭೇದವಿಲ್ಲದಿರುವವನೂ, ನಿರ್ಧರ್ಮಕನೂ ಆದ ಪರಬ್ರಹ್ಮನು ಒಬ್ಬನೇ ತತ್ತ್ವವು. ಬ್ರಹ್ಮನಲ್ಲಿ ಆರೋಪಿತವಾದ ಅಜ್ಞಾನ ವಶದಿಂದ ಆ ಬ್ರಹ್ಮನು ಜಗತ್ ಈಶ್ವರ ಜೀವ ರೂಪದಿಂದ ತೋರುತ್ತಾನೆ. ಅಜ್ಞಾನವೆಂದರೆ ಭಾವರೂಪವಾದುದು, ಅನಾದಿಯಾದುದು, ಅನಿರ್ವಾಚ್ಯವಾದುದು, ಆವರಣ ವಿಕ್ಷೇಪ ವ್ಯಾಪಾರಗಳಿಂದ ಯುಕ್ತವಾದುದು. ಆವರಣವೆಂದರೆ 'ಅಹಂ' ಎಂದು ಸ್ವಪ್ರಕಾಶವಾಗಿ ನಿತ್ಯ ಸಿದ್ಧವಾದ ಪ್ರತ್ಯಕ್ ಚೈತನ್ಯದಿಂದ ಅಭಿನ್ನವಾದ ಐಕ್ಯಕ್ಕೂ ಪ್ರಕಾಶದ ಪ್ರಾಪ್ತಿಗೆ ಪ್ರತಿಬಂಧಕವಾದುದು. ವಿಕ್ಷೇಪವೆಂದರೆ ದುಃಖಾದಿಗಳನ್ನ ತೋರಿಸತಕ್ಕುದು. ಭಾವರೂಪವಾದ ಅಜ್ಞಾನವಾದರೆ ಶಾಸ್ತ್ರದಿಂದುಂಟಾದ ತತ್ತ್ವಜ್ಞಾನದಿಂದ ನಿವರ್ತ್ಯವಾದ ಪ್ರಯುಕ್ತ ಅಜ್ಞಾನ ಅವಿದ್ಯಾ ಇದು ಮೊದಲಾದ ಶಬ್ದಗಳಿಂದ ಹೇಳಲ್ಪಡುತ್ತದೆ. ಆ ಅಜ್ಞಾನವು ಮಾಯಾ ಅವಿದ್ಯೆ ಎಂದು ೨ ವಿಧವು ಎಂದು ಕೆಲವರು ಅನ್ನುತ್ತಾರೆ. ಇನ್ನು ಕೆಲವರು ಸ್ವಾಶ್ರಯವನ್ನು ಮೋಹಿಸುವುದು, ಮೋಹಿಸದಿರುವುದು, ಎಂಬೀ ವ್ಯಾಪಾರಗಳ ಭೇದದಿಂದ ಅಜ್ಞಾನಾಖ್ಯ ಒಂದೇ ವಸ್ತುವು 'ಅವಿದ್ಯಾ' 'ಮಾಯಾ' ಎಂದು ಹೇಳಲ್ಪಡುತ್ತದೆ, ಎನ್ನುತ್ತಾರೆ. ಅದರಲ್ಲಿ ಮಾಯಾ ವಿಶಿಷ್ಟನಾದ ಬ್ರಹ್ಮನೇ ಈಶ್ವರನೆಂದು ಹೇಳಲ್ಪಡುತ್ತಾನೆ. ಆ ಈಶ್ವರನು ಮಾಯಾಮಯಗಳಾದ ಸಾರ್ವಜ್ಞ್ಯ ಸರ್ವೇಶ್ವರತ್ವಾದಿಗಳಿಂದ ಯುಕ್ತನು. ಆಕಾಶ ಮೊದ ಲಾದ ಸರ್ವ ಪ್ರಪಂಚಕ್ಕೆ ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡಿದವನು. ಪ್ರಪಂಚವಾದರೆ ಸತ್ತು ಅಲ್ಲ, ಅಸತ್ತು ಅಲ್ಲ, ಸದಸತ್ತೂ ಅಲ್ಲ, ಮತ್ತೆ ಅನಿರ್ವಾಚ್ಯವೇ. ಮಾಯೆಯೇ ಉಪಾದಾನ ಕಾರಣವಾಗಿ ಉಳ್ಳದ್ದು. ಶುಕ್ತಿಯಲ್ಲಿ ಬೆಳ್ಳಿಯಂತೆಯೇ ಬ್ರಹ್ಮನಲ್ಲಿ ಆರೋಪಿತವಾಗಿಯೇ ಪ್ರತೀತವಾಗುವುದು. ಆದುದರಿಂದಲೇ ಈಶ್ವರನಿಗೆ ಜಗತ್ಕರ್ತೃತ್ವಾದಿಗಳೂ ಮಾಯಾಮಯವು ಮಿಥ್ಯೆಯೇ. ಆದರೆ ಈಶ್ವರನಿಗೆ ಅಧಿಷ್ಠಾನದ ಯಥಾರ್ಥಜ್ಞಾನವಿದ್ದುದರಿಂದ ಮೋಹವಿಲ್ಲ. ಬ್ರಹ್ಮನಲ್ಲಿ ಆರೋಪಿತವಾದ ಜಗತ್ತನ್ನು ನೋಡುತ್ತಾನೆಯೇ ಸರಿ. ಜೀವನಾದರೂ ಅವಿದ್ಯಾ ವಿಶಿಷ್ಟನಾದ ಬ್ರಹ್ಮನೇ. ಅವಿದ್ಯೆಯ ವಶದಿಂದಲೇ ಪ್ರತ್ಯಗಾತ್ಮರೂಪವಾದ ಬ್ರಹ್ಮ ಪ್ರತಿಬಿಂಬ ದಲ್ಲಿ ಅಹಂಕಾರಾಖ್ಯವಾದ ದ್ರವ್ಯವು ಅವಿದ್ಯೋಪಾದಾನಕವಾಗಿ ಮಿಥ್ಯಾಭೂತವಾದುದೇ ಆರೋ ಪಿತವಾಗುವುದು. ಆ ಅಹಂಕಾರಾಖ್ಯವಾದ ದ್ರವ್ಯವು ಜ್ಞಾತೃತ್ವ ಶಕ್ತಿಯನ್ನಾಶ್ರಯಿಸಿ ಮನ ಸ್ಸೆಂದೂ, ಕರ್ತೃತ್ವಶಕ್ತಿಯನ್ನಾಶ್ರಯಿಸಿ ಪ್ರಾಣವೆಂದೂ ಹೇಳಲ್ಪಡುತ್ತದೆ. ಆ ಅಹಂಕಾರದ ಧರ್ಮಗಳೇ ಆದ ಕರ್ತೃತ್ವ ಭೋಕ್ತೃತ್ವ ಸುಖದುಃಖಾದಿಗಳು ಆತ್ಮನಲ್ಲಿ ಆರೋಪಿತಗಳಾ ಗುತ್ತವೆ. ಅವಿದ್ಯಾ ಅಹಂಕಾರ ಮೊದಲಾದವುಗಳ ಅಧ್ಯಾಸವನ್ನು ನೋಡತಕ್ಕ ಪ್ರತ್ಯಗಾ

ತ್ಮನು ಸಾಕ್ಷೀ ಎಂದು ಹೇಳಲ್ಪಡುತ್ತಾನೆ ಸಾಕ್ಷಿತ್ವವೂ ಅವಿದ್ಯಾಪರಿಕಲ್ಪಿತವೇ. ಸತ್ಯವಲ್ಲ. ಹೇಗೆ ಚಿಪ್ಪಿನಲ್ಲಿ ರಜತಾಧ್ಯಾಸವು ಜ್ಞಾನಾರ್ಥರೂಪವಾಗಿ ಮಿಥ್ಯೆಯೋ, ಹಾಗೆಯೇ ಅವಿದ್ಯಾಧ್ಯಾಸವೂ ಮಿಥ್ಯೆಯೇ. (2) ಆ ಮಾಯಾವಾದಿಗಳೂ ಏಕ ಜೀವ ವಾದಿಗಳು ಬಹು ಜೀವ ವಾದಿಗಳೆಂದು ೨ ವಿಧರು. (೧) ಬ್ರಹ್ಮನಿಗೆ ಪ್ರತಿಬಿಂಬನಾದವನು ಒಬ್ಬನೇ ಜೀವನು, ಬೇರೆ ಜೀವರು ಜಡದಂತೆಯೇ ಸ್ವರೂಪದಿಂದಲೇ ಕಲ್ಪಿತರು. ಅದರಲ್ಲಿ ಯಾರು ಪಾರಮಾರ್ಥಿಕವಾಗಿ ಜೀವನೋ ಅವನಿಗೆ ತತ್ವಜ್ಞಾನವು ಹುಟ್ಟುವಾಗ ಅವನಿಂದ ಕಲ್ಪಿತವಾದ ಈ ಎಲ್ಲಾ ಆಕಾಶ ಮೊದಲಾದುದು ದುಃಖಮೊದಲಾದುದೂ ಏತದ್ರೂಪವಾದ ಜಗತ್ತು ನಿವೃತ್ತವಾಗುತ್ತದೆ. ಪ್ರಪಂಚಕ್ಕೆ ಕೇವಲ ಜ್ಞಾನವೇ ಶರೀರವು. ಮತ್ತೊಬ್ಬನು ತಿಳಿಯುವವನೇ ಇಲ್ಲ. ಈಶ್ವರ ಭೇದವೂ ಅವನಿಂದಲೇ ಕಲ್ಪಿತವಾಗಿರುತ್ತದೆ. ಹೀಗೆ ಏಕ ಜೀವವಾದಿಗಳ ಮತವು. (೨) ಬಹು ಜೀವವಾದಿಗಳು 'ಅನೇಕ ಕನ್ನಡಿಗಳಲ್ಲಿ ಪ್ರತಿ ಬಿಂಬಿತವಾದ ಮುಖದಂತೆಯೇ ಅನೇಕ ಅವಿದ್ಯೆಗಳಲ್ಲಿ ಪ್ರತಿ ಬಿಂಬಿತನಾದ ಬ್ರಹ್ಮನೇ ಅನೇಕ ಜೀವ ಭಾವವನ್ನು ಹೊಂದುತ್ತಾನೆ. ಅದರಲ್ಲಿ ಜೀವರಿಗೂ ಬ್ರಹ್ಮನಿಗೂ ಭೇದಮಾತ್ರ ಆರೋಪಿತವು. ಜೀವರು ಅನಂತರು ಚೈತನ್ಯ ರೂಪದಿಂದ ಸತ್ಯರೇ ಆಗಿರುವರು. ಅದರಲ್ಲಿ ಯಾರಿಗೆ ತತ್ವಜ್ಞಾನವು ಹುಟ್ಟುತ್ತದೋ, ಆತನು ಮುಕ್ತನಾಗುತ್ತಾನೆ. ಬೇರೆಯುವರು ಸಂಸಾರದಲ್ಲಿರುವರು' ಹೀಗೆ ಹೇಳುವರು. (೪) ಭೇದಾಭೇದವಾದಿಗಳೂ ಮೂರು ವಿಧರು. ಅದರಲ್ಲಿ ಕೆಲವರು 'ಸಾರ್ವಜ್ಞಾದಿ ಗುಣಗಳಿಂದೊಡಗೂಡಿದ ಸರ್ವದೋಷಗಳಿಂದ ದೂರನಾದ ಬ್ರಹ್ಮನು (1) ಸಚ್ಛಕ್ತಿಕ (2) ಚಿಚ್ಛಕ್ತಿಕ ಎಂದು ಎರಡು ಪ್ರಕಾರನು. ಅದರಲ್ಲಿಯೂ (1) ಸಚ್ಛಕ್ತಿಕ ಬ್ರಹ್ಮನು ಜಗತ್ತಿಗೆ ಪರಿಣಾಮಕಾರಣನೂ ನಿಮಿತ್ತ ಕಾರಣನೂ ಆಗುವನು. ಜಗತ್ತು ಸತ್ಯವೇ. (2) ಚಿಚ್ಛಕ್ತಿಕ ಬ್ರಹ್ಮನು ಅನಾದಿಯಾದ ಅಂತಃಕರಣರೂಪ ಉಪಾಧಿಯಿಂದ ವಿಶಿಷ್ಟನಾಗಿ ಜೀವೇಶ್ವರಭಾವವನ್ನು ಹೊಂದುತ್ತಾನೆ. ಉದಾ=ಒಂದೇ ಆಕಾಶವು ಘಟಮಠಾದ್ಯುಪಾಧಿಗಳಿಂದ ವಿಶಿಷ್ಟವಾಗಿ ಘಟಾಕಾಶ ಮಠಾಕಾಶ ಮೊದಲಾದವುಗಳ ಭಾವವನ್ನು ಹೊಂದುತ್ತದೆ. ಅದರಲ್ಲಿ ಈಶ್ವರನು ಅವಿನಾಶವಾದ ಜ್ಞಾನವುಳ್ಳವನಾದುದರಿಂದ ಸಂಸಾರವನ್ನು ಹೊಂದುವುದಿಲ್ಲ. ಉಪಾಧಿ ಸಂಬಂಧದಿಂದಲೇ ಜಗತ್ತಿನ ಸೃಷ್ಟಿ ಮೊದಲಾದ ಕ್ರಿಯೆಗಳನ್ನು ಅನುಭವಿಸುತ್ತಾನೆ. ಅನೇಕ ಜೀವರು ಅಜ್ಞಾನ ಮಿಥ್ಯಾಜ್ಞಾನ ಅವುಗಳ ಸಂಸ್ಕಾರ ಕಾಮ ಕರ್ಮಾದಿಗಳ ವಶದಿಂದ ಸತ್ಯಗಳೇ ಆದ ಅಂತಃಕರಣಧರ್ಮಗಳಾದ ದುಃಖಾದಿಗಳನ್ನು ಆತ್ಮನಲ್ಲಿಯೇ ಆರೋಪಿಸಿಕೊಂಡು ಸಂಸಾರದಲ್ಲಿಯೇ ಇರುತ್ತಾರೆ. ಹೀಗೆ ಭೇದಾಭೇದಗಳು ಸತ್ಯಗಳಾಗಿದ್ದಾಗ್ಯೂ ಅಭೇದವು ಸ್ವಾಭಾವಿಕವು. ಭೇದವು ಔಪಾಧಿಕವು. ಅದರಲ್ಲಿ ಯಾರಿಗೆ ನಿಷ್ಕಾಮಕರ್ಮದಿಂದ ಯುಕ್ತವಾದ ಐಕ್ಯ ಜ್ಞಾನದಿಂದ ಉಪಾಧಿ ಮೊದಲಾದವುಗಳು ಸಂಪೂರ್ಣ ನಾಶ ಹೊಂದುತ್ತವೋ. ಆ ಜೀವನು ಉಪಾಧಿನಾಶದಿಂದ ಮಾಡಲ್ಪಟ್ಟ ಭೇದ ನಾಶದಿಂದ ಸ್ವಾಭಾವಿಕವಾದ ಬ್ರಹ್ಮತ್ವವನ್ನೇ ಹೊಂದುತ್ತಾನೆ. ಬೇರೆಯುವರು ಸಂಸಾರದಲ್ಲಿಯೇ ಇರುತ್ತಾರೆ. (೫) ಇನ್ನು ಕೆಲವರು ಹೀಗೆ ಅನ್ನುವರು. ಬ್ರಹ್ಮನೊಬ್ಬನೇ ಸ್ವಭಾವ ಸಿದ್ಧವಾದ ತತ್ವವು. ಆ ಬ್ರಹ್ಮನು ಪಾರಮಾರ್ಥಿಕವಾದ ಮಾಯಾ ಸಂಬಂಧದಿಂದ ಈಶ್ವರತ್ವವನ್ನು ಹೊಂದುತ್ತಾನೆ. ಆ ಈಶ್ವರನು ಸರ್ವಜ್ಞನು, ಸರ್ವೇಶ್ವರನು, ಜಗಜ್ಜನ್ಮಾದಿ ಕರ್ತನು. ಜೀವರು ಬ್ರಹ್ಮನ ಅಂಶರೇ ಸರಿ. ಅದುದರಿಂದಲೇ ಬ್ರಹ್ಮನಿಂದ ಭಿನ್ನಾಭಿನ್ನರು ಪರಸ್ಪರವಾಗಿಯೂ ಈಶ್ವರನಿಂದಲೂ ಭಿನ್ನರೇ. ಬ್ರಹ್ಮನಾದರೆ ಎಲ್ಲಾ ಚೇತನಗಳ ಸಮುದಾಯರೂಪನು ಅತಿರಿಕ್ತನೂ ಆಗಿರುತ್ತಾನೆ. ಅದಕಾರಣ ಭೇದಾಭೇದಗಳು ಸ್ವಾಭಾವಿಕಗಳಾದುದರಿಂದ ಮುಕ್ತಿಯಲ್ಲಿಯೂ ಜೀವರು ಭಿನ್ನಾಭಿನ್ನರೇ. ಕೇವಲ

ವಾಗಿ ಅಜ್ಞಾನಾದಿ ನಿಮಿತ್ತಗಳಾದ ದುಃಖಾದಿಗಳು ಆನಂದಾದ್ಯಾವರಣವೂ ಕೂಡ ಜ್ಞಾನ ಕರ್ಮಗಳಿಂದ ನಿವೃತ್ತಗಳಾಗುತ್ತವೆ. (6) ಇನ್ನುಳಿದವರು ಹೀಗೆ ಅನ್ನುವರು. ಜೀವರು ಬ್ರಹ್ಮನಿಂದ ಅಭಿನ್ನರು. ಭೇದವು ಕಲ್ಪಿತವೂ ಅಲ್ಲ. ಔಪಾಧಿಕವೂ ಅಲ್ಲ. ಅಂಶಾಂಶಿ ಭಾವನಿಮಿತ್ತವೂ ಅಲ್ಲ. ಮತ್ತೆ ಅತಿರೇಕ ನಿಮಿತ್ತವು. ಭೇದವ್ಯವಹಾರವನ್ನು ಸಂಪಾದನೆ ಮಾಡುವ ವಿಷಯದಲ್ಲಿ ಪಟುವಾದ ಧರ್ಮವಿಶೇಷವು ಅತಿರೇಕವು. ಬೇರೆ ಎಲ್ಲವೂ ಸಮಾನವೇ. ಇಷ್ಟು ಮುಂದಿಯಲ್ಲಿ ಏಕಜೀವವಾದಿಗಳು ಅತ್ಯಂತ ವಿರುದ್ಧರಾದ ಪ್ರಯುಕ್ತ ಪ್ರಥಮತಃ ಅವರನ್ನು ನಿರಾಕರಿಸುತ್ತಾರೆ.

ಮೂ || ನ ತಾವದೇಕಜೀವವಾದೋ ಯುಜ್ಯತೇ || ೨೮೦ ||

ಅ || ಪ್ರಮಾಣವಿಲ್ಲದಿರುವುದರಿಂದಲೂ, ಪ್ರಮಾಣವಿರುದ್ಧವಾದಪ್ರಯುಕ್ತವೂ ಏಕಜೀವವಾದಃ=ಒಬ್ಬನೇ ಜೀವನೆಂಬುವ ವಾದವು, ತಾವತ್=ಈಗ, ನ ಯುಜ್ಯತೇ=ಸಂಗತವಾಗುವುದಿಲ್ಲ. (ಅಂದರೆ ಪ್ರಥಮತಃ=ಏಕಜೀವವಾದಿಗಳ ಮತವನ್ನು ನಿರಾಕರಿಸುವುದು. ಆ ಮೇಲೆ ಬಹುಜೀವವಾದಿಗಳ ಮತವನ್ನು ನಿರಾಕರಿಸುತ್ತೇವೆ.) || ೨೮೦ ||

'ವಿಪ್ರತಿಪನ್ನಂ ಸರ್ವಂ ಜೀವಜಡಾತ್ಮಕಂ ಏಕಜೀವಾಜ್ಞಾನಪರಿಕಲ್ಪಿತಂ ದೃಶ್ಯತ್ವಾತ್ ಸ್ವಪ್ನವತ್'=ವಿವಾದಾಸ್ಪದವಾದ ಜೀವಜಡರೂಪವಾದ ಸರ್ವ ಪ್ರಪಂಚವೂ ಒಬ್ಬ ಜೀವನ ಅಜ್ಞಾನದಿಂದ ನಿರ್ಮಿತವಾದದ್ದು, ತೋರುವುದರಿಂದ ಸ್ವಪ್ನದಂತೆಯೇ, ಎಂಬೀ ಅನುಮಾನವಿದ್ದುದರಿಂದ ಪ್ರಮಾಣವಿಲ್ಲವೆನ್ನುವುದು ಹೇಗೆ ಸಂಗತವಾಗುವುದೆಂದರೆ — ಈ ವಿಷಯದಲ್ಲಿ ಹೀಗೆ ಹೇಳಬೇಕು. ಹೀಗೆ ಅನುಮೇಯಿಸತಕ್ಕವನಿಗೆ ಸರ್ವವನ್ನು ಕಲ್ಪಿಸತಕ್ಕ ಜೀವನು ಇಂಥಹವನು ಎಂದು ನಿಶ್ಚಯುವದೆಯೋ ಇಲ್ಲವೋ, ಸರ್ವವನ್ನು ಕಲ್ಪಿಸಿದ ಜೀವನು ಇವನು ಎಂದು ನಿಶ್ಚಯವಿದ್ದರೆ ಈತನು ಈಗ (೧) ಐಕ್ಯದಲ್ಲಿಯೇ ಆಗ್ರಹವುಳ್ಳವನೋ, (೨) ಭೇದದಲ್ಲಿ ಆಗ್ರಹವುಳ್ಳವನೋ, (೧)ನೇ ಕಲ್ಪದಲ್ಲಿಯೂ (1) ಗುರವೇ ಐಕ್ಯದಲ್ಲಿ ಆಗ್ರಹವುಳ್ಳವನೋ, (2)ಶಿಷ್ಯನೋ ಐಕ್ಯದಲ್ಲಿಯೇ ಆಗ್ರಹವುಳ್ಳ (1) ಗುರುವೇ ಕಲ್ಪಕನೆಂದು ನಿಶ್ಚಿತನು ಎನ್ನುವ ಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ —

ಮೂ || ಏಕಾಜ್ಞಾನಪರಿಕಲ್ಪಿತತ್ವೇ ಚ ಸರ್ವಸ್ಯ ಸರ್ವಮಿದಂ ಪರಿಕಲ್ಪಿತಮಿತಿ ಜಾನತಃ ಪುನಃ ಶಿಷ್ಯಾದಿಬೋಧನಂ ನ ಯುಜ್ಯತೇ ||೨೮೧||

ಅ || ಸರ್ವಸ್ಯ=ಜೀವಜಡಾತ್ಮಕವಾದ ಎಲ್ಲಾ ಪ್ರಪಂಚಕ್ಕೆ, ಏಕಾಜ್ಞಾನಪರಿಕಲ್ಪಿತತ್ವೇ ಚ=ಒಬ್ಬ ಜೀವನ ಅಜ್ಞಾನದಿಂದಲೇ ನಿರ್ಮಿತವಾದದ್ದೆನ್ನುವ ಪಕ್ಷದಲ್ಲಿ, ಇದಂ ಸರ್ವಂ=ಇದೆಲ್ಲವೂ, ಪರಿಕಲ್ಪಿತಮಿತಿ=ನಿರ್ಮಿತವಾದದ್ದೆಂದು, ಜಾನತಃ=ತಿಳಿದವನಿಗೆ, ಪುನಃ=ಮತ್ತು, ಶಿಷ್ಯಾದಿ-ಬೋಧನಂ=ಶಿಷ್ಯ ಮೊದಲಾದವರಿಗೆ ತಿಳಿಸಿಕೊಡುವಿಕೆಯು, ನ ಯುಜ್ಯತೇ=ಕೂಡುವುದಿಲ್ಲ.

ತಾ || (1) ಕೆಲವರು ವಾಚಸ್ಪತಿ ಮೊದಲಾದ ಮಾಯಾವಾದಿಗಳು ಜೀವ ಜಡ ಈಶ್ವರರನ್ನು ಕಲ್ಪಿಸುವ ನಿಮಿತ್ತವಾಗಿ ಅಜ್ಞಾನವು ಅವಿದ್ಯಾರೂಪ ಉಪಾಧಿವಿಶಿಷ್ಟವಾಗಿ ಜೀವನನ್ನು ಆಶ್ರಯಿಸಿಕೊಂಡಿದೆ ಎಂದು ತಿಳಿಯುತ್ತಾರೆ. (2) ಬೇರೆಯವರು ಅಜ್ಞಾನವು ಸತ್ಯಜ್ಞಾನ ಅನಂತ ಆನಂದಸ್ವರೂಪನಾದ ಬ್ರಹ್ಮನನ್ನಾಶ್ರಯಿಸಿಕೊಂಡಿದೆ ಎನ್ನುತ್ತಾರೆ. (3) ವಿವರಣಕಾರ ಮೊದಲಾದವರು ಜೀವತ್ವ (ದುಃಖಾದಿಗಳಿಂದೊಡಗೂಡುವಿಕೆಯು) ಬ್ರಹ್ಮತ್ವ (ಸಾರ್ವಜ್ಞ್ಯಾದಿಗಳಿಂದ ಕೂಡುವಿಕೆಯು) ಇವುಗಳನ್ನು ವಿವಕ್ಷಿಸದೆ ಉಭಯಾನುಸ್ಯೂತವಾದ ಕೇವಲ ಚೇತನನನ್ನಾಶ್ರಯಿಸಿಕೊಂಡಿದೆ, ಜೀವಭಾಗದಲ್ಲಿಯೇ ಪಕ್ಷಪಾತವುಳ್ಳದ್ದು. ಉದಾ = ಕನ್ನಡಿಯು

ಬಿಂಬಪ್ರತಿಬಿಂಬಗಳನ್ನು ವಿವಕ್ಷಿಸದೆ ಕೇವಲ ಮುಖವನ್ನು ಸಂಬಂಧಿಸುತ್ತದೆ, ಪ್ರತಿಬಿಂಬದಲ್ಲಿಯೇ ಪಕ್ಷಪಾತವುಳ್ಳದ್ದು. ಅದರಲ್ಲಿ ಯಾರು ಜೀವರಿಗೆ ಅಜ್ಞಾನವನ್ನೊಡಂಬಡುತ್ತಾರೋ ಅವರ ಮೇಲೆ ಈ ದೂಷಣವು ತಗಲುವುದು ಎಂದು ತಿಳಿಸುವುದಕ್ಕಾಗಿ ' ಏಕಾಜ್ಞಾನ ಪರಿಕಲ್ಪಿತತ್ವೇ ಚ ಸರ್ವಸ್ಯ ' ಎಂದುಕ್ತವಾಗಿದೆ. (4) ತತ್ವವನ್ನು ತಿಳಿದವನು ಗುರುವಾಗುತ್ತಾನೆ. ಆದ ಪ್ರಯುಕ್ತ ಈ ಚೇತನಾಚೇತನಾತ್ಮಕವಾದ ಸರ್ವಪ್ರಪಂಚವೂ ನನ್ನ ಅಜ್ಞಾನದಿಂದಲೇ ನಿರ್ಮಿತವೆಂದು ತಿಳಿದ ಗುರುವಿಗೆ, ಶಿಷ್ಯರಿಗೆ ಶ್ರೇಯಸ್ಸನ್ನು ಬಯಸುವವರಾದುದರಿಂದ ಬೇರೆ ಮನುಷ್ಯರಿಗೆ ಬೋಧಿಸುವುದು ಕೂಡಲಾರದು. ಶಿಷ್ಯಾದಿಗಳು ಕಲ್ಪಿತರಾದ ಪ್ರಯುಕ್ತವೋಕ್ಷವಿಲ್ಲವೆಂದೇ ನಿಶ್ಚಯುವಿದೆ ॥ ೨೮೧ ॥

ಆದಾಗ್ಯೂ ಏಕೆ ಕೂಡುವುದಿಲ್ಲವೆಂದರೆ ' ಯಾರು ಯಾರಿಂದ ಕಲ್ಪಿತನೆಂದು ತಿಳಿಯಲ್ಪಟ್ಟ ದ್ದಾನೋ ಈತನು ಆತನ ಪುರುಷಾರ್ಥಕ್ಕಾಗಿ ಪ್ರಯತ್ನಿಸಲಾರನು ಎಂಬೀ ವ್ಯಾಪ್ತಿಯನ್ನು ತೋರಿ ಸುವುದಕ್ಕಾಗಿ ದೃಷ್ಟಾಂತವನ್ನು ಹೇಳುತ್ತಾರೆ.

**ಮೂ ॥ ನ ಹಿ ಸ್ವಪ್ನೋಽಯಮಿತಿ ನಿಶ್ಚಿತ್ಯ ಸ್ವಾಪ್ನಪುತ್ರದಾಯಾರ್ಥಂ ಯತತೇ ॥ ೨೮೨ ॥**

ಅ ॥ (ಸ್ವಾಪ್ನದಿಂದ ಎಚ್ಚತ್ತವನು) ಅಯಂ ಸ್ವಪ್ನಃ= ಇದು ಸ್ವಪ್ನವೇ, ಇತಿ ನಿಶ್ಚಿತ್ಯ= ಹೀಗೆ ನಿಶ್ಚಯಿಸಿ, ಸ್ವಾಪ್ನಪುತ್ರದಾಯಾರ್ಥಂ= ಸ್ವಪ್ನವಿಷಯಗಳಾದ ಮಕ್ಕಳು ದ್ರವ್ಯವು ಇತ್ಯಾದಿ ಗಳಿಗಾಗಿ, ನ ಹಿ ಯತತೇ= ಪ್ರಯತ್ನಿಸಲಾರನು.

ತಾ ॥ ಪರರ ರೀತಿಯಾಗಿ ಈ ದೃಷ್ಟಾಂತವನ್ನು ಹೇಳಿದ್ದು. ತಮ್ಮ ಪಕ್ಷದಲ್ಲಿ ಸ್ವಪ್ನವು ಸತ್ಯವೇ ಆಗಿರುತ್ತದೆ. ವಾಸನಾಮಯವು ನಷ್ಟವಾಗಿದೆ ಎನ್ನುವ ಜ್ಞಾನದಿಂದ ಸ್ವಾಪ್ನ ಧನಾದಿ ಗಳಿಗಾಗಿ ಪ್ರಯತ್ನಿಸದಿರುವುದು ನಮ್ಮ ಮತದಲ್ಲಿ ಯುಕ್ತವೇ ॥ ೨೮೨ ॥

ಹಾಗಾದರೂ ಗುರುವಿಗೆ ತತ್ವವು ಜ್ಞಾತವಾಗಿದ್ದರೂ ಜ್ಞಾನವು ಪರಿಪಕ್ವವಾಗದಿರುವ ಪ್ರಯುಕ್ತ ಅವಿದ್ಯೆಯು ಸಂಪೂರ್ಣನಿವೃತ್ತಿಯನ್ನು ಹೊಂದಲಿಲ್ಲ. ಆದುದರಿಂದ ಗುರುವು ಶಿಷ್ಯಾದಿಗಳನ್ನು ನೋಡುತ್ತಾನೆ. ಆದಕಾರಣ ಆತನಿಗೆ ಮುಕ್ತಿಗಾಗಿ ಬೋಧಿಸುವನು. ಉದಾ= ಸ್ವಪ್ನದಲ್ಲಿ ಮಕ್ಕಳನ್ನು ಕಂಡವನು ಸ್ವಾಪ್ನಧನಾದಿಗಳಿಗಾಗಿ ಪ್ರಯತ್ನಿಸುತ್ತಾನೆ. ಸ್ವಪ್ನದಿಂದ ಎಚ್ಚತ್ತವನು ಮಕ್ಕಳನ್ನೇ ನೋಡುವುದಿಲ್ಲ. ಆದಕಾರಣ ಅವನು ಪ್ರಯತ್ನಿಸುವುದಿಲ್ಲವೆನ್ನುವುದು ಯುಕ್ತವೇ ಎಂದಾಶಂಕಿಸಿದರೆ —

**ಮೂ ॥ ಸ್ವಪ್ನೇ ತು ಸ್ವಾಪ್ನತ್ವಾಜ್ಞಾನಾದೇವ ಯತತೇ ॥ ೨೮೩ ॥**

ಅ ॥ ಸ್ವಪ್ನೇ ತು= ಸ್ವಪ್ನಕಾಲದಲ್ಲಾದರೂ, ಸ್ವಾಪ್ನತ್ವಾಜ್ಞಾನಾದೇವ= ಸ್ವಾಪ್ನವಸ್ತು ವೆನ್ನುವ ಜ್ಞಾನವಿಲ್ಲದಿರುವುದರಿಂದಲೇ, (ಕೇವಲ ದರ್ಶನದಿಂದ ಅಲ್ಲ) ಯತತೇ= ಪ್ರಯತ್ನಿಸು ತ್ತಾನೆ.

ತಾ ॥ (1) ಪ್ರವೃತ್ತಿಗೆ ವಿಷಯುವಾದ ವಸ್ತುವನ್ನು ನೋಡುವುದು ಮಾತ್ರ ಪ್ರವೃತ್ತಿ ಯಲ್ಲಿ ಕಾರಣವಲ್ಲ. ಮತ್ತೆ ಕಲ್ಪಿತವೆನ್ನುವ ಜ್ಞಾನವಿಲ್ಲದಿದ್ದು ಪ್ರವೃತ್ತಿಗೆ ವಿಷಯವಾದ ದರ್ಶನವೇ ಪ್ರವೃತ್ತಿಯಲ್ಲಿ ಕಾರಣವೆಂದನ್ನಬೇಕು. ಸ್ವಪ್ನದಲ್ಲಿ ಆದರೂ ಈ ಕಾರಣವಿದ್ದುದರಿಂದ ಪ್ರವೃ ತ್ತಿಯು ಕೂಡುವುದು. ಪ್ರಕೃತ ಗುರುವಿನಲ್ಲಿ ಶಿಷ್ಯಾದಿ ದರ್ಶನರೂಪ ವಿಶೇಷ್ಯವಿದ್ದರೂ ತತ್ವ ವನ್ನು ತಿಳಿದವನೇ ಗುರುವಾದಪ್ರಯುಕ್ತ ಶಿಷ್ಯಾದಿ ಪ್ರಪಂಚವು ಕಲ್ಪಿತವೆಂದೇ ಜ್ಞಾನವಿದ್ದುದ ರಿಂದ ' ಕಲ್ಪಿತತ್ವಾಜ್ಞಾನ 'ವೆಂಬೀ ವಿಶೇಷಣವಿಲ್ಲದಿರುವುದರಿಂದ ಕಲ್ಪಿತತತ್ವಾಜ್ಞಾನಸಹಿತ ಪ್ರವೃತ್ತಿ

ವಿಷಯ ದರ್ಶನದಿಂದ ಕೂಡಿದ ಪ್ರವೃತ್ತಿಕಾರಣವೇ ಇಲ್ಲದಿರುವುದರಿಂದ ಶಿಷ್ಯಾದಿಗಳನ್ನು ಬೋಧಿಸುವ ವಿಷಯದಲ್ಲಿ ಪ್ರವೃತ್ತಿಯು ಕೂಡುವುದಿಲ್ಲ. (2) ಅಪರೋಕ್ಷಜ್ಞಾನವಿಲ್ಲದಿರುವುದರಿಂದ ಗುರುವು ಶಿಷ್ಯಾದಿಗಳನ್ನ ಬೋಧಿಸುವ ವಿಷಯದಲ್ಲಿ ಪ್ರಯತ್ನಿಸುತ್ತಾನೆ ಎಂದು ಹೇಳಕೂಡದು. ವಿಜಿಗೀಷೋಹಾದಿಗಳಲ್ಲಿ ಕೇವಲ ಪರೋಕ್ಷಜ್ಞಾನವೂ ಪ್ರವೃತ್ತಿಗೆ ಪ್ರತಿಬಂಧಕವೆಂದು ದೃಷ್ಟವಾಗಿದೆ. (3) ಮತ್ತು ಶಬ್ದದಿಂದಲೇ ಅಪರೋಕ್ಷಜ್ಞಾನವು ಹುಟ್ಟುತ್ತದೆ ಎನ್ನುವ ಮಾಯಾವಾದಿಗಳ ಮತದಲ್ಲಿ ಗುರುವಿಗೆ ಅಪರೋಕ್ಷಜ್ಞಾನವಿಲ್ಲವೆನ್ನುವುದು ಅಸಂಭಾವಿತವೇ. (4) ಸಂಸ್ಕಾರದಿಂದ ಪ್ರವೃತ್ತಿಯೆಂದೂ ಕೂಡಲಾರದು. ಶರ(ಬಾಣ)ದಿಗಳಲ್ಲಿರತಕ್ಕ ವೇಗಾಖ್ಯ ಸಂಸ್ಕಾರವು ಶರವನ್ನು ಹೇಗೆ ಬೀಳಿಸುವುದೋ, ಹಾಗೆಯೇ ಈ ಸಂಸ್ಕಾರವು ಬಲಾತ್ಕಾರದಿಂದ ಪ್ರವೃತ್ತೀಚ್ಛೆಯಿಲ್ಲದಿರುವವನನ್ನು ಪ್ರವರ್ತಿಸಲಾರದು. ಮತ್ತೆ ತತ್ವಜ್ಞಾನ ಬರುವಾಗ ಶಿಷ್ಯಾದಿಗಳು ಕಲ್ಪಿತರು ಎಂಬೀ ನಿಶ್ಚಿತವಾದ ಅರ್ಥದ ಅನುಸಂಧಾನವನ್ನು ಪ್ರತಿಬಂಧಿಸಿ ಶಿಷ್ಯಾದಿಗಳನ್ನು ಬೋಧಿಸುವ ವಿಷಯದಲ್ಲಿ ಸಂಸ್ಕಾರವು ಪ್ರವೃತ್ತಿಯನ್ನು ಹುಟ್ಟಿಸುತ್ತದೆ, ಎಂದನ್ನಬೇಕು. ಅಂತೂ ನಿಶ್ಚಿತವಾದ ಅರ್ಥದ ಅನುಸಂಧಾನವಿಲ್ಲದಿದ್ದರೂ ಭಿಕ್ಷಾಟನಾದಿಗಳಲ್ಲಿ ಪ್ರವೃತ್ತಿಯು ಸಂಭವಿಸುವುದರಿಂದ ಭಿಕ್ಷಾಟನಾದಿಗಳಲ್ಲಿ ಪ್ರವೃತ್ತಿಯು ಕಥಂಚಿತ್ ಕೂಡಲಿ. (5) ಬ್ರಹ್ಮನೊಬ್ಬನೇ ತತ್ವವು, ಬಾಕಿ ಎಲ್ಲವೂ ಮಿಥ್ಯೆಯು, ಹೀಗೆ 'ಏಕಮೇವಾದ್ವಿತೀಯಂ ನೇಹ ನಾನಾಸ್ತಿ ಕಿಂಚನ' ಇತ್ಯಾದಿಗಳಿಂದ ಶಿಷ್ಯರಿಗೆ ಬೋಧಿಸತಕ್ಕ ಗುರುಗಳು ಸರ್ವವೂ ಕಲ್ಪಿತವೆನ್ನುವ ಅನುಸಂಧಾನರಹಿತರು ಹೇಗೆ ಆದಾರು. ಹಾಗೆ ಅನುಸಂಧಾನವಿಲ್ಲದಿದ್ದರೆ ಅದ್ವೈತವನ್ನು ಬೋಧಿಸುವುದೇ ಕೂಡದೆ ಹೋಗುವುದು ॥ ೨೮೩ ॥

ಗುರು ಒಬ್ಬನೇ ಸತ್ಯಜೀವನು, ಎಲ್ಲವೂ ಆತನ ಅಜ್ಞಾನದಿಂದಲೇ ಕಲ್ಪಿತವು ಎಂಬೀ ನಿಶ್ಚಯವನ್ನಂಗೀಕರಿಸಿ ಈ ದೂಷಣವು ಉಕ್ತವಾಯಿತು. ನಿಶ್ಚಯವೇ ನಿನಗೆ ಕೂಡಲಾರದು ಎಂದು ನಿರೂಪಿಸುತ್ತಾರೆ —

**ಮೂ ॥ (೧) ನ ಚ ಬಹೂನಾಂ ದೃಶ್ಯಮಾನತ್ವಾದಸ್ಯಾಜ್ಞಾನಪರಿಕಲ್ಪಿತಮಿದಮಿತಿ ನಿಶ್ಚಯೋ ಯುಜ್ಯತೇ । (೨) ಸ್ವಪ್ನೇ ತು ಪ್ರಬೋಧಾನಂತರಮೇಕಸ್ಯಾವಶಿಷ್ಟತ್ವಾನ್ನಿಶ್ಚಯಃ । (೩) ನ ಚಾತ್ರ ತಥಾಸ್ತಿ ॥ ೨೮೪ ॥**

ಅ ॥ (೧) ಬಹೂನಾಂ=ಅನೇಕ ಜೀವರಿಗೆ, ದೃಶ್ಯಮಾನತ್ವಾತ್=ಕಾಣಲ್ಪಡುವುದರಿಂದ, ಅಸ್ಯ=ಈ ಗುರುವಿನದ್ದೇ ಆದ, ಅಜ್ಞಾನ ಪರಿಕಲ್ಪಿತಂ=ಅಜ್ಞಾನದಿಂದ ನಿರ್ವಿಕಲ್ಪಲ್ಪಟ್ಟದ್ದು, ಇದಂ=ಇದೆಲ್ಲವೂ, ಇತಿ=ಈ ಪ್ರಕಾರವಾಗಿ, ನಿಶ್ಚಯಃ=ನಿಶ್ಚಯವು, ನ ಚ ಯುಜ್ಯತೇ=ಕೂಡಲಾರದು. (೨) ಸ್ವಪ್ನೇ ತು=ಸ್ವಪ್ನದಲ್ಲಿಆದರೂ, ಪ್ರಬೋಧಾನಂತರಂ=ಎಚ್ಚರಿಕೆ ಆದಮೇಲೆ, ಏಕಸ್ಯ ಅವಶಿಷ್ಟತ್ವಾತ್=ಒಂದೇ ಉಳಿದಿರುವುದರಿಂದ, ನಿಶ್ಚಯಃ=ನಿಶ್ಚಯವು, ಯುಜ್ಯತೇ=ಕೂಡುತ್ತದೆ. (೩) ಅತ್ರ=ಈ ವಿಷಯದಲ್ಲಿ, ತಥಾ=ಹಾಗೆ, ನ ಚಾಸ್ತಿ=ಇಲ್ಲವು.

ತಾ ॥ (1) ಬಹುಮಂದಿ ಕಾಣಲ್ಪಟ್ಟರೆ ಅವರು ಕಾಣಲ್ಪಡುವುದರಿಂದ ಘಟಾದಿಗಳಂತೆಯೇ ಅಚೇತನಗಳೇ ಆಗಬೇಕು. ಚೇತನರಾಗಲಾರರು. ಆದಕಾರಣ ಕಾಣಲ್ಪಡತಕ್ಕ ಅನೇಕ ವಸ್ತುಗಳು ಅಚೇತನಗಳಾದುದರಿಂದ ಅಚೇತನಗಳು ಕಲ್ಪಿತಗಳಲ್ಲವೆಂದೇ ನಿಶ್ಚಯವಿದ್ದುದರಿಂದ ಇವೆಲ್ಲವು ಈ ಗುರುಗಳ ಅಜ್ಞಾನದಿಂದ ಕಲ್ಪಿತಗಳು ಎಂಬೀ ನಿಶ್ಚಯವು ಯುಕ್ತವೇ ಆಗುತ್ತದೆ ಎಂದರೆ ಗುರುವೂ ಕೂಡ ೧ ಕಾಣಲ್ಪಡುತ್ತಾನೋ ೨ ಇಲ್ಲವೋ ೧ನೇ ಕಲ್ಪದಲ್ಲಿ ಆ ಗುರುವೂ ಅಚೇತನನೇ ಆದಕಾರಣ ಅವನೇ ಕಲ್ಪಕ ಜೀವನೆಂದು ಹೇಗೆ ನಿಶ್ಚಯಿಸಬಹುದು. ೨ನೇ ಕಲ್ಪದಲ್ಲಿ

ಸುತರಾಂ ಕಲ್ಪಕನೇ ಆಗಲಾರನು. ಬುದ್ಧಿಯಲ್ಲಿ ವಿಷಯನೇ ಆಗದಿರುವವನ್ನು ಕಲ್ಪಕ ಜೀವನೆಂದು ನಿಶ್ಚಯಿಸ ಕೂಡದು. (2) ಯದ್ಯಪಿ 'ಐಕ್ಯಪ್ರವಣನು ಗುರುವು' ಎಂಬೀ ನಿಶ್ಚಯಪಕ್ಷವನ್ನು ದೂಷಿಸಿರುವುದರಿಂದ ಇನ್ನುಳಿದ ೧ ಐಕ್ಯಪ್ರವಣನು ಶಿಷ್ಯನು ೨ ಭೇದಪ್ರವಣನು ಗುರುವು ೩ ಭೇದಪ್ರವಣನು ಶಿಷ್ಯನು ಎಂಬೀ ೩ ನಿಶ್ಚಯಪಕ್ಷಗಳನ್ನು ದೂಷಿಸಿದ ಮೇಲೆಯೇ ಇದನ್ನು ಹೇಳಬೇಕಾಗಿದೆ. ಆದಾಗ್ಯೂ ವಿಲಂಬವನ್ನು ಸಹಿಸಲಾರದೆ ಈಗಲೇ ಹೇಳಿಬಿಟ್ಟರು. ಹೀಗೆಯೇ ಶಿಷ್ಯಾದಿಗಳ ವಿಷಯದಲ್ಲಿಯೂ ನಿಶ್ಚಯವನ್ನು ನಿರಾಕರಿಸಬೇಕು. (3) ಅಥವಾ ಗುರುಪಕ್ಷದಲ್ಲಿಯೇ ಈ ದೂಷಣವು. ೧ ಎಲ್ಲಾ ಗುರುಗಳೂ ಕಲ್ಪಕರೋ ಅಥವಾ, ಒಬ್ಬ ಗುರುವೋ, ೧ನೇದ್ದು ಕೂಡಲಾರದು. ಏಕಜೀವವಾದವನ್ನು ಬಿಡಬೇಕಾಗುವುದು. ೨ನೇ ಕಲ್ಪವೂ ಅಸಂಗತವು. ಅನೇಕಮಂದಿ ಗುರುಗಳು ಕಾಣಲ್ಪಡುವುದರಿಂದ ಈ ಗುರುಗಳ ಅಜ್ಞಾನದಿಂದ ಕಲ್ಪಿತವು ಎಂಬೀ ನಿಶ್ಚಯವು ಕೂಡಲಾರದು. (4) ಸ್ವಪ್ನದಲ್ಲಿ ಬಹು ವಸ್ತುಗಳು ಕಾಣಲ್ಪಟ್ಟರೂ ಕಲ್ಪಕನು ಒಬ್ಬನೇ ಎಂಬೀ ನಿಶ್ಚಯವು ಕಾಣುವುದರಿಂದ ಅನೇಕ ಗುರುಗಳ ದರ್ಶನವು 'ಕಲ್ಪಕನು ಒಬ್ಬನೇ' ಎಂಬೀ ನಿಶ್ಚಯಾಭಾವದಲ್ಲಿ ಕಾರಣವಾಗಲಾರದು. ಎಂದರೆ— ಬಹುವಸ್ತುಗಳ ನೋಡುವಿಕೆಯು ಮಾತ್ರ ಕಲ್ಪಕನು ಒಬ್ಬನೇ ಎಂಬೀ ನಿಶ್ಚಯಾಭಾವದಲ್ಲಿ ಕಾರಣವೆಂದು ಅಭಿಪ್ರೇತವಲ್ಲ. ಮತ್ತೆ ಅನೇಕಮಂದಿ ಕಾಣುವುದರಿಂದಲೂ ಕಲ್ಪಕನು ಇವನೇ ಎಂಬುವಲ್ಲಿ ವಿನಿಗಮಕವಿಲ್ಲದಿರುವುದರಿಂದಲೂ ನಿಶ್ಚಯವಿಲ್ಲ. ಸ್ವಪ್ನದಲ್ಲಿ ವಿನಿಗಮಕವಿದ್ದುದರಿಂದ ನಿಶ್ಚಯವು ಕೂಡುತ್ತದೆ. ಪ್ರಕೃತ ವಿನಿಗಮಕವಿಲ್ಲದಿರುವುದರಿಂದ ನಿಶ್ಚಯವಾಗಲಾರದು. (5) ಪ್ರಪಂಚವನ್ನು ಕಲ್ಪಿಸತಕ್ಕ ಒಬ್ಬ ವ್ಯಕ್ತಿಯನ್ನು ನಿಶ್ಚಯಿಸತಕ್ಕ ಉಪಾಯವಿಲ್ಲದಿರುವುದರಿಂದ ನಿಶ್ಚಯವಾಗದಿದ್ದರೆ ಅನಿಶ್ಚಯಪಕ್ಷವೇ ಇರಲಿ. ಎಂದನ್ನ ಕೂಡದು. ನಿಶ್ಚಯವಾಗದಿದ್ದರೆ ಅನುಮಾನವೇ ಪ್ರವರ್ತಿಸಲಾರದು ॥ ೨೮೪ ॥

ಮತ್ತು ಕಲ್ಪಕ ಜೀವನು ನಿರ್ಧಾರಿತನಾಗದಿದ್ದರೆ ಮೋಕ್ಷಸಾಧನವಾದ ಜ್ಞಾನವನ್ನು ಯಾವುದರಿಂದ ಸಾಧಿಸಬೇಕು. 'ಎಲ್ಲವೂ ನನ್ನ ಅಜ್ಞಾನದಿಂದಲೇ ನಿರ್ಮಿತವಾಗಿದೆ, ನಾನೇ ಪರಮಾತ್ಮನು' ಎಂಬೀ ಮೋಕ್ಷಸಾಧನೀಭೂತವಾದ ಜ್ಞಾನವನ್ನು ಎಲ್ಲರೂ ಹೊಂದಬೇಕು. ಅದರಲ್ಲಿ ಯಾರು ಸತ್ಯಜೀವನೋ ಅವನಿಗೆ ಆ ಜ್ಞಾನದಿಂದ ಮುಕ್ತಿಯಾಗುವುದು. ಇತರರಿಗೆ ನಿವೃತ್ತಿಯಾಗುವುದು ಎಂದರೆ ಈ ವಿಷಯದಲ್ಲಿ ಈ ಜ್ಞಾನವು (ತಿಳಿದುಕೊಳ್ಳುವಿಕೆಯು) ಅವಿದ್ಯಮಾನವಾದ ಉಪಾಸನೆಯೋ, ಅಥವಾ ತತ್ವಜ್ಞಾನವೋ ೧ನೇದ್ದು ಕೂಡಲಾರದು, ಅದು ಮೋಕ್ಷಸಾಧನವಲ್ಲ. ೨ನೇದ್ದರಲ್ಲಿ ನಿರೂಪಿಸುತ್ತಾರೆ —

**ಮೂ ॥ ತಸ್ಯ ತಸ್ಯ ತಥಾ ತಥಾ ಪ್ರತಿಪತ್ತ್ರವ್ಯಮಿತ್ಯಂಗೀಕಾರೇ ವಸ್ತುನಿ ವಿಕಲ್ಪಾಸಂಭವಾದಕಲ್ಪಿತಮಿತ್ಯೇವ ಸ್ಯಾತ್ । ನ ಚ ತಥಾ ಪ್ರತಿಪತ್ತ್ರವ್ಯಮಿತ್ಯತ್ರ ಪ್ರಮಾಣಮಸ್ತಿ ॥ ೨೮೫ ॥**

**ಅ ॥** ತಸ್ಯ ತಸ್ಯ=ಅವರವರಿಂದ ತಥಾ ತಥಾ=ಹಾಗೆ ಹಾಗೆ (ಅಂದರೆ ಎಲ್ಲವೂ ನನ್ನ ಅಜ್ಞಾನದಿಂದಲೇ ಕಲ್ಪಿತವು ನಾನೇ ಪರಮಾತ್ಮನು ಎಂದು) ಪ್ರತಿಪತ್ತ್ರವ್ಯಮಿತಿ=ತಿಳಿಯಬೇಕೆಂದು, ಅಂಗೀಕಾರೇ=ಅಂಗೀಕರಿಸಿದರೆ, ವಸ್ತುನಿ=ವಸ್ತುವಿನಲ್ಲಿ, ವಿಕಲ್ಪಾಸಂಭವಾತ್=ವಿಕಲ್ಪ ಕೂಡದಿರುವುದರಿಂದ, ಅಕಲ್ಪಿತಮಿತ್ಯೇವ=ಕಲ್ಪಿತವಲ್ಲವೆಂದೇ, ಸ್ಯಾತ್=ಆಗುವುದು. ೨ ತಥಾ=ಹಾಗೆ, ಪ್ರತಿಪತ್ತ್ರವ್ಯಮಿತ್ಯತ್ರ=ತಿಳಿಯಬೇಕೆನ್ನುವಲ್ಲಿ, ಪ್ರಮಾಣಂ=ಪ್ರಮಾಣವು, ನ ಚ ಅಸ್ತಿ=ಇಲ್ಲವಷ್ಟೇ!

ತಾ ‖ (1) ಈ ಎಲ್ಲಾ ಜ್ಞಾನಗಳು ೧ ತತ್ತ್ವವಿಷಯುಕಗಳೋ, ೨ ಅಥವಾ ಒಂದು ಜ್ಞಾನವು ತತ್ತ್ವವಿಷಯುಕವು, ಬೇರೆ ಭ್ರಾಂತಗಳೋ, ೧ನೇ ಕಲ್ಪದಲ್ಲಿ ದೇವದತ್ತನ ಜ್ಞಾನವು ತತ್ತ್ವವಿಷಯುಕವಾದುದರಿಂದ ದೇವದತ್ತನು ಸತ್ಯನು, ಯಜ್ಞದತ್ತನು ಕಲ್ಪಿತನಾಗುವನು, ಯಜ್ಞದತ್ತನ ಜ್ಞಾನವೂ ತತ್ತ್ವವಿಷಯುಕವಾದುದರಿಂದ ಯಜ್ಞದತ್ತನು ಸತ್ಯನು ದೇವದತ್ತನು ಕಲ್ಪಿತನಾಗುವನು. ಇದು ಯುಕ್ತವಲ್ಲ. ದೇವದತ್ತಾದಿಗಳಲ್ಲೊಬ್ಬಬ್ಬರಲ್ಲಿ ಕಲ್ಪಿತತ್ವ, ಅಕಲ್ಪಿತತ್ವಗಳೆಂಬ ವಿಕಲ್ಪಗಳು ಕೂಡಲಾರವು. ವಿರುದ್ಧಧರ್ಮಗಳಿಂದೊಡಗೂಡಿದ ವಸ್ತುವು ಇರಲಾರದು. ೨ನೇ ಕಲ್ಪದಲ್ಲಿ ಇವನದ್ದೇ ತತ್ತ್ವವಿಷಯುಕವೆಂದು ನಿಶ್ಚಾಯುಕವಿಲ್ಲದಿರುವುದರಿಂದ ಎಲ್ಲರ ಜ್ಞಾನಗಳೂ ಭ್ರಾಂತಗಳಾಗುವುವು. ಅಲ್ಲದೆ ಎಲ್ಲವೂ ಅಕಲ್ಪಿತವೆಂದೇ ಏಕೆ ಹೇಳಬಾರದು. (2) ಪುನಃ ಶಂಕಿಸುತ್ತಾರೆ — ಸರ್ವರೂ ಹಾಗೆಯೇ ತಿಳಿಯತಕ್ಕದೆನ್ನುವುದು ನೀವು ವಿಕಲ್ಪಿಸಿದ ರೀತಿಯಿಂದ ಆಗುವುದಿಲ್ಲ. ಮತ್ತೆ ದೃಶ್ಯತ್ವಾನುಮಾನದಿಂದ ಎಲ್ಲವೂ ಒಬ್ಬ ಜೀವನ ಅಜ್ಞಾನದಿಂದ ಕಲ್ಪಿತವೆಂದು ಸಾಮಾನ್ಯತಃ ಸಿದ್ಧವಾಯಿತು. ಅದರಲ್ಲಿ ಎಲ್ಲರೂ ಹೀಗೆ ತಿಳಿದುಕೊಳ್ಳೋಣ ಯಾರು ಸತ್ಯಜೀವನೋ ಅವನ ಜ್ಞಾನವು ತತ್ತ್ವವಿಷಯುಕವಾಗಿ ಅವನಿಗೆ ಮೋಕ್ಷವನ್ನು ಸಾಧಿಸುವುದು. ಬೇರೆ ಜ್ಞಾನಗಳು ಭ್ರಾಂತಗಳಾಗಿ ವ್ಯರ್ಥಗಳೇ ಆಗುವುವು. ವಿಶೇಷತಃ ನಿರ್ಧಾರವು ವ್ಯರ್ಥವೇ ಎಂದರೆ ಎಲ್ಲರೂ ಹಾಗೆ ತಿಳಿಯುತ್ತಿದ್ದರೆ ಇದು ಹೀಗೆ ಆಗಬಹುದಿತ್ತು. ಹೀಗೆ ಇಲ್ಲ. ಸರ್ವರೂ ಮುಕ್ತಿಯ ಅಭಿಲಾಷೆಯಿಂದ ಹೀಗೆ ಮಾಡುವರೋ ವಿಹಿತವಾಗಿದೆ ಎಂದಭಿಪ್ರಾಯದಿಂದಲೋ, ೧ನೇದ್ದು ಕೂಡಲಾರದು. ತಾನು ಸತ್ಯಜೀವನೆಂದು ನಿಶ್ಚಯವಿಲ್ಲದಿದ್ದರೆ ಮುಕ್ತಿಯೂ ನಿಶ್ಚಯವಾಗಲಾರದು. ಯಾರೊಬ್ಬನೂ ಅನಿಶ್ಚಿತವಾದ ಪ್ರಯೋಜನಕ್ಕಾಗಿ ಅತಿಕ್ಲೇಶವನ್ನು ಅನುಭವಿಸಲಾರನು. ೨ನೇ ಕಲ್ಪದಲ್ಲಿಯೂ ವಿಧಾನವೂ ಕೂಡ ಇಷ್ಟಸಾಧನತ್ವವನ್ನು ತಿಳಿಸಿಕೊಡತಕ್ಕುದೋ, ರಾಜನ ಆಜ್ಞಾರೂಪವಾದದ್ದೋ, ಹಿಂದಿನ ನ್ಯಾಯದಿಂದಲೇ ೧ನೇದ್ದು ಕೂಡಲಾರದು. ರಾಜಾಜ್ಞೆಯಾದರೂ ಇಲ್ಲವಷ್ಟೆ. ಆದಕಾರಣ ಹಿಂದೆ ಹೇಳಿದ ಪ್ರಕಾರ ಅನುಮಾನವೇ ಹುಟ್ಟದಿರುವುದರಿಂದ ಮೋಕ್ಷಸಾಧನವನ್ನು ಮಾಡಲು ಸಾಧ್ಯವಿಲ್ಲದಿರುವ ಪ್ರಯುಕ್ತ ಅನಿಶ್ಚಯಪಕ್ಷವು ಸರ್ವಥಾ ಅಯುಕ್ತವೆಂದು ಸಿದ್ಧವಾಯಿತು ‖ ೨೮೫ ‖

ನಿಶ್ಚಿತವೆನ್ನುವ ಪಕ್ಷದಲ್ಲಿಯೂ ಎಲ್ಲವೂ ಗುರುವಿನ ಅಜ್ಞಾನದಿಂದ ಕಲ್ಪಿತವೆನ್ನುವ ಪಕ್ಷವು ದೂಷಿತವಾಯಿತು. ಈಗ ಶಿಷ್ಯಾಜ್ಞಾನದಿಂದ ಕಲ್ಪಿತವೆನ್ನುವುದು ನಿಶ್ಚಿತವೆನ್ನುವ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ —

**ಮೂ ‖(೧) ಶಿಷ್ಯಾಜ್ಞಾನಪರಿಕಲ್ಪಿತಮಿತ್ಯಂಗೀಕಾರೇ ತಸ್ಯೈವಾಚಾರ್ಯಭಾವೇ ಸ್ವಯಮೇವ ಕಲ್ಪಿತೋ ಭವತೀತಿ ಸಮ್ಯಗ್ಗ್ರಂಥಾಧಿಗಮಸ್ಯೈವಾನರ್ಥಹೇತುತ್ವಂ ಸ್ಯಾತ್ । (೨) ನ ಚ ಕಸ್ಯಚಿನ್ಮುಕ್ತಿಃ। (೩) ಗ್ರಂಥಾಧಿಗಮೋ ತಸ್ಯೈವ ಶಿಷ್ಯಾಜ್ಞಾನ ಪರಿಕಲ್ಪಿತತ್ವಪ್ರಾಪ್ತೇಃ ‖ ೨೮೬ ‖**

ಅ ‖ (೧) (ಗುರು ಮೊದಲಾದವರು) ಶಿಷ್ಯಾಜ್ಞಾನಪರಿಕಲ್ಪಿತಂ=ತನ್ನ ಶಿಷ್ಯನ ಅಜ್ಞಾನದಿಂದ ಕಲ್ಪಿಸಲ್ಪಟ್ಟವರು, ಇತ್ಯಂಗೀಕಾರೇ=ಹೀಗೆ ಒಡಂಬಟ್ಟರೆ, ತಸ್ಯೈವ=ಆ ಶಿಷ್ಯನಿಗೇನೆ, ಆಚಾರ್ಯಭಾವೇ=ಆಚಾರ್ಯತ್ವವು ಬರುತ್ತಿರಲು, ಸ್ವಯಮೇವ=ತಾನೇ, ಕಲ್ಪಿತಃ ಭವತಿ=ಶಿಷ್ಯನ ಅಜ್ಞಾನದಿಂದ ಕಲ್ಪಿತನು ಆಗುತ್ತಾನೆ. ಇತಿ=ಹೀಗೆ, ಸಮ್ಯಗ್ಗ್ರಂಥಾಧಿಗಮಸ್ಯೈವ=ಚೆನ್ನಾಗಿ ಗ್ರಂಥವನ್ನು ಹೊಂದತಕ್ಕದ್ದಕ್ಕೇನೆ, ಅನರ್ಥಹೇತುತ್ವಂ=ಅನರ್ಥಕ್ಕೆ ಕಾರಣತ್ವವು, ಸ್ಯಾತ್=ಆಗುವುದು. (೨) ಕಸ್ಯಚಿತ್=ಯಾರೊಬ್ಬನಿಗೂ, ಮುಕ್ತಿಃ=ಮೋಕ್ಷವು, ನ ಚ=ಆಗಲಾರದು.

(೩) ಗ್ರಂಥಾಧಿಗಮೇ=ಗ್ರಂಥಜ್ಞಾನವಾದರೆ, ತಸ್ಯೈವ=ಆ ಗುರುವಿಗೇನೆ, ಶಿಷ್ಯಾಜ್ಞಾನಪರಿಕಲ್ಪಿತತ್ವಪ್ರಾಪ್ತೇಃ=ಶಿಷ್ಯನ ಅಜ್ಞಾನದಿಂದ ಕಲ್ಪಿಸಲ್ಪಟ್ಟದ್ದೆಂದು ಪ್ರಾಪ್ತವಾಗುವುದರಿಂದ.

ತಾ ॥ (1) ಈ ಗುರುವು ಶಿಷ್ಯನಿಗೆ ಬೋಧಿಸುವುದಿಲ್ಲವೆಂದನ್ನಕೂಡದು. ಮಹಾವಾಕ್ಯಾರ್ಥಜ್ಞಾನವೇ ಇಲ್ಲದೆ ಹೋಗುವುದು. 'ಆಚಾರ್ಯಾತ್ಪಾದಮಾದತ್ತೇ ಪಾದಂ ಶಿಷ್ಯಃ ಸ್ವಬುದ್ಧಿತಃ । ಪಾದಂ ಸ ಬ್ರಹ್ಮಚಾರಿಭ್ಯಃ ಪಾದಂ ವ್ಯಾಖ್ಯಾನಕೌಶಲಾತ್ ॥ ಅಥವಾ ಗ್ರಹಣ ಅಧ್ಯಯನ ಪ್ರವಚನ ಸಂವ್ಯವಹಾರ ಎಂಬೀ ನಾಲ್ಕು ಪ್ರಕಾರಗಳಿಂದ ವಿದ್ಯೆಯು ಉಪಯುಕ್ತವಾಗುತ್ತದೆ ಎಂದು ಹೇಳಿರುವುದರಿಂದ ವ್ಯಾಖ್ಯಾನವೂ ಕೂಡ ವಾಕ್ಯಾರ್ಥಜ್ಞಾನಕ್ಕೆ ಕಾರಣವೆಂದೇ ಪ್ರಸಿದ್ಧವಾಗಿರುತ್ತದೆ. ಶಿಷ್ಯತ್ವವು ನಿಯತವಾಗದಿರುವುದರಿಂದ ಈ ನಿಶ್ಚಯವೂ ಯುಕ್ತವಲ್ಲ. (2) ಈ ಪಕ್ಷದಲ್ಲಿ ಕಲ್ಪಕನು ವ್ಯವಸ್ಥಿತನಲ್ಲವೆಂದು ಮಾತ್ರವಲ್ಲ. ಮುಕ್ತಿವ್ಯವಸ್ಥೆಯೂ ಸಿದ್ಧಿಸಲಾರದು. (3) ಶಿಷ್ಯನು ಕಲ್ಪಕನು ಗುರುವೊದಲಾದವರೆಲ್ಲರೂ ಕಲ್ಪಿತರು ಎಂಬೀ ಪಕ್ಷದಲ್ಲಿ ಶಿಷ್ಯನಿಗೇನೇ ಮುಕ್ತಿಯನ್ನು ಹೇಳಬೇಕು. ಆ ಮುಕ್ತಿಯು ಮಹಾವಾಕ್ಯಾರ್ಥಜ್ಞಾನದಿಂದಲೇ ಸಿಗುವುದು. ವಾಕ್ಯಾರ್ಥಜ್ಞಾನವಾದರೆ ಶಿಷ್ಯರಿಗೆ ಬೋಧಿಸಿರುವುದರಿಂದಲೇ ಆಗುವುದು. ಶಿಷ್ಯನಿದ್ದರೆ ಗುರುವಿಗೆ ಅವನ ಅಜ್ಞಾನಪರಿಕಲ್ಪಿತತ್ವವೇ ಪ್ರಾಪ್ತವಾಗುವುದು. ಅಂತೂ ಮುಕ್ತಿಯೂ ಇಲ್ಲವೆಂದಾಗುವುದು ॥ ೨೮೬ ॥

ಭೇದಪ್ರವಣನು ಗುರುವು ಅಥವಾ ಶಿಷ್ಯನು ಎಂಬೀ ನಿಶ್ಚಯ ಪಕ್ಷವನ್ನು ದೂಷಿಸುತ್ತಾರೆ.

**ಮೂ ॥ (೧) ಸಚೈಕೋ ಜೀವೋ ಯದಿ ಭೇದವಾದೀ ಭವತಿ ತಸ್ಯ ತತ್ರೈವ ದಾರ್ಢ್ಯಾನ್ನಕದಾಚಿದ್ಭೇದನಿವೃತ್ತಿರಿತಿ ನ ಕಸ್ಯಾಪಿ ಮುಕ್ತಿಃ ಸ್ಯಾತ್ । (೨) ತೇನ ಯಥಾಕಲ್ಪಿತಂ ತಥೈವ ಭವತೀತಿ ತೇನೈಕಜೀವವಾದಿನಾಂ ನಿತ್ಯನಿರಯಕಲ್ಪನೇ ಸ ಏವ ಸ್ಯಾತ್ ॥ ೨೮೭ ॥**

ಅ ॥ (೧) ಸ ಚ ಏಕಃ ಜೀವಃ=ಆ ಒಬ್ಬ ಜೀವನು, ಯದಿ ಭೇದವಾದೀ ಭವತಿ=ಭೇದವನ್ನೇ ಹೇಳುವವನಾದರೆ, ತಸ್ಯ = ಆತನಿಗೆ, ತತ್ರೈವ = ಆ ಭೇದವಿಷಯದಲ್ಲಿಯೇ, ದಾರ್ಢ್ಯಾತ್=ದೃಢಸಂಸ್ಕಾರವಿರುವುದರಿಂದ, ಕದಾಚಿತ್=ಯಾವಾಗಲೂ, ಭೇದನಿವೃತ್ತಿಃ ನ=ಭೇದವು ಹೊರಟುಹೋಗಲಾರದು. ಇತಿ=ಆದಕಾರಣ, ಕಸ್ಯಾಪಿ=ಯಾರಿಗೂ, ಮುಕ್ತಿಃ=ಮೋಕ್ಷವು, ನ ಸ್ಯಾತ್=ಆಗಲಾರದು. (೨) ತೇನ=ಆತನಿಂದ, (ಭೇದದಲ್ಲಿಯೇ ಆಗ್ರಹವುಳ್ಳ ಗುರುವಿನಿಂದ ಶಿಷ್ಯನಿಂದಾಗಲೀ,) ಯಥಾ=ಹೇಗೆ, ಕಲ್ಪಿತಂ=ಕಲ್ಪಿಸಲ್ಪಟ್ಟದ್ದೋ, ತಥೈವ=ಹಾಗೆಯೇ, ಭವತಿ=ಆಗುತ್ತದೆ. ಇತಿ=ಆದಪ್ರಯುಕ್ತ, ತೇನ=ಆತನಿಂದ, (ಆ ಗುರುಶಿಷ್ಯರಿಂದಾಗಲೀ,) ಏಕಜೀವವಾದಿನಾಂ = ಒಬ್ಬನೇ ಜೀವನೆಂದು ವಾದಿಸುವ ಅದ್ವೈತಿಗಳಿಗೆ, ನಿತ್ಯನಿರಯಕಲ್ಪನೇ=ಅಂಧತಮಸ್ಸನ್ನು ಕಲ್ಪಿಸಿದರೆ, ಸ ಏವ=ನಿತ್ಯನರಕವೇ (ಅಂಧಂತಮಸ್ಸೇ), ಸ್ಯಾತ್=ಆಗುವುದು.

ತಾ ॥ (1) 'ಐಕ್ಯಜ್ಞಾನದಿಂದ ಮುಕ್ತಿಯಾಗುತ್ತದೆ' ಎಂಬೀ ಮೋಕ್ಷಶ್ರುತಿಪ್ರಾಮಾಣ್ಯದಿಂದ ಕಲ್ಪಕನಾದ ಗುರುವಿಗೆ ಯಾ ಶಿಷ್ಯನಿಗೆ ಭೇದಸಂಸ್ಕಾರವು ನಷ್ಟವಾಗುವುದು ಅದ್ವೈತಜ್ಞಾನವೂ ಹುಟ್ಟುತ್ತದೆ, ಎಂದರೆ ಇವನು ಕಲ್ಪಕನಾದ ಜೀವನಲ್ಲ. ಭೇದದಲ್ಲಿ ಆಸಕ್ತಿಯೇ ನಷ್ಟವಾಗಿರುತ್ತದೆ. (2) ಕ್ರಿಯಾ (ಜ್ಞಾನ; ಭೋಜನ; ಗಮನ; ಶಯನ ಮೊದಲಾದುದು) ಕಾರಕ (ಇಂದ್ರಿಯಾದಿಗಳು) ಫಲ (ಸ್ವರ್ಗನರಕಾದಿಗಳು) ರೂಪಗಳನ್ನು ಅವನೇ ಕಲ್ಪಿಸಿದ್ದು. (3)

ಗುರ್ವಾದಿ ನಿಶ್ಚಯಪಕ್ಷಗಳು ಅತಿಪ್ರಸಂಗ ದುಷ್ಟಗಳಾದಪ್ರಯುಕ್ತವೂ 'ನ ಚ ಬಹೂನಾಂ' ಎಂದು ಹೇಳಿದಪ್ರಕಾರ ಕೂಡದಿರುವುದರಿಂದಲೂ ಉಪಪನ್ನಗಳಾಗದೆ ಇರಲು ಅನಿಶ್ಚಯಪಕ್ಷವನ್ನೇ ಅಂಗೀಕರಿಸಿರುವಾಗ ಪ್ರತಿಜ್ಞೆಯೇ ಕೂಡಲಾರದು ಆ ಕಾರಣ ಅನುಮಾನವೂ ಕೂಡಲಾರದು. (4) ಅಥವಾ ನಿಶ್ಚಯವಿಲ್ಲವೆನ್ನುವ ಪಕ್ಷದಲ್ಲಿ ಮೋಕ್ಷಸಾಧನಾನುಷ್ಠಾನವೇ ಕೂಡದಿರುವುದರಿಂದ ನಿಶ್ಚಯವನ್ನವಶ್ಯವಾಗಿ ಅಂಗೀಕರಿಸಬೇಕು. ಅದರಲ್ಲಿ ಕಲ್ಪಕಜೀವನು ಗುರ್ವಾದಿಗಳಲ್ಲಿ ಒಬ್ಬನು ಬೇರೆರೀತಿ ಕೂಡಲಾರದು. ಗುರುಶಿಷ್ಯಾದಿಗಳು ಆಗಲಾರರು ಎಂದಾದಮೇಲೆ ಜೀವನಿಗೆ ಕಲ್ಪಕತ್ವವೇ ನಿವೃತ್ತವಾಗುವುದರಿಂದ ದೃಶ್ಯತ್ವಾನುಮಾನವು ಬಾಧಿತವಿಷಯವಾಯಿತು ॥ ೨೮೭ ॥

ಪುನಃ ಅದ್ವೈತಿಗಳು ಆಶಂಕಿಸುತ್ತಾರೆ. ಅನುಮಾನಕ್ಕೆ ಶ್ರುತಿಸಾಹಾಯ್ಯವಿದ್ದುದರಿಂದ ಈ ವಿಕಲ್ಪಧೂಲಿಗಳಿಂದ ಆಚ್ಛಾದಿಸಕೂಡದು. ಶ್ರುತಿಯೇ ವಿಕಲ್ಪಗಳನ್ನು ಆಭಾಸೀಕರಿಸುವುದು, ಎಂದರೆ —

**ಮೂ ॥ (೧) ನ ಚೈಕಜೀವಾಜ್ಞಾನಪರಿಕಲ್ಪಿತಂ ಸಮಸ್ತಮಿತ್ಯತ್ರ ಕಿಂಚಿನ್ಮಾನಂ । (೨) ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ । ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತ ಇತ್ಯಸ್ಯ ಚಾಯಮರ್ಥಃ । (೩) ಪ್ರಪಂಚೋ ಯದಿ ವಿದ್ಯೇತ ಭವೇತ ಉತ್ಪದ್ಯೇತ ತರ್ಹಿ ನಿವರ್ತೇತ ನ ಚ ನಿವರ್ತತೇ ತಸ್ಮಾದನಾದಿರೇವಾಯಂ । (೪) ಪ್ರಕೃಷ್ಟಃ ಪಂಚವಿಧೋ ಭೇದಃ ಪ್ರಪಂಚಃ । (೫) ನ ಚಾವಿದ್ಯಮಾನೋಽಯಂ । ಮಾಯಾಮಾತ್ರತ್ವಾತ್ । (೬) ಮಾಯೇತಿ ಭಗವತ್ಪ್ರಜ್ಞಾಸ್ಯೈವ ಮಾನತ್ರಾಣಕರ್ತ್ರೀಯಸ್ಯ ತನ್ಮಾಯಾಮಾತ್ರಂ । (೭) ಪರಮೇಶ್ವರೇಣ ಜ್ಞಾತತ್ವಾದ್ರಕ್ಷಿತತ್ವಾಚ್ಚ ನ ದ್ವೈತಂ ಭ್ರಾಂತಿಕಲ್ಪಿತಮಿತ್ಯರ್ಥಃ । (೮) ನ ಹೀಶ್ವರಸ್ಯ ಭ್ರಾಂತಿಃ । (೯) ತರ್ಹ್ಯದ್ವೈತಃ ಸರ್ವಭಾವಾನಾಮಿತಿ ವ್ಯಪದೇಶಃ ಕಥಮಿತ್ಯತ ಆಹ । (೧೦) ಅದ್ವೈತಂ ಪರಮಾರ್ಥತ ಇತಿ । ಪರಮಾರ್ಥಾಪೇಕ್ಷಯಾ ಹ್ಯದ್ವೈತಂ ಸರ್ವಸ್ಮಾದುತ್ತಮೋಽರ್ಥಃ ಸ ಏಕ ಏವೇತ್ಯರ್ಥಃ । (೧೧) ಅನ್ಯಥಾಽದ್ವೈತಃ ಸರ್ವಭಾವಾನಾಮಿತಿ ವ್ಯರ್ಥಂ ಸ್ಯಾತ್ । (೧೨) ಸರ್ವಭಾವಾನಾಂ ಮಧ್ಯೇ ತಸ್ಯೈ ಕಸ್ಯೈವಾದ್ವೈತತ್ವಮಿತ್ಯುಕ್ತೇ ಸಮಾಧಿಕರಾಹಿತ್ಯಮೇವೋಕ್ತಂ ಸ್ಯಾತ್ । (೧೩) ಅನ್ಯೇಷಾಂ ಸರ್ವಭಾವಾನಾಂ ಚ ಸಮಾಧಿಕಭಾವಃ ॥ ೨೮೮ ॥** [ಪ್ರಪಂಚೋಯದಿ ವಿದ್ಯೇತ=ಮಾಂ-ಉ-ನಿ. ಶ್ರು. ೩೧೭.]

ಅ ॥ (೧) ಸಮಸ್ತಂ=ಸರ್ವಜಗತ್ತು, ಏಕ ಜೀವಾಜ್ಞಾನ ಪರಿಕಲ್ಪಿತಂ=ಒಬ್ಬ ಜೀವನ ಅಜ್ಞಾನದಿಂದಲೇ ಆರೋಪಿಸಲ್ಪಟ್ಟದ್ದು, ಇತ್ಯತ್ರ=ಈ ವಿಷಯದಲ್ಲಿ, ಕಿಂಚಿನ್ಮಾನಂ ನ ಚ=ಯಾವ ಶ್ರುತಿಯೂ ಇಲ್ಲ. (೨) ('ಪ್ರಪಂಚೋ ಯದಿ' ಎನ್ನುವ ಶ್ರುತಿಯದೆ ಎಂದರೆ ಅದಕ್ಕೆ ಯೋಗ್ಯವಾದುದು ಬೇರೆಯೇ ಅರ್ಥವಿದೆ. ಎಂದಭಿಪ್ರಾಯದಿಂದ ಅದನ್ನು ವ್ಯಾಖ್ಯಾನ

ಮಾಡುತ್ತಾರೆ) 'ಪ್ರಪಂಚೋ ಯದಿ ವಿದ್ಯೇತ-..ಪರಮಾರ್ಥತಃ' ಇತ್ಯಸ್ಯ ಚ=ಈ ಶ್ರುತಿಗೆ, ಅಯ ಮರ್ಥಃ=ಈ ಮೇಲೆ ಹೇಳುವ ಅರ್ಥವು (೩) ಪ್ರಪಂಚಃ=ಪ್ರಪಂಚವು, ಯದಿ=ಯಾವ ಪಕ್ಷ ದಲ್ಲಿ, ವಿದ್ಯೇತ=ಅಂದರೆ, ಭವೇತ=ಸತ್ತಾವನ್ನು ಹೊಂದುತ್ತದೋ, ಅಂದರೆ ಉತ್ಪದ್ಯೇತ= ಹುಟ್ಟುವುದೋ, ತರ್ಹಿ=ಹಾಗಾದರೆ, ನಿವರ್ತೇತ=ನಿವೃತ್ತಿಯನ್ನು ಹೊಂದುವುದು, ನ ಚ ನಿವರ್ತತೇ = ನಿವೃತ್ತಿಯನ್ನು ಹೊಂದುವುದಿಲ್ಲ. ತಸ್ಮಾತ್ = ಆದಕಾರಣ, ಅಯಂ = ಈ ಪ್ರಪಂಚವು, ಅನಾದಿರೇವ=ಆದಿಯಿಲ್ಲದಿರುವುದೇ. (೪) ಪ್ರಕೃಷ್ಟಃ=ಮೋಕ್ಷಾಂಗಜ್ಞಾನ ವಿಷ ಯವಾದುದರಿಂದ ಉತ್ಕೃಷ್ಟವಾದ, ಪಂಚವಿಧಃ = ಐದು ವಿಧವಾದ, ಭೇದಃ = ಭೇದವು, ಪ್ರಪಂಚಃ=ಪ್ರಪಂಚವೆನ್ನಿಸುತ್ತದೆ. (೫) ಅಯಂ=ಈ ಪಂಚವಿಧ ಭೇದವು, ಅವಿದ್ಯಮಾನಃ= ಭ್ರಾಂತಿಪರಿಕಲ್ಪಿತವು, ನ ಚ=ಅಲ್ಲ, ಮಾಯಾಮಾತ್ರತ್ವಾತ್=ಮಾಯಾಮಾತ್ರವಾದ ಪ್ರಯುಕ್ತ. (೬) ಮಾಯೇತಿ='ಮಾಯಾ' ಎಂಬೀ ಶಬ್ದದಿಂದ, ಭಗವತ್ಪ್ರಜ್ಞಾ=ಭಗವಂತನ ಪ್ರಜ್ಞೆಯು, (ಹೇಳಲ್ಪಡುತ್ತದೆ.) ಸೈವ=ಆ ಭಗವಂತನ ಪ್ರಜ್ಞೆಯೇ, ಮಾನತ್ರಾಣಕರ್ತ್ರೀ=ಜ್ಞಾನರಕ್ಷಣ ಗಳನ್ನು ಮಾಡತಕ್ಕುದು, ಯಸ್ಯ=ಯಾವುದಕ್ಕೋ, ತತ್=ಆ ದ್ವೈತವು, ಮಾಯಾಮಾತ್ರಂ= ಮಾಯಾಮಾತ್ರವೆನಿಸುತ್ತದೆ. (೭) ಪರಮೇಶ್ವರೇಣ = ಪರಮೇಶ್ವರನಿಂದ, ಜ್ಞಾತತ್ವಾತ್ = ತಿಳಿಯಲ್ಪಟ್ಟ ಪ್ರಯುಕ್ತವೂ, ರಕ್ಷಿತತ್ವಾಚ್ಚ=ರಕ್ಷಿಸಲ್ಪಟ್ಟ ಪ್ರಯುಕ್ತವೂ, ದ್ವೈತಂ=ಭೇದವು, ಭ್ರಾಂತಿಕಲ್ಪಿತಂ = ಭ್ರಾಂತಿಪರಿಕಲ್ಪಿತವು ನ=ಅಲ್ಲ, ಇತ್ಯರ್ಥಃ=ಹೀಗೆ ಅಭಿಪ್ರಾಯವು. (೮) ಈಶ್ವರಸ್ಯ = ಈಶ್ವರನಿಗೆ, ಭ್ರಾಂತಿಃ = ಭ್ರಮೆಯು, ನ ಹಿ=ಇಲ್ಲವಷ್ಟೆ. (ಅಂತೂ, ಇದಂ ದ್ವೈತಂ=ಈ ಭೇದವು, ಮಾಯಾಮಾತ್ರಂ=ಭಗವಂತನ ಪ್ರಜ್ಞೆಯಿಂದ ಜ್ಞಾತವು ರಕ್ಷಿತವೂ ಆಗಿರುತ್ತದೆ.) (೯) ತರ್ಹಿ=ಹಾಗಾದರೆ (ಅಂದರೆ ಐದು ವಿಧವಾದ ಭೇದವೂ ಸತ್ಯವಾಗಿದ್ದರೆ) 'ಅದ್ವೈತಃ ಸರ್ವಭಾವಾನಾಂ' ಇತಿ ವ್ಯಪದೇಶಃ=ಈ ವ್ಯಪದೇಶವು, ಕಥಂ=ಹೇಗೆ, (ಹೇಗೂ ಕೂಡಲಾರದು, ಆದಕಾರಣ ಹೇಳಿದ್ದು ಯುಕ್ತವೇ) ಅಥವಾ, ಕಥಂ=ಹೇಗೆ ವ್ಯಾಖ್ಯೇಯ ವಾಗಿದೆ. ಇತ್ಯತಃ=ಈ ಆಕ್ಷೇಪದಿಂದ, ಮೇಲೆ, ಆಹ=(ವಿರೋಧಿಯಾಗಿ ಶಂಕಿಸಿದ ಶ್ರುತ್ಯಂ ತರಕ್ಕೆ ಅರ್ಥಾಂತರವನ್ನು) ಹೇಳುತ್ತಾರೆ. ಅಥವಾ, ಇತಿ=ಆಕ್ಷೇಪವು ಯಾವ ಕಾರಣದಿಂದ ಹುಟ್ಟುತ್ತದೋ, ಅತಃ=ಆ ಕಾರಣದಿಂದ, ಆಹ=ಹೇಳುತ್ತಾರೆ. (೧೦) 'ಅದ್ವೈತಂ ಪರ ಮಾರ್ಥತಃ' ಇತಿ=ಎಂದು. (ಯಾವುದು ಇದು ಪರಮೇಶ್ವರನಿಗೆ ಅದ್ವಿತೀಯತ್ವವು 'ಅದ್ವೈತಃ ಸರ್ವಭಾವಾನಾಂ ದೇವಸ್ತುರ್ಯೋ ವಿಭುಃ ಸ್ಮೃತಃ' ಇದು ಮೊದಲಾದ ಶ್ರುತ್ಯಂತರಗಳಲ್ಲಿ ಹೇಳಲ್ಪಡುತ್ತದೋ ಆ) ಅದ್ವೈತಂ ಹಿ=ಅದ್ವೈತವಾದರೆ, ಪರಮಾರ್ಥಾಪೇಕ್ಷಯಾ=ಸರ್ವೋ ತ್ತಮವಾದ ವಸ್ತುವನ್ನಪೇಕ್ಷಿಸಿಯೇ ಸರಿ. ಅಂದರೆ ಸರ್ವಸ್ಮಾತ್=ಎಲ್ಲಾ ವಸ್ತುಗಳಿಂದಲೂ, ಉತ್ತಮಃ ಅರ್ಥಃ=ಅತ್ಯುತ್ತಮವಾದ ಅರ್ಥವು, ಸಃ=ಆ ಪರಬ್ರಹ್ಮನು, ಏಕ ಏವ=ಒಬ್ಬನೇ ಇತ್ಯರ್ಥಃ=ಹೀಗೆ ಅಭಿಪ್ರಾಯವು. (೧೧) ಅನ್ಯಥಾ=ಅಲ್ಲವಾದರೆ, (ಅಂದರೆ ಎನೇ ವಸ್ತುವು ಇಲ್ಲವೆನ್ನುವುದೇ ಆ ಶ್ರುತಿಗೆ ಅರ್ಥವಾಗಿದ್ದರೆ) ಅದ್ವೈತಃ ಸರ್ವಭಾವಾನಾಂ ಇತಿ=ಎನ್ನುವಲ್ಲಿ, 'ಸರ್ವಭಾವಾನಾಂ' ಎನ್ನುವುದು, ವ್ಯರ್ಥಂ ಸ್ಯಾತ್ ಪ್ರಯೋಜನವಿಲ್ಲದಿರುವುದು, ವಿರುದ್ಧ ಪ್ರಯೋಜನವುಳ್ಳದ್ದೂ ಆಗುವುದು. (ಅಂದರೆ 'ಸರ್ವಭಾವಾನಾಂ' ಎನ್ನುವುದು ಹೊರತೇ 'ದೇವಃ ಅದ್ವೈತಃ' ಎನ್ನುವುದರಿಂದಲೇ ವಿವಕ್ಷಿತಾರ್ಥವು ಸಿದ್ಧಿಸುವುದರಿಂದ ಅದಕ್ಕೆ ಪ್ರಯೋ ಜನವಿಲ್ಲವೆನ್ನುವುದು ಸ್ಪಷ್ಟವೇ.) (೧೨) ಸರ್ವಭಾವಾನಾಂ ಮಧ್ಯೇ=ಎಲ್ಲಾ ವಸ್ತುಗಳ ಮಧ್ಯ ದಲ್ಲಿ, ತಸ್ಯ ಏಕಸ್ಯೈವ=ಆ ಒಬ್ಬ ಬ್ರಹ್ಮನಿಗೇನೇ, ಅದ್ವೈತತ್ವಂ=ಅದ್ವಿತೀಯತ್ವವು, ಇತ್ಯುಕ್ತೇ= ಹೀಗೆ ಹೇಳಿದರೆ, ಸಮಾಧಿಕರಾಹಿತ್ಯಮೇವ=ಸದೃಶ ಅಧಿಕ ವಸ್ತುಗಳ ರಹಿತತ್ವವೇ, ಉಕ್ತಂ

ಸ್ಯಾತ್=ಹೇಳಿದ ಹಾಗಾಯಿತು. (೧೩) ಅನ್ಯೇಷಾಂ ಸರ್ವಭಾವಾನಾಂ ಚ=ಇತರಗಳಾದ ಎಲ್ಲಾ ವಸ್ತುಗಳಿಗೂ, ಸಮಾಧಿಕಭಾವಃ=ಸಮವಸ್ತುಗಳ ಮತ್ತು ಅಧಿಕವಸ್ತುಗಳ ಸದ್ಭಾವವು.

ತಾ ॥ (1) ಇಲ್ಲಿ ಪ್ರಪಂಚ ಶಬ್ದವು ವಿಸ್ತೃತವಾದ ಜಗತ್ತನ್ನು ಹೇಳುವುದಿಲ್ಲ. ಮತ್ತೆ 'ಪಂಚಭೇದಾಂಶ್ಚ ವಿಜ್ಞಾಯ...ಮುಕ್ತಿರ್ನಚಾನ್ಯಥಾ' ಎಂದು ಹೇಳಿರುವುದರಿಂದ ಮೋಕ್ಷಜನಕ ಜ್ಞಾನಕ್ಕೆ ವಿಷಯವಾದ ಪ್ರಯುಕ್ತ ಉತ್ಕೃಷ್ಟವಾದ ಐದುವಿಧ ಭೇದವೇ ಪ್ರಪಂಚವೆನ್ನಿಸುತ್ತದೆ. ಭೇದವು ಪ್ರಕರಣದಿಂದ ಪ್ರಾಪ್ತವಾಗಿರುತ್ತದೆ. 'ಅನಾದಿ ಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ । ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ' ಎಂದು ಪೂರ್ವಶ್ಲೋಕದಲ್ಲಿ ಅನಾದಿಯಾದ ಪರಮೇಶ್ವರನ ಇಚ್ಛೆಯಿಂದಲೂ ಪ್ರಕೃತ್ಯಾದಿಗಳಿಂದಲೂ ಜೀವಂಗೆ ಜ್ಞಾನಾವರಣ ರೂಪವಾದ ಸುಪ್ತಿಯೂ ತತ್ತ್ವಜ್ಞಾನರೂಪವಾದ ಪ್ರಬೋಧವೂ ಉಕ್ತವಾಗಿರುತ್ತದೆ. ಅದರಿಂದ ಜೀವೇಶ್ವರರಿಗೂ, ಜಡೇಶ್ವರಗಳಿಗೂ, ಜೀವಜಡಗಳಿಗೂ ಭೇದಗಳಿವೆ ಎಂದು ಲಬ್ಧವಾಯಿತು. ರಾಜನ ಇಚ್ಛೆಯಿಂದ ನಿಗಡಾದಿಗಳಿಂದ ಪುರುಷನು ಬದ್ಧನಾಗಿ ಮುಕ್ತನಾಗೋಣ ಮೂರು ಭೇದಗಳು ದೃಷ್ಟಗಳಾಗಿವೆ. ಅಲ್ಲದೆ 'ಪ್ರಭವಃ ಸರ್ವ ಭಾವಾನಾಂ' ಎಂದು ಭಾವಶಬ್ದದಿಂದ ಹೇಳಲಟ್ಟ ಜೀವರಿಗೆ ಪರಸ್ಪರವಾಗಿ ಭೇದವೂ ಲಬ್ಧವಾಗಿರುತ್ತದೆ. ಅದರಿಂದಲೇ ಅವರ್ಣಗಳಾದ ಜಡಗಳಿಗೂ ಪರಸ್ಪರವಾಗಿ ಭೇದವು ಲಬ್ಧವಾಗುತ್ತದೆ. ಆ ಐದು ವಿಧ ಭೇದಗಳಿಗೂ 'ಅನಾದಿ ಮಾಯಯಾ, ಅಜಂ ಅನಿದ್ರಂ' ಇದು ಮೊದಲಾದ ವಿಶೇಷಣಗಳ ಸಾಮರ್ಥ್ಯದಿಂದ ಅನಾದಿ ನಿತ್ಯತ್ವವು ಲಬ್ಧವಾಗುತ್ತದೆ. ಐದು ಭೇದಗಳು ಸತ್ಯಗಳು ಅನಾದಿಗಳು ಎಂದುಪಪಾದಿಸಲಿಕ್ಕೆ ಈ ಎರಡು ಶ್ಲೋಕಗಳು. ಅದರಲ್ಲಿಯೂ ಅನಾದಿತ್ವವನ್ನು ವಿಪಕ್ಷದಲ್ಲಿ ಬಾಧಕ ಪ್ರಸಂಗದಿಂದುಪಪಾದಿಸಲಿಕ್ಕೆ 'ಪ್ರಪಂಚಃ' ಎಂಬೀ ಶ್ಲೋಕವು. ಜಡಜೀವಗಳ ಭೇದವು ನಷ್ಟವಾದರೆ ಜೀವರಿಗೆ ಜಡತ್ವವು ಪ್ರಾಪ್ತವಾಗುವುದರಿಂದ ಮೋಕ್ಷಶಾಸ್ತ್ರವೇ ವ್ಯರ್ಥವಾಗಬೇಕಾದೀತು. ಇತ್ಯಾದಿ ರೂಪದಿಂದ ನಿವೃತ್ತವಾಗುವುದು. ಹೀಗೆ ಇದಕ್ಕೆ ಅನಿಷ್ಟತ್ವವನ್ನು ತಿಳಿಯತಕ್ಕದು. (2) ಈಶ್ವರನಿಂದ ದೃಷ್ಟವಾದದ್ದು ಭ್ರಾಂತಿಕಲ್ಪಿತವಾಗಿದ್ದರೆ ಈಶ್ವರನಿಗೂ ಭ್ರಾಂತಿಯುಟೆ ಎಂದುಕ್ತವಾದ ಹಾಗಾಯಿತು ಅದು ಯುಕ್ತವಲ್ಲವು. 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಶ್ರುತಿವಿರೋಧವು ಪ್ರಾಪ್ತವಾಗುತ್ತದೆ. ಹೀಗೆಯೇ ಭ್ರಾಂತಿಕಲ್ಪಿತವಾದದ್ದು ಯಾರಿಂದಲೂ ಕಾಣಲ್ಪಡುವುದಿಲ್ಲ (3) ಗೋವುಗಳ ಮಧ್ಯದಲ್ಲಿ ಕೃಷ್ಣಗೋವು ಹೆಚ್ಚು ಹಾಲು ಉಳ್ಳದ್ದು ಎಂದು ಹೇಳಿದರೆ ಕೃಷ್ಣಗೋವುಗೇನೇ ಹೆಚ್ಚು ಹಾಲು; ಬೇರೆ ಗೋವುಗಳಿಗೆ ಅಷ್ಟು ಇಲ್ಲ ಎಂದು ಹೇಳಿದಂತೆ ಆಗುವುದೋ, ಹಾಗೆಯೇ ಎಲ್ಲಾ ವಸ್ತುಗಳ ಮಧ್ಯದಲ್ಲಿ ಒಬ್ಬನಿಗೇನೆ ಅದ್ವಿತೀಯತ್ವವು ಎಂದು ಹೇಳಿದರೆ ಒಬ್ಬನಿಗೇನೆ ಅದ್ವಿತೀಯತ್ವವು; ಇತರ ಎಲ್ಲಾ ವಸ್ತುಗಳಿಗೂ ಸದ್ವಿತೀಯತ್ವವು ಎಂದುಕ್ತವಾಗುತ್ತದೆ. ಇದು ಯುಕ್ತವಲ್ಲ. ಅವನು ಅದ್ವಿತೀಯನಾದರೆ ಇತರ ವಸ್ತುಗಳೇ ಇಲ್ಲ. ಯಾವುಗಳಿಗೆ ದ್ವಿತೀಯ ವಸ್ತು ಸಾಹಿತ್ಯವು ಬರುವುದು. ಅದಕಾರಣ ಈ ದ್ವೈತ ಶಬ್ದವು ಸಮಾಧಿಕ ವಸ್ತುಗಳನ್ನು ಪ್ರತಿಪಾದಿಸುತ್ತದೆ ಎಂದಂಗೀಕರಿಸಬೇಕು. ಅಂತೂ ಆ ಒಬ್ಬನಿಗೇನೆ ಸಮಾಧಿಕರಾಹಿತ್ಯವು ಬೇರೆ ವಸ್ತುಗಳಿಗೆ ಸಮ ಅಧಿಕವಸ್ತುಗಳಿಂದ ವೈಶಿಷ್ಟ್ಯವೂ ಹೇಳಿದಂತೆ ಆಗುವುದು. ಅದು ಐಕ್ಯಮತ ವಿರುದ್ಧವು ॥ ೨೮ ॥

'ಪ್ರಪಂಚೋ ಯದಿ' ಎಂಬೀ ಶ್ಲೋಕವನ್ನು ಹೀಗೆ ಏಕೆ ವ್ಯಾಖ್ಯಾನಮಾಡುವುದು. ಜೀವ ಜಡಾತ್ಮಕವಾದ ಎಲ್ಲಾ ಪ್ರಪಂಚವು ಒಬ್ಬ ಜೀವನ ಅಜ್ಞಾನಪರಿಕಲ್ಪಿತವೆಂದೇ ಏಕೆ ಒಡಂಬಡ ಬಾರದು, ಎಂದರೆ —

ಮೂ ॥ (೧) ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿದಿತಿ ವಾಕ್ಯಶೇಷಾಚ್ಚ ನ ಕಲ್ಪಿತತ್ವಮಸ್ಯೇತಿ ಜ್ಞಾಯತೇ । (೨) ನಿವರ್ತತ ಇತ್ಯಂಗೀಕಾರೇ ನಿವರ್ತೇತ ವಿದ್ಯೇತೇತಿ ಚ ಪ್ರಸಂಗರೂಪೇಣ ಕಥನಂ ಯದಿ ಶಬ್ದೌ ಚ ನ ಯುಜ್ಯಂತೇ । (೩) ವಿದ್ಯೇತೇತ್ಯಸ್ಯ ಚೋತ್ಪತ್ತ್ಯರ್ಥಾನಂಗೀಕಾರೇ ಯದ್ಯದಸ್ತಿ ತತ್ತನ್ನಿವರ್ತತ ಇತಿ ವ್ಯಾಪ್ತ್ಯಭಾವಾನ್ನಿವರ್ತೇತೇತಿ ನ ಯುಜ್ಯತೇ । (೪) ಅತಃ ಪ್ರಪಂಚಸ್ಯಾನಾದಿ ಸತ್ಯತ್ವಪರಮಿದಂ ವಾಕ್ಯಂ । (೫) ಅತಃ ಉಪದೇಶಾದಯಂ ವಾದೋಽಜ್ಞಾತೇ ದ್ವೈತಂ ನ ವಿದ್ಯತ ಇತ್ಯಾಹ । (೬) ಅಜ್ಞಾತ ಏವ ದ್ವೈತಂ ನ ವಿದ್ಯತೇ । ಅಜ್ಞಾನಿನಾಂ ಪಕ್ಷ ಏವ ದ್ವೈತಂ ನ ವಿದ್ಯತ ಇತ್ಯರ್ಥಃ ॥ ೨೮೯ ॥

ಅ ॥ (೧) ವಿಕಲ್ಪಃ=ಭೇದವು, ಯದಿ=ಯಾವ ಪಕ್ಷದಲ್ಲಿ. ಕೇನಚಿತ್=ಅಜ್ಞಾನಾದಿಗಳಿಂದ, ಕಲ್ಪಿತಃ=ಕಲ್ಪಿಸಲ್ಪಟ್ಟದ್ದಾದರೆ, ವಿನಿವರ್ತೇತ=ಬಾಧಿಸಲ್ಪಡುವುದು. (ಹೀಗೆ ಕಲ್ಪಿತವೆನ್ನುವ ಪಕ್ಷದಲ್ಲಿ ಅನಿಷ್ಟಪ್ರಸಂಗವು ಶಿಷ್ಟವಾಕ್ಯದಲ್ಲಿ ಹೇಳಲ್ಪಡುತ್ತದೆ. ಪ್ರಸಂಗಕ್ಕೆ ವಿಪರ್ಯಯಪರ್ಯವಸಾನವು ಆವಶ್ಯಕವು) ಇತಿ=ಹೀಗೆ, ವಾಕ್ಯಶೇಷಾತ್=ಶಿಷ್ಟವಾಕ್ಯದಿಂದ, ಅಸ್ಯ ಚ=ಈ ಪ್ರಪಂಚಕ್ಕೆ, ಕಲ್ಪಿತತ್ವಂ=ಪಂಕಲ್ಪಿತತ್ವವು, ನ=ಇಲ್ಲ, ಇತಿ=ಹೀಗೆ, ಜ್ಞಾಯತೇ=ತಿಳಿಯಲ್ಪಡುತ್ತದೆ. (ಆದರಿಂದ ಈ ಶ್ಲೋಕಕ್ಕೆ ಪ್ರಪಂಚವು ಕಲ್ಪಿತವೆನ್ನುವುದೂ ಅರ್ಥವಲ್ಲವೆನ್ನುವುದೂ ತಿಳಿಯಲ್ಪಡುತ್ತದೆ.) (೨) (ಈ ಎರಡು ಶ್ಲೋಕಗಳಲ್ಲಿ ನಿವೃತ್ತಿಯನ್ನಾಪಾದಿಸಿದ್ದರೆ ಇದೆಲ್ಲವೂ ಆಗಬಹುದು. ಹೀಗೆ ಇಲ್ಲ. ಮತ್ತ ವಸ್ತುಸ್ಥಿತಿಯನ್ನೇ ಹೇಳಿದ್ದೆಂದರೆ) ನಿವರ್ತತೇ=ನಿವೃತ್ತವಾಗುತ್ತದೆ, ಇತ್ಯಂಗೀಕಾರೇ = ಹೀಗೆ ಒಡಂಬಟ್ಟರೆ, ನಿವರ್ತೇತ = ನಿವೃತ್ತವಾಗುವುದು, ವಿದ್ಯೇತ=ಇರಬಹುದು, ಇತಿ ಚ ಪ್ರಸಂಗರೂಪೇಣ=ಪ್ರಸಂಗವನ್ನು ಪ್ರತಿಪಾದಿಸುವ ಲಿಙ್ನಿಂದ, ಕಥನಂ=ಹೇಳುವಿಕೆಯು, ಯದಿ ಶಬ್ದೌ ಚ='ಯದಿ' ಶಬ್ದಗಳೂ ಕೂಡ, ನ ಯುಜ್ಯಂತೇ=ಕೂಡುವುದಿಲ್ಲ. (೩) (ಆದರೂ 'ವಿದ್ಯೇತ' ಎನ್ನುವುದಕ್ಕೆ ಉತ್ಪತ್ತಿಯೆಂಬ ಅರ್ಥವು ಅಪ್ರಸಿದ್ಧವಾದಪ್ರಯುಕ್ತ ಹಾಗೆ ಅಂಗೀಕರಿಸುವುದು ಯುಕ್ತವಲ್ಲವೆಂದರೆ) ವಿದ್ಯೇತ ಇತ್ಯಸ್ಯ ಚ=ವಿದ್ಯೇತ ಎನ್ನುವುದಕ್ಕೆ, ಉತ್ಪತ್ತ್ಯರ್ಥಾನಂಗೀಕಾರೇ=ಉತ್ಪತ್ತಿಯೆಂಬುವ ಅರ್ಥವನ್ನು ಅಂಗೀಕರಿಸದಿದ್ದರೆ (ಸತ್ತಾ ಎಂಬುವ ಅರ್ಥವನ್ನಂಗೀಕರಿಸಿದರೆ) ಯತ್ ಯತ್ ಅಸ್ತಿ=ಯಾವುದು ಯಾವುದು ಅದೆಯೋ, ತತ್ ತತ್ ನಿವರ್ತತೇ=ಅದದು ನಿವೃತ್ತವಾಗುತ್ತದೆ, ಇತಿ ವ್ಯಾಪ್ತ್ಯಭಾವಾತ್=ಹೀಗೆ ವ್ಯಾಪ್ತಿಯಿಲ್ಲದಿರುವುದರಿಂದ, ನಿವರ್ತೇತ ಇತಿ=ನಿವೃತ್ತಿಯನ್ನು ಹೊಂದುವುದು, ಇತಿ=ಹೀಗೆ, ನ ಯುಜ್ಯತೇ=ಕೂಡುವುದಿಲ್ಲ. (೪) ಅತಃ=ಆದಕಾರಣ, ಇದಂ ವಾಕ್ಯಂ=ಈ ವಾಕ್ಯವು, ಪ್ರಪಂಚಸ್ಯ=ಪ್ರಕೃಷ್ಟವಾದ ಐದುವಿಧ ಭೇದಕ್ಕೆ, ಅನಾದಿಸತ್ಯತ್ವಪರಂ=ಅನಾದಿತ್ವ ಸತ್ಯತ್ವಗಳೇ ಉದ್ದೇಶ್ಯವಾಗಿ ಉಳ್ಳದ್ದು. (ಅಂದರೆ ಅನಾದಿತ್ವ ಸತ್ಯತ್ವಗಳನ್ನು ಪ್ರತಿಪಾದಿಸತಕ್ಕದು) (೫) (ಹಾಗಾದರೆ 'ಜ್ಞಾತೇ ದ್ವೈತಂ ನ ವಿದ್ಯತೇ' ಎಂಬೀ ಶಿಷ್ಟವಾಕ್ಯದ ವಿರೋಧವೆಂದರೆ) ಅತಃ=ಆದಕಾರಣ, (ಅಂದರೆ ಯಾವ ಕಾರಣ ಹೀಗೆ ಪೂರ್ವವಾಕ್ಯವು ಭೇದಕ್ಕೆ ಅನಾದಿತ್ವವನ್ನೂ ಸತ್ಯತ್ವವನ್ನೂ ಪ್ರತಿಪಾದಿಸುತ್ತದೆ ಎಂದು ನಿಶ್ಚಿತವೋ, ಆದುದರಿಂದಲೇ,) ಉಪದೇಶಾತ್=ಗುರೂಪದೇಶದಿಂದ, ಅಯಂ ವಾದಃ=ಈ ವಾದವು, ಅಜ್ಞಾತೇ = ತಿಳಿಯಲ್ಪಡದಿದ್ದರೇನೆ, ದ್ವೈತಂ=ಭೇದವು, ನ ವಿದ್ಯತೇ=ಇಲ್ಲ, ಇತ್ಯಾಹ=ಆದಪ್ರಯುಕ್ತ ಈ ವಾಕ್ಯವೂ ಭೇದಕ್ಕೆ

ಸತ್ಯತ್ವವನ್ನೇ ಹೇಳುತ್ತದೆಂದು ತಿಳಿಯಲ್ಪಡುತ್ತದೆ. (೬) (ಹೇಗೆ ಈ ವಾಕ್ಯವು ಭೇದಕ್ಕೆ ಸತ್ಯತ್ವವನ್ನು ಹೇಳುತ್ತದೆ ಎಂದರೆ) ಅಜ್ಞಾತೇ ಏವ=ತತ್ತ್ವವು ತಿಳಿಯಲ್ಪಡದಿದ್ದರೇನೆ, ದ್ವೈತಂ=ಭೇದವು, ನ ವಿದ್ಯತೇ=ಇಲ್ಲವು, (ಹೀಗೆ ಅಂಗೀಕರಿಸಿದರೆ) ಅಜ್ಞಾನಿನಾಂ ಪಕ್ಷೇ ಏವ=ಅಜ್ಞಾನಿಗಳ ಪಕ್ಷದಲ್ಲಿಯೇ, ದ್ವೈತಂ=ಭೇದವು, ನ ವಿದ್ಯತೇ=ಇಲ್ಲವು, ಇತ್ಯರ್ಥಃ=ಹೀಗೆ ಅಭಿಪ್ರಾಯವು.

ಶಾ ॥ (1) ಇಲ್ಲಿ ನಿವೃತ್ತಿಯನ್ನಾಪಾದಿಸುವುದಿಲ್ಲ ಮತ್ತೆ ಸ್ವರೂಪವನ್ನು ಹೇಳಿದ್ದೇ ಸಂ ಎಂದಂಗೀಕರಿಸುವುದಾದರೆ ಆಗ ಇದ್ದವಸ್ತುವಿನಂತೆಯೇ ಪ್ರತೀತಿಯನ್ನು ಹೊಂದುವ ಈ ಪ್ರಪಂಚವು (ಭೇದವು) ನಿವೃತ್ತವಾಗುವುದು. ಯಾರೋ ಒಬ್ಬನಿಂದ ಕಲ್ಪಿತವಾದ ಈ ವಿಕಲ್ಪವೂ ವಿನಿವೃತ್ತವಾಗುವುದು, ಎಂದನ್ನಬೇಕಿದ್ದಿತು. ಪ್ರಸಂಗವನ್ನು ಪ್ರತಿಪಾದಿಸುವ ಲಿಙ್‌ನಿಂದ ಹೇಳಿದ್ದೂ ೨ ವಾಕ್ಯಗಳಲ್ಲಿದ್ದ 'ಯದಿ' ಶಬ್ದಗಳೂ ಕೂಡಲಾರವು, 'ಯದಿ' ಶಬ್ದದಿಂದ ಸಹಿತವಾದ ಲಿಙ್ 'ಯದಿ ಪರ್ವತಃ ನಿರಗ್ನಿಕಃ ಸ್ಯಾತ್ ತದಾ ನಿರ್ಧೂಮೋಽಪಿ ಸ್ಯಾತ್' ಇತ್ಯಾದಿ ಸ್ಥಳಗಳಲ್ಲಿ ಪ್ರಸಂಗರೂಪ ಅರ್ಥದಲ್ಲಿಯೇ ದೃಷ್ಟವಾಗಿದೆ. (2) ಯದ್ಯಪಿ 'ಯದಿ' ಶಬ್ದವು ಒಂದೇ ಇರುವುದು. ಆದಾಗ್ಯೂ ೨ ಸ್ಥಾನಗಳಲ್ಲಿ ಪಠಿತವಾದಪ್ರಯುಕ್ತ 'ಯದಿ' ಶಬ್ದಗಳು ಎಂದು ಹೇಳಿದ್ದು. (3) 'ಯದಿ' ಮೊದಲಾದ ಶಬ್ದಗಳ ಸಾಮರ್ಥ್ಯದಿಂದ ಇದು ಪ್ರಸಂಗವೆಂದು ನಿಶ್ಚಿತ . ಪ್ರಸಂಗಕ್ಕೆ ವ್ಯಾಪ್ತಿಯು ಆವಶ್ಯಕವು. ಉತ್ಪತ್ತಿಯೆನ್ನುವ ಅರ್ಥವನ್ನಂಗೀಕರಿಸಿದರೇನೇ ವ್ಯಾಪ್ತಿಯು ಕೂಡುತ್ತದೆ. ಉತ್ಪತ್ತಿಯುಳ್ಳ ಭಾವಪದಾರ್ಥಕ್ಕೆ ವಿನಾಶವು ನಿಯಮತಃ ದೃಷ್ಟವಾಗಿದೆ. 'ಸತ್ತಾ' ಎನ್ನುವ ಅರ್ಥವನ್ನು ಅಂಗೀಕರಿಸಿದರೆ ವ್ಯಾಪ್ತಿಯು ಕೂಡಲಾರದು. ನಿತ್ಯಗಳಾದ ಆತ್ಮಾದಿಗಳಲ್ಲಿ ವ್ಯಭಿಚಾರವು ಬರುವುದು. ಆದಕಾರಣ ಸತ್ವಕ್ಕೆ ನಿವೃತ್ತಿಯಿಂದ ವ್ಯಾಪ್ತಿಯಿಲ್ಲದಿರುವಪ್ರಯುಕ್ತ ಅವ್ಯಾಪ್ಯವಾದ ಸತ್ವದಿಂದ ಅವ್ಯಾಪಕವಾದ ನಿವರ್ತನಕ್ಕೆ ಆಪಾದನವು 'ನಿವರ್ತೇತ' ಎನ್ನುವುದರಿಂದ ಮಾಡಲ್ಪಡತಕ್ಕದು ಕೂಡುವುದಿಲ್ಲ. ಆದಕಾರಣ ಅದರ ಉಪಪತ್ತಿಗಾಗಿ 'ವಿದ್' ಧಾತುವಿಗೆ ಉತ್ಪತ್ತಿಯೆನ್ನುವ ಅರ್ಥವು ಅಪ್ರಸಿದ್ಧವಾದಾಗ್ಯೂ ಅದನ್ನು ಅಂಗೀಕರಿಸಬೇಕು ॥ ೨೮ ॥

ಹೀಗೆ 'ಯದಿ' ಮೊದಲಾದ ಶಬ್ದಗಳಿಗೆ ವೈಯರ್ಥ್ಯರೂಪವಾದ ಅಂತರೋಪಪತ್ತಿಯ ಸಾಮರ್ಥ್ಯದಿಂದ ಇದೇ ಶ್ರುತ್ಯರ್ಥವೆಂದುಕ್ತವಾಗಿದೆ. ಬೇರೆ ಶ್ರುತಿಗಳ ಸಂವಾದದಿಂದಲೂ ಈ ಶ್ರುತಿಗೆ ಇದೇ ಅರ್ಥವೆಂದು ನಿರೂಪಿಸುತ್ತಾರೆ —

ಮೂ ॥ ಜೀವೇಶ್ವರ ಭಿದಾ ಚೈವ ಜಡೇಶ್ವರ ಭಿದಾ ತಥಾ । ಜೀವಭೇದೋ ಮಿಥಶ್ಚೈವ ಜಡಜೀವ ಭಿದಾ ತಥಾ । ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದಪಂಚಕಃ । ಸೋಽಯಂ ಸತ್ಯೋಽಪ್ಯನಾದಿಶ್ಚ ಸಾದಿಶ್ಚೇನ್ನಾಶಮಾಪ್ನುಯಾತ್ । ನ ಚ ನಾಶಂ ಪ್ರಯಾತ್ಯೇಷ ನ ಚಾಸೌ ಭ್ರಾಂತಿಕಲ್ಪಿತಃ । ಕಲ್ಪಿತಶ್ಚೇನ್ನಿವರ್ತೇತ ನ ಚಾಸೌ ವಿನಿವರ್ತತೇ । ದ್ವೈತಂ ನ ವಿದ್ಯತ ಇತಿ ತಸ್ಮಾದಜ್ಞಾನಿನಾಂ ಮತಂ । ಮತಂ ಹಿ ಜ್ಞಾನಿನಾಮೇತನ್ಮಿತಂ ತ್ರಾತಂ ಚ ವಿಷ್ಣುನಾ । ತಸ್ಮಾತ್ಸತ್ಯಮಿತಿ ಪ್ರೋಕ್ತಂ ಪರಮೋ ಹರಿರೇವ ತು ॥ ಇತಿ ಪರಮಶ್ರುತಿಃ ॥ ॥ ೨೯೦ ॥

ಅ ॥ ಜೀವೇಶ್ವರಭಿದಾ ಚೈವ=ಜೀವೇಶ್ವರರ ಭೇದವೂ, ತಥಾ=ಹಾಗೆ, ಜಡೇಶ್ವರ ಭಿದಾ=ಜಡೇಶ್ವರರ ಭೇದವು, ಮಿಥಶ್ಚೈವ=ಪರಸ್ಪರವಾಗಿ, ಜೀವಭೇದಃ=ಜೀವರ ಭೇದವು, ತಥಾ=ಹಾಗೆಯೇ, ಜಡಜೀವಭಿದಾ=ಜಡಜೀವರ ಭೇದವು, ಮಿಥಶ್ಚ=ಪರಸ್ಪರವಾಗಿ, ಜಡ ಭೇದಃ=ಜಡಗಳಿಗೆ ಭೇದವು, (ಹೀಗೆ) ಅಯಂ ಪ್ರಪಂಚಃ=ಈ ಭೇದವು, ಭೇದಪಂಚಕಃ=ಭೇದ ಗಳ ಐದುಪರಿಮಾಣವುಳ್ಳದ್ದು. ಸೋಽಯಂ=ಆ ಈ ಭೇದವು, ಸತ್ಯೋಹಿ=ಯಥಾರ್ಥವಾದುದು, ಅನಾದಿಶ್ಚ=ಆದಿರಹಿತವಾದುದು, ಸಾದಿಶ್ಚೇತ್=ಆದಿಸಹಿತವಾಗಿದ್ದರೆ (ಅಂದರೆ ಹುಟ್ಟಿದ್ದಾದರೆ) ನಾಶಂ=ನಾಶವನ್ನು, ಆಪ್ನುಯಾತ್=ಹೊಂದುವುದು, ಏಷಃ=ಇದು, ನಾಶಂ=ನಾಶವನ್ನು, ನ ಚ ಪ್ರಯಾತಿ = ಹೊಂದುವುದಿಲ್ಲ. ಅಸೌ=ಇದು, ಭ್ರಾಂತಿಕಲ್ಪಿತಃ=ಭ್ರಾಂತಿಪರಿಕಲ್ಪಿತವು, ನ ಚ=ಅಲ್ಲ. ಕಲ್ಪಿತಶ್ಚೇತ್=ಕಲ್ಪಿತವಾಗಿದ್ದರೆ, ನಿವರ್ತೇತ=ನಿವೃತ್ತವಾಗುವುದು. ಅಂದರೆ ಬಾಧಿಸಲ್ಪಡುವುದು ಅಸೌ = ಈ ಭೇದವು, ನ ಚ ವಿನಿವರ್ತತೇ = ನಿವೃತ್ತವಾಗುವುದಿಲ್ಲ. ತಸ್ಮಾತ್=ಆದಕಾರಣ, ದ್ವೈತಂ=ಭೇದವು, ನ ವಿದ್ಯತೇ ಇತಿ = ಇಲ್ಲವೆನ್ನುವುದು, ಅಜ್ಞಾ ನಿನಾಂ=ಅಜ್ಞಾನಿಗಳ, ಮತಂ=ಅಭಿಮತವು, ಏತತ್=ಈ ಭೇದವು, ಜ್ಞಾನಿನಾಂ=ಜ್ಞಾನಿಗಳಿಗೆ, ಮತಂ=ಸಮ್ಮತವಷ್ಟೆ! ಹಿ=ನಿಶ್ಚಯವು. ವಿಷ್ಣುನಾ=ಶ್ರೀಹರಿಯಿಂದ, ಮಿತಂ=ತಿಳಿಯಲ್ಪಟ್ಟದೆ. ತ್ರಾತಂ ಚ=ರಕ್ಷಿಸಲ್ಪಟ್ಟದೆ ತಸ್ಮಾತ್=ಆದಕಾರಣ, ಸತ್ಯಮಿತಿ=ಸತ್ಯವೆಂದೇ, ಪ್ರೋಕ್ತಂ= ನಿಶ್ಚೈಸಲ್ಪಟ್ಟದೆ. ಪರಮಃ=ಸರ್ವೋತ್ತಮನು, ಹರಿರೇವ ತು=ಶ್ರೀಹರಿಯೇ ಸರಿ. ಇತಿ=ಹೀಗೆ, ಪರಮಶ್ರುತಿಃ=ಪರಮಶ್ರುತಿಯು ॥ ೨೯೦ ॥

ಬೇರೆ ಶ್ರುತಿಗಳಲ್ಲಿ ಪ್ರಪಂಚವು ಮಿಥ್ಯೆಯೆಂದು ಹೇಳಿದವರನ್ನು ನಿಂದಿಸಿರುವುದರಿಂದಲೂ 'ಪ್ರಪಂಚೋ ಯದಿ' ಎಂಬೀ ವಾಕ್ಯಕ್ಕೆ ಪ್ರಪಂಚವು ಒಬ್ಬ ಜೀವನ ಅಜ್ಞಾನದಿಂದ ಕಲ್ಪಿಸಲ್ಪಟ್ಟ ದ್ದೆನ್ನುವ ಅರ್ಥವನ್ನು ಅಂಗೀಕರಿಸಕೂಡದು ಎಂದಭಿಪ್ರಾಯದಿಂದ ಹೇಳುತ್ತಾರೆ.

**ಮೂ ॥ (೧) ಮೈತ್ರೇಯಿಶಾಖಾಯಾಂ ಚ। ಅಥ ಜ್ಞಾನೋಪಸರ್ಗಾ ಇತ್ಯುಕ್ತ್ವಾ ಅಥ ಯೇ ಚಾನ್ಯೇ ಮಿಥ್ಯಾತರ್ಕೈರ್ದೃಷ್ಟಾಂತೈಃ ಕುಹಕೇಂದ್ರಜಾಲೈರ್ವೈದಿಕೇಷು ಪರಿಸ್ಥಾತುಮಿಚ್ಛಂತಿ ತೈಃ ಸಹ ನ ಸಂವಸೇತ್ಪ್ರಕಾಶ್ಯಾ ಹ್ಯೇತೇ ತಸ್ಕರಾ ಅಸ್ವರ್ಗ್ಯಾ ಇತ್ಯಾಹ ।(೨) ನೈರಾತ್ಮ್ಯವಾದ ಕುಹಕೈರ್ಮಿಥ್ಯಾ ದೃಷ್ಟಾಂತಹೇತುಭಿಃ । ಭ್ರಾಮ್ಯಲ್ಲೋಕೋ ನ ಜಾನಾತಿ ವೇದವಿದ್ಯಾಂತರಂ ತು ಯದಿತಿ । (೩) ಆತ್ಮಸಂಬಂಧಿ ಕಿಮಪಿ ನಾಸ್ತೀತಿ ವಾದೋ ನೈರಾತ್ಮ್ಯವಾದಃ ॥ ೨೯೧ ॥**

ಅ ॥ (೧) ಮೈತ್ರೇಯಿಶಾಖಾಯಾಂ ಚ=ಮೈತ್ರೇಯಿಶಾಖೆಯಲ್ಲಿಯೂ (ಉಕ್ತವಾಗಿದೆ.) ಅಥ=ಅನಂತರದಲ್ಲಿ, ಜ್ಞಾನೋಪಸರ್ಗಾಃ=ಯಥಾರ್ಥಜ್ಞಾನ ವಿಘ್ನಗಳು, (ಹೇಳಲ್ಪಡುತ್ತವೆ.) ಇತಿ ಉಕ್ತ್ವಾ=ಹೀಗೆ ಪ್ರತಿಜ್ಞಾಮಾಡಿಕೊಂಡು, 'ಅಥ ಯೇ ಚಾನ್ಯೇ' ಇದು ಮೊದಲಾದುದು ಉಕ್ತವಾಗಿದೆ. ಅಥ=ಅನಂತರದಲ್ಲಿ, ಅನ್ಯೇ = ಮೈತ್ರೇಯಿಶಾಖೆಯಲ್ಲಿ ಮೊದಲು ಹೇಳಿದ ಶೈವಾದಿಗಳಿಂದ ಇತರರಾದ, ಯೇ ಚ=ಯಾರು, ಮಿಥ್ಯಾತರ್ಕೈಃ=ಪ್ರಪಂಚಕ್ಕೆ ಮಿಥ್ಯಾತ್ವಸಾಧಕಗಳಾದ ದೃಶ್ಯತ್ವಾದಿ ಹೇತುಗಳಿಂದಲೂ, ಕುಹಕೇಂದ್ರಜಾಲೈಃ = ಕುಹಕ (ಕಪಟದಿಂದ ತೋರಿಸಲ್ಪಟ್ಟ) ಇಂದ್ರಜಾಲರೂಪಗಳಾದ, ದೃಷ್ಟಾಂತೈಃ = ದೃಷ್ಟಾಂತಗಳಿಂದಲೂ, ವೈದಿಕೇಷು=ವೇದಾಭಿಜ್ಞರಲ್ಲಿ, ಪರಿಸ್ಥಾತುಂ=ಇರಲಿಕ್ಕೆ, ಇಚ್ಛಂತಿ=ಇಚ್ಛಿಸುವರೋ,

ತ್ಯೈಃ ಸಹ=ಅವರಿಂದ ಕೂಡಿಕೊಂಡು, ನ ಸಂವಸೇತ್ = ಆವಾಸವಮಾಡಬಾರದು. ಏತೇ= ಇವರು, ಪ್ರಕಾಶ್ಯಾ ಹಿ=ಪ್ರಕಾಶದಲ್ಲಿರುವ, ತಸ್ಕರಾಃ=ಕಳ್ಳರು, ಅಸ್ವರ್ಗ್ಯಾಃ=ಸ್ವರ್ಗವನ್ನು ಹೊಂದಲಾರರು. ಇತಿ ಹಿ ಆಹ = ಹೀಗೆ ಬ್ರಾಹ್ಮಣವು ತಾನು ಹೇಳಿದ ಅರ್ಥದಲ್ಲಿ, ಸಾಕ್ಷಿಯಾಗಿ ಮಂತ್ರವನ್ನು ಉದಾಹರಿಸುತ್ತದೆ. ಹೀಗೆ ಹೇಳಿದ ಅರ್ಥವನ್ನು ಮಂತ್ರವೂ ಪ್ರತಿಪಾದಿಸುತ್ತದೆ. (೨) ನೈರಾತ್ಮ್ಯವಾದ ಕುಹಕೈಃ, ನೈರಾತ್ಮ್ಯವಾದ = ಆತ್ಮಸಂಬಂಧಿಯಾದುದು ಯಾವುದೂ ಇಲ್ಲವೆಂದು ವಾದಿಸುವ, ಕುಹಕೈಃ=ಕಪಟದಿಂದ ತೋರಿಸಲ್ಪಟ್ಟ, ಮಿಥ್ಯಾದೃಷ್ಟಾಂತ ಹೇತುಭಿಃ=ಮಿಥ್ಯಾತ್ವಸಾಧಕಗಳಾದ ದೃಷ್ಟಾಂತಗಳಿಂದಲೂ ಹೇತುಗಳಿಂದಲೂ, ಭ್ರಾಮ್ಯನ್= ತಿರುಗಾಡತಕ್ಕ, ಲೋಕಃ=ಜನರು, ಯತ್=ಯಾವಕಾರಣದಿಂದ, ವೇದವಿದ್ಯಾಂತರಂ=ವೇದ ವಿದ್ಯೆಯ ಅಭಿಪ್ರಾಯವನ್ನು, ನ ಜಾನಾತಿ=ತಿಳಿಯುವುದಿಲ್ಲ. ಇತಿ=ಹೀಗೆ, ಹಿಂದೆ ಹೇಳಿದ ಅರ್ಥವನ್ನು ಮಂತ್ರವೂ ಹೇಳುತ್ತದೆ. (೩) ಆತ್ಮಸಂಬಂಧಿ=ಆತ್ಮನಿಗೆ ಸಂಬಂಧಪಟ್ಟದ್ದು, ಕಿಮಪಿ=ಯಾವುದೂ, ನಾಸ್ತಿ=ಇಲ್ಲವು, ಇತಿ ವಾದಃ=ಹೀಗೆ ಹೇಳುವುದು, ನೈರಾತ್ಮ್ಯವಾದಃ= ನೈರಾತ್ಮ್ಯವಾದವೆನ್ನಿಸುತ್ತದೆ.

ತಾ || 'ವೈದಿಕರಾಗಲು ಇಚ್ಛಿಸುತ್ತಾರೆ' ಎಂದು ಹೇಳಿರುವುದರಿಂದ ಮಾಯಾವಾದಿಗಳಿಂದೇ ಅಂಗೀಕರಿಸಬೇಕು. ಬೌದ್ಧಾದಿಗಳು ವೈದಿಕರಾಗಲಿಕ್ಕೆ ಇಚ್ಛಿಸುವುದಿಲ್ಲ || ೨೯೧ ||

ಹೀಗೆ ಕಲ್ಪಕನಾದ ಜೀವನನ್ನಧಿಕರಿಸಿ ದೂಷಿಸಿರುವುದರಿಂದ ಸರ್ವಜಗತ್ತು ಒಬ್ಬ ಜೀವನ ಅಜ್ಞಾನದಿಂದ ಪರಿಕಲ್ಪಿತವೆನ್ನುವ ಪಕ್ಷವು ದೂಷಿತವಾಯಿತು. ಈಗ ಪರಿಕಲ್ಪ್ಯವಾದ ಜಗತ್ತನ್ನು ಅಧಿಕರಿಸಿ ದೂಷಿಸುತ್ತಾರೆ —

**ಮೂ || (೧) ಭ್ರಾಂತಿಕಲ್ಪಿತತ್ವೇ ಚ ಜಗತಃ ಸತ್ಯಂ ಜಗದ್ದ್ವಯಮಪೇಕ್ಷಿತಂ | (೨)ನ ಹಿ ಸತ್ಯಶುಕ್ತೇಃ ಸತ್ಯರಜತಸ್ಯ ತಯೋಃ ಸಾದೃಶ್ಯಸ್ಯ ಚಾಭಾವೇ ಭ್ರಾಂತಿರ್ಭವತಿ || ೨೯೨ ||**

ಅ || (೧) ಜಗತಃ = ಪ್ರಪಂಚಕ್ಕೆ, ಭ್ರಾಂತಿಕಲ್ಪಿತತ್ವೇ ಚ=ಭ್ರಮೆಯಿಂದ ಪರಿಕಲ್ಪಿತತ್ವವಿದ್ದರೆ, ಸತ್ಯಂ ಜಗದ್ದ್ವಯಂ=ಯಥಾರ್ಥವಾದ ಎರಡು ಜಗತ್ತು, ಅಪೇಕ್ಷಿತಂ=ಅಪೇಕ್ಷಿಸಲ್ಪಡುವುದು. (೨) ಸತ್ಯಶುಕ್ತೇಃ = ಯಥಾರ್ಥವಾದ ಮುತ್ತಿನಚಿಪ್ಪಿಗೂ, ಸತ್ಯರಜತಸ್ಯ= ಯಥಾರ್ಥವಾದ ಬೆಳ್ಳಿಗೂ, ತಯೋಃ = ಅವುಗಳ, ಸಾದೃಶ್ಯಸ್ಯ ಚ=ಸಾದೃಶ್ಯಕ್ಕೂ ಕೂಡ, ಅಭಾವೇ=ಇಲ್ಲದಿದ್ದರೆ, ಭ್ರಾಂತಿಃ=ಭ್ರಮೆಯು, ನ ಹಿ ಭವತಿ=ಆಗುವುದಿಲ್ಲವಷ್ಟೆ!

ತಾ || (1) ಜಗತ್ತು ಭ್ರಾಂತಿಪರಿಕಲ್ಪಿತವಾದರೆ ಅಧಿಷ್ಠಾನಪ್ರಧಾನಗಳೆಂಬ ಎರಡು ಸತ್ಯಗಳು ಅಪೇಕ್ಷಿತಗಳಾಗಿವೆ. ಅಂದರೆ ಅಧಿಷ್ಠಾನಪ್ರಧಾನಗಳಿಗೆ ಆರೋಪ್ಯವಾದ ಜಗತ್ತಿನಿಂದ ಸಾದೃಶ್ಯವು ಅಪೇಕ್ಷಿತವಾದಪ್ರಯುಕ್ತ ಜಗತ್ತಿಗೇನೆ, ಜಗತ್ತಿನಿಂದ ಸಾದೃಶ್ಯವು ಕೂಡುವುದರಿಂದ ಸತ್ಯಗಳಾದ ೨ ಜಗತ್ತುಗಳು ಅಪೇಕ್ಷಿತಗಳಾಗಿವೆ ಎಂದುಕ್ತವಾಯಿತು. ಜೀವಜಡಾತ್ಮಕವಾದ ಎಲ್ಲಾ ಜಗತ್ತು ಭ್ರಾಂತಿಪರಿಕಲ್ಪಿತವಾಗಿದ್ದರೆ ಕಲ್ಪಿಸಲ್ಪಡುವ ಜಗತ್ತಿಗೆ ಸದೃಶಗಳಾದ ಅಧಿಷ್ಠಾನಪ್ರಧಾನಗಳೆಂಬ ೨ ಸತ್ಯಜಗತ್ತುಗಳನ್ನು ಮೊದಲು ಅಂಗೀಕರಿಸಬೇಕಾಗುವುದು. ಸತ್ಯವಾದುದೊಂದು ಜಗತ್ತನ್ನು ಅಂಗೀಕರಿಸದಿದ್ದವನಿಗೆ ಎರಡು ಸತ್ಯಜಗತ್ತುಗಳನ್ನಂಗೀಕರಿಸುವುದು ಯುಕ್ತವಲ್ಲವು. ಸ್ವಾಪೇಕ್ಷಿತಕ್ಕಿಂತ ಅಧಿಕವೇ ಬೀಳುವುದು. ಆದಕಾರಣ ಈ ಜಗತ್ತು ಭ್ರಾಂತಿಪರಿಕಲ್ಪಿತವಲ್ಲವು. ಹೀಗೆ ದೃಶ್ಯತ್ವಾನುಮಾನಕ್ಕೆ ತರ್ಕಪರಾಹತಿಯು ಉಕ್ತವಾಯಿತು. (2)

ಅಥವಾ ಕಲ್ಪನೆಗೆ ಆರೋಪ್ಯಸದೃಶಗಳಾದ ಅಧಿಷ್ಠಾನ ಪ್ರಧಾನಪೂರ್ವಕತ್ವವು ವ್ಯಾಪಕವಾಗಿದೆ. ಅದು ಇಲ್ಲಿ ಇಲ್ಲ. ಸತ್ಯಗಳಾದ ಎರಡು ಜಗತ್ತುಗಳನ್ನು ಒಡಂಬಡುವುದಕ್ಕಿಂತ ಈ ಜಗತ್ತಿಗೇನೆ ಸತ್ಯತ್ವವನ್ನು ಒಡಂಬಡುವುದು ಲಘುವಾಗಿದೆ. ಆದಕಾರಣ ಜಗತ್ಕಲ್ಪನೆಯೇ ಕೂಡುವುದಿಲ್ಲ. ಹೀಗೆ ಪ್ರಮಾಣವಿರೋಧವು. (3) ಹೀಗೆ ಅನುಮಾನಪ್ರಯೋಗವು '೧ ಪ್ರಪಂಚಃ ನ ಭ್ರಾಂತಿ ಕಲ್ಪಿತಃ ನಿರಧಿಷ್ಠಾನತ್ವಾತ್ ನಿಷ್ಪ್ರಧಾನತ್ವಾತ್ ಆತ್ಮವತ್ ವ್ಯತಿರೇಕೇಣ ವಾ ರಜತವತ್' = ಜಗತ್ತು ಭ್ರಾಂತಿಕಲ್ಪಿತವಲ್ಲ ಅಧಿಷ್ಠಾನವಿಲ್ಲದಿರುವುದರಿಂದ ಪ್ರಧಾನವಿಲ್ಲದಿರುವುದರಿಂದ ಆತ್ಮನಂತೆಯೇ, ಅಥವಾ ವ್ಯತಿರೇಕದಿಂದ (ಸಾಧ್ಯಾಭಾವ ಹೇತ್ವಭಾವಗಳಿಂದ) ರಜತದಂತೆಯೇ, '೨ ಜಗತ್ಪ್ರತೀತಿಃ ನ ಭ್ರಾಂತಿಃ ಪೂರ್ವೋಕ್ತಾತ್ ಹೇತುದ್ವಯಾತ್ ಆತ್ಮಪ್ರತೀತಿವತ್ ಶುಕ್ತಿರಜತಪ್ರತೀತಿವಚ್ಚ' = ಜಗತಿನ ಪ್ರತೀತಿಯೂ ಭ್ರಾಂತಿಯಲ್ಲ, ಹಿಂದಿನ ೨ ಹೇತುಗಳಿಂದ ಆತ್ಮನ ಜ್ಞಾನದಂತೆಯೇ, ಶುಕ್ತಿರಜತದ ಜ್ಞಾನದಂತೆಯೇ, ಹೇತುವನ್ನಂಗೀಕರಿಸಿ ಸಾಧ್ಯವನ್ನಂಗೀಕರಿಸದಿದ್ದರೆ ಆರೋಪ್ಯ ಸದೃಶಗಳಾದ ಅಧಿಷ್ಠಾನ ಪ್ರಧಾನಭೂತಗಳಾದ ೨ ಸತ್ಯಜಗತ್ತುಗಳನ್ನು ಅಂಗೀಕರಿಸಬೇಕಾಗು ವುದೆಂಬುವುದೇ ಬಾಧಕವು ॥ ೨೮೨ ॥

(1) ನಿರಧಿಷ್ಠಾನತ್ವರೂಪಹೇತುವಿಗೆ ಅನೈಕಾಂತ್ಯವದೆ ಎಂದು ಹೇಳಲಿಕ್ಕೆ ಶಂಕಿಸುವರು. ಸ್ವಾಪ್ನಪದಾರ್ಥಗಳು ಭ್ರಾಂತಿಕಲ್ಪಿತಗಳು. ಅವುಗಳು ಸತ್ಯಗಳೆಂದು ಹೇಳುವುದಾದರೆ ೧ ಅನಾದಿನಿತ್ಯಗಳೋ, ಅಥವಾ ೨ ಉತ್ಪತ್ತಿವಿನಾಶಗಳುಳ್ಳವುಗಳೋ, ೧ನೇ ಕಲ್ಪದಲ್ಲಿ ಸ್ವಪ್ನದಿಂದ ಮೊದಲು ಮೇಲೆಯೂ ಉಪಲಬ್ಧವಾಗಬೇಕಾಗುವುವು. ೨ನೇ ಕಲ್ಪದಲ್ಲಿಯೂ ಇದೇ ದೋಷವು ಬರುವುದು. (2) ಸ್ವಪ್ನಕಾಲದಲ್ಲಿಯೇ ಹುಟ್ಟುತ್ತವೆ, ನಷ್ಟವಾಗುತ್ತವೆ ಎಂದೂ ಹೇಳಕೂಡದು. ತತ್ಕಾಲದಲ್ಲಿ ಹುಟ್ಟಿ ನಷ್ಟಗಳಾಗುತ್ತವೆ ಎಂಬುವುದು ಸಂಭಾವಿತವಲ್ಲ. ಮಿಂಚು ಮೊದಲಾದವುಗಳಂ ತೆಯೇ ತತ್ಕಾಲದಲ್ಲಿ ಉತ್ಪತ್ತಿವಿನಾಶಗಳನ್ನು ಹೇಳಿದರೂ ಪೂರ್ವೋತ್ತರಕಾಲಗಳಲ್ಲಿ ಉಪಾದಾನ ನಿಮಿತ್ತಕಾರಣಗಳು ಕಾಣಲ್ಪಡಬೇಕಾಗುವುವು. ಮತ್ತು ಸ್ವಾಪ್ನಪದಾರ್ಥಗಳನ್ನು ದೇಹದ ಒಳಗೆ ನೋಡುತ್ತಾನೋ, ಹೊರಗೆ ನೋಡುತ್ತಾನೋ, ದೇಹದ ಒಳಗೆ ಎಂದು ಹೇಳಕೂಡದು. ಅಲ್ಪ ಪ್ರದೇಶದಲ್ಲಿ ಅತಿದೊಡ್ಡದಾದ ಗಜತುರಗಾದಿಗಳನ್ನು ನೋಡುವುದು ಕೂಡಲಾರದು. ೨ನೇದ್ದೂ ಕೂಡಲಾರದು. ಸಮೀಪದಲ್ಲಿದ್ದವರಿಗೂ ಕಾಣಬೇಕಾಗುವುವು. ಮತ್ತು ಅವುಗಳು ಯಾವ ಇಂದ್ರಿಯದಿಂದ ಕಾಣಲ್ಪಡುತ್ತವೆ. ಬಾಹ್ಯಗಳಾದ ಚಕ್ಷುರಾದಿ ಇಂದ್ರಿಯಗಳಿಂದ ಎಂದನ್ನ ಕೂಡದು. ಆಗ ಅವುಗಳು ಉಪರತಗಳಾಗಿವೆ. ಮನಸ್ಸಿನಿಂದ, ಎಂದೂ ಅನ್ನಕೂಡದು. ಮನಸ್ಸಿಗೆ ಹೊರಗೆ ಸ್ವಾತಂತ್ರ್ಯವಿಲ್ಲವು. ಅಂದರೆ ಆಯಾಯ ಇಂದ್ರಿಯಗಳಲ್ಲಿದ್ದೇ ಬಾಹ್ಯಾರ್ಥ ಜ್ಞಾನವನ್ನು ಹುಟ್ಟಿಸುವುದು. ಸ್ವತಂತ್ರವಾಗಿ ಹುಟ್ಟಿಸಲಾರದು. ಮತ್ತು ಕಾಶಿಯಲ್ಲಿ ಮಲಗಿ ದವನು ಮಧುರಾ ಪಟ್ಟಣವನ್ನು ನೋಡುವನು. ಹೇಮಂತಋತುವಿನಲ್ಲಿ ಮಲಗಿದವನು ವಸಂತ ರ್ತುವನ್ನು ನೋಡುತ್ತಾನೆ. ಕಾಶೀ ಹೇಮಂತಋತುಗಳಲ್ಲಿ ಮಧುರಾವಸಂತಗಳು ಇರಲಿಕ್ಕಿ ಲ್ಲವು. ಆದಕಾರಣ ಇದು ಭ್ರಾಂತಿಯೇ ಸರಿ. ಅಲ್ಲಿ ಯಾವುದೂ ಅಧಿಷ್ಠಾನವೇ ಇಲ್ಲ. ಸ್ವಾಪ್ನಾರ್ಥ ಗಳಾದ ಗಜ ತುರಗಾದಿಗಳು ತನ್ನಿಂದ ಭಿನ್ನಗಳಾಗಿಯೇ ಉಪಲಬ್ಧಗಳಾಗುತ್ತವೆ. ಆಗ ನಾನು ಗಜವು ಎಂದು ಪ್ರತೀತಿಯಿಲ್ಲವು. ಅಂತೂ ಯಾವುದು ಯಾವುದು ಭ್ರಾಂತಿಯೋ ಅದು ಅದು ಅಧಿಷ್ಠಾನ ಸಹಿತವಾಗಿದೆ ಎನ್ನುವ ವ್ಯಾಪ್ತಿಗೆ ಭಂಗವು ಎಂದಾಶಂಕಿಸಿದರೆ —

**ಮೂ ॥ ಸ್ವಪ್ನೇಽಪಿ ವಾಸನಾರೂಪಂ ಸತ್ಯಮೇವ ಜಗನ್ಮನಸಿ ಸ್ಥಿತಂ ಬಹಿಸ್ಥ- ತ್ವೇನ ದೃಶ್ಯತೇ ॥ ೨೮೩ ॥**

ಅ ॥ ಸ್ವಪ್ನೇಪಿ=ಸ್ವಪ್ನದಲ್ಲಿಯೂ ಕೂಡ, ವಾಸನಾರೂಪಂ=ಸಂಸ್ಕಾರೋಪಾದಾನಕವಾದ, ಸತ್ಯಮೇವ=ಯಥಾರ್ಥವೇ ಆದ, ಜಗತ್=ಗಜ ಮೊದಲಾದ ಪ್ರಪಂಚವು, ಮನಸಿಸ್ಥಿತಂ=ಮನಸ್ಸಿನಲ್ಲಿರತಕ್ಕದು, ಬಹಿಸ್ಥತ್ವೇನ=ಬಾಹ್ಯವೇ ಉಪಾದಾನ ಕಾರಣವಾಗಿ ಉತ್ಪತನದಿಂದಲೂ, ಬಹಿರನುಭೂತವಾದ ಪದಾರ್ಥೈಕ್ಯದಿಂದಲೂ, ದೃಶ್ಯತೇ=ಕಾಣಲ್ಪಡುತ್ತದೆ.

ತಾ ॥ (1) ಜಾಗ್ರದವಸ್ಥೆಯಲ್ಲಿ ಮಾತ್ರವಲ್ಲ, ಸ್ವಪ್ನದಲ್ಲಿಯೂ ಸತ್ಯವೇ ಆದ ಗಜ ಮೊದಲಾದುದು ಪ್ರತೀತವಾಗುವುದು. ಆದಕಾರಣ ಅಧಿಷ್ಠಾನವಿಲ್ಲದಿದ್ದರೂ ವಿರೋಧವಿಲ್ಲ. (2) ಉತ್ಪತ್ತಿ ವಿನಾಶಗಳನ್ನೊಡಂಬಟ್ಟಪ್ರಯುಕ್ತ ಸತ್ಯವೆಂದರೂ ಬಾಧಕವಿಲ್ಲವು. (3) ಮಿಂಚುಗಳಂತೆಯೇ ತತ್ಕಾಲದಲ್ಲಿಯೇ ಉತ್ಪತ್ತಿವಿನಾಶಗಳು ಸಂಭವಿಸುವುದರಿಂದ ಮೊದಲೂ ಮೇಲೆಯೂ ಉಪಲಬ್ಧಿಗಳಾಗುವುದಿಲ್ಲ. (4) ಉಪಾದಾನನಿಮಿತ್ತಾದಿಗಳು ತೋರಬೇಕಾಗುವುವು ಎಂದರೆ, ಸಂಸ್ಕಾರವೇ ಉಪಾದಾನ ಕಾರಣವು. ಆ ಸಂಸ್ಕಾರಗಳು ಅತೀಂದ್ರಿಯಗಳಾದುದರಿಂದ ಕಾಣದಿರುವುದು ಯುಕ್ತವಾಗುತ್ತದೆ. ಅದೃಷ್ಟ ಈಶ್ವರಾದಿಗಳು ನಿಮಿತ್ತಕಾರಣವು. (5) ಸ್ವಾಪ್ನ ಗಜತುರಗಾದಿಗಳಿಗೆ ಅತೀಂದ್ರಿಯವೇ ಉಪಾದಾನಕಾರಣವಾಗಿದ್ದರೆ ಉಪಲಬ್ಧಿಯು ಹೇಗೆ ಸಂಭವಿಸುವುದೆಂದರೆ ಅತೀಂದ್ರಿಯದ ಕಾರ್ಯವು ತ್ರ್ಯಣುಕದಂತೆಯೇ ಕಾಣಬಹುದು. (6) ಸಂಸ್ಕಾರವು ಉಪಾದಾನಕಾರಣವಾಗಿರುವ ಪ್ರಯುಕ್ತ ಬಾಹ್ಯಪದಾರ್ಥಗಳಿಂದ ವೈಲಕ್ಷಣ್ಯವಿದೆ. ಆದುದರಿಂದಲೇ ಮನಸ್ಸಿನ ಒಳಗೇನೆ ಉಪಲಬ್ಧವಾಗುತ್ತದೆ. ಅಂತೂ ಅಲ್ಪದೇಶದಲ್ಲಿಯೂ ಅತಿ ದೊಡ್ಡ ವಸ್ತುಗಳಿಗೂ ದರ್ಶನವು ಕೂಡುವುದರಿಂದ ದೇಹವು ಶೀಳಿಹೋಗುವುದಿಲ್ಲ. ಸ್ವಾಪ್ನವಸ್ತುಗಳು ಬಾಹ್ಯ ಪದಾರ್ಥಗಳಾಗದೆ ಇರುವುದರಿಂದ ಮನಸ್ಸು ಸ್ವತಂತ್ರವಾಗಿಯೇ ಅವುಗಳ ಜ್ಞಾನವನ್ನು ಹುಟ್ಟಿಸಬಹುದು (7) ಕಾಶೀಮಥುರಾದಿ ಪಟ್ಟಣಗಳಿಗೂ ಹೇಮಂತ ವಸಂತ ಋತುಗಳಿಗೂ ವಾಸನಾಮಯತ್ವವಿದ್ದುದರಿಂದಲೇ ಅವುಗಳ ದರ್ಶನವು ಅಯುಕ್ತವು ಅಲ್ಲವು. (8) ಹಾಗಾದರೆ ತನ್ನ ಶಿರಸ್ಸು ಛಿನ್ನವಾಯಿತು. ಇದು ಮೊದಲಾದ ಪ್ರತೀತಿಯು ಕೂಡಲಾರದು. ಅದು ಈ ಜನ್ಮದಲ್ಲಿ ಅನುಭೂತವಾಗದಿರುವುದರಿಂದ ವಾಸನಾಮಯವಾಗಲಾರದು ಎಂದರೆ, ಮನಸ್ಸಿನಲ್ಲಿಯೇ ಇರತಕ್ಕದು. ಅಂದರೆ — ಮನಸ್ಸು ಅನಾದಿಯಾಗಿದೆ. ಮನಸ್ಸು ಸಾದಿಯಾಗಿದ್ದರೆ ಸಂಸಾರವು ಸಾದಿಯಾಗಬೇಕಾಗುವುದು. ತನ್ನ ಶಿರಶ್ಛೇದಾದಿಗಳು ಜನ್ಮಾಂತರದಲ್ಲಿ ಅನುಭೂತವಾದ ವಸ್ತುವಿನ ಸಂಸ್ಕಾರ ರೂಪದಿಂದ ಪರಿಣಾಮವನ್ನು ಹೊಂದುತ್ತದೆ. (9) ಸ್ವಾಪ್ನಜಗತ್ತು ಸತ್ಯವಾಗಿದ್ದರೆ 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' (ಬ್ರ. ಸೂ. ಅ. ೨, ಪಾ. ೨, ಸೂ ೨೯.) ಸ್ವಪ್ನದಿಂದ ಜಾಗರೂಕನಾದವನಿಗೆ ಇದು ಸ್ವಪ್ನವು; ಇದು ಬಾಹ್ಯ ಗಜವಲ್ಲವೆಂದು ಬಾಧಕವಿದ್ದುದರಿಂದ ಸ್ವಾಪ್ನಪದಾರ್ಥಕ್ಕೆ ಮಿಥ್ಯಾತ್ವವನ್ನು ಹೇಳಬೇಕು. ಪ್ರಪಂಚಕ್ಕೆ ಬಾಧಕವಿಲ್ಲದಿರುವುದರಿಂದ ವೈಲಕ್ಷಣ್ಯವಿದ್ದಪ್ರಯುಕ್ತ ಸ್ವಾಪ್ನಪದಾರ್ಥದಂತೆ ಮಿಥ್ಯಾತ್ವವಿಲ್ಲ. ಸತ್ಯತ್ವವನ್ನೇ ಒಡಂಬಡಬೇಕು. ಎಂಬೀ ಸೂತ್ರವು ಹೇಗೆ ಕೂಡುವುದೆಂದರೆ, ಬಾಹ್ಯಪದಾರ್ಥವೇ ಉಪಾದಾನಕಾರಣವಾಗಿರುವುದರಿಂದಲೂ ಹೊರಗೆ ಅನುಭೂತವಾದ ಪದಾರ್ಥೈಕ್ಯದಿಂದಲೂ ಕಾಣಲ್ಪಡುತ್ತದೆ. ಸೂತ್ರವು ಅದನ್ನಪೇಕ್ಷಿಸಿ ಹೊರಟಿದೆ. (10) ಗಜವನ್ನು ಕಂಡೆನು, ಆದರೆ ಇದು ಸ್ವಾಪ್ನವೇ ಆಗಿರುತ್ತದೆ. ಬಾಹ್ಯವಲ್ಲವೆಂದೇ ಪ್ರತೀತಿಯು ಎಚ್ಚತ್ತವನಿಗೆ ಹುಟ್ಟುತ್ತದೆ. ಮನೋರಥದಲ್ಲಿ ಕಾಣುವ ಪದಾರ್ಥಗಳಿಗೂ ಸ್ವಾಪ್ನಪದಾರ್ಥದಂತೆ ವಾಸನಾಮಯತ್ವವಿದ್ದುದರಿಂದ ಸತ್ಯವೇ ಆದ ಪ್ರಯುಕ್ತ 'ಯಾವುದು ಭ್ರಾಂತಿಯೋ ಅದು ಅಧಿಷ್ಠಾನಸಹಿತವಾಗಿದೆ' ಎಂಬೀ ವ್ಯಾಪ್ತಿಗೆ ಭಂಗವಿಲ್ಲವು. ಆದರೆ ಸ್ವಪ್ನದಲ್ಲಿ ಅದೃಷ್ಟವಶದಿಂದಲೇ

ವಾಸನೋಪಾದಾನಕ ಪದಾರ್ಥಗಳ ಸೃಷ್ಟಿಯು ಕಾಣಲ್ಪಡುತ್ತದೆ. ಮನೋರಥದಲ್ಲಿ ಆದರೂ ವಾಸನಾಮಯ ಪದಾರ್ಥಗಳ ಸೃಷ್ಟಿಯು ಪುರುಷಪ್ರಯತ್ನಾಧೀನವಾದುದು ॥ ೨೯೩ ॥

'ನಾನು ಮನುಷ್ಯನು' ಎಂದು ದೇಹದಲ್ಲಿ ಆತ್ಮನೆಂಬ ಭ್ರಾಂತಿಯುದೆ. ಅದರಿಂದಲೇ ರಾಗದ್ವೇಷಗಳು ಹುಟ್ಟುತ್ತವೆ; ಅದರಿಂದ ಪುಣ್ಯಪಾಪರೂಪಪ್ರವೃತ್ತಿಯು ಹುಟ್ಟುತ್ತದೆ; ಅದರಿಂದ ಅಪೂರ್ವ ದೇಹಾದಿಗಳು ಲಭಿಸುತ್ತವೆ; ಅದರಿಂದ ದುಃಖವು ಪ್ರಾಪ್ತವಾಗುತ್ತದೆ. ಯದ್ಯಪಿ ದೇಹಾತ್ಮ ಭ್ರಮದಲ್ಲಿ ಶರೀರಾತ್ಮರೂಪಗಳಾದ ಅಧಿಷ್ಠಾನ ಪ್ರಧಾನಗಳಿವೆ. ಆದಾಗ್ಯೂ ಅಧಿಷ್ಠಾನ ಪ್ರಧಾನಗಳಿಗೆ ಸಾದೃಶ್ಯವಿಲ್ಲದಿರುವುದರಿಂದ ವ್ಯಾಪ್ತಿಗೆ ಭಂಗವು ಎಂದರೆ, ದೇಹಾತ್ಮೈಕ್ಯ ಭ್ರಮದಲ್ಲಿ (೧) ಆತ್ಮನಲ್ಲಿ ದೇಹಾರೋಪವೋ, (೨) ದೇಹದಲ್ಲಿ ಆತ್ಮಾರೋಪವೋ, (೩) ಅಥವಾ ಭಿನ್ನರಾದ ದೇಹಾತ್ಮರಿಗೆ ಅಭೇದಾರೋಪವೋ ೧ನೇ ೨ನೇ ಕಲ್ಪಗಳು ಕೂಡಲಾರವು. ಆರೋಪ್ಯರಾದ ದೇಹಾತ್ಮರಿಗೆ ಪ್ರಾತಿಭಾಸಿಕತ್ವವು ಬರಬೇಕಾಗುವುದು. ಸತ್ಯಭೂತವಾದ ಬೇರೆ ದೇಹವಿಲ್ಲವು. ೩ನೇ ಕಲ್ಪವು ಅಯುಕ್ತವು. ಆವಿಪಾಲ ಗೋಪಾಲ ಪರ್ಯಂತವಾಗಿ ದೇಹಕ್ಕೂ ಆತ್ಮನಿಗೂ ಭೇದಜ್ಞಾನವದೆ. (೪) 'ನಾನು ಮನುಷ್ಯನು' ಇದು ಮೊದಲಾದ ವ್ಯವಹಾರವಾದರೂ ಔಪಚಾರಿಕವು. ಆ ವಿಷಯದಲ್ಲಿ ಕಾರಣವನ್ನು ತೋರಿಸುತ್ತಾರೆ—

ಮೂ ॥ (೧) ದೇಹಾತ್ಮನೋರಪ್ಯೇಕದೇಶಸ್ಥತ್ವಾದಿ ಸಾದೃಶ್ಯಮಸ್ತ್ಯೇವ । (೨) ಶಂಖಃ ಪೀತೋ ನಭೋ ನೀಲಮಿತ್ಯಾದಿಷ್ವಪಿ ಪೀತಾದಯೋಽನ್ಯತ್ರ ವಿದ್ಯಂತ ಏವ । ತತ್ಸಾದೃಶ್ಯಂ ಚ ದ್ರವ್ಯತ್ವಾದಿಕಂ ಕಿಂಚಿತ್ಖಂ ಖಾದೀನಾಂ ಚಾಸ್ತ್ಯೇವ । ಅತೋ ನ ಕುತ್ರಾಪಿ ಸದೃಶಸತ್ಯವಸ್ತುದ್ವಯಂ ವಿನಾ ಭ್ರಮಃ ॥ ೨೯೪ ॥

ಅ ॥ (೧) (ಹೇಗೆ ವಸ್ತುತಃ ಭಿನ್ನಗಳಾದ ಪಟತಂತುಗಳಿಗೆ ಏಕದೇಶದಲ್ಲಿರುವಿಕೆ, ಬೇದವು ತೋರಿದರೂ ಸ್ಪಷ್ಟವಾಗಿ ವಿವೇಕವಿಲ್ಲದಿರುವಿಕೆಯೂ ಇದೆಯೋ ಹಾಗೆಯೇ) ದೇಹಾತ್ಮನೋರಪಿ=ದೇಹಾತ್ಮರಿಗೂ, ಏಕದೇಶಸ್ಥತ್ವಾದಿ ಸಾದೃಶ್ಯಂ ಅಸ್ತ್ಯೇವ=ಏಕದೇಶಸ್ಥತ್ವ ಮೊದಲಾದಸಾದೃಶ್ಯವು ಉಂಟೇ ಉಂಟು (ಅಂದರೆ ದೇಹಾತ್ಮರಿಗೂ ಏಕದೇಶಸ್ಥತ್ವಾದಿ ಸಾದೃಶ್ಯವಿದ್ದುದರಿಂದಲೂ ಸ್ಪಷ್ಟವಾಗಿ ಭೇದಜ್ಞಾನವಿಲ್ಲದಿರುವುದರಿಂದಲೂ ನಾನು ಮನುಷ್ಯನು ಇದು ಮೊದಲಾದ ವ್ಯವಹಾರವು ಕೂಡುತ್ತದೆ. ಆದಕಾರಣ ಈ ದೇಹಾತ್ಮ ಭ್ರಮೆಯೇ ಇಲ್ಲದಿರುವುದರಿಂದ ವ್ಯಾಪ್ತಿಗೆ ಭಂಗವನ್ನು ಶಂಕಿಸಕೂಡದು. ಸ್ಪಷ್ಟವಾಗಿ ಭೇದಜ್ಞಾನವಿಲ್ಲದಿರುವದರಿಂದಲೇ ಸಂಸಾರವು ಕೂಡಬಹುದು) (೨) (ಶಂಖವು ಹಳದಿ, ಆಕಾಶವು ನೀಲವು, ಬೆಲ್ಲವು ಕಹಿ ಇತ್ಯಾದಿಗಳಲ್ಲಿ ಅಧಿಷ್ಠಾನ ಪ್ರಧಾನಸಾದೃಶ್ಯ ರೂಪವಾದುದು ಮೂರೂ ಇಲ್ಲದಿರುವುದರಿಂದ ವ್ಯಾಪ್ತಿಯು ಭಗ್ನವಾಯಿತೆಂದರೆ)ಶಂಖಃ ಪೀತಃ ನಭೋ ನೀಲಂ, ಇತ್ಯಾದಿಷ್ವಪಿ=ಶಂಖವು ಪೀತವು ಆಕಾಶವು ನೀಲವು ಇತ್ಯಾದಿಗಳಲ್ಲಿಯೂ, ಪೀತಾದಯಃ=ಚಿರ, ಬಿಲ್ವ, ಜಂಬೂಫಲ ನಿಂಬ ಬೀಜಾದಿಗಳು, ಅನ್ಯತ್ರ=ಬೇರೆ ಕಡೆಯಲ್ಲಿ ವಿದ್ಯಂತೆ ಏವ=ಇವೆಯೇ, ತತ್ಸಾದೃಶ್ಯಂ ಚ=ಅವುಗಳ ಸಾದೃಶ್ಯವೂ ಕೂಡ, ದ್ರವ್ಯತ್ವಾದಿಕಂ ಕಿಂಚಿತ್=ದ್ರವ್ಯತ್ವ ಮೊದಲಾದುದು ಯಾವುದಾದರೊಂದು, ಶಂಖಾದೀನಾಂ ಚ=ಶಂಖಮೊದಲಾದವುಗಳಿಗೂ ಕೂಡಾ, ಅಸ್ತ್ಯೇವ=ಇದ್ದೇ ಇದೆ. (ಇದೇ ರೀತಿ ಭ್ರಾಂತಿಗೆಅಧಿಷ್ಠಾನ ಪ್ರಧಾನ ಸಾದೃಶ್ಯಗಳು ಇರಲೇಬೇಕು. ಹೀಗೆಯೇ ವ್ಯಾಪ್ತಿಯನ್ನು ಸರ್ವತ್ರ ಉಪಪಾದಿಸಬೇಕು, ಎಂದು ಅಭಿಪ್ರಾಯದಿಂದ ಉಪಸಂಹಾರ ಮಾಡುತ್ತಾರೆ) ಅತಃ=ಆದಕಾರಣ, ಕುತ್ರಾಪಿ=ಎಲ್ಲಿಯೂ, ಸದೃಶಸತ್ಯವಸ್ತುದ್ವಯಂ ವಿನಾ=ಸದೃಶಗಳಾದ ಸತ್ಯಗಳಾದ ಎರಡು ವಸ್ತುಗಳಿಲ್ಲದೆ, ಭ್ರಮಃ=ಭ್ರಾಂತಿಯು, ನ=ಇಲ್ಲ.

ತಾ || ಯದ್ಯಪಿ ಪರರು ಈ ವ್ಯಾಪ್ತಿಯನ್ನು ಅಂಗೀಕರಿಸಿರುವರು. ಆದುದರಿಂದಲೇ ಕೇಶೋಂಡ್ರಕಾದಿ ಭ್ರಮಗಳಿಗೆ ಅಧಿಷ್ಠಾನವಿಲ್ಲವೆಂದಾಶಂಕಿಸಿ ತೇಜೋಂಶಗಳೇ ಅಧಿಷ್ಠಾನಗಳೆಂದು ಸಮಾಧಾನ ಹೇಳಲ್ಪಟ್ಟಿವೆ. ಬಾಲಕನಿಗೆ ಬೆಲ್ಲವು ಕಹಿಯಾಗಿದೆ ಎಂಬೀ ಭ್ರಮದಲ್ಲಿ ಪ್ರಧಾನವಿಲ್ಲವೆಂದಾಶಂಕಿಸಿ ಕಹಿ ಎನ್ನುವುದು ಜನ್ಮಾಂತರದಲ್ಲಿ ಅನುಭೂತವಾಗಿದೆ ಎಂದು ಪರಿಹರಿಸಲ್ಪಟ್ಟದೆ. ಆದಾಗ್ಯೂ ಶಿಷ್ಯರಿಗೆ ವ್ಯುತ್ಪತ್ತಿ ಹುಟ್ಟುವುದಕ್ಕಾಗಿ ಆಚಾರ್ಯರು ಹೀಗೆ ವ್ಯಾಪ್ತಿಯನ್ನುಪಪಾದಿಸಿರುವರು || ೨೯೪ ||

ಭ್ರಾಂತಿಗೆ ಅಧಿಷ್ಠಾನಾದಿಗಳು ಆವಶ್ಯಕಗಳೇ. ಜಗದಾರೋಪಕ್ಕೆ ಆತ್ಮನೇ ಅಧಿಷ್ಠಾನನು. ಪೂರ್ವ ಪೂರ್ವ ಪ್ರಪಂಚವೇ ಉತ್ತರೋತ್ತರ ಪ್ರಪಂಚಾರೋಪದಲ್ಲಿ ಪ್ರಧಾನವಾಗುವುದು. ದ್ರವ್ಯತ್ವವೊದಲಾದ ಸಾದೃಶ್ಯಗಳೂ ಇವೆ. ಆದುದರಿಂದ ಅಧಿಷ್ಠಾನ ಪ್ರಧಾನಗಳಿಲ್ಲವೆನ್ನುವುದು ಸಿದ್ಧವಾಗಲಿಲ್ಲ. ಸರ್ವ ಪ್ರಪಂಚವೂ ಭ್ರಾಂತಿಕಲ್ಪಿತವಾಗಿದ್ದರೆ ಆರೋಪ್ಯ ಸದೃಶಗಳಾದ ಅಧಿಷ್ಠಾನ ಪ್ರಧಾನಗಳು ಆವಶ್ಯಕಗಳೆಂದು ಅಂಗೀಕರಿಸ ಬೇಕಾಗುವುದು, ಎಂಬೀ ತರ್ಕವು ಇಷ್ಟಾಪಾದಾನ ರೂಪವಾದುದರಿಂದ ಅನಿಷ್ಟ್ವಸ್ವರೂಪ ಅಂಗವಿಲ್ಲದಿರುವುದರಿಂದ ಆಭಾಸವಾಗಿದೆ, ಎಂದರೆ ಜಗದ್ಭ್ರಾಂತಿಯಲ್ಲಿ ಆತ್ಮನಿಗೆ ಅಧಿಷ್ಠಾನತ್ವವನ್ನು ನಿರಾಕರಿಸುತ್ತಾರೆ —

**ಮೂ || (೧) ನ ಚಾತ್ಮನ್ಯನಾತ್ಮಭ್ರಮಃ ಕ್ವಾಪಿ ದೃಷ್ಟಃ | (೨) ನ ಹಿ ಕಶ್ಚಿದಹಮಹಂ ನ ಭವಾಮೀತಿ ಭ್ರಾಂತೋ ದೃಶ್ಯತೇ | (೩) ಆತ್ಮನ್ಯನಾತ್ಮಭ್ರಮ ಏವಾಯಂ ಪ್ರಪಂಚ ಇತಿ ತ್ವೈರುಚ್ಯತೇ || ೨೯೫ ||**

ಅ || (೧) ಆತ್ಮನಿ = ಆತ್ಮನಲ್ಲಿ, ಅನಾತ್ಮಭ್ರಮಃ = ಆತ್ಮನಲ್ಲವೆಂಬೀ ಭ್ರಾಂತಿಯು. ಕ್ವಾಪಿ=ಎಲ್ಲಿಯೂ, ನ ಚ ದೃಷ್ಟಃ=ಕಾಣಲ್ಪಡಲೇ ಇಲ್ಲ. (ತಾ || ಆತ್ಮಪ್ರಪಂಚಗಳು ಆಂತರ ಬಾಹ್ಯಗಳಾಗಿ ಪ್ರತೀತಗಳಾಗುತ್ತವೆ. ವಿರುದ್ಧಗಳಾಗಿಯೇ ಪ್ರತೀತಗಳಾಗುವುದರಿಂದ ಅವುಗಳಿಗೆ ಅಧಿಷ್ಠಾನ ಅಧ್ಯಸ್ತಭಾವವು ಕೂಡುವುದಿಲ್ಲ. ಅಂತೂ ೧ 'ಆತ್ಮಾ ಜಗದಾರೋಪಾಧಿಷ್ಠಾನಂ ನ ಭವತಿ ತದ್ವಿರುದ್ಧತಯಾ ಪ್ರತೀಯಮಾನತ್ವಾತ್ ಯಥಾ ಪರ್ವತಃ ನ ಸರ್ಪಾರೋಪಾಧಿಷ್ಠಾನಂ' ಆತ್ಮನು ಜಗದಾರೋಪಕ್ಕೆ ಅಧಿಷ್ಠಾನನಾಗುವುದಿಲ್ಲ. ಜಗದ್ವಿರುದ್ಧವಾಗಿ ತೋರುವುದರಿಂದ, ಉದಾ=ಪರ್ವತವು ಸರ್ಪಾ (ಸಾಸ್ಮಿ) ರೋಪಕ್ಕೆ ಅಧಿಷ್ಠಾನವಾಗುವುದಿಲ್ಲ. ೨ 'ಪ್ರಪಂಚಃ ನಾತ್ಮನ್ಯಧ್ಯಸ್ತಃ ತದ್ವಿರುದ್ಧತಯಾ ಪ್ರತೀಯಮಾನತ್ವಾತ್ ಯಥಾ ಸರ್ಪಃ ನ ಪರ್ವತೇಽಧ್ಯಸ್ತಃ' ಪ್ರಪಂಚವು ಆತ್ಮನಲ್ಲಿ ಆರೋಪಿತವಾಗಲಿಲ್ಲ, ಆತ್ಮವಿರುದ್ಧವಾಗಿ ಪ್ರತೀತವಾಗುವುದರಿಂದ ಸಾಸ್ಮಿಯು ಪರ್ವತದಲ್ಲಿ ಆರೋಪಿತವಾಗಲಿಲ್ಲ. ವಿರುದ್ಧಾಕಾರ ತೋರಿದರೂ ಆರೋಪವನ್ನಂಗೀಕರಿಸಿದರೆ ಯಾವಾಗಲೂ ಆ ಆರೋಪಕ್ಕೆ ನಿವೃತ್ತಿಯೇ ಇಲ್ಲವೆಂದಾಗುವುದು.) (2) (ಆತ್ಮನಲ್ಲಿ ಆತ್ಮನಲ್ಲವೆಂಬೀ ಭ್ರಾಂತಿಯು ಎಲ್ಲಿಯೂ ದೃಷ್ಟವಾಗಲಿಲ್ಲ ಎನ್ನುವುದರ ಅಭಿಪ್ರಾಯವನ್ನು ತಿಳಿಯದೆ ವ್ಯಾಪ್ತ ಅಥವಾ ಅಣು ಆದ ಆತ್ಮನಲ್ಲಿ ಆತ್ಮವಲ್ಲದ ಶರೀರ ಪರಿಮಾಣತ್ವಕ್ಕೆ ಭ್ರಾಂತಿಯು ದೃಷ್ಟವಾದ ಪ್ರಯುಕ್ತ ಇದು ಹೇಗೆ ಕೂಡಬಹುದು ಎಂದು ಪೂರ್ವಪಕ್ಷಿಸಿದವನನ್ನು ಕುರಿತು ವಿವರಿಸುತ್ತಾರೆ.) ಅ || (೨) ಕಶ್ಚಿತ್=ಯಾರೊಬ್ಬನೂ, ಅಹಂ=ನಾನು, ಅಹಂ ನ ಭವಾಮಿ=ನಾನು ಆಗುವುದಿಲ್ಲ, ಇತಿ=ಹೀಗೆ, ಭ್ರಾಂತಃ=ಭ್ರಾಂತನಾಗಿ, ನ ಹಿ ದೃಶ್ಯತೇ=ಕಾಣಲ್ಪಡುವುದಿಲ್ಲ. (ತಾ || 'ಅಹಂ' ಎಂದು ಆಂತರವಾಗಿ ತನ್ನನ್ನು ಅನುಭವಿಸುವವನಾಗಿಯೇ ಆತ್ಮನಲ್ಲಿ ನಾನು ಆಗುವದಿಲ್ಲವೆಂದು ವಿರುದ್ಧವಾಗಿ ತೋರುವುದನ್ನು ಆರೋಪಿಸಿ ಕೊಳ್ಳುವವನು

ಯಾರೊಬ್ಬನೂ ಕಾಣಲ್ಪಡುವುದಿಲ್ಲ. (3) (ಆತ್ಮನಲ್ಲಿ ಪ್ರಪಂಚಾರೋಪವನ್ನು ಪರರು ಅಂಗೀಕರಿಸದಿರುವುದರಿಂದ ಏಕೆ ನಿರಾಕರಿಸುತ್ತೀರಿ ಎಂದರೆ) (೩) ಆತ್ಮನಿ=ತನ್ನಲ್ಲಿ, ಅನಾತ್ಮ ಭ್ರಮ ಏವ= ಅನಾತ್ಮರೂಪವಾದ ಭ್ರಾಂತಿಯೇ, ಅಯಂ ಪ್ರಪಂಚಃ=ಈ ಪ್ರಪಂಚವು, ಇತಿ=ಹೀಗೆ, ತೈಃ= ಮಾಯಾವಾದಿಗಳಿಂದ, ಉಚ್ಯತೇ=ಹೇಳಲ್ಪಡುತ್ತದೆ ॥ ೨೯೫ ॥

**ಮೂ॥(೧) ತಂ ವಿನೈವಾನಾತ್ಮನ್ಯಾತ್ಮಭ್ರಮಕಲ್ಪನೇಽನಾತ್ಮನಸ್ಸತ್ಯತ್ವಂ ಸ್ಯಾತ್ ।**
**(೨)ತದಾ ಚಾದ್ವಿತೀಯತ್ವಕಲ್ಪನೇಽನಾತ್ಮೈವಾಸ್ತಿ ನಾತ್ಮೇತಿ ಭವತಿ॥೨೯೬॥**

ಅ ॥ (೧)ತಂ ವಿನೈವ=ಆತ್ಮನಲ್ಲಿ ಪ್ರಪಂಚಭ್ರಮವನ್ನು ಬಿಟ್ಟೆ, ಅನಾತ್ಮನಿ=ಪ್ರಪಂಚದಲ್ಲಿ ಆತ್ಮ ಭ್ರಮಕಲ್ಪನೇ=ಆತ್ಮನೆಂಬ ಭ್ರಾಂತಿಯೆಂದು ಕಲ್ಪಿಸಿದರೆ, ಅನಾತ್ಮನಃ ಸತ್ಯತ್ವಂ ಸ್ಯಾತ್= ಪ್ರಪಂಚಕ್ಕೆ ಸತ್ಯತ್ವವು ಬರಬೇಕಾಗುವುದು. (ತಾ ॥ ೧. ಪ್ರಪಂಚದಲ್ಲಿ ಆತ್ಮಾರೋಪವನ್ನು ಕಲ್ಪಿಸುವುದು ಅಯುಕ್ತವು. ಹಾಗಿದ್ದರೆ ಅಧಿಷ್ಠಾನಭೂತವಾದ ಪ್ರಪಂಚವು ಸತ್ಯವಾಗಬೇಕಾದೀತು. ಶುಕ್ತ್ಯಾದ್ಯಧಿಷ್ಠಾನವು ಸತ್ಯವೇ ಆಗಿರುತ್ತದೆ.) (೨) ತದಾ ಚ=ಆಗ, ಅದ್ವಿತೀಯತ್ವ ಕಲ್ಪನೇ=ಪ್ರಪಂಚವು ಸತ್ಯವಾಗಿದ್ದರೂ ಸತ್ಯವು ೨ನೇದ್ದು ಇಲ್ಲವೆಂದು ಸಿದ್ಧಾಂತವನ್ನಂಗೀಕರಿಸಿದರೆ, ಅನಾತ್ಮೈವಾಸ್ತಿ=ಪ್ರಪಂಚವೇ ಸತ್ಯವು, ನಾತ್ಮೇತಿ ಭವತಿ=ಆತ್ಮನು ಸತ್ಯನಲ್ಲ, ಎಂದು ಪ್ರಾಪ್ತವಾಗುವುದು. (ಆತ್ಮನೂ ಸತ್ಯನು ಎಂದಂಗೀಕರಿಸಿದರೆ ಸತ್ಯವು ಎರಡು ಇಲ್ಲ ಎಂಬೀ ಸಿದ್ಧಾಂತಕ್ಕೆ ಹಾನಿ ಬರುವುದು.) ॥ ೨೯೬ ॥

ಹೀಗೆ ಪ್ರಪಂಚದಲ್ಲಿ ಆತ್ಮಾರೋಪವನ್ನು ತಿರಸ್ಕರಿಸಿ ಜಗದಾರೋಪಕ್ಕೆ ಆತ್ಮನು ಅಧಿಷ್ಠಾನನೆನ್ನುವುದನ್ನು ಯುಕ್ತ್ಯಂತರದಿಂದ ನಿರಾಕರಿಸುತ್ತಾರೆ.

**ಮೂ ॥ (೧)ಆತ್ಮಾಜ್ಞಾನಾತ್ಮಕತ್ವೇ ಚ ಜಗತ ಆತ್ಮನೋ ಭಿನ್ನತ್ವೇನ ನ ದೃಶ್ಯೇತ!**
**(೨) ನ ಹಿ ಶುಕ್ತೇರ್ಭೇದೇನ ರಜತಂ ದೃಶ್ಯತೇ ಭ್ರಾಂತೌ । (೩) ನ ಚೈಕಮೇವ ಯುಗಪದ್ಬಹುಧಾ ದೃಶ್ಯತೇ ಭ್ರಾಂತೌ।(೪)ನ ಚಾತ್ಮನಿ ಭೇದಭ್ರಮಃ ಕ್ವಾಪಿ ದೃಷ್ಟಃ । (೫) ನ ಚ ಕುತ್ರಾಪಿ ಮಿಥ್ಯೋಪಾಧಿಕೃತೋ ಭೇದೋ ದೃಷ್ಟಃ ॥ ೨೯೭ ॥**

ಅ ॥ (೧) ಜಗತಃ=ಪ್ರಪಂಚಕ್ಕೆ, ಆತ್ಮಾಜ್ಞಾನಾತ್ಮಕತ್ವೇ ಚ=ಆತ್ಮನಿಗೆ ಆವರಣಭೂತವಾದ ಅಜ್ಞಾನವೇ ಉಪಾದಾನವಾಗಿವುಳ್ಳ ಜ್ಞಾನವಿಷಯವಾಗುತ್ತದೆ, ಅಥವಾ ಆ ಅಜ್ಞಾನವೇ ನಿಮಿತ್ತವಾಗಿವುಳ್ಳ ಜ್ಞಾನಕ್ಕೆ ವಿಷಯವಾಗುತ್ತದೆ ಎಂದಗೀಕರಿಸಿದರೆ, ಆತ್ಮನಃ = ಆತ್ಮನಿಂದ, ಭಿನ್ನತ್ವೇನ=ಭಿನ್ನವಾಗಿ, (ಪ್ರಪಂಚವು) ನ ದೃಶ್ಯೇತ=ಕಾಣಲ್ಪಡಲಾರದು. (೨) ಶುಕ್ತೇಃ= ಚಿಪ್ಪಿನಿಂದ, ಭೇದೇನ = ಭೇದದಿಂದ, ರಜತಂ=ರಜತವು, ಭ್ರಾಂತೌ = ಭ್ರಮೆಯಲ್ಲಿ, ನ ಹಿ ದೃಶ್ಯತೇ=ಕಾಣಲ್ಪಡುವುದಿಲ್ಲ. (ತಾ ॥ ಶುಕ್ತಿಯಲ್ಲಿ ಆರೋಪಿತವಾದ ರಜತದಿಂದ ಭಿನ್ನವಾದ ವಾಸ್ತವ ರಜರವೇ ಶುಕ್ತಿಯಿಂದ ಬೇರೆಯಾಗಿ ತೋರುತ್ತದೆ. ಶುಕ್ತಿಯಲ್ಲಿ ಆರೋಪಿತವಾದ ರಜತವು ಶುಕ್ತಿಯಿಂದ ಭಿನ್ನವಾಗಿ ತೋರುವುದಿಲ್ಲ. ಅಂತೂ ಪ್ರಪಂಚವು ಆತ್ಮನಲ್ಲಿ ಆರೋಪಿತವಾಗಿದ್ದರೆ ಆತ್ಮನಿಂದ ಭಿನ್ನವಾಗಿ ಕಾಣಲ್ಪಡಲಾರದು. ಯಾವುದು ಎಲ್ಲಿ ಆರೋಪಿತವೋ ಅದು ಅದಕ್ಕಿಂತ ಭಿನ್ನವಾಗಿ ತೋರಲಿಕ್ಕಿಲ್ಲ ಶುಕ್ತಿಯಲ್ಲಿ ಆರೋಪಿತವಾದ ರಜತವು ಶುಕ್ತಿಯಿಂದ ಭಿನ್ನವಾಗಿ ಭ್ರಾಂತಿಯಲ್ಲಿ ಕಾಣಲ್ಪಡುವುದಿಲ್ಲ. ಈ ಪ್ರಪಂಚವು ಈಗ ಆತ್ಮನಿಂದ ಭಿನ್ನವಾಗಿಯೇ ಕಾಣಲ್ಪಡುತ್ತದೆ. ಆದಕಾರಣ ಜಗತ್ತು ಆರೋಪಿತವಲ್ಲವು.) (೩) (ಒಬ್ಬ ಆತ್ಮನಲ್ಲಿ

ಸರ್ವ ಜಗತ್ತು ಕಲ್ಪಿತವಾಗುವುದಿಲ್ಲ, ಏಕ ಕಾಲದಲ್ಲಿ ಅನೇಕ ಪ್ರಕಾರ ಕಾಣಲ್ಪಡುವುದರಿಂದ, ಆತ್ಮನಾಗಲೀ ಏಕಕಾಲದಲ್ಲಿ ಬಹುಪ್ರಕಾರ ಕಾಣಲ್ಪಡತಕ್ಕದ್ದಕ್ಕೆ ಅಧಿಷ್ಠಾನನಾಗುವುದಿಲ್ಲ. ಏಕತ್ವವಿದ್ದುದರಿಂದ, ಎಂಬೀ ಎರಡು ಅನುಮಾನಗಳಿಗೆ ವ್ಯಾಪ್ತಿಯನ್ನುಪಪಾದಿಸುತ್ತಾರೆ.) ಏಕಮೇವ=ಒಂದೇ, ಯುಗಪತ್=ಏಕಕಾಲದಲ್ಲಿ, ಬಹುಧಾ=ಅನೇಕ ಪ್ರಕಾರ, ಭ್ರಾಂತೌ= ಭ್ರಾಂತಿಯಲ್ಲಿ, ನ ಚ ದೃಶ್ಯತೇ=ಕಾಣಲ್ಪಡುವುದಿಲ್ಲ. (ಆದಕಾರಣ ಹಿಂದಿನ ಅನುಮಾನಗಳಿಗೆ ವ್ಯಾಪ್ತಿಯು ಭಗ್ನವಾಗುವುದಿಲ್ಲ.) (೪) (ಆತ್ಮನು ಏಕಪ್ರಕಾರನೇ, ಜಗತ್ತು ಅನೇಕಪ್ರಕಾರ ಪ್ರತೀತವಾಗಲಿ. ಆದಾಗ್ಯೂ ಜಗತ್ತು ಆತ್ಮನಲ್ಲಿ ಆರೋಪಿತವಾಗುವುದು. ಪ್ರಪಂಚದಲ್ಲಿರುವ ಅನೇಕ ಪ್ರಕಾರವು ಸತ್ಯವಾಗಿದ್ದರೆ ಆರೋಪವೇ ಕೂಡಲಾರದು. ಹೀಗೆ ಹೇಳಕೂಡದು ಏಕೆಂದರೆ ಅದೂ ಆತ್ಮನಲ್ಲಿಯೇ ಆರೋಪಿತವೆಂದರೆ ಧರ್ಮಿಯಾಗಿಯೋ, ಧರ್ಮವಾಗಿಯೋ, ಎರಡೂ ಕೂಡಲಾರದು, ಎಂದು ನಿರೂಪಿಸುತ್ತಾರೆ.) ಆತ್ಮನಿ=ಆತ್ಮನಲ್ಲಿ, ಭೇದಭ್ರಮಃ= ಭೇದ ಭ್ರಾಂತಿಯು, ಕ್ವಾಪಿ = ಎಲ್ಲಿಯೂ, ನ ಚ ದೃಷ್ಟಃ = ಕಾಣಲ್ಪಡಲಿಲ್ಲ. (ಅಂದರೆ ಯಾರೊಬ್ಬನೂ ನಾನು ಬಹು ಪ್ರಕಾರನು ಎಂದಾಗಲೀ ಭಿನ್ನನೆಂದಾಗಲೀ ಭ್ರಾಂತನಾಗಿ ಕಾಣ ಲ್ಪಡುವುದಿಲ್ಲ.) (೫) (ಔಪಾಧಿಕ ಭೇದದಿಂದ ಆತ್ಮಸ್ವರೂಪಕ್ಕೂ ಭೇದವಿದ್ದುದರಿಂದ ಅನೇಕ ವಿಧ ಪ್ರಪಂಚಾರೋಪಕ್ಕೆ ಅಧಿಷ್ಠಾನತ್ವವು ಯುಕ್ತವೆಂದರೆ ಉಪಾಧಿಗಳು ಸತ್ಯಗಳೋ ಮಿಥ್ಯೆಯೋ, ಅಪಸಿದ್ಧಾಂತ ಬರುವುದರಿಂದ ಸತ್ಯಗಳಾಗಲಾರದು. ಎನ್ನೇದ್ದನ್ನು ದೂಷಿಸು ತ್ತಾರೆ.) ಕುತ್ರಾಪಿ=ಎಲ್ಲಿಯೂ, ಭೇದಃ=ಭೇದವು, ಮಿಥ್ಯೋಪಾಧಿಕೃತಃ=ಮಿಥ್ಯೋಪಾಧಿ ಯಿಂದ ಮಾಡಲ್ಪಟ್ಟದ್ದು, ನ ಚ ದೃಷ್ಟಃ = ಕಾಣಲ್ಪಡಲಿಲ್ಲ. (ಸರ್ವ ಸಾಮರ್ಥ್ಯಗಳಿಂದ ವಿರಹಿತವಾದುದು ಮಿಥ್ಯೆಯಾದುದೂ ಆದ ಶಶವಿಷಾಣಾದಿಗಳು ಕಾರ್ಯಕಾರಿಗಳಾಗಲಾರವು. ಜಗದಾರೋಪವು ಈಗಲೂ ಪ್ರಮಿತವಾಗಲಿಲ್ಲ. ಅನುಮಾನಾಗಮಗಳು ನಿರಾಕೃತಗ ಳಾಗಿವೆ) ॥ ೨೯೭ ॥

ಹೀಗೆ ಅನೇಕಾನುಮಾನಗಳಿಂದ ಬಾಧಿತವಾದ ಪ್ರಯುಕ್ತ ದೃಶ್ಯತ್ವಾನುಮಾನವು ಯುಕ್ತ ವಲ್ಲವೆಂದುಕ್ತವಾಗಿದೆ. ಮತ್ತು ಯಾವ ಅಜ್ಞಾನವು ಅಧಿಷ್ಠಾನವನ್ನಾವರಿಸಿಕೊಂಡು ಆರೋಪ ವನ್ನು ಹುಟ್ಟಿಸುತ್ತದೋ, ಯಾವುದೊಂದು ಆರೋಪಿತ ಅರ್ಥಜ್ಞಾನವೋ, ಆ ಎರಡರಿಂದ ಬೇರೆಯಾದ ಜಗತ್ತನ್ನು ಪಕ್ಷೀಕರಿಸಿ ದೃಶ್ಯತ್ವಾದ್ಯನುಮಾನಗಳಿಂದ ಸರ್ವಜಗತ್ತು ಒಬ್ಬ ಜೀವನ ಅಜ್ಞಾನ ಪರಿಕಲ್ಪಿತವೆಂದು ಸಾಧಿಸಕೂಡದು, ಅಷ್ಟರಿಂದಲೂ ಅದ್ವೈತವು ಹಾನಿಯಾಗುವುದು. ಜ್ಞಾನಾಜ್ಞಾನಗಳು ಆತ್ಮಸ್ವರೂಪಗಳೆಂದು ಅಂಗೀಕರಿಸಲಿಲ್ಲ ಆ ಎರಡನ್ನೂ ಪಕ್ಷದಲ್ಲಿ ಸೇರಿಸಿ ಕೊಂಡು ಅಂತಹ ಜಗತ್ತು ದೃಶ್ಯತ್ವಾದ್ಯನುಮಾನಗಳಿಂದ ಒಬ್ಬ ಜೀವನ ಅಜ್ಞಾನಪರಿಕಲ್ಪಿತವೆಂದು ಸಾಧಿಸುತ್ತೇವೆ ಎಂದರೆ —

**ಮೂ ॥ (೧) ನ ಚ ಜ್ಞಾನಾಜ್ಞಾನಯೋರಪಿ ಮಿಥ್ಯಾಕಲ್ಪಿತತ್ವಂ ದೃಷ್ಟಂ ।**
**(೨) ತದ್ವಿಷಯಸ್ಯೈವಾನ್ಯಥಾತ್ವಂ ಭ್ರಾಂತೌ ॥ ೨೯೮ ॥**

ಅ ॥ (೧) ಜ್ಞಾನಾಜ್ಞಾನಯೋರಪಿ=ಜ್ಞಾನ, ಅಜ್ಞಾನಗಳಿಗೂ, ಮಿಥ್ಯಾಕಲ್ಪಿತತ್ವಂ= ಮಿಥ್ಯಾಭೂತವಾದ ಅಜ್ಞಾನಪರಿಕಲ್ಪಿತತ್ವವು, ನ ಚ ದೃಷ್ಟಂ=ಕಾಣಲ್ಪಡಲಿಲ್ಲ. (೨) ತದ್ವಿಷ ಯಸ್ಯ=ಜ್ಞಾನವಿಷಯಕವಾದ ಶುಕ್ತಿಶಕಲಾದಿಗಳಿಗೆ, ಅನ್ಯಥಾತ್ವಮೇವ = ರಜತತ್ವಾದಿಗಳೇ, ಭ್ರಾಂತೌ = ಜ್ಞಾನಕ್ಕೆ ಅಪ್ರಾಮಾಣ್ಯದಲ್ಲಿಯೂ, ಮಿಥ್ಯಾವ್ಯಪದೇಶದಲ್ಲಿಯೂ, (ಕಾರಣವು.) ಅಥವಾ ಕಲ್ಪಿತವಾದ ರಜತಾದಿಗಳಿಗೇನೇ ಅಸತ್ವವು ಭ್ರಾಂತಿತ್ವಾದಿಗಳಲ್ಲಿ ಕಾರಣವು.

ತಾ ॥ (1) ಹೇಗೆ ಇಲ್ಲಿ ರಜತವು ಇರಲಿಲ್ಲವು ಎಂಬೀ ಬಾಧಕಪ್ರತ್ಯಯದಿಂದ ರಜತವು ಕಲ್ಪಿತವೆಂದು ದೃಷ್ಟವಾಗುತ್ತದೋ, ಹಾಗೆಯೇ ಜ್ಞಾನಾಜ್ಞಾನಗಳು ಕಲ್ಪಿತಗಳೆಂದು ದೃಷ್ಟವಾಗಲಿಲ್ಲ. ಮತ್ತೆ ಈ ತನಕ ನಾನು ಇದನ್ನು ಮುತ್ತಿನ ಚಿಪ್ಪೆಂದು ತಿಳಿಯಲಿಲ್ಲ. ಬೆಳ್ಳಿಯೆಂದೇ ತಿಳಿದಿದ್ದೆನು ಎಂದು ಮುತ್ತಿಚಿಪ್ಪಿನಂತೆ ಜ್ಞಾನಾಜ್ಞಾನಗಳು ಅಬಾಧಿತಗಳಾಗಿಯೇ ಕಾಣುತ್ತವೆ. ಆದಕಾರಣ ಪ್ರತಿಜ್ಞೆಯು ಬಾಧಿತವಿಷಯಕವಾಯಿತು. ಕಲ್ಪಿತತ್ವಂ ಎನ್ನುವುದರಿಂದಲೇ ಪೂರ್ಣವಾಗುವಾಗ 'ಮಿಥ್ಯಾಕಲ್ಪಿತತ್ವಂ' ಎಂದು ಹೇಳಿರುವುದರಿಂದ ಬೇರೆ ಅನೇಕ ದೋಷಗಳೂ ಸೂಚಿತಗಳಾದವು ॥ ೨೯೮ ॥

ಈ ಪ್ರಕಾರ ಏಕಜೀವವಾದಿಪಕ್ಷಕ್ಕೆ ಹೇಳಿದ ಯುಕ್ತಿವಿರೋಧವನ್ನುಪಸಂಹಾರಮಾಡುತ್ತಾರೆ —

**ಮೂ ॥ ಏವಮಾದ್ಯನಂತಯುಕ್ತಿವಿರುದ್ಧೋಽಯಂ ಪಕ್ಷಃ । ಗ್ರಂಥಬಹುತ್ವಂ ಸ್ಯಾದಿತ್ಯೇವೋಪರಮ್ಯತೇ ॥ ೨೯೯ ॥**

ಅ ॥ ಅಯಂ ಪಕ್ಷಃ=ಈ ಪಕ್ಷವು, ಏವಮಾದ್ಯನಂತಯುಕ್ತಿವಿರುದ್ಧಂ=ಇದು ಮೊದಲಾದ ಅನಂತ ಯುಕ್ತಿಗಳಿಂದ ವಿರುದ್ಧವಾಗಿದೆ. ಗ್ರಂಥ ಬಹುತ್ವಂ ಸ್ಯಾತ್ ಇತ್ಯೇವ=ಗ್ರಂಥಕ್ಕೆ ಬಾಹುಲ್ಯವು ಪ್ರಾಪ್ತವಾಗುವುದೆಂದೇ, ಉಪರಮ್ಯತೇ=ಅವಸಾನಮಾಡಲ್ಪಡುತ್ತದೆ. (ಯುಕ್ತಿವಿರೋಧಗಳು ಸಮಾಪ್ತಗಳಾಯಿತೆಂದಲ್ಲ.) ॥ ೨೯೯ ॥

ಏಕಜೀವವಾದಿಗಳ ಮತದಲ್ಲಿ ಪ್ರಮಾಣವಿಲ್ಲವೆಂದೂ ಬಾಧಕಪ್ರಮಾಣವಿದೆ ಎಂದೂ ಯಾವ ದೋಷವು ಹೇಳಲ್ಪಟ್ಟಿದೋ, ಆ ದೋಷವು ಜೀವಜಡಾತ್ಮಕ ಪ್ರಪಂಚಕ್ಕೆ ಸತ್ಯತ್ವವನ್ನು ಒಡಂಬಟ್ಟರೂ ಸಮಾನವೇ. ಅಂತೂ ಜಗತ್ತು ಸತ್ಯವೆನ್ನುವಲ್ಲಿ ಪ್ರಮಾಣವಿಲ್ಲ. ಬಾಧಕ ಪ್ರಮಾಣವಿದೆ, ಎಂದರೆ —

**ಮೂ ॥ ನ ಚ ಸತ್ಯತ್ವಾಂಗೀಕಾರೇ ಕಶ್ಚಿದ್ದೋಷಃ ॥ ೩೦೦ ॥**

ಅ ॥ ಜಗತ್ತಿಗೆ ಸತ್ಯತ್ವವನ್ನು ಅಂಗೀಕರಿಸಿದರೆ ಯಾವ ದೋಷವೂ ಇಲ್ಲ.

ತಾ ॥ ಜಗತ್ಸತ್ಯತ್ವದಲ್ಲಿ ಪ್ರಮಾಣವಿಲ್ಲವೆಂದಲ್ಲ. 'ಸನ್ ಘಟಃ ಸನ್ ಪಟಃ' ಇದು ಮೊದಲಾದ ಪ್ರತ್ಯಕ್ಷಗಳೂ, 'ವಿಮತಂ ಸತ್ಯಂ ಪ್ರಮಾಣದೃಷ್ಟತ್ವಾತ್ ಅರ್ಥಕ್ರಿಯಾಕಾರಿತ್ವಾತ್' ಇದು ಮೊದಲಾದ ಅನುಮಾನಗಳೂ 'ವಿಶ್ವಂ ಸತ್ಯಂ' 'ಯಚ್ಚಿಕೇತ ಸತ್ಯಮಿತ್' ಇದು ಮೊದಲಾದ ಆಗಮಗಳೂ ಇವೆ. ಅದನ್ನು ಬಾಧಿಸತಕ್ಕ ಪ್ರಬಲ ಪ್ರತ್ಯಕ್ಷವಿಲ್ಲದಿರುವುದರಿಂದಲೂ ಆ ಪ್ರತ್ಯಕ್ಷವು ಪ್ರಮಾಣವೆ. ಅಂತೂ ವರ್ತಮಾನ ಕಾಲದಲ್ಲಿ ಸತ್ತಾವನ್ನು ಗ್ರಹಿಸತಕ್ಕ ಪ್ರತ್ಯಕ್ಷವು ಜಗತ್ತು ಬಾಧ್ಯವಲ್ಲವೆಂದೇ ಸಾಧಿಸುತ್ತದೆ. ಪ್ರಪಂಚವು ಬ್ರಹ್ಮನಿಂದ ಭಿನ್ನವೋ, ಅಭಿನ್ನವೋ, ಇದು ಮೊದಲಾದ ಕಲ್ಪಗಳಲ್ಲಿ ಬರತಕ್ಕ ಅನವಸ್ಥಾದಿ ಬಾಧಕಗಳು ಪ್ರಪಂಚಕ್ಕೆ ಸತ್ಯತ್ವವನ್ನಂಗೀಕರಿಸಿದರೂ ಇವೆ ಎಂದು ಹೇಳಿದರೆ ನಾವು ಭೇದವು ಧರ್ಮಿಸ್ವರೂಪವೆಂದೇ ಅಂಗೀಕರಿಸಿರುವುದರಿಂದ ಯಾವ ದೋಷಕ್ಕೂ ಅವಕಾಶವಿಲ್ಲವೆಂದು ಮೊದಲೇ ನಿರೂಪಿಸಿರುತ್ತೇನೆ. ಆದಕಾರಣ ಪ್ರಪಂಚಕ್ಕೆ ಸತ್ಯತ್ವವನ್ನಂಗೀಕರಿಸಿದರೆ ಯಾವ ದೋಷವೂ ಇಲ್ಲ ॥ ೩೦೦ ॥

ಹೀಗೆ ಏಕಜೀವವಾದಿಗಳ ಮತವನ್ನು ದೂಷಿಸಿ ಆ ದೋಷಗಳನ್ನೇ ಬಹುಜೀವವಾದಿಗಳ ಮತದಲ್ಲಿಯೂ ಅತಿದೇಶ ಮಾಡುತ್ತಾರೆ —

**ಮೂ ॥ ಬಹುಜೀವವಾದಿಪಕ್ಷೇಽಪಿ ಭೇದಸ್ಯ ಮಿಥ್ಯಾತ್ವಾಂಗೀಕಾರೇ ಏತೇ ದೋಷಾ ಭವಂತ್ಯೇವ ॥ ೩೦೧ ॥**

ಅ ॥ ಬಹುಜೀವವಾದಿಪಕ್ಷೇಽಪಿ = ಬಹುಜೀವವಾದಿಗಳ ಪಕ್ಷದಲ್ಲಿಯೂ, ಭೇದಸ್ಯ = ಭೇದಕ್ಕೆ, ಮಿಥ್ಯಾತ್ವಾಂಗೀಕಾರೇ=ಮಿಥ್ಯಾತ್ವವನ್ನೊಡಂಬಟ್ಟರೆ, ಏತೇ ದೋಷಾಃ=ಈ ದೋಷಗಳು, (ಏಕಜೀವವಾದಿಗಳ ಮತದಲ್ಲಿ ಹೇಳಿದ ದೋಷಗಳು,) ಭವಂತ್ಯೇವ=ನಿಸ್ಸಂಶಯವಾಗಿ ಬರುತ್ತವೆ. (ಅವುಗಳನ್ನಪಹರಿಸಲು ಸಾಧ್ಯವಿಲ್ಲ.)

ತಾ ॥ ಜೀವೇಶ್ವರರಿಗೂ ಜೀವರಿಗೂ ಯಾರು ಕೇವಲ ಭೇದವನ್ನು ಹೇಳುವರೋ, ಯಾರು ಭೇದಾಭೇದಗಳನ್ನು ಹೇಳುವರೋ ಅವರೆಲ್ಲರೂ ಬಹುಜೀವವಾದಿಗಳು. ಆದುದರಿಂದ 'ಬಹುಜೀವವಾದಿ ಪಕ್ಷೇ' ಎಂದಿಷ್ಟೇ ಹೇಳಿದರೆ ಆ ಮತದಲ್ಲಿಯೂ ಹೇಳಿದ ದೋಷಗಳು ಬರಬೇಕಾಗುವುವು. ಇದು ಕೂಡಲಾರದು. ಆದಪ್ರಯುಕ್ತ 'ಭೇದಸ್ಯ ಮಿಥ್ಯಾತ್ವಾಂಗೀಕಾರೇ' ಎಂದುಕ್ತವಾಗಿಯದೆ. ಅಂದರೆ — ಯಾವ ಮಾಯಾವಾದಿಗಳು ಭೇದಕ್ಕೆ ಮಿಥ್ಯಾತ್ವವನ್ನು ಒಡಂಬಟ್ಟು ಅನೇಕ ಜೀವರನ್ನು ಒಡಂಬಡುತ್ತಾರೋ ಅವರ ಮತದಲ್ಲಿಯೇ ಈ ದೋಷಗಳು ಬರುತ್ತವೆ. ಕೇವಲ ಭೇದವಾದವು ಸಮ್ಮತವೇ ಆಗಿರುತ್ತದೆ. ಭೇದಾಭೇದವಾದವನ್ನು ಬೇರೆ ರೀತಿಯಾಗಿ ದೂಷಿಸುವೆವು ॥ ೩೦೧ ॥

ಏಕಜೀವವಾದಿಗಳ ಮತದಲ್ಲಿ ಹೇಳಿದ ದೋಷಗಳು ಬಹುಜೀವವಾದಿಗಳಿಗೆ ಹೇಗೆ ಬರುವವು. ಅವರು ಜೀವರಿಗೆ ಬಾಹುಲ್ಯವನ್ನು ಅಂಗೀಕರಿಸಿರುವರಷ್ಟೆ! ಎಂದರೆ, ಅವರು ಜೀವೇಶ್ವರರಿಗೂ ಜೀವರಿಗೂ ಪರಸ್ಪರವಾಗಿ ಔಪಾಧಿಕವಾದ ಬಹುತ್ವವನ್ನು ಅಂಗೀಕರಿಸಿರುವರು. ಆ ಉಪಾಧಿಯು ಸತ್ಯವೋ, ಮಿಥ್ಯೆಯೋ, ಸತ್ಯವೆಂದು ಹೇಳಿದರೆ ಅಪಸಿದ್ಧಾಂತವು ಬರುವುದರಿಂದ ಮಿಥ್ಯೆಯೆಂದೇ ಅಂಗೀಕರಿಸಬೇಕೆಂದು ನಿರೂಪಿಸುತ್ತಾರೆ —

**ಮೂ ॥ (೧) ಮಿಥ್ಯೋಪಾಧಿಕೃತಂ ಹಿ ತೇಷಾಮಪಿ ಬಹುತ್ವಂ । (೨) ನ ಚ ಮಿಥ್ಯೋಪಾಧಿಕೃತೋ ಭೇದಃ ಕ್ವಾಪಿ ದೃಷ್ಟಃ । (೩) ಆತ್ಮನ್ಯನಾತ್ಮಕಲ್ಪನಾರೂಪತ್ವಾನ್ಮಿಥ್ಯೋಪಾಧಿರೇವ ನ ಯುಜ್ಯತೇ ॥ ೩೦೨ ॥**

ಅ ॥ (೧) ತೇಷಾಮಪಿ=(ಏಕಜೀವವಾದಿಗಳ ಪಕ್ಷದಲ್ಲಿ ಮಾತ್ರವಲ್ಲವು) ಬಹುಜೀವಾದಿಗಳ ಪಕ್ಷದಲ್ಲಿಯೂ, ಬಹುತ್ವಂ=ಬಾಹುಲ್ಯವು, ಮಿಥ್ಯೋಪಾಧಿಕೃತಂ ಹಿ=ಮಿಥ್ಯಾಭೂತವಾದ ಉಪಾಧಿಯಿಂದಲೇ ಮಾಡಲ್ಪಟ್ಟದ್ದಷ್ಟೆ! ಹೀಗೆ ಒಡಂಬಡದಿದ್ದರೆ ಅಪಸಿದ್ಧಾಂತವು. (೨) ಮಿಥ್ಯೋಪಾಧಿಕೃತಃ ಭೇದಃ = ಮಿಥ್ಯಾಭೂತವಾದ ಉಪಾಧಿಯಿಂದ ಮಾಡಲ್ಪಟ್ಟ ಭೇದವು, ಕ್ವಾಪಿ ನ ಚ ದೃಷ್ಟಃ=ಕಾಣಲ್ಪಡಲೇ ಇಲ್ಲ. (ಅಂತೂ ಏಕಜೀವಾದಿಗಳಿಂದ ವಿಶೇಷವಿಲ್ಲದಿರುವ ಪ್ರಯುಕ್ತ ಗುರುಶಿಷ್ಯಾದಿ ವಿಕಲ್ಪ ದೋಷಗಳು ಪ್ರಸಕ್ತಗಳೇ ಆಗುವವು. ಉಪಾಧಿಕೃತವಾದ ಭೇದವೇ ಇಲ್ಲ. ಮಿಥ್ಯೋಪಾಧಿಯಿಂದ ಮಾಡಲ್ಪಟ್ಟ ಭೇದವು ಸರ್ವಥಾ ಇಲ್ಲವೆಂದಭಿಪ್ರಾಯವು. ಔಪಾಧಿಕ ಭೇದವದೆ ಎಂದಭಿಪ್ರಾಯವಲ್ಲ. ಆದಕಾರಣ ಬಿಂಬ ಪ್ರತಿಬಿಂಬಗಳಿಗೂ ಪ್ರತಿಬಿಂಬಗಳಿಗೂ ಪರಸ್ಪರವಾಗಿ ಭೇದವು ಸ್ವಾಭಾವಿಕವೆಂದುದರಿಂದ ಔಪಾಧಿಕವಲ್ಲ. ಮಿಥ್ಯೋಪಾಧಿಕೃತವಾದದ್ದು ಸುತರಾಂ ಆಗಲಾರದು.) (೩) ಆತ್ಮನಿ=ಆತ್ಮನಲ್ಲಿ, ಅನಾತ್ಮಕಲ್ಪನಾರೂಪತ್ವಾತ್ = ಪ್ರಪಂಚ ಕಲ್ಪನಾಸ್ವರೂಪತ್ವವಿದ್ದುದರಿಂದ, ಮಿಥ್ಯೋಪಾಧಿರೇವ = ಮಿಥ್ಯೆಯಾದ ಉಪಾಧಿಯೇ, ನ ಯುಜ್ಯತೇ=ಯುಕ್ತವಾಗುವುದಿಲ್ಲ.

ತಾ ॥ ಅಧ್ಯಾಸಕ್ಕೆ ಆರೋಪಿಸಲ್ಪಡತಕ್ಕದ್ದರಿಂದ ಸಮಾನಗಳಾದ ಅಧಿಷ್ಠಾನ ಪ್ರಧಾನಗಳನ್ನು ನಿಯಮೇನ ಒಡಂಬಡಲೇ ಬೇಕು. ಆದುದರಿಂದ ಮಿಥ್ಯೋಪಾಧಿಯನ್ನು ಹೇಳುವವನು ಅವಶ್ಯವಾಗಿ ಅಧ್ಯಾಸಕ್ಕೆ ಅಧಿಷ್ಠಾನವನ್ನು ಹೇಳಬೇಕು. ಸರ್ವವೂ ಮಿಥ್ಯೆಯಾದ ಪ್ರಯುಕ್ತ ಆತ್ಮನಿಂದ ಬೇರೆಯಾದ ಅಧಿಷ್ಠಾನವು ಕೂಡಲಾರದು. ಉಪಾಧಿಯೂ ಅಜ್ಞಾನವೇ. ಅದಾದರೂ 'ಅಹಮಜ್ಞಃ' ಎಂದು ಅಹಮರ್ಥರೂಪವಾದ ಆತ್ಮಾಶ್ರಿತವಾದಪ್ರಯುಕ್ತ ಆತ್ಮನಿಂದ ಭಿನ್ನವಾಗಿಯೇ ಪ್ರತೀತವಾಗುವುದು. ಅಂತೂ ಆತ್ಮನಲ್ಲಿ ಅನಾತ್ಮಕಲ್ಪನಾರೂಪತ್ವವಿದ್ದುದರಿಂದ ಮಿಥ್ಯೋಪಾಧಿಯೂ ಆತ್ಮನಲ್ಲಿ ಅನಾತ್ಮಕಲ್ಪನೆಯೂ ಪೂರ್ವದಲ್ಲಿಯೇ ನಿರಾಕೃತವಾದ ಪ್ರಯುಕ್ತ ಮಿಥ್ಯೋಪಾಧಿಯೇ ಯುಕ್ತವಾಗುವುದಿಲ್ಲ. ಅದರಿಂದ ಭೇದಕಲ್ಪನಾದಿಗಳು ಸುತರಾಂ ಕೂಡಲಾರವು ॥ ೩೦೨ ॥

ಐಂದ್ರಜಾಲಿಕನು ನಿರ್ಮಿಸಿದ ಮಾಯಾಮಯ ಸೃಷ್ಟಿಯಲ್ಲಿ ಅಧಿಷ್ಠಾನವಿಲ್ಲದಿರುವುದರಿಂದ ಆರೋಪಕ್ಕೆ ಅಧಿಷ್ಠಾನಾದಿಗಳು ಬೇಕೆಂದು ನಿಯಮವಿಲ್ಲವೆಂದರೆ —

ಮೂ ॥ (೧) ಮಾಯಾಮಯಿಾ ಸೃಷ್ಟಿರಪಿ ತತ್ಸದೃಶಸ್ಯಾನ್ಯಸ್ಯ ವಿದ್ಯಮಾನತ್ವ ಏವ ದೃಷ್ಟಾ । (೨) ದ್ರವ್ಯತ್ವಾದಿ ಸಾದೃಶ್ಯಯುತಂ ಕಿಂಚಿದಧಿಷ್ಠಾನಮಾಶ್ರಿತ್ಯೈವ ಚ । (೩) ಅಧಿಷ್ಠಾನಂ ಚ ಸದೃಶಂ ತಥ್ಯವಸ್ತುದ್ವಯಂ ವಿನಾ । ನ ಭ್ರಾಂತಿರ್ಭವತಿ ಕ್ವಾಪಿ ಸ್ವಪ್ನಮಾಯಾದಿಕೇಷ್ವಪಿ । ಮಾನಸ್ಯಾಂ ವಾಸನಾಯಾಂ ತು ಬಹಿರ್ವಸ್ತುತ್ವಕಲ್ಪನಂ । ಸ್ವಾಪ್ನೋ ಭ್ರಮಶ್ಚ ಮಾಯಾಯಾಂ ಕರ್ತೃದೇಹಾದಿ ವಸ್ತುಷು । ಚತುರಂಗಬಲತ್ವಾದಿಕಲ್ಪನಂ ಭ್ರಮ ಇಷ್ಯತೇ । ನ ಭ್ರಾಂತಿಕಲ್ಪಿತಂ ವಿಶ್ವಮತೋ ವಿಷ್ಣುಬಲಾಶ್ರಯಂ ॥ ಇತಿ ಬ್ರಹ್ಮವೈವರ್ತೇ ॥ ೩೦೩ ॥

ಅ ॥ (೧) ಮಾಯಾಮಯಿಾ ಸೃಷ್ಟಿರಪಿ = ಮಾಯಾಸಂಕಲ್ಪಿತವಾದ ಸೃಷ್ಟಿಯೂ ಕೂಡ, ತತ್ಸದೃಶಸ್ಯ ಅನ್ಯಸ್ಯ=ಅದಕ್ಕೆ ಸಮಾನವಾದ ಬೇರೆ ವಸ್ತುವು, ವಿದ್ಯಮಾನತ್ವ ಏವ= ಇದ್ದರೇನೆ, ದೃಷ್ಟಾ=ಕಾಣಲ್ಪಟ್ಟಿದೆ. (೨) ದ್ರವ್ಯತ್ವಾದಿ ಸಾದೃಶ್ಯಯುತಂ=ದ್ರವ್ಯತ್ವ ಮೊದಲಾದ ಸಾದೃಶ್ಯಗಳಿಂದೊಡಗೂಡಿದ, ಕಿಂಚಿದಧಿಷ್ಠಾನಂ = ಯಾವುದಾದರೊಂದು ಅಧಿಷ್ಠಾನವನ್ನು, ಆಶ್ರಿತ್ಯೈವ ಚ=ಆಶ್ರಯಿಸಿಕೊಂಡೇ ಸರಿ. (೩) ಅಧಿಷ್ಠಾನಂ ಚ ಸದೃಶಂ=ಆರೋಪ್ಯದಿಂದ ಸದೃಶವಾದ ಅಧಿಷ್ಠಾನವನ್ನೂ ಪ್ರಧಾನವನ್ನೂ, ತಥ್ಯ ವಸ್ತುದ್ವಯಂ ವಿನಾ=ಹೀಗೆ ಯಥಾರ್ಥಗಳಾದ ಎರಡು ವಸ್ತುಗಳನ್ನು (ಅಧಿಷ್ಠಾನ ಪ್ರಧಾನಗಳನ್ನು) ಹೊರತು, ಕ್ವಾಪಿ= ಎಲ್ಲಿಯೂ (ಒಳಗೂ ಹೊರಗೂ) ಸ್ವಪ್ನ ಮಾಯಾದಿಕೇಷ್ವಪಿ=ಸ್ವಾಪ್ನ, ಸುಖ, ದುಃಖಾದಿಗಳಲ್ಲಿಯೂ ಮಾಯಿಕ ಮೊದಲಾದುವುಗಳಲ್ಲಿಯೂ, ಭ್ರಾಂತಿಃ=ಭ್ರಮೆಯು, ನ ಭವತಿ=ಆಗುವುದಿಲ್ಲ. ಮಾನಸ್ಯಾಂ ವಾಸನಾಯಾಂ ತು=ಮಿಥ್ಯೆಯಲ್ಲದ ಮಾನಸ ವಾಸನಾ ಪರಿಣತಗಳಾದ ಗಜಾದಿಗಳಲ್ಲಿಯೂ, ಮಾಯಾಯಾಂ ಚ = ಮಾಯೆಯಲ್ಲಿಯೂ ಕೂಡ, ಬಹಿರ್ವಸ್ತುತ್ವ ಕಲ್ಪನಂ=ಬಾಹ್ಯ ಪದಾರ್ಥವನ್ನ ಕಲ್ಪಿಸುವಿಕೆಯು, ಸ್ವಾಪ್ನಃ ಭ್ರಮಃ=ಸ್ವಪ್ನಸಂಬಂಧಿಯಾದ ಭ್ರಾಂತಿಯು, ಕರ್ತೃದೇಹಾದಿವಸ್ತುಷು=ಐಂದ್ರಜಾಲಿಕನು ಶರೀರ ಮೊದಲಾದ (ವಸ್ತ್ರಖಂಡಾದಿ) ವಸ್ತುಗಳಲ್ಲಿ, ಚತುರಂಗಬಲತ್ವಾದಿಕಲ್ಪನಂ=ಆನೆ, ಕುದುರೆ, ರಥ, ಕಾಲಾಳು ಎಂಬೀ ನಾಲ್ಕು ಅವಯವಗಳುಳ್ಳ ಸೈನ್ಯತನವೇ ಮೊದಲಾದ ವ್ಯಾಘ್ರತ್ವ ಮೊದಲಾದವುಗಳನ್ನ ಕಲ್ಪಿಸುವಿಕೆಯು,

ಭ್ರಮಃ=ಭ್ರಾಂತಿಯಿಂದು, ಇಷ್ಯತೇ=ಅಂಗೀಕರಿಸಲ್ಪಡುತ್ತದೆ. ವಿಶ್ವಂ = ಸರ್ವ ಪ್ರಪಂಚವು, ಭ್ರಾಂತಿಕಲ್ಪಿತಂ = ಭ್ರಾಂತಿಪರಿಕಲ್ಪಿತವು. ನ=ಅಲ್ಲ. ಅತಃ=(ಯಾವಕಾರಣದಿಂದ ಭ್ರಾಂತಿಗೆ ಅಧಿಷ್ಠಾನಾದಿಗಳು ಆವಶ್ಯಕಗಳೋ ಯಾವ ಕಾರಣದಿಂದ ಇಲ್ಲಿಅಧಿಷ್ಠಾನಾದಿಗಳಿಲ್ಲವೋ) ಆದ ಪ್ರಯುಕ್ತ, ವಿಶ್ವಂ=ಜಗತ್ತು, ವಿಷ್ಣುಬಲಾಶ್ರಯಃ=ಶ್ರೀಹರಿಯ ಸಾಮರ್ಥ್ಯವನ್ನಾಶ್ರಯಿಸಿಕೊಂಡಿರುವುದು, ಇತಿ=ಹೀಗೆ, ಬ್ರಹ್ಮವೈವರ್ತೇ=ಬ್ರಹ್ಮವೈವರ್ತ ಪುರಾಣದಲ್ಲಿ (ಉಕ್ತವಾಗಿದೆ)

ತಾ ॥ (1) ಐಂದ್ರಜಾಲಿಕ ಪುರುಷಾಶ್ರಿತವಾದ ಮಾಯಾಮಯ ಸೃಷ್ಟಿಯು ಸರ್ವರಿಂದಲೂ ಅಂಗೀಕೃತವೇ ಆಗಿರುತ್ತದೆ. ಅದರಲ್ಲಿ ಆಂತರಗಳಾದ ಸುಖದುಃಖಾದಿಗಳಿಗೆ ಅಧಿಷ್ಠಾನ ಪ್ರಧಾನಗಳಿಲ್ಲದಿರುವುದರಿಂದ ಜೀವನ ಅವಿದ್ಯಾಪರಿಕಲ್ಪಿತತ್ವವು ಯುಕ್ತವಾಗುವುದಿಲ್ಲ. ಅಧಿಷ್ಠಾನ ಪ್ರಧಾನಗಳಿಲ್ಲದಿರುವುದರಿಂದಲೇ ಬಾಹ್ಯ ಪ್ರಪಂಚಕ್ಕೂ ಈಶ್ವರ ಮಾಯಾ ಪರಿಕಲ್ಪಿತತ್ವವು ಯುಕ್ತವಾಗುವುದಿಲ್ಲ. (2) ಆಂತರೋ ಬಾಹ್ಯಶ್ಚ ಪ್ರಪಂಚಃ ನ ಭ್ರಾಂತಿಕಲ್ಪಿತಃ ನಿರಧಿಷ್ಠಾನತ್ವಾತ್ ನಿಷ್ಪ್ರಧಾನತ್ವಾತ್=ಆಂತರ ಪ್ರಪಂಚವೂ ಬಾಹ್ಯಪ್ರಪಂಚವೂ ಭ್ರಾಂತಿ ಪರಿಕಲ್ಪಿತವಲ್ಲ, ಅಧಿಷ್ಠಾನವಿಲ್ಲದಿರುವುದರಿಂದ, ಪ್ರಧಾನವಿಲ್ಲದಿರುವುದರಿಂದ, ಈ ಎರಡು ಅನುಮಾನಗಳಿಗೆ ವ್ಯಾಪ್ತಿ ಪಕ್ಷ ಧರ್ಮತಾದಿಗಳು ಇದ್ದುದರಿಂದ ಯಾವ ಸಂದೇಹಕ್ಕೂ ಆಸ್ಪದವಿಲ್ಲವೆಂಬೀ ಅಭಿಪ್ರಾಯದಿಂದ ಪುರಾಣವಾಕ್ಯವನ್ನುದಾಹರಿಸಿದರು ॥ ೩೦೩ ॥

ಜಗತ್ತು ಈಶ್ವರನ ಮಾಯೆಯಿಂದ ಪರಿಕಲ್ಪಿತವಲ್ಲವೆನ್ನುವಲ್ಲಿ ವ್ಯಾಪ್ತ್ಯಾದಿಗಳಿಂದೊಡಗೂಡಿದ ಅನುಮಾನಾಂತರವನ್ನು ಪುರಾಣವಾಕ್ಯದಿಂದಲೇ ತೋರಿಸುತ್ತಾರೆ.

**ಮೂ ॥ (೧) ನ ಚ ಮಾಯಾವಿನಾ ಮಾಯಾ ದೃಶ್ಯತೇ ವಿಶ್ವಮೀಶ್ವರಃ ।**
**ಸದಾ ಪಶ್ಯತಿ ತೇನೇದಂ ನ ಮಾಯೇತ್ಯವಧಾರ್ಯತಾಮಿತಿ ಚ ।**
**(೨) ಅಪರೋಕ್ಷದೃಶೋ ಮಿಥ್ಯಾ ದರ್ಶನಂ ನ ಕ್ವಚಿದ್ಭವೇತ್ ।**
**ಸರ್ವಾಪರೋಕ್ಷನಿದ್ವಿಷ್ಣುರ್ವಿಶ್ವದೃಕ್ತನ್ನ ತನ್ಮೃಷೇತಿ ಚ ॥ ೩೦೪ ॥**

ಅ ॥ (೧) ಚ=ಯಾವ ಕಾರಣದಿಂದ. ಮಾಯಾವಿನಾ=ಮಾಯಾವಿಯಾದ ಪುರುಷನಿಂದ, ಮಾಯಾ=ಮಾಯಾಮಯವಾದ ಗಜಮೊದಲಾದುದು, ನ ಚ ದೃಶ್ಯತೇ=ಕಾಣಲ್ಪಡುವುದೇ ಇಲ್ಲವು (ಸಾಕ್ಷಾತ್ಕರಿಸಲ್ಪಡುವುದೇ ಇಲ್ಲ ಇದರಿಂದ ವ್ಯತಿರೇಕವ್ಯಾಪ್ತಿಯನ್ನು ತೋರಿಸಿದರು.) ಈಶ್ವರಃ=ಶ್ರೀ ಹರಿಯು, ವಿಶ್ವಂ=ಜಗತ್ತನ್ನು, ಸದಾ=ಯಾವಾಗಲೂ, ಪಶ್ಯತಿ=ನೋಡುತ್ತಾನೆ. ತೇನ=ಅದರಿಂದ, ಇದಂ=ಈ ಜಗತ್ತು, ನ ಮಾಯಾ=ಈಶ್ವರ ಮಾಯೆಯಿಂದ ಪರಿಕಲ್ಪಿತವಲ್ಲ, ಇತಿ=ಹೀಗೆ, ಅವಧಾರ್ಯತಾಂ=ನಿಶ್ಚಯಿಸಲ್ಪಡಲಿ. ಇತಿ ಚ=ಹೀಗೆ ಇದೆ. (ಅಂತೂ 'ವಿಶ್ವಂ ನೇಶ್ವರಮಾಯಾಕಲ್ಪಿತಂ ತೇನ ದೃಶ್ಯಮಾನತ್ವಾತ್ ಯತ್ ಯನ್ಮಾಯಾಕಲ್ಪಿತಂ ತತ್ ನ ತೇನ ದೃಶ್ಯತೇ ಯಥಾ ಐಂದ್ರಜಾಲಿಕಂ ಮಾಯಾವಿನಾ'=ಜಗತ್ತು ಈಶ್ವರ ಮಾಯೆಯಿಂದ ಪರಿಕಲ್ಪಿತವಲ್ಲ ಈಶ್ವರನಿಂದ ಕಾಣಲ್ಪಡುವುದರಿಂದ, ಯಾವುದು ಯಾರ ಮಾಯೆಯಿಂದ ಪರಿಕಲ್ಪಿತವೋ ಅದು ಅವನಿಂದ ಕಾಣಲ್ಪಡುವುದಿಲ್ಲ ಮಾಯಾವಿಯಿಂದ ಐಂದ್ರಜಾಲಿಕ ವಸ್ತುವಿನಂತೆ. ಎಂಬೀ ಅನುಮಾನವು ಹೇಳಲ್ಪಟ್ಟಿತು. ಅಥವಾ ನೇದಂ ಮಾಯಾಮಯಂ ಮಾಯಾವಿತ್ವಾಭಿಮತೇನ ದೃಶ್ಯಮಾನತ್ವಾತ್=ಈ ಜಗತ್ತು ಮಾಯಾಮಯವಲ್ಲವು ಮಾಯಾವಿಯೆಂದಭಿಮತನಿಂದ ಕಾಣಲ್ಪಡುವುದರಿಂದ ಎಂದು.) (೨) ಅಪರೋಕ್ಷದೃಶಃ=ಅಧಿಷ್ಠಾನವನ್ನು ಪ್ರತ್ಯಕ್ಷೀಕರಿಸಿದವನಿಗೆ, ಕ್ವಚಿತ್=ಎಲ್ಲಿಯೂ, ಮಿಥ್ಯಾದರ್ಶನಂ=ಅಲ್ಲಿ ಆರೋ

ಪಿತವಾದ ಮಿಥ್ಯಾಪದಾರ್ಥದರ್ಶನವು, ನ ಭವೇತ್=ಆಗಲಾರದು. (ಅಂದರೆ ಅಧಿಷ್ಠಾನಾಪರೋಕ್ಷಜ್ಞಾನವುಳ್ಳವನಿಂದ ಕಾಣಲ್ಪಡತಕ್ಕುದು ಅಲ್ಲಿ ಆರೋಪಿತವಾಗಲಾರದು, ಹೀಗೆ ಅನ್ವಯವಾಗಲೀ, 'ಯನ್ಮಿಥ್ಯಾ ತಸ್ಯ ದರ್ಶನಂ ಅಧಿಷ್ಠಾನಾಪರೋಕ್ಷದೃಶೋ ನ ಭವೇತ್'=ಯಾವುದು ಮಿಥ್ಯೆಯೋ ಅದರ ನೋಡುವಿಕೆಯು ಅಧಿಷ್ಠಾನವನ್ನು ಅಪರೋಕ್ಷೀಕರಿಸಿದವನಿಗೆ ಆಗಲಾರದು ಎಂದು ವ್ಯತಿರೇಕವಾಗಲೀ ತೋರಿಸಲ್ಪಟ್ಟಿತು. ಕ್ವಚಿತ್ ಎನ್ನುವುದರಿಂದ ಎರಡೂ ನಿಯತವೆಂದು ತೋರಿಸಲ್ಪಟ್ಟಿತು.) ಸರ್ವಾಪರೋಕ್ಷವಿತ್=ಸರ್ವ ಪ್ರಕಾರದಿಂದಲೂ ಪ್ರತ್ಯಕ್ಷವಾಗಿಯೇ ಅಧಿಷ್ಠಾನವೆಂದಭಿಮತವಾದುದನ್ನು ತಿಳಿದ, ವಿಷ್ಣುಃ=ಶ್ರೀ ಹರಿಯು, ವಿಶ್ವದೃಕ್=ಎಲ್ಲಾ ವಸ್ತುಗಳನ್ನು ಪ್ರತ್ಯಕ್ಷೀಕರಿಸಿದವನು, (ಇದರಿಂದ ಪಕ್ಷಧರ್ಮತ್ವವು ಪ್ರತಿಪಾದಿತವಾಯಿತು ) ತತ್=ಆದಕಾರಣ, ತತ್=ಆ ಜಗತ್ತು, ಮೃಷಾ ನ=ಮಿಥ್ಯೆಯಲ್ಲವು.

ತಾ || (1) ಇದರಿಂದ ೧ ' ವಿವಾದಪದಂ ನಾರೋಪಿತಂ ಸರ್ವಾತ್ಮನಾಧಿಷ್ಠಾನಾಪರೋಕ್ಷಜ್ಞಾನವತಾ ದೃಶ್ಯಮಾನತ್ವಾತ್ ಯದೇವಂ ತದೇವಂ ಯಥೋಕ್ತವಿಧಯಾ ಸ್ತಂಭವಿದಾ ದೃಶ್ಯಮಾನೋ ನ ಕುಂಭಸ್ತತ್ರಾರೋಪಿತಃ'=ವಿವಾದವಿಷಯವಾದುದು ಆರೋಪಿತವಲ್ಲವು. ಅಧಿಷ್ಠಾನಾಸಾಧಾರಣಾಕಾರದಿಂದ ಅಧಿಷ್ಠಾನದ ಅಪರೋಕ್ಷಜ್ಞಾನವುಳ್ಳವನಿಂದ ಕಾಣಲ್ಪಡುವಪ್ರಯುಕ್ತ ಯಾವುದು ಹೇತುವುಳ್ಳದ್ದೋ ಅದು ಸಾಧ್ಯವುಳ್ಳದ್ದು. ಹೇಗೆಂದರೆ- ಹಿಂದೆ ಹೇಳಿದಪ್ರಕಾರ ಇದು ಸ್ತಂಭವೆಂದು ತಿಳಿದವನಿಂದ ಕಾಣಲ್ಪಡತಕ್ಕ ಕುಂಭವು ಅಲ್ಲಿ ಆರೋಪಿತವಲ್ಲವು. ಅಥವಾ 'ಯನ್ನೈವಂ ತನ್ನೈವಂ ಯಥಾ ಶುಕ್ತಿಕಾರೋಪಿತಂ ರಜತಮುಕ್ತರೀತ್ಯಾ ಶುಕ್ತಿದರ್ಶಿನಾ ನ ದೃಶ್ಯತೇ'=ಯಾವುದು ಸಾಧ್ಯವುಳ್ಳದ್ದಲ್ಲವೋ ಅದು ಹೇತುವುಳ್ಳದ್ದಲ್ಲ. ಹೇಗೆಂದರೆ- ಮುತ್ತಿನ ಚಿಪ್ಪಿಯಲ್ಲಿ ಆರೋಪಿತವಾದ ಬೆಳ್ಳಿಯು ಹಿಂದೆ ಹೇಳಿದಪ್ರಕಾರ ಶುಕ್ತಿಯೆಂದು ಶುಕ್ತಿಯನ್ನ ಕಾಣತಕ್ಕವನಿಂದ ಕಾಣಲ್ಪಡುವುದಿಲ್ಲ. (2) 'ಅಪರೋಕ್ಷದೃಶಃ' ಇತ್ಯಾದಿಗಳಿಂದ ಹೇಳಲ್ಪಟ್ಟ ಅನುಮಾನವು ದುಃಖಾದಿಗಳಿಗೆ ಅವಿದ್ಯಾಮಯತ್ವವನ್ನು ನಿರಾಕರಿಸುವದರಲ್ಲಿಯೂ ಸಮಾನವೇ ಅಂದರೆ, 'ವಿಗೀತಂ ದುಃಖಾದಿಕಂ ನಾರೋಪಿತಂ ಸರ್ವಾತ್ಮನಾ ಅಧಿಷ್ಠಾನಭೂತಾತ್ಮಾಪರೋಕ್ಷಜ್ಞಾನವತಾ ದೃಶ್ಯಮಾನತ್ವಾತ್'= ವಿವಾದವಿಷಯಗಳಾದ ದುಃಖಾದಿಗಳು ಆರೋಪಿತಗಳಲ್ಲ, ಅಸಾಧಾರಣಾಕಾರವಾಗಿ ಅಧಿಷ್ಠಾನಭೂತನಾದ ಆತ್ಮನ ಪ್ರತ್ಯಕ್ಷಜ್ಞಾನವುಳ್ಳವನಿಂದ ಕಾಣಲ್ಪಡುವಪ್ರಯುಕ್ತ ಹೀಗೆ ಹೇಳಲಿಕ್ಕೆ ಬರುತ್ತದೆ. ಅಧಿಷ್ಠಾನ ಯಾಥಾರ್ಥ್ಯದ ಪ್ರತ್ಯಕ್ಷಜ್ಞಾನವಿದ್ದರೂ ಭ್ರಾಂತಿಯುದೆ ಎಂದಂಗೀಕರಿಸಿದರೆ ಸರ್ವದಾ ನಿವೃತ್ತಿಯೇ ಇಲ್ಲವೆಂದಾಗುವುದು. ಭ್ರಾಂತಿಯು ನಿವೃತ್ತವೇ ಆಗದಿರುವುದಾದರೆ ಬ್ರಹ್ಮಜ್ಞಾನವನ್ನು ಸಂಪಾದಿಸುವುದೇ ವ್ಯರ್ಥವಾಗಬೇಕಾದೀತು. ಇದೇ ರೀತಿಯಾಗಿ ೩ 'ಪ್ರಪಂಚಃ ಸತ್ಯಃ ಈಶ್ವರದೃಷ್ಟತ್ವಾತ್ ತತ್ಸ್ವರೂಪವತ್'=ಪ್ರಪಂಚವು ಸತ್ಯವು ಈಶ್ವರನಿಂದ ಕಾಣಲ್ಪಟ್ಟಪ್ರಯುಕ್ತ ಆತನ ಸ್ವರೂಪದಂತೆ, ಎಂಬೀ ಅನುಮಾನವನ್ನು ಪ್ರಪಂಚಕ್ಕೆ ಸತ್ಯತ್ವವಿಷಯದಲ್ಲಿ ಅನುಸಂಧಾನಮಾಡಿಕೊಳ್ಳಬೇಕು. ಈಶ್ವರದೃಷ್ಟವಾದ ಸ್ವಸ್ವರೂಪವು ಸತ್ಯವೆಂದೇ ದೃಷ್ಟವಾಗಿದೆ. ಈಶ್ವರನು ಕಂಡದ್ದು ಸತ್ಯವಾಗದಿರುವುದಾದರೆ ಆತನೂ ಭ್ರಾಂತನು ಆಗಬೇಕಾಗುವನು || ೩೦೪ ||

ಹೀಗೆ ಏಕಜೀವವಾದಿಗಳ ಮತಕ್ಕೆ ಹೇಳಿದ ದೋಷಗಳನ್ನು ಭೇದವು ಮಿಥ್ಯೆಯೆಂದು ಹೇಳುವ ಬಹುಜೀವವಾದಿಗಳ ಮತದಲ್ಲಿಯೂ ಅತಿದೇಶಮಾಡಿ ಉಪಪಾದನೆಮಾಡಿಯಾಯಿತು. ಈಗ ಯಾವ ಅದ್ವೈತಿಗಳು ಜೀವಬ್ರಹ್ಮರಿಗೂ ಜೀವರಿಗೂ ಪರಸ್ಪರವಾಗಿರುವ ಸತ್ಯವೇ ಆದ ಭೇದವನ್ನು ಔಪಾಧಿಕವೆನ್ನುತ್ತಾರೋ ಅವರ ಮತವನ್ನನುವಾದಮಾಡಿ ಯುಕ್ತಿವಿರೋಧದಿಂದ ದೂಷಿಸುತ್ತಾರೆ —

**ಮೂ ॥ ಯದಿ ಚೈಕಮೇವ ಬ್ರಹ್ಮೋಪಾಧಿಭೇದಾತ್ಸಂಸರತಿ ಮುಚ್ಯತೇ ಚ ತದಾ ಸಂಸಾರಿಣಾಂ ಸರ್ವದಾ ವಿದ್ಯಮಾನತ್ವಾತ್ಸರ್ವದಾ ಸಂಸಾರ್ಯೇವ ಬ್ರಹ್ಮ। ಅತಸ್ತದ್ಭಾವೋಽಪಿ ನ ಮುಕ್ತಿಃ। ಸರ್ವದೋಪಾಧಿಸಂಬಂಧತ್ವಾತ್ತಸ್ಯ ॥ ೩೦೫ ॥**

ಅ ॥ ಏಕಮೇವ ಬ್ರಹ್ಮ=ಸ್ವಭಾವತಃ ಭೇದವೇ ಇಲ್ಲದಿರುವ ಬ್ರಹ್ಮನೇ, **ಉಪಾಧಿ ಭೇದಾತ್**=ಉಪಾಧಿಕೃತವಾದ ಭೇದದಿಂದ, ಸಂಸರತಿ ಚ=ಸಂಸಾರವನ್ನನುಭವಿಸುತ್ತಾನೆ, ಮುಚ್ಯತೇ ಚ ಯದಿ=ಮುಕ್ತನೂ ಆಗುತ್ತಾನೆ ಎಂದಾಗಿದ್ದರೆ, ತದಾ=ಆಗ, ಸಂಸಾರಿಣಾಂ= ಸಂಸಾರಿಗಳಿಗೆ, ಸರ್ವದಾ=ಯಾವಾಗಲೂ, ವಿದ್ಯಮಾನತ್ವಾತ್=ಇರುವಿಕೆ ಇದ್ದುದರಿಂದ, (ಅಂದರೆ ಸರ್ವದಾ ಸಂಸಾರಿಗಳು ಇದ್ದುದರಿಂದ) ಸರ್ವದಾ=ಯಾವಾಗಲೂ, ಬ್ರಹ್ಮ=ಪರ ಬ್ರಹ್ಮನು, ಸಂಸಾರ್ಯೇವ=ಸಂಸಾರವುಳ್ಳವನೇ ಆಗುವನು. ಅತಃ=ಆದಕಾರಣ, **ತದ್ಭಾವೋಽಪಿ** = ಬ್ರಹ್ಮಭಾವವೂ, ಮುಕ್ತಿಃ = ಮೋಕ್ಷವು, ನ = ಆಗದೆ ಹೋಗಬೇಕಾಗುವುದು. ತಸ್ಯ = ಆ ಬ್ರಹ್ಮನಿಗೆ, ಸರ್ವದಾ = ಯಾವಾಗಲೂ, ಉಪಾಧಿಸಂಬಂಧತ್ವಾತ್ = **ಉಪಾಧಿ** ಸಂಬಂಧವಿದ್ದುದರಿಂದ.

ತಾ ॥ (1)ಸ್ವಾಭಾವಿಕವಾಗಿ ಭೇದವೇ ಇಲ್ಲದಿರುವ ಪರಬ್ರಹ್ಮನು ಅನೇಕ **ಉಪಾಧಿಗಳ** ಸಂಬಂಧದಿಂದ ಅನೇಕ ಜೀವಭಾವವನ್ನು ಹೊಂದಿ ಉಪಾಧಿವಿಶಿಷ್ಟನಲ್ಲಿ **ನಿವೃತ್ತಕರ್ಮದಿಂದ** ಯುಕ್ತವಾದ ಐಕ್ಯಜ್ಞಾನವು ಹುಟ್ಟದಿದ್ದರೆ ಆ ರೂಪದಿಂದ ದುಃಖಾದಿಗಳನ್ನು ಅನುಭವಿಸುತ್ತಾನೆ. ಉಪಾಧಿ ವಿಶಿಷ್ಟನಲ್ಲಿ ಜ್ಞಾನಾದಿಗಳು ಹುಟ್ಟದರೆ ಆ ರೂಪದಿಂದ ಮುಕ್ತನಾಗುತ್ತಾನೆ. ಅಂದರೆ ಆತ್ಯಂತಿಕವಾಗಿ ಉಪಾಧಿಯು ಹೊರಟು ಹೋದರೆ ದುಃಖಲೇಶರಹಿತವಾದ **ಪರಮಾ**ನಂದರೂಪವಾದ ಬ್ರಹ್ಮತ್ವವನ್ನು ಹೊಂದುತ್ತಾನೆ. (2) ಇವರ ಮತದಲ್ಲಿ ಏಕ **ಜೀವವಾದಿ**ಗಳಂತೆಯೇ 'ಇವನು ಜೀವನು' 'ಇವನು ಈಶ್ವರನು' 'ಇವನು ಬ್ರಹ್ಮನು' ಎಂಬೀ ವ್ಯವಸ್ಥೆಯೂ ಬದ್ಧಮುಕ್ತ ವ್ಯವಸ್ಥೆಯೂ ಗುರುಶಿಷ್ಯಾದಿವ್ಯವಸ್ಥೆಗಳಾಗಲೀ ಸಿದ್ಧಿಸುವುದಿಲ್ಲವೆಂದಲ್ಲ. ಜೀವ ಈಶ್ವರ ಬ್ರಹ್ಮರಿಗೂ ಜೀವರಿಗೂ ಪರಸ್ಪರವಾಗಿ ಭೇದವನ್ನೇ **ಅಂಗೀಕರಿಸಿರುವರು.** ಭೇವವು ಔಪಾಧಿಕವಾದ ಪ್ರಯುಕ್ತ ಸ್ವಾಭಾವಿಕವಾಗಿ ಎರಡನೇ ವಸ್ತುವೇ ಇಲ್ಲದಿರುವುದರಿಂದ ಅದ್ವೈತಶ್ರುತಿವಿರೋಧವಿಲ್ಲ. (3) ಹೀಗಾದರೂ ಜೀವರಿಗೆ ಬಹುತ್ವವನ್ನು ಹೇಳತಕ್ಕ **ಮಾಯಾ**ವಾದಿಗಳಿಗೆ ಹೇಳಿದ ದೋಷಗಳೂ ಪ್ರಾಪ್ತಗಳಾಗುವುದಿಲ್ಲ. **ಉಪಾಧಿಗಳ ಭೇದವೂ ತದಿತರ** ಪ್ರಪಂಚವೂ ಸತ್ಯವೆಂದೇ ಅಂಗೀಕರಿಸಿರುವರು. ಉಪಾಧ್ಯಾದಿಗಳು ಸತ್ಯಗಳಾಗಿದ್ದರೆ ಜ್ಞಾನದಿಂದ ನಿವೃತ್ತಿಯು ಕೂಡಲಾರದೆಂದಲ್ಲ, ಕರ್ಮರೂಪ ಸಹಕಾರಿ **ಸಾಮರ್ಥ್ಯದಿಂದ ಕರ್ಮ**ದಿಂದೊಡಗೂಡಿದ ಜ್ಞಾನವು ಸತ್ಯವನ್ನು ನಿವರ್ತಿಸುವುದು, ಎಂದಗೀಕರಿಸುವೆವು. ಎಂದನ್ನುವರು. (4) ಯದ್ಯಪಿ ಅವರು (ಭಾಸ್ಕರರು) ಹೀಗೆ ಹೇಳುವರು. ಆದಾಗ್ಯೂ ಅವರ **ಮತದಲ್ಲಿ** ಬದ್ಧಮುಕ್ತವ್ಯವಸ್ಥೆಯಾಗಲೀ ಜೀವ ಬ್ರಹ್ಮವ್ಯವಸ್ಥೆಯಾಗಲೀ ಸಿದ್ಧಿಸುವುದಿಲ್ಲ. **ಹೇಗೆಂದರೆ —** 'ಅನಾದ್ಯನಂತಂ ಜಗದೇತದೀದೃಕ್ಪ್ರವರ್ತತೇ' ಇದು ಮೊದಲಾದ **ಶ್ರುತಿಗಳಿಂದ ಸಂಸಾರಿಗಳು ಸರ್ವದಾ** ಇದ್ದುದರಿಂದ ಬ್ರಹ್ಮನೂ ಸಂಸಾರಿಯೆಂದೇ ಪ್ರಾಪ್ತನಾಗುವನು. **ಅಂತೂ** ಬ್ರಹ್ಮತ್ವವನ್ನು ಹೊಂದಿದವನಿಗೂ ಮುಕ್ತಿಯಿಲ್ಲ. ಸಂಸಾರಿತನವನ್ನು ಹೊಂದಿಕೊಂಡಿದ್ದವನು **ಮುಕ್ತನಾಗಲಾರನು.** ತಥಾ ಚ ಬದ್ಧರಾದ ಜೀವರೇ ಇರುತ್ತಾರೆ. ಮುಕ್ತನಾಗಲೀ **ಶುದ್ಧ ಬ್ರಹ್ಮನಾಗಲೀ** ಇಲ್ಲ. ಆ ಕಾರಣ ಬದ್ಧ ಮುಕ್ತವ್ಯವಸ್ಥೆಯಾಗಲೀ ಜೀವಬ್ರಹ್ಮವ್ಯವಸ್ಥೆಯಾಗಲೀ **ಸಿದ್ಧಿಸಲಾರದು.**

(5) ಬ್ರಹ್ಮನೇ ಉಪಾಧಿ ಸಂಬಂಧದಿಂದ ಸಂಸಾರವನ್ನು (ದುಃಖಾದಿಗಳನ್ನು) ಅನುಭವಿಸುತ್ತಾನೆ ಎಂದು ಪರರ ಅಭಿಪ್ರಾಯವು. ಆದಪ್ರಯುಕ್ತ ಸಂಸಾರಿಗಳು ಸರ್ವದಾ ಇದ್ದುದರಿಂದ ಬ್ರಹ್ಮನಿಗೇನೇ ಸರ್ವದಾ ಉಪಾಧಿಸಂಬಂಧವಿದೆ ಎಂದುಕ್ತವಾಯಿತು. ಉಪಾಧಿ ಸಂಬಂಧವೇ ಸಂಸಾರಕ್ಕೆ ಕಾರಣವು. ಆದುದರಿಂದ ಬ್ರಹ್ಮನಿಗೆ ಸರ್ವದಾ ಸಂಸಾರವೇ ಇರಬೇಕಾಗುವುದು ॥ ೩೦೫ ॥

ಶುದ್ಧಬ್ರಹ್ಮನಿಗೇನೇ ಉಪಾಧಿಸಂಬಂಧವನ್ನೂ ಸಂಸಾರವನ್ನೂ ಹೇಳಿದರೆ ಬದ್ಧಮುಕ್ತ ವ್ಯವಸ್ಥೆಯೂ ಜೀವಬ್ರಹ್ಮವ್ಯವಸ್ಥೆಯೂ ಅನುಪಪನ್ನವಾಗುವುದು. ಶುದ್ಧವು ಉಪಾಧಿಸಂಬಂಧ ರಹಿತವಾಗಿಯೇ ಇರುತ್ತದೆ. ಆದ ಪ್ರಯುಕ್ತ ಬ್ರಹ್ಮಭಾವಾಪತ್ತಿಯು ಮುಕ್ತಿಯಾಗದಿರುವುದು ಹೇಗೆ ಎಂದರೆ—

**ಮೂ ॥ (೧) ನ ಚ ಶುದ್ಧಸ್ಯ ನೋಪಾಧಿ ಸಂಬಂಧ ಇತಿ ವಾಚ್ಯಂ। (೨) ಉಪಾಧಿಸಂಬಂಧಸ್ಯೋಪಾಧಿಸಂಬಂಧಕಲ್ಪನೇಽನವಸ್ಥಾಪ್ರಸಂಗಾತ್। (೩) ನ ಚ ತೇನೈವ ಸಂಬಂಧೇನ ಸಂಬದ್ಧಸ್ಯ । ಆತ್ಮಾಶ್ರಯಪ್ರಸಂಗಾತ್ ॥ ೩೦೬ ॥**

ಅ ॥ (೧) ಶುದ್ಧಸ್ಯ=ಶುದ್ಧ ಬ್ರಹ್ಮನಿಗೆ, ನ ಉಪಾಧಿ ಸಂಬಂಧಃ=ಉಪಾಧಿಸಂಬಂಧ ವಿಲ್ಲ, ಇತಿ ನ ಚ ವಾಚ್ಯಂ=ಹೀಗೆ ಹೇಳಕೂಡದು. (೨) ಉಪಾಧಿ ಸಂಬಂಧಸ್ಯ=ಉಪಾಧಿ ಸಂಬದ್ಧನಿಗೇ, ಉಪಾಧಿಸಂಬಂಧಕಲ್ಪನೇ=ಉಪಾಧಿಸಂಬಂಧವನ್ನು ಕಲ್ಪಿಸಿದರೆ, ಅನವಸ್ಥಾ ಪ್ರಸಂಗಾತ್=ಅನವಸ್ಥೆಯು ಪ್ರಸಕ್ತವಾಗುವುದರಿಂದ, (೩) ತೇನೈವ ಸಂಬಂಧೇನ=ಯಾವುದು ಜೀವಭೇದ ನಿಮಿತ್ತವಾದ ಉಪಾಧಿಸಂಬಂಧವದೆಯೋ ಅದೇ ಸಂಬಂಧದಿಂದ, ಸಂಬದ್ಧಸ್ಯ= ಸಂಬದ್ಧವಾದುದಕ್ಕೆ, ನ ಚ=ಅದೇ ಸಂಬಂಧವು ಎಂದೂ ಅಲ್ಲ. ಆತ್ಮಾಶ್ರಯಪ್ರಸಂಗಾತ್= ಆತ್ಮಾಶ್ರಯವು ಪ್ರಸಕ್ತವಾದುದರಿಂದ.

ತಾ ॥ (1) ಉಪಾಧಿಸಂಬಂಧವನ್ನಂಗೀಕರಿಸುವವನು ಅವಶ್ಯವಾಗಿ ಪ್ರತಿಸಂಬಂಧಿ ಯನ್ನು ಹೇಳಬೇಕು. ಸಂಬಂಧಿಗಳನ್ನು ಹೊರತು ಸಂಬಂಧವು ಕೂಡಲಾರದು. ಜಡಕ್ಕೆ ಉಪಾಧಿ ಸಂಬಂಧವಿಲ್ಲ. ಉಪಾಧಿಸಂಬದ್ಧವಾದ ಜಡಕ್ಕೆ ಚೇತನಗಳ ಭೇದಕಾರಿತ್ವವೇ ಕೂಡ ಲಾರದು. ಶುದ್ಧ ಚೇತನಕ್ಕೆ ಉಪಾಧಿಸಂಬಂಧವಿಲ್ಲವಾದರೆ ಉಪಾಧಿಸಂಬದ್ಧವಾದುದಕ್ಕೇನೆ ಉಪಾಧಿಸಂಬಂಧವೆಂದಗೀಕರಿಸಬೇಕು ಬೇರೆ ಪ್ರಕಾರಗಳಿಲ್ಲವು. ಉಪಾಧಿಸಂಬಂಧವಿಲ್ಲದಿರುವು ದಕ್ಕೇನೇ ಶುದ್ಧವೆಂದು ಹೆಸರು. ಅಂತೂ ಉಪಾಧಿಸಂಬಂಧ ರಹಿತವಾದುದಕ್ಕೇನೇ ಶುದ್ಧ ವೆಂದು ಹೆಸರಿದ್ದುದರಿಂದ ಶುದ್ಧಾತಿರಿಕ್ತವಾದ ಉಪಾಧಿಸಂಬಂಧವಿಲ್ಲದಿರುವ ಚೇತನವೇ ಇಲ್ಲ ದಿರುವುದರಿಂದ ಉಪಾಧಿಸಂಬದ್ಧವಾದುದಕ್ಕೇನೆ ಉಪಾಧಿಸಂಬಂಧವೆಂದಂಗೀಕರಿಸಬೇಕು. (2) ಇದರಿಂದ ದೋಷವೇನೆಂದರೆ, ಜೀವಭೇದ ನಿಮಿತ್ತವಾದ ಉಪಾಧಿ ಸಂಬಂಧಾರ್ಥವಾಗಿ ಕಲ್ಪಿಸ ಲ್ಪಡತಕ್ಕ ಉಪಾಧಿಸಂಬಂಧವು ಜೀವ ಭೇದನಿಮಿತ್ತವಾದ ಉಪಾಧಿಸಂಬಂಧದಿಂದ (೧) ಬೇರೆಯೋ ಅಥವಾ, (೨) ಇದೆಯೋ ೧ನೇದ್ದು ಕೂಡಲಾರದು. ಆ ಸಂಬಂಧವೂ ಬೇರೆ ಉಪಾಧಿಯಿಂದ ಸಂಬ ದ್ಧವಾದುದಕ್ಕೇನೇ ಹೇಳಬೇಕೆಂದು ಹೀಗೆ ಅನವಸ್ಥಾದೋಷವು ಬರುವುದು. ಮೂರು ನಾಲ್ಕು ಕಕ್ಷ್ಯ ನಂತರದಲ್ಲಿ ಶುದ್ಧಕ್ಕೇನೇ ಉಪಾಧಿಸಂಬಂಧವನ್ನಂಗೀಕರಿಸುವುದಾದರೆ ೧ನೇ ಉಪಾಧಿಸಂಬಂಧವೇ ಶುದ್ಧಕ್ಕೇನೇ ಏಕೆ ಅಂಗೀಕರಿಸಬಾರದು? ೨ನೇದ್ದೂ ಕೂಡಲಾರದು. ಜೀವಭೇದನಿಮಿತ್ತ ವಾದ ಉಪಾಧಿ ಸಂಬಂಧದಿಂದ ಸಂಬದ್ಧವಾದುದಕ್ಕೆ ಅದೇ ಸಂಬಂಧವೆಂದೂ ಹೇಳಕೂಡದು.

ಏಕೆಂದರೆ, ತನ್ನಉತ್ಪತ್ತಿಗೆ ತನ್ನನ್ನೇ ಅಪೇಕ್ಷಿಸಿದರೆ ಹೇಗೋ ತನ್ನ ಜ್ಞಾನಕ್ಕೆ ತನ್ನನ್ನೇ ಅಪೇಕ್ಷಿಸಿದರ ಹೇಗೋ ಹಾಗೆಯೇ ತನಗೇನೇ ಆಧಾರಾಧೇಯ ಭಾವವನ್ನು ಅಂಗೀಕರಿಸಿದರೂ ಆತ್ಮಾಶ್ರಯತ್ವವು ಇದೆ. ಆದಕಾರಣ ಉಪಾಧಿಸಂಬದ್ಧವಾದುದಕ್ಕೇನೇ ಉಪಾಧಿಸಂಬಂಧವನ್ನಂಗೀಕರಿಸಿದರೆ ಅನವಸ್ಥಾದಿದೋಷಗಳು ಬರುವುದರಿಂದ ಶುದ್ಧಕೇನೇ ಉಪಾಧಿಸಂಬಂಧವೆಂದಂಗೀಕರಿಸಬೇಕು ॥೩೦೬॥

ಮಾಯಾವಾದಿಗಳು ಆಶಂಕಿಸುವರು. ಸತ್ಯೋಪಾಧಿಕೃತವಾದ ಸತ್ಯಜೀವಭೇದವಾದಿಗಳಿಗೆ ಬದ್ಧಮುಕ್ತಾದಿ ವ್ಯವಸ್ಥೆಗಳು ಸಿದ್ಧಿಸದಿದ್ದರೂ ನಾವು ಉಪಾಧಿಗಳಿಗೆ ಮಿಥ್ಯಾತ್ವವನು ಒಡಂಬಟ್ಟಪ್ರಯುಕ್ತ ವ್ಯವಸ್ಥೆಯು ಸಿದ್ಧಿಸುವುದು, ಎಂದರೆ ಉಪಾಧಿಗೆ ಮಿಥ್ಯಾತ್ವವು ಯುಕ್ತವಾದರೆ ಮಾಯಾವಾದಿಗಳಿಗೆ ವ್ಯವಸ್ಥೆಯು ಸಿದ್ಧಿಸುವುದು, ಅದೇ ಕೂಡಲಾರದು. ಮಿಥ್ಯಾತ್ವಪಕ್ಷವು ನಿರಧಿಷ್ಠಾನತ್ವ ಮೊದಲಾದ ಅನೇಕದೋಷ ದೂಷಿತಗಳಾಗಿವೆ, ಅಲ್ಲದೆ ಬೇರೆ ದೋಷಗಳೂ ಇವೆ, ಎಂದು ನಿರೂಪಿಸುತ್ತಾರೆ —

ಮೂ ॥ ಇತಶ್ಚ ಮಿಥ್ಯೋಪಾಧಿರ್ನ ಯುಜ್ಯತೇ । ಅಜ್ಞಾನಸಿದ್ಧೌ ಮಿಥ್ಯೋಪಾಧಿ ಸಿದ್ಧಿಃ । ಅಜ್ಞಾನಂ ವಿನಾ ಮಿಥ್ಯಾತ್ವಾಸಿದ್ಧೇಃ । ನ ಚ ಮಿಥ್ಯೋಪಾಧಿಂ ವಿನಾಽಜ್ಞಾನಸಿದ್ಧಿಃ । ಮಿಥ್ಯೋಪಾಧಿ ಭಿನ್ನಸ್ಯೈವಾಜ್ಞತ್ವಾತ್ । ಶುದ್ಧಸ್ಯೈವಾಜ್ಞತ್ವೇ ಮುಕ್ತಸ್ಯಾಪ್ಯಜ್ಞತ್ವಪ್ರಸಕ್ತೇಃ । ಸ್ವಾಭಾವಿಕತ್ವಾತ್ಸತ್ಯತ್ವಾತ್ಸದ್ವಿತೀಯತ್ವ ಪ್ರಸಕ್ತೇಶ್ಚ । ಸ್ವಾಭಾವಿಕಸ್ಯ ಚಾನಿವೃತ್ಯಂಗೀಕಾರಾದನಿವೃತ್ತಿಪ್ರಸಕ್ತೇಶ್ಚ । ಸತ್ಯಸ್ಯ ಚಾನಿವೃತ್ತಿರಿತಿ ಹಿ ತತ್ಪಕ್ಷಃ । ಅತಶ್ಚಾನ್ಯೋನ್ಯಾಶ್ರಯತಾ ॥ ೩೦೭ ॥

ಅ ॥ ಇತಶ್ಚ=ಇನ್ನು ಹೇಳುವ ದೂಷಣದಿಂದಲೂ, ಮಿಥ್ಯೋಪಾಧಿಃ=ಮಿಥ್ಯೆಯಾದ ಉಪಾಧಿಯು, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಅಜ್ಞಾನಸಿದ್ಧೌ=ಅಜ್ಞಾನ ವ್ಯವಸ್ಥೆಯಾದರೆ, ಮಿಥ್ಯೋಪಾಧಿಸಿದ್ಧಿಃ = ಮಿಥ್ಯೆಯಾದ ಉಪಾಧಿಯು ಸಿದ್ಧಿಸುವುದು. ಅಜ್ಞಾನಂ ವಿನಾ=ಅಜ್ಞಾನವನ್ನು ಹೊರತು, ಮಿಥ್ಯಾತ್ವಾಸಿದ್ಧೇಃ=ಮಿಥ್ಯಾತ್ವವು ಸಿದ್ಧಿಸದಿರುವುದರಿಂದ, ಮಿಥ್ಯೋಪಾಧಿಂ ವಿನಾ = ಮಿಥ್ಯೋಪಾಧಿಸಿದ್ಧಿಯನ್ನು ಹೊರತು, ಅಜ್ಞಾನಸಿದ್ಧಿಃ ನ ಚ=ಅಜ್ಞಾನವು ಸಿದ್ಧಿಸುವುದಿಲ್ಲ. ಮಿಥ್ಯೋಪಾಧಿಭಿನ್ನಸ್ಯೈವ=ಮಿಥ್ಯೆಯಾದ ಉಪಾಧಿಯಿಂದ ಭಿನ್ನನಾದವನಿಗೇನೇ, ಅಜ್ಞತ್ವಾತ್ = ಅಜ್ಞಾನಾಶ್ರಯತ್ವವಿದ್ದುದರಿಂದ, ಶುದ್ಧಸ್ಯೈವ=ಶುದ್ಧ ಬ್ರಹ್ಮನಿಗೇನೇ, ಅಜ್ಞತ್ವೇ=ಅಜ್ಞಾನಾಶ್ರಯತ್ವ ಹೇಳಿದರೆ, ಮುಕ್ತಸ್ಯಾಪಿ = ಮುಕ್ತನಿಗೂ, ಅಜ್ಞತ್ವಪ್ರಸಕ್ತೇಃ=ಅಜ್ಞಾನಾಶ್ರಯತ್ವವು ಪ್ರಸಕ್ತವಾಗುವುದರಿಂದ, (ಆದಕಾರಣ 'ಅವಿದ್ಯಾಸ್ತಮಯೋ ಮೋಕ್ಷಃ' ಎಂದು ಹೇಳಿರುವುದರಿಂದ ಮುಕ್ತತ್ವಕ್ಕೇನೇ ಹಾನಿಬರಬೇಕಾಗುವುದು. ಆದುದರಿಂದ ಮಿಥ್ಯೋಪಾಧಿಭಿನ್ನನಿಗೇನೇ ಅಜ್ಞತ್ವವನ್ನು ಹೇಳಬೇಕು.) ಸ್ವಾಭಾವಿಕತ್ವಾತ್=(ಅಜ್ಞಾನಕ್ಕೆ) ಸ್ವಾಭಾವಿಕತ್ವವಿದ್ದುದರಿಂದ, ಸತ್ಯತ್ವಾತ್ = ಸತ್ಯತ್ವವಿದ್ದುದರಿಂದ, ಸದ್ವಿತೀಯತ್ವಪ್ರಸಕ್ತೇಶ್ಚ=ಬ್ರಹ್ಮನಿಗೆ ಎರಡನೇ ವಸ್ತು ಸಹಿತತ್ವವು ಪ್ರಸಕ್ತವಾಗುವುದರಿಂದ, ಸ್ವಾಭಾವಿಕಸ್ಯ ಚ=ಸ್ವಾಭಾವಿಕ ಆನಂದಾದಿಗಳಿಗೆ, ಅನಿವೃತ್ಯಂಗೀಕಾರಾತ್=ನಿವೃತ್ತಿಯಿಲ್ಲವೆಂದಂಗೀಕರಿಸಿರುವುದರಿಂದ, ಅನಿವೃತ್ತಿಪ್ರಸಕ್ತೇಶ್ಚ=ಅಜ್ಞಾನಕ್ಕೂ ನಿವೃತ್ತಿಯಿಲ್ಲವೆಂದಾಗುವುದು. ಸತ್ಯಸ್ಯ ಚ= ಸತ್ಯವಾದುದಕ್ಕೆ, ಅನಿವೃತ್ತಿಃ ಇತಿ=ನಿವೃತ್ತಿಯಿಲ್ಲವೆಂದು, ತತ್ಪಕ್ಷಃ ಹಿ=ಪರರ ಸಿದ್ಧಾಂತವಷ್ಟೆ! ಅತಶ್ಚ=ಆದುದರಿಂದ, ಅನ್ಯೋನ್ಯಾಶ್ರಯತಾ=ಅನ್ಯೋನ್ಯಾಶ್ರಯತ್ವವು (ಬರುವುದು).

ತಾ || (1) ಉಪಾಧಿಗೆ ಮಿಥ್ಯಾತ್ವವೆಂದರೆ ಅಸತ್ವವೆಂದು ಪರರು ಅಂಗೀಕರಿಸಲಿಲ್ಲ. ಆರೋಪಿತವಾದುದರಿಂದ ಅನಿರ್ವಾಚ್ಯತ್ವವನ್ನೇ ಹೇಳಿರುವರು. ಆರೋಪವು ಅರ್ಥಜ್ಞಾನ ಸ್ವರೂಪವು ಅಜ್ಞಾನಾಧೀನವು ಅಜ್ಞಾನವು ಅಧಿಷ್ಠಾನವನ್ನು ಆಚ್ಛಾದಿಸಿ ಅರ್ಥಜ್ಞಾನಗಳಿಗೆ ಉಪಾದಾನಕಾರಣವಾಗುತ್ತದೆ. ಆದುದರಿಂದ ಅಜ್ಞಾನವಿಲ್ಲದೆ ಉಪಾಧಿಗೆ ಮಿಥ್ಯಾತ್ವವು ಸಿದ್ಧಿಸದಿರುವುದರಿಂದ ಮಿಥ್ಯೋಪಾಧಿಸಿದ್ಧಿಯು ಅಜ್ಞಾನಸಿದ್ಧ್ಯಧೀನವಾದುದೆಂದಂಗೀಕರಿಸಬೇಕು. (2) 'ಇವನಿಗೆ ಈ ವಿಷಯದಲ್ಲಿ ಅಜ್ಞಾನವು ಎಂದು ಪ್ರತೀತಿಯಿದ್ದುದರಿಂದ ಅಜ್ಞಾನಕ್ಕೆ ಆಶ್ರಯ ವಿಷಯಗಳು ಆವಶ್ಯಕಗಳು. ಅಚೇತನಕ್ಕೆ ಅಜ್ಞಾನಾಶ್ರಯತ್ವವನ್ನು ಹೇಳಕೂಡದು. ಅಚೇತನವು ಅಜ್ಞಾನಕಾರ್ಯವಾದುದರಿಂದ ಅಜ್ಞಾನದಿಂದ ಮೊದಲು ಇರಲಾರದು. ಆದಪ್ರಯುಕ್ತ ಚೇತನಕ್ಕೇನೇ ಅಜ್ಞಾನಾಶ್ರಯತ್ವವನ್ನು ಹೇಳಬೇಕು. ಅದರಲ್ಲಿಯೂ ಸರ್ವಜ್ಞನಾದ ಬ್ರಹ್ಮನಿಗೆ ಎಂದು ಹೇಳಲು ಸಾಧ್ಯವಿಲ್ಲ. ಜೀವನಿಗೇನೇ ಹೇಳಬೇಕಾಯಿತು ಜೀವನೂ ಬ್ರಹ್ಮನಿಂದ ಅಭಿನ್ನನೆಂದು ಒಪ್ಪಿದರೆ ಬ್ರಹ್ಮನಿಗೇನೇ ಅಜ್ಞಾನವೆಂದು ಹೇಳಿದಂತೆ ಆಗುವುದು. ಆದುದರಿಂದ ಬ್ರಹ್ಮನಿಂದ ಭಿನ್ನನೆಂದೇ ಹೇಳಬೇಕು. ಆ ಭೇದವೂ ಸ್ವಾಭಾವಿಕವೆಂದು ಹೇಳಿದರೆ ಅಪಸಿದ್ಧಾಂತ ಬರುವುದರಿಂದ ಮಿಥ್ಯೋಪಾಧಿಯಿಂದ ಪಂಕಲ್ಪಿತವೆಂದೇ ಹೇಳಬೇಕಾಯಿತು. ತಥಾಚ ಮಿಥ್ಯೋಪಾಧಿಯಿಂದ ಭಿನ್ನನೇ ಆದ ಜೀವನಿಗೆ ಅಜ್ಞಾನಾಶ್ರಯತ್ವಬದ್ದುದರಿಂದ ಅಜ್ಞಾನಸಿದ್ಧಿಯು ಮಿಥ್ಯೋಪಾಧಿಸಿದ್ಧ್ಯಧೀನವಾಯಿತು. ಶುದ್ಧಬ್ರಹ್ಮನಿಗೇನೇ ಅಜ್ಞಾನವೆಂದು ಹೇಳುವುದಾದರೆ ಅಜ್ಞಾನಕ್ಕೆ ಬೇರೆ ಕಾರಣವಿಲ್ಲದಿರುವುದರಿಂದ ಅಜ್ಞಾನವು ಸ್ವಾಭಾವಿಕವೆಂದೇ ಆಗಬೇಕಾಗುವುದು. ಬ್ರಹ್ಮನದ್ದು ಯಾವುದು ಸ್ವಾಭಾವಿಕ ಆನಂದಾದಿಗಳೋ ಅವುಗಳು ಸತ್ಯಗಳೇ ಆಗಿವೆ. ಆದಪ್ರಯುಕ್ತ ಅಜ್ಞಾನವೂ ಸ್ವಾಭಾವಿಕವಾದುದರಿಂದ ಸತ್ಯವಾಗಬೇಕಾಗುವುದು. (4) ಬ್ರಹ್ಮನಲ್ಲಿ ಸತ್ಯವಾದ ಯಾವುದು ಆನಂದಾದಿಗಳೋ ಅವುಗಳಿಗೆ ನಿವೃತ್ತಿಯಿಲ್ಲವೆಂದು ಪರರು ಅಂಗೀಕರಿಸಿರುವರು. ಹಾಗೆಯೇ ಅಜ್ಞಾನವೂ ಸತ್ಯವಾದುದರಿಂದ ನಿವೃತ್ತಿಯಿಲ್ಲವೆಂದೇ ಆಗಬೇಕಾಗುವುದು. ಆ ಅಜ್ಞಾನ ನಿವೃತ್ತಿಗಾಗಿ 'ತತ್ತ್ವಮಸಿ' ಮೊದಲಾದ ಉಪದೇಶವೂ ವ್ಯರ್ಥವಾಗುವುದು. ಸತ್ಯವಾದುದಕ್ಕೆ ಬಾಧ (ನಿವೃತ್ತಿ)ವಿಲ್ಲವೆಂದು ಪರರ ಸಿದ್ಧಾಂತವು. (5) ಆದುದರಿಂದ ಈ ಪ್ರಕಾರ ಅಜ್ಞಾನವು ಸಿದ್ಧಿಸಿದರೆ ಅಜ್ಞಾನಕಲ್ಪಿತವಾಗಿ ಮಿಥ್ಯೋಪಾಧಿಯು ಸಿದ್ಧಿಸುವುದು. ಮಿಥ್ಯೋಪಾಧಿಯು ಸಿದ್ಧಿಸಿದರೆ ಮಿಥ್ಯೋಪಾಧಿಪರಿಕಲ್ಪಿತಭೇದವುಳ್ಳ ಜೀವನನ್ನು ಆಶ್ರಯಿಸಿರುವ ಅಜ್ಞಾನವು ಸಿದ್ಧಿಸುವುದು. ಆದಕಾರಣ ಮಿಥ್ಯೋಪಾಧಿ ಅಜ್ಞಾನಗಳಿಗೆ ಪರಸ್ಪರ ಅಪೇಕ್ಷೆ ಇದ್ದುದರಿಂದ ಒಂದೂ ಸಿದ್ಧಿಸಲಾರದು || ೩೦೭ ||

ಮೂ || (೧) ಅಜ್ಞಾನಸಿದ್ಧೌ ಮಿಥ್ಯೋಪಾಧಿಸಿದ್ಧಿಃ ಮಿಥ್ಯೋಪಾಧಿಸಿದ್ಧೌ ಜೀವಸಿದ್ಧಿಃ ಜೀವಸಿದ್ಧೌ ತದಾಶ್ರಯಾಜ್ಞಾನಸಿದ್ಧಿರಿತಿ ಚಕ್ರಕಂ ವಾ ।
(೨) ನ ಚ ಶುದ್ಧಮೇವ ಭ್ರಾಂತ್ಯಾಽಜ್ಞಮಿತಿ ಯುಕ್ತಂ । ಅಜ್ಞಾನಸಿದ್ಧೌ ಭ್ರಮಸಿದ್ಧಿಃ ತತ್ಸಿದ್ಧಾವಜ್ಞಾನಸಿದ್ಧಿರಿತ್ಯನ್ಯೋನ್ಯಾಶ್ರಯತ್ವಾತ್ ।
|| ೩೦೮ ||

ಅ || (೧) ಅಜ್ಞಾನಸಿದ್ಧೌ=ಅಜ್ಞಾನವು ಸಿದ್ಧಿಸಿದರೆ, ಮಿಥ್ಯೋಪಾಧಿಸಿದ್ಧಿಃ=ಮಿಥ್ಯೆಯಾದ ಉಪಾಧಿಯು ಸಿದ್ಧಿಸುವುದು, ಮಿಥ್ಯೋಪಾಧಿಸಿದ್ಧೌ=ಮಿಥ್ಯೆಯಾದ ಉಪಾಧಿಯು ಸಿದ್ಧಿಸಿದರೆ, ಜೀವಸಿದ್ಧಿಃ=ಜೀವನು ಸಿದ್ಧಿಸುವನು, ಜೀವಸಿದ್ಧೌ=ಜೀವನು ಸಿದ್ಧಿಸಿದರೆ, ತದಾಶ್ರಯಾಜ್ಞಾನಸಿದ್ಧಿಃ=ಜೀವನನ್ನಾಶ್ರಯಿಸಿಕೊಂಡಿರುವ ಅಜ್ಞಾನವು ಸಿದ್ಧಿಸುವುದು, ಇತಿ=ಹೀಗೆ, ಚಕ್ರಕಂ ವಾ=

ಚಕ್ರಕಾಶ್ರಯವಾಗಲೀ ಬರುವುದು. (೨) (ಬ್ರಹ್ಮನಿಗೆ ಅಜ್ಞಾನವನ್ನು ಹೇಳುವವನು ಹೀಗೆ ಹೇಳುತ್ತಾನೆ. ಜೀವನಿಗೆ ಅಜ್ಞಾನವಲ್ಲ. ಆದುದರಿಂದ ಅನ್ಯೋನ್ಯಾಶ್ರಯಾದಿ ದೋಷಗಳು ಬರುವುದಿಲ್ಲ ಮತ್ತೆ ಬ್ರಹ್ಮನಿಗೇನೇ ಅಜ್ಞಾನವು. 'ಶುದ್ಧಬ್ರಹ್ಮನೇ ಭ್ರಾಂತಿಯಿಂದ ಅಜ್ಞನು' ಎನ್ನಿಸುತ್ತಾನೆ ಎಂದು ಹೇಳುತ್ತೇವೆ ಎಂದರೆ) ಶುದ್ಧಮೇವ=ಶುದ್ಧಬ್ರಹ್ಮನೇ, ಭ್ರಾಂತ್ಯಾ=ಭ್ರಮೆಯಿಂದ, ಅಜ್ಞಮಿತಿ=ಅಜ್ಞಾನವುಳ್ಳದ್ದೆಂದು, ಯುಕ್ತಂ=ಯೋಗ್ಯವು, ನ ಚ=ಅಲ್ಲವು, ಅಜ್ಞಾನಸಿದ್ಧೌ=ಅಜ್ಞಾನವು ಸಿದ್ಧಿಸಿದರೆ, ಭ್ರಮಸಿದ್ಧಿಃ=ಭ್ರಾಂತಿಯು ಸಿದ್ಧಿಸುವುದು, ತತ್ಸಿದ್ಧೌ=ಭ್ರಾಂತಿಯು ಸಿದ್ಧಿಸಿದರೆ, ಅಜ್ಞಾನಸಿದ್ಧಿಃ=ಅಜ್ಞಾನವು ಸಿದ್ಧಿಸುವುದು, ಇತಿ=ಹೀಗೆ, ಅನ್ಯೋನ್ಯಾಶ್ರಯತ್ವಾತ್=ಅನ್ಯೋನ್ಯಾಶ್ರಯ ದೋಷಬರುವುದರಿಂದ,

ತಾ ॥ ಅಜ್ಞಾನವೇ ಅಧಿಷ್ಠಾನದಲ್ಲಿರುವ ಶುಕ್ತಿತ್ವಮೊದಲಾದ ಅಸಾಧಾರಣಧರ್ಮವನ್ನು ತೋರಿಸದೆ ಇರಲಿಕ್ಕೂ ಭ್ರಾಂತಿಗೂ ಕಾರಣವಾಗಿದೆ. ಭ್ರಾಂತಿಯು ಸಿದ್ಧಿಸಿದರೆ ಅಜ್ಞಾನವು ಸಿದ್ಧಿಸುವುದು ಎಂದು ಪರರೇ ಅಂಗೀಕರಿಸಿರುವರು. ಆದುದರಿಂದ ಸತ್ಯೋಪಾಧಿಪಕ್ಷದಲ್ಲಿದ್ದಂತೆಯೇ ಮಿಥ್ಯೋಪಾಧಿಪಕ್ಷದಲ್ಲಿಯೂ ಬದ್ಧಮುಕ್ತಾದಿ ವ್ಯವಸ್ಥೆಯು ಸಿದ್ಧಿಸುವುದಿಲ್ಲವು; ಎಂದು ಸಿದ್ಧವಾಯಿತು ॥ ೩೦೮ ॥

'ಸಂಸಾರಿಗಳು ಯಾವಾಗಲೂ ಇರುವುದರಿಂದ ಮುಕ್ತನಿಗೂ ಅಜ್ಞಾನವು ಬರಬೇಕಾಗುವುದು' ಎಂದು ಯಾವುದು ಹೇಳಲ್ಪಟ್ಟದೋ, ಅದರಲ್ಲಿ ಏಕಜೀವವಾದಿಗಳು ಹೀಗೆ ಹೇಳುತ್ತಾರೆ. 'ಅನೇಕ ಜೀವರು ಇರುತ್ತಾರೆ ಅವರಲ್ಲಿ ಕೆಲವರು ಮುಕ್ತರು ಆಗುವರು, ಕೆಲವರು ಸಂಸಾರದಲ್ಲಿರುತ್ತಾರೆ' ಎನ್ನುವುದು ಯುಕ್ತವಾಗಿದ್ದರೆ ಈ ಮಾತೂ ಯುಕ್ತವಾಗುತ್ತಿತ್ತು. ಇದೇ ಕೂಡುವುದಿಲ್ಲ. ಹಾಗಿದ್ದರೆ ಉಪ್ಪಿನ ರಾಶಿಯಲ್ಲಿ ಒಂದೊಂದು ಉದ್ದು ಕಮ್ಮಿಯಾದರೆ ಕ್ರಮದಿಂದ ಎಲ್ಲವೂ ಇಲ್ಲವೆಂದು ಹೇಗೆ ಆಗುವುದೋ ಹಾಗೆಯೇ ಅನಾದಿಕಾಲಗಳಲ್ಲಿ ಒಬ್ಬೊಬ್ಬ ಜೀವನಿಗೆ ಮುಕ್ತಿಯಾಗೋಣ ಕ್ರಮವಾಗಿ ಎಲ್ಲಾ ಸಂಸಾರಿಗಳಿಗೂ ಸಮಾಪ್ತಿಯಾಗಬೇಕಾದೀತು ಅಂತೂ ಈಗ ಸಂಸಾರವೇ ಇಲ್ಲದೆ ಹೋಗಬೇಕಾದೀತು. ಆದುದರಿಂದ ಒಬ್ಬನೇ ಜೀವನು. ಆತನು ಈಗ ಸಂಸಾರಿಯಾಗಿಯೇ ಇರುತ್ತಾನೆ. ಯಾರೊಬ್ಬನೂ ಮುಕ್ತನು ಆಗಲಿಲ್ಲ. 'ಶುಕನು ಮುಕ್ತನು' ಇದುಮೊದಲಾದ ಅರ್ಥವಾದಗಳು ರುಚಿಯನ್ನು ಮಾತ್ರ ಹುಟ್ಟಿಸುತ್ತವೆ. ಆದುದರಿಂದ 'ಸಂಸಾರಿಗಳು ಸರ್ವದಾ ಇದ್ದಾರೆ' ಎನ್ನುವುದು ಹೇಗೆ ಕೂಡುವುದು? ಮುಕ್ತನೇ ಇಲ್ಲದಿರುವುದರಿಂದ ಅಜ್ಞಾನಾಪಾದನೆಯು ಕೂಡಲಾರದು. ಜೀವರಿಗೆ ಆನಂತ್ಯವಿದ್ದುದರಿಂದ ಸಮಾಪ್ತಿಯಾಗುವುದಿಲ್ಲವೆಂದು ಹೇಳಕೂಡದು. 'ಜೀವರು ಅನಂತರು' ಎನ್ನುವಲ್ಲಿ ಪ್ರಮಾಣವಿರುವುದಿಲ್ಲ. ಒಬ್ಬ ಜೀವನಿಗೇನೇ ಶರೀರಗಳೆಂಬ ಉಪಾಧಿಗಳಿಂದ ಸುಖದುಃಖಾದಿಗಳ ವ್ಯವಸ್ಥೆಯು ಕೂಡುವಾಗ ಅನೇಕ ಜೀವರನ್ನು ಕಲ್ಪಿಸುವುದು ವ್ಯರ್ಥವಾಗುವುದೆಂದರೆ —

**ಮೂ ॥ ಅನಾಗತಾ ಅತೀತಾಶ್ಚ ಯಾವಂತಃ ಸಹಿತಾಃ ಕ್ಷಣಾಃ । ಅತೀತಾನಾಗತಾಶ್ಚೈವ ಯಾವಂತಃ ಪರಮಾಣವಃ । ತತೋಽಪ್ಯನಂತಗುಣಿತಾ ಜೀವಾನಾಂ ರಾಶಯಃ ಪೃಥಕ್ ॥ ಇತಿ ವತ್ಸಶ್ರುತೇರ್ನ ಸಂಸಾರಿಣಾಂ ಪರಿಸಮಾಪ್ತಿರಸ್ಮತ್ಪಕ್ಷೇ ॥ ೩೦೯ ॥**

ಅ ॥ ಅನಾಗತಾಃ=ಭವಿಷ್ಯತ್ಕಾಲದಲ್ಲಿ ಬರುವ, ಅತೀತಾಶ್ಚ=ಭೂತಕಾಲದಲ್ಲಿರುವ, ಸಹಿತಾಃ=ಕೂಡಿರುವ, ಯಾವಂತಃ=ಎಷ್ಟು, ಕ್ಷಣಾಃ=ಕ್ಷಣಗಳಿವೆಯೋ, ಅಂದರೆ— ಭೂತ

ಭವಿಷ್ಯದ್ವರ್ತಮಾನಗಳಲ್ಲಿ ಒಟ್ಟಿಗೆ ಎಷ್ಟು ಕ್ಷಣಗಳಿವೆಯೋ, ಅತೀತಾನಾಗತಾಶ್ಚ = ಭೂತ ಭವಿಷ್ಯತ್ಕಾಲದಲ್ಲಿರುವ, ಯಾವಂತಃ ಪರಮಾಣವಃ=ಎಷ್ಟು ಪರಮಾಣುಗಳಿವೆಯೋ, ತತೋಽಪಿ= ಅವುಗಳಿಂದಲೂ, ಜೀವಾನಾಂ ರಾಶಯಃ=ಜೀವರ ರಾಶಿಗಳು, ಪೃಥಕ್=ಬೇರೆ ಬೇರೆಯಾಗಿ, (ಅಂದರೆ — ದೇವತೆಗಳು, ದೈತ್ಯರು, ಮನುಷ್ಯರು, ಬ್ರಹ್ಮರು, ರುದ್ರರು ಇವರೆಲ್ಲರೂ) ಅನಂತಗುಣಿತಾ ಏವ=ಅನಂತ ಸಂಖ್ಯೆಯುಳ್ಳವುಗಳೇ. (ಇಷ್ಟೇ ಮಂದಿ ಎಂದು ಹೇಳಲು ಸಾಧ್ಯವೇ ಇಲ್ಲವು.) ಇತಿ=ಹೀಗೆ, ವತ್ಸಶ್ರುತೇಃ=ವತ್ಸಶ್ರುತಿಯಿದ್ದುದರಿಂದ, ಸಂಸಾರಿಣಾಂ= ಸಂಸಾರಿಗಳಿಗೆ, ಪರಿಸಮಾಪ್ತಿಃ=ಪೂರ್ಣ ಸಮಾಪ್ತಿಯು, ಅಸ್ಮತ್ಪಕ್ಷೇ=ಸತ್ಯರೂ ಸ್ವಾಭಾವಿಕರೂ ಆದ ಬಹುಜೀವರು ಇದ್ದಾರೆ ಎನ್ನುವುದನ್ನಂಗೀಕರಿಸಿ ಕೆಲವರು ಮುಕ್ತರು ಕೆಲವರು ಸಂಸಾರಿ ಗಳು ಎಂದಂಗೀಕರಿಸುವ ನಮ್ಮ ಸಿದ್ಧಾಂತದಲ್ಲಿ, ನ=ಆಗುವುದಿಲ್ಲ.

ತಾ || ಅನಂತ ಕಾಲಕ್ಷಣಗಳಿಂದಲೂ ಅತ್ಯಧಿಕ ಅನಂತ ಜೀವರು ಇದ್ದಾರೆ ಎಂದು ಹೇಳಿರುವುದರಿಂದ ಒಬ್ಬೊಬ್ಬರಿಗೆ ಒಂದೊಂದು ಕ್ಷಣದಲ್ಲಿ ಮುಕ್ತಿಯಾದರೂ ಸಮಾಪ್ತಿಯಾಗ ಲಾರದು. ಕಲ್ಪಾಂತ್ಯದಲ್ಲಿ ಕಲವರಿಗೆಮಾತ್ರ ಮುಕ್ತಿಯಾಗುವುದು, ಆಗ ಸಮಾಪ್ತಿಯಾಗಲಾರ ದೆಂದು ಹೇಳಬೇಕಾಗಿಯೇ ಇಲ್ಲ. ಕಾಲಕ್ಷಣಗಳೂ ಸ್ವಾಭಾವಿಕಗಳೇ. ಔಪಾಧಿಕಗಳಲ್ಲ ||೩೦೯||

ಮಾಯಾವಾದಿಗಳು ಆಶಂಕಿಸುವರು — ಜೀವರಿಗೆ ಮೂರ್ತತ್ವವನ್ನು (ಅಲ್ಪ ಪರಿಮಾಣ ವಿರುವಿಕೆ) ಅಂಗೀಕರಿಸಿರುತ್ತೇವೆ. ಮೂರ್ತಗಳು ಸಮಾನ ದೇಶದಲ್ಲಿರಲಾರವು. ಆದುದರಿಂದ ಜೀವರು ಪರಮಾಣುಗಳಿಂದಲೂ ಅನಂತರಾಗಿದ್ದರೆ ಸ್ಥಾನವೇ ಇಲ್ಲವೆಂದಾಗುವುದರಿಂದ ಇದು ಕೂಡಲಾರದು ಎಂಬ ಆಶಂಕೆಯನ್ನು ಆಗಮವಾಕ್ಯದಿಂದಲೇ ಪರಿಹರಿಸುತ್ತಾರೆ —

**ಮೂ || ಪರಮಾಣುಪ್ರದೇಶೇಽಪಿ ಹ್ಯನಂತಾಃ ಪ್ರಾಣಿರಾಶಯಃ । ಸೂಕ್ಷ್ಮತ್ವಾ- ದೀಶಶಕ್ತ್ಯೈವ ಸ್ಥೂಲಾ ಅಪಿ ಹಿ ಸಂಸ್ಥಿತಾಃ । ಸಹಸ್ರಯೋಜನಸಭಾಂ ಪ್ರಭಾವಾದ್ವಿಶ್ವಕರ್ಮಣಃ । ಅನಂತಾ ರಾಶಯೋಽನಂತಾಃ ಪ್ರಜಾ- ನಾಮಧಿಸಂಸ್ಥಿತಾಃ || ಇತಿ ಸ್ಕಾಂದೇ || ೩೧೦ ||**

ಅ || ಪರಮಾಣುಪ್ರದೇಶೇಽಪಿ=ಪರಮಾಣು ಇರಲಿಕ್ಕೆ ಯೋಗ್ಯವಾದ ಪ್ರದೇಶದ ಲ್ಲಿಯೂ, ಅನಂತಾಃ=ಅಪರಿಮಿತಗಳಾದ, ಪ್ರಾಣಿರಾಶಯಃ=ಜೀವರಾಶಿಗಳು, ಸೂಕ್ಷ್ಮತ್ವಾತ್= (ತಮ್ಮ ಸ್ವರೂಪವನ್ನಪೇಕ್ಷಿಸಿ) ಅತಿ ಸೂಕ್ಷ್ಮಗಳಾದುದರಿಂದ, ಈಶಶಕ್ತ್ಯೈವ=ಪರಮೇಶ್ವರನ ಶಕ್ತಿಯಿಂದಲೇ, ಸ್ಥೂಲಾ ಅಪಿ=(ಪಾರ್ಥಿವಾದಿ ಸ್ಥೂಲಶರೀರವಿದ್ದುದರಿಂದ) ಸ್ಥೂಲಗಳಾ ಗಿಯೂ, ಸಂಸ್ಥಿತಾಃ = ಇರುತ್ತವೆ. ಹಿ = ಈಶ್ವರ ಶಕ್ತಿಗೆ ಅಘಟಿತ ಘಟಕತ್ವವು ಪ್ರಸಿದ್ಧವು. (ಶರೀರದಿಂದೊಡಗೂಡಿರುವುದರಿಂದ ಸ್ಥೂಲಗಳಾದವುಗಳಿಗೂ ಅಲ್ಪ ಪ್ರದೇಶದಲ್ಲಿರುವುದು ಸಂಭಾವಿತವಲ್ಲ ಎಂದು ಅಸಂಭಾವನಾಶಂಕೆಯನ್ನು ನಿರಾಕರಿಸುವುದಕ್ಕಾಗಿ ಪುರಾಣವಾಕ್ಯದಿಂದ ದೃಷ್ಟಾಂತವನ್ನು ತೋರಿಸುತ್ತಾರೆ.) ಪ್ರಜಾನಾಂ=ಪ್ರಜೆಗಳ, ಅನಂತಾಃ ಅನಂತಾಃ ರಾಶಯಃ= ಮುಖ್ಯವಾಗಿ ಅವಸಾನವಿಲ್ಲದಿರುವ ಸಮೂಹಗಳು, ವಿಶ್ವಕರ್ಮಣಃ ಪ್ರಭಾವಾತ್=ವಿಶ್ವಕರ್ಮನ ಸಾಮರ್ಥ್ಯದಿಂದ, ಸಹಸ್ರಯೋಜನ ಸಭಾಂ=ಸಹಸ್ರಯೋಜನ ಪರಿಮಾಣವುಳ್ಳ ಸಭೆಯಲ್ಲಿ, ಅಧಿಸಂಸ್ಥಿತಾಃ=ಇರುತ್ತಾರೆ. ಇತಿ=ಹೀಗೆ, ಸ್ಕಾಂದೇ=ಸ್ಕಾಂದಪುರಾಣದಲ್ಲಿದೆ.

ತಾ || ವಿಶ್ವಕರ್ಮನಿಗೂ ಇಂತಹ ಪ್ರಭಾವವಿರುವಾಗ ಪರಮೇಶ್ವರನ ಪ್ರಭಾವವನ್ನು ಏನು ಹೇಳಬೇಕಾಗಿಯದೆ. ‘ ಜೀವರು ಅನಂತರು ’ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದೂ,

ಆನಂತ್ಯಾಭಾವವನ್ನು ಸಾಧಿಸತಕ್ಕ 'ಜೀವಾಃ ನಾನಂತಾಃ ಪರಿಚ್ಛಿನ್ನತ್ವಾತ್' ಎಂಬೀ ಅನುಮಾನ ವಿರೋಧವೂ, ಪರಮಾಣುಗಳಿಂದಲೂ ಹೆಚ್ಚು ಇದ್ದರೆ ಅವಸ್ಥಿತಿಯೇ ಕೂಡಲಾರದು, ಎಂಬೀ ಏಕಜೀವವಾದಿಗಳು ಹೇಳಿದ ದೋಷಗಳೂ ಅನೇಕ ಶ್ರುತಿಪುರಾಣಗಳನ್ನು ತಿಳಿದ ನಮಗೆ ಪರಿಹರಿಸಲು ಶಕ್ಯಗಳಾಗುತ್ತವೆ ॥ ೩೧೦ ॥

ಬದ್ಧಮುಕ್ತಾದಿ ವ್ಯವಸ್ಥೆಗಳು ಸಿದ್ಧಿಸುವುದಕ್ಕಾಗಿ ಅದ್ವೈತವಾದಿಗಳು ಬಹುಜೀವರನ್ನಂಗೀಕರಿಸಿರುವರು. ಅದರಲ್ಲಿಯೂ ಉಪಾಧಿಯು ಸತ್ಯವೆನ್ನುವ ಪಕ್ಷದಲ್ಲಿ ಬ್ರಹ್ಮನಿಗೆ ಸರ್ವದಾ ಉಪಾಧಿಸಂಬಂಧವಿದ್ದುದರಿಂದ ಸರ್ವದಾ ಸಂಸಾರಿತ್ವವೇ ಬರಬೇಕಾದುದರಿಂದ ಬ್ರಹ್ಮಭಾವವನ್ನು ಹೊಂದಿದವನಿಗೂ ಮುಕ್ತತ್ವವಿಲ್ಲದಿರುವುದರಿಂದ ಬದ್ಧಮುಕ್ತವ್ಯವಸ್ಥೆಯು ಸಿದ್ಧಿಸುವುದಿಲ್ಲ. ಆದಕಾರಣ ಮಾಯಾವಾದಿಗಳು ಉಪಾಧಿಗೆ ಮಿಥ್ಯಾತ್ವವನ್ನಂಗೀಕರಿಸಿರುವರು. ಆ ಮೇಲೆ ಅದನ್ನ ನಿರಾಕರಿಸಿ ಅವರ ಪಕ್ಷದಲ್ಲಿಯೂ ವ್ಯವಸ್ಥೆಯು ಸಿದ್ಧಿಸುವುದಿಲ್ಲವೆಂದು ಸಿದ್ಧಾಂತಿಗಳು ಹೇಳೋಣ ಪುನಃ ಮಾಯಾವಾದಿಗಳು ಹೇಳುವರು. ಉಪಾಧಿಗೂ ಉಪಾಧಿಕೃತವಾದ ಜೀವರ ಭೇದಕ್ಕೂ ಜ್ಞಾನ, ಅಜ್ಞಾನ, ಸುಖ, ದುಃಖ ಮೊದಲಾದ ಬಂಧಕ್ಕೂ ಅನ್ಯೋನ್ಯಾಶ್ರಯಾದಿ ದೋಷಬರುವುದರಿಂದ ದುರ್ಘಟತ್ವವು ಯಾವುದು ಹೇಳಲ್ಪಟ್ಟಿನೋ ಅದು ದೂಷಣವಲ್ಲ. ಭೂಷಣವೇ. ಅನ್ಯೋನ್ಯಾಶ್ರಯತ್ವ ಮೊದಲಾದ ದೋಷವು ಬಂಧಾದಿಗಳ ಸತ್ಯತ್ವವನ್ನು ಪ್ರತಿಬಂಧಿಸುವುದು ಅದಾದರೂ ಇಷ್ಟವೇ. ಉಪಾಧ್ಯಾದಿಗಳು ಮಿಥ್ಯೆಯೆಂದೇ ಅಂಗೀಕರಿಸಿರುತ್ತೇವೆ. ಆದಕಾರಣ ಇಷ್ಟವಾದ ಮಿಥ್ಯಾತ್ವವನ್ನು ಸಾಧಿಸಿಕೊಡುವ ಅನ್ಯೋನ್ಯಾಶ್ರಯತ್ವ ಮೊದಲಾದ ದೋಷವು ದೂಷಣ ಹೇಗೆ ಆಗುವುದು? ಇಷ್ಟಾರ್ಥಕ್ಕೆ ವಿರೋಧಿಯಾದುದೇ ದೂಷಣವಾಗುವುದು. ಇಷ್ಟಾರ್ಥವನ್ನು ಸಾಧಿಸಿಕೊಡುವುದರಿಂದ ಭೂಷಣವೇ ಆಗಿರುತ್ತದೆ. ಆದುದರಿಂದ ಹೀಗೆ ಅವಿಚಾರಿತರಮಣೀಯವಾದ ಉಪಾಧಿಪ್ರಯುಕ್ತಗಳಾದ ಜೀವಭೇದಾದಿಗಳಿಂದ ಮಾಯಾವಾದಿಗಳಿಗೆ ಬದ್ಧಮುಕ್ತವ್ಯವಸ್ಥೆಯು ಸಿದ್ಧಿಸುವುದು, ಎಂದರೆ ಇದನ್ನು ನಿಷೇಧಿಸುತ್ತಾರೆ —

**ಮೂ ॥ ನ ಚ ಮಿಥ್ಯಾವಸ್ತುನೋ ದುರ್ಘಟತ್ವಮೇವ ಭೂಷಣಂ । ದೃಷ್ಟಸ್ಯ ವಸ್ತುನೋ ಮಿಥ್ಯಾತ್ವಕಲ್ಪನಸ್ಯ ದೃಷ್ಟಿಸಕಾಶಾದ್ಬಲವತ್ಪ್ರಮಾಣ-ಯುಕ್ತ್ಯಪೇಕ್ಷತ್ವಾತ್ ॥ ೩೧೧ ॥**

ಅ ॥ ಮಿಥ್ಯಾವಸ್ತುನಃ=ಮಿಥ್ಯೆಯಾದ (ಅನಿರ್ವಚನೀಯ) ವಸ್ತುವಿಗೆ, ದುರ್ಘಟತ್ವ-ಮೇವ=ದೌರ್ಘಟ್ಯವೇ, ಭೂಷಣಂ=ಭೂಷಣವು, ನ ಚ=ಅಲ್ಲವು. (ಸುಘಟತ್ವವಿದ್ದರೆ ಸತ್ಯತ್ವವು ಬರಬೇಕಾದುದರಿಂದ ಮಿಥ್ಯಾತ್ವವಿಲ್ಲವೆಂದಾಗುವುದು. ಏಕೆ ಇಲ್ಲವೆಂದರೆ ಮಿಥ್ಯಾತ್ವವಿದಕ್ಕೆ ಇದ್ದರೆ ಆತ್ಮಾಶ್ರಯತ್ವಾದಿಗಳು ಭೂಷಣಗಳಾಗುವುದು. ಹೀಗೆ ಇಲ್ಲ. ಘಟಾದಿಗಳೂ ಆತ್ಮಭೇದಾದಿಗಳೂ ಪ್ರತ್ಯಕ್ಷಸಿದ್ಧಗಳಾದುದರಿಂದ ಸತ್ಯಗಳೇ ಆಗಿವೆ. ಪ್ರತ್ಯಕ್ಷಸಿದ್ಧವಾದುದಕ್ಕೂ ಶುಕ್ತಿರಜತಾದಿಗಳಂತೆಯೇ ಮಿಥ್ಯಾತ್ವವು ಬರಬಹುದೆಂದರೆ ಹೀಗೆ ಹೇಳಕೂಡದು, ಏಕೆಂದರೆ) ದೃಷ್ಟಸ್ಯ ವಸ್ತುನಃ=ಕಂಡ ಪದಾರ್ಥಕ್ಕೆ, ಮಿಥ್ಯಾತ್ವಕಲ್ಪನಸ್ಯ = ಮಿಥ್ಯಾತ್ವವನ್ನ ಕಲ್ಪಿಸತಕ್ಕದಕ್ಕೆ, ದೃಷ್ಟಿಸಕಾಶಾತ್=ಪ್ರತ್ಯಕ್ಷಕ್ಕಿಂತ, ಬಲವತ್ಪ್ರಮಾಣಯುಕ್ತ್ಯಪೇಕ್ಷತ್ವಾತ್=ಪ್ರಬಲವಾದ ಪ್ರಮಾಣದಿಂದ ಸಂಬಂಧವನ್ನಪೇಕ್ಷಿಸಿಕೊಂಡು ಇದ್ದುದರಿಂದ, ಅಥವಾ ಪ್ರಮಾಣಕ್ಕೆ ಬಲವುಂಟಾಗುವುದಕ್ಕಾಗಿ ಅನುಮಾನವೂ ಅಪೇಕ್ಷಿತವಾದುದರಿಂದ ಪ್ರಮಾಣ, ಯುಕ್ತಿಯೂ ಇವುಗಳನ್ನಪೇಕ್ಷಿಸಿಕೊಂಡಿದ್ದುದರಿಂದ, ಅಥವಾ ಪ್ರಬಲಪ್ರಮಾಣಕ್ಕೆ ಸಹಾಯಭೂತವಾದ ಯುಕ್ತಿಯನ್ನಪೇಕ್ಷಿಸಿಕೊಂಡು ಇದ್ದುದರಿಂದ,

**ತಾ ||** (1) ಪ್ರತ್ಯಕ್ಷವಾಗಿ ಕಾಣಲ್ಪಟ್ಟ ಶುಕ್ತಿರಜತಾದಿಗಳಿಗೆ ಮಿಥ್ಯಾತ್ವವನ್ನಂಗೀಕರಿಸಿರುತ್ತೇವೆ. ಅದೂ ನಿರ್ನಿಮಿತ್ತವಲ್ಲ. ಪ್ರಬಲಬಾಧಕವಿದ್ದುದರಿಂದಲೇ, ಪ್ರತ್ಯಕ್ಷವಾಗಿ ಕಂಡ ಬಾಹ್ಯ ಅಭ್ಯಂತರ ಪ್ರಪಂಚಗಳಿಗೆ ಬಾಧಕವಿಲ್ಲ. ಆದಕಾರಣ ದೃಷ್ಟವಸ್ತುಗಳಿಗೆ ಮಿಥ್ಯಾತ್ವ ಕಲ್ಪನೆಗೆ ಅದಕ್ಕಿಂತಲೂ ಪ್ರಬಲವಾದ ಬಾಧಕಪ್ರಮಾಣವನ್ನಪೇಕ್ಷಿಸಿಕೊಂಡಿರುವುದು ನಿಯತವಾಗಿದೆ. ಆದರೆ ಪ್ರಕೃತ ಅದು ಇಲ್ಲದಿರುವುದರಿಂದ ಮಿಥ್ಯಾತ್ವವನ್ನು ಕಲ್ಪಿಸುವುದು ಯುಕ್ತವಲ್ಲ || ೩೧೧ ||

ಬಾಧಕವಿರಲಿ, ಜಗತ್ತಿಗೆ ಸತ್ಯತ್ವವು ಯಾವುದರಿಂದ ಸಿದ್ಧಿಸುವುದು? ಅಂತೂ ಜಗತ್ತಿಗೆ ಸತ್ಯತ್ವವನ್ನು ಸಾಧಿಸಿಕೊಡತಕ್ಕದು ಇಲ್ಲದಿರಲು ಸತ್ಯತ್ವವಿಲ್ಲದಿರುವುದರಿಂದ ಮಿಥ್ಯಾತ್ವವೇ ಸಿದ್ಧಿಸುವುದೆಂದರೆ —

**ಮೂ || (೧) ತದಭಾವೇ ಸತ್ಯತ್ವಂ ದೃಷ್ಟ್ಯೈವ ಸಿದ್ಧ್ಯತಿ । (೨) ನ ಹ್ಯನ್ನಾದಿಕಂ ಭೋಗ್ಯಂ ದೃಷ್ಟ್ವಾ ಭೋಕ್ತುಂ ಸತ್ಯತ್ವೇ ಪ್ರಮಾಣಾಂತರಮಪೇಕ್ಷತೇ । (೩) ಕಿಂತು ನೇದಮನ್ನಮಿತಿ ಕೇನಚಿದುಕ್ತೇ ಕಥಮಿದಮನ್ನತ್ವೇನ ದೃಶ್ಯಮಾನಮನ್ನಂ ನ ಭವತೀತಿ ಪ್ರಮಾಣಾಂತರಮಪೇಕ್ಷತೇ । ನ ಚ ಪ್ರತ್ಯಕ್ಷದೃಷ್ಟಸ್ಯ ತತೋ ಬಲವತ್ಪ್ರತ್ಯಕ್ಷಮಾಗಮಂ ವಿನಾಽನುಮಾನಾದಿನೈವ ಬಾಧೋ ದೃಷ್ಟಃ || ೩೧೨ ||**

ಅ || (೧) ತದಭಾವೇ=ಬಾಧಕವಿಲ್ಲದಿದ್ದರೆ, ಸತ್ಯತ್ವಂ=ಸತ್ಯತ್ವವು, ದೃಷ್ಟ್ಯೈವ=ಪ್ರತ್ಯಕ್ಷದಿಂದಲೇ, ಸಿಧ್ಯತಿ=ಸಿದ್ಧಿಸುತ್ತದೆ. (೨) ಅನ್ನಾದಿಕಂ=ಅನ್ನ ಮೊದಲಾದುದನ್ನು, ಭೋಗ್ಯಂ=ಅರ್ಥಕ್ರಿಯೆಗಳಿಗೆ ಯೋಗ್ಯವಾದುದನ್ನಾಗಿ, ದೃಷ್ಟ್ವಾ = ನೋಡಿ, ಭೋಕ್ತುಂ=ಭೋಜನ ಮಾಡಲಿಕ್ಕೆ, ಸತ್ಯತ್ವೇ=ಸತ್ಯತ್ವವಿಷಯದಲ್ಲಿ, ಪ್ರಮಾಣಾಂತರಂ=ಪ್ರತ್ಯಕ್ಷಕ್ಕಿಂತ ಬೇರೆ ಪ್ರಮಾಣವನ್ನು, ನ ಹಿ ಅಪೇಕ್ಷತೇ=ಅಪೇಕ್ಷಿಸುವುದಿಲ್ಲ. (೩) ಕಿಂತು=ಮತ್ತೆ, ಇದಂ ಅನ್ನಂ ನ ಇತಿ=ಇದು ಅನ್ನವಲ್ಲವೆಂದು, ಕೇನಚಿತ್=ಯಾರೊಬ್ಬನಿಂದ, ಉಕ್ತೇ=ಹೇಳಲ್ಪಡುತ್ತಿರಲು, ಅನ್ನತ್ವೇನ ದೃಶ್ಯಮಾನಂ ಇದಂ ಅನ್ನಂ=ಅನ್ನವಾಗಿ ಕಾಣಲ್ಪಡತಕ್ಕದು ಇದು ಅನ್ನವು, ಕಥಂ=ಯಾವ ಪ್ರಮಾಣದಿಂದ, ನ ಭವತಿ=ಆಗುವುದಿಲ್ಲ, ಇತಿ=ಈ ಪ್ರಕಾರವಾಗಿ, (ಅದರ ಮಿಥ್ಯಾತ್ವ ವಿಷಯದಲ್ಲಿ) ಪ್ರಮಾಣಾಂತರಂ=ಪ್ರತ್ಯಕ್ಷವಾಗಿ ಕಂಡದರಿಂದ ಬೇರೆ ಪ್ರಮಾಣವನ್ನು, ಅಪೇಕ್ಷತೇ=ಇಚ್ಛಿಸುತ್ತಾನೆ. ಪ್ರತ್ಯಕ್ಷವಾಗಿ ಕಂಡದ್ದಕ್ಕೂ ಮಿಥ್ಯಾತ್ವವನ್ನು ಕಲ್ಪಿಸಬೇಕಾದರೆ ಬಾಧಕಪ್ರಮಾಣ ಬೇಕೆನ್ನುವುದು ಸತ್ಯವೇ, ಆದಾಗ್ಯೂ ಜಗತ್ತಿಗೆ ಮಿಥ್ಯಾತ್ವವನ್ನು ಕಲ್ಪಿಸಲೇ ಬೇಕು. ಬಾಧಕಗಳು (ದೃಶ್ಯತ್ವಾದ್ಯನುಮಾನವೂ ಜ್ಞಾನದಿಂದ ನಿವೃತ್ತಿಯೂ ಬೇರೆ ರೀತಿಯಾಗಿ ಕೂಡದಿರುವುದೂ, ಇರುತ್ತವೆ ಎಂದರೆ,) ಪ್ರತ್ಯಕ್ಷದೃಷ್ಟಸ್ಯ=ಪ್ರತ್ಯಕ್ಷವಾಗಿ ಕಂಡದ್ದಕ್ಕೆ, ತತಃ=ಅದಕ್ಕಿಂತಲೂ, ಬಲವತ್=ಪ್ರಬಲವಾದ, ಪ್ರತ್ಯಕ್ಷಂ=ಪ್ರತ್ಯಕ್ಷವನ್ನೂ, ಆಗಮಂ=ಆಗಮವನ್ನೂ ವಿನಾ=ಹೊರತು, ಅನುಮಾನಾದಿನೈವ=ಅನುಮಾನಾದಗಳಿಂದಲೇ, ಬಾಧಃ=ಬಾಧವು, ನ ಚ ದೃಷ್ಟಃ=ಕಾಣಲ್ಪಡಲೇ ಇಲ್ಲವು.

**ತಾ ||** (1) 'ಅನುಮಾನಾದಿನಾ' ಎನ್ನುವಲ್ಲಿದ್ದ ಆದಿಶಬ್ದದಿಂದ ಅರ್ಥಾಪತ್ತಿಯನ್ನು ಇಟ್ಟುಕೊಳ್ಳಬೇಕು. ಅರ್ಥಾಪತ್ತಿಯು ಅನುಮಾನದಲ್ಲಿ ಸೇರಿದ್ದರೂ ಭಾಟ್ಟಮತವನ್ನವಲಂಬಿಸಿದ ಮಾಯಾವಾದಿಗಳ ಮತವನ್ನನುಸರಿಸಿ ಹೇಳಿದ್ದಾಗಿರುತ್ತದೆ. (2) ಪ್ರಬಲವಾದುದು ವಿರೋಧಿ

ಯಾಗಿದ್ದರೆ ದುರ್ಬಲಕ್ಕೆ ಬಾಧಕವಾಗುವುದು. ಪ್ರತ್ಯಕ್ಷಕ್ಕಿಂತ ಅನುಮಾನ ಅರ್ಥಾಪತ್ತಿಗಳಿಗೆ ಪ್ರಾಬಲ್ಯವು ಇಲ್ಲವೆಂದು ಉಕ್ತವಾಗಿದೆ. ಆದಕಾರಣ ಅನುಮಾನಾದಿಗಳಿಂದ ಪ್ರತ್ಯಕ್ಷವಾಗಿ ಕಂಡ ಜಗತ್ಸತ್ಯತ್ವಕ್ಕೆ ಬಾಧವು ಯುಕ್ತವಲ್ಲವು. (3)(೧)' ಇದು ಬೆಳ್ಳಿಯು ' ಎಂಬುವ ಪ್ರತ್ಯಕ್ಷಕ್ಕೆ (೨) ' ಇದು ಬೆಳ್ಳಿಯಲ್ಲ ಮುತ್ತಿನ ಚಿಪ್ಪೇ ' ಎಂಬೀ ಪ್ರತ್ಯಕ್ಷವು ಬಾಧಕವಾಗುವುದು. ೧ನೇದ್ದು ಪರೀಕ್ಷಿತವಾಗದಿರುವುದರಿಂದ ದುರ್ಬಲವಾಗಿದೆ. ೨ನೇದ್ದು ಪರೀಕ್ಷಿತವಾದುದರಿಂದ ಪ್ರಬಲವಾಗಿದೆ ॥ ೩೧೨ ॥

ದೂರದಲ್ಲಿದ್ದ ಮರವು ಉದ್ದವಾಗಿದ್ದಾಗ್ಯೂ ಇದು ಗಿಡ್ಡ ಎಂದೂ, ಚಂದ್ರನು ಗೇಣು ಪರಿಮಾಣವುಳ್ಳವನೆಂದೂ ಉಂಟಾಗತಕ್ಕ ಪ್ರತ್ಯಕ್ಷವು ' ಈ ಮರವು ವಸ್ತುತಃ ದೀರ್ಘವಾಗಲು ಯೋಗ್ಯವಾಗಿದೆ ' ದೂರಸ್ಥತ್ವ ಮೊದಲಾದ ದೋಷವಿದ್ದುದರಿಂದಲೇ ಎಂಬೀ ಅನುಮಾನದಿಂದಲೂ, ' ಅಷ್ಟಾಶೀತಿ ಸಹಸ್ರಾಣಿ ವಿಸ್ತೀರ್ಣೋ ಯೋಜನಾನಿ ತು। ಪ್ರಮಾಣಂತತ್ರ ವಿಜ್ಞೇಯಂ ಕಲಾಃ ಪಂಚದಶೈವ ತು ' ಎಂಬೀ ಆಗಮದಿಂದಲೂ ಬಾಧ್ಯವಾಗಿ ಕಂಡದೆ. ಅಲ್ಲಿ ಪ್ರತ್ಯಕ್ಷವೇ ಬಾಧಕವಲ್ಲ. ಸಮೀಪಕ್ಕೆ ಹೋಗುವುದಕ್ಕಿಂತ ಮೊದಲೇ ದೀರ್ಘತ್ವಾದಿಗಳು ನಿಶ್ಚಿತಗಳಾಗಿವೆ. ಆದಕಾರಣ ' ಪ್ರತ್ಯಕ್ಷವಾಗಿ ಕಾಣಲ್ಪಟ್ಟದ್ದಕ್ಕೆ ಅನುಮಾನದಿಂದಲಾಗಲೀ, ಆಗಮದಿಂದಲಾಗಲೀ ಬಾಧವು ಕಾಣಲ್ಪಡಲಿಲ್ಲವೆಂದು ಹೇಗೆ ಹೇಳಲ್ಪಡುತ್ತದೆ? ಎಂದಾಶಂಕಿಸಿದರೆ —

**ಮೂ ॥ ದೂರಸ್ಥವೃಕ್ಷಹ್ರಸ್ವತ್ವಾದೌ ಪ್ರತ್ಯಕ್ಷಾಪಟುತ್ವಸ್ಯ ನಿಶ್ಚಿತತ್ವಾದ್ಯುಕ್ತ್ಯಾ-ತತ್ರ ದೀರ್ಘತ್ವನಿಶ್ಚಯಃ । ಪ್ರತ್ಯಕ್ಷಸ್ಯ ಹಿ ದೂರೇ ಮಂದಗ್ರಾಹಿತ್ವಂ ಪರಿಮಾಣಾದಾವನ್ಯಥಾತ್ವಂ ಚ ತತೋ ಬಲವತ್ಪ್ರತ್ಯಕ್ಷೇಣೈವ ನಿಶ್ಚಿತಂ ॥ ೩೧೩ ॥**

ಅ ॥ ದೂರಸ್ಥ ವೃಕ್ಷಹ್ರಸ್ವತ್ವಾದೌ=ದೂರದಲ್ಲಿರುವ ಮರಗಳ ಹ್ರಸ್ವತ್ವಾದಿವಿಷಯದಲ್ಲಿ, ಪ್ರತ್ಯಕ್ಷಾಪಟುತ್ವಸ್ಯ=ಪ್ರತ್ಯಕ್ಷಕ್ಕೆ ಪಟುತ್ವವಿಲ್ಲವೆನ್ನುವುದು, ನಿಶ್ಚಿತತ್ವಾತ್=ಹ್ರಸ್ವತ್ವಾದಿ ಪ್ರತ್ಯಕ್ಷವು ಹುಟ್ಟುವುದಕ್ಕಿಂತ ಮೊದಲೇ ನಿಶ್ಚಯಿಸಲ್ಪಟ್ಟಪ್ರಯುಕ್ತ, ಯುಕ್ತ್ಯಾ=ಅನುಮಾನಾಗಮಗಳಿಂದ, ತತ್ರ=ಅಲ್ಲಿ, ದೀರ್ಘತ್ವ ನಿಶ್ಚಯಃ=ದೀರ್ಘತ್ವಾದಿಗಳ ನಿಶ್ಚಯವು, (ಆಗುತ್ತದೆ.) ಪ್ರತ್ಯಕ್ಷಸ್ಯ ಹಿ=ಪ್ರತ್ಯಕ್ಷಕ್ಕೆ ಆದರೂ, ದೂರೇ=ದೂರದಲ್ಲಿ, ಮಂದಗ್ರಾಹಿತ್ವಂ=ರೇಖೋಪರೇಖಾದಿಗಳನ್ನು ವಿಷಯೀಕರಿಸದೆ ಅರ್ಥಗಳನ್ನು ಸ್ವೀಕರಿಸುವಿಕೆ, ಪರಿಮಾಣಾದೌ=ಪರಿಮಾಣ ಪೃಥಕ್ತ್ವಾದಿವಿಷಯದಲ್ಲಿ, ಅನ್ಯಥಾತ್ವಂ ಚ=ಅಯಥಾರ್ಥತ್ವವೂಕೂಡ, ತತಃ=ಅದರಿಂದಲೂ, ಬಲವತ್ಪ್ರತ್ಯಕ್ಷೇಣೈವ=ಪ್ರಬಲ ಪ್ರತ್ಯಕ್ಷವಾದ ಸಾಕ್ಷಿಯಿಂದಲೇ, ನಿಶ್ಚಿತಂ=ನಿಶ್ಚೈಸಲ್ಪಟ್ಟದೆ.

ತಾ ॥ ಜ್ಞಾನವು ' ೧ ಸಂಶಯವು, ೨ ಒಂದೇ ಆಕಾರವನ್ನು ವಿಷಯೀಕರಿಸತಕ್ಕುದು, ಹೀಗೆ ೨ ವಿಧವು. ' ಇದರಲ್ಲಿ ೨ನೇದ್ದು ' ಸ್ವಾರ್ಥವನ್ನು ನಿಶ್ಚೈಸತಕ್ಕುದು ' ಸ್ವಾರ್ಥವನ್ನು ಏಕಾಕಾರವಾಗಿ ವಿಷಯೀಕರಿಸಿದರೂ ನಿಶ್ಚಯಿಸದಿರುವುದು ಹೀಗೆ, ೨ ವಿಧವು. ಉದಾ = ೧ ಇದು ಸ್ತಂಭವೇ ಸರಿ. ೨ ಸೂರ್ಯನಲ್ಲಿ ತೂತು ಇದೆ ಎಂದು, ಅದರಲ್ಲಿ ಒಂದನೇದ್ದು ನಿಶ್ಶಂಕ ಪ್ರವೃತ್ತಿಗೆ ಕಾರಣವಾದುದರಿಂದ ' ಪಟು ' ಎನ್ನಿಸುತ್ತದೆ. ೨ನೇದ್ದು ನಿಶ್ಶಂಕಪ್ರವೃತ್ತಿಗೆ ಕಾರಣವಾಗದಿರುವುದರಿಂದ ' ಅಪಟು ' ಎನ್ನಿಸುತ್ತದೆ. ದೂರದಲ್ಲಿರುವ ವೃಕ್ಷದಲ್ಲಿ ಹ್ರಸ್ವತ್ವಾದಿಗಳನ್ನು ವಿಷಯೀಕರಿಸತಕ್ಕುದು, ದೂರಸ್ಥತ್ವ ಮೊದಲಾದ ದೋಷಗಳಿಂದೊಡಗೂಡಿರುವುದರಿಂದ ಅದು ಮಂದಗ್ರಾಹಿಯು (ಸರಿಯಾದ ರೀತಿಯಿಂದ ಅದನ್ನು ವಿಷಯೀಕರಿಸದಿರುವುದು.)

ಆದುದರಿಂದಲೇ ಪರಿಮಾಣಾದಿ ವಿಷಯದಲ್ಲಿ ಅಯಥಾರ್ಥವಾಗಿದೆ, ಹೀಗೆ ಅನ್ವಯವ್ಯತಿರೇಕಗಳಿಂದ ಅನುಗೃಹೀತವಾದ ಸಾಕ್ಷಿಯಿಂದ ಸಾಮಾನ್ಯಾಕಾರವಾಗಿ ನಿಶ್ಚಯಿಸಲ್ಪಟ್ಟಪ್ರಯುಕ್ತ ವಿಪರೀತವಾಗಿ ಸಂಸ್ಕಾರವಿದ್ದುದರಿಂದ ಒಂದೇ ಆಕಾರವನ್ನು ವಿಷಯೀಕರಿಸಿ ಹುಟ್ಟಿದರೂ ನಿಶ್ಚಾಯಕವಾಗದಿರುವುದಾಗಿಯೇ ನಿಶ್ಶಂಕಪ್ರವೃತ್ತಿಗೆ ಕಾರಣವಾಗದಿರುವುದಾಗಿ ಬಾಧಿತಪ್ರಾಯವಾಗುತ್ತದೆ. ಆ ಮೇಲೆ ಪ್ರವರ್ತಿಸತರ್ಕ ಅನುಮಾನಾಗಮಗಳು ಸಾಕ್ಷಿಪ್ರತ್ಯಕ್ಷದಿಂದ ಅವಕಾಶವನ್ನು ಹೊಂದಿದವುಗಳಾಗಿ ದೀರ್ಘತ್ವಾದಿನಿಶ್ಚಯವನ್ನು ಮಾಡುತ್ತಾ ಪ್ರತ್ಯಕ್ಷಕ್ಕೆ ಬಾಧಕಗಳಂತೆ ಹೇಳಲ್ಪಡುತ್ತವೆ. ಆದುದರಿಂದ 'ಪ್ರತ್ಯಕ್ಷವು ಅನುಮಾನಾಗಮಗಳಿಂದ ಬಾಧಿತವಾಗುತ್ತದೆ' ಎನ್ನುವಲ್ಲಿ ಇದು ದೃಷ್ಟಾಂತವಾಗಲಾರದು ॥ ೩೧೩ ॥

ಹೀಗೆಯೇ ಜಗತ್ಪ್ರತ್ಯಕ್ಷಕ್ಕೆ ಅಪಟುತ್ವವಿಷಯದಲ್ಲಿ ಯದ್ಯಪಿ ಅನುಮಾನಾಗಮಗಳು ಬಾಧಕಗಳಾಗಲಾರವು. ಆದಾಗ್ಯೂ ಸಾಕ್ಷಿಪ್ರತ್ಯಕ್ಷದಿಂದ ಅನುಮಾನಾಗಮಗಳು ಅಬಾಧಿತಗಳಾಗಿ ಜಗತ್ತಿಗೆ ಮಿಥ್ಯಾತ್ವವನ್ನು ನಿಶ್ಚಯಿಸಿಕೊಡುತ್ತವೆ ಎಂದರೆ —

**ಮೂ ॥ ನ ಚ ಜಗತ್ಪ್ರತ್ಯಕ್ಷಸ್ಯ ಮಿಥ್ಯಾತ್ವಂ ಕೇನಾಪಿ ಪ್ರಮಾಣೇನ ನಿಶ್ಚಿತಂ । ವಿಶೇಷತಶ್ಚ ಜ್ಞಾನಾಜ್ಞಾನಸುಖದುಃಖಾತ್ಮಭೇದಾದಿ ವಿಷಯಸ್ಯಾನುಭವಸ್ಯ ನ ಮಿಥ್ಯಾತ್ವಂ ದೃಷ್ಟಂ । ಅತಶ್ಚ ಸಂಸಾರಸ್ಯ ಸತ್ಯತ್ವಾತ್ಸತ್ಯಸ್ಯ ಚಾನಿವೃತ್ತ್ಯಂಗೀಕಾರಾನ್ನ ಮೋಕ್ಷಃ ಸ್ಯಾತ್ ॥ ೩೧೪ ॥**

ಅ ॥ ಜಗತ್ಪ್ರತ್ಯಕ್ಷಸ್ಯ=ಜಗದ್ವಿಷಯಕವಾದ ಅಪರೋಕ್ಷ ಜ್ಞಾನಕ್ಕೆ, ಮಿಥ್ಯಾತ್ವಂ=ಅಯಥಾರ್ಥತ್ವವು, ಕೇನಾಪಿ ಪ್ರಮಾಣೇನ=ಯಾವ ಪ್ರಮಾಣದಿಂದಲೂ, ನ ಚ ನಿಶ್ಚಿತಂ=ನಿಶ್ಚಯಿಸಲ್ಪಡಲಿಲ್ಲ, ವಿಶೇಷತಶ್ಚ=ವಿಶೇಷಾಕಾರವಾಗಿ, ಜ್ಞಾನಾಜ್ಞಾನಸುಖದುಃಖಾತ್ಮ ಭೇದಾದಿ ವಿಷಯಸ್ಯ, ಜ್ಞಾನ=ಮನೋವೃತ್ತಿರೂಪ ಜ್ಞಾನವು, ಅಜ್ಞಾನ=ಭಾವರೂಪ ಅಜ್ಞಾನವು, ಸುಖ=ಸುಖವು, ದುಃಖ=ದುಃಖವು, ಆತ್ಮಭೇದ=ಈಶ್ವರನಿಂದಲೂ ಜೀವಂದಲೂ, ಜಡಗಳಿಂದಲೂ ಆತ್ಮರ ಭೇದವೂ, ಆದಿ=ಮೊದಲಾದ ಇಚ್ಛಾದಿಗಳನ್ನು ಜ್ಞಾನಾದಿಗಳ ಅಭಾವವನ್ನು, ವಿಷಯಸ್ಯ=ವಿಷಯೀಕರಿಸಿಕೊಂಡಿರುವ, ಅನುಭವಸ್ಯ = ಸಾಕ್ಷ್ಯನುಭವಕ್ಕೆ, ಮಿಥ್ಯಾತ್ವಂ = ಅಯಥಾರ್ಥತ್ವವು, ನ ದೃಷ್ಟಂ=ಕಾಣಲ್ಪಡಲಿಲ್ಲ. (ಸಾಕ್ಷ್ಯನುಭವಕ್ಕೆ ಯಥಾರ್ಥತ್ವವು ನಿಯತವೇ ಆಗಿದೆ) ಅತಶ್ಚ=ಸಾಕ್ಷ್ಯನುಭವಕ್ಕೆ ಯಥಾರ್ಥತ್ವವು ನಿಯತವಾದುದರಿಂದ, ಸಂಸಾರಸ್ಯ=ಜ್ಞಾನಾದಿ ರೂಪ ಸಂಸಾರವು, ಸತ್ಯತ್ವಾತ್=ಸತ್ಯವಾದುದರಿಂದ, ಸತ್ಯಸ್ಯ ಚ=ಸತ್ಯವಾದುದಕ್ಕೆ, ಅನಿವೃತ್ತ್ಯಂಗೀಕಾರಾತ್=ನಿವೃತ್ತಿಯಿಲ್ಲವೆಂದಂಗೀಕರಿಸಿರುವುದರಿಂದ, ಮೋಕ್ಷಃ ನ ಸ್ಯಾತ್=(ಮಾಯಾವಾದಿಗಳಿಗೆ) ಮುಕ್ತಿಯೇ ಇಲ್ಲವೆಂದಾಗುವುದು. (ಅಂತೂ ಏಕಜೀವವಾದಿಗಳಂತೆಯೇ ಇವರಿಗೂ ಬದ್ಧಮುಕ್ತ ವ್ಯವಸ್ಥೆಯು ಸಿದ್ಧಿಸದಿರುವುದರಿಂದ ಬಹುಜೀವವಾದವನ್ನಂಗೀಕರಿಸಿದ್ದು ವ್ಯರ್ಥವೇ ॥ ೩೧೪ ॥

ಬೇರೆ ಅತಿ ಪ್ರಸಂಗಗಳನ್ನು ಹೇಳುತ್ತಾರೆ —

**ಮೂ ॥ ಅನುಭವಸಿದ್ಧಸ್ಯ ಬಲವದನುಭವಂ ವಿನಾ ಯುಕ್ತಿತ ಏವ ಮಿಥ್ಯಾತ್ವಾಂಗೀಕಾರೇ ಆತ್ಮನೋಽಪಿ ಮಿಥ್ಯಾತ್ವಂ ಸ್ಯಾತ್ । ಯುಕ್ತಿಶ್ಚ । ಸರ್ವಸ್ಯಾನ್ಯಸ್ಯ ಮಿಥ್ಯಾತ್ವಾಂಗೀಕಾರಾತ್ । ದ್ವಿಧಾ ಕಲ್ಪನೇ ಕಲ್ಪನಾಗೌರವಮಿತಿ ॥ ೩೧೫ ॥**

ಅ ॥ ಅನುಭವಸಿದ್ಧಸ್ಯ = ಸಾಕ್ಷಿಪ್ರತ್ಯಕ್ಷ ಬಾಹ್ಯಪ್ರತ್ಯಕ್ಷಗಳಿಂದ ಸಿದ್ಧವಾದುದಕ್ಕೆ, ಬಲವದನುಭವಂ ವಿನಾ = ಪ್ರಬಲವಾದ ಅನುಭವವನ್ನು ಹೊರತು, ಯುಕ್ತಿತ ಏವ = ಅನುಮಾನ ದಿಂದಲೇ, ಮಿಥ್ಯಾತ್ವಾಂಗೀಕಾರೇ = ಮಿಥ್ಯಾತ್ವವನ್ನಂಗೀಕರಿಸಿದರೆ, ಆತ್ಮನೋಽಪಿ = ಆತ್ಮನಿಗೂ, ಮಿಥ್ಯಾತ್ವಂ = ಅಯಥಾರ್ಥತ್ವವು, ಸ್ಯಾತ್ = ಬರಬೇಕಾಗುವುದು. (ಅವನೂ ಸಾಕ್ಷಿ ಪ್ರತ್ಯಕ್ಷ ಸಿದ್ಧನಾಗಿರುತ್ತಾನೆ) ಯುಕ್ತಿಶ್ಚ = ಆತ್ಮನಿಗೆ ಮಿಥ್ಯಾತ್ವವನ್ನು ಸಾಧಿಸತಕ್ಕ ಅನುಮಾನವೂ ಅದೆ. ಸರ್ವಸ್ಯ ಅನ್ಯಸ್ಯ = ಆತ್ಮವ್ಯತಿರಿಕ್ತಗಳಾದ ಎಲ್ಲಾ ವಸ್ತುಗಳಿಗೂ, ಮಿಥ್ಯಾತ್ವಾಂಗೀಕಾರಾತ್ = ಮಿಥ್ಯಾತ್ವವನ್ನು ಒಡಂಬಟ್ಟ ಪ್ರಯುಕ್ತ (ಅದನ್ನು ದೃಷ್ಟಾಂತೀಕರಿಸಿಕೊಂಡು ವಸ್ತುತ್ವಾದಿ ಗಳಿಂದ ಆತ್ಮನಿಗೆ ಮಿಥ್ಯಾತ್ವವು ಸಾಧಿಸಲ್ಪಡುತ್ತದೆ.) ದ್ವಿಧಾಕಲ್ಪನೇ = ಆತ್ಮನು ಸತ್ಯನಾದರೆ ಆಗ ಆತ್ಮನು ಸತ್ಯನು ಬೇರೆಯಿಲ್ಲವೂ ಮಿಥ್ಯೆಯೆಂದು ಎರಡು ಪ್ರಕಾರ ಕಲ್ಪಿಸಿದರೆ, ಕಲ್ಪನಾ ಗೌರವಮಿತಿ = ಕಲ್ಪನಾ ಗೌರವವು (ಬರಬೇಕಾಗುವುದು ಎಂದು ಬಾಧಕವಿದ್ದುದರಿಂದ ಅಪ್ರಯೋ ಜಕವಲ್ಲ, ಎಂಬೀ ಯುಕ್ತಿಯೂ ಇದೆ) ॥ ೩೧೫ ॥

ಆತ್ಮನಿಗೆ ಮಿಥ್ಯಾತ್ವವನ್ನು ಸಾಧಿಸತಕ್ಕವನು ಆತ್ಮವ್ಯತಿರಿಕ್ತವಾದ ಎಲ್ಲಾ ವಸ್ತುವಿಗೂ ಮಿಥ್ಯಾತ್ವವನ್ನು ಅಂಗೀಕರಿಸಬೇಕು. ಆತ್ಮವ್ಯತಿರಿಕ್ತವಾದ ಎಲ್ಲಾದಕ್ಕೂ ಮಿಥ್ಯಾತ್ವವಿದ್ದರೆ ಪ್ರತೀತಿಯು ಹೇಗೆ ಆಗುವುದೆಂದು ಪ್ರಶ್ನಿಸಿದರೆ ಭ್ರಾಂತಿಯಲ್ಲಿ ಪ್ರತೀತಿಯೆಂದು ಹೇಳಬೇಕು. ಆತ್ಮವ್ಯತಿರಿಕ್ತವಾದ ಎಲ್ಲಾದಕ್ಕೂ ಭ್ರಮೆಯಲ್ಲಿ ಆತ್ಮನೇ ಅಧಿಷ್ಠಾನನೆಂದು ಸ್ವೀಕರಿಸಬೇಕು. ಅವನಿಗೂ ಮಿಥ್ಯಾತ್ವವಿದ್ದರೆ ಬೇರೆ ಅಧಿಷ್ಠಾನಗಳನ್ನ ಕಲ್ಪಿಸಿರುವುದರಿಂದ ಅನವಸ್ಥಾದೋಷವು ಪ್ರಾಪ್ತವಾಗುವುದು. ಅದನ್ನು ಪರಿಹರಿಸುವುದಕ್ಕಾಗಿ ಕೊನೆಗೆ ಯಾವುದಕ್ಕೆ ಸತ್ಯತ್ವವನ್ನು ಅಂಗೀಕರಿಸುತ್ತೀರೋ ಅವನೇ ಆತ್ಮನು; ಹೀಗೆ ಸರ್ವಥಾ ಆತ್ಮನಿಗೆ ಸತ್ಯತ್ವವನ್ನು ಅಂಗೀಕರಿಸ ಬೇಕಾಗಿರುವಾಗ ಆತ್ಮನಿಗೆ ಮಿಥ್ಯಾತ್ವವನ್ನು ಹೇಗೆ ಅನುಮೇಯಿಸುವುದೆಂದರೆ — ೧ ಯಾವುದು ಭ್ರಾಂತಿಯೋ ಅದೆಲ್ಲವೂ ಆತ್ಮನೇ ಅಧಿಷ್ಠಾನವಾಗಿ ಉಳ್ಳದ್ದು, ಎಂಬೀ ವ್ಯಾಪ್ತಿಯಿಂದ ವಿಶ್ವ ಭ್ರಾಂತಿಗೆ ಆತ್ಮನು ಅಧಿಷ್ಠಾನನೆಂದು ಸ್ವೀಕರಿಸಬೇಕೋ? ಅಥವಾ ೨ ಯಾವುದು ಭ್ರಾಂತಿಯೋ ಅದು ಅಧಿಷ್ಠಾನ ಸಹಿತವಾಗಿಯದೆ, ಆತ್ಮವ್ಯತಿರಿಕ್ತವಾದುದು ಇಲ್ಲವೆಂದು ಸಾಮಾನ್ಯಸಿದ್ಧಿ ಪರಿ ಶೇಷಪ್ರಮಾಣಗಳಿಂದಲೋ, ೧ನೇದ್ದನ್ನು ದೂಷಿಸುತ್ತಾರೆ —

**ಮೂ ॥ (೧) ಆತ್ಮಾಧಿಷ್ಠಾನ ಭ್ರಮಸ್ಯೈವಾದೃಷ್ಟೇಸ್ತಸ್ಯಾಧಿಷ್ಠಾನತ್ವಮಪಿ ನ ಯುಜ್ಯತೇ । (೨) ದುರ್ಘಟತ್ವಸ್ಯ ಚ ಭೂಷಣತ್ವೇ ದುರ್ಘಟಮ- ಷ್ಯಾತ್ಮ ಮಿಥ್ಯಾತ್ವಂ ಸ್ಯಾದೇವ । (೩) ಪ್ರತೀತೇರಪ್ಯವಿದ್ಯಾ ಕಾರ್ಯ- ತ್ವಾಂಗೀಕಾರಾತ್ । (೪) ತಸ್ಯಾಶ್ಚ ದುರ್ಘಟತ್ವಸ್ಯ ಭೂಷಣತ್ವಾತ್ಸ- ತ್ಯಸ್ಯ ಚ ಯುಕ್ತ್ಯಪೇಕ್ಷತ್ವಾದ್ಘಟಾದೀನಾಂ ದ್ರಷ್ಟೃತ್ವಮಾತ್ಮನಶ್ಚ ಜಡತ್ವಂ ದ್ರಷ್ಟುರಭಾವೇ ಚ ಪ್ರತೀತಿರಧಿಷ್ಠಾನಂ ವಿನೈವ ಭ್ರಮ ಇತ್ಯಾದಿ ವಿರುದ್ಧಂ ಸರ್ವಮಪಿ ಸ್ಯಾತ್ ॥ ೩೧೬ ॥**

ಅ ॥ (೧) ಆತ್ಮಾಧಿಷ್ಠಾನ ಭ್ರಮಸ್ಯೈವ ಅದೃಷ್ಟೇಃ = ಆತ್ಮನೇ ಅಧಿಷ್ಠಾನವಾಗಿ ಉಳ್ಳ ಭ್ರಾಂತಿಯೇ ದೃಷ್ಟವಾಗದಿರುವುದರಿಂದ, (ದೃಷ್ಟಾಂತವಿಲ್ಲದಿರುವುದರಿಂದ ವ್ಯಾಪ್ತಿಯೇ ಸಿದ್ಧಿಸದೆ ಇರುವ ಪ್ರಯುಕ್ತ ವಿಶ್ವಭ್ರಾಂತಿಯಲ್ಲಿ) ತಸ್ಯ = ಆತ್ಮನಿಗೆ, ಅಧಿಷ್ಠಾನತ್ವಮಪಿ = ಅಧಿಷ್ಠಾನತ್ವವೂ ಕೂಡ, ನ ಯುಜ್ಯತೇ = ಕೂಡುವುದಿಲ್ಲ. (೨ನೇದ್ದೂ ಕೂಡಲಾರದು. ಎಲ್ಲಾ ಭ್ರಾಂತಿಗಳೂ ಅಧಿ ಷ್ಠಾನವಿಲ್ಲದಿರುವವುಗಳೆಂದು ಶೂನ್ಯವಾದಿಗಳು ಅಂಗೀಕರಿಸಿರುವುದರಿಂದ ಆತನಿಗೆ ವ್ಯಾಪ್ತಿಯು

ಸಿದ್ಧಿಸಲಿಲ್ಲ. ಅಂತೂ ಅನುಮಾನದಿಂದ ವಿಶ್ವಮಿಥ್ಯಾತ್ಯವು ಸಿದ್ಧಿಸುವುದಿಲ್ಲ.) (೨) (ಹೀಗೆ ಉಪಾಧಿ ಮೊದಲಾದ ಪ್ರಪಂಚಕ್ಕೆ ಮಿಥ್ಯಾತ್ವವಿಲ್ಲದಿರುವುದರಿಂದ ಅನ್ಯೋನ್ಯಾಶ್ರಯತ್ವಾದಿಗಳು ಭೂಷಣವೆಂದು ಹೇಳಲಿಕ್ಕೆ ಶಕ್ಯವಾಗುವುದಿಲ್ಲವೆಂದುಕ್ತವಾಗಿದೆ. ಆ ಮೇಲೆ ಅಪ್ರಾಮಾಣಿಕವೂ ಪ್ರಮಾಣವಿರುದ್ಧವೂ ಆದ ವಿಶ್ವಮಿಥ್ಯಾತ್ವವನ್ನಂಗೀಕರಿಸಿ ದೂಷಣವನ್ನು ಭೂಷಣವನ್ನಾಗಿ ಅಂಗೀಕರಿಸುವವನಿಗೆ ಅತಿಪ್ರಸಂಗವನ್ನು ಹೇಳುತ್ತಾರೆ—) ದುರ್ಘಟತ್ವಸ್ಯ ಚ=ಅಂಗೀಕರಿಸಲಿಕ್ಕೆ ಅಯೋಗ್ಯವೇ ಆಗಿರುವ ಅನ್ಯೋನ್ಯಾಶ್ರಯತ್ವಾದಿ ದೋಷಕ್ಕೆ, ಭೂಷಣತ್ವೇ = ಭೂಷಣತ ವಿದ್ದರೆ, ದುರ್ಘಟಮಪಿ=ದುರ್ಘಟವಾದಾಗ್ಯೂ, ಆತ್ಮಮಿಥ್ಯಾತ್ವಂ=ಆತ್ಮನಿಗೆ ಮಿಥ್ಯಾತ್ವವು, ಸ್ಯಾದೇವ=ಆಗಲೇಬೇಕಾಗುವುದು. (ಆತ್ಮನಿಗೂ ಮಿಥ್ಯಾತ್ವವನ್ನು ಅಂಗೀಕರಿಸಿ ಯಾವುದು ದೂಷಣವು ಬರುತ್ತದೋ, ಅದೆಲ್ಲವೂ ಭೂಷಣವೆಂದಂಗೀಕರಿಸಬೇಕು.) (೩) ಪ್ರತೀತೇರಪಿ= (ಆರೋಪ್ಯದಂತೆಯೇ) ಆರೋಪರೂಪವಾದ ಪ್ರತೀತಿಗೂ, ಅವಿದ್ಯಾಕಾರ್ಯತ್ವಾಂಗೀಕಾರಾತ್= ಅವಿದ್ಯಾಮಯತ್ವವನ್ನಂಗೀಕರಿಸಿರುವುದರಿಂದ, (ಪ್ರತೀತಿಗೆ ಚೈತನ್ಯಜ್ಞಾನರೂಪತ್ವವಿದ್ದಾಗ್ಯೂ ಅವಿದ್ಯೆ ಹೊರತು ಸಂಸರ್ಗವೇ ಇಲ್ಲದಿರುವುದರಿಂದ ಆರೋಪ್ಯ ಸಂಬಂಧವೇ ಕೂಡಲಾರದು.) (೪) ತಸ್ಯಾಶ್ಚ=ಅವಿದ್ಯಾಮಯವಾದ ಪ್ರತೀತಿಗೆ, ದುರ್ಘಟತ್ವಸ್ಯ=ದೌರ್ಘಟ್ಯಕ್ಕೆ, ಭೂಷಣ ತ್ವಾತ್ = ಭೂಷಣತ್ವವಿದ್ದುದರಿಂದ, (ಅಂದರೆ — ಪ್ರತೀತಿಯು ಮಿಥ್ಯಾತ್ವಕ್ಕೆ ಉಪಪಾದಕ ವಾದುದರಿಂದ,) ಸತ್ಯಸ್ಯ ಚ=ಸತ್ಯಕ್ಕೇನೆ, ಯುಕ್ತ್ಯಪೇಕ್ಷತ್ವಾತ್=ಪ್ರಮಾಣಾಪೇಕ್ಷೆಯಿದ್ದುದ ರಿಂದ, ಘಟಾದೀನಾಂ=ಘಟ ಮೊದಲಾದವುಗಳಿಗೆ, ದ್ರಷ್ಟೃತ್ವಂ=ನೋಡುವಿಕೆಯು, ಆತ್ಮನಶ್ಚ= ಆತ್ಮನಿಗೆ, ಜಡತ್ವಂ = ಜಡತನವೂ, ದ್ರಷ್ಟುಃ ಅಭಾವೇ = ನೋಡುವವನು ಇಲ್ಲದಿದ್ದರೂ, ಪ್ರತೀತಿಃ=ಪ್ರತೀತಿಯು, ಅಧಿಷ್ಠಾನಂ ವಿನೈವ=ಅಧಿಷ್ಠಾನ ಹೊರತೇ, ಭ್ರಮಃ=ಭ್ರಾಂತಿಯು, ಇತ್ಯಾದಿ = ಇದು ಮೊದಲಾದುದು, ವಿರುದ್ಧಮಪಿ ಸರ್ವಂ ಸ್ಯಾತ್ = ವಿರುದ್ಧವಾದಾಗ್ಯೂ ಎಲ್ಲವೂ ಆಗಬೇಕಾಗುವುದು ಎಂದು ಹೇಳಬೇಕಾಗುವುದು. ಅಂದರೆ, ಇದೆಲ್ಲವನ್ನು ಅಂಗೀಕರಿಸಬೇಕಾಗುವುದು.

ತಾ || ಮಿಥ್ಯಾಭೂತಕ್ಕೂ ಪ್ರಮಾಣಾಪೇಕ್ಷೆಯಿದ್ದರೆ ಮಿಥ್ಯಾತ್ವವೇ ಇಲ್ಲವೆಂದಾಗುವುದು. ಹೀಗೆ ಪ್ರಮಾಣಸಿದ್ಧವಾದ ಪ್ರಪಂಚಕ್ಕೂ ಮಿಥ್ಯಾತ್ವವನ್ನಂಗೀಕರಿಸಿ ಬಂದ ದೂಷಣಗಳನ್ನು ಭೂಷಣವೆಂದಂಗೀಕರಿಸುವವನಿಗೆ ಅತಿಪ್ರಸಂಗವು ಇದೆ. ಆದುದರಿಂದ ಆತ್ಮನಂತೆಯೇ ಸತ್ಯತ್ವ ವನ್ನೇ ಅಂಗೀಕರಿಸಬೇಕು. ಪರರು ಹೇಳಿದ ದೂಷಣವನ್ನು ಪರಿಹರಿಸಲು ಸಾಮರ್ಥ್ಯವಿಲ್ಲದಿರಲು ಉಪಹಾಸಕ್ಕೆ ವಿಷಯವಾದ ಭೂಷಣತ್ವವನ್ನಂಗೀಕರಿಸಿರುವುದರಿಂದ ಏನು ಪ್ರಯೋಜನವು? ಅಥವಾ ಆತ್ಮನಿಗೆ ಮಿಥ್ಯಾತ್ವವು ಬರಲೇ ಬೇಕಾಗುವುದು ಎಂದು ಒಂದು ಅತಿಪ್ರಸಂಗವು. 'ಘಟಾದಿಗಳಿಗೆ ದ್ರಷ್ಟೃತ್ವವು' ಇದು ಮೊದಲಾದುದು ಬೇರೆ ಅತಿಪ್ರಸಂಗಗಳು || ೩೧೬ ||

ಪೂರ್ವದಲ್ಲಿ ಸತ್ಯೋಪಾಧಿಕೃತ ಭೇದವಾದಿಗಳಾದ ಅದ್ವೈತಿಗಳಿಗೆ ಬದ್ಧಮುಕ್ತವ್ಯವಸ್ಥೆಯು ಸಿದ್ಧಿಸುವುದಿಲ್ಲವೆಂದುಕ್ತವಾಗಿದೆ. ಈಗ ಅವರಿಗೆ ಸುಖದುಃಖಾದಿ ವ್ಯವಸ್ಥೆಯೂ ಸಿದ್ಧಿಸುವುದಿಲ್ಲ ವೆಂದು ನಿರೂಪಿಸುತ್ತಾರೆ —

ಮೂ || ಉಪಾಧಿಭೇದಾಂಗೀಕಾರೇ ಹಸ್ತಪಾದಾದ್ಯುಪಾಧಿಭೇದೇಽಪಿ ತದ್ಗತ-
ಸುಖದುಃಖಾದಿ ಭೋಕ್ತುರ್ಯಥಾ ಭೇದೋ ನ ಪ್ರತೀಯತೇ |
ಏವಮೇವ ಶರೀರಾದಿ ಭೇದೇಽಪಿ ಭೋಕ್ತುರ್ಭೇದೋ ನ ದೃಶ್ಯೇತ |
ಸರ್ವಗತಸುಖದುಃಖಾದಿಕಮೇಕೇನೈವ ಭುಜ್ಯೇತ || ೩೧೭ ||

ಅ || ಉಪಾಧಿಭೇದಾಂಗೀಕಾರೇ=ಉಪಾಧಿಕೃತಭೇದವನ್ನಂಗೀಕರಿಸಿದರೆ, ಹಸ್ತಪಾದಾದ್ಯುಪಾಧಿಭೇದೇಽಪಿ=ಹಸ್ತಪಾದವೊದಲಾದ ಉಪಾಧಿಭೇದವಿದ್ದರೂ, ತದ್ಗತಸುಖದುಃಖಾದಿಭೋಕ್ತುಃ = ತನ್ನಿಮಿತ್ತಕವಾದ ಸುಖದುಃಖಾದಿಗಳನ್ನನುಭವಿಸುವವನಿಗೆ, ಯಥಾ=ಹೇಗೆ, ಭೇದಃ=ಭೇದವು, ನ ಪ್ರತೀಯತೇ = ಪ್ರತೀತವಾಗುವುದಿಲ್ಲವೋ, ಏವಮೇವ = ಹೀಗೆಯೇ ಶರೀರಾದಿಭೇದೇಽಪಿ = ಶರೀರಾದ್ಯುಪಾಧಿಕೃತಭೇದವಿದ್ದರೂ, ಭೋಕ್ತುಃ=(ಶರೀರಾದಿನಿಮಿತ್ತಕ ಸುಖದುಃಖಾದಿಗಳನ್ನ) ಅನುಭವಿಸುವವನಿಗೆ, ಭೇದಃ=ಭೇದವು, ನ ದೃಶ್ಯೇತ=ಕಾಣಲ್ಪಡದೆ ಹೋಗಬೇಕಾಗುವುದು. ಸರ್ವದೇಹಗತಸುಖದುಃಖಾದಿಕಂ=ಎಲ್ಲಾ ಶರೀರಗಳಲ್ಲಿರುವ ಸುಖದುಃಖಾದಿಗಳು, ಏಕೇನೈವ=ಒಬ್ಬನಿಂದಲೇ, ಭುಜ್ಯೇತ=ಅನುಭವಿಸಲ್ಪಡಬೇಕಾಗುವುದು.

ತಾ || (1) ಎಲ್ಲಾ ಜೀವರಿಗೂ ಐಕ್ಯವಿದ್ದರೆ ಆಗ ದೇವದತ್ತನ ಶರೀರಾದಿಗಳಿಗೆ ಸ್ರಕ್ ಚಂದನವನಿತಾದಿ ಪ್ರಿಯವಸ್ತು ಸಂಬಂಧವೂ ಅಪ್ರಿಯವಸ್ತುಗಳ ಸಂಬಂಧವೂ ಇವುಗಳೇ ಮೊದಲಾದುವುಗಳಿಂದ ದೇವದತ್ತನ ಶರೀರದಲ್ಲಿ ಸುಖದುಃಖಾದಿಗಳು ಹುಟ್ಟುವಾಗ ದೇವದತ್ತನೇ ಸುಖವುಳ್ಳವನು ಅಥವಾ ದುಃಖವುಳ್ಳವನು, ಯಜ್ಞದತ್ತನಲ್ಲವು. ಹಾಗೆಯೇ ಯಜ್ಞದತ್ತನ ಶರೀರದಲ್ಲಿ ಸುಖದುಃಖಾದಿಗಳು ಹುಟ್ಟುವಾಗ ಯಜ್ಞದತ್ತನೇ ಸುಖಾದಿಗಳುಳ್ಳವನು, ದೇವದತ್ತನಲ್ಲ, ಹೀಗೆ ಭೋಕ್ತೃಗಳಿಗೆ ಭೇದವೇ ಇಲ್ಲವೆಂದಾಗಬೇಕಾಗುವುದು. (2) ಹಾಗೆಯೇ ದೇವದತ್ತನ ಶರೀರಕ್ಕೆ ಅಧಿಷ್ಠಾತನಾದ ಜೀವನು ಯಜ್ಞದತ್ತನ ಶರೀರಕ್ಕೆ ಅಧಿಷ್ಠಾತನಾದ ಜೀವನಿಂದ ಅಭಿನ್ನನಾಗಿದ್ದರೆ ಆಗ ಯಜ್ಞದತ್ತನ ಶರೀರದಲ್ಲಿರುವ ಸುಖಾದಿಗಳನ್ನನುಸಂಧಾನಮಾಡದಿರುವವನು ಆಗದೆ ಹೋಗಬೇಕಾಗುವನು. ಮತ್ತೆ ಅವುಗಳನ್ನನುಸಂಧಾನಮಾಡುವವನೇ ಆಗಬೇಕಾಗುವನು, ಯಜ್ಞದತ್ತನ ಶರೀರಕ್ಕೆ ಅಧಿಷ್ಠಾತನಾದ ಜೀವನಂತೆಯೇ, ಅನುಸಂಧಾನವೆಂದರೆ ಈ ಸುಖದಿಂದ ನಾನು ಸುಖಿಯು ಇದುಮೊದಲಾದ ಅನುಭವವು. ಹೀಗೆ ಅನುಸಂಧಾನವುಳ್ಳವನಲ್ಲ. ಆದಕಾರಣ ದೇವದತ್ತನ ಶರೀರಕ್ಕೆ ಅಧಿಷ್ಠಾತನಾದ ಜೀವನು ಯಜ್ಞದತ್ತನ ಶರೀರಕ್ಕೆ ಅಧಿಷ್ಠಾತನಾದ ಜೀವನಿಂದ ಭಿನ್ನನು ಎಂಬೀ ಪ್ರಸಂಗಕ್ಕೆ ವಿಪರ್ಯಯ ಪರ್ಯವಸಾನದಲ್ಲಿ ವ್ಯತಿರೇಕ ವ್ಯಾಪ್ತಿಯೇ ಆಶ್ರಯಿಸಲ್ಪಡುತ್ತದೆ. ಅಂದರೆ ಎಲ್ಲಿ ಪರಸ್ಪರ ಅನುಸಂಧಾನವಿಲ್ಲವೋ ಅಲ್ಲಿ ಅವುಗಳಿಗೆ ಭೇದವು ಎಂಬೀ ಅನ್ವಯವ್ಯಾಪ್ತಿಯಲ್ಲಿ ದೃಷ್ಟಾಂತವಿಲ್ಲವು. ಎಲ್ಲಾ ಜೀವರು ಭಿನ್ನಾಭಿನ್ನರೆಂದು ವಿವಾದಗ್ರಸ್ತರಾದುದರಿಂದ ಯಾರು ಯಾರಲ್ಲಿರುವ ಸುಖದುಃಖಾದಿಗಳನ್ನನುಸಂಧಾನ ಮಾಡುವವನೋ ಅವನು ಅವನ ಅಭೇದವುಳ್ಳವನು. ಹೇಗೆಂದರೆ — ಯಜ್ಞದತ್ತನ ಶರೀರಕ್ಕೆ ಅಧಿಷ್ಠಾತನಾದ ಜೀವನು ಅವನಿಂದಲೇ ಅಭೇದವುಳ್ಳವನು. ಹೀಗೆ ದೃಷ್ಟಾಂತವು ಸಂಭವಿಸುವುದರಿಂದ ವ್ಯತಿರೇಕವ್ಯಾಪ್ತಿಯನ್ನೇ ಆಶ್ರಯಿಸಬೇಕು || ೩೧೭ ||

ಬೇರೆ ಅತಿಪ್ರಸಂಗಗಳನ್ನು ಹೇಳುತ್ತಾರೆ —

**ಮೂ || ಯಥಾ ಚೈಕಾಂಗುಲ್ಯಾದ್ಯಪಗಮೇಽಪಿ ನ ಮುಕ್ತಿಃ ಏವಮೇಕೋಪಾಧ್ಯಪಗಮೇಽಪಿ ತಸ್ಯೈವಾನಂತೋಪಾಧಿಸಂಬದ್ಧತ್ವಾನ್ನ ಮುಕ್ತಿಃ ಸ್ಯಾತ್ || ೩೧೮ ||**

ಅ || ಯಥಾ ಚ=ಹೇಗೆ, ಏಕಾಂಗುಲ್ಯಾದ್ಯಪಗಮೇಽಪಿ=ಒಂದು ಬೆರಳು ಮೊದಲಾದ ಉಪಾಧಿಯು ಹೋದರೂ, (ಅವನ ಸಂಬಂಧಿಯಾದ ಕಿವಿ ಮೊದಲಾದ ಉಪಾಧಿಗಳು

ಇದ್ದುದರಿಂದ) ನ ಮುಕ್ತಿಃ=ಮುಕ್ತಿಯಾಗುವುದಿಲ್ಲವೋ, ಏವಂ=ಹೀಗೆಯೇ, ಏಕೋಪಾಧ್ಯ ಗಮೇಽಪಿ=ಒಂದು ಶರೀರರೂಪ ಉಪಾಧಿಯು ಹೊರಟುಹೋದರೂ, ತಸ್ಯೈವ=ಆತನಿಗೇನೆ, ಅನಂತೋಪಾಧಿ ಸಂಬದ್ಧತ್ವಾತ್ = ಅನಂತ ಶರೀರರೂಪ ಉಪಾಧಿಗಳಿಂದ ಸಂಬದ್ಧವಾದ ಪ್ರಯುಕ್ತ, ಮುಕ್ತಿಃ ನ ಸ್ಯಾತ್=ಮೋಕ್ಷವು ಆಗದೆ ಹೋಗುವುದು.

ತಾ ॥ (1) ಎಲ್ಲಾ ಜೀವರಿಗೆ ಏಕಕಾಲದಲ್ಲಿಯೇ ಮುಕ್ತಿಯೆಂದು ಹೇಳಲು ಆಗುವುದಿಲ್ಲ. ಹಾಗೆ ಇದ್ದರೆ ಏಕ ಜೀವವಾದಿಗಳು ಏನು ಅಪರಾಧಮಾಡಿರುವರು, ಅದನ್ನು ಬಿಟ್ಟು ಬಹು ಜೀವವಾದವನ್ನು ಏಕೆ ಅಂಗೀಕರಿಸಿದ್ದು? ಬದ್ಧ ಮುಕ್ತವ್ಯವಸ್ಥೆಗಳನ್ನು ಸಿದ್ಧಿಪಡಿಸುವುದಕ್ಕಾಗಿ ಬಹು ಜೀವವಾದವನ್ನು ಅಂಗೀಕರಿಸಿದ್ದಷ್ಟೆ! ಬಹು ಜೀವವಾದಿಗಳಲ್ಲಿಯೂ ಆ ವ್ಯವಸ್ಥೆಯು ಸಿದ್ಧಿಸದೆ ಇದ್ದರೆ ಒಡಂಬಟ್ಟು ಏನು ಪ್ರಯೋಜನವು? (2) ಎಲ್ಲಾ ಜೀವರಿಗೂ ಕ್ರಮದಿಂದ ಮುಕ್ತಿಯೆಂದರೆ ದೇವದತ್ತನಿಗೆ ಸ್ವಸಂಬಂಧಿಗಳಾದ ಎಲ್ಲಾ ಉಪಾಧಿಗಳ ಹೋಗುವಿಕೆಯೇ ಮುಕ್ತಿಯೋ, ಕೆಲವು ಉಪಾಧಿಗಳ ಹೋಗುವಿಕೆಯೋ? ೧ನೇದ್ದು ಕೂಡಲಾರದು. ದೇವದತ್ತ ಎಂದು ಹೆಸರುಳ್ಳ ಉಪಾಧಿಯು ಹೊರಟು ಹೋದರೂ ಯಜ್ಞದತ್ತ ಮೊದಲಾದ ಹೆಸರುಳ್ಳ ಅನಂತಉಪಾಧಿಗಳು ಹೊರಟುಹೋಗದಿರುವುದರಿಂದ ಮುಕ್ತಿಯಿಲ್ಲವೆಂದಾಗುವುದು. ೨ನೇ ಕಲ್ಪದಲ್ಲಿ ಒಂದು ಬೆರಳು ಹೋದರೂ ಮುಕ್ತಿಯಾಗಬೇಕಾಗುವುದು. ಆದುದರಿಂದ ಸ್ವರೂಪೈಕ್ಯವನ್ನ ಒಪ್ಪಿದರೆ ಸುಖದುಃಖಾದಿ ವ್ಯವಸ್ಥೆಯು ಸಿದ್ಧಿಸಲಾರದು ॥೩೧೮॥

ಸುಖದುಃಖಾದ್ಯನುಸಂಧಾನದಲ್ಲಿ ಚೇತನರಾಗಿದ್ದು ಸ್ವರೂಪೈಕ್ಯವೇ ಪ್ರಯೋಜಕವಲ್ಲವು. ಮತ್ತೆ ವಿಶ್ಲಿಷ್ಟ ಉಪಾಧಿಕೃತವಾದ ಭೇದವಿಲ್ಲದಿದ್ದು ಸ್ವರೂಪೈಕ್ಯವೇ ಪ್ರಯೋಜಕವು. ದೇವದತ್ತ ಯಜ್ಞದತ್ತೋಪಾಧಿಗಳು ವಿಶ್ಲಿಷ್ಟಗಳು. ಆದಕಾರಣ ಸ್ವರೂಪೈಕ್ಯವಿದ್ದರೂ ವಿಶ್ಲಿಷ್ಟೋಪಾಧಿಕೃತವಾದ ಭೇದವೇ ಇದ್ದುದರಿಂದ ಪರಸ್ಪರ ಅನುಸಂಧಾನವಿರುವುದಿಲ್ಲವೆಂದಾಶಂಕಿಸಿದರೆ-

**ಮೂ ॥ ಉದ್ಯತಾಯುಧದೋರ್ದಂಡಾಃ ಪತಿತಸ್ವಶಿರೋಽಕ್ಷಿಭಿಃ । ಪಶ್ಯಂತಃ ಪಾತಯಂತಿ ಸ್ಮ ಕಬಂಧಾ ಅಪ್ಯರೀನ್ಯುಧಿ ॥ ಇತಿ ಭಾರತವಚನಾನ್ನ ವಿಶ್ಲೇಷಾದ್ವಿಶೇಷಃ ॥ ೩೧೯ ॥**

ಅ ॥ ಉದ್ಯತಾಯುಧದೋರ್ದಂಡಾಃ=ಸನ್ನದ್ಧಗಳಾದ ಆಯುಧಗಳುಳ್ಳ ಭುಜದಂಡಗಳುಳ್ಳ, ಕಬಂಧಾ ಅಪಿ=ಶಿರಸ್ಸು ಇಲ್ಲದಿರುವ ದೇಹಗಳೂ ಕೂಡ, ಪತಿತಸ್ವಶಿರೋಕ್ಷಿಭಿಃ= ತುಂಡಾಗಿ ಬಿದ್ದು ಹೋದ ತನ್ನ ಶಿರಸ್ಸುಗಳ ಕಣ್ಣುಗಳಿಂದ, ಪಶ್ಯಂತಃ = ನೋಡುತ್ತಾ, ಅರೀನ್=ಶತ್ರುಗಳನ್ನು, ಯುಧಿ=ಯುದ್ಧದಲ್ಲಿ, ಪಾತಯಂತಿ ಸ್ಮ=ಬೀಳಿಸುತ್ತಿದ್ದವು. ಇತಿ= ಹೀಗೆ, ಭಾರತವಚನಾತ್=ಭಾರತದ ವಾಕ್ಯದಿಂದ, ವಿಶ್ಲೇಷಾತ್=ವಿಶ್ಲೇಷದಿಂದ, ವಿಶೇಷಃ= ವಿಶೇಷವು, ನ=ಇಲ್ಲವು.

ತಾ ॥ ಶಿರಸ್ಸಿನಲ್ಲಿರುವ ಮತ್ತು ಕಬಂಧದಲ್ಲಿರುವ ಆತ್ಮನಿಗೆ * ವಿಶ್ಲಿಷ್ಟೋಪಾಧಿಕೃತ ಭೇದವಿದ್ದರೂ ಸ್ವರೂಪೈಕ್ಯವಿದ್ದ ಮಾತ್ರದಿಂದಲೇ ಅನ್ಯೋನ್ಯ ಜ್ಞಾನಾದಿಗಳ ಅನುಸಂಧಾನ

* ಹಸ್ತಪಾದಾದಿಗಳು ಸಂಶ್ಲಿಷ್ಟೋಪಾಧಿಗಳು, ಅಂದರೆ ಒಂದೇ ಅವಯವಿಯ ಅವಯವಗಳು. ಒಂದೇ ಅವಯವಿಯ ಅವಯವಗಳಲ್ಲದ ಉಪಾಧಿಗಳು ವಿಶ್ಲಿಷ್ಟೋಪಾಧಿಗಳು. ಈ ವಿಷಯಗಳು ಉಪಾಧಿ ಖಂಡನ ಪು. ೧೧೪-೧೩ರಲ್ಲಿ ವಿಶದೀಕೃತಗಳಾಗಿವೆ,

ಕಂಡುಬಂದುದರಿಂದ ಸ್ವರೂಪೈಕ್ಯವೇ ಅನುಸಂಧಾನದಲ್ಲಿ ಪ್ರಯೋಜಕವು. ವಿಶ್ಲಿಷ್ಟೋಪಾಧಿಕೃತವಾದ ಭೇದವಿಲ್ಲದಿರುವುದು ಪ್ರಯೋಜಕವಲ್ಲವು. ಹೀಗೆ ನಿಶ್ಚಯವಾಗುವುದರಿಂದ ದೇವದತ್ತ, ಯಜ್ಞದತ್ತರಿಗೆ ಸ್ವರೂಪೈಕ್ಯವಿದ್ದರೂ ಉಪಾಧಿ ವಿಶ್ಲೇಷದಿಂದ (ವಿಶ್ಲಿಷ್ಟೋಪಾಧಿಕೃತ ಭೇದದಿಂದ) ಅನುಸಂಧಾನಾಭಾವರೂಪವಾದ ವಿಶೇಷವನ್ನು ಹೇಳಬಾರದು. ಅನುಸಂಧಾನವೇ ಆಗಬೇಕಾಗುವುದು ॥ ೩೧೯ ॥

ಈ ಪ್ರಕಾರ ಉಪಾಧಿಯು ಭೇದಕವೆಂದಂಗೀಕರಿಸಿ ಸುಖದುಃಖಾದಿವ್ಯವಸ್ಥೆಯೂ ಬದ್ಧಮುಕ್ತವ್ಯವಸ್ಥೆಯೂ ಪರರ ಪಕ್ಷದಲ್ಲಿ ಕೂಡುವುದಿಲ್ಲವೆಂದು ಉಕ್ತವಾಗಿದೆ. ಈಗ ಉಪಾಧಿಗೆ ಭೇದಕಾರಿತ್ವವೇ ಕೂಡುವುದಿಲ್ಲವೆಂದು ಪ್ರತಿಪಾದಿಸುತ್ತಾರೆ —

**ಮೂ ॥ (೧) ಕಿಂ ಚೋಪಾಧಿರಾತ್ಮನ ಏಕದೇಶಂ ಗ್ರಸತ್ಯುತ ಸರ್ವಮಾತ್ಮಾನಂ। (೨) ಏಕದೇಶಾಂಗೀಕಾರೇ ಸಾವಯವತ್ವಂ । (೩) ಸಾವಯವಸ್ಯ ಚಾನಿತ್ಯತ್ವಂ ತ್ವೈರಂಗೀಕೃತಂ । (೪) ಸರ್ವಗ್ರಾಸೇ ಚ ನೋಪಾಧಿರ್ಭೇದಕಃ ಸ್ಯಾತ್ ॥ ೩೨೦ ॥**

ಅ ॥ (೧) ಕಿಂ ಚ=ಮತ್ತು ಐಕ್ಯವಾದಿಗಳಿಗೆ ಬೇರೆ ದೂಷಣವೂ ಹೇಳಲ್ಪಡುತ್ತದೆ. ಉಪಾಧಿಃ=ಉಪಾಧಿಯು. ಆತ್ಮನಃ=ಬ್ರಹ್ಮನ ಅಥವಾ ಜೀವನ, ಏಕದೇಶಂ=ಒಂದು ಭಾಗವನ್ನು, ಗ್ರಸತಿ=ತನ್ನಲ್ಲಿ ಅಂತರ್ಭಾವಿಸಿಕೊಳ್ಳುತ್ತದೋ, ಉತ=ಅಥವಾ, ಸರ್ವಂ ಆತ್ಮಾನಂ=ಎಲ್ಲಾ ಆತ್ಮರನ್ನು, ಗ್ರಸತಿ ಕಿಂ=ತನ್ನಲ್ಲಿ ಅಂತರ್ಭಾವಿಸಿಕೊಳ್ಳುತ್ತದೋ, ಅಂದರೆ ಆತ್ಮನ ಏಕದೇಶದಿಂದಲಾಗಲೀ ಕೃತ್ಸ್ನ (ಸಂಪೂರ್ಣ) ಆತ್ಮನಿಂದಲಾಗಲೀ ಸಂಯುಕ್ತವಾಗುತ್ತದೋ (೨) ಏಕದೇಶಾಂಗೀಕಾರೇ=ಏಕದೇಶಗ್ರಾಸವನ್ನಂಗೀಕರಿಸಿದರೆ, ಸಾವಯವತ್ವಂ=(ಆತ್ಮನಿಗೆ) ಅವಯವಗಳಿಂದೊಡಗೂಡುವಿಕೆಯು, (ಪ್ರಸಕ್ತವಾಗುತ್ತದೆ.) (೩) ಸಾವಯವಸ್ಯ ಚ=ಅವಯವಗಳಿಂದೊಡಗೂಡಿರುವುದಕ್ಕೆ, ಅನಿತ್ಯತ್ವಂ=ಅನಿತ್ಯತ್ವವು, ತ್ವೈಃ=ನಾವು ಹೊರತಾದ ವಾದಿಗಳಿಂದ, ಅಂಗೀಕೃತಂ=ಅಂಗೀಕರಿಸಲ್ಪಟ್ಟದೆ. (೪) ಸರ್ವಗ್ರಾಸೇ ಚ=ಸರ್ವಕ್ಕೂ ಗ್ರಾಸವೆಂದಂಗೀಕರಿಸಿದರೆ, ಉಪಾಧಿಃ=ಉಪಾಧಿಯು, ಭೇದಕಃ=ಭೇದಕಾರಿಯು, ನ ಸ್ಯಾತ್=ಆಗಲಾರದು.

ತಾ ॥ (1) ಉಪಾದಾನ ಹೊರತಾದ ಏಕದೇಶವು ನಮ್ಮ ಮತದಲ್ಲಿ ಅಂಗೀಕೃತವಾಗಿದೆ. ಪಟಾದಿಗಳಿಗೆ ತಂತು ಮೊದಲಾದುವುಗಳು ಉಪಾದಾನವು. ದೇಹಕ್ಕೆ ಕರಚರಣಾದಿಗಳು ಏಕದೇಶಗಳು, ಪರರು ಉಪಾದಾನವ್ಯತಿರಿಕ್ತವಾದ ಏಕದೇಶವನ್ನು ಅಂಗೀಕರಿಸದಿರುವುದರಿಂದ ಆತ್ಮನಲ್ಲಿ ಉಪಾಧಿಸಂಯೋಗವು ಏಕದೇಶದಲ್ಲಿರುವುದೆಂದಂಗೀಕರಿಸಿದರೆ ಆತ್ಮನಿಗೆ ಉಪಾದಾನಕಾರಣವದೆ ಎಂದೇ ಅಂಗೀಕೃತವಾದಹಾಗಾಯಿತು. ಆದಕಾರಣ ಪರರ ಪಕ್ಷದಲ್ಲಿಯೂ ಅನಿತ್ಯತ್ವವು ಪ್ರಸಕ್ತವಾಗುವುದು. ಆತ್ಮನಿಗೆ ಅನಿತ್ಯತ್ವವಿದ್ದರೆ ಮುಕ್ತಿಯೇ ಇಲ್ಲದಿರುವುದರಿಂದ ಪುನಃ ಬದ್ಧಮುಕ್ತವ್ಯವಸ್ಥೆಯು ಇಲ್ಲವೆಂದೇ ಆಗುವುದು. (2) ಆತ್ಮನಿಗೆ ಏಕದೇಶದಲ್ಲಿ ಉಪಾಧಿಸಂಬಂಧವನ್ನು ಹೇಳಿದರೆ ಹಿಂದೆ ಹೇಳಿದಪ್ರಕಾರ ಅನಿತ್ಯತ್ವವು ಪ್ರಸಕ್ತವಾಗುವುದರಿಂದ ಉಪಾಧಿಯು ಸರ್ವಾಂಶವನ್ನು ವ್ಯಾಪಿಸಿಕೊಂಡು ಉಂಟೆಂದೇ ಹೇಳಬೇಕಾಗುವುದು. ಹೀಗೆ ಹೇಳಿದರೆ ಪಟದಲ್ಲಿ ಸರ್ವಾಂಶವನ್ನು ವ್ಯಾಪಿಸಿಕೊಂಡ ಕಾವಿಯೆಂಬ ಉಪಾಧಿಯು ಹೇಗೆ ಪಟಕ್ಕೆ ಭೇದಕವಾಗುವುದಿಲ್ಲವೋ ಹಾಗೆಯೇ ಆತ್ಮನನ್ನು ವ್ಯಾಪಿಸಿಕೊಂಡ ಉಪಾಧಿಯು ಆತ್ಮನಿಗೆ ಭೇದಕವಾಗಲಾರದು ॥ ೩೨೦ ॥

ಪುನಃ ಶಂಕಿಸುತ್ತಾರೆ— ಉಪಾಧಿಸಂಯೋಗವು ಅಂಶದಲ್ಲಿರುವುದೆಂದೇ ಒಪ್ಪುತ್ತೇವೆ. ಆ ಅಂಶವು ಸ್ವಾಭಾವಿಕವೆಂದು ಒಪ್ಪುವುದಿಲ್ಲ. ಆದುದರಿಂದ ಹಿಂದೆ ಹೇಳಿದ ಅನಿತ್ಯತ್ವಾದಿದೋಷಗಳು ಬರುವುದಿಲ್ಲ. ಮತ್ತೆ ಆ ಅಂಶವು ಔಪಾಧಿಕವೆಂದೇ ಹೇಳುತ್ತೇವೆ ಎಂದರೆ, ಈ ಔಪಾಧಿಕಾಂಶವು ಇದೇ ಉಪಾಧಿಸಂಯೋಗದಿಂದ ಮಾಡಲ್ಪಟ್ಟದ್ದೋ, ಅಥವಾ ಬೇರೆ ಉಪಾಧಿಸಂಯೋಗದಿಂದ ಮಾಡಲ್ಪಟ್ಟದ್ದೋ? ಎನೇದ್ದನ್ನು ದೂಷಿಸುತ್ತಾರೆ —

**ಮೂ ॥ (೧) ಉಪಾಧಿಕೃತಾಂಶಕಲ್ಪನೇ ತದುಪಾಧಿಕೃತತ್ವೇ ಆತ್ಮಾಶ್ರಯತ್ವಂ। (೨) ಉಪಾಧ್ಯಂತರಕಲ್ಪನೇಽನವಸ್ಥಾ ॥ ೩೨೧ ॥**

ಅ ॥ (೧) ಉಪಾಧಿಕೃತಾಂಶಕಲ್ಪನೇ=ಉಪಾಧಿಯಿಂದ ಮಾಡಲ್ಪಟ್ಟ ಅಂಶವನ್ನು ಕಲ್ಪಿಸಿದರೆ, ತದುಪಾಧಿಕೃತತ್ವೇ=ಅಂಶವು ಆ ಉಪಾಧಿಸಂಯೋಗದಿಂದಲೇ ಮಾಡಲ್ಪಟ್ಟರೆ, ಆತ್ಮಾಶ್ರಯತ್ವಂ=(ಈ ಉಪಾಧಿಸಂಯೋಗವು ಸಿದ್ಧಿಸುವುದಕ್ಕಾಗಿ ಈ ಉಪಾಧಿಸಂಯೋಗವನ್ನೇ ಅಪೇಕ್ಷಿಸಿರುವುದರಿಂದ) ಆತ್ಮಾಶ್ರಯತ್ವವು. (೨ನೇದ್ದನ್ನು ದೂಷಿಸುತ್ತಾರೆ.) ಉಪಾಧ್ಯಂತರ-ಕಲ್ಪನೇ=ಬೇರೆ ಉಪಾಧಿಗಳನ್ನು ಕಲ್ಪಿಸಿದರೆ, ಅನವಸ್ಥಾ =(ಆ ಉಪಾಧಿಸಂಯೋಗವೂ ಔಪಾಧಿಕ ಅಂಶದಲ್ಲಿದ್ದುದರಿಂದ ಬೇರೆ ಉಪಾಧಿಸಂಯೋಗವನ್ನಪೇಕ್ಷಿಸಿರುವುದರಿಂದ) ಅನವಸ್ಥೆಯು. (ಎರಡು ಉಪಾಧಿಸಂಯೋಗವನ್ನು ಅಂಗೀಕರಿಸಿದರೆ ಅನ್ಯೋನ್ಯಾಶ್ರಯತ್ವವು. ಮೂರು ನಾಲ್ಕು ಮೊದಲಾದುವುಗಳನ್ನಂಗೀಕರಿಸಿದರೆ ಚಕ್ರಕಾಶ್ರಯವು) ॥ ೩೨೧ ॥

ಚೈತನ್ಯವೇ ಬ್ರಹ್ಮ, ಈಶ್ವರ ಜೀವರೆಂಬ ಮೂರು ಸ್ಕಂಧವುಳ್ಳದ್ದೆಂದು ವಾದಿಸುವವರಿಗೂ ಭೇದವೇಇಲ್ಲದಿರುವುದರಿಂದ ಇಷ್ಟವಾದ ಬ್ರಹ್ಮ, ಈಶ್ವರ ಜೀವವ್ಯವಸ್ಥೆಯೂ ಸಿದ್ಧಿಸುವುದಿಲ್ಲ. ಬ್ರಹ್ಮೇಶ್ವರರಿಗೆ ಸ್ವಾಭಾವಿಕಭೇದವಿಲ್ಲದಿದ್ದರೂ ಔಪಾಧಿಕಭೇದವದೆ. ಆದಕಾರಣ ಬ್ರಹ್ಮ, ಈಶ್ವರ ವ್ಯವಸ್ಥೆಯು ಸಿದ್ಧಿಸುವುದೆಂದರೆ —

**ಮೂ ॥ (೧) ನ ಚೇಶ್ವರಸ್ಯ ಸರ್ವಗತತ್ವಾದೌಪಾಧಿಕಭೇದೋ ಬ್ರಹ್ಮಣಾ ಭವತಿ। (೨) ನ ಹಿ ದೇಶತಃ ಕಾಲತಶ್ಚಾಪರಿಚ್ಛಿನ್ನಯೋರೌಪಾಧಿಕ-ಭೇದೋ ದೃಷ್ಟಃ। (೩) ಸರ್ವೋಪಾಧಿಗತತ್ವಾಚ್ಚೈಕಸ್ಯೈವೇಶ್ವರಸ್ಯ ಭೇದಸ್ಯ ಮಿಥ್ಯಾತ್ವಾದ್ಧಸ್ತಪಾದಾದಿಭೇದೇಽಪಿ ಭೋಕ್ತುರೇಕತ್ವವ-ತ್ಸರ್ವ ಸುಖದುಃಖಾದಿ ಭೋಕ್ತೃತ್ವಮೀಶ್ವರಸ್ಯೈವ ಸ್ಯಾತ್ ॥ ೩೨೨ ॥**

ಅ ॥ (೧) ಈಶ್ವರಸ್ಯ=ಈಶ್ವರನಿಗೆ, ಸರ್ವಗತತ್ವಾತ್=ಸರ್ವತ್ರ ವ್ಯಾಪ್ತಿಯಿದ್ದುದರಿಂದ, ಬ್ರಹ್ಮಣಾ=ಪರಬ್ರಹ್ಮನಿಂದ, ಔಪಾಧಿಕಭೇದಃ=ಉಪಾಧಿಕೃತವಾದ ಭೇದವು, ನ ಚ ಭವತಿ= ಆಗುವುದಿಲ್ಲ. (ಅಂದರೆ ಈಶ್ವರನಿಗೆ ಪರಬ್ರಹ್ಮನಿಂದ ಔಪಾಧಿಕ ಭೇದವು ಸಂಭವಿಸಿದ್ದರೆ ಈ ವ್ಯವಸ್ಥೆಯು ಸಿದ್ಧಿಸಬಹುದಿತ್ತು. ಹೀಗೆ ಇಲ್ಲ. ಇಬ್ಬರೂ ಸರ್ವತ್ರ ವ್ಯಾಪ್ತರು, ಅನಾದಿ ನಿತ್ಯರೂ ಆಗಿರುತ್ತಾರೆ.) (೨) ದೇಶತಃ ಕಾಲತಶ್ಚ ಅಪರಿಚ್ಛಿನ್ನಯೋಃ=ದೇಶದಿಂದಲೂ, ಕಾಲದಿಂದಲೂ ಪರಿಚ್ಛಿನ್ನರಾಗದಿರುವವರಿಗೆ. ಔಪಾಧಿಕಭೇದಃ=ಉಪಾಧಿಕೃತವಾದ ಭೇದವು, ನ ಹಿ ದೃಷ್ಟಃ= ಕಾಣಲ್ಪಡಲಿಲ್ಲ (ಅಂದರೆ ಉಪಾಧಿಯು ಭೇದಕವೆನ್ನುವ ಪಕ್ಷದಲ್ಲಿಯೂ ಉಪಹಿತವಾದುದಕ್ಕೆ ದೇಶದಿಂದಾಗಲೀ, ಕಾಲದಿಂದಾಗಲೀ ಭೇದವನ್ನು ಮಾಡಬಹುದು. ಇದು ಎರಡೂ ಕೂಡುವುದಿಲ್ಲ. ಇಬ್ಬರಿಗೂ ಸರ್ವತ್ರ ವ್ಯಾಪ್ತಿಯಿದ್ದುದರಿಂದ ದೇಶತಃ ಪರಿಚ್ಛೇದವಿಲ್ಲವು. ಇಬ್ಬರೂ ನಿತ್ಯ

ರಾದುದರಿಂದ ಅವರಿಗೆ ಕಾಲತಃ ಪರಿಚ್ಛೇದವಿಲ್ಲವು. 'ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ' ಇತ್ಯಾದಿ ಶ್ರುತಿಗಳಿಂದ ಈಶ್ವರನಿಗೆ ಸರ್ವಗತತ್ವಾದಿಗಳು ಸಿದ್ಧಗಳಾಗಿವೆ. ದೇಶಾವಚ್ಛಿನ್ನತ್ವ, ಕಾಲಾವಚ್ಛಿನ್ನತ್ವರೂಪಪ್ರಕಾರಗಳನ್ನು ಅಂಗೀಕರಿಸದೆ ಔಪಾಧಿಕಭೇದವನ್ನು ಕಲ್ಪಿಸಿದರೆ ಅದೃಷ್ಟವಾದುದನ್ನು ಕಲ್ಪಿಸಬೇಕಾಗುವುದು. ಮತ್ತು ಬ್ರಹ್ಮ, ಈಶ್ವರರ ಭೇದವು ಅಪ್ರಾಮಾಣಿಕವಾದುದರಿಂದ ಆ ವ್ಯವಸ್ಥೆಯನ್ನು ಪರಿಪಾಲಿಸುವುದೇ ಅಯುಕ್ತವು.) (೩) ಏಕಸ್ಯೈವ ಈಶ್ವರಸ್ಯ= ಒಬ್ಬ ಈಶ್ವರನಿಗೇನೇ, ಸರ್ವೋಪಾಧಿಗತತ್ವಾಚ್ಚ=ಎಲ್ಲಾ ಉಪಾಧಿಗಳಲ್ಲಿ ಇರುವಿಕೆಯಿದ್ದುದರಿಂದ, (ಅಂದರೆ ಒಬ್ಬ ಈಶ್ವರನೇ ಎಲ್ಲಾ ಉಪಾಧಿಗಳಲ್ಲಿದ್ದುದರಿಂದ) ಭೇದಸ್ಯ ಮಿಥ್ಯಾತ್ವಾತ್=ಭೇದವು ಇಲ್ಲದಿರುವುದರಿಂದ, ಹಸ್ತಪಾದಾದಿ ಭೇದೇಽಪಿ = ಕರ, ಚರಣಾದಿಗಳಿಗೆ ಭೇದವಿದ್ದರೂ, ಭೋಕ್ತುಃ = ಅನುಭವಿಸುವವನಿಗೆ, ಏಕತ್ವವತ್ = ಏಕತ್ವವಿದ್ದಂತೆಯೇ, ಈಶ್ವರಸ್ಯೈವ= ಈಶ್ವರನಿಗೇನೇ, ಸರ್ವಸುಖದುಃಖಾದಿಭೋಕ್ತೃತ್ವಂ = ಸರ್ವೋಪಾಧಿನಿಮಿತ್ತವಾದ ಸುಖದುಃಖಾದಿಭೋಕ್ತೃತ್ವವು, ಸ್ಯಾತ್=ಆಗುವುದು

ತಾ || (1) ಆಯಾಯ ಉಪಾಧಿಗಳಿಗೆ ಅಭಿಮಾನಿಯಾದವನು ದುಃಖಾದಿಗಳನ್ನನುಭವಿಸುವವನು. ಈಶ್ವರನಾದರೂ ನಿಯಾಮಕನಾಗಿ ಎಲ್ಲಾ ಉಪಾಧಿಗಳಲ್ಲಿದ್ದವನಾದಾಗ್ಯೂ ಭೋಕ್ತನಲ್ಲ, ಎಂದರೆ ಈಶ್ವರನಿಗೆ ಜೀವನಿಂದ ಭೇದವೇ ಇಲ್ಲವು, ಇಲ್ಲದಿದ್ದರೆ ದ್ವೈತವೇ ಪ್ರಸಕ್ತವಾಗುವುದು. ಸ್ವಾಭಾವಿಕವಾಗಿ ಜೀವೇಶ್ವರರಿಗೆ ಭೇದವಿಲ್ಲದಿದ್ದರೂ ಔಪಾಧಿಕಭೇದವಿದೆ. ಅದರಿಂದ ಜೀವರು ದುಃಖಾದಿಗಳನ್ನನುಭವಿಸುವವರಾದಾಗ್ಯೂ ಈಶ್ವರನು ಹಾಗೆ ಅಲ್ಲವೆಂದರೆ ಕರಚರಣಾದಿಗಳಿಗೆ ಭೇದವಿದ್ದರೂ ಭೋಕ್ತನಿಗೆ ಹೇಗೆ ಭೇದವಿಲ್ಲವೋ ಹಾಗೆಯೇ ಒಬ್ಬ ಈಶ್ವರನೇ ಎಲ್ಲಾ ಸುಖದುಃಖಾದಿಗಳನ್ನನುಭವಿಸಬೇಕಾಗುವನು || ೩೨ ||

ಜೀವಬ್ರಹ್ಮವ್ಯವಸ್ಥೆಯೂ ಅದ್ವೈತಿಗಳ ಮತದಲ್ಲಿ ಸಿದ್ಧಿಸುವುದಿಲ್ಲವೆಂದು ನಿರೂಪಿಸುತ್ತಾರೆ —

**ಮೂ || ದೇಶತಃ ಕಾಲತಶ್ಚಾಪರಿಚ್ಛಿನ್ನಯೋರೌಪಚಾರಿಕಭೇದಾಭಾವಾದೇವ ದುಃಖಿನೋಽನ್ಯಚ್ಛುದ್ಧಂ ಬ್ರಹ್ಮ ನ ಸಿದ್ಧ್ಯತಿ । ಅತಃ ಸ್ವಾಭಾವಿಕಸ್ಸಂಸಾರ ಇತ್ಯನಿವೃತ್ತಿರೇವ ಸ್ಯಾತ್ || ೩೩ ||**

ಅ || (ಬ್ರಹ್ಮ ಈಶ್ವರರಿಗೆ ಸ್ವಾಭಾವಿಕ ಭೇದವಿಲ್ಲದಿದ್ದರೂ ಔಪಾಧಿಕಭೇದವಿದ್ದುದರಿಂದ ಈಶ್ವರನಿಗೆ ದುಃಖವಿದ್ದರೂ ಬ್ರಹ್ಮನಿಗೆ ದುಃಖವಿಲ್ಲವೆಂದರೆ) ದೇಶತಃ ಕಾಲತಶ್ಚ=ದೇಶದಿಂದಲೂ ಕಾಲದಿಂದಲೂ, ಅಪರಿಚ್ಛಿನ್ನಯೋಃ = ಪರಿಚ್ಛೇದವಿಲ್ಲದಿರುವವರಿಗೆ, ಔಪಚಾರಿಕ ಭೇದಾಭಾವಾದೇವ=ಔಪಾಧಿಕ ಭೇದವಿಲ್ಲದಿರುವುದರಿಂದಲೇ, ದುಃಖಿನಃ ಅನ್ಯತ್=ದುಃಖವುಳ್ಳವನಿಂದ ಭಿನ್ನನಾದ, ಶುದ್ಧಂ ಬ್ರಹ್ಮ=ಶುದ್ಧಬ್ರಹ್ಮನು, ನ ಸಿದ್ಧ್ಯತಿ=ಸಿದ್ಧಿಸುವುದಿಲ್ಲ. ಅತಃ= ಆದಕಾರಣ, ಸ್ವಾಭಾವಿಕಃ ಸಂಸಾರಃ=ಸಂಸಾರವು ಸ್ವಾಭಾವಿಕವೇ, ಇತಿ=ಹೀಗೆ, ಅನಿವೃತ್ತಿರೇವ=ನಿವೃತ್ತಿಯಿಲ್ಲವೆಂದೇ, ಸ್ಯಾತ್=ಆಗಬೇಕಾಗುವುದು.

ತಾ || ಈಶ್ವರನಿಗೆ ಹಿಂದಿನ ನ್ಯಾಯದಿಂದ ದುಃಖಾದಿಗಳು ಪ್ರಾಪ್ತಗಳಾಗುವವು. ಈಶ್ವರನಿಂದ ಅಭೇದವಿದ್ದಪ್ರಯುಕ್ತ ಬ್ರಹ್ಮನಿಗೂ ದುಃಖವು ಪ್ರಾಪ್ತವೇ ಆಗುತ್ತದೆ. ಅಂತೂ ದುಃಖವಿಲ್ಲದಿರುವ ಶುದ್ಧ ಬ್ರಹ್ಮನೇ ಸಿದ್ಧಿಸಲಾರನು. ಪೂರ್ವದಲ್ಲಿ ಜೀವರಲ್ಲಿರುವ ದುಃಖದಿಂದ ಬ್ರಹ್ಮನಿಗೂ ದುಃಖವಿದ್ದುದರಿಂದ ಜೀವ ಬ್ರಹ್ಮ ವ್ಯವಸ್ಥೆಯು ಸಿದ್ಧಿಸುವುದಿಲ್ಲವೆಂದುಕ್ತವಾಗಿದೆ.

ಈಗ ಈಶ್ವರರಲ್ಲಿರುವ ದುಃಖದಿಂದ ಬ್ರಹ್ಮನೂ ದುಃಖಿಯಾಗುವನು ಎಂದು ಹೇಳಿದ್ದಾಗಿರುತ್ತದೆ. (2) ಬ್ರಹ್ಮನಿಗೆ ಆಗತಕ್ಕ ದುಃಖಾದಿರೂಪವಾದ ಸಂಸಾರವು ಸ್ವಾಭಾವಿಕವೇ ಆಗುವುದು. ಶುದ್ಧನಲ್ಲಿರುವುದು. ನೈಮಿತ್ತಿಕವಾಗಲಾರದು. ಸಂಸಾರವು ಸ್ವಾಭಾವಿಕವಾದುದರಿಂದ ನಿವೃತ್ತಿಯೇ ಇಲ್ಲವೆಂದಾಗುವುದು. ಇಲ್ಲದಿದ್ದರೆ ತನ್ನ ಸ್ವರೂಪವೂ ನಿವೃತ್ತವಾಗಬೇಕಾಗುವುದು. ಅಂತೂ ಬದ್ಧಮುಕ್ತವ್ಯವಸ್ಥೆಯು ಸಿದ್ಧಿಸಲಿಕ್ಕೆ ಇಲ್ಲ ॥ ೩೨೩ ॥

**ಮೂ ॥ (೧) ಕಿಂ ಚ ವಿಶಿಷ್ಟಸ್ಯ ಶುದ್ಧಸ್ಯ ವಾ ಸಂಸಾರಃ । (೨) ಶುದ್ಧಸ್ಯ ಸಂಸಾರ ಇತ್ಯುಕ್ತೇ ಸ್ವವ್ಯಾಹತಿಃ । (೩) ವಿಶಿಷ್ಟಸ್ಯೇತ್ಯುಕ್ತೇ ವಿಶಿಷ್ಟೋಽನ್ಯಃ ಸ ಏವ ವಾ । (೪) ಸ ಏವ ಚೇದುಕ್ತೋ ದೋಷಃ । (೫) ಅನ್ಯಶ್ಚೇನ್ನಿತ್ಯೋಽನಿತ್ಯೋ ವಾ । (೬) ಅನಿತ್ಯಶ್ಚೇನ್ನಾಶ ಏವ ತಸ್ಯ ನ ಮೋಕ್ಷಃ । (೭) ನಿತ್ಯತ್ವೇ ಚ ಭೇದಸ್ಯ ಸತ್ಯತ್ವಂ ಮೋಕ್ಷೇಽಪಿ ತಸ್ಯ ಭಾವಾತ್ ॥ ೩೨೪ ॥**

ಅ ॥ (೧) ಕಿಂ ಚ=ಮತ್ತು, ವಿಶಿಷ್ಟಸ್ಯ=ಉಪಾಧಿಯುಕ್ತನಾದ ಜೀವನಿಗೆ, ಸಂಸಾರಃ=ದುಃಖಾದಿರೂಪಸಂಸಾರವೋ, ವಾ=ಅಥವಾ, ಶುದ್ಧಸ್ಯ=ಭೂತಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲಗಳಲ್ಲಿಯೂ ತಾನು ಹೊರತಾದದ್ದು ಇಲ್ಲದಿರುವ ಬ್ರಹ್ಮನಿಗೆ, ಸಂಸಾರಃ=ದುಃಖಾದಿರೂಪವಾದುದು ಸಂಸಾರವೋ. (೨) ಶುದ್ಧಸ್ಯ=ಶುದ್ಧ ಬ್ರಹ್ಮನಿಗೆ, ಸಂಸಾರಃ=ದುಃಖಾದಿಯು, ಇತಿ ಉಕ್ತೇ=ಹೀಗೆ ಹೇಳಿದರೆ, ಸ್ವವ್ಯಾಹತಿಃ=ಸ್ವವಚನವಿರೋಧವು (ಬರುವುದು.) (೩) ವಿಶಿಷ್ಟಸ್ಯ ಇತ್ಯುಕ್ತೇ=ವಿಶಿಷ್ಟನಿಗೆ (ಸಂಸಾರವು) ಎಂದು (ಪರರು) ಹೇಳಿದರೆ, ವಿಶಿಷ್ಟಃ=ಸಂಸಾರಕ್ಕೆ ಆಧಾರನಾದ ವಿಶಿಷ್ಟನು, ಅನ್ಯಃ=ಶುದ್ಧನಿಂದ ಭಿನ್ನನೋ, ಸ ಏವ ವಾ=ಶುದ್ಧನೆಯೋ, (ಹೀಗೆ ಕೇಳಬೇಕು.) (೪) ಸ ಏವ ಚೇತ್=ಶುದ್ಧನೇ ಆಗಿದ್ದರೆ, ಉಕ್ತೋ ದೋಷಃ=ವ್ಯಾಹತಿಯೇ. (ಅಂದರೆ ವಿಶಿಷ್ಟನು ಶುದ್ಧಸ್ವರೂಪನೇ, ಎನ್ನುವುದೊಂದು ವ್ಯಾಹತಿಯು, ಪರರು ವ್ಯಾಹತಭಾಷಿಗಳೇ ಆದುದರಿಂದ ಪ್ರಶ್ನೆಯು ಕೂಡಬಹುದು. ವಿಶಿಷ್ಟನು ಶುದ್ಧಸ್ವರೂಪನಾದರೆ ಶುದ್ಧನಿಗೇನೆ ಸಂಸಾರವು ಎಂದುಕ್ತವಾಯಿತು. ಅದರಿಂದ ಪುನಃ ಬೇರೆಯೊಂದು ವ್ಯಾಹತಿಯು.) (೫) ಅನ್ಯಶ್ಚೇತ್=ಆ ವಿಶಿಷ್ಟನು ಶುದ್ಧನಿಂದ ಭಿನ್ನನಾಗಿದ್ದರೆ, ನಿತ್ಯಃ=ನಿತ್ಯನೋ, ಅನಿತ್ಯೋ ವಾ=ಅನಿತ್ಯನೋ. (೬) ಅನಿತ್ಯಶ್ಚೇತ್=ಅನಿತ್ಯನಾದರೆ, ನಾಶ ಏವ=ನಾಶವೇ ಬರುವುದು. ತಸ್ಯ=ಆತನಿಗೆ (ವಿಶಿಷ್ಟನಿಗೆ), ನ ಮೋಕ್ಷಃ=(ಅನಿತ್ಯತ್ವವಿದ್ದುದರಿಂದಲೇ) ಮುಕ್ತಿಯು ಆಗದೆ ಹೋಗುವುದು (ಅಂದರೆ ಜೀವನು ಅನಿತ್ಯನಾಗಿದ್ದರೆ ಆಗ ಎಲ್ಲಾ ಉಪಾಧಿಗಳು ಹೊರಟುಹೋದೊಡನೆಯೇ ನಾಶವನ್ನು ಹೊಂದಿಯಾನು. ವಿನಾಶಕ್ಕೆ ಬೇರೆ ಕಾರಣವಿಲ್ಲ. ಅಂತೂ ನಿತ್ಯವಾದ ಪುರುಷಾರ್ಥವನ್ನು ಹೊಂದದೆ ಹೋಗುವನು )(೭)ನಿತ್ಯತ್ವೇ=(ವಿಶಿಷ್ಟನಿಗೆ) ನಿತ್ಯತ್ವವಿದ್ದರೆ, ಭೇದಸ್ಯ=ಭೇದಕ್ಕೆ, ಸತ್ಯತ್ವಂ=ಸ್ವಾಭಾವಿಕತ್ವವು, (ಪ್ರಸಕ್ತವಾಗುವುದು)ಮೋಕ್ಷೇಽಪಿ=ಮುಕ್ತಿಯಲ್ಲಿಯೂ, ತಸ್ಯ ಭಾವಾತ್=(ಎಲ್ಲಾ ಉಪಾಧಿಗಳು ಮುಕ್ತಿಯಲ್ಲಿಲ್ಲವಿದ್ದರೂ ಬ್ರಹ್ಮನಿಂದ ಭಿನ್ನನಾದ) ಆ ವಿಶಿಷ್ಟಜೀವನು ನಿತ್ಯನಾಗಿದ್ದುದರಿಂದ ॥ ೩೨೪ ॥

ಸಂಸಾರಾಧಾರನು ಜೀವನೇ, ಬ್ರಹ್ಮನಲ್ಲ ಅವನು ಬ್ರಹ್ಮನಿಂದ ಭಿನ್ನನೂ ನಿತ್ಯನೂ ಆಗಿರುತ್ತಾನೆ. ಜೀವಸ್ವರೂಪಮಾತ್ರಕ್ಕೆ ಬ್ರಹ್ಮನಿಂದ ಅಭೇದವು. ಭೇದವು ಔಪಾಧಿಕವೇ. ಯಾವ ದೋಷವೂ ಇಲ್ಲವು. ಉಪಾಧಿಯು ಹೊರಟುಹೋದೊಡನೆ ಅವನು ಬ್ರಹ್ಮಸ್ವರೂಪನಾಗಿಯೇ ಮುಕ್ತಿಯಲ್ಲಿದ್ದುದರಿಂದ ಭೇದಕ್ಕೆ ಸ್ವಾಭಾವಿಕತ್ವವು ಪ್ರಾಪ್ತವಾಗುವುದಿಲ್ಲ, ಎಂದರೆ—

**ಮೂ ॥ (೧) ಸ್ವರೂಪಮಾತ್ರಸ್ಯಾಭೇದ ಉಪಾಧಿಭಿನ್ನ ಏವೇತ್ಯಂಗೀಕಾರೇ ಸ್ವರೂಪಮೇವೋಪಾಧಿಸಂಬದ್ಧಮಿತಿ ನ ತಸ್ಯ ಶುದ್ಧತ್ವಂ । (೨) ಅಶುದ್ಧಸ್ವಭಾವಸ್ಯ ನ ಕದಾಚಿಚ್ಛುದ್ಧತ್ವಮಿತಿ ಚ ತತ್ಪಕ್ಷಃ ॥ ೩೨೫ ॥**

ಅ ॥ ಸ್ವರೂಪಮಾತ್ರಸ್ಯ=(ಜೀವಬ್ರಹ್ಮರ) ಸ್ವರೂಪಮಾತ್ರಕ್ಕೆ, ಅಭೇದಃ=ಅಭೇದವು, ಉಪಾಧಿಭಿನ್ನಃ ಏವ ಇತ್ಯಂಗೀಕಾರೇ = ಉಪಾದಿಯಿಂದಲೇ (ಜೀವನು ಬ್ರಹ್ಮನಿಂದ) ಭಿನ್ನನು ಎಂದಂಗೀಕರಿಸಿದರೆ, ಸ್ವರೂಪಮೇವ ಉಪಾಧಿಸಂಬದ್ಧಮಿತಿ = ಬ್ರಹ್ಮಸ್ವರೂಪವೇ ಉಪಾಧಿ ಸಂಬದ್ಧವಾದಕಾರಣ, ತಸ್ಯ=ಆ ಬ್ರಹ್ಮನಿಗೆ, ಶುದ್ಧತ್ವಂ=ಶುದ್ಧತ್ವವು, ನ ಸ್ಯಾತ್=ಆಗಲಾರದು. (೨) (ಬ್ರಹ್ಮನಿಗೆ ಶುದ್ಧತ್ವವು ಬೇಡ. ಉಪಾಧಿಯು ಹೊರಟುಹೋದೊಡನೆಯೇ ಶುದ್ಧತ್ವ ವಾಗುವುದೆಂದರೆ,) ಅಶುದ್ಧಸ್ವಭಾವಸ್ಯ=ಶುದ್ಧಸ್ವಭಾವವಿಲ್ಲದಿರುವವನಿಗೆ, ಕದಾಚಿತ್=ಯಾವಾ ಗಲೂ, ಶುದ್ಧತ್ವಂ=ಶುದ್ಧತ್ವವು, ನ=ಪ್ರಾಪ್ತವಾಗಲಾರದು. ಇತಿ ತತ್ಪಕ್ಷಶ್ಚ=ಹೀಗೆ ಆವರ ಪಕ್ಷವೂ ಕೂಡ, ನಮ್ಮ ಪಕ್ಷಮಾತ್ರವಲ್ಲ.

ತಾ ॥ (1) ಜೀವರ ಭೇದಕ್ಕೆ ಕಾರಣವಾದ ಉಪಾಧಿಯು ಜೀವಸಂಬದ್ಧವಾಗಲೀ, ಬ್ರಹ್ಮಸಂಬದ್ಧವಾಗಲೀ ಆಗಬೇಕು. ಅನ್ಯೋನ್ಯಾಶ್ರಯದೋಷ ಬರುವುದರಿಂದ ೧ನೇದ್ದು ಕೂಡಲಾರದು. ೨ನೇ ಕಲ್ಪದಲ್ಲಿಯೂ (೧) ಕೇವಲ ಬ್ರಹ್ಮಸ್ವರೂಪವು ಉಪಾಧಿ ಸಂಬದ್ಧವೋ, (೨) ಕಾರಣಾಂತರದಿಂದ ಯುಕ್ತವಾದ ಬ್ರಹ್ಮಸ್ವರೂಪವು ಉಪಾಧಿಸಂಬದ್ಧವೋ. ೨ನೇದ್ದು ಕೂಡಲಾರದು. ಕಾರಣಾಂತರಸಹಿತವಾದ ಉಪಾಧಿಸಂಬದ್ಧವಾದ ಬ್ರಹ್ಮಸ್ವರೂಪಕ್ಕೆ ಬೇರೆ ಕಾರಣವಿಲ್ಲವು. ಇದ್ದರೂ ಅನವಸ್ಥಾದೋಷ ಬರುವುದು. ೧ನೇ ಕಲ್ಪದಲ್ಲಿ ನಿಮಿತ್ತವಿಲ್ಲದೇನೇ ಬ್ರಹ್ಮಸ್ವರೂಪವೇ ಉಪಾಧಿಸಂಬದ್ಧವಾದ ಕಾರಣ ಬ್ರಹ್ಮನಿಗೆ ಶುದ್ಧತ್ವವೇ ಇಲ್ಲವೆಂದಾಗುವುದು. (2) ಉಪಾಧಿಯು ನಿರ್ನಿಮಿತ್ತವಾಗಿ ಬ್ರಹ್ಮನನ್ನು ಸಂಬಂಧಿಸಿಕೊಂಡಿದೆಂದಗೀಕರಿಸಿದರೆ ಬ್ರಹ್ಮನು ಸ್ವಾಭಾವಿಕವಾಗಿಯೇ ಉಪಾಧಿವಿಶಿಷ್ಟನೆಂದಂಗೀಕರಿಸಬೇಕಾಗುವುದು. ಸ್ವರೂಪಕ್ಕೆ ನಾಶವಿಲ್ಲದಿರಲು ಸ್ವಾಭಾವಿಕಕ್ಕೂ ನಾಶವಿಲ್ಲವೆನ್ನುವುದು ಸರ್ವರಿಗೂ ಸಮ್ಮತವಾದುದರಿಂದ ಯಾವಾಗಲೂ ಬ್ರಹ್ಮನಿಗೆ ಶುದ್ಧತ್ವವಿಲ್ಲವೆಂದು ಪ್ರಾಪ್ತವಾಗುವುದು ॥ ೩೨೫ ॥

ಮಾಯಾವಾದಿಗಳು ಹೇಳುವರು — ಸುಖದುಃಖಾದಿಗಳ ವ್ಯವಸ್ಥೆಗಳು ಸಿದ್ಧಿಸುವುದಿಲ್ಲ ವೆಂಬುವುದೇ ಮೊದಲಾದ ದೋಷಗಳು ನಮ್ಮ ಪಕ್ಷದಲ್ಲಿ ಪ್ರಸಕ್ತಗಳಾಗುವುದಿಲ್ಲ. ನಾವು ಉಪಾಧಿಗೆ ಮಿಥ್ಯಾತ್ವವನ್ನೇ ಅಂಗೀಕರಿಸಿರುತ್ತೇವೆ, ಎಂದಾಶಂಕಿಸಿದರೆ —

**ಮೂ ॥ (೧) ಉಪಾಧಿಮಿಥ್ಯಾತ್ವಾಂಗೀಕಾರೇ ಚಾನ್ಯೋನ್ಯಾಶ್ರಯತ್ವಾದಿ ದೋಷಾ ಉಕ್ತಾಃ । (೨) ನ ಚಾನಾದಿಕರ್ಮಭೇದಾದ್ಭೇದಃ । (೩) ಔಪಾಧಿಕಭೇದಸಿದ್ಧೌ ಕರ್ಮಭೇದಸಿದ್ಧಿಃ ತತ್ಸಿದ್ಧೌ ಚ ತತ್ಸಿದ್ಧಿ- ರಿತ್ಯನ್ಯೋನ್ಯಾಶ್ರಯತ್ವಾತ್ । (೪) ಅತೋಽನಂತದೋಷದುಷ್ಟತ್ವಾ- ದ್ಗ್ರಂಥಬಹುತ್ವಂ ಸ್ಯಾದಿತ್ಯೇವೋಪರಮ್ಯತೇ ॥ ೩೨೬ ॥**

ಅ ॥ (೧)ಉಪಾಧಿಮಿಥ್ಯಾತ್ವಾಂಗೀಕಾರೇ ಚ=ಉಪಾಧಿಗಳಿಗೆ ಮಿಥ್ಯಾತ್ವವನ್ನಂಗೀಕರಿಸಿ ದರೆ, ಅನ್ಯೋನ್ಯಾಶ್ರಯತ್ವಾದಿದೋಷಾಃ ಉಕ್ತಾಃ= ಅನ್ಯೋನ್ಯಾಶ್ರಯತ್ವ ಮೊದಲಾದ ದೋಷ ಗಳು ಹೇಳಲ್ಪಟ್ಟವೆ. (ಅಂತೂ ಉಪಾಧಿ ಮಿಥ್ಯಾತ್ವಪಕ್ಷವು ದುಷ್ಟವಾದಪ್ರಯುಕ್ತ ಎಲ್ಲಾ ಅದ್ವೈತಿಗಳೂ ಸತ್ಯೋಪಾಧಿಯಿಂದ ಮಾಡಲ್ಪಟ್ಟದ್ದೇ ಆದ ಭೇದವೂ ಸತ್ಯವೇ! ಸಂಸಾರವೂ

ಸತ್ಯವೆಂದೇ ಹೇಳಬೇಕು. ಅಂತೂ ವ್ಯವಸ್ಥೆಯು ಕೂಡುವುದೇ ಇಲ್ಲವು.) (೨) ಅನಾದಿಕರ್ಮಭೇದಾತ್ = ಪೂರ್ವಜನ್ಮಗಳಲ್ಲಿ ಮಾಡಲ್ಪಟ್ಟ ಕರ್ಮಗಳಿಗೆ ವ್ಯವಸ್ಥೆಯಿದ್ದುದರಿಂದ, ಭೇದಃ ನ ಚ=ಉಪಾಧಿಗಳಿಗೂ, ಸುಖಾದಿಗಳಿಗೂ ವ್ಯವಸ್ಥೆಯು ಕೂಡುವುದಿಲ್ಲ (ಅಂತೂ ಪೂರ್ವಜನ್ಮಗಳಲ್ಲಿ ಮಾಡಲ್ಪಟ್ಟ ಕರ್ಮಗಳ ವ್ಯವಸ್ಥೆಯಿಂದ ಈ ಜನ್ಮದಲ್ಲಿ ಉಪಾಧಿ ಮೊದಲಾದವುಗಳ ವ್ಯವಸ್ಥೆಯು ಕೂಡುವುದಿಲ್ಲವೆಂದುಕ್ತವಾಯಿತು.) (೩) (ಏಕೆ ಕೂಡುವುದಿಲ್ಲವೆಂದರೆ ಭೇದವಿಲ್ಲದಿರುವ ಚೈತನ್ಯದಲ್ಲಿ ಇವನ ಕರ್ಮದಿಂದ ಎಂದು ಹೇಳಲಿಕ್ಕೆ ಕರ್ಮವ್ಯವಸ್ಥೆಯೇ ಇಲ್ಲ. ಚೈತನ್ಯಕ್ಕೆ ಸ್ವಾಭಾವಿಕವಾಗಿ ಭೇದವಿಲ್ಲದಿದ್ದರೂ ಔಪಾಧಿಕಭೇದವದೆ ಅದನ್ನಾಶ್ರಯಿಸಿ ಕರ್ಮವ್ಯವಸ್ಥೆಯು ಸಿದ್ಧಿಸುವುದೆಂದರೆ ಈ ಕರ್ಮಭೇದಗಳ ವ್ಯವಸ್ಥಾಪನೆಯು ೧. ಕರ್ಮವ್ಯವಸ್ಥಾಕ್ಕೆ ನಿಮಿತ್ತವಾಗಿ ಯಾವುದು ಉಪಾಧಿವ್ಯವಸ್ಥೆಯು ಅಂಗೀಕರಿಸಲ್ಪಡುತ್ತದೋ, ಆ ಉಪಾಧಿವ್ಯವಸ್ಥೆಯಿಂದಲೇ ಚೈತನ್ಯಗಳಿಗೆ ಭೇದವು ಅಂಗೀಕರಿಸಲ್ಪಡುತ್ತದೋ ೨ ಅಥವಾ ಭೇದಕ್ಕೆ ಕಾರಣವಾದ ಯಾವ ಉಪಾಧಿ ವ್ಯವಸ್ಥೆಯು ಕರ್ಮವ್ಯವಸ್ಥಾಧೀನವೋ ಅದು ಕರ್ಮವ್ಯವಸ್ಥೆಯು ತನ್ನಿಂದ ಸಂಪಾದಿಸಿಕೊಳ್ಳಲಿಕ್ಕೆ ಯೋಗ್ಯವಾದ ಉಪಾಧಿವ್ಯವಸ್ಥೆಯಿಂದ ಬೇರೆಯಾದ ಉಪಾಧಿ ವ್ಯವಸ್ಥೆಯಿಂದ ಅಂಗೀಕರಿಸಲ್ಪಡುತ್ತದೋ ೧ನೇದ್ದನ್ನು ದೂಷಿಸುತ್ತಾರೆ —) ಔಪಾಧಿಕಭೇದಸಿದ್ಧೌ=ಚೈತನ್ಯಕ್ಕೆ ಉಪಾಧಿನಿಮಿತ್ತವಾದ ದೇವದತ್ತಾದಿ ವ್ಯವಸ್ಥೆಗಳು ಸಿದ್ಧಿಸಿದರೆ, ಕರ್ಮಭೇದಸಿದ್ಧಿಃ=ಈ ಕರ್ಮವು ದೇವದತ್ತನದ್ದು ಇದು ಮೊದಲಾದ ವ್ಯವಸ್ಥೆಗಳು ಸಿದ್ಧಿಸುವುವು. ತತ್ಸಿದ್ಧೌ ಚ=ಕರ್ಮಭೇದವು ಸಿದ್ಧಿಸಿದರೆ, ತತ್ಸಿದ್ಧಿಃ=ಕರ್ಮ ವ್ಯವಸ್ಥೆಯಿಂದ ಉಪಾಧಿವ್ಯವಸ್ಥೆಯು ಸಿದ್ಧಿಸುವುದು. ಇತಿ=ಹೀಗೆ, ಅಂಗೀಕರಿಸಿದರೆ, ಅನ್ಯೋನ್ಯಾಶ್ರಯತ್ವಾತ್=ಅನ್ಯೋನ್ಯಾಶ್ರಯ ದೋಷ ಬರುವುದರಿಂದ. (೨ನೇ ಕಲ್ಪದಲ್ಲಿ ಅನವಸ್ಥೆಯು. ಬೇರೆ ಉಪಾಧಿಗಳ ವ್ಯವಸ್ಥೆಯೂ, ಕರ್ಮಾಂತರ ವ್ಯವಸ್ಥೆಯಿಂದ ಹೇಳಬೇಕು. ಅದೂ ಕೂಡ ಪುನಃ ಬೇರೆ ಉಪಾಧಿಗಳ ವ್ಯವಸ್ಥೆಯಿಂದಲೇ, ಹೀಗೆ ಕರ್ಮೋಪಾಧಿ ವ್ಯವಸ್ಥೆಗಳ ಪರಂಪರೆಯಿಂದ ಅನವಸ್ಥಾದೋಷವು.) (೪) ಅತಃ= ಆದಕಾರಣ, ಅನಂತದೋಷದುಷ್ಟತ್ವಾತ್=ಅಪರಿಮಿತಗಳಾದ ದೂಷಿಸತಕ್ಕ ಯುಕ್ತಿಗಳಿಂದ ದುಷ್ಟವಾದಪ್ರಯುಕ್ತ, ಗ್ರಂಥಬಹುತ್ವಂ=ಗ್ರಂಥಬಾಹುಲ್ಯವು, ಸ್ಯಾತ್=ಆಗುವುದು, ಇತ್ಯೇವ= ಇದೇ ಕಾರಣದಿಂದ, ಉಪರಮ್ಯತೇ=ಸಮಾಪಿಸಲ್ಪಡುತ್ತದೆ. (ಅದ್ವೈತಕ್ಕೆ ವಿರೋಧಿಗಳಾದ ದೋಷಗಳು ಸಮಾಪ್ತಗಳಾದ ಪ್ರಯುಕ್ತ ಅವಸಾನಮಾಡಲ್ಪಡುವುದಲ್ಲ. ಮತ್ತೆ ದೋಷಗಳು ಅನಂತಗಳಾದ ಪ್ರಯುಕ್ತ ಹೇಳಲು ಅಶಕ್ಯಗಳೇ ಆಗಿವೆ. ಇದಕ್ಕಿಂತಲೂ ಹೆಚ್ಚಿಗೆ ಹೇಳಿದರೆ ಗ್ರಂಥವು ಬಹಳ ಜಾಸ್ತಿಯಾಗುವುದು) ॥ ೩೨೬ ॥

ಜೀವಪರಮಾತ್ಮೈಕ್ಯದಲ್ಲಿ ಎಲ್ಲಾ ಶ್ರುತಿಗಳಿಗೆ ತಾತ್ಪರ್ಯವು ಹೇಗೆ ಕೂಡುತ್ತದೆ? ಸರ್ವಪ್ರಮಾಣವಿರುದ್ಧವಾದಪ್ರಯುಕ್ತ; ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥವನ್ನುಪಸಂಹಾರಮಾಡುತ್ತಾರೆ —

**ಮೂ ॥ ಅತಃ ಸರ್ವಪ್ರಮಾಣವಿರುದ್ಧತ್ವಾನ್ನಾಭೇದೇ ಶ್ರುತಿತಾತ್ಪರ್ಯಂ ॥ ೩೨೭ ॥**

ಅ ॥ ಅತಃ=ಅದಕಾರಣ, ಸರ್ವಪ್ರಮಾಣವಿರುದ್ಧತ್ವಾತ್=(ಜೀವ ಈಶ್ವರರ ಐಕ್ಯಕ್ಕೆ) ಎಲ್ಲಾ ಪ್ರಮಾಣಗಳಿಂದಲೂ ವಿರೋಧವಿದ್ದುದರಿಂದ, ಪ್ರಮಾಣವಿಲ್ಲದಿರುವುದರಿಂದಲೂ, ಅಭೇದೇ = (ಜೀವೇಶ್ವರರ) ಐಕ್ಯದಲ್ಲಿ, ಶ್ರುತಿತಾತ್ಪರ್ಯಂ = ಶ್ರುತಿಗಳಿಗೆ ತಾತ್ಪರ್ಯವು, ನ=ಇಲ್ಲ ॥ ೩೨೭ ॥

ಮತ್ತು ಐಕ್ಯದಲ್ಲಿಯೇ ಶ್ರುತಿಗಳಿಗೆ ತಾತ್ಪರ್ಯವನ್ನು ಇಚ್ಛಿಸುವ ಮಾಯಾವಾದಿಗಳು ಅಭೇದಕ್ಕೆ ಬ್ರಹ್ಮಸ್ವರೂಪತ್ವವನ್ನಂಗೀಕರಿಸಿ ಅಭೇದದಲ್ಲಿ ಶ್ರುತಿಗಳಿಗೆ ತಾತ್ಪರ್ಯವನ್ನಂಗೀಕರಿಸಿದರೆ ಬ್ರಹ್ಮನಲ್ಲಿಯೇ ಶ್ರುತಿಗಳಿಗೆ ತಾತ್ಪರ್ಯವನ್ನು ಅಂಗೀಕರಿಸಿದ ಹಾಗಾಯಿತು. ಬ್ರಹ್ಮನಿಗೆ ಶ್ರುತಿಗಮ್ಯತ್ವವು ಸಿದ್ಧವಾದ ಮೇಲೆ ತಾತ್ಪರ್ಯವನ್ನು ಹೇಳಬೇಕು. ಬ್ರಹ್ಮನಿಗೆ ಶ್ರುತಿಗಮ್ಯತ್ವವೇ ಇಲ್ಲವು. ಶ್ರುತಿಗಳಿಗೆ ತಾತ್ಪರ್ಯವು ಸುತರಾಂ ಕೂಡಲಾರದು. ಹೇಗೆಂದರೆ, ಬ್ರಹ್ಮನು (೧) ವಾಕ್ಯಾರ್ಥನಾಗುವನೋ, (೨) ಪದಾರ್ಥನೋ, (೧) ಸಂಸರ್ಗ, ಭೇದ, ಸ್ವರೂಪತ್ವವಿಲ್ಲದಿರುವುದರಿಂದಲೇ ವಾಕ್ಯಾರ್ಥನಲ್ಲ. ಸಂಸರ್ಗ, ಭೇದ, ಇವುಗಳೇ ವಾಕ್ಯಾರ್ಥವು. (೨) ಪದಾರ್ಥವೆನ್ನುವ ಕಲ್ಪದಲ್ಲಿಯೂ ಅವನಲ್ಲಿ (1) ಶಕ್ತಿವೃತ್ತಿಯೋ, (2) ಗೌಣೀವೃತ್ತಿಯೋ, (3) ಲಕ್ಷಣಾ ವೃತ್ತಿಯೋ, (1)ನೇದ್ದು ಕೂಡಲಾರದು. ಜಾತಿನಿಮಿತ್ತಕ ಶಬ್ದಗಳು, ಗುಣನಿಮಿತ್ತಕ ಶಬ್ದಗಳು, ಕ್ರಿಯಾನಿಮಿತ್ತಕ ಶಬ್ದಗಳು, ದ್ರವ್ಯನಿಮಿತ್ತಕ ಶಬ್ದಗಳು ಹೀಗೆ ವಾಚಕಶಬ್ದಗಳ ಸ್ಥಿತಿಯು ನಾಲ್ಕುಪ್ರಕಾರವು. ಉದಾ:— ಬ್ರಾಹ್ಮಣನು, ದೇವದತ್ತನು ಶುಕ್ಲರೂಪವುಳ್ಳವನು, ಅಡಿಗೆ ಮಾಡುವವನು, ಡಿತ್ಥನು. ಬ್ರಹ್ಮನಿಗೆ ಜಾತಿ ಗುಣ ಕ್ರಿಯೆಗಳು ಇಲ್ಲವೆಂದಂಗೀಕರಿಸಿರುವುದರಿಂದ ಪ್ರಥಮದ ಮೂರು ಪ್ರಕಾರಗಳು ಕೂಡಲಾರವು. ವಾಚ್ಯವಾಚಕಭಾವ ಸಂಬಂಧವು ಅನಾದಿಯಾದುದರಿಂದ ವೈದಿಕಪದಗಳು ಸಾಂಕೇತಿಕಗಳಾಗದಿರುವುದರಿಂದ ನಾಲ್ಕನೇಪ್ರಕಾರವೂ ಕೂಡಲಾರದು. ಆದುದರಿಂದ ಬ್ರಹ್ಮನು ಸರ್ವಶಬ್ದಾವಾಚ್ಯನು. ಸರ್ವಶಬ್ದಗಳಿಂದ ಅವಾಚ್ಯನಾದುದರಿಂದಲೇ ಬ್ರಹ್ಮನಲ್ಲಿ ಪದಗಳಿಗೆ ಗೌಣೀ ವೃತ್ತಿಯೂ ಇಲ್ಲವು. ಗೌಣೀವೃತ್ತಿಗೆ ಗುಣಗಳ ಸಂಬಂಧವೇ ನಿಮಿತ್ತವು ಹಾಗಾದರೆ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯಿರಲಿ, ಎಂದಾಶಂಕಿಸಿದರೆ —

**ಮೂ || (೧) ಸರ್ವಶಬ್ದಾವಾಚ್ಯಸ್ಯ ಲಕ್ಷಣಾಽಪಿ ನ ದೃಷ್ಟೇತಿ ನ ತಸ್ಯ ಶಾಸ್ತ್ರಗಮ್ಯತ್ವಂ । (೨) ಅತೋಽವಾಚ್ಯತ್ವಾದಜ್ಞೇಯತ್ವಾಚ್ಛೂನ್ಯಮೇವ ತದಿತಿ ಪ್ರಾಪ್ತಂ || ೩೨೮ ||**

ಅ || (೧) ಸರ್ವಶಬ್ದಾವಾಚ್ಯಸ್ಯ = ಎಲ್ಲಾ ಶಬ್ದಗಳಿಂದಲೂ ಅವಾಚ್ಯನಾದವನಿಗೆ, ಲಕ್ಷಣಾಽಪಿ=ಲಕ್ಷಣಾವೃತ್ತಿಯೂ ಕೂಡ, ನ ದೃಷ್ಟಾ=ಕಾಣಲ್ಪಡಲಿಲ್ಲ, ಇತಿ=ಹೀಗೆ, ತಸ್ಯ= ಆ ಬ್ರಹ್ಮನಿಗೆ, ಶಾಸ್ತ್ರಗಮ್ಯತ್ವಂ = ಶಾಸ್ತ್ರದಿಂದ ತಿಳಿಯಲ್ಪಡುವಿಕೆಯು, ನ = ಇಲ್ಲವು. (೨) ಅತಃ=ಪ್ರವೃತ್ತಿನಿಮಿತ್ತಗಳಾದ ಜಾತ್ಯಾದಿಧರ್ಮಗಳಿಲ್ಲದಿರುವುದರಿಂದಲೇ, ಅವಾಚ್ಯತ್ವಾತ್= ಬ್ರಹ್ಮನಿಗೆ ವಾಚ್ಯತ್ವವಿಲ್ಲದಿರುವುದರಿಂದ, (ಅವಾಚ್ಯತ್ವವಿದ್ದುದರಿಂದಲೇ ಲಕ್ಷಣಾ ಗೌಣೀವೃತ್ತಿಗಳು ಕೂಡದಿರುವುದರಿಂದ, ಆದರಿಂದಲೇ ವಾಕ್ಯಾರ್ಥತ್ವವಿಲ್ಲದಿರುವುದರಿಂದಲೂ, ಹೀಗೆ ಆಗಮವನ್ನು ನಿರಾಸಮಾಡಿದಹಾಗಾಯಿತು. ರೂಪಾದಿಗಳು ಇಲ್ಲದಿರುವುದರಿಂದಲೂ ತದ್ವ್ಯಾಪ್ಯಗಳಾದ ಲಿಂಗಗಳಿಲ್ಲದಿರುವುದರಿಂದಲೂ ಪ್ರತ್ಯಕ್ಷಾನುಮಾನಗಳು ಕೂಡುವುದಿಲ್ಲ.) ಅಜ್ಞೇಯತ್ವಾತ್=ಅಜ್ಞೇಯತ್ವವನ್ನು ಅಂಗೀಕರಿಸಿರುವುದರಿಂದ. ತತ್=ಆ ಬ್ರಹ್ಮನು, ಶೂನ್ಯಮೇವ ಇತಿ=ಶೂನ್ಯವೇ ಎಂದು, ಪ್ರಾಪ್ತಂ=ಪ್ರಾಪ್ತವಾಯಿತು.

ತಾ || (1) ತೀರಾದಿಶಬ್ದದಿಂದ ವಾಚ್ಯವಾದುದೇ ಗಂಗಾ ಮೊದಲಾದ ಪದಗಳಿಂದ ಲಕ್ಷ್ಯವಾಗಿ ದೃಷ್ಟವಾಗಿದೆ. ಯಾವ ಶಬ್ದದಿಂದಲೂ ವಾಚ್ಯವಾಗದಿರುವುದಕ್ಕೆ ಲಕ್ಷಣಾವೃತ್ತಿಯು ಎಲ್ಲಿಯೂ ದೃಷ್ಟವಾಗಲಿಲ್ಲ. ಆದಕಾರಣ ಯಾವ ಶಬ್ದದಿಂದಲೂ ಬ್ರಹ್ಮನು ವಾಚ್ಯನಾಗದಿರುವುದರಿಂದ ಲಕ್ಷ್ಯನೂ ಆಗಲಾರನು. ಅಂತೂ ಬ್ರಹ್ಮನು ಪದಾರ್ಥನಾಗದಿರುವುದರಿಂದಲೂ ವಾಕ್ಯಾ

ರ್ಥನಾಗದಿರುವುದರಿಂದಲೂ ಶ್ರುತಿಗಮ್ಯನಲ್ಲವು. ಅವನಲ್ಲಿ ಶ್ರುತಿಗಳಿಗೆ ತಾತ್ಪರ್ಯವು ಸುತರಾಂ ಕೂಡಲಾರದು. (2) ಮತ್ತು ಬ್ರಹ್ಮನಿದ್ದರೆ ಆತನಲ್ಲಿ ಶ್ರುತಿಗಳಿಗೆ ತಾತ್ಪರ್ಯವನ್ನು ಚಿಂತಿಸಬಹುದು. ಪ್ರಮಾಣವಿಲ್ಲದಿರುವುದರಿಂದ ಬ್ರಹ್ಮನೇ ಇಲ್ಲವು. ವಸ್ತುವಿದೆ ಎಂದಂಗೀಕರಿಸುವುದು ಪ್ರಮಾಣಾಧೀನವಾಗಿದೆ. (3) ಪ್ರತ್ಯಕ್ಷಾನುಮಾನ ಆಗಮಗಳಿಗೆ ಯಥಾರ್ಥಜ್ಞಾನವನ್ನು ಹುಟ್ಟಿಸುವಿಕೆಯು ಸ್ವಭಾವವಾದುದರಿಂದ ಬ್ರಹ್ಮನಿಗೆ ಅದ್ವೈತಿಗಳು ಅಜ್ಞೇಯತ್ವವನ್ನಂಗೀಕರಿಸಿರುವರು. ಆದುದರಿಂದ ಮೂರು ಪ್ರಮಾಣಗಳೂ ಬ್ರಹ್ಮನನ್ನು ತಿಳಿಸಲಾರವು. (4)ಜ್ಞೇಯತ್ವವು (ದೃಶ್ಯತ್ವವು) ಜಡಕ್ಕೇನೇ ಇರುವುದು. ಚೇತನನಾದ ಬಹ್ಮನಿಗೆ ಇಲ್ಲವೆಂದು ಪರರು ಅಂಗೀಕರಿಸಿರುವುದರಿಂದ ಬ್ರಹ್ಮನಿಗೆ ಜ್ಞೇಯತ್ವವನ್ನು ಒಡಂಬಟ್ಟರೆ ಜಡತ್ವವು ಪ್ರಾಪ್ತವಾಗುವುದು. ಅಂತೂ ಅಜ್ಞೇಯನಾದುದರಿಂದ ಶೂನ್ಯನೆಂದೇ ಆಗುವನು ॥ ೩೨೮ ॥

ಬ್ರಹ್ಮನಿಗೆ ವಾಚ್ಯತ್ವವಿಲ್ಲದಿರುವುದರಿಂದ ಲಕ್ಷ್ಯತ್ವವಿಲ್ಲವೆಂದು ಯಾವುದು ಹೇಳಲ್ಪಟ್ಟದೋ, ಅದು ಅಯುಕ್ತವು. ಲಕ್ಷಣೆಯಲ್ಲಿ ವಾಚ್ಯತ್ವಕ್ಕೆ ಉಪಯೋಗವಿಲ್ಲ. ವಾಚ್ಯವಾದ ಅರ್ಥದ ಸಂಬಂಧದಿಂದ ಪ್ರಸಿದ್ಧಿಯೇ ಲಕ್ಷಣಾಕ್ಕೆ ಕಾರಣವು. ಬ್ರಹ್ಮನು ಸ್ವಪ್ರಕಾಶನಾದುದರಿಂದ ಬ್ರಹ್ಮನಲ್ಲಿ ಹಾಗೆ ಪ್ರಸಿದ್ಧಿಯಿದೆ. ಆದಕಾರಣ ಬ್ರಹ್ಮನಿಗೆ ಲಕ್ಷ್ಯತ್ವವು ಕೂಡುವುದರಿಂದ ಶಾಸ್ತ್ರಗಮ್ಯತ್ವವಿಲ್ಲವೆಂದಲ್ಲ. ಆದುದರಿಂದಲೇ ಶೂನ್ಯತ್ವವೂ ಇಲ್ಲ. ಲಕ್ಷಣಾವೃತ್ತಿಯಿಂದ ಶಾಸ್ತ್ರಗಮ್ಯನೆಂಬುವುದು ಸಂಭವಿಸುವುದರಿಂದ ಪ್ರಮಾಣಸಿದ್ಧನೇ. ಆದುದರಿಂದ ಬ್ರಹ್ಮನಿಗೆ ಅಸತ್ವವಿಲ್ಲ. ವಸ್ತುತಃ ಎಲ್ಲಾ ಪ್ರಮಾಣಗಳಿಗೆ ಅಗೋಚರನಾಗಿದ್ದಾಗ್ಯೂ ಸ್ವಪ್ರಕಾಶನಾಗಿ ಸಿದ್ಧನಾಗಿದ್ದಾನೆಂದು ಮಾಯಾವಾದಿಗಳು ಹೇಳಿದರೆ ಈ ಸ್ವಪ್ರಕಾಶತ್ವವೆಂದರೆ ಯಾವುದು ತನ್ನಿಂದ ಜ್ಞೇಯತ್ವವೋ (ತಿಳಿಯಲ್ಪಡುವಿಕೆಯೋ) ಅಥವಾ ಇತರರಿಂದ ತಿಳಿಯಲ್ಪಡದಿರುವಿಕೆಯೋ ಎನ್ನೇದ್ದೂ ಕೂಡಲಾರದು. ಅಪಸಿದ್ಧಾಂತವು ಪ್ರಾಪ್ತವಾಗುವುದು, ಎಂದು ನಿರೂಪಿಸುತ್ತಾರೆ—

**ಮೂ ॥ (೧) ನ ಚ ಸ್ವೇನಾಪಿ ಜ್ಞೇಯತ್ವಂ ತೈರುಚ್ಯತೇ । (೨) ಕರ್ತೃಕರ್ಮ ವಿರೋಧ ಇತಿ ಹಿ ತೇ ವದಂತಿ । (೩) ನ ಚ ಸ್ವರೂಪಮನ್ಯದ್ವಾ ಜ್ಞೇಯಂ ಜ್ಞಾತಾರಂ ಚ ವಿನಾ ಜ್ಞಾನಂ ದೃಷ್ಟಂ । (೪) ಅತೋ ಜ್ಞಾತೃಜ್ಞೇಯಾಭಾವಾಜ್ಜ್ಞಾನಸ್ಯಾಪಿ ಶೂನ್ಯತೈವ । (೫) ಅತಃ ಶೂನ್ಯವಾದಾನ್ನ ಕಶ್ಚಿದ್ವಿಶೇಷಃ ॥ ೩೨೯ ॥**

ಅ ॥ (೧) ಸ್ವೇನಾಪಿ ಜ್ಞೇಯತ್ವಂ=ತನ್ನಿಂದಲೂ, (ಬ್ರಹ್ಮನಿಗೆ) ಜ್ಞೇಯತ್ವವು, ತೈಃ= ಮಾಯಾವಾದಿಗಳಿಂದ, ನ ಚ ಉಚ್ಯತೇ = ಹೇಳಲ್ಪಡುವುದಿಲ್ಲ. (ಎನೇದ್ದೂ ಕೂಡಲಾರದು-ಪ್ರಮಾಣವಿಲ್ಲದಿರುವುದರಿಂದ ಬ್ರಹ್ಮನಿಗೆ ಸಿದ್ಧಿಯಿಲ್ಲವೆಂದು ಹೇಳಲ್ಪಡೋಣ ಇತರರಿಂದ ತಿಳಿಯಲ್ಪಡದಿರುವುದರಿಂದ ಸಿದ್ಧನಾಗಿದ್ದಾನೆ ಎಂದುತ್ತರವಲ್ಲ, ಸಿದ್ಧಿಗೆ ಮುಖ್ಯಕಾರಣವಾದ ಪ್ರಮಾಣವು ಹೇಳಲ್ಪಡಲಿಲ್ಲ. ಇಲ್ಲದಿದ್ದರೆ ಶಶವಿಷಾಣಾದಿಗಳೂ ಸಿದ್ಧಸಬೇಕಾಗುವವು. ವಸ್ತುತಸ್ತು ಲಕ್ಷ್ಯತ್ವದಲ್ಲಿ ವಾಚ್ಯತ್ವವೂ ಉಪಯುಕ್ತವಾಗಿದೆ.) (೨) (ಬ್ರಹ್ಮನಿಗೆ ಸ್ವಜ್ಞೇಯತ್ವವನ್ನು ಅದ್ವೈತಿಗಳು ಏಕ ಹೇಳುವುದಿಲ್ಲವೆಂದರೆ) ಕರ್ತೃಕರ್ಮ ವಿರೋಧ ಇತಿ=ಕರ್ತೃತ್ವ, ಕರ್ಮತ್ವಗಳಿಗೆ ವಿರೋಧವದೆ ಎಂದು, ತೇ=ಆ ಅದ್ವೈತಿಗಳು, ವದಂತಿ ಹಿ=ಹೇಳುತ್ತಾರಷ್ಟೆ! (ಅಂದರೆ ಕರ್ತೃತ್ವ, ಕರ್ಮತ್ವಗಳಿಗೆ ವಿರೋಧವಿದ್ದುದರಿಂದ ಒಂದನ್ನೇ ಆಶ್ರಯಿಸಿಕೊಂಡು ಇರುವಿಕೆಯು ಕೂಡುವುದಿಲ್ಲ. ತನ್ನಿಂದಲೇ ಜ್ಞೇಯತ್ವವನ್ನು ಇಟ್ಟುಕೊಂಡರ ಒಂದೇ ಜ್ಞಾನಕ್ರಿಯೆಯಲ್ಲಿ ಬ್ರಹ್ಮನಿಗೆ ಜ್ಞಾತೃತ್ವವೂ ಜ್ಞೇಯತ್ವವೂ ಪ್ರಾಪ್ತವಾಗುತ್ತದೆ. ಹೀಗೆ ವಿರೋಧದ ಭೀತಿಯಿಂದ ಅವರು ತನ್ನಿಂದ

ಜ್ಞೇಯತ್ವವನ್ನು ಹೇಳುವುದಿಲ್ಲ.) (೩) (ಬ್ರಹ್ಮನು ಜ್ಞಾನರೂಪನು, ಜ್ಞಾತೃ (ತಿಳಿಯುವವನು) ಅಲ್ಲ. ಜ್ಞಾನವು ಕ್ರಿಯೆಯಾದುದರಿಂದ ಯದ್ಯಪಿ ತಾನೇ ಕರ್ಮವಾಗಿ ಉಳ್ಳದ್ದಲ್ಲ. ಆದಾಗ್ಯೂ ಸ್ವಭಾವದಿಂದ ಕರ್ಮದ ಅಪೇಕ್ಷೆಯಿಲ್ಲದೇನೇ ಪ್ರಕಾಶಿಸುತ್ತದೆ. ಆದುದರಿಂದ ಬ್ರಹ್ಮನಿಗೆ ಲಕ್ಷ್ಯತ್ವವು ಕೂಡುವುದಿಲ್ಲವೆಂದಲ್ಲ. ಶೂನ್ಯತ್ವವು ಬರಬೇಕಾಗಿಯೂ ಇಲ್ಲವು, ಎಂದಾಶಂಕಿಸಿದರೆ- ಕಥಂಚಿತ್ ಬ್ರಹ್ಮನು ಜ್ಞಾನರೂಪನಾಗಿದ್ದರೆ ಇದು ಹೀಗೆ ಆಗುತ್ತಿತ್ತು. ಅದೇ ಕೂಡುವುದಿಲ್ಲ ವೆಂದು ಹೇಳಲಿಕ್ಕೆ ಉಪೋದ್ಘಾತವನ್ನು ಹೇಳುತ್ತಾರೆ —) ಸ್ವರೂಪಂ=ಸ್ವರೂಪವನ್ನು, ಅನ್ಯತ್ ವಾ ಜ್ಞೇಯಂ=ಬೇರೆ ಜ್ಞೇಯವನ್ನಾಗಲೀ, ಜ್ಞಾತಾರಂ=ತಿಳಿಯತಕ್ಕವನನ್ನು ಆಗಲೀ, ವಿನಾ= ಹೊರತು, ಜ್ಞಾನಂ=ಜ್ಞಾನವು, ನ ಚ ದೃಷ್ಟಂ=ಕಾಣಲ್ಪಡಲಿಲ್ಲ. (ಅಂದರೆ 'ಜ್ಞಾ' ಧಾತುವು ಸಕರ್ಮಕವು. 'ಜ್ಞಾ' ಧಾತುವಿನ ಅರ್ಥವಾದ ಜ್ಞಾನಕ್ಕೆ ಕರ್ಮವು ಆವಶ್ಯಕವು. ಕರ್ಮವು ಸ್ವರೂಪವಾಗಲೀ ಬೇರೆಯಾಗಲೀ ಸಂಭಾವಿತವು. ಕ್ರಿಯೆಯಾದುದರಿಂದ ಕರ್ತನೂ ಬೇಕು. ಅಂತೂ ಹೀಗೆ ಅನ್ವಯವ್ಯತಿರೇಕಗಳಿಂದ ಜ್ಞಾನಕ್ಕೆ ಜ್ಞೇಯ ಜ್ಞಾತೃಗಳು ಆವಶ್ಯಕರು.) (೪) ಅತಃ=ಆದಕಾರಣ, (ಯಾವ ಕಾರಣದಿಂದ ಜ್ಞಾನಕ್ಕೆ ಜ್ಞಾತೃಜ್ಞೇಯಗಳು ಆವಶ್ಯಕಗಳೋ ಆದುದರಿಂದ) ಜ್ಞಾನಸ್ಯಾಪಿ=ಬ್ರಹ್ಮಾಖ್ಯಜ್ಞಾನಕ್ಕೂ ಕೂಡ, ಜ್ಞಾತೃಜ್ಞೇಯಾಭಾವಾತ್=ಜ್ಞಾತೃ ಜ್ಞೇಯಗಳಿಲ್ಲದಿರುವುದರಿಂದ, ಶೂನ್ಯತೈವ=ಅಸತ್ವವೇ. (೫) ಅತಃ=ಜ್ಞಾತೃಜ್ಞೇಯಶೂನ್ಯವಾದ ಜ್ಞಾನಸ್ವರೂಪತ್ವವು ಅಸತ್ತಿನಲ್ಲಿಯೂ ಸಂಭವಿಸುವುದರಿಂದ ಬ್ರಹ್ಮನು ಇದ್ದಾನೆಂಬೀವಾದಕ್ಕೆ, ಶೂನ್ಯವಾದಾತ್=ಶೂನ್ಯವೇ ತತ್ವವು ಎಂಬೀ ವಾದದಿಂದ, ಕಶ್ಚಿತ್ ವಿಶೇಷಃ ನ=ಯಾವ ವಿಶೇಷವೂ ಇಲ್ಲ.

ತಾ ॥ ಬ್ರಹ್ಮರೂಪ ಜ್ಞಾನವನ್ನು ತಿಳಿಯುವವನು ಇಲ್ಲ. ಬ್ರಹ್ಮನಿಂದ ಬೇರೆ ವಸ್ತುವೇ ಇಲ್ಲ. ಮತ್ತೊಬ್ಬನಿಂದ ಜ್ಞೇಯತ್ವವನ್ನು ಅಂಗೀಕರಿಸಿದರೆ ಪರಾಧೀನತ್ವವೂ ಪ್ರಾಪ್ತವಾಗುವುದು. ಜ್ಞೇಯವೂ (ತಿಳಿಯಲ್ಪಡತಕ್ಕದೂ) ಇಲ್ಲವು. ಇತರ ವಿಷಯದಲ್ಲಿ ತಾನು ಕ್ರಿಯೆಯಾದಾಗ್ಯೂ ತನ್ನ ವಿಷಯದಲ್ಲಿ ತನಗೆ ಕ್ರಿಯಾತ್ವವು ವಿರುದ್ಧವಾದುದರಿಂದ ಅದನ್ನಂಗೀಕರಿಸದೆ ಇರುವ ಪ್ರಯುಕ್ತ ಸ್ವರೂಪವು ಜ್ಞೇಯವಾಗಲಾರದು. ಪಾರಮಾರ್ಥಿಕವಾದ ಬೇರೆ ವಸ್ತುವಿಲ್ಲದಿರುವುದ ರಿಂದ ಇತರವಾದುದೂ ಜ್ಞೇಯವಾಗಲಾರದು. ಪಾರಮಾರ್ಥಿಕವಲ್ಲದಿರುವುದು ಮುಕ್ತಿಯಲ್ಲಿ ಲ್ಲವು. ಅಂತೂ ವ್ಯಾಪಕಗಳಾದ ಜ್ಞಾತೃಜ್ಞೇಯಗಳಿಲ್ಲದಿರುವುದರಿಂದ ವ್ಯಾಪ್ಯವಾದ ಜ್ಞಾನವೂ ಇಲ್ಲವು. ಮತ್ತು ಜ್ಞಾತೃಜ್ಞೇಯಗಳಿಲ್ಲದಿರುವ ಬ್ರಹ್ಮನಿಗೂ ಸ್ವಪ್ರಕಾಶಜ್ಞಾನರೂಪತ್ವವನ್ನಂಗೀ ಕರಿಸಿದರೆ ಶಶವಿಷಾಣ ಮೊದಲಾದ ಶೂನ್ಯಕ್ಕೂ (ಅತ್ಯಂತಾಸತ್ತಿಗೂ) ಬ್ರಹ್ಮನಂತೆಯೇ ಸಿದ್ಧಿಯು ಏಕೆ ಒಪ್ಪಬಾರದು? ಅತ್ಯಂತಾಸತ್ತು ಕೂಡ ಸ್ವಪ್ರಕಾಶಜ್ಞಾನರೂಪವೆಂದಂಗೀಕರಿಸಲಿಕ್ಕೆ ಶಕ್ಯವಾಗುವುದು. ಹಾಗಿದ್ದರೂ ನಮಗೆ ಯಾವ ಪ್ರಮಾಣದಿಂದ ಶಶವಿಷಾಣಾದಿಗಳ ಸಿದ್ಧಿ ಯಾಗುತ್ತದೆ ಎಂದರೆ, ಬ್ರಹ್ಮನೂ ಯಾವ ಪ್ರಮಾಣದಿಂದ ಸಿದ್ಧಿಸುವನು. ಆತನೂ ನಮ್ಮ ಜ್ಞಾನಕ್ಕೆ ಅಗೋಚರನಾದುದರಿಂದ ಬ್ರಹ್ಮನೂ ಸಿದ್ಧಿಸಲಾರನು. 'ಜೀವನೇ ಬ್ರಹ್ಮನು' ಎಂದರೆ, ಶಶವಿಷಾಣ ಮೊದಲಾದ ಅತ್ಯಂತಾಸತ್ತಿನಲ್ಲಿಯೂ ಇದು ಸಮಾನವೇ. ಆದಕಾರಣ ಅದ್ವೈತಿ ಗಳಿಗೆ ಶೂನ್ಯವಾದಿಗಳಿಂದ ವಿಶೇಷವಾವುದೂ ಇಲ್ಲವು ॥ ೩೯ ॥

ಕರ್ತೃಕರ್ಮಗಳು ಕಾರಕವಿಶೇಷಗಳು. ಕಾರಕವು ಕ್ರಿಯೆಯು ಹುಟ್ಟುವುದರಲ್ಲಿ ಉಪ ಯುಕ್ತವಾಗುತ್ತದೆ; ಬ್ರಹ್ಮಜ್ಞಾನವು ಕ್ರಿಯಾರೂಪವಲ್ಲ; ಹುಟ್ಟತಕ್ಕದ್ದೂ ಅಲ್ಲವು. ಆದಕಾರಣ ಹುಟ್ಟತಕ್ಕ ಜ್ಞಾನಕ್ಕೆ ಜ್ಞಾತೃಜ್ಞೇಯಗಳು ಬೇಕೆಂಬ ನಿಯಮವಿದ್ದರೂ ಜ್ಞಾತೃಜ್ಞೇಯ ರಹಿತ ವಾದಾಗ್ಯೂ ನಿತ್ಯಭೂತವಾದ ಬ್ರಹ್ಮಜ್ಞಾನಕ್ಕೆ ಸ್ಥಿತಿಯು ಕೂಡಬಹುದೆಂದರೆ —

ಮೂ ॥ (೧) ನ ಚ ಜ್ಞಾತೃಜ್ಞೇಯರಹಿತಂ ಜ್ಞಾನಂ ಕ್ವಾಪಿ ದೃಷ್ಟಂ । (೨) ಅಪ್ರಾಪ್ತತ್ವಾಚ್ಚೇಶ್ವರಭೇದಸ್ಯ ನಾಭೇದೇ ಶ್ರುತಿತಾತ್ಪರ್ಯಂ ಯುಜ್ಯತೇ ॥ ೩೩೦ ॥

ಅ ॥ (೧) ಜ್ಞಾತೃಜ್ಞೇಯರಹಿತಂ = ಜ್ಞಾತೃಜ್ಞೇಯಗಳಿಲ್ಲದ, ಜ್ಞಾನಂ = ಜ್ಞಾನವು, ಕ್ವಾಪಿ=ಎಲ್ಲಿಯೂ (ನಿತ್ಯಗಳಲ್ಲಿಯೂ ಅನಿತ್ಯಗಳಲ್ಲಿಯೂ) ನ ಚ ದೃಷ್ಟಂ=ಕಾಣಲ್ಪಡಲಿಲ್ಲ. (೨) (ಇಷ್ಟರವರೇಗೆ ಅಭೇದವು ಬ್ರಹ್ಮಸ್ವರೂಪವು ಎನ್ನುವ ಕಲ್ಪಕ್ಕೆ ದೋಷವನ್ನು ಹೇಳಿದರು. ಈಗ ಅಭೇದವು ಬ್ರಹ್ಮನಿಂದ ಭಿನ್ನವು ಎನ್ನುವ ಪಕ್ಷವನ್ನು ಇಟ್ಟುಕೊಂಡರೂ ಜೀವೇಶ್ವರಾಭೇದ ದಲ್ಲಿ ಶ್ರುತಿಗಳಿಗೆ ತಾತ್ಪರ್ಯವು ಕೂಡುವುದಿಲ್ಲವೆಂದು ನಿರೂಪಿಸುತ್ತಾರೆ.) ಈಶ್ವರಭೇದಸ್ಯ= ಈಶ್ವರ ಭೇದಕ್ಕೆ, ಅಪ್ರಾಪ್ತತ್ವಾಚ್ಚ=ಪ್ರಾಪ್ತಿಯಿಲ್ಲದಿರುವುದರಿಂದ, ಅಭೇದೇ = ಅಭೇದದಲ್ಲಿ, ಶ್ರುತಿತಾತ್ಪರ್ಯಂ=ಶ್ರುತಿಗಳಿಗೆ ತಾತ್ಪರ್ಯವು, ನ ಯುಜ್ಯತೇ=ಕೂಡುವುದಿಲ್ಲ.

ತಾ ॥ ಅಭೇದವು ಬ್ರಹ್ಮನಿಂದ ಭಿನ್ನವೆಂದರೆ ಭೇದಾಭಾವವು ಎಂದೇ ಹೇಳಬೇಕು. ಅಭಾವವೆಂದರೆ ನಿಷೇಧವು. ನಿಷೇಧಿಸಬೇಕಾದರೆ ಪ್ರಾಪ್ತಿಯು ಆವಶ್ಯಕವು ಭೇದವು ಯಾವುದ ರಿಂದಲೂ ಪ್ರಾಪ್ತವಾಗಲಿಲ್ಲ. ಈಶ್ವರನು ಪ್ರತ್ಯಕ್ಷಾದಿಗಳಿಗೆ ಅಗೋಚರನೆಂದು ಪೂರ್ವದಲ್ಲಿಯೇ ಉಕ್ತವಾಗಿದೆ. ಆದಕಾರಣ ಭೇದವು ಪ್ರಾಪ್ತವಾಗದಿರುವುದರಿಂದ ಭೇದನಿಷೇಧರೂಪವಾದ ಅಭೇದವನ್ನು ಪ್ರತಿಪಾದಿಸುವಿಕೆಯು ಶ್ರುತಿಗೆ ಯುಕ್ತವಾಗುವುದಿಲ್ಲ. 'ದ್ವಾ ಸುಪರ್ಣಾ' ಇದು ಮೊದಲಾದ ಶ್ರುತಿಗಳಿಂದ ಪ್ರಾಪ್ತವಾದ ಭೇದವನ್ನು ನಿಷೇಧಿಸುತ್ತದೆ ಎಂದರೆ ಶ್ರುತಿಗಳಿಗೆ ಸ್ವವ್ಯಾಹತಿಯು ಬರುವುದು ॥ ೩೩೦ ॥

ಜೀವೇಶ್ವರರ ಅಭೇದದಲ್ಲಿ ಶ್ರುತಿಗಳಿಗೆ ತಾತ್ಪರ್ಯವು ಶ್ರುತಿಯಿಂದಲೇ ಪ್ರತಿಷಿದ್ಧವಾದ ಪ್ರಯುಕ್ತ ಅದು ಕೂಡುವುದಿಲ್ಲವೆನ್ನುತ್ತಾರೆ —

ಮೂ ॥ (೧)ಸರ್ವೋತ್ತಮಂ ಸರ್ವದೋಷವ್ಯಪೇತಂ ಗುಣೈರಶೇಷೈಃ ಪೂರ್ಣ ಮನ್ಯಂ ಸಮಸ್ತಾತ್ । ವೈಲಕ್ಷಣ್ಯಾಜ್ಜ್ಞಾಪಯಿತುಂ ಪ್ರವೃತ್ತಾಃ ಸರ್ವೇ ವೇದಾ ಮುಖ್ಯತೋ ನೈವ ಚಾನ್ಯದಿತಿ ಮಹೋಪನಿಷದಿ । (೨) ಅತಃ ಸದಾಗಮೈರೇವ ಸರ್ವಸ್ಮಾದ್ಭಿನ್ನತ್ವೇನ ಸರ್ವಸ್ಮಾದ್ವಿಶಿಷ್ಟ ತ್ವೇನ ಚ ವಿಜ್ಞೇಯೋ ಭಗವಾನ್ನಾರಾಯಣ ಇತಿ ಸಿದ್ಧಂ ॥ ೩೩೧ ॥

ಅ ॥ (೧) ವೈಲಕ್ಷಣ್ಯಾತ್=ಜೀವೇಶ್ವರರಿಗೆ ವಿಶೇಷವಿದ್ದುದರಿಂದ, ಸಮಸ್ತಾತ್=ಸರ್ವ ವಸ್ತುಗಳಿಂದಲೂ, ಅನ್ಯಂ=ಭಿನ್ನನಾದ ಶ್ರೀಹರಿಯನ್ನು, ಸರ್ವದೋಷವ್ಯಪೇತಂ=ಸರ್ವದೋಷ ವಿದೂರನನ್ನಾಗಿ, ಅಶೇಷೈಃ ಗುಣೈಃ ಪೂರ್ಣಂ= ಸರ್ವಗುಣಪರಿಪೂರ್ಣನನ್ನಾಗಿಯೂ, (ಅಂದರೆ ಸರ್ವದೋಷವಿದೂರನಾದುದರಿಂದಲೂ, ಸರ್ವಗುಣಪರಿಪೂರ್ಣನಾದುದರಿಂದಲೂ,) ಸರ್ವೋ ತ್ತಮಂ = ಸರ್ವೋತ್ತಮನನ್ನಾಗಿ, ಜ್ಞಾಪಯಿತುಂ = ತಿಳಿಸಿಕೊಡಲಿಕ್ಕೆ, ಮುಖ್ಯತಃ = ಮಹಾ ತಾತ್ಪರ್ಯದಿಂದ, ಸರ್ವೇ ವೇದಾಃ=ಎಲ್ಲಾ ವೇದಗಳೂ, ಪ್ರವೃತ್ತಾಃ=ಪ್ರವೃತ್ತಗಳಾಗಿವೆ. ಅನ್ಯತ್=ಅಭೇದ ಮೊದಲಾದುದು, ನೈವ ಚ=ಪ್ರತಿಪಾದಿಸಲ್ಪಡುವುದಿಲ್ಲ, ಇತಿ=ಹೀಗೆ, ಮಹೋಪ ನಿಷದಿ=ಮಹೋಪನಿಷತ್ತಿನಲ್ಲಿದೆ. (೨) (ಈ ಪ್ರಕಾರ ಶ್ರೀಹರಿಗೆ ಸದಾಗಮೈಕವೇದ್ಯತ್ವವನ್ನುಪ ಪಾದಿಸಿ ಉಪಸಂಹಾರ ಮಾಡುತ್ತಾರೆ—) ಅತಃ=ಆದುದರಿಂದ, ಸದಾಗಮೈರೇವ=ಋಗ್ವೇದ ಮೊದಲಾದ ಸದಾಗಮಗಳಿಂದಲೇ, ಸರ್ವಸ್ಮಾತ್ ಭಿನ್ನತ್ವೇನ=ಸರ್ವ ವಸ್ತುಗಳಿಂದ ಭಿನ್ನತ್ವ

ಪ್ರಕಾರದಿಂದಲೂ, ಅಂದರೆ ಕ್ಷರಾಕ್ಷರರನ್ನು ಅತಿಕ್ರಮಿಸಿದವನೆಂದೂ, ಸರ್ವಸ್ಮಾತ್ ವಿಶಿಷ್ಟತ್ವೇನ ಚ=ಸರ್ವ ವಸ್ತುಗಳಿಂದ ಉತ್ತಮತ್ವಪ್ರಕಾರದಿಂದಲೂ, (ಅಂದರೆ ನಿರ್ದೋಷನು ಅಶೇಷ ಸದ್ಗುಣಗಳಿಂದ ಪರಿಪೂರ್ಣನೆಂದೂ,) ಭಗವಾನ್ ನಾರಾಯಣಃ=ಪೂಜ್ಯನಾದ ನಾರಾಯಣನು, ವಿಜ್ಞೇಯಃ=ತಿಳಿಯಲ್ಪಡಬೇಕು, ಇತಿ=ಹೀಗೆ, ಸಿದ್ಧಂ=ನಿಶ್ಚಿತವಾಯಿತು ॥ ೩೩೧ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ ಶ್ರೀಮದ್ವಿಷ್ಣುತತ್ತ್ವವಿನಿರ್ಣಯೇ ಪ್ರಥಮಃ ಪರಿಚ್ಛೇದಃ ॥ ೧ ॥

ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀಮದ್ವಿಷ್ಣುತತ್ತ್ವವಿನಿರ್ಣಯದಲ್ಲಿ ೧ನೇ ಪರಿಚ್ಛೇದವು ಸಮಾಪ್ತವಾಯಿತು ॥ ೧ ॥

॥ ಶ್ರೀಃ ॥

ಕಲತ್ರಂ ಕಮಲಾ ಯಸ್ಯ ಪುತ್ರಃ ಕಮಲಸಂಭವಃ ।
ಶಿವಾದ್ಯಾಃ ಸೇವಕಾಸ್ತಸ್ಮೈ ನಮೋ ವಿಶ್ವಕುಟುಂಬಿನೇ ॥

ಶ್ರೀಹರಿಗೆ ಸಮತೀತಕ್ಷರಾಕ್ಷರತ್ವವನ್ನು ಸಮರ್ಥಿಸುವುದಕ್ಕಾಗಿ ೨ನೇ ಪರಿಚ್ಛೇದವು ಆರಂಭಿಸಲ್ಪಡುತ್ತದೆ. ೧ನೇ ಪರಿಚ್ಛೇದದಲ್ಲಿ ಶ್ರೀ ನಾರಾಯಣನು 'ಕ್ಷರಾಕ್ಷರರನ್ನತಿಕ್ರಮಿಸಿದವನೆಂದೂ ನಿರ್ದೋಷನು ಅಶೇಷ ಸದ್ಗುಣಭರಿತನು ಎಂದೂ' ಸದಾಗಮಗಳಿಂದ ತಿಳಿಯಲ್ಪಡಬೇಕೆಂದು ಸಾಮಾನ್ಯಾಕಾರವಾಗಿ ಸಾಧಿಸಲ್ಪಟ್ಟದೆ. ಆ ವಿಷಯದಲ್ಲಿ ವಿಶೇಷಾಕಾರವಾಗಿ ಸದಾಗಮ ವಾಕ್ಯಗಳನ್ನು ಉದಾಹರಿಸುವ ತನಕ (೨) ಎರಡೂ (ಸಮತೀತ ಕ್ಷರಾಕ್ಷರತ್ವವೂ ನಿರ್ದೋಷಾಶೇಷಸದ್ಗುಣಪರಿಪೂರ್ಣತ್ವವೂ) ಸಾಧಿಸಲ್ಪಡದೆ ಇದ್ದ ಪ್ರಾಯವೇ. ಆದುದರಿಂದ ಆ ಸದಾಗಮ ವಾಕ್ಯಗಳನ್ನು ಉದಾಹರಿಸುವುದಕ್ಕಾಗಿಯೂ, ಅಲ್ಲಿ ಬಂದ ಅನುಪಪತ್ತಿಗಳನ್ನು ಪರಿಹರಿಸುವುದಕ್ಕಾಗಿಯೂ ಮೇಲಿನ ಎರಡು ಪರಿಚ್ಛೇದಗಳನ್ನು ಆರಂಭಿಸಲೇ ಬೇಕು. ಅದರಲ್ಲಿ ಈಗ ಕ್ಷರಾಕ್ಷರ ಶಬ್ದಗಳನ್ನು ವ್ಯಾಖ್ಯಾನಮಾಡಿ ಶ್ರೀಹರಿಯು ಕ್ಷರಾಕ್ಷರರಿಂದ ಅತ್ಯುತ್ತಮನೆಂದು ಪ್ರತಿಪಾದಿಸುವ ಶ್ರುತಿಸ್ಮೃತಿ ವಾಕ್ಯಗಳನ್ನು ಉದಾಹರಿಸುತ್ತಾರೆ —

**ಮೂ ॥ ಓಂ ॥ (೧) ಬ್ರಹ್ಮಾ ಶಿವಃ ಸುರಾದ್ಯಾಶ್ಚ ಶರೀರಕ್ಷರಣಾತ್ಕ್ಷರಾಃ । ಲಕ್ಷ್ಮೀರಕ್ಷರ ದೇಹತ್ವಾದಕ್ಷರಾ ತತ್ಪರೋ ಹರಿಃ । ಸ್ವಾತಂತ್ರ್ಯಶಕ್ತಿವಿಜ್ಞಾನ ಸುಖಾದ್ಯೈರಖಿಲೈರ್ಗುಣೈಃ । ನಿಸ್ಸೀಮತ್ವೇನ ತೇ ಸರ್ವೇ ತದ್ವಶಾಃ ಸರ್ವದೈವ ಚ । ಸರ್ಗಸ್ಥಿತಿಕ್ಷಯಯತಿ ಪ್ರಕಾಶಾವೃತ್ತಿಬಂಧನಂ । ಸರ್ವಕ್ಷರಾಣಾಮೇಕಃ ಸ ಕುರ್ಯಾತ್ಸಾಕ್ಷಿಕ ಮೋಕ್ಷಣಂ। ಸರ್ಗಸ್ಥಿತಿ ಯತಿಜ್ಯೋತಿರ್ನಿತ್ಯಾನಂದಪ್ರದೋಽಕ್ಷರೇ । ಚೇಷ್ಟಾಪ್ರದಶ್ಚ ಸರ್ವೇಷಾಮೇಕ ಏವ ಪರೋ ಹರಿಃ। ತಸ್ಯ ನಾನ್ಯೋಽಸ್ತಿ ಸರ್ಗಾದಿ ಕರ್ತಾ ನಿರ್ದೋಷಕಶ್ಚ ಸಃ ॥ ಇತಿ ಪರಮ ಶ್ರುತಿಃ ॥ (೨) ಬ್ರಹ್ಮಶೇಷ ಸುಪರ್ಣೇಶ ಶಕ್ರ ಸೂರ್ಯ ಗುಹಾದಯಃ । ಸರ್ವೇ ಕ್ಷರಾ ಅಕ್ಷರಾ ತು ಶ್ರೀರೇಕಾ ತತ್ಪರೋ ಹರಿಃ ॥ ಇತಿ ಸ್ಕಾಂದೇ ॥ ೧ ॥**

ಅ || (೧)ಬ್ರಹ್ಮಾ=ಚತುರ್ಮುಖನು, ಶಿವಃ=ರುದ್ರನು, ಸುರಾದ್ಯಾಶ್ಚ=ದೇವತೆಗಳೇ ಮೊದಲಾದ ಜೀವರು, ಶರೀರಕ್ಷರಣಾತ್=ದೇಹಗಳಿಗೆ ವಿನಾಶವಿದ್ದುದರಿಂದ, ಕ್ಷರಾಃ=ಕ್ಷರರೆಂದು, (ಹೇಳಲ್ಪಡುತ್ತಾರೆ.) ಲಕ್ಷ್ಮೀಃ=ಲಕ್ಷ್ಮೀದೇವಿಯು, ಅಕ್ಷರದೇಹತ್ವಾತ್=ವಿನಾಶವಿಲ್ಲದಿರುವ ಶರೀರವುಳ್ಳವಳಾದುದರಿಂದ, ಅಕ್ಷರಾ=ಅಕ್ಷರಳು, (ಎಂದು ಹೇಳಲ್ಪಡುತ್ತಾಳೆ.) ಹರಿಃ=ಶ್ರೀ ನಾರಾಯಣನು, ಸ್ವಾತಂತ್ರ್ಯಶಕ್ತಿವಿಜ್ಞಾನಸುಖಾದ್ಯೈಃ, ಸ್ವಾತಂತ್ರ್ಯ=ಸತ್ತಾ (ಸ್ಥಿತಿಯು) ಪ್ರತೀತಿಯು, ಪ್ರವೃತ್ತಿಯೂ ಇವುಗಳಲ್ಲಿ ಸ್ವಾಧೀನತೆಯು (ಪರರ ಅಪೇಕ್ಷೆಯಿಲ್ಲದಿರುವಿಕೆಯು),ಶಕ್ತಿ=ಕಾರ್ಯಗಳ ಉತ್ಪತ್ತಿಮೊದಲಾದುವುಗಳಿಗೆ ಅನುಕೂಲವಾದ ಅತೀಂದ್ರಿಯವಾದ ಕಾರಣಗತವಾದ ಧರ್ಮವಿಶೇಷವು, ವಿಜ್ಞಾನ=ವಿಶೇಷಜ್ಞಾನವು, ಸುಖ=ನಿತ್ಯಸುಖವು, ಆದ್ಯೈಃ=ಮೊದಲಾದ ವೀರ್ಯ-ಶೌರ್ಯ-ಔದಾರ್ಯ-ಕಾರುಣ್ಯ ಮೊದಲಾದ, ಅಖಿಲೈಃ=ಸಮಸ್ತಗಳಾದ, ಗುಣೈಃ ನಿಸ್ಸೀಮತ್ವೇನ=ನಿರವಧಿಕಗಳಾದ ಈ ಗುಣಗಳು ಇದ್ದುದರಿಂದ, ತತ್ಪರಃ=ಕ್ಷರಾಕ್ಷರರಿಂದ ಉತ್ತಮನು, ತೇ ಸರ್ವೇ=ಆ ಲಕ್ಷ್ಮ್ಯಾದಿಗಳೆಲ್ಲರೂ, ಸರ್ವದೈವ ಚ=ಯಾವಾಗಲೂ, ತದ್ವಶಾಃ=ವಿಷ್ಣುವಿನ ಅಧೀನರು. ಸಃ ಏಕಃ=ಆ ಒಬ್ಬ ಶ್ರೀ ಪರಮಾತ್ಮನೇ, ಸರ್ವಕ್ಷರಾಣಾಂ=ಎಲ್ಲಾ ಕ್ಷರರಿಗೆ, (ಎಲ್ಲಾ ಪ್ರಾಣಿಗಳಿಗೆ,) ಸರ್ಗಸ್ಥಿತಿ ಕ್ಷಯ ಯತಿ ಪ್ರಕಾಶಾವೃತ್ತಿಬಂಧನಂ, ಸರ್ಗ=ದೇಹಸೃಷ್ಟಿಯು, ಸ್ಥಿತಿ=ದೇಹವನ್ನಧಿಷ್ಠಾನೀಕರಿಸಿ ಅವಸ್ಥಿತಿಯು, ಕ್ಷಯ=ಮರಣವು, ಯತಿ=ವಿಧಿನಿಷೇಧಗಳಿಂದ ಬಂಧವು, ಪ್ರಕಾಶ=ಜ್ಞಾನವನ್ನು ಹುಟ್ಟಿಸುವಿಕೆಯು, ಆವೃತಿ=ಅವಿದ್ಯೆಯು, ಬಂಧನಂ=ಲಿಂಗದೇಹಾದಿ ಬಂಧವೂ ಇವುಗಳನ್ನು, ಕುರ್ಯಾತ್=ಮಾಡುವನು, ಸಾತ್ವಿಕಮೋಕ್ಷಣಂ=ಸಾತ್ವಿಕ ಜೀವರಿಗೆ ಆತ್ಯಂತಿಕ ದುಃಖನಿವೃತ್ತಿಪೂರ್ವಕವಾಗಿ ಪರಮಾನಂದಾಭಿವ್ಯಕ್ತಿರೂಪವಾದ ಮುಕ್ತಿಯನ್ನು, ಕುರ್ಯಾತ್=ಮಾಡುವನು, (ಹೀಗೆಯೇ ತಾಮಸರಿಗೆ ನಿತ್ಯ ನರಕಪ್ರಾಪ್ತಿಯನ್ನು ಮಾಡುವನು, ಅಕ್ಷರೇ=ಲಕ್ಷ್ಮೀದೇವಿಗೆ, ಸರ್ಗ ಸ್ಥಿತಿ ಯತಿ ಜ್ಯೋತಿರ್ನಿತ್ಯಾನಂದಪ್ರದಃ, ಸರ್ಗ=ಪ್ರಾದುರ್ಭಾವವು, ಸ್ಥಿತಿ=ಯಾವಾಗಲೂ ಮರಣವಿಲ್ಲದಿರುವುದು, ಯುತಿ = ಅಜ್ಞಾನುಸಾರವಾಗಿ ಇರುವುದು, ಜ್ಯೋತಿಃ = ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿಯೂ ಆಲೋಚಿಸದೆ ಇರುವಾಗಲೂ ಶ್ರೀಹರಿಯಿಂದ ಇತರಗಳಾದ ಸರ್ವವಸ್ತುಗಳ ಸಾಕ್ಷಾತ್ಕಾರವೂ, ನಿತ್ಯಾನಂದಂ=ಪರಮಾನಂದವೂ ಇವುಗಳನ್ನು, ಪ್ರದಃ=ಕೊಡುವವನು, ಸರ್ವೇಷಾಂ = ಎಲ್ಲರಿಗೂ, (ಕ್ಷರರಿಗೂ ಲಕ್ಷ್ಮೀದೇವಿಗೂ,) ಚೇಷ್ಟಾಪ್ರದಶ್ಚ = ಚೇಷ್ಟೆಯನ್ನು ಕೊಡುವವನೂ ಕೂಡ, ಪರಃ=ಸರ್ವೋತ್ತಮನಾದ, ಹರಿಃ=ಶ್ರೀಹರಿಯು, ಏಕ ಏವ=ಒಬ್ಬನೇ, ತಸ್ಯ=ಆ ಹರಿಗೆ, ಅನ್ಯಃ=ಬೇರೆ ಯಾರೊಬ್ಬನೂ, ಸರ್ಗಾದಿಕರ್ತಾ=ಸೃಷ್ಟಿ ಮೊದಲಾದುವುಗಳನ್ನು ಮಾಡುವವನು, ನಾಸ್ತಿ=ಇಲ್ಲವು, ಸಃ=ಆ ಹರಿಯು, ನಿರ್ದೋಷಕಶ್ಚ=ದೋಷ-ಲೇಶರಹಿತನೂ ಆಗಿರುತ್ತಾನೆ. (ಇತರರೆಲ್ಲರೂ ದೋಷವುಳ್ಳವರೇ ಆಗಿರುತ್ತಾರೆ —) ಇತಿ=ಹೀಗೆ, ಪರಮಶ್ರುತಿಃ=ಪರಮ ಶ್ರುತಿಯು. (೨) ಬ್ರಹ್ಮಶೇಷ ಸುಪರ್ಣೇಶ ಶಕ್ರಸೂರ್ಯಗುಹಾದಯಃ, ಬ್ರಹ್ಮ=ಚತುರ್ಮುಖನು, ಶೇಷ=ಶೇಷನು, ಸುಪರ್ಣ=ಗರುಡನು, ಈಶ=ರುದ್ರನು, ಶಕ್ರ=ದೇವೇಂದ್ರನು, ಸೂರ್ಯ=ಸೂರ್ಯನು, ಗುಹ=ಷಣ್ಮುಖನೂ ಇವರೇವೆ, ಆದಯಃ=ಮೊದಲಾಗಿ ಉಳ್ಳ, ಸರ್ವೇ=ಎಲ್ಲರೂ, ಕ್ಷರಾಃ=ಕ್ಷರರೆನ್ನಿಸುತ್ತಾರೆ, ಏಕಾ ಶ್ರೀಃ ತು=ಲಕ್ಷ್ಮೀದೇವಿಯೊಬ್ಬಳೇ, ಅಕ್ಷರಾ = ಅಕ್ಷರಶಬ್ದವಾಚ್ಯಳು, ಹರಿಃ = ಶ್ರೀಹರಿಯು, ತತ್ಪರಃ=ಕ್ಷರಾಕ್ಷರರಿಂದುತ್ತಮನು, ಇತಿ=ಹೀಗೆ, ಸ್ಕಾಂದೇ=ಸ್ಕಾಂದಪುರಾಣದಲ್ಲಿದೆ.

ತಾ || (1) 'ಸುರಾದ್ಯಾಃ ಜೀವಾಃ' ಎಂದಿಷ್ಟೇ ಹೇಳಿದರೆ 'ಚತುರ್ಮುಖನು ಜಗತ್ತನ್ನು ಸೃಷ್ಟಿಸುವವನೂ, ರುದ್ರನು ಸಂಹರಿಸುವವನೂ ಆದುದರಿಂದ ಇವರ ಶರೀರವಿನಾಶವು ಅಸಂಭಾ

ವಿತವು ಎಂದು ತಿಳಿದವರು ತದ್ವ್ಯತಿರಿಕ್ತರಾದ ಜೀವರನ್ನೇ ಸ್ವೀಕರಿಸಿಯಾರು. ಆದುದರಿಂದ ಬ್ರಹ್ಮ ರುದ್ರರನ್ನು ಬ್ರಹ್ಮತ್ವ ಶಿವತ್ವರೂಪ ಅಸಾಧಾರಣ ಧರ್ಮದಿಂದಲೇ ಸ್ವೀಕರಿಸಿರುವರು. (2) ಶ್ರೀ ಹರಿಯೊಬ್ಬನೇ ನಿರವಧಿಕ ಗುಣಗಳುಳ್ಳವನು. ಬ್ರಹ್ಮನಿಂದ ಲಕ್ಷ್ಮಿಗೆ ಕೋಟಿಗುಣಗಳು ಹೆಚ್ಚು ಇವೆ, ಎಂದು ಹೇಳಿರುವುದರಿಂದ ಲಕ್ಷ್ಮ್ಯಾದಿಗಳೆಲ್ಲರೂ ಸಾವಧಿಕ ಗುಣಗಳುಳ್ಳವರು. (3) ಈ ಹರಿಯು ಹೇಗೆ ಸರ್ವರಿಗೂ ಸೃಷ್ಟ್ಯಾದಿಗಳನ್ನು ಮಾಡುವವನೋ ಹಾಗೆಯೇ ಲಕ್ಷ್ಮ್ಯಾದಿಗಳ ಮಧ್ಯದಲ್ಲಿ ಶ್ರೀಹರಿಗೂ ಸೃಷ್ಟ್ಯಾದಿಗಳನ್ನು ಮಾಡತಕ್ಕವನಿದ್ದರೆ ಸಾಮ್ಯವೇ ಇದ್ದುದರಿಂದ ಸರ್ವೋತ್ತಮತ್ವವು ಕೂಡಲಾರದೆಂದರೆ ಆತನ ಸೃಷ್ಟ್ಯಾದಿಗಳನ್ನು ಮಾಡಿದವನು ಯಾರೂ ಇಲ್ಲವು (4) ಶೈವಾದಿ ಶಾಸ್ತ್ರಗಳಲ್ಲಿ ರುದ್ರಾದಿಗಳಿಗೆ ಸರ್ವೋತ್ತಮತ್ವವನ್ನು ಹೇಳಿರುವುದರಿಂದ ಅವನ್ನು ನಿರಾಕರಿಸುವುದಕ್ಕಾಗಿ ‘ ಬ್ರಹ್ಮಶಿವ ’ ಮೊದಲಾದವರನ್ನು ಅಸಾಧಾರಣ ಧರ್ಮದಿಂದ ಸ್ವೀಕರಿಸಿರುವರು ॥ ೧ ॥

ಈ ಪ್ರಕಾರ ಕ್ಷರಾಕ್ಷರ ಶಬ್ದಾರ್ಥಗಳನ್ನು ಹೇಳಿ ಸಾಮಾನ್ಯಾಕಾರವಾಗಿ ಶ್ರೀಹರಿಯು ಕ್ಷರಾಕ್ಷರರಿಂದುತ್ತಮನೆಂದು ಶ್ರುತಿಪುರಾಣವಾಕ್ಯಗಳಿಂದ ತೋರಿಸಿದರು. ಈಗ ಶಾಕ್ತ ಮೊದಲಾದ ಆಯಾಯ ಶಾಸ್ತ್ರದಲ್ಲಿ ಪ್ರತಿಪಾದ್ಯರಾದ ಶಕ್ತ್ಯಾದಿ ದೇವತೆಗಳಿಂದಲೇ ವಿಷ್ಣುವಿಗೆ ಉತ್ತಮತ್ವವನ್ನು ವಿಶೇಷಾಕಾರವಾಗಿ ಶ್ರುತಿಗಳಿಂದ ಉಪಪಾದಿಸುತ್ತಾರೆ.

**ಮೂ ॥ (೧) ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ । ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತ ವಾ ಉ (೨) ಅಹಂ ಜನಾಯ ಸಮದಂ ಕೃಣೋಮ್ಯಹಂ ದ್ಯಾವಾ ಪೃಥಿವೀ ಆವಿವೇಶ । ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮ ಯೋನಿರಪ್ಸ್ವಂತಸ್ಸಮುದ್ರೇ ॥೨॥**

ಅ ॥ (೧) (ಇದು ಮಹಾಲಕ್ಷ್ಮಿಯ ಮಾತು.) ಅಹಂ=ನಾನು, ಯಂ ಉಗ್ರಂ ಕಾಮಯೇ=ಯಾರು ಯಾರನ್ನು, ರುದ್ರನನ್ನಾಗಿ ಮಾಡಲಿಕ್ಕೆ ಇಚ್ಛಿಸುತ್ತೇನೋ, ತಂತಂ ಉಗ್ರಂ ಕೃಣೋಮಿ=ಅವರವರನ್ನು ರುದ್ರರನ್ನಾಗಿ ಮಾಡುತ್ತೇನೆ. (ಹೀಗೆಯೇ ತನ್ನ ಇಚ್ಛಾನುಸಾರವಾಗಿ) ತಂ ಬ್ರಹ್ಮಾಣಂ=ಅವನನ್ನು ಚತುರ್ಮುಖನನ್ನಾಗಿಯೂ, ತಂ ಋಷಿಂ=ಅವನನ್ನು ಋಷಿಯನ್ನಾಗಿಯೂ, ತಂ ಸುಮೇಧಾಂ=ಅವನನ್ನು ಒಳ್ಳೇ ಜ್ಞಾನಿಯನ್ನಾಗಿಯೂ, ಕೃಣೋಮಿ=ಮಾಡುತ್ತೇನೆ. ಅಹಂ=ನಾನು, ಶರವೇ=(ಬ್ರಹ್ಮನ ಐದನೇ ಮುಖವನ್ನು ಛೇದಿಸಿರುವುದರಿಂದ)ಹಿಂಸಕನಾದ, ಬ್ರಹ್ಮದ್ವಿಷೇ=ಚತುರ್ಮುಖನಿಗೆ ದ್ವೇಷಿಯಾದ, ರುದ್ರಾಯ=ರುದ್ರನನ್ನು, ಹಂತ ವಾ ಉ=ಕೊಲ್ಲುವುದಕ್ಕೋಸ್ಕರವೇ, (ಹೆದರಿಸಲಿಕ್ಕೆ ಅಲ್ಲವು)ಧನುಃ=ಧನುಸ್ಸನ್ನು ಆತನೋಮಿ=ವಿವರಿಸುತ್ತೇನೆ. (೨) ಅಹಂ=ನಾನು, ಜನಾಯ=ಜನರಿಗೆ, ಸಮದಂ=ಹರ್ಷವನ್ನು, ಕೃಣೋಮಿ=ಮಾಡುತ್ತೇನೆ. ಅಹಂ=ನಾನು, ದ್ಯಾವಾ ಪೃಥಿವೀ=ಸ್ವರ್ಗಭೂಮಿ ಮೊದಲಾದ ಎಲ್ಲಾ ಊರ್ಧ್ವಲೋಕಗಳನ್ನೂ ಅಧೋಲೋಕಗಳನ್ನೂ, ಆವಿವೇಶ=ಧರಿಸುವುದಕ್ಕಾಗಿ ಪ್ರವೇಶಮಾಡಿದೆನು. ಅಹಂ=ನಾನು, ಅಸ್ಯ=ಈ ಜಗತ್ತಿಗೆ, ಪಿತರಂ=ಪಾಲಕನಾದ ಬ್ರಹ್ಮನನ್ನು, ಮೂರ್ಧನ್=ಸರ್ವೋತ್ಕೃಷ್ಟತನದಿಂದ, ಸುವೇ=ಹುಟ್ಟಿಸುತ್ತೇನೆ. (ಚತುರ್ಮುಖನ ಪದದಲ್ಲಿ ಮಾತ್ರ ಸ್ಥಾಪಿಸುವುದಲ್ಲ) ಮಮ=ಇಂತಹ ನನಗೆ, ಯೋನಿಃ=ಕಾರಣಭೂತನಾದವನು, ಸಮುದ್ರೇ=ಸಮುದ್ರದಲ್ಲಿ, ಅಪ್ಸು ಅಂತಃ=ನೀರೊಳಗೆ (ಇರುತ್ತಾನೆ).

ತಾ ॥ 'ಗುರೋರ್ನಾಮ ನ ಗೃಹ್ಣೀಯಾಚ್ಛಿಷ್ಯೋ ಭಾರ್ಯಾ ಪತೇರಪಿ' ಎಂಬೀ ವಾಕ್ಯದಿಂದ ಸ್ತ್ರೀಯರಿಗೆ ಪ್ರಾಣಪ್ರಿಯರ ನಾಮಗ್ರಹಣವು ಅಯೋಗ್ಯವೆಂದು ಶಿಕ್ಷಿಸುವುದಕ್ಕಾಗಿ 'ನಾರಾಯಣ' ಎಂದು ಹೇಳದೆ 'ಆಪೋ ನಾರಾಃ ಇತಿ ಪ್ರೋಕ್ತಾಃ ಆಪೋ ವೈ ನರಸೂನವಃ । ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ।' ಎಂಬೀ ಪ್ರಮಾಣದಿಂದ ಹೇಳಲ್ಪಟ್ಟ ನಾರಾಯಣ ಶಬ್ದಾರ್ಥವನ್ನೇ 'ಮಮ ಯೋನಿರಪ್ಸ್ವಂತಃ' ಎನ್ನುವುದರಿಂದ ಲಕ್ಷ್ಮಿಯು ಹೇಳಿದಳು. ಈ ಶ್ರುತಿಯಲ್ಲಿ ಚತುರ್ಮುಖಮೊದಲಾದ ಎಲ್ಲಾ ದೇವತೆಗಳೂ ತನ್ನ ಅಧೀನದಲ್ಲಿರುವವರು ಎಂದು ಹೇಳಿ ತಾನೂ ಶ್ರೀ ನಾರಾಯಣ ದೇವರ ಅಧೀನದಲ್ಲಿರತಕ್ಕವಳು ಎಂದು ಮಹಾಲಕ್ಷ್ಮೀದೇವಿಯರಿಂದ ಹೇಳಲ್ಪಟ್ಟಿತು ॥ ೨ ॥

ಮೂ ॥ (೧) ಯಮಂತಃ ಸಮುದ್ರೇ ಕವಯೋಽವಯಂತಿ ಯದಕ್ಷರೇ ಪರಮೇ ಪ್ರಜಾಃ । ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ವ್ಯಸಸರ್ಜ ಭೂಮ್ಯಾಂ । (೨) ಯದೋಷಧೀಭಿಃ ಪುರುಷಾನ್ಪಶೂಂಶ್ಚ ವಿವೇಶ ಭೂತಾನಿ ಚರಾಚರಾಣಿ । ಅತಃ ಪರಂ ನಾನ್ಯದಣೀಯಸಂ ಹಿ ಪರಾತ್ಪರಂ ಯನ್ಮಹತೋ ಮಹಾಂತಂ । (೩) ಯದೇಕಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ । ತದೇವರ್ತಂ ತದು ಸತ್ಯಮಾಹುಸ್ತದೇವ ಬ್ರಹ್ಮ ಪರಮಂ ಕವೀನಾಂ । (೪) ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ । ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್ । (೫) ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ । (೬) ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನೇಶಾನೋ ನಾಗ್ನೀಷೋಮೌ ನೇಮೇ ದ್ಯಾವಾಪೃಥಿವೀ । (೭) ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ । (೮) ಸ ಮುನಿರ್ಭೂತ್ವಾ ಸಮಚಿಂತಯತ್ತತ ಏತೇ ವ್ಯಜಾಯಂತ । ವಿಶ್ವೋ ಹಿರಣ್ಯಗರ್ಭೋಽಗ್ನಿರ್ಯಮೋ ವರುಣ ರುದ್ರೇಂದ್ರಾ ಇತಿ । (೯) ವಾಸುದೇವೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ । ನೇಂದ್ರಸೂರ್ಯೌ ನ ಚ ಗುಹೋ ನ ಸೋಮೋ ನ ವಿನಾಯಕಃ ॥ ಇತ್ಯಾದಿ ಶ್ರುತಿಭ್ಯಶ್ಚ ॥ ೩ ॥

ಅ ॥ (೧) ಯಂ=ಯಾರನ್ನು, ಸಮುದ್ರೇ ಅಂತಃ=ಸಮುದ್ರದ ಒಳಗೆ ಇರತಕ್ಕವನನ್ನಾಗಿ, ಕವಯೋಽಪಿ=ಜ್ಞಾನಿಗಳೂ ಕೂಡ, ಅವಯಂತಿ=ಸ್ವಲ್ಪವಾಗಿಯೇ ತಿಳಿಯುತ್ತಾರೋ, ಯದಕ್ಷರೇ=ಯಾವ ಅಕ್ಷರಶಬ್ದವಾಚ್ಯನಾದ ವಿನಾಶವಿಲ್ಲದಿರುವ, ಪರಮೇ=ಸರ್ವೋತ್ತಮನಾದ ಶ್ರೀ ಹರಿಯಲ್ಲಿ, ಪ್ರಜಾಃ=ಬ್ರಹ್ಮಾದಿಗಳೆಲ್ಲರೂ ಅಧೀನರಾಗಿರುವರೋ, ಜಗತಃ ಪ್ರಸೂತೀ=ಸರ್ವಜಗತ್ತಿಗೂ ಉತ್ಪಾದಕಗಳಾದ ಮಹಾಲಕ್ಷ್ಮಿಯು, ಯತಃ=ಯಾವ ಶ್ರೀ ಹರಿಯಿಂದ, ಪ್ರಸೂತಾ=ಹುಟ್ಟಿರುವಳೋ, (ಯಾವ ಪರಬ್ರಹ್ಮನು) ತೋಯೇನ=ಅವರವರ ಕರ್ಮದಿಂದ,

ಸ್ವಸಾಮರ್ಥ್ಯದಿಂದಲಾಗಲೀ, ಜಲ ಮೊದಲಾದ ಐದು ಭೂತಗಳಿಂದಲಾಗಲೀ, ಭೂಮ್ಯಾಂ= ಭೂಲೋಕ ಮೊದಲಾದ ಲೋಕಗಳಲ್ಲಿ, ಜೀವಾನ್=ಸರ್ವಜೀವರನ್ನು, ವ್ಯಸಸರ್ಜ=ಅನೇಕ ಪ್ರಕಾರ ಸೃಷ್ಟಿಸಿದನು. (೨) ಯತ್=ಯಾವ ಪರಬ್ರಹ್ಮನು, ಓಷಧೀಭಿಃ=ಸೋಮಲತಾದಿ ಗಳಿಂದೊಡಗೂಡಿದ, ಪುರುಷಾನ್ = ಜೀವರನ್ನೂ, ಪಶೂಂಶ್ಚ = ಗವಾದಿಪಶುಗಳನ್ನೂ, ಚರಾಚರಾಣಿ ಭೂತಾನಿ=ಚೇತನಾಚೇತನಾತ್ಮಕ ಭೂತಗಳನ್ನು (ಪ್ರೇರಿಸುವುದಕ್ಕಾಗಿ), ವಿವೇಶ= ಪ್ರವೇಶಿಸಿದನೋ, ಅತಃ=ಈ ಬ್ರಹ್ಮನಿಂದ, ಪರಂ ಅನ್ಯತ್=ಅತಿಶಯವಾಗಿ ಬೇರೆಯಾದವಸ್ತುವು, ಅಣೀಯಸಂ=ಅತ್ಯಣುವಾದದ್ದು, ನ=ಇಲ್ಲವು, ಯತ್ = ಯಾವ ಬ್ರಹ್ಮನು, ಪರಾತ್ಪರಂ= ಉತ್ತಮರಾದ ಬ್ರಹ್ಮಾದಿಗಳಿಂದಲೂ ಉತ್ತಮನೋ, ಮಹತಃ=ಮಹಾಪರಿಮಾಣದಿಂದಲೂ, ಮಹಾಂತಂ=ಹೆಚ್ಚು ಪರಿಮಾಣವುಳ್ಳವನು. (೩) ಯತ್ ಏಕಂ=ಯಾವ ಬ್ರಹ್ಮನೇ, ಅವ್ಯಕ್ತಂ= ಅತೀಂದ್ರಿಯನೋ, ಅನಂತರೂಪಂ=ಅಪರಿಮಿತರೂಪಗಳುಳ್ಳವನೋ, ವಿಶ್ವಂ=ಪೂರ್ಣನೋ, ಪುರಾಣಂ=ಪುರಾತನನೋ, ತಮಸಃ=ಪ್ರಕೃತಿಯಿಂದ, ಅಜ್ಞಾನದಿಂದಲಾಗಲೀ, ಪರಸ್ತಾತ್= ಅದನ್ನತಿಕ್ರಮಿಸಿರುತ್ತಾನೋ, ತದೇವ ಋತಂ=ಅವನೇ ಯಥಾರ್ಥಜ್ಞಾನಸ್ವರೂಪನು. ತದು= ಆ ಬ್ರಹ್ಮನನ್ನೇ, ಸತ್ಯಂ=ಜ್ಞಾನಪೂರ್ವಕವಾಗಿ ಕ್ರಿಯೆವುಳ್ಳವನನ್ನಾಗಿಯೂ, ತದೇವ=ಆ ಬ್ರಹ್ಮ ನನ್ನೇ, ಕವೀನಾಂ=ಜ್ಞಾನಿಗಳ ಮತದಲ್ಲಿ, ಪರಮಂ ಬ್ರಹ್ಮ=ಸರ್ವೋತ್ತಮನಾದ ಬ್ರಹ್ಮನನ್ನಾ ಗಿಯೂ, ಆಹುಃ=ಹೇಳುತ್ತಾರೆ. (ಇಲ್ಲಿಯೂ ಲಕ್ಷ್ಮ್ಯಾದಿದೇವತೆಗಳಿಂದ ಶ್ರೀ ಹರಿಗೆ, ಸರ್ವೋ ತ್ಕೃಷ್ಟತ್ವರೂಪವಾದ ಅರ್ಥವು ತೋರುತ್ತದೆ.) (೪) ಅಸ್ಯ=ಪ್ರಸಿದ್ಧನಾದ, ದೇವಸ್ಯ=ಕ್ರೀಡಾದಿ ಗುಣವಿಶಿಷ್ಟನಾದ, ಮೀಳ್ಹುಷಃ=ಭಕ್ತರಿಗೆ ಅಭಿಲಷಿತವನ್ನು ಸೇಚಿಸುವ, ವಿಷಸ್ಯ=ಇಚ್ಛಾರೂಪ ನಾದ ಅಂದರೆ ಸತ್ಯಕಾಮನಾದ, ವಿಷ್ಣೋಃ = ಶ್ರೀ ಹರಿಗೆ, ಹವಿರ್ಭಿಃ=ಹವಿಸ್ಸುಗಳಿಂದ, ಪ್ರಭೃಥೇ=ಪೂಜೆಯು (ಮಾಡಲ್ಪಡುತ್ತಿರಲು ಆತನ ಪ್ರಸಾದದಿಂದ) ವಯಾಃ=ಅಹಂಕಾರಕ್ಕೆ ಅಭಿಮಾನಿಯಾಗಿ ಜೀವರಿಗೆ ಬಂಧಕನಾದ, ರುದ್ರಃ=ರುದ್ರನು, ರುದ್ರಿಯಂ ಮಹಿತ್ವಂ=ರುದ್ರನ ಪದವಿಯನ್ನು, ವಿದೇ=ಹೊಂದಿದನು, ಹಿ=ಪ್ರಸಿದ್ಧವು. ಹೇ ಅಶ್ವಿನಾ=ಎಲೋ ಅಶ್ವಿನೀದೇವತೆ ಗಳಿರಾ (ನೀವಿಬ್ಬರೂ ಕೂಡ ಶ್ರೀ ವಿಷ್ಣುವಿನ ಪ್ರಸಾದದಿಂದಲೇ,) ಇರಾವತ್ ವರ್ತಿಃ= ಅನ್ನವುಳ್ಳ ಸ್ಥಿತಿಯನ್ನು, ಅಂದರೆ ಸಮಸ್ತಭೋಗವುಳ್ಳ ಪದವಿಯನ್ನು, ಯಾಸಿಷ್ಟಂ = ಹೊಂದಿರುವಿರಿ. (ಈ ಪ್ರಕಾರವಾಗಿ ರುದ್ರಾದಿಗಳಿಗೆ ಭಗವಂತನ ಪ್ರಸಾದದ ಅಧೀನವಾದ ಪದಪ್ರಾಪ್ತಿಯು ಹೇಳಲ್ಪಡುತ್ತದೆ.) (೫) ಚಂದ್ರಮಾಃ=ಚಂದ್ರನು, ಮನಸಃ=(ಪರಮಪುರುಷನ) ಮನಸ್ಸಿನಿಂದ, ಜಾತಃ=ಹುಟ್ಟಿದ್ದಾನೆ. ಚಕ್ಷೋಃ=ಕಣ್ಣಿನಿಂದ, ಸೂರ್ಯಃ = ಸೂರ್ಯನು, ಅಜಾಯತ= ಹುಟ್ಟಿದನು, ಮುಖಾತ್ = ಮುಖದಿಂದ, ಇಂದ್ರಶ್ಚ = ಇಂದ್ರನೂ, ಅಗ್ನಿಶ್ಚ = ಅಗ್ನಿಯೂ, ಪ್ರಾಣಾತ್=ಪ್ರಾಣದಿಂದ, ವಾಯುಃ = ಮುಖ್ಯಪ್ರಾಣನು, ಅಜಾಯತ = ಹುಟ್ಟಿದನು. (೬) ಏಕಃ ನಾರಾಯಣಃ=ಒಬ್ಬ ನಾರಾಯಣನೇ, ಆಸೀತ್=ಇದ್ದನು. ಬ್ರಹ್ಮಾ ನ=ಚತುರ್ಮುಖನು ಇಲ್ಲಿಲ್ಲ. ಈಶಾನಃ ನ=ರುದ್ರನು ಇರಲಿಲ್ಲ. ಅಗ್ನೀಷೋಮೌ=ಅಗ್ನಿ ಸೋಮದೇವತೆಗಳು. ನ=ಇರಲಿಲ್ಲ. ಇಮೇ ದ್ಯಾವಾಪೃಥಿವೀ=ಈ ಸ್ವರ್ಗಭೂಮಿಗಳು, ನ=ಇರಲಿಲ್ಲ. (೭) ಏಕಃ ನಾರಾಯಣಃ=ಒಬ್ಬ ನಾರಾಯಣನು, ಆಸೀತ್=ಇದ್ದನು, ನ ಬ್ರಹ್ಮಾ=ಬ್ರಹ್ಮನು ಇರಲಿಲ್ಲ, ಶಂಕರಃ ನ ಚ=ರುದ್ರನೂ ಇರಲಿಲ್ಲ. (೮) (ಮಹಾ ಪ್ರಳಯದಲ್ಲಿ) ಸಃ=ಆ ಹರಿಯು, ಮುನಿಃ ಭೂತ್ವಾ=ಮೌನಿಯಾಗಿ, ಸಮಚಿಂತಯತ್=ಆಲೋಚಿಸಿದನು. ತತಃ=ಅವನ ಆಲೋಚನೆ ಯಿಂದ, (ಇಚ್ಛಾವಿಶೇಷದಿಂದ) ಏತೇ=ಇವರು, ವಿಶ್ವಃ=ಮುಖ್ಯಪ್ರಾಣನು, ಹಿರಣ್ಯಗರ್ಭಃ= ಚತುರ್ಮುಖನು, ಅಗ್ನಿಃ=ಅಗ್ನಿಯು, ಯಮಃ=ಯಮನು, ವರುಣರುದ್ರೇಂದ್ರಾ ಇತಿ=ವರುಣ

ರುದ್ರ, ಇಂದ್ರರೆಂಬುವರು, ವ್ಯಜಾಯಂತ=ಹುಟ್ಟಿದರು. (೯) ವಾಸುದೇವೋ ವಾ=ವಾಸುದೇವನೇ, ಇದಮಗ್ರೇ=ಈ ಜಗತ್ತಿನ ಅಗ್ರದಲ್ಲಿ, ಅಂದರೆ ಪ್ರಲಯಕಾಲದಲ್ಲಿ, ಆಸೀತ್=ಇದ್ದನು, ನ ಬ್ರಹ್ಮಾ = ಚತುರ್ಮುಖನು ಇರಲಿಲ್ಲ. ನ ಚ ಶಂಕರಃ = ರುದ್ರನೂ ಇರಲಿಲ್ಲ. ನ ಇಂದ್ರ ಸೂರ್ಯೌ=ಇಂದ್ರ, ಸೂರ್ಯರೂ ಇರಲಿಲ್ಲ ನ ಚ ಗುಹಃ=ಸ್ಕಂದನೂ ಇರಲಿಲ್ಲ. ನ ಸೋಮಃ=ಸೋಮನೂ ಇರಲಿಲ್ಲ. ನ ವಿನಾಯಕಃ = ವಿನಾಯಕನೂ ಇರಲಿಲ್ಲ. ಇತ್ಯಾದಿ ಶ್ರುತಿಭ್ಯಃ ಚ=ಇದು ಮೊದಲಾದ ಶ್ರುತಿಗಳಿಂದಲೂ (ಶ್ರೀ ವಿಷ್ಣುವಿಗೆ ಸಮತೀತಕ್ಷರಾಕ್ಷರತ್ವವು ಸಿದ್ಧವಾಯಿತು.) ॥ ೩ ॥

ಪುನಃ ಅದ್ವೈತಿಗಳು ಶಂಕಿಸುತ್ತಾರೆ — 'ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್ । ಯಸ್ಮಾನ್ನಾಣೀಯೋ ನ ಜ್ಯಾಯೋಽಸಿ ಕಿಂಚಿತ್ । ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕಸ್ತೇನೇದಂ ಪೂರ್ಣಂ ಪುರುಷೇಣ ಸರ್ವಂ' ॥ ಈ ಮಂತ್ರದಲ್ಲಿ ಪರಮಾತ್ಮನಿಂದ ಬೇರೆಯಾದ ಎಲ್ಲಾ ವಸ್ತುವು ಅಸತ್ತೆಂದು ಹೇಳಲ್ಪಡುತ್ತದೆ. ಆದಕಾರಣ ಬೇರೆ ವಸ್ತುಗಳೇ ಇಲ್ಲದಿರುವುದರಿಂದ ಶ್ರೀ ಹರಿಗೆ ಸರ್ವೋತ್ತಮತ್ವವು ಕೂಡಲಾರದು, ಎಂದಾಶಂಕಿಸಿದರೆ —

**ಮೂ ॥ (೧) ಯಸ್ಮಾತ್ಪರಂ ನಾಪರಮಸ್ತಿ ಕಿಂಚಿದಿತ್ಯತ್ರಾಪ್ಯಪರಮಸ್ತೀತ್ಯೇವಾರ್ಥಃ । (೨) ಅನ್ಯಥಾ ತೇನೇದಂ ಪೂರ್ಣಂ ತತೋ ಯದುತ್ತರಂ ತದರೂಪಮನಾಮಯಮಿತಿ ವಾಕ್ಯಶೇಷವಿರೋಧಾತ್ । (೩) ತೇನೇದಮಿತ್ಯುಕ್ತಮೇವ ತತ ಇತಿ ಪರಾಮೃಶ್ಯತೇ । (೪) ಅನ್ಯಥಾ ಯಸ್ಮಾತ್ಪರಂ ನೇತ್ಯುಕ್ತಿ ವಿರೋಧಾತ್ ॥ ೪ ॥**

ಅ ॥ (೧) ಯಸ್ಮಾತ್=ಯಾವ ಪರಮಾತ್ಮನಿಂದ, ಪರಂ=ಉತ್ಕೃಷ್ಟವಾದ ವಸ್ತುವು, ನ=ಇಲ್ಲವು. ಅಪರಂ ಅಸ್ತಿ=ಅಪಕೃಷ್ಟವಾದುದು ಇದೆ. ಕಿಂಚಿತ್=ಅದೂ ಅಲ್ಪವಾದುದೇ. ಇತ್ಯತ್ರಾಪಿ=ಈ ಶ್ರುತಿಯಲ್ಲಿಯೂ, ಅಪರಂ ಅಸ್ತಿ=ನಿಕೃಷ್ಟವಾದುದು ಇದೆ. ಇತ್ಯೇವಾರ್ಥಃ= ಈ ಅರ್ಥವೇ ಪ್ರತಿಪಾದಿಸಲ್ಪಡುತ್ತದೆ. (ಪರಾಪರ ಎರಡು ವಸ್ತುಗಳಿಗೂ ನಿಷೇಧವು ಅಲ್ಲವು) (೨) (ಎರಡಕ್ಕೂ ನಿಷೇಧವೆಂದು ಏಕೆ ಹೇಳಬಾರದು ಎಂದರೆ) ಅನ್ಯಥಾ=ಪರಮಪುರುಷನಿಂದ ಬೇರೆಯಾದುದು ಯಾವುದೂ ಇಲ್ಲವೆಂದು ಅರ್ಥವಾದರೆ, ತೇನ=ಆ ಬ್ರಹ್ಮನಿಂದ, ಇದಂ=ಈ ಎಲ್ಲಾ ವಸ್ತುವೂ, ಪೂರ್ಣಂ=ಪರಿಪೂರ್ಣವಾಗಿದೆ. (ಈ ವಾಕ್ಯಶೇಷವು ವಿರುದ್ಧವಾಗುವುದು. ಇಲ್ಲಿ 'ಇದಂ' ಎನ್ನುವುದರಿಂದ 'ಬೇರೆ ವಸ್ತುಗಳು ಇವೆ' ಎಂದು ಅವಗತವಾಗುತ್ತದೆ. ಬೇರೆ ವಸ್ತುಗಳು ಇಲ್ಲದಿದ್ದರೆ ಶ್ರೀಹರಿಯಿಂದ ಯಾವುದು ಪೂರ್ಣವಾಗಬೇಕಾಗುವುದು.) ಹಾಗೆಯೇ, ತತಃ=ಎಲ್ಲಾ ಪ್ರಪಂಚದಿಂದ, ಯತ್=ಯಾವ ಬ್ರಹ್ಮನು, ಉತ್ತರತರಂ=ಅತ್ಯುತ್ಕೃಷ್ಟನಾದವನು. (ಈ ವಾಕ್ಯಶೇಷವೂ ವಿರುದ್ಧವಾಗುವುದು.) ತತ್=ಆ ಬ್ರಹ್ಮನು, ಅರೂಪಂ=ಪ್ರಾಕೃತರೂಪಗಳು ಇಲ್ಲದಿರುವವನು, ಅನಾಮಯಂ=ರೋಗರಹಿತನು, ಅಂದರೆ ದೋಷವರ್ಜಿತನು. ಇತಿ= ಹೀಗೆ, ವಾಕ್ಯಶೇಷವಿರೋಧಾತ್=ಶಿಷ್ಟವಾಕ್ಯದ ವಿರೋಧವಿದ್ದುದರಿಂದ, (೩) ('ತತೋ ಯದುತ್ತರತರಂ' ಎನ್ನುವಲ್ಲಿ 'ತತಃ' ಎನ್ನುವುದರಿಂದ ಪುರುಷನಿಂದ ಯಾವುದು ಉತ್ಕೃಷ್ಟವಾದುದು ಇದೆ, ಎಂದು ಹೇಳಲ್ಪಡುತ್ತದೆ. ಆದುದರಿಂದ ಜಗತ್ತಿಗೆ ಮಿಥ್ಯಾತ್ವವನ್ನು ಅಂಗೀಕರಿಸಿದರೂ ಶಿಷ್ಟವಾಕ್ಯದ ವಿರೋಧವಿಲ್ಲವು. ಎಂದಾಶಂಕಿಸಿದರೆ) ತೇನ = ಆ ಬ್ರಹ್ಮನಿಂದ, ಇದಂ ಇತಿ ಉಕ್ತಮೇವ='ಇದಂ' ಶಬ್ದನಿಂದ ಹೇಳಲ್ಪಟ್ಟ ಸರ್ವ ಜಗತ್ತೇ, ತತಃ ಇತಿ ಪರಾಮೃಶ್ಯತೇ= 'ತತಃ' ಎನ್ನುವುದರಿಂದ ಪರಾಮರ್ಶಮಾಡಲ್ಪಡುತ್ತದೆ. ('ತೇನ' ಎನ್ನುವುದರಿಂದ ಹೇಳಲ್ಪಟ್ಟ

ಪರವು ಪುರುಷನು ಪರಾಮರ್ಶಿಸಲ್ಪಡುವುದಿಲ್ಲ) (೪) (ಪ್ರಧಾನನಾದುದರಿಂದ ಪರಬ್ರಹ್ಮನನ್ನೇ ಪರಾಮರ್ಶಿಸಿಕೊಳ್ಳಬೇಕು. ಅಪ್ರಧಾನವಾದುದರಿಂದ ಜಗತ್ತನ್ನು ಪರಾಮರ್ಶಿಸಕೂಡದು, ಎಂದರೆ ಸತ್ಯವೇ, ಆದಾಗ್ಯೂ ಪೂರ್ವವಾಕ್ಯದ ವಿರೋಧವಿದ್ದುದರಿಂದ ಹೀಗೆಯೇ ಅಂಗೀಕರಿಸಬೇಕು ಎನ್ನುತ್ತಾರೆ) ಅನ್ಯಥಾ=ಇಲ್ಲವಾದರೆ, ಯಸ್ಮಾತ್=ಯಾವ ಬ್ರಹ್ಮನಿಂದ, ಪರಂ ನ=ಉತ್ಕೃಷ್ಟವಾದುದು ಇಲ್ಲವು. ಇತ್ಯುಕ್ತಿ ವಿರೋಧಾತ್=ಈ ಪ್ರಕಾರ ವಚನವಿರೋಧವಿದ್ದುದರಿಂದ ಅಂದರೆ 'ಯಸ್ಮಾತ್ಪರಂ ನ' ಎಂದು ಪುರುಷನಿಂದ ಉತ್ಕೃಷ್ಟವನ್ನು ನಿಷೇಧಿಸಿ ಆ ಪುರುಷನಿಂದ ಬೇರೆಯಾದುದು ಅತ್ಯುತ್ಕೃಷ್ಟವು ಇದೆ ಎಂದು ಪುನಃ 'ತತೋ ಯದುತ್ತರತರಂ' ಎನ್ನುವ ವಾಕ್ಯದಲ್ಲಿ ವಿರೋಧವು ಬರುವುದು ॥ ೪ ॥

ಪುನಃ ಶಂಕಿಸುತ್ತಾರೆ. 'ಹಿರಣ್ಯ ಗರ್ಭಃ ಸಮವರ್ತತಾಗ್ರೇ' 'ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ'। 'ಸ ಇಮಾನ್ ಲೋಕಾನೀಶತೇ ಈಶಿನೀಭಿಃ' ಇದು ಮೊದಲಾದ ಶ್ರುತಿಗಳಲ್ಲಿ ಬ್ರಹ್ಮರುದ್ರಾದಿಗಳಿಗೂ ಸರ್ವೇಶ್ವರತ್ವ ಮೊದಲಾದುದು ಹೇಳಲ್ಪಡುವುದರಿಂದ ಅದು ವಿಷ್ಣುವಿಗೆ ಮಾತ್ರ ಹೇಗೆ ಅಂಗೀಕರಿಸಲ್ಪಡುತ್ತದೆ ಎಂದರೆ —

**ಮೂ ॥ (೧) ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ । ಅಸ್ಯೈವ ಸರ್ವನಾಮಾನಿ ವ್ಯತಿರಿಕ್ತಸ್ಯ ಸರ್ವತಃ । ಯಃ ಸ್ವತಂತ್ರಸ್ಸದೈವೈಕಃ ಸ ವಿಷ್ಣುಃ ಪರಮೋ ಮತ ಇತ್ಯಾದಿ ಶ್ರುತಿಭ್ಯೋಽನ್ಯನಾಮಾನ್ಯಸ್ಯೈವೇತಿ ನಾನ್ಯೇಷಾಂ ಸರ್ವೇಶ್ವರತ್ವಾದಿಕಮುಚ್ಯತೇ । ಸರ್ವವೇದೇಷ್ವಪ್ಯಸ್ಯಾದೋಷವಚನಾದಾದಾವಭಾವಾವಚನಾಚ್ಚ ತದ್ವಚನಾಚ್ಚಾನ್ಯೇಷಾಂ ಸರ್ವೇಷಾಂ ವೇದೇಷು ಸರ್ವೇಷು । ತೇಷಾಂ ಸರ್ವನಾಮತ್ವಾನುಕ್ತೇಶ್ಚ ॥ ೫ ॥**

ಅ ॥ (೧) ಸರ್ವಾಣಿ ನಾಮಾನಿ=ಎಲ್ಲಾ ನಾಮಗಳು, ಯಂ=ಯಾರನ್ನು, ಆವಿಶಂತಿ=ಮುಖ್ಯ ವೃತ್ತಿಯಿಂದ ಹೇಳುತ್ತವೋ, ತಂ ವೈ=ಆತನನ್ನೇ, ವಿಷ್ಣುಂ ಪರಮಂ=ಸರ್ವೋತ್ತಮನಾದ ಶ್ರೀಹರಿಯನ್ನೇ, ಉದಾಹರಂತಿ=(ಜ್ಞಾನಿಗಳು) ಹೇಳುತ್ತಾರೆ, ಸರ್ವತಃ=ಎಲ್ಲಾ ವಸ್ತುಗಳಿಂದಲೂ, ವ್ಯತಿರಿಕ್ತಸ್ಯ=ಭಿನ್ನನಾದ, ಅಸ್ಯೈವ=ಈ ಹರಿಗೇನೆ, ಸರ್ವನಾಮಾನಿ=ಎಲ್ಲಾ ನಾಮಗಳು, ಯಃ=ಯಾರು, ಏಕ ಏವ=ಒಬ್ಬನೇ, ಸದಾ=ಯಾವಾಗಲೂ, ಸ್ವತಂತ್ರಃ=ಸ್ವತಂತ್ರನೋ, ಸಃ ವಿಷ್ಣುಃ=ಆ ವಿಷ್ಣುವೇ, ಪರಮಃ=ಸರ್ವೋತ್ತಮನೆಂದು, ಮತಃ=ಸಮ್ಮತನು, ಇತ್ಯಾದಿ ಶ್ರುತಿಭ್ಯಃ=ಇವುಮೊದಲಾದ ಶ್ರುತಿಗಳಿಂದ, ಅನ್ಯನಾಮಾನ್ಯಪಿ=ಇತರರ ನಾಮಗಳೆಂದು ಪ್ರಸಿದ್ಧಗಳಾದಾಗ್ಯೂ ಹಿರಣ್ಯಗರ್ಭ ಮೊದಲಾದ ನಾಮಗಳು, ಅಸ್ಯೈವ=ಈ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಇತಿ=ಆದುದರಿಂದ, (ಆ ಶ್ರುತಿಗಳೂ ವಿಷ್ಣುಪರಗಳಾದುದರಿಂದ,) ಅನ್ಯೇಷಾಂ=ಇತರರಿಗೆ, ಸರ್ವೇಶ್ವರತ್ವಾದಿಕಂ=ಸರ್ವೇಶ್ವರತ್ವ ಮೊದಲಾದುದು, ನ ಉಚ್ಯತೇ=ಹೇಳಲ್ಪಡುವುದಿಲ್ಲ, ಸರ್ವವೇದೇಷ್ವಪಿ=ಎಲ್ಲಾ ವೇದಗಳಲ್ಲಿಯೂ, ಅಸ್ಯ=ಈ ಹರಿಗೆ, ಅದೋಷವಚನಾತ್=ದೋಷವಚನವಿಲ್ಲದಿರುವುದರಿಂದಲೂ, ದೋಷವಿಲ್ಲವೆಂದು ಹೇಳುವ ವಚನವಿದ್ದುದರಿಂದಲೂ, ಆದೌ=ಪ್ರಲಯದಲ್ಲಿ, ಅಭಾವಾವಚನಾತ್=ಇಲ್ಲವೆನ್ನುವ ವಚನವಿಲ್ಲದಿರುವುದರಿಂದಲೂ, ಇದ್ದಾನೆನ್ನುವ ವಚನವಿದ್ದುದರಿಂದಲೂ, ಸರ್ವೇಷು ವೇದೇಷು, ಎಲ್ಲಾ ವೇದಗಳಲ್ಲಿಯೂ, ಅನ್ಯೇಷಾಂ ಸರ್ವೇಷಾಂ=ಇತರರಿಗೆಲ್ಲರಿಗೂ, ತದ್ವಚನಾಚ್ಚ=ದೋಷವಚನವಿದ್ದುದರಿಂದಲೂ, ಪ್ರಲಯದಲ್ಲಿ ಇಲ್ಲವೆನ್ನುವ

ವಚನವಿದ್ದುದರಿಂದಲೂ, ತೇಷಾಂ=ಅವರಿಗೆ, ಸರ್ವನಾಮತ್ವಾನುಕ್ತೇಶ್ಚ = ಸರ್ವನಾಮಗಳು ಇವೆ ಎಂದು ಹೇಳದಿರುವುದರಿಂದಲೂ, (ಸರ್ವೇಶ್ವರತ್ವಾದಿಗಳು ಹೇಳಲ್ಪಡುವುದಿಲ್ಲವು.)

ತಾ || (1) ಯಾರು ಸರ್ವೇಶ್ವರನೋ ಅವನು ಅಜ್ಞಾನಾದಿ ದೋಷರಹಿತನೂ, ಪ್ರಲಯಕಾಲದಲ್ಲಿಯೂ ಜ್ಞಾನಾದಿಗಳಿಗೆ ನಾಶವಿಲ್ಲದಿರುವವನೂ ಆಗಬೇಕು. ಅಜ್ಞಾನಾದಿಗಳಿದ್ದರೆ ಪ್ರಕೃತ್ಯಾದಿ ಜಗತ್ತನ್ನು ತಿಳಿಯದಿರುವುದರಿಂದ ಅದಕ್ಕೆ ನಿಯಾಮಕನೆಂಬುವುದೇ ಕೂಡುವುದಿಲ್ಲ. ಯಾರಿಗೆ ಇತರ ಜೀವರಂತೆ ಪ್ರಲಯದಲ್ಲಿ ಜ್ಞಾನಾದಿಗಳಿಗೆ ವಿಲೋಪ ಬರುವುದೋ ಅವರಿಗೆ ಸೃಷ್ಟ್ಯಾದಿಕರ್ತೃತ್ವವೇ ಕೂಡಲಾರದು. ಶ್ರೀಹರಿಗಾದರೂ ಅಜ್ಞಾನ ಅಶಕ್ತಿ ಮೊದಲಾದ ದೋಷಗಳೂ, ಪ್ರಲಯದಲ್ಲಿ ಜ್ಞಾನಾದಿಗಳಿಗೆ ವಿಲೋಪವೂ, ಎಲ್ಲಿಯೂ ಶ್ರುತವಾಗುವುದಿಲ್ಲ. ಅವುಗಳಿಲ್ಲವೆಂದೇ ಶ್ರುತವಾಗಿವೆ. ಆದುದರಿಂದ ಶ್ರೀಹರಿಗೇನೇ ಸರ್ವೇಶ್ವರತ್ವಾದಿಗಳು ಸಂಭವಿಸುತ್ತವೆ. ಬ್ರಹ್ಮಾದಿಗಳಿಗೆ ನಿರ್ದೋಷತ್ವಾದಿಗಳು ಶ್ರುತಗಳಾಗದಿರುವುದರಿಂದಲೂ, ದೋಷಾದಿಗಳೇ ಶ್ರುತಗಳಾದುದರಿಂದಲೂ ಸರ್ವೇಶ್ವರತ್ವಾದಿಗಳು ಕೂಡಲಾರವು ಆದುದರಿಂದ ಆ ಶ್ರುತಿಗಳಿಗೆ ವಿಷ್ಣುಪರತ್ವವೇ ಉಚಿತವು. (೨) ರುದ್ರನೇ ಸರ್ವೇಶ್ವರನಾಗಿದ್ದರೆ ಚತುರ್ಮುಖ ಬ್ರಹ್ಮನಿಗೆ ಸರ್ವೇಶ್ವರತ್ವವನ್ನು ಹೇಳುವ ಶ್ರುತಿಗಳಿಗೆ ಏನು ಗತಿಯು? ನಮ್ಮ ರೀತಿಯಿಂದ ಆ ಶ್ರುತಿಗಳಿಗೆ ಶಿವಪರತ್ವವು ಕೂಡಲಾರದು. ಶ್ರೀ ಹರಿಗೆ ಹಿರಣ್ಯಗರ್ಭ ಮೊದಲಾದ ಸರ್ವನಾಮಗಳು ಇವೆ ಎನ್ನುವಲ್ಲಿ ಪ್ರಮಾಣವು ಹೇಳಲ್ಪಟ್ಟಿದೆ. ಶಿವಾದಿಗಳಿಗೆ ಸರ್ವೋತ್ತಮತ್ವವನ್ನು ಹೇಳುವ ಪ್ರಮಾಣಗಳೇ ಇಲ್ಲವು. ಆದಕಾರಣ ಶಿವಾದಿಗಳಿಗೆ ಸರ್ವೇಶ್ವರತ್ವಾದಿಗಳನ್ನು ಶ್ರುತಿಯಿಂದ ಹೇಳಲು ಸಾಧ್ಯವಿಲ್ಲವು. ವಿಷ್ಣುವಿಗೇನೇ ಹೇಳಬೇಕು ॥ ೫ ॥

'ಜನಿತೋತ ವಿಷ್ಣೋಃ' ಎಂಬೀ ಶ್ರುತಿಯಲ್ಲಿ ವಿಷ್ಣುವಿಗೂ ಉತ್ಪತ್ತಿಯನ್ನು ಹೇಳುವುದರಿಂದ ನಿರ್ದೋಷತ್ವಾದಿಗಳು ಹೇಗೆ ಪ್ರತಿಜ್ಞಾತಗಳಾಗುತ್ತವೆ? ಅಲ್ಲಿ ಹೇಳುವ ಸಮಾಧಾನವನ್ನೇ ಶಿವಾದಿಗಳಲ್ಲಿಯೂ ಹೇಳಲು ಶಕ್ಯವಾಗುವುದೆಂಬಾಶಂಕೆಯನ್ನು ಶ್ರುತಿಯಿಂದಲೇ ಪರಿಹರಿಸುತ್ತಾರೆ —

**ಮೂ || ಉತ್ಪತ್ತಿರ್ವಾಸುದೇವಸ್ಯ ಪ್ರಾದುರ್ಭಾವೋ ನ ಚಾಪರಃ। ದೇಹೋತ್ಪತ್ತಿಸ್ತದನ್ಯೇಷಾಂ ಬ್ರಹ್ಮಾದೀನಾಂ ತದೀರಣಾತ್। ದೇಹೋಽನಾದಿರ್ಹರೇರ್ನಿತ್ಯೋ ಬ್ರಹ್ಮಾದೀನಾಮನಿತ್ಯಕಾಃ। ಮುಖ್ಯೋತ್ಪತ್ತಿಸ್ತದನ್ಯೇಷಾಂ ಪ್ರಾದುರ್ಭಾವೋ ಹರೇರ್ಜನಿಃ ॥ ಇತಿ ಪರಮಶ್ರುತೇಶ್ಚ ॥ ॥ ೬ ॥**

ಅ || ವಾಸುದೇವಸ್ಯ=ಶ್ರೀ ಕೃಷ್ಣನಿಗೆ, ಉತ್ಪತ್ತಿಃ = ಉತ್ಪತ್ತಿ ಎಂದರೆ — ಪ್ರಾದುರ್ಭಾವಃ=ಪ್ರಾದುರ್ಭಾವವು, ಅಪರಃ=ದೇಹೋತ್ಪತ್ತ್ಯಾದಿಗಳು, ನ ಚ=ಅಲ್ಲವು, ತದನ್ಯೇಷಾಂ= ಬ್ರಹ್ಮಾದಿ ಶಬ್ದವಾಚ್ಯಗಳಾದ ವಿಷ್ಣುರೂಪಗಳಿಂದ ಇತರರಾದ, ಬ್ರಹ್ಮಾದೀನಾಂ=ಚತುರ್ಮುಖಾದಿಗಳಿಗೆ, ತದೀರಣಾತ್=ಆ ವಾಸುದೇವನ ಪ್ರೇರಣೆಯಿಂದ, ದೇಹೋತ್ಪತ್ತಿಃ=ಶರೀರೋತ್ಪತ್ತಿಯು, (ಉತ್ಪತ್ತಿಶ್ರುತಿಗೆ ಅರ್ಥವು.) ಹರೇಃ = ಶ್ರೀಪರಮಾತ್ಮನ, ದೇಹಃ = ಶರೀರವು, ಅನಾದಿಃ = ಅನಾದಿಯು, ನಿತ್ಯಃ = ನಿತ್ಯವು, ಬ್ರಹ್ಮಾದೀನಾಂ = ಚತುರ್ಮುಖಾದಿಗಳ, (ದೇಹಗಳು) ಅನಿತ್ಯಕಾಃ=ಅನಿತ್ಯಗಳು, (ಸಾದಿಗಳೂ ಆಗಿವೆ.) ತದನ್ಯೇಷಾಂ=ಶ್ರೀಹರಿಯಿಂದ

ಇತರರಾದವರಿಂಗೆ, ಮುಖ್ಯೋತ್ಪತ್ತಿಃ=ದೇಹೋತ್ಪತ್ತಿಯೇ, (ಉತ್ಪತ್ತಿ ವಾಕ್ಯಾರ್ಥವು). ಹರೇಃ= ಶ್ರೀಹರಿಗೆ, ಪ್ರಾದುರ್ಭಾವಃ=ಪ್ರಾದುರ್ಭಾವವು, ಜನಿಃ=ಜನಿಶ್ರುತ್ಯರ್ಥವು. ಇತಿ=ಹೀಗೆ, ಪರಮಶ್ರುತೇಶ್ಚ=ಪರಮ ಶ್ರುತಿಯಿಂದ ॥ ೬ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ ಶ್ರೀಮದ್ವಿಷ್ಣುತತ್ವವಿನಿರ್ಣಯೇ ದ್ವಿತೀಯಃ ಪರಿಚ್ಛೇದಃ ॥ ೨ ॥**

**ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀಮದ್ವಿಷ್ಣುತತ್ವವಿನಿರ್ಣಯದಲ್ಲಿ ೨ನೇ ಪರಿಚ್ಛೇದವು ಸಮಾಪ್ತವಾಯಿತು ॥ ೨ ॥**



॥ ಶ್ರೀಃ ॥

ಜಗಜ್ಜನ್ಮಾದಿ ಕರ್ತಾರಂ ಸಮಸ್ತಗುಣಸಾಗರಂ ।
ಅವದ್ಯಗಂಧವಿಧುರಂ ಹರಿಂ ವಂದೇ ನಿರಂತರಂ ॥

ಮೂ ॥ **ಓಂ ॥ (೧) ವರ್ಜಿತಃ ಸರ್ವದೋಷೈರ್ಯೋ ಗುಣಸರ್ವಸ್ವಮೂರ್ತಿಮಾನ್ । ಸ್ವತಂತ್ರೋ ಯಸ್ಯವಶಾಃ ಸರ್ವೇ ಸ ವಿಷ್ಣುಃ ಪರಮೋ ಮತ ಇತಿ ಪರಮೋಪನಿಷದಿ । (೨) ನಿತ್ಯಪೂರ್ಣಾಖಿಲಗುಣೋ ನಿರ್ದೋಷಃ ಸರ್ವದೈವ ಯಃ । ಯಃ ಸ್ವತಂತ್ರಃ ಪರೋ ವಿಷ್ಣುರ್ಜನ್ಮಮೃತ್ಯಾದಿವರ್ಜಿತಃ । (೩) ನಾರದ ಉವಾಚ । ನಿರ್ದೋಷಶ್ಚೇತ್ಕಥಂ ವಿಷ್ಣುರ್ಮಾನುಷೇಷೂದಪದ್ಯತ । ಚಿಂತಾಶ್ರಮವ್ರಣಾಜ್ಞಾನದುಃಖಯುಗ್ದೃಶ್ಯತೇ ಕಥಂ । ಏಷ ಮೇ ಸಂಶಯೋ ಬ್ರಹ್ಮನ್ ಹೃದಿ ಶಲ್ಯ ಇವಾರ್ಪಿತಃ । ಅನುದ್ಧಾರ್ಯೋಽಪರೈರ್ಮರ್ತ್ಯೈಃ ಸೂಕ್ತಿ ಶಕ್ತ್ಯಾ ತಮುದ್ಧರ । (೪) ಬ್ರಹ್ಮೋವಾಚ । ಸ್ತ್ರೀಪುಂಮಲಾಭಿಯೋಗಾತ್ಮಾ ದೇಹೋ ವಿಷ್ಣೋರ್ನ ಜಾಯತೇ । ಕಿಂತು ನಿರ್ದೋಷಚೈತನ್ಯಸುಖಾಂ ನಿತ್ಯಾಂ ಸ್ವಕಾಂ ತನುಂ । ಪ್ರಕಾಶಯತಿ ಸೈವೇಯಂ ಜನಿರ್ವಿಷ್ಣೋರ್ನ ಚಾಪರಾ । ತಥಾಪ್ಯಸುರಮೋಹಾಯ ಪರೇಷಾಂ ಚ ಕ್ವಚಿತ್ಕ್ವಚಿತ್ । ದುಃಖಾಜ್ಞಾನಶ್ರಮಾದೀನ್ಸ ದರ್ಶಯೇಚ್ಛುದ್ಧಸದ್ಗುಣಃ । ಕ್ವ ವ್ರಣಾದಿ ಕ್ವ ಚಾಜ್ಞಾನಂ ಸ್ವಾತಂತ್ರ್ಯನ್ನಿತ್ಯಸದ್ಗುಣೇ (ಸ್ವತಂತ್ರಾಚಿಂತ್ಯಸದ್ಗುಣೇ) ದೌರ್ಲಭ್ಯಾಯೈವ ಮೋಕ್ಷಸ್ಯ ದರ್ಶಯನ್ಪರಮೋ ಹರಿಃ (ಯೇತ್ಸಾನ್ಯಚೋ ಹರಿಃ)। ಮಿಥ್ಯಾದರ್ಶನದೋಷೇಣ ತೇನ ಮುಕ್ತಿಂ ನ ಯಾಂತಿ ಚ । ತಮೋ ಯಾಂತಿ ಚ ತೇನೈವ ತಸ್ಮಾದ್ದೋಷವಿವರ್ಜಿತಂ । ಪ್ರಾದುರ್ಭಾವಗತಂ ಚೈವ ಜಾನೀಯಾದ್ವಿಷ್ಣುಮಂಜಸಾ ॥ ಇತಿ ಬ್ರಹ್ಮಾಂಡೇ ॥ ೧ ॥**

ಅ ॥ (೧) ಯಃ=ಯಾರು, ಸರ್ವದೋಷೈಃ=ಎಲ್ಲಾ ದೋಷಗಳಿಂದಲೂ, ವರ್ಜಿತಃ= ವಿರಹಿತನೋ, ಗುಣಸರ್ವಸ್ವಮೂರ್ತಿಮಾನ್=ಶುಭಗುಣಗಳ ಸಾಕಲ್ಯವೇ ಶರೀರವಾಗಿ ಉಳ್ಳವನೋ, ಸ್ವತಂತ್ರಃ=ಸ್ವತಂತ್ರನೋ, ಸರ್ವೇ=ಎಲ್ಲರೂ, ಯದ್ವಶಾಃ=ಯಾರ ಅಧೀನರೋ, ಸಃ = ಆತನೇ, ವಿಷ್ಣುಃ=ಶ್ರೀಹರಿಯು, ಪರಮಃ=ಸರ್ವೋತ್ತಮನು, ಮತಃ=ಸಮ್ಮತನು, ಇತಿ=ಹೀಗೆ, ಪರಮೋಪನಿಷದಿ=ಪರಮೋಪನಿಷತ್ತಿನಲ್ಲಿದೆ. (೨)ಯಃ=ಯಾರು, ನಿತ್ಯಪೂರ್ಣಾಖಿಲಗುಣಃ = ನಿತ್ಯಗಳೂ, ಪೂರ್ಣಗಳೂ ಆದ ಎಲ್ಲಾ ಗುಣಗಳುಳ್ಳವನೋ, ಸರ್ವದೈವ= ಯಾವಾಗಲೂ, ನಿರ್ದೋಷಃ=ದೋಷಲೇಶ ರಹಿತನೋ, ಯಃ=ಯಾರು, ಸ್ವತಂತ್ರಃ=ಸ್ವತಂತ್ರನೋ, ಸಃ=ಆ, ವಿಷ್ಣುಃ = ಶ್ರೀಹರಿಯೋ, ಪರಃ = ಸರ್ವೋತ್ತಮನು, ಜನ್ಮಮೃತ್ಯ್ವಾದಿ-ವರ್ಜಿತಃ=ಜನನ ಮರಣಾದಿಗಳಿಂದ ವಿರಹಿತನು. (೩) ನಾರದ ಉವಾಚ = ನಾರದನು ಪ್ರಶ್ನಿಸಿದನು. ವಿಷ್ಣುಃ = ಶ್ರೀ ಹರಿಯು, ನಿರ್ದೋಷಶ್ಚೇತ್ = ದೋಷಲೇಶರಹಿತನಾದರೆ, ಮಾನುಷೇಷು=ಮನುಷ್ಯರಲ್ಲಿ, ಕಥಂ=ಹೇಗೆ, ಉದಪದ್ಯತ = ಹುಟ್ಟಿದನು. ಚಿಂತಾಶ್ರಮವ್ರಣಾಜ್ಞಾನ ದುಃಖಯುಕ್, ಚಿಂತಾ=ಮನೋವ್ಯಥೆಯು, ಶ್ರಮ=ಬಳಲುವಿಕೆಯು, ವ್ರಣ= ಘಾಯವು, ಅಜ್ಞಾನ=ಅಜ್ಞಾನವು, ದುಃಖ=ದುಃಖವೂ ಇವುಗಳಿಂದ, ಯುಕ್=ಕೂಡಿದವನಾಗಿ, ಕಥಂ=ಹೇಗೆ, ದೃಶ್ಯತೇ=ಕಾಣಲ್ಪಡುತ್ತಾನೆ. (ಚಿಂತಾದಿಗಳಿಂದ ಯುಕ್ತನೆಂದು ಅನುಮಾನದಿಂದಲೂ ವ್ರಣಾದಿಗಳುಳ್ಳವನೆಂದು ಪ್ರತ್ಯಕ್ಷದಿಂದಲೂ ಕಾಣಲ್ಪಡುತ್ತಾನೆ. 'ನಿರ್ದೋಷೋ ಭಗವಾನ್ವಿಷ್ಣುಃ' ಎಂಬೀ ತಮ್ಮ ವಚನದಿಂದಲೂ ಪ್ರತ್ಯಕ್ಷಾದಿ ದರ್ಶನದಿಂದಲೂ ಉಂಟಾದ) ಏಷಃ ಸಂಶಯಃ=ಈ ಸಂಶಯವು, ಬ್ರಹ್ಮನ್=ಚತುರ್ಮುಖನೇ, ಮೇ=ನನಗೆ, ಹೃದಿ=ಹೃದಯದಲ್ಲಿ, ಶಲ್ಯ ಇವ=ಬಾಣದಂತೆ, ಅರ್ಪಿತಃ=ದೃಢವಾಗಿ ನಿಂತಿದೆ. ಅಪರೈಃ ಮರ್ತ್ಯೈಃ=ನೀನು ಹೊರತಾದ ದೇವಋಷ್ಯಾದಿಗಳಿಂದ, ಅನುದ್ಧಾರ್ಯಃ=ಪರಿಹರಿಸಲು ಅಶಕ್ಯವು. ತಂ=ಅಂತಹ ಸಂಶಯವನ್ನು, ಸೂಕ್ತಿಶಕ್ತ್ಯಾ=ಒಳ್ಳೇಮಾತಿನ ಶಕ್ತಿಯಿಂದ, ಉದ್ಧರ=ಉದ್ಧರಿಸು. (ಪರಿಹರಿಸು) (೪) ಬ್ರಹ್ಮಾ ಉವಾಚ=ಚತುರ್ಮುಖನು ಹೇಳುತ್ತಾನೆ. ವಿಷ್ಣೋಃ=ಶ್ರೀಹರಿಗೆ, ಸ್ತ್ರೀಪುಂಮಲಾಖ್ಯಯೋಗಾತ್ಮದೇಹಃ=ಸ್ತ್ರೀಪುರುಷರ ಶುಕ್ಲ ಶೋಣಿತದ ಸಂಬಂಧವೇ ಕಾರಣವಾಗಿಉಳ್ಳ ಶರೀರವು, ನ ಜಾಯತೇ=ಹುಟ್ಟುವುದಿಲ್ಲ. ಕಿಂತು=ಮತ್ತೆ, ನಿರ್ದೋಷಚೈತನ್ಯಸುಖಾಂ=ದೋಷಲೇಶ ರಹಿತವಾದ ಜ್ಞಾನಸುಖಸ್ವರೂಪವಾದ, ನಿತ್ಯಾಂ ಸ್ವಕಾಂ ತನುಂ=ನಿತ್ಯವಾದ ತನ್ನ ಶರೀರವನ್ನು, ಪ್ರಕಾಶಯತಿ=ಪ್ರಕಟಿಸುತ್ತಾನೆ. ವಿಷ್ಣೋಃ=ಶ್ರೀ ಹರಿಗೆ, ಸೈವ ಇಯಂ ಜನಿಃ=ಅದೇ ಈ ಉತ್ಪತ್ತಿಯು. ಅಪರಾ ನ ಚ=ಬೇರೆ ಅಲ್ಲವು. ತಥಾಪಿ=ಆದಾಗ್ಯೂ, ಅಸುರಮೋಹಾಯ= ಅಸುರರನ್ನು ಮೋಹಿಸುವುದಕ್ಕೋಸ್ಕರ, ಪರೇಷಾಂ ಚ=ಇತರ ಸಜ್ಜನರನ್ನು ಮೋಹಿಸುವುದಕ್ಕಾಗಿಯೂ, ಕ್ವಚಿತ್ ಕ್ವಚಿತ್=ಕೆಲವು ಕೆಲವು ಕಡೆ, ಶುದ್ಧಸದ್ಗುಣಃ=ದೋಷಲೇಶರಹಿತವಾದ ಸದ್ಗುಣಗಳುಳ್ಳ, ಸಃ=ಆ ಹರಿಯು, ದುಃಖಾಜ್ಞಾನಶ್ರಮಾದೀನ್=ದುಃಖ ಅಜ್ಞಾನ ಶ್ರಮ ಮೊದಲಾದವುಗಳನ್ನು. ದರ್ಶಯೇತ್=ತೋರಿಸುವನು. ಸ್ವತಂತ್ರಾಚಿಂತ್ಯಸದ್ಗುಣೇ=ಸ್ವತಂತ್ರನೂ, ಅಚಿಂತ್ಯಗಳಾದ ಸದ್ಗುಣಗಳುಳ್ಳವನೂ ಆದ ಶ್ರೀಹರಿಯಲ್ಲಿ, ವ್ರಣಾದಿ ಕ್ವ=ವ್ರಣ ಮೊದಲಾದುದು ಎಲ್ಲಿ; ಅಜ್ಞಾನಂ ಕ್ವ ಚ=ಅಜ್ಞಾನವೂ ಎಲ್ಲಿ, ಅಜಃ ಹರಿಃ=ಉತ್ಪತ್ತಿಯಿಲ್ಲದಿರುವ ಶ್ರೀ ಹರಿಯು, ಮೋಕ್ಷಸ್ಯ ದೌರ್ಲಭ್ಯಾಯೈವ=ಮುಕ್ತಿಯು ಅಸುರರಿಗೆ ಸರ್ವಥಾ ಪ್ರಾಪ್ತಿಯಾಗದೇಇರುವುದಕ್ಕೂ, ಇತರ ಸಜ್ಜನರಿಗೆ ವಿಲಂಬಕ್ಕಾಗಿಯೂ, ತಾನಿ=ಆ ದುಃಖಾದಿಗಳನ್ನು, ದರ್ಶಯೇತ್=ತೋರಿಸುವನು. ತೇನ ಮಿಥ್ಯಾದರ್ಶನದೋಷೇಣ=ಆ ಮಿಥ್ಯಾಜ್ಞಾನದ ದೋಷದಿಂದ, ಮುಕ್ತಿಂ=ಮೋಕ್ಷವನ್ನು, ನ ಯಾಂತಿ ಚ=ಹೊಂದುವುದಿಲ್ಲ. ತೇನೈವ=

ಅತ್ಯಂತವಾಗಿ ಅವಿಲಂಬದಿಂದ, ತಮಶ್ಚ=ತಮಸ್ಸನ್ನು, ಯಾಂತಿ=(ಅಸುರರು) ಹೊಂದುತ್ತಾರೆ. ತಸ್ಮಾತ್=ಆದುದರಿಂದ, ಪ್ರಾದುರ್ಭಾವಗತಂ ಚೈವ=ಪ್ರಾದುರ್ಭಾವದಲ್ಲಿರುವ, ವಿಷ್ಣುಂ = ಶ್ರೀಹರಿಯನ್ನು, ಅಂಜಸಾ=ಚೆನ್ನಾಗಿ, ದೋಷವಿವರ್ಜಿತಂ ಚೈವ=ದೋಷಲೇಶರಹಿತನನ್ನಾಗಿಯೇ, ಜಾನೀಯಾತ್=ತಿಳಿಯಬೇಕು. ಇತಿ=ಹೀಗೆ, ಬ್ರಹ್ಮಾಂಡೇ = ಬ್ರಹ್ಮಾಂಡಪುರಾಣದಲ್ಲಿದೆ ॥ ೨ ॥

ಕೆಲವರು ಪರಮಾತ್ಮನು ನಿರ್ಗುಣನೆಂದೇ ತಿಳಿಯುವರು. ಇನ್ನು ಕೆಲವರು ಗುಣಗಳಿದ್ದರೂ ಗುಣಗಳಿಗೆ ಪರಮಾತ್ಮನಿಂದಲೂ ಪರಸ್ಪರವಾಗಿಯೂ ಅತ್ಯಂತ ಭೇದವನ್ನೇ ತಿಳಿಯುತ್ತಾರೆ. ಇತರರು ಭೇದಾಭೇದಗಳನ್ನು ಹೇಳುತ್ತಾರೆ. ಇನ್ನು ಕೆಲವರು ಆನಂದಾದಿಗಳು ಸ್ವರೂಪಭೂತಗಳು ಭಿನ್ನಗಳು ಹೀಗೆ ಎರಡು ವಿಧಗಳೆನ್ನುತ್ತಾರೆ. ಈ (೪) ನಾಲ್ಕು ಪಕ್ಷಗಳನ್ನು ನಿರಾಕರಿಸಿ ತಮ್ಮ ಪಕ್ಷವನ್ನು ಶ್ರುತಿಯಿಂದಲೇ ಸಾಧಿಸುತ್ತಾರೆ —

ಮೂ ॥ ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ । ಅತೋ-ಮಿಥೋಽಪಿ ಭೇದೋ ನ ತೇಷಾಂ ಕಶ್ಚಿತ್ಕದಾಚನ । ಸ್ವರೂಪೇಽಪಿ ವಿಶೇಷೋಽಸ್ತಿ ಸ್ವರೂಪತ್ವವದೇವ ತು । ಭೇದಾಭಾವೇಽಪಿ ತೇನೈವ ವ್ಯವಹಾರಶ್ಚ ಸರ್ವತಃ ॥ ಇತಿ ಪರಮೋಪನಿಷದಿ ॥ ೨ ॥

ಅ ॥ ಗುಣಕ್ರಿಯಾದಯಃ=ಗುಣ, ಕ್ರಿಯೆ, ಜಾತಿ ಮೊದಲಾದವುಗಳು, ವಿಷ್ಣೋಃ= ಶ್ರೀ ಹರಿಯ, ಸ್ವರೂಪಂ=ಸ್ವರೂಪವು, ಅನ್ಯತ್=ಬೇರೆ, ನ ಇಷ್ಯತೇ=ಇಚ್ಛಿಸಲ್ಪಡುವುದಿಲ್ಲ. ಅತಃ=ಒಬ್ಬ ಪರಮಾತ್ಮನಿಂದ ಅತ್ಯಂತಾಭೇದವಿದ್ದಪ್ರಯುಕ್ತ, ತೇಷಾಂ=ಆ ಗುಣಾದಿಗಳಿಗೆ, ಕದಾಚನ=ಯಾವಾಗಲೂ, ಮಿಥೋಽಪಿ=ಪರಸ್ಪರವಾಗಿಯೂ, ಕಶ್ಚಿತ್=ಯಾವುದೊಂದು, ಭೇದಃ = ಭೇದವು, ನ=ಇಲ್ಲ. ಸ್ವರೂಪೇಽಪಿ = ಅಭಿನ್ನದಲ್ಲಿಯೂ, ಸ್ವರೂಪತ್ವವದೇವ = ಸ್ವರೂಪದಂತೆಯೇ, ವಿಶೇಷಸ್ತು = ವಿಶೇಷವಾದರೆ (ಪದಾರ್ಥದ ಶಕ್ತಿಯು), ಅಸ್ತಿ = ಅದೆ. ಭೇದಾಭಾವೇಽಪಿ=ಭೇದವಿಲ್ಲದಿದ್ದರೂ, ತೇನೈವ=ವಿಶೇಷದಿಂದಲೇ, ಸರ್ವತಃ ವ್ಯವಹಾರಶ್ಚ= ಸಂಬಂಧಾದಿ ವಿಷಯಕವಾದ ಎಲ್ಲಾ ವ್ಯವಹಾರವೂ (ಯುಕ್ತವಾಗುತ್ತದೆ). ಇತಿ=ಹೀಗೆ, ಪರಮೋಪನಿಷದಿ=ಪರಮೋಪನಿಷತ್ತಿನಲ್ಲಿದೆ.

ತಾ ॥ ಪರಮಾತ್ಮನಿಗೆ ಗುಣಾದಿಗಳು ಇವೆ. ಅವುಗಳು ಪರಮಾತ್ಮನಿಂದ ಅತ್ಯಂತಾಭಿನ್ನಗಳಾಗಿವೆ ಎಂದು ಹೇಳಿರುವುದರಿಂದ ನಾಲ್ಕು ಪಕ್ಷಗಳೂ ನಿರಸ್ತಗಳಾದವು. 'ಅನ್ಯತ್' ಎನ್ನುವುದರಿಂದ ಭೇದಾಭೇದಗಳು ಎನ್ನುವುದನ್ನು ಆನಂದಾದಿಗಳು ಎರಡುವಿಧ ಎನ್ನುವುದನ್ನು ನಿರಾಕರಿಸದಹಾಗಾಯಿತು. (2) ಸ್ವರೂಪದಲ್ಲಿ ಸ್ವರೂಪತ್ವವೆನ್ನುವುದು ಭಿನ್ನಧರ್ಮವಲ್ಲ. 'ತ್ವ' ಪ್ರತ್ಯಯವು ಇದೆ. ಇದು ನಿರ್ವಿಷಯಕವಲ್ಲ; ನಿರ್ವಿಷಯಕವಾಗಿದ್ದರೆ ಪ್ರಯೋಗವೇ ಇಲ್ಲವೆಂದಾಗಬೇಕಾಗುವುದು. ಆದುದರಿಂದ 'ತ್ವ' ಪ್ರತ್ಯಯ ಪ್ರವೃತ್ತಿಯಲ್ಲಿ ಯಾವುದೊಂದು ನಿಮಿತ್ತವದೆಯೋ ಅದೇ ವಿಶೇಷವು. ವಿಶೇಷವೆಂದರೆ, ಪದಾರ್ಥದ್ದೇ ಒಂದು ಶಕ್ತಿಯು ॥ ೨ ॥

ಮೂ ॥ ಅಭಿನ್ನತ್ವಮಭೇದಶ್ಚ ಯಥಾ ಭೇದವಿವರ್ಜಿತಂ । ವ್ಯವಹಾರ್ಯೌ ಪೃಥಕ್ಚ ಸ್ಯಾದೇವಮೇವ (ದೇವಂ ಸರ್ವೇ) ಗುಣಾ ಹರೇಃ । ಅಭೇದಾಭಿನ್ನಯೋರ್ಭೇದೋ ಯದಿ ವಾ ಭೇದಭಿನ್ನಯೋಃ ।

**ಅನವಸ್ಥಿತಿರೇವ ಸ್ಯಾನ್ನ ವಿಶೇಷಣತಾ ಮತಿಃ । ಮೂಲಸಂಬಂಧ-ಮಜ್ಞಾತ್ವಾ ತಸ್ಮಾದೇಕಮನಂತಧಾ । ವ್ಯವಹಾರ್ಯಂ ವಿಶೇಷೇಣ ದುಸ್ತರ್ಕಬಲತೋ ಹರೇಃ । ವಿಶೇಷೋಽಪಿ ಸ್ವರೂಪಂ ಸ ಸ್ವನಿರ್ವಾಹಕತಾಽಸ್ಯ ಚ ॥ ಇತಿ ಬ್ರಹ್ಮತರ್ಕೇ ॥ ೩ ॥**

ಅ ॥ ಯಥಾ = ಹೇಗೆ, (ಐಕ್ಯವಾದಿಗಳ ಮತದಲ್ಲಿ ಜೀವಬ್ರಹ್ಮರ) ಅಭಿನ್ನತ್ವಂ= ಅಭಿನ್ನತ್ವವು, ಅಭೇದಃ=ಅಭೇದವೆಂಬೀ ಪರ್ಯಾಯಶಬ್ದವಾಚ್ಯವಾದ ವಸ್ತುವು, ಭೇದವಿವ-ರ್ಜಿತಂ=ಬ್ರಹ್ಮನಿಂದ ಭೇದರಹಿತವಾದುದೋ, ಚ=ಮತ್ತು, (ಗುಣಗುಣಿಗಳಿಗೆ ಭೇದವನ್ನು ಹೇಳುವವರ ಮತದಲ್ಲಿ ಹೇಗೆ ಅಭೇದವು ಭೇದಿಗಳಿಂದ ಭೇದರಹಿತವಾದುದೋ, ಹಾಗೆಯೇ ಭೇದಾಭೇದವಾದಿಗಳ ಮತದಲ್ಲಿ ಹೇಗೆ ಭೇದಾಭೇದಗಳು ಭೇದ ಅಭೇದಿಗಳಿಂದ ಭೇದರಹಿತಗಳೋ,) ಪೃಥಕ್ ವ್ಯವಹಾರ್ಯಂ ಚ ಸ್ಯಾತ್=(ವಿಶೇಷಶಕ್ತಿಯಿಂದಲೇ)ಪ್ರತ್ಯೇಕವಾಗಿ ವ್ಯವಹರಿಸಿಕೊಳ್ಳಲಿಕ್ಕೆ ಯೋಗ್ಯವಾದುದೂ ಆಗುವುದೋ, (ಅಂದರೆ ಹೇಗೆ ಜೀವಬ್ರಹ್ಮರಿಗೆ ಅಭಿನ್ನತ್ವವು, ಜೀವಬ್ರಹ್ಮರು ಅಭಿನ್ನರು ಇದುಮೊದಲಾದುದು, ಗುಣಗುಣಿಗಳಿಗೆ ಭೇದವು, ಗುಣಗುಣಿಗಳು ಭಿನ್ನಗಳು ಎಂದಾಗಲೀ, ಹಾಗೆಯೇ ಗುಣಗುಣಿಗಳಿಗ ಭೇದಾಭೇದಗಳು ಗುಣಗುಣಿಗಳು ಭಿನ್ನಾಭಿನ್ನಗಳು ಎಂದಾಗಲೀ, ವ್ಯವಹಾರವು ಬರುವುದು) ಏವಂ=ಹೀಗೆಯೇ, ಸರ್ವೇ ಗುಣಾಃ= ಎಲ್ಲಾ ಗುಣಗಳು, ಹರೇಃ=ಶ್ರೀ ಪರಮಾತ್ಮನಿಂದ, (ಅಭಿನ್ನಗಳಾದಾಗ್ಯೂ ವಿಶೇಷಶಕ್ತಿಯಿಂದ ಸಂಬಂಧವುಳ್ಳದ್ದು ಇತ್ಯಾದಿ ರೀತಿಯಿಂದ ವ್ಯವಹರಿಸಿಕೊಳ್ಳಲು ಯೋಗ್ಯಗಳಾಗುತ್ತವೆ.) ಅಭೇದಾಭಿನ್ನಯೋಃ ಭೇದಃ ಯದಿ=ಅಭೇದಕ್ಕೂ ಅಭಿನ್ನನಾದ ಬ್ರಹ್ಮನಿಗೂ ಭೇದವು ಅಂಗೀಕರಿಸಲ್ಪಟ್ಟರೂ, ಭೇದಭಿನ್ನಯೋರ್ವಾ ಭೇದಃ = ಭೇದಕ್ಕೂ ಭಿನ್ನವಾದ ಗುಣಾದಿಗಳಿಗೂ ಭೇದವು ಅಂಗೀಕರಿಸಲ್ಪಟ್ಟರೂ (ಹೀಗೆಯೇ ಭೇದಾಭೇದಗಳಿಗೂ ಗುಣಗುಣಿಗಳಿಗೂ ಭೇದವು ಸ್ವೀಕರಿಸಲ್ಪಟ್ಟರೂ ಭೇದಪರಂಪರೆಗಳು ಬಂದು ಬೀಳುವುದರಿಂದ) ಅನವಸ್ಥಿತಿರೇವ ಸ್ಯಾತ್= ಅನವಸ್ಥಾ ದೋಷವೇ ಬರುವುದು. (ಪರಿಹರಿಸಲು ಸಾಧ್ಯವೇ ಇಲ್ಲವು.) ವಿಶೇಷಣತಾಮತಿಃ ನ= (ಗುಣವು ಗುಣಿಯಿಂದ ಅತ್ಯಂತಭಿನ್ನವಾಗಿದ್ದರೆ ಗುಣವು ಗುಣಿಯಲ್ಲಿ) ವಿಶೇಷಣವಾಗಿ ತಿಳಿಯದೆ ಹೋಗುವುದು. (ಸಂಬಂಧವಿದ್ದುದರಿಂದ ಹೀಗೆ ಇಲ್ಲವೆಂದರೆ— (1) ಆ ಸಂಬಂಧವು ಸಂಬಂಧಿಯಲ್ಲಿ ವಿಶೇಷಣವಾಗಿ ಪ್ರತೀತವಾಗಿ ವಿಶೇಷಣತಾ ಪ್ರತೀತಿಗೆ ಮೂಲವೆಂದರೆ ಅಲ್ಲಿಯೂ ಸಂಬಂಧಾಂತರದ ಪ್ರತೀತಿಯಪೇಕ್ಷೆಯಿದ್ದರೆ ಅನವಸ್ಥೆಯು. (2) ಗುಣಗುಣಿರೂಪ ಸಂಬಂಧಿಯಲ್ಲಿ ವಿಶೇಷಣವಾಗದೆ ಸಂಬಂಧವು ಪ್ರತೀತವಾಗುತ್ತದೆ ಎಂದರೆ— ಅತಿಪ್ರಸಂಗವೆ. ಘಟರೂಪ ಸಂಬಂಧಗಳು ಎಂಬೀ ಜ್ಞಾನದಿಂದಲೂ, ವಿಶಿಷ್ಟಜ್ಞಾನಬರಬೇಕಾಗುವುದು. (3) ಆ ಸಂಬಂಧವು ಅಪ್ರತೀತವಾಗಿಯೇ ವಿಶೇಷಣತಾಜ್ಞಾನಕ್ಕೆ ಕಾರಣವೆಂದರೆ) ಮೂಲಸಂಬಂಧಂ ಅಜ್ಞಾತ್ವಾ= ಬುಡದ ಸಂಬಂಧವನ್ನು ತಿಳಿಯದೆ, (ವಿಶೇಷಣತ್ವವು ತಿಳಿಯಲ್ಪಡುವುದಿಲ್ಲ. ಸಂಯೋಗಾದಿಗಳು ತಿಳಿಯಲ್ಪಟ್ಟರೇನೆ ವಿಶಿಷ್ಟಜ್ಞಾನಕ್ಕೆ ಕಾರಣವು, ಇದ್ದಮಾತ್ರದಿಂದ ಕಾರಣವಾಗಲಾರದು. ಹೀಗೆ ಎಲ್ಲಾ ಪಕ್ಷಗಳಲ್ಲಿಯೂ ದೋಷವಿದ್ದುದರಿಂದ ಭಗವಂತನ ಗುಣಗಳಿಗೆ ಅಭೇದವೇ.) ತಸ್ಮಾತ್= ಆದುದರಿಂದ, ಏಕಂ=ಗುಣಾದಿಗಳಿಂದ ಅಭಿನ್ನವಾದ ಭಗವತ್ಸ್ವರೂಪವು, ವಿಶೇಷೇಣ=ವಿಶೇಷದಿಂದಲೂ, ಹರೇಃ=ಶ್ರೀ ಹರಿಗೆ, ದುಸ್ತರ್ಕಬಲತಃ=ತರ್ಕಾಗೋಚರವಾದ ಶಕ್ತಿಯಿಂದಲೂ, ಅನಂತಧಾ = ಅನೇಕಪ್ರಕಾರ, ವ್ಯವಹಾರ್ಯಂ = ವ್ಯವಹರಿಸಿಕೊಳ್ಳಲು ಯೋಗ್ಯವು. ಸಃ ವಿಶೇಷೋಽಪಿ=ಆ ವಿಶೇಷವೂ ಕೂಡ, ಸ್ವರೂಪಂ=ವಿಶೇಷಿಯ ಸ್ವರೂಪವೇ, ಅಸ್ಯ ಚ=ಈ

ವಿಶೇಷಕ್ಕೆ, ಸ್ವನಿರ್ವಾಹಕತಾ ಚ=ತನ್ನಲ್ಲಿದ್ದ ಭೇದಕಾರ್ಯವನ್ನು ನಿರ್ವಹಿಸುವ ಶಕ್ತಿಯು, ಇತಿ=ಹೀಗೆ, ಬ್ರಹ್ಮತರ್ಕೇ=ಬ್ರಹ್ಮತರ್ಕದಲ್ಲಿದೆ.

ತಾ ॥ ವಿಶಿಷ್ಟಪ್ರತೀತಿಯು ಸಿದ್ಧಿಸುವುದಕ್ಕಾಗಿ ಭೇದವನ್ನು ಒಡಂಬಡಬೇಕು. ಭೇದವು ತೋರದಿದ್ದರೆ ವಿಶಿಷ್ಟಪ್ರತೀತಿಗೆ ಕಾರಣವಾಗಲಾರದು. ಆದಕಾರಣ ಭೇದಪ್ರತೀತಿಯನ್ನು ಅಂಗೀಕರಿಸಬೇಕು. ಇತರ ಸಂಕೀರ್ಣವಾಗಿ ಆಯಾಯ ಭೇದಪ್ರತೀತಿಯು ಉಪಯುಕ್ತವಲ್ಲ. ಹೀಗೆ ಭೇದಕ್ಕೂ ವಿಶಿಷ್ಟಪ್ರತೀತಿಯನ್ನು ಅಂಗೀಕರಿಸಿದರೆ ಅನವಸ್ಥೆಯು. ಭೇದಾಭೇದ ಪರಂಪರೆಯನ್ನಾಶ್ರಯಿಸಿದರೂ ಅನವಸ್ಥೆಯು. ಅಂತೂ ಎಲ್ಲಾ ವಾದಿಗಳೂ ಅನವಸ್ಥಾಪರಿಹಾರಕ್ಕಾಗಿ ಕೊನೆಗೆ ಸವಿಶೇಷಾಭೇದವನ್ನು ಅಂಗೀಕರಿಸಬೇಕು. ಆದುದರಿಂದ ಭಗವಂತನಿಗೂ ಆತನ ಗುಣಗಳಿಗೂ ಸವಿಶೇಷಾಭೇದವನ್ನು ಅಂಗೀಕರಿಸುವುದೇ ಉಚಿತವು ॥ ೩ ॥

**ಮೂ ॥ (೧) ಏಕಮೇವಾದ್ವಿತೀಯಂ ತನ್ನೇಹ ನಾನಾಸ್ತಿ ಕಿಂಚನ । ಮೃತ್ಯೋಸ್ಸಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ । (೨) ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ । ಏವಂ ಧರ್ಮಾನ್ಪೃಥಕ್ಪಶ್ಯಂಸ್ತಾನೇವಾನುವಿಧಾವತಿ ॥ ಇತ್ಯಾದಿ ಶ್ರುತೇಶ್ಚ ॥ ೪ ॥**

ಅ ॥ (1) ತತ್=ಆ ಬ್ರಹ್ಮನು, ಏಕಮೇವ=ಅವಯವ ಅವಯವಿಗಳಿದ್ದುದರಿಂದ ಭೇದವಾಗಲೀ, ಭೇದಾಭೇದಗಳಾಗಲೀ ಇಲ್ಲದಿರುವವನು, ಅದ್ವಿತೀಯಂ=ಸಮರಾಗಲೀ, ಅಧಿಕರಾಗಲೀ ಇಲ್ಲದಿರುವವನು. ಇಹ=ಈ ಬ್ರಹ್ಮನಲ್ಲಿ, ಕಿಂಚನ=ಯಾವುದೊಂದು ಗುಣಾದಿಗಳೂ, ನಾನಾ=ಭಿನ್ನವಾದುದು, ನಾಸ್ತಿ = ಇಲ್ಲವು. ಯಃ = ಯಾವಾತನು, ಇಹ=ಈ ಬ್ರಹ್ಮನಲ್ಲಿ, ನಾನೇವ=ಭಿನ್ನಾಭಿನ್ನವಾದ ಗುಣಾದಿಗಳನ್ನು, ಪಶ್ಯತಿ=ನೋಡುತ್ತಾನೋ, ಸಃ = ಆತನು, ಮೃತ್ಯೋಃ=ಮರಣಾನಂತರದಲ್ಲಿ, ಮೃತ್ಯುಂ=ನರಕವನ್ನು, ಆಪ್ನೋತಿ = ಹೊಂದುತ್ತಾನೆ. (೨) ಯಥಾ=ಹೇಗೆ, ಪರ್ವತೇಷು = ಪರ್ವತಗಳಲ್ಲಿ, ದುರ್ಗೇ = ಶಿಖರಸ್ಥಾನದಲ್ಲಿ, ವೃಷ್ಟಂ ಉದಕಂ=ಸುರಿಸಲ್ಪಟ್ಟ ನೀರು, ವಿಧಾವತಿ=ಕೆಳಗೆ ಓಡುತ್ತದೋ, ಏವಂ=ಹೀಗೆ, ಧರ್ಮಾನ್=ಭಗವಂತನ ಧರ್ಮಗಳನ್ನು, ಪೃಥಕ್ ಪಶ್ಯನ್=ಪರಮಾತ್ಮನಿಂದಲೂ ಪರಸ್ಪರವಾಗಿಯೂ ಬೇರೆ ಬೇರೆಯಾಗಿ ಕಾಣತಕ್ಕ ಪುರುಷನು, ತಾನ್ ಅನ್ವೇವ = ಅವುಗಳನ್ನು ನೋಡಿದನಂತರದಲ್ಲಿಯೇ, ವಿಧಾವತಿ=ನಿತ್ಯ ನರಕಕ್ಕೆ ಹೋಗುತ್ತಾನೆ. ಇತ್ಯಾದಿ ಶ್ರುತೇಶ್ಚ=ಇದುಮೊದಲಾದ ಶ್ರುತಿಯಿಂದಲೂ.

ತಾ ॥ ಧರ್ಮಗಳೇ ಇಲ್ಲವಾದರೆ 'ಯಾವ ಧರ್ಮಗಳನ್ನು ನೋಡುವವನು ಇಲ್ಲ.' ಎಂದೇ ಹೇಳಬೇಕಿದ್ದಿತು. 'ನಾನಾ' ಎಂದೂ 'ಪೃಥಕ್' ಎಂದೂ ವ್ಯರ್ಥವೇ ಆಗುವುದು. ಅದರಿಂದ ಧರ್ಮಗಳಿವೆ. ಆದರೆ ಭಿನ್ನಗಳೂ ಅಲ್ಲ. ಭಿನ್ನಾಭಿನ್ನಗಳೂ ಅಲ್ಲ. ಎಂದು ಶ್ರುತ್ಯರ್ಥವು. ಇದೇ ಶ್ರುತಿಯಿಂದ ವಿಶೇಷವೂ ತಿಳಿಯಲ್ಪಡುತ್ತದೆ ॥ ೪ ॥

ಪರಮೇಶ್ವರನ ಗುಣಾದಿಗಳಿಗೆ ಪರಮೇಶ್ವರನಿಂದ ಭೇದವಿಲ್ಲದಿದ್ದರೂ ವಿಶೇಷ ಶಕ್ತಿಯಿಂದ ಸಂಬಂಧಿತ್ವ ಮೊದಲಾದ ವ್ಯವಹಾರವು ಯುಕ್ತವಾಗುತ್ತದೆ. ಇದನ್ನು ದೃಷ್ಟಾಂತ ಸಹಿತವಾಗಿ ಉಪಪಾದಿಸತಕ್ಕ ವಾಕ್ಯಾಂತರವನ್ನು ಉದಾಹರಿಸುತ್ತಾರೆ —

**ಮೂ ॥ ದೇಶಃ ಸರ್ವತ್ರ ಪುರುಷಃ ಸ್ವತಂತ್ರಃ ಕಾಲನಿತ್ಯತಾ । ಇತ್ಯಾದಿಷು ಸ್ವಸಂಬಂಧಾದ್ಯಥೈವ ಗುಣರೂಪಿಣಃ । ಗುಣಿತ್ವಂ ಗುಣಭೋಕ್ತೃತ್ವಂ ಸ್ಯಾದ್ವಿಷ್ಣೋಸ್ತದ್ವಚ್ಚ ಸ ಸ್ವಯಂ ॥ ಇತಿ ಬ್ರಹ್ಮತರ್ಕೇ ॥ ೫ ॥**

ಅ ॥ (ಹೇಗೆ ಹಕ್ಕಿಯು ಎಲ್ಲಾ ಆಕಾಶದಲ್ಲಿಯೂ ಹಾರುತ್ತದೆ ಎನ್ನುವುದರಿಂದ ಹಕ್ಕಿಗೆ ಸರ್ವಾಕಾಶ ಸಂಬಂಧವು ಪ್ರತೀತವಾಗುತ್ತದೋ, ಹಾಗೆಯೇ) ದೇಶಃ=ಆಕಾಶವೂ, ಸರ್ವತ್ರ=ಎಲ್ಲಾ ಕಡೆಗಳಲ್ಲಿ (ಆಕಾಶವದೆ ಎಂದು ಆಕಾಶಕ್ಕೆ ಸರ್ವಾಕಾಶ ಸಂಬಂಧವೂ ತೋರುತ್ತದೆ.) ಪುರುಷಃ ಸ್ವತಂತ್ರಃ=(ಹೇಗೆ ಶಿಷ್ಯನು ಗುರುವಿನ ಅಧೀನನು, ಎಂದು ಶಿಷ್ಯನಿಗೆ ಗುರುವಿನಿಂದ ಸಂಬಂಧವು ತೋರುತ್ತದೋ ಹೀಗೆಯೇ) ಪರಮಪುರುಷನು ಸ್ವತಂತ್ರನು (ಎಂದು ಶ್ರೀ ಹರಿಗೆ ತನ್ನ ಸಂಬಂಧವೇ ತೋರುತ್ತದೆ.) ಕಾಲನಿತ್ಯತಾ=(ಹೇಗೆ ಆಕಾಶಕ್ಕೆ ಸರ್ವಾಕಾಶಸಂಬಂಧಿತ್ವರೂಪ ನಿತ್ಯತ್ವವು ತೋರುತ್ತದೋ ಹಾಗೆಯೇ) ಕಾಲಕ್ಕೂ ನಿತ್ಯತ್ವವು ತೋರುತ್ತದೆ. ಇತ್ಯಾದಿಷು=ಇದೇ ಮೊದಲಾದ ಸ್ಥಾನಗಳಲ್ಲಿ, ಸ್ವಸಂಬಂಧಾತ್=ತನ್ನ ಸಂಬಂಧದಿಂದ, ಯಥೈವ=ಹೇಗೆ, ಗುಣರೂಪಿಣಃ=ಗುಣಗಳೇ ರೂಪವಾಗಿಉಳ್ಳ, ವಿಷ್ಣೋಃ= ಶ್ರೀ ಪರಮಾತ್ಮನಿಗೆ, ಗುಣಿತ್ವಂ=ಗುಣವುಳ್ಳತನವು, ಗುಣಭೋಕ್ತೃತ್ವಂ=(ಆನಂದಭುಕ್ತಥಾ ಪ್ರಾಜ್ಞಃ=ಇದು ಮೊದಲಾದ ಶ್ರುತಿಯಲ್ಲಿ) ಆನಂದ ಮೊದಲಾದ ಗುಣಗಳನ್ನ ಭೋಗಿಸುವಿಕೆಯು, ಸ್ಯಾತ್=(ವಿಶೇಷ ನಿಮಿತ್ತದಿಂದ) ಆಗುವುದು. ತಚ್ಚ=ಆ ನಿಮಿತ್ತವು, ಸಃ=ಆ ವಿಷ್ಣುವು, ಸ್ವಯಂ=ತಾನೇ, ಇತಿ=ಹೀಗೆ, ಬ್ರಹ್ಮತರ್ಕೇ=ಬ್ರಹ್ಮತರ್ಕದಲ್ಲಿದೆ ॥ ೫ ॥

ಮಾಯಾವಾದಿಗಳು ಹೇಳುವರು — ಪರಬ್ರಹ್ಮನು ನಿರ್ಗುಣನೇ; ಆತನಿಗೆ ಮಾಯಾಮಯಗಳಾದ ಗುಣಗಳಿವೆ. ಆದುದರಿಂದ ಉದಾಹೃತಗಳಾದ ಶ್ರುತ್ಯಾದಿಗಳಿಂದ ವಿರೋಧವಿಲ್ಲವು ಎಂದು ಹೇಳುವುದು ಅಸಂಗತವು. ಶ್ರೀ ಹರಿಯು ಸರ್ವ ಗುಣಪೂರ್ಣನು ಎಂಬೀ ಜ್ಞಾನವು ಮುಕ್ತಿಗೆ ಸಾಧನವೆಂದು ಶ್ರುತವಾಗಿದೆ. ಮಾಯಾಮಯವಾದ ಅರ್ಥಜ್ಞಾನವು ಮುಕ್ತಿಗೆ ಸಾಧನವಲ್ಲವು. ಮತ್ತೆ ತತ್ತ್ವಜ್ಞಾನವೇ ಮುಕ್ತಿಸಾಧನವು ಎಂಬೀ ಅಭಿಪ್ರಾಯದಿಂದ ಶ್ರುತಿಯನ್ನು ಉದಾಹರಿಸುತ್ತಾರೆ —

ಮೂ ॥ (೧) ವಿಷ್ಣುಂ ಸರ್ವಗುಣೈಃ ಪೂರ್ಣಂ ಜ್ಞಾತ್ವಾ ಸಂಸಾರವರ್ಜಿತಃ । ನಿರ್ದುಃಖಾನಂದಭುಙ್ನಿತ್ಯಂ ತತ್ಸಮೀಪೇ ಸ ಮೋದತೇ । ಮುಕ್ತಾನಾಂ ಚಾಶ್ರಯೋ ವಿಷ್ಣುರಧಿಕೋಽಧಿಪತಿಸ್ತಥಾ । ತದ್ವಶಾ ಏವ ತೇ ಸರ್ವೇ ಸರ್ವದೈವ ಸ ಈಶ್ವರಃ ॥ ಇತಿ ಪರಮಶ್ರುತಿಃ ॥ (೨) ಅಮೃತಸ್ಯೈಷ ಸೇತುಃ । (೩) ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ॥ ಇತ್ಯಾದಿ ಚ ॥ ೬ ॥

ಅ ॥ (೧) ಸಃ=ಜ್ಞಾನಿಯು, ವಿಷ್ಣುಂ = ಶ್ರೀ ಹರಿಯನ್ನು, ಸರ್ವಗುಣೈಃ = ಎಲ್ಲಾ ಗುಣಗಳಿಂದ, ಪೂರ್ಣಂ=ಪರಿಪೂರ್ಣನನ್ನಾಗಿ, ಜ್ಞಾತ್ವಾ=ತಿಳಿದು, ಸಂಸಾರವರ್ಜಿತಃ=ಜನನ ಮರಣಾದಿರೂಪ ಸಂಸಾರ ರಹಿತನಾಗಿ, ನಿರ್ದುಃಖಾನಂದಭುಕ್ = ದುಃಖಲೇಶರಹಿತವಾದ ಆನಂದವನ್ನೇ ಅನುಭವಿಸುತ್ತಾ, ನಿತ್ಯಂ=ನಿರಂತರದಲ್ಲಿಯೂ, ತತ್ಸಮೀಪೇ=ಆ ಪರಬ್ರಹ್ಮನ ಸಮೀಪದಲ್ಲಿಯೇ, ಮೋದತೇ=ಸಂತೋಷಪಡುತ್ತಾನೆ. ವಿಷ್ಣುಃ=ಶ್ರೀಹರಿಯು, ಮುಕ್ತಾನಾಂ ಚ ಆಶ್ರಯಃ=ಮುಕ್ತರಿಗೂ ಆಶ್ರಯನು, ಅಧಿಕಃ=ಸರ್ವೋತ್ತಮನು. ತಥಾ=ಹಾಗೆಯೇ, ಅಧಿಪತಿಃ=ಸರ್ವರಿಗೂ ನಿಯಾಮಕನು. ತೇ ಸರ್ವೇ=ಆ ಬ್ರಹ್ಮಾದಿಗಳೆಲ್ಲರೂ, ಸರ್ವದೈವ= ಯಾವಾಗಲೂ, ತದ್ವಶಾ ಏವ=ಆ ಭಗವಂತನ ಅಧೀನರೇ. ತಸ್ಮಾತ್=ಆದುದರಿಂದ, ಸಃ ಏವ=ಆ ಈಶ್ವರನೇ, ಸರ್ವದಾ=ಯಾವಾಗಲೂ, ಈಶ್ವರಃ=ನಿರ್ದೋಷಾಶೇಷಸದ್ಗುಣಗಳುಳ್ಳ

ವನು. ಇತಿ=ಹೀಗೆ, ಪರಮಶ್ರುತಿಃ=ಪರಮಶ್ರುತಿಯು. (೨) ಅಮೃತಸ್ಯ=ಮುಕ್ತರ ಸಮುದಾಯಕ್ಕೆ, ಏಷಃ=ಈ ಪರಮಾತ್ಮನು, ಸೇತುಃ=ಆಶ್ರಯನು. (೩) ಸಃ=ಆ ಮುಕ್ತನು, ವಿಪಶ್ಚಿತಾ ಬ್ರಹ್ಮಣಾ ಸಹ=ಸರ್ವಜ್ಞನಾದ ಬ್ರಹ್ಮನಿಂದ ಕೂಡಿಕೊಂಡು, ಸರ್ವಾನ್ ಕಾಮಾನ್=ಎಲ್ಲಾ ಅಭೀಷ್ಟಗಳನ್ನು, ಅಶ್ನುತೇ=ಅನುಭವಿಸುತ್ತಾನೆ. ಇತ್ಯಾದಿ ಚ=ಇದುಮೊದಲಾದುದೂ ಅದೆ ॥ ೬ ॥

ಮುಕ್ತರಿಗೆ ಸಹ ಪರಸ್ಪರವಾಗಿ ಸಾಮ್ಯವಿಲ್ಲ. ಪರಮಾತ್ಮನಿಂದ ಸಾಮ್ಯವಿಲ್ಲವೆಂದು ಏನು ಹೇಳಬೇಕಾಗಿಯದೆ. ಎಂದಭಿಪ್ರಾಯದಿಂದ ಆ ವಿಷಯದಲ್ಲಿ ಪುರಾಣವಾಕ್ಯವನ್ನುದಾಹರಿಸುತ್ತಾರೆ —

**ಮೂ ॥ (೧) ನೃಪಾದ್ಯಾಶ್ಶತಧೃತ್ಯಂತಾ ಮುಕ್ತಿಗಾ ಉತ್ತರೋತ್ತರಂ । ಗುಣೈಃ ಸರ್ವೈಃ ಶತಗುಣಾ ಮೋದಂತ ಇತಿ ಹಿ ಶ್ರುತಿಃ ॥ ಇತಿ ಪಾದ್ಮೇ । (೨) ಅತೋ ನಿಶ್ಶೇಷದೋಷವರ್ಜಿತಃ ಪೂರ್ಣಾನಂದಗುಣೋ ನಾರಾಯಣ ಇತಿ ಸಿದ್ಧಂ ॥ ೭ ॥**

ಅ ॥ ನೃಪಾದ್ಯಾಃ=ಮನುಷ್ಯರು ಚಕ್ರವರ್ತಿ ಮೊದಲಾದ, ಶತಧೃತ್ಯಂತಾಃ=ಚತುರ್ಮುಖಪರ್ಯಂತರಾದ, ಮುಕ್ತಿಗಾಃ=ಮುಕ್ತಿಯಲ್ಲಿದ್ದವರು, ಉತ್ತರೋತ್ತರಂ=ಮೇಲು ಮೇಲೆ, ಸರ್ವೈಃ ಗುಣೈಃ=ಎಲ್ಲಾ ಗುಣಗಳಿಂದ, ಶತಗುಣಾಃ=ನೂರು ಮಡಿ ಆನಂದವುಳ್ಳವರಾಗಿ, ಮೋದಂತೇ=ಸಂತೋಷಪಡುತ್ತಾರೆ. ಇತಿ ಹಿ=ಹೀಗೆ ಅಷ್ಟೇ, ಶ್ರುತಿಃ=ಶ್ರುತಿಯು, ಇತಿ=ಹೀಗೆ, ಪಾದ್ಮೇ=ಪಾದ್ಮಪುರಾಣದಲ್ಲಿದೆ. (ಹೀಗೆ ಪುರಾಣಮಾಡಿದ ವೇದವ್ಯಾಸರೂ ತಾನು ಹೇಳಿದ ಅರ್ಥದಲ್ಲಿ 'ಯುವಾ ಸ್ಯಾತ್' 'ಸ ಯೋ ಮನುಷ್ಯಾಣಾಂ ರಾದ್ಧಃ' ಇದು ಮೊದಲಾದ ಶ್ರುತಿಯನ್ನು ಸಮ್ಮತಿಯಾಗಿ 'ಹಿ'=ಎನ್ನುವುದರಿಂದ ತೋರಿಸಿದರು. (೨) ಅತಃ=ಆದುದರಿಂದ, ನಾರಾಯಣಃ = ನಾರಾಯಣನು, ನಿಶ್ಶೇಷದೋಷವರ್ಜಿತಃ = ಸರ್ವದೋಷ ವಿರಹಿತನು, ಪೂರ್ಣಃ = ಜ್ಞಾನಾನಂದಾದಿ ಗುಣಭರಿತನು, ಅನಂತಗುಣಃ=ನಿರವಧಿಕಗುಣಗಳುಳ್ಳವನು, ಇತಿ=ಹೀಗೆ, ಸಿದ್ಧಂ=ಸಿದ್ಧವಾಯಿತು ॥ ೭ ॥

ಹೀಗೆ ಶ್ರೀಮದಾಚಾರ್ಯರು ಪ್ರಕರಣವನ್ನು ಸಮಾಪ್ತಿಸಿ ಭಕ್ತರಿಗೆ ತನ್ನ ಸ್ವರೂಪವನ್ನು ಪ್ರಕಟಿಸುತ್ತಾ ತಾನು ಮಾಡಿದ ಗ್ರಂಥವನ್ನು ಕೇಶವನಲ್ಲಿ ಸಮರ್ಪಿಸುತ್ತಾರೆ.

**ಮೂ ॥ ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥ ೮ ॥**

ಅ ॥ ಯಸ್ಯ ದೇವಸ್ಯ=ಯಾವ ಕ್ರೀಡಾದಿಗುಣವಿಶಿಷ್ಟರಾದ ವಾಯುದೇವರಿಗೆ, ವೇದವಚನೇ = ಬಳಿತ್ಥೇತ್ಯಾದಿ ವೇದವಾಕ್ಯದಲ್ಲಿ, ದಿವ್ಯಾನಿ=ಕ್ರೀಡಾದಿಗುಣವಿಶಿಷ್ಟಗಳಾದ, ತ್ರೀಣಿ ರೂಪಾಣಿ=ಮೂರು ರೂಪಗಳು, ಉದಿತಾನಿ=ಹೇಳಲ್ಪಟ್ಟಿವೆಯೋ, ತಸ್ಯ=ಆ ವಾಯುದೇವರ,

ಯತ್ ಏತತ್ ತೃತೀಯಂ=ಯಾವ ಈ ಮಧ್ವಾಖ್ಯಮೂರನೇ ರೂಪವೋ, ಅನುನಾ=ಈ ಮಧ್ವಾಖ್ಯರೂಪದಿಂದ, ಗ್ರಂಥಃ=ಈ ಗ್ರಂಥವು, ಕೇಶವೇ=ಶ್ರೀಹರಿವಿಷಯವಾಗಿ, ಕೃತಃ=ಮಾಡಲ್ಪಟ್ಟಿತು. (ಅಂದರೆ ಭಗವಂತನನ್ನೇ ಪ್ರತಿಪಾದಿಸುವುದರಿಂದ ಆತನಲ್ಲಿಯೇ ಸಮರ್ಪಿಸುವರು.) ತಸ್ಯ=ಆ ವಾಯುದೇವರ (ಮೂಲರೂಪವು,) ಅಲಂ=ಚೆನ್ನಾಗಿ, ಬಳ್=ಬಲಾತ್ಮಕವು ದರ್ಶತಂ=ಜ್ಞಾನರೂಪವು. ಭರ್ಗಃ=ಜಗದ್ಭರಣಗಮನಗುಣಗಳುಳ್ಳದ್ದು. ಮಹತ್=ಪೂಜ್ಯವಾದುದು. ತತ್ ಇತ್ಥಮೇವ=ಆ ಈ ಪ್ರಕಾರವಿರುವ ರೂಪವೇ, ನಿಹಿತಂ=ಮೂರು ಅವತಾರಗಳನ್ನು ಮಾಡುವುದಕ್ಕಾಗಿ ಭಗವಂತನಿಂದ ಪ್ರೇರಿಸಲ್ಪಟ್ಟಿತು, ಅವತೀರ್ಣವೂ ಆಯಿತು. (ಅವುಗಳಲ್ಲಿ) ವಾಯೋಃ=ವಾಯುದೇವರ, ಪ್ರಥಮಕಂ ವಪುಃ=ಹನುಮದಾಖ್ಯ ಅವತಾರವು, ರಾಮವಚೋನಯಂ=ರಾಮದೇವರ ಮಾತುಗಳನ್ನು ಸೀತಾ ಸಮೀಪಕ್ಕೆ ಹೊಂದಿಸಿಕೊಟ್ಟದ್ದು. ಅಥವಾ ಮೂಲರಾಮಾಯಣಾದಿ ರೂಪಗಳಾದ ರಾಮವಿಷಯಕ ಮಾತುಗಳನ್ನು ಶಿಷ್ಯರಿಗೆ ಬೋಧಿಸತಕ್ಕದು. ಅಥವಾ ರಾಮದೇವರ ಆಜ್ಞೆಯಿಂದೊಡಗೂಡಿದ್ದು. ದ್ವಿತೀಯಂ ವಪುಃ=ಭೀಮನಾಮಕವಾದ ಎರಡನೇ ಅವತಾರವು, ಪೃಕ್ಷಃ=ಕೌರವರ ಸೈನ್ಯವನ್ನು ನಾಶಗೊಳಿಸಿದ್ದು. ತೃತೀಯಂ ವಪುಃ=ಮೂರನೇ ಅವತಾರವು, ಮಧ್ವಃ=ಆನಂದರೂಪನಾದ ಶ್ರೀ ಹರಿಯನ್ನು ಪ್ರತಿಪಾದಿಸುವ ಶಾಸ್ತ್ರವನ್ನು ನಿರ್ಮಾಣಮಾಡಿದ್ದರಿಂದ ಮಧ್ವವೆಂದು ಹೆಸರುಳ್ಳದ್ದು ॥ ೮ ॥

ಅಂತ್ಯದಲ್ಲಿಯೂ ಮಂಗಲಾಚರಣವು ಆವಶ್ಯಕವಾದುದರಿಂದ ನಾರಾಯಣನ ಸ್ತೋತ್ರ ನಮಸ್ಕಾರಗಳನ್ನು ಮಾಡುತ್ತಾರೆ —

**ಮೂ ॥ ಸ್ವತಂತ್ರಾಯಾಖಿಲೇಶಾಯ ನಿರ್ದೋಷಗುಣರೂಪಿಣೇ । ಪ್ರೇಯಸೇ ಮೇ ಸುಪೂರ್ಣಾಯ ನಮೋ ನಾರಾಯಣಾಯ ತೇ ॥**

ಅ ॥ ಸ್ವತಂತ್ರಾಯ=ಸರ್ವ ಸ್ವತಂತ್ರನೂ, ಅಖಿಲೇಶಾಯ=ಸರ್ವ ನಿಯಾಮಕನೂ, ನಿರ್ದೋಷಗುಣರೂಪಿಣೇ=ದೋಷಸಂಪರ್ಕವಿಲ್ಲದಿರುವವನೂ ಗುಣಸ್ವರೂಪಿಯೂ, ಸುಪೂರ್ಣಾಯ=ಜ್ಞಾನಾನಂದಾದಿಗುಣಪರಿಪೂರ್ಣನೂ, ಮೇ=ನನಗೆ, ಪ್ರೇಯಸೇ=ಅತಿಪ್ರಿಯನೂ ಆದ, ನಾರಾಯಣಾಯ ತೇ=ನಾರಾಯಣನಾದ ನಿನಗೋಸ್ಕರ, ನಮಃ=ನಮಸ್ಕಾರವು. ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ**
**ಶ್ರೀಮದ್ವಿಷ್ಣುತತ್ತ್ವವಿನಿರ್ಣಯೇ ತೃತೀಯಃ ಪರಿಚ್ಛೇದಃ ॥ ೩ ॥**

**ಈ ಪ್ರಕಾರ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ ಶ್ರೀಮದ್ವಿಷ್ಣುತತ್ತ್ವವಿನಿರ್ಣಯದಲ್ಲಿ ೩ನೇ ಪರಿಚ್ಛೇದವು ಸಮಾಪ್ತವಾಯಿತು ॥ ೩ ॥**

ಆನಂದಸಿಂಧವೇ ಪೂರ್ಣಪ್ರಜ್ಞಾಚಾರ್ಯಾಪ್ತಬಂಧವೇ ।
ನಮಃ ಶ್ರೀ ಹರಯೇ ಸ್ವಾಂತಧ್ವಾಂತೌಘತಿಮಿರಾರಯೇ ॥ ೧ ॥

ಮಯಾ ರಚಿತಯಾ ವಿಷ್ಣುತತ್ತ್ವನಿರ್ಣಯಟೀಕಯಾ ।
ಯತ್ಪುಣ್ಯಂ ಭಾವಿ ತತ್ಸರ್ವಮವಾಪ್ನೋತು ಗುರುರ್ಮಮ ॥ ೨ ॥

ಆನಂದತೀರ್ಥಭಗವದ್ವಚಸಾಂ ವಿಶಿಷ್ಟ-
ವ್ಯಾಖ್ಯಾನ ಕರ್ಮಣಿ ಸುರಾ ಅಧಿಕಾರಿಣೋಽತ್ರ ।
ಯನ್ಮಾದೃಶೋಽಪಿ ಯತತೇ ತದತೀವ ಹಾಸ್ಯಂ-
ಕಿಂ ನಾಮ ಭಕ್ತಿವಿವಶಸ್ಯ ವಿಭೂಷಣಂ ತತ್ ॥ ೩ ॥

ತಂತ್ರಿನಾರಾಯಣೇನಾಸ್ಯ ವ್ಯಾಖ್ಯಾ ಕಾರ್ನಾಟಕೀ ಕೃತಾ ।
ಭೂಯಾತ್ಕುಸುಮಮಾಲೇವ ಮುದೇ ಮಾಧವಮಧ್ವಯೋಃ ॥ ೪ ॥

॥ ಈ ಗ್ರಂಥವು ಸಮಾಪ್ತವಾಯಿತು ॥ ಶ್ರೀ ಕೃಷ್ಣಾರ್ಪಣಮಸ್ತು ॥

